# ಶರಣ ಲೀಲಾಮೃತ

ಅಥವ ಯಕ್ಷಗಾನ

# ಬಸವ ಪುರಾಣ



ಕಲ್ಯಾಣ ನಗರದ, ಶ್ರೀ ಬಸವರಾಜದೇವರು.

ಶ್ರೀ ಗುರುಮಲ್ಲೇಶ್ವರ ಗ್ರಂಥರತ್ನಮಾಲಾ-ಸಂಖ್ಯೆ ೧

ಚೆನ್ನಪ್ಪಕವಿ ಕೃತ

# ಶರಣ ಲೀಲಾಮೃತ

ಸಂಪಾದಕರು :
ಶ್ರೀ ಶಿವಬಸವಸ್ವಾಮಿಗಳು



ಪ್ರಕಾಶಕರು :
ಶಿವಶರಣ ವಾಙ್ಮಯ ಪ್ರಕಾಶ
ಕಾರ್ಯಾಲಯ,
ಮೈಸೂರು.
೧೯೫೫



ಶ್ರೀ ಗುರು ಭಿಕ್ಷದಾರ್ಯ ಮಹಾಸ್ವಾಮಿಯವರು, ದೇವನೂರು ಮಠ.



## ಸಮರ್ಪಣ

ರೇವಣಸಿದ್ಧನೇ ಶಾಂತಮಲ್ಲೇಶನಾಗಿ ದಕ್ಷಿಣ ದೇಶದಲ್ಲಿ ಉದ್ಭವಿಸಿದರೋ; ನೀನೆ ಕರ್ತಾರ ಗತಿಮತಿ ಯೆಂದಡಿಗೆರಗಿ ಬಂದ ಮಾನವರ್ಗೆ ಬಸವಾಮೃತವೆಂಬ ಪಾನವಂ ಸವಿಯಕಲಿಸಿ, ವೀರಶೈವ ಆಧ್ಯಾತ್ಮ ವಿಚಾರ ವರುಪಿ. ಸದ್ಭಕ್ತಿ ನಡೆನುಡಿಯ ಸ್ಥಾಪಿಸಿದರೋ; ಇಂಥ ಶ್ರೀ ಗುರುಮಲ್ಲೇಶ ಮಹಾತ್ಮನಿಗೂ,

ಕಾಯಕವೇ ಸತ್ಯವೆಂದು ದಾಸೋಹವೇ ನಿತ್ಯವೆಂದು ಕಾಯಕವೇ ಗುರು ಚರ ಪರವೆಂದು ಕಾಯವೇ ಕೈಲಾಸವಾದ ಶ್ರೀ ಗುರು ಭಿಕ್ಷದರಾಚಪ್ಪ ಮಹಾತ್ಮನಿಗೂ ಈ ಶರಣ ಲೀಲಾಮೃತ ಗ್ರಂಥವನ್ನು ಆದರ ಪೂರ್ವಕ ಕಾಣಿಕೆಯಾಗಿ ಅರ್ಪಿಸಲ್ಪಟ್ಟಿದೆ.

ದೇವನೂರು ಮಠ **ಸಂಪಾದಕರು:**

# ಪ್ರಕಾಶಕರ ಪ್ರಥಮೋಕ್ತಿ

ಬಸವಾದಿಪ್ರಮಥರ ಸಾಹಿತ್ಯವೈಭವವೆಂದರೆ; ಶ್ರೀ ಗುರುಭಿಕ್ಷದಾರ್ಯಮಹಾಸ್ವಾಮಿಯವರಿಗೆ ಬಹುಪ್ರೇಮ. ಯಾವಾಗಲೂ ಇವರ ಸನ್ನಿಧಿಯಲ್ಲಿ ಬಸವನ ವಚನ, ಬಸವನ ಚರಿತೆ, ಬಸವನ ಹಾಡು ಇವುಗಳೇ ಉದ್ಘೋಷವಾಗಿದ್ದುವು. ಈವಾಗಲೂ ಬಸವೇಶನ ಹಾಡುಗಬ್ಬವೆಂದರೆ ಭಕ್ತರಿಗೆ ಬಲು ಪ್ರೀತಿ.

ಸರಳವಾಗಿಯೂ ಹಾಡುಗಬ್ಬವಾಗಿಯೂ ಗಾನದೊಳಗೆ ಕೂಡಿರುವುದಾಗಿಯೂ ಇರುವ ಬಸವೇಶನ ಚರಿತೆಗಳು ದುರ್ಲಭವೆಂದೇ ಹೇಳಬೇಕು. ಶರಣ ಲೀಲಾಮೃತ ಗ್ರಂಥ ಒಂದು ಹಾಡುಗಬ್ಬದಲ್ಲಿದೆ – ಎಂದು ನೋಡಹತ್ತಿದರೆ, ಇದು ಹಲವು ಬರಹಗಾರರ ಕೈಗೆ ಸಿಲುಕಿ ಹಲವು ತಪ್ಪುಗಳೊಡನೆ ಮುದ್ರಿಸಿ ನೆಲೆಯಿಲ್ಲದಹಾಗೆ ಇರುವ ಕೊರತೆ ಸರ್ವರಿಗೂ ತಿಳಿದ ವಿಷಯವಾಗಿದೆ.

ಈ ಕೊರತೆಯು ಹಾಡುಗಬ್ಬದ ಮೇಲೆ ಮೋಹವಿಟ್ಟು ಕೇಳುವವರಿಗೂ ಹಾಡುವವರಿಗೂ ಬಹಳವಾಗಿ ನೆರೆಸೂಸುತ್ತಿದೆ. ಪಂಡಿತರೂ ಸಾಹಿತ್ಯ ಪ್ರೇಮಿಗಳೂ ಈ ಕೊರತೆಯನ್ನು ನಿವಾರಿಸಬಹುದಾಗಿತ್ತು, ಇದರ ಗೊಂದಲಕ್ಕೆ ಕೈಯಿಡದೆ ಬಿಟ್ಟ ಕೊರತೆ ನನ್ನ ಅಲ್ಪಮತಿಗೆ ಉಂಟಾಯಿತು. ಈ ಕೆಲಸಕ್ಕೆ ಬೇಕಾಗುವಷ್ಟು ವಿದ್ವತ್ತು ನನಗೆ ಮೊದಲೇ ಇಲ್ಲ. ನಾನು ಕಾವ್ಯದ ಭಾಷಾಜ್ಞಾನದಲ್ಲಿ ಕೇವಲ ಅಲ್ಪಮತಿಯ ವಿದ್ಯಾರ್ಥಿ, ಹೀಗಿದ್ದರೂ ಈ ಗ್ರಂಥ ಪ್ರಕಟಣೆಯ ಸಾಹಸಕ್ಕೆ ತೊಡಗಿದೆ. ವಾಙ್ಮಯದಲ್ಲಿ ಬಲ್ಲಿದರಾದವರೇ ಮುಂದುವರಿಯಲು, ಆಲೋಚಿಸುತ್ತಿರುವಾಗ ನನ್ನಂಥವನು ಈ ಸಾಹಿತ್ಯ ರಾಜ್ಯದಲ್ಲಿ ಅಂಬೆಗಾಲಿಡುವುದು ತಪ್ಪಲ್ಲ. ಯಾವನು ಇಂಥಹ ಕೆಲಸ ಮಾಡುವುದಾದರೂ ಅವನವನ ಮಿತಿ ಅವನವನ ಕೆಲಸದ ಮೇಲೆ ಬಂದೇ ಬರುವುದು; ಹೀಗಿರಲು ನನ್ನ ಅಲ್ಪಮತಿಯ ಕೊರತೆ ಈ ಪ್ರಕಟಣೆಯಲ್ಲಿ ಸೇರುವುದು ಸ್ವಭಾವಿಕ–ಆದರೆ : ಈ ಪ್ರಯತ್ನದಿಂದ ಸ್ವಲ್ಪವಾದರೂ ಈ ಗ್ರಂಥದ ಹಿಂದಣ ಕೊರತೆ ನೀಗಿ ಸುಪ್ರಯೋಜನವಾಗುವುದೆಂದು ನನ್ನ ಭಾವನೆ. ಇದೂ ಆಗದಿದ್ದರೆ ! ನನ್ನ ಭಾಗಕ್ಕೆ ಒಂದು ಶಿಕ್ಷಣ ರೂಪ ಸೇವೆಯು ಆಯಿತಲ್ಲವೆ ?

ಈ ಪ್ರಾಚೀನ ಪ್ರತಿಗಳನ್ನೆಲ್ಲಾ ನನ್ನ ಕೋರಿಕೆಯ ಮೇರೆಗೆ ಉದಾರಮನದಿಂದ ಕಳುಹಿಸಿದ ಮಹನೀಯರಿಗೆ ನಾನು ಕೃತಜ್ಞನಾಗಿದ್ದೇನೆ. ಇಲ್ಲಿ ದೊರೆತಿರುವ ಹೆಚ್ಚಿಗೆ ಭಾಗದ ಪದ್ಯಗಳ ಸಿದ್ಧತೆಗಾಗಿ ಹದಿನಾಲ್ಕು ಪ್ರತಿಗಳನ್ನು ಹೋಲಿಸಬೇಕಾಯಿತು.

ಈ ಗ್ರಂಥವನ್ನು ಪಾಠಾಂತರ ನಡೆಸುವ, ಶುದ್ಧಪಾಠವನ್ನು ನಿಶ್ಚೈಸುವ ಕೆಲಸದಲ್ಲಿ ನೆರವಾದ ಭೋಗಯ್ಯನಹುಂಡಿಯ **ಶ್ರೀ. ಬಿ. ಬಸವಣ್ಣಶಾಸ್ತ್ರಿ**ಗಳಿಗೆ ಅಭಿವಂದಿಸುತ್ತೇನೆ.

ಈ ಅಂದವಾದ ಮುದ್ರಣದ ಜತೆಗೆ ದೃಶ್ಯಾರ್ಥ ಭಾವಚಿತ್ರಗಳಿದ್ದರೆ, ಅರ್ಥವನ್ನು ಕೈಯೆತ್ತಿ ತೋರಿದಹಾಗೆ ನೇತ್ರಗಳಿಗೆ ಬಹು ಸಂತೋಷವಾಗುವುದೆಂದು ಕೆಲವು

ಚಿತ್ರಗಳನ್ನು ಈ ಗ್ರಂಥದಲ್ಲಿ ಸೇರಿಸಲಾಗಿದೆ. ಈ ಚಿತ್ರಗಳನ್ನೆಲ್ಲ ಶ್ರದ್ಧೆವಹಿಸಿ ಬಹು ಪ್ರೀತಿಯಿಂದ ಸುಂದರವಾಗಿ ಬರೆದುಕೊಟ್ಟ, **ಶ್ರೀಮಾನ್ ಎಂ. ವೀರಪ್ಪ, ಜಿ.ಡಿ.ಪಿ.** ಆರ್ಟ್ಸ್ಟುಡಿಯೋ, ಮೈಸೂರು, ಇವರ ನೆನಹನ್ನು ಓದುಗರ ಗಮನಕ್ಕೆ ತರಲಾಗಿದೆ.

ಈ ಗ್ರಂಥಕ್ಕೆ ಈಗ ದೊರೆತಿರುವ ಕಾಗದವೇ ಉತ್ತಮವಾದ ಕಾಗದ, ಇದಕ್ಕೆ ಬೆಲೆ ಯಾವಾಗಲೂ ಹೆಚ್ಚಿಗೆಯೇ ಇರುತ್ತದೆ. ಚಿತ್ರಗಳ ಪಡಿಯಚ್ಚು ಇವೆ ಮೊದಲಾದುವುಗಳ ಖರ್ಚು ಮಿತಿಮೀರಿದುದರಿಂದ ಬೆಲೆಯು ಬೆಳೆದುಕೊಂಡಿತು. ಸಾಮಗ್ರಿಗಳ ಅಭಾವದ ಕೊರತೆ ನೀಗಿ ಮುಂದಿನ ಮುದ್ರಣದ ಸುಯೋಗ ದೊರೆತಾಗ, ಬೆಲೆ ಇಳಿಸುವ ಯೋಚನೆ ಮೀಸಲಾಗಿರಿಸಿದೆ.

ಪ್ರಥಮ ಮುದ್ರಣದ ಅಚ್ಚಿನ ಕೈ ತಪ್ಪುಗಳ ಪ್ರಮಾದವನ್ನು ಗ್ರಾಹಕರು ಮನ್ನಿಸಬೇಕು. ಕನ್ನಡದ ಕಂದನಾದೆನ್ನ ಪರಿಚಿತ ವೀರಶೈವ ಬಾಂಧವರು, ನನ್ನ ಇಚ್ಛಾಭಿಕ್ಷೆಯನಿತ್ತು ಕರಪಾತ್ರೆಯಂ ತುಂಬಿಸಿದುದಕ್ಕೆ ಈ ಗ್ರಂಥದ ಶ್ರೇಯಸ್ಸೆಲ್ಲವೂ ಅವರದಾಗಿದೆ. ನನ್ನ ಶಕ್ತಿಯಿದ್ದಮಟ್ಟಿಗೆ ಈ ರೀತಿಯ ಇನ್ನೂ ಹಲವು ಪ್ರಾಚೀನ ಉದ್ಗ್ರಂಥಗಳ ಪ್ರಕಟನರೂಪವಾದ ಕನ್ನಡ ಭಾಷಾ ಸೇವೆಯನ್ನು ಮಾಡಬೇಕೆಂಬ ಉತ್ಕಟೇಚ್ಛೆಯು ಇವೆ, ಈ ಇಚ್ಛಾ ಪೂರಣವಾದರೊ; ಮುಕ್ಕಾಲು ಭಾಗ ಸಮುಹೃದಯರಾದ ಕನ್ನಡ ಸಾಹಿತ್ಯ ಪ್ರೇಮಿಗಳ ಆದರಾತಿಶಯವನ್ನು ಅವಲಂಬಿಸಿರುವುದು.

ಮೈಸೂರು
ತಾ॥ ೮–೭–೧೯೪೫

ಸಂಪಾದಕರು:
**ಶ್ರೀ ಶಿವಬಸವಸ್ವಾಮಿಗಳು,**
ದೇವನೂರು ಮಠ.



## ದ್ವಿತೀಯ ಮುದ್ರಣದ ಅಭಿನಂದನೆ

ಈ ಶರಣ ಲೀಲಾಮೃತದ ಪ್ರಥಮ ಮುದ್ರಣದ ಕಾಲದಲ್ಲಿ ಕಾಗದದ ಅಭಾವವು ವಿಶೇಷವಾಗಿ–ಸಾಕಷ್ಟು ಪ್ರತಿಗಳು ವಾಚಕರಿಗೆ ದೊರೆಯದೆ, ಇದುವರಿವಿಗೂ ನಮಗೆ ಬಂದ ಆರ್ಡರುಗಳಿಗೆ ಜವಾಬು ಬರೆದು ಸಾಕಾಗಿದ್ದೆವು. ನಮ್ಮ ಪ್ರಯತ್ನವು ಕೊನೆಸಾಗಿ ಸಲಕರಣೆಗಳ ಸುಯೋಗವು, ದೊರೆತುದಕ್ಕಾಗಿ ಆನಂದಿಸುತ್ತೇವೆ.

ಈ ದ್ವಿತೀಯ ಮುದ್ರಣದಲ್ಲಿ ಗ್ರಂಥದ ಶೋಧನೆ ಇನ್ನೂ ಹೆಚ್ಚಿಗೆನಡೆದು ಶುದ್ಧವಾಗಿ ಮತ್ತು ಅಂದವಾಗಿ ಪುಸ್ತಕವು ನಿಮ್ಮ ಕರಗತವಾಗಿದೆ.
ಮೊದಲ ಮುದ್ರಣದ ಪ್ರತಿಗಳಿಗೆ–ಪ್ರೋತ್ಸಾಹವಿತ್ತಂತೆ, ಇದಕ್ಕೂ ಉತ್ತೇಜನ ದೊರೆಯುವದೆಂದು ನೆರೆನಂಬಿದ್ದೇವೆ.

೧–೮–೧೯೫೫.

ಸಂಪಾದಕರು:

# ಮುನ್ನುಡಿ

ಶರಣ ಲೀಲಾಮೃತವೆಂಬ ಈ ಗ್ರಂಥಕ್ಕೆ ಮುನ್ನುಡಿಯೆಂದು ಒಂದೆರಡು ಮಾತುಗಳನ್ನು ಬರೆಯಲು, ಅದರ ಸಂಪಾದಕರೂ ಪ್ರಕಟನಕಾರರೂ ಆದ ಶ್ರೀ ಶಿವಬಸವಸ್ವಾಮಿಗಳವರು ನನಗೆ ಆಜ್ಞಾಪಿಸಿದುದರಿಂದ ಹಾಗೆ ಮಾಡಲು ನನಗೆ ಸಂತೋಷವೆನಿಸಿದಂತೆ ಅಭಿಮಾನವೂ ಎನಿಸುತ್ತದೆ.

ಶರಣ ಲೀಲಾಮೃತದಲ್ಲಿ ಹಲವು ಶಿವಶರಣರ ಕಥೆಗಳು ಬರುವುವಾದರೂ ಅದು ಮುಖ್ಯವಾಗಿ ಬಸವಣ್ಣನವರ ಜೀವನ ಚರಿತ್ರೆಯಾಗಿದೆ. ಇದರಲ್ಲಿ ಬರುವ ಶರಣರ ಕಥೆಗಳು ಹೆಚ್ಚಾಗಿ ಪ್ರಾಸಂಗಿಕವಾಗಿಯೆ ಬಂದಿವೆ. ಬಸವಣ್ಣನವರ ಜೀವನ ಚರಿತ್ರೆಯನ್ನು ತಿಳಿಸುವ ಗ್ರಂಥಗಳು ಕನ್ನಡದಲ್ಲಿ ಹಲವಿರುವುವು. ಅವುಗಳಲ್ಲಿ ಹಂಪೆಯ ಹರಿಹರದೇವನ ಬಸವರಾಜದೇವರ ರಗಳೆ (ಸು. ೧೨೦೦) ಭೀಮಕವಿಯ ಬಸವ ಪುರಾಣ (೧೩೬೯) ಷಡಕ್ಷರದೇವನ ವೃಷಭೇಂದ್ರ ವಿಜಯ (ಸು. ೧೬೭೫) ಇವು ಪ್ರಸಿದ್ಧವಾಗಿವೆ. ಇವಲ್ಲದೆ ಪ್ರಭುಲಿಂಗ ಲೀಲೆ, ಚೆನ್ನಬಸವ ಪುರಾಣ ಮೊದಲಾದ ಇನ್ನಿತರ ಸುಪ್ರಸಿದ್ಧ ಗ್ರಂಥಗಳಲ್ಲಿ ಬಸವಣ್ಣನವರ ಚರಿತ್ರೆ ಸಂಕ್ಷಿಪ್ತವಾಗಿ ಪ್ರಸಂಗಾನುಸಾರವಾಗಿ ಬರುತ್ತಿದೆ. ಪ್ರಸ್ತುತ ಗ್ರಂಥವಾದ ಈ ಶರಣ ಲೀಲಾಮೃತವನ್ನು ಮೇಲಿನ ಗ್ರಂಥಗಳ ಜತೆಗೆ ಸೇರಿಸಬಹುದು. ಈ ಗ್ರಂಥವು ಕ್ರಿ. ಶ. ೧೭೫೦ ರ ಸುಮಾರಿಗೆ ರಚಿತವಾಗಿರಬೇಕೆಂದು ಕವಿಚರಿತೆಕಾರರ ಅಭಿಪ್ರಾಯವಿದೆ.

ವೀರಶೈವ ಕವಿಗಳೂ ವಚನಕಾರರೂ ತಮ್ಮ ಕೃತಿಗಳು ಬರಿಯ ಪಂಡಿತರಿಗಷ್ಟೆ ತಿಳಿಯುವಂತಾಗಿರದೆ—ಸಾಮಾನ್ಯ ಜನರಿಗೂ ತಿಳಿಯುವಂತಿರಬೇಕು, ಅವರಿಗೆ ರುಚಿಸಬೇಕು, ಎಂಬ ಉದ್ದೇಶದಿಂದ ಮಹಾಭಾರತ ರಾಮಾಯಣ ಮೊದಲಾದ ಹಳೆಯ ಗ್ರಂಥಗಳಲ್ಲಿ ದೊರೆಯುತ್ತಿದ್ದ—ಅದಾಗಲೆ ಎಷ್ಟೋ ಬಗೆಯಾಗಿ ಎಷ್ಟೋ ಕೃತಿಕಾರರಿಂದ ಚರ್ವಿತ ಚರ್ವಣವಾಗಿದ್ದ—ಪೌರಾಣಿಕ ವಿಷಯಗಳನ್ನು ಬದಿಗೊತ್ತಿ, ಬಹುಕಾಲ ಪರಂಪರೆಯಾಗಿ ಬಂದಿದ್ದ ಚಂಪೂ-ಶೈಲಿಯನ್ನು ಬಿಟ್ಟು, ತಮ್ಮ ಮತದ ಪೂರ್ವಾಚಾರ್ಯರ ಚರಿತ್ರೆಗಳನ್ನೂ, ಶಿವಶರಣರ ಕಥೆಗಳನ್ನೂ ಸರಳವಾದ ಸುಲಭ ಗ್ರಾಹ್ಯವಾದ ಶೈಲಿಯಲ್ಲಿ ಬರೆಯಲಾರಂಭಿಸಿದರು. ಇದರಿಂದಾಗಿ ಕನ್ನಡ ಸಾಹಿತ್ಯದಲ್ಲಿ ಒಂದು ಹಿತವಾದ ಆವಶ್ಯಕವಾದ ಕ್ರಾಂತಿ ಉಂಟಾಯಿತು. ಛಂದಸ್ಸು ವ್ಯಾಕರಣಾದಿಗಳ ಕಟ್ಟು ಸಡಿಲವಾಯಿತು. ಸಂಸ್ಕೃತ ವ್ಯಾಮೋಹ ಸರಿಯಿತು. ಪಂಡಿತರಿಗೆ ರುಚಿಸುವ "ಮಾರ್ಗ"ಕ್ಕಿಂತಲೂ ಕನ್ನಡದ "ದೇಸಿ"ಗೆ ಹೆಚ್ಚು ಪುರಸ್ಕಾರ ದೊರೆಯಿತು. ರಗಳೆ, ಷಟ್ಪದಿ, ಸಾಂಗತ್ಯ ಮೊದಲಾದ ಅಚ್ಚಗನ್ನಡ ಪದ್ಯದಾಟಿಗಳು ಪ್ರಸಾರವಾಗತೊಡಗಿದುವು. ಸಾಮಾನ್ಯ ಜನರ ಬಾಯಲ್ಲಿ ನಲಿಯುತ್ತಿದ್ದ ಹಾಡು

ಗಳೂ, ಯಕ್ಷಗಾನಗಳೂ ಸಾಹಿತ್ಯದಲ್ಲಿ ಪ್ರವೇಶಿಸಲಾರಂಭಿಸಿದುವು. ಹೀಗೆ ಕನ್ನಡವು ತನ್ನ ಸ್ಥಾನವನ್ನು ಕಂಡುಕೊಳ್ಳಲು ಅನುವಾಯಿತು. ಶರಣ ಲೀಲಾಮೃತವಾದರೂ ಈ ಮಹಾ ಪರಂಪರೆಗೆ ಅನುಸರಿಸಿ ಯಕ್ಷಗಾನದಲ್ಲಿ ಬರೆಯಲಾಗಿದೆ. ಎಂದರೆ: ತ್ರಿವುಡೆ, ದ್ವಿಪದಿ, ಏಕತಾಳ, ಅಟತಾಳ, ಜಂಪೆ, ಕೊಂಚಜಂಪೆ, ಸಾಂಗತ್ಯ, ರಗಳೆ, ಷಟ್ಪದಿ, ಕಂದ ಮುಂತಾದ ವಿವಿಧ ದೇಸೀಯ ಛಂದಸ್ಸಿನಲ್ಲಿ ರಚಿತವಾಗಿದೆ. ಅಲ್ಲಲ್ಲಿ ಸಂಸ್ಕೃತ ವೃತ್ತಗಳಿದ್ದರೂ ಅವುಗಳಲ್ಲಿ ಬಳಸಿರುವ ಶೈಲಿ ಬಹಳ ಸರಳವಾಗಿದೆ. ಹೀಗೆ ಎಲ್ಲರಿಗೂ ಸುಲಭಸಾಧ್ಯವಾದ ರೀತಿಯಲ್ಲಿ ರಚಿತವಾದುದರಿಂದಲೆ ಈ ಗ್ರಂಥವು ಕನ್ನಡನಾಡಿನಲ್ಲೆಲ್ಲಾ ಜನಪ್ರಿಯವಾಗಿತ್ತೆಂದು ತೋರುತ್ತದೆ. ಇದು ಹನ್ನೊಂದು ಸಂಧಿಗಳಲ್ಲಿರುವುದೆಂದು ಪ್ರತೀತಿಯಿದ್ದರೂ ೨೩ – ೨೫ ಸಂಧಿಗಳ ಹಸ್ತಪ್ರತಿಗಳು ಸಿಕ್ಕುವುದಕ್ಕೂ, ಒಂದೊಂದು ಸಂಧಿಯಲ್ಲಿ ಅದೇ ಅರ್ಥದ ಬೇರೆ ಬೇರೆ ಪದ್ಯಗಳು ಬೇರೆ ಬೇರೆ ಹಸ್ತಪ್ರತಿಗಳಲ್ಲಿ ದೊರೆಯುವುದಕ್ಕೂ ಈ ಲೋಕಪ್ರಿಯತೆಯೆ ಕಾರಣವಾಗಿರಬೇಕು. ಹಲವು ಓದುಗರೂ ತಮ್ಮ ಕೈವಾಡವನ್ನೂ ಇದರಲ್ಲಿ ಸೇರ್ಪಡೆ ಮಾಡಿರಬಹುದೆಂದು ಊಹಿಸಲು ಅವಕಾಶವಿದೆ.

ಶ್ರೀ ಶಿವಬಸವಸ್ವಾಮಿಗಳವರು ಈ ಗ್ರಂಥವನ್ನು ಸಂಪೂರ್ಣವಾಗಿ ೨೫ ಸಂಧಿಗಳಲ್ಲಿ ಪ್ರಕಟಿಸಿರುವರಲ್ಲದೆ, ಪಾಠಾಂತರಗಳನ್ನೂ ಹಸ್ತಪ್ರತಿಗಳಲ್ಲಿಯ ವ್ಯತ್ಯಾಸವನ್ನೂ ಅಡಿ ಟಿಪ್ಪಣಿಗಳಲ್ಲಿ ಕಾಣಿಸಿರುವರು. ವಿಮರ್ಶಕ ದೃಷ್ಟಿಯಿಂದ ಓದುವವರಿಗೆ ಇದು ಬಹಳ ಅನುಕೂಲವಾಗಿದೆ. ಡೆಮ್ಮಿ ಅಷ್ಟ ಪತ್ರದ ೬೨೫ ಪುಟಗಳ ಈ ಬೃಹದ್ ಗ್ರಂಥವನ್ನು ಯುದ್ಧದ ಈ ಕಠಿಣ ಪರಿಸ್ಥಿತಿಯಲ್ಲಿ ಸುಂದರವಾಗಿ ಒಳ್ಳೆಯ ಕಾಗದದ ಮೇಲೆ ಮುದ್ರಿಸಿ ಪ್ರಕಟಿಸುವುದು, ಸಾಮಾನ್ಯರಿಗೆ ಸಾಧ್ಯವಾಗುವ ಮಾತಲ್ಲ. ಶ್ರೀ ಸ್ವಾಮಿಯವರು ಕೇವಲ ಸಾಹಿತ್ಯದ ಹಾಗೂ ಸಮಾಜದ ಅಭಿಮಾನದಿಂದ ಪ್ರೇರಿತರಾಗಿ ಇಂತಹ ಪ್ರಯಾಸಕರವಾದ ಕಾರ್ಯವನ್ನು ಕೈಕೊಂಡು ಸಮರ್ಪಕವಾದ ರೀತಿಯಲ್ಲಿ ಸಾಂಗಗೊಳಿಸಿದುದು ಪ್ರಶಂಸನೀಯವೆ ಸರಿ. ಈ ಗ್ರಂಥವನ್ನು ಸರ್ವಾಂಗ ಸುಂದರವಾಗಿ ಮಾಡುವ ದೃಷ್ಟಿಯಿಂದ ಅನೇಕ ಸುಂದರ ಚಿತ್ರಗಳನ್ನು ಜೋಡಿಸಲಾಗಿದೆ. ಶ್ರೀ ಸ್ವಾಮಿಯವರ ಈ ಕಾರ್ಯವನ್ನು ಸಮಾಜವು ಒಳ್ಳೆಯ ಆದರದಿಂದ ಪುರಸ್ಕರಿಸುವುದೆಂದು ಆಶಿಸುತ್ತೇನೆ.

ಧಾರವಾಡ
೧೦ - ೯ - ೧೯೪೫

**ಶಿ. ಶಿ. ಬಸವನಾಳ.**



# ಉತ್ತೇಜನಾಭಿಪ್ರಾಯಗಳು

೧

ಕನ್ನಡ ವಾಙ್ಮಯದಲ್ಲಿ ವೀರಶೈವ ಸಾಹಿತ್ಯವು ಮೇಲು ತರಗತಿಯನ್ನು ಪಡೆದಿರುವದು, ಕನ್ನಡ ನಾಡಿಗೆಲ್ಲಾ ಗೊತ್ತಿದೆ. ಈ ವೀರಶೈವ ಸಾಹಿತ್ಯ ಸಾಗರದಿಂದ ಲಿಂಗವಂತ ಪಂಡಿತರು ಅನೇಕ ಮುತ್ತು ರತ್ನಗಳನ್ನು ಹೊರಗೆಡಹಿ ಅಪಾರವಾದ ಸೇವೆ ಸಲ್ಲಿಸಿದ್ದಾರೆ. ಇದುವರೆಗೂ ಬಸವಾದಿ ಪ್ರಮಥರ ವಚನಸಾಹಿತ್ಯ ಹರಿಹರದೇವನ ರಗಳೆಗಳು, ರಾಘವಾಂಕನ ಷಟ್ಪದಿ ಸಾಹಿತ್ಯ, ಸುರಂಗ, ಷಡಕ್ಷರಿ ಕವಿಗಳ ಚಂಪೂ ಸಾಹಿತ್ಯಗ್ರಂಥಗಳು, ಇವೂ ಅಲ್ಲದೆ ಹಾಡು ಗಬ್ಬಗಳನ್ನು ರಚಿಸಿದ ನಿಜಗುಣ ಶಿವಯೋಗಿಗಳು, ಸರ್ಪ ಭೂಷಣ ಶಿವಯೋಗಿಗಳು, ಮುಪ್ಪಿನ ಷಡಕ್ಷರಿ ಕವಿಗಳು, ಬಾಲಲೀಲಾ ಮಹಂತಶಿವಯೋಗಿಗಳು, ಹಾಗು ಘನ ಮಠದಾರ್ಯರು ಈ ಮೊದಲಾದ ಶರಣ ಕವಿಗಳ ಗ್ರಂಥಗಳು ಕನ್ನಡಿಗರ ಕಂಗಳ ಮುಂದೆ ಕಂಗೊಳಿಸುತ್ತಿರುವವು. ಈ ಸಮಯದಲ್ಲಿ ಶ್ರೀ ಶಿವಬಸವಸ್ವಾಮಿಗಳು ಈ ಶರಣ ಲೀಲಾಮೃತ ಗ್ರಂಥವನ್ನು ಪೂರ್ಣ ಶೋಧಿಸಿ ಸುವಾಚ್ಯವಾಗಿ ಪ್ರಕಟಗೊಳಿಸಿ ಕನ್ನಡ ಸಾಹಿತ್ಯ ಭಾಂಡಾರಕ್ಕೆ ಅಪಾರವಾದ ಉಪಕಾರ ಮಾಡಿದ್ದಾರೆ. ಈ ಶರಣ ಲೀಲಾಮೃತ ಕಾವ್ಯದಲ್ಲಿ ಅನೇಕ ಶರಣರ ಸತ್ಯ ಜೀವನ ವ್ಯಕ್ತವಾಗಿ ಕಾಣುವದು. ಕಾವ್ಯದಲ್ಲಿರಬೇಕಾದ ಶೈಲಿ, ರಸ, ಭಾವ, ಅಲಂಕಾರಗಳು ಹಾಸುಹೊಕ್ಕಾಗಿ ಪ್ರತಿಯೊಂದು ಭಾಗವು ರಸ ಪುಷ್ಟಿಯಾಗಿ ತುಂಬಿರುವುದರಿಂದ ಓದುಗರ ಮನವನ್ನು ಕೂಡಲೆ ತನ್ನತ್ತ ಸೆಳೆಯುತ್ತಿರುವವು. ಈ ಕಾವ್ಯವು ಜನತೆಯಲ್ಲಿ ಭಕ್ತಿಯನ್ನು ಹುಟ್ಟಿಸಿ ಅನುಭವ ಮಾರ್ಗಕ್ಕೆ ತರುವಲ್ಲಿ ಬಹಳ ಶ್ರೇಷ್ಠವಾಗಿದೆ.

ಇಲ್ಲಿ ಜನತೆಗೆ ಭಕ್ತಿಯನ್ನು ಬೆಳೆಸಿ ಅವರನ್ನು ಬೆಳಕಿನ ದಾರಿಯಲ್ಲಿ ತಂದು ಬಿಡಲು ಆಶಿಸುವ ಕವಿ ಯಾವ ಭಾಗದಲ್ಲೂ ರಸವನ್ನು ಕೆಡಿಸದೆ ವಿಜಯಿಯಾಗಿದ್ದಾನೆ. ಅವನ ಭಾಮಿನೀಷಟ್ಪದಿ, ತ್ರಿಪದಿ, ಛಂದಸ್ಸು ವಿವಿಧ ರಾಗಗಳು ಜನತೆಗೆ ಬಹಳ ಮೆಚ್ಚಿಗೆ ಆಗುತ್ತಿವೆ.

ಇಲ್ಲಿ ಮುಖ್ಯವಾದುದು ಶರಣರ ವೈರಾಗ್ಯ, ಮಾಯಾ ವಿಡಂಬನೆ, ಜನತೆಯ ಉದ್ಧಾರ, ಆಧ್ಯಾತ್ಮಿಕ ತತ್ವಗಳ ತಿಳಿಯಾದ, ಸೂಕ್ಷ್ಮವಾದ, ವಿಚಾರ ಇವುಗಳೆಲ್ಲಾ ಓದುಗರ ಮೇಲೆ ಬಹಳ ಪರಿಣಾಮವನ್ನುಂಟು ಮಾಡುತ್ತವೆ.

ಇಂತಹ ಅಮೋಘವಾದ ಕಾವ್ಯದ ಪದ್ಯಗಳು ಕನ್ನಡ ನಾಡಿನಲ್ಲಿ ಅಲ್ಲಲ್ಲಿ ಸೂರೆ ಆಗಿದ್ದುವು. ಈಗ ಈ ಪದ್ಯಪುಷ್ಪಗಳನ್ನೆಲ್ಲಾ ಶ್ರೀ ಶಿವಬಸವಸ್ವಾಮಿಗಳು ಒತ್ತಟ್ಟಿಗೆ ಕಲೆಹಾಕಿ ಒಂದು ಅಪೂರ್ವ ಗುಚ್ಛವನ್ನಾಗಿಸಿ ಕನ್ನಡಿಗರ ಕೈಯಲ್ಲಿರಿಸಿದ್ದಾರೆ. ಅದಕ್ಕಾಗಿ ಕನ್ನಡಿಗರೆಲ್ಲರೂ ಅವರಿಗೆ ತುಂಬಾ ಕೃತಜ್ಞರಾಗಿರಬೇಕಿದೆ.

ಈ ರೀತಿಯಾಗಿ "ಶಿವಶರಣ ವಾಙ್ಮಯ ಪ್ರಕಾಶಕರಿಂದ" ಇಂತಹ ಅನೇಕ ಉಪಯುಕ್ತ ಕಾವ್ಯಗಳು ಹೊರಬಿದ್ದು ಜನತಾ ಸೇವೆಯಾಗಲೆಂದು ಆಶಿಸುತ್ತೇವೆ.

ಸರ್ಪಭೂಷಣ ಶಿವಯೋಗೀಶ್ವರ ಮಠ,
ಬೆಂಗಳೂರು ಸಿಟಿ.
ತಾ|| ೯-೯-೧೯೪೫

**ಶ್ರೀ ಮಹಾದೇವಸ್ವಾಮಿಗಳು**

೨

ಶರಣ ಲೀಲಾಮೃತ ಗ್ರಂಥವನ್ನು ಶ್ರೀಶಿವಬಸವಸ್ವಾಮಿಗಳವರು ಪ್ರಸಿದ್ಧಿಸಿದ್ದಕ್ಕೋಸ್ಕರ ನಾನು ಅವರನ್ನು ಬಹಳವಾಗಿ ಅಭಿನಂದಿಸುತ್ತೇನೆ. ಶಿವಶರಣರು ಪುರಾತನ ಕಾಲದಲ್ಲಿ ಅಸಂಖ್ಯಾತರಾಗಿ ಹೋಗಿದ್ದು ಅವರು ವೀರಶೈವ ಸಮಾಜವನ್ನು ಎಲ್ಲಾ ಕಡೆಗೂ ಹಬ್ಬಿಸಿದ್ದಾರೆ. ಅವರಲ್ಲಿ ಅನೇಕರು ವಚನಕಾರರೂ ವಿದ್ವಾಂಸರೂ ಆಗಿದ್ದು ಅವರು ವೀರಶೈವ ಸಂಸ್ಕೃತಿಯನ್ನು ಪೋಷಿಸಿದ್ದಾರೆ. ಅವರು ಇಂಥ ಮಹತ್ವದ ಕಾರ್ಯಗಳನ್ನು ಮಾಡಿದ್ದರೂ ಅವರ ಚರಿತ್ರೆಗಳ ಪರಿಚಯವು ಬಹುಜನರಿಗೆ ಇರುವುದಿಲ್ಲ. ಆದರೆ: ಶ್ರೀ ಶಿವಬಸವಸ್ವಾಮಿಗಳವರು ಪ್ರಸಿದ್ಧಪಡಿಸಿರುವ ಈ ಶರಣ ಲೀಲಾಮೃತ ಗ್ರಂಥದ ಮೂಲಕ ಪಂಡಿತರೂ ಪಾಮರರೂ ಈ ಶಿವಶರಣರು ಹಿಂದಿನ ಕಾಲದಲ್ಲಿ ಮಾಡಿದ ಮಹತ್ವದ ಕಾರ್ಯಗಳನ್ನು ಬಹು ಸುಲಭವಾಗಿ ಅರಿತುಕೊಳ್ಳಬಹುದು.

ಶರಣ ಲೀಲಾಮೃತ ಗ್ರಂಥವು ಬಹು ಸುಲಭವಾಗಿಯೂ ಮನೋಹರವಾಗಿಯೂ ರಚಿಸಲ್ಪಟ್ಟಿರುತ್ತದೆ. ಇದರ ಭಾಷೆಯು ಕ್ಲಿಷ್ಟವಿರುವುದಿಲ್ಲ. ಇದರಲ್ಲಿ ಅನೇಕ ಬಗೆಯ ವೃತ್ತಗಳೂ, ರಗಳೆಗಳೂ, ಕಂದ ಪದ್ಯಗಳೂ, ಗದ್ಯಗಳೂ, ಪದಗಳೂ ಇರುತ್ತವೆ. ಈ ಗ್ರಂಥವನ್ನು ಕೀರ್ತನಕಾರರೂ, ಪುರಾಣಿಕರೂ ತಮ್ಮ ಉಪನ್ಯಾಸಗಳಲ್ಲಿ ಉಪಯೋಗ ಮಾಡಿಕೊಳ್ಳಬಹುದು. ಇದರ ನಿರೂಪಣಾಪದ್ಧತಿಯು ಕಾವ್ಯ ಮಯವಾಗಿಯೂ ಚಿತ್ತಾಕರ್ಷಕವಾಗಿಯೂ ಇರುತ್ತದೆ. ಈ ಗ್ರಂಥವು ೫೦-೬೦ ವರುಷಗಳ ಹಿಂದೆ ಅಚ್ಚಾಗಿದ್ದಿತು. ಆದರೆ: ಅದರ ಪ್ರತಿಗಳು ಹೀಗೆ ಉಪಲಬ್ಧವಿರುವುದಿಲ್ಲ. ಈ ಕೊರತೆಯನ್ನು ಶ್ರೀ ಶಿವಬಸವಸ್ವಾಮಿಗಳವರು ಈ ಗ್ರಂಥವನ್ನು ಪ್ರಕಟಿಸಿ ಈಗ ದೂರ ಮಾಡಿದ್ದಾರೆ. ಇದರ ಉಪಯೋಗವನ್ನು ವೀರಶೈವ ಸಮಾಜದವರು ಪೂರ್ಣವಾಗಿ ಮಾಡಿಕೊಳ್ಳುವರೆಂದು ನಾನು ಭಾವಿಸಿದ್ದೇನೆ.

ಶಿವಶರಣರ ಚರಿತ್ರೆಗಳನ್ನು ಹರಿಹರ, ರಾಘವಾಂಕ, ಭೀಮಕವಿ, ವಿರೂಪಾಕ್ಷ ಪಂಡಿತ ಅದೃಶ್ಯ, ಷಡಕ್ಷರಿ ಈ ಮೊದಲಾದ ಕವಿಗಳು ತಮ್ಮ ಕವಿತಾ ಸಾಮರ್ಥ್ಯವನ್ನು ಬಹು ಚೆನ್ನಾಗಿ ವ್ಯಕ್ತಮಾಡಿದ್ದಾರೆ, ಆದರೆ: ಅವುಗಳು ಗಡಚಾದ ಕಾವ್ಯಗಳಾಗಿವೆ, ಅವು ಸಾಮಾನ್ಯ ಜನರಿಗೆ ತಿಳಿಯುವಷ್ಟು ಸುಲಭವಾದುವಲ್ಲ. ಆದರೆ ಶರಣ ಲೀಲಾಮೃತ ಗ್ರಂಥವು ಬೇರೆ ವಿಧವಾದ ರಚನೆಯುಳ್ಳದ್ದಿರುತ್ತದೆ. ಇದು ಪುರಾತನ ಕಾವ್ಯಗಳಂತೆ ಗಡಚಾದುದಲ್ಲ. ಅಥವ ಸಾಮಾನ್ಯ ಗದ್ಯ ಗ್ರಂಥಗಳಂತೆ ನೀರಸವಾದುದಲ್ಲ. ಇದು ಮನೋಹರವೂ, ಬೋಧಪ್ರದವೂ ಇದ್ದು, ಬಹು ಸುಲಭವೂ ಇರುತ್ತದೆ. ಈ ಕಾವ್ಯವು ವೈಶಿಷ್ಟ್ಯವಾಗಿದೆ. ಆದ್ದರಿಂದ ಇದು ಜನಪ್ರಿಯವಾಗುವುದೆಂದು ನಾನು ಹಾರೈಸಿದ್ದೇನೆ.

ಈಗಿನ ಕಾಲದಲ್ಲಿ ಮುದ್ರಣದ ವೆಚ್ಚವು ಅತ್ಯಂತವಾಗಿ ಬೆಳೆದಿದೆ. ಆದರೂ ಶ್ರೀ ಶಿವಬಸವಸ್ವಾಮಿಗಳವರು ಇದನ್ನು ಲಕ್ಷಿಸದೆ ಈ ಗ್ರಂಥವನ್ನು ಬಹು ಅಂದವಾಗಿ ಮುದ್ರಿಸಿದ್ದಾರೆ. ಇದರಲ್ಲಿ ಅನೇಕ ಸುಂದರವಾದ ಚಿತ್ರಗಳೂ ಇವೆ. ಇವರ ಪ್ರಯತ್ನವು ಸ್ತೋತ್ರಾರ್ಹವಾದದ್ದು, ಮತ್ತು ಈ ಗ್ರಂಥಕಾರರ ಪ್ರಯತ್ನಕ್ಕೆ ಎಲ್ಲರೂ ಆಶ್ರಯಕೊಡುವರೆಂದು ನಾನು ಆಶಿಸಿದ್ದೇನೆ.

ವಿಜಾಪುರ

ತಾ|| ೧೬-೮-೧೯೪೫

**ಪ. ಗು. ಹಳಕಟ್ಟಿ.**

೩

## ಒಲುಮೆಯ ಮಾತು

ಪರಮ ಪೂಜ್ಯರಾದ ಶ್ರೀ ಶಿವಬಸವಸ್ವಾಮಿಗಳವರು ಕ್ರಿ. ಶ. ೧೭೫೦ ರಲ್ಲಿದ್ದ ಶ್ರೀ ಚೆನ್ನಪ್ಪದೇವನೆಂಬ ಕವಿಯು ರಚಿಸಿದ "ಶರಣ ಲೀಲಾಮೃತ" ಎಂಬ ಗ್ರಂಥದ ಅನೇಕ ಪ್ರಾಚೀನ ಕೈ ಬರೆವಣಿಗೆಯ ಮತ್ತು ಓಲೆಗರಿಯ ಪ್ರತಿಗಳನ್ನು ಸಂಗ್ರಹಿಸಿ, ಬಹುಶ್ರಮಪಟ್ಟು ಪರಿಶೋಧಿಸಿ ಎಷ್ಟೋ ಮಟ್ಟಿಗೆ, ಶುದ್ಧವಾದ ರೀತಿಯಲ್ಲಿ ಕಾಗದದ ಕೊರತೆಯುಳ್ಳ ಈ ಕಠಿಣ ಕಾಲದಲ್ಲಿ ಅಚ್ಚು ಮಾಡಿಸಿ ಕನ್ನಡ ನುಡಿಗೂ ವೀರಶೈವ ಜ್ಞಾನ ಪ್ರಸಾರಗಳಿಗೂ ತುಂಬ ಸಹಾಯ ಮಾಡಿದುದು, ಅತ್ಯಂತ ಆನಂದನೀಯವಾದುದು.

ಹೀಗೆ ಹಿಂದಣ ಗ್ರಂಥಗಳನ್ನು ಪರಿಶೋಧಿಸಿ ಪ್ರಕಟಿಸುವದು ನಾಡು-ನುಡಿಗಳ ಸೇವೆಯಲ್ಲಿ ಒಂದು ಮುಖ್ಯವಾದುದಾಗಿಯೇ ಇದೆ. ಕವಿಯು-ಆಕಾಲಕ್ಕೆ ಗೊತ್ತಿದ್ದ ಶ್ರೀ ಬಸವಾದಿ ಶಿವಶರಣ ಸಂಗತಿಗಳನ್ನೇ ಈ ಗ್ರಂಥದಲ್ಲಿ ವರ್ಣಿಸಿದ್ದಾನೆ. ಇದರಲ್ಲಿಯ ಅನೇಕ ವಿಷಯಗಳು ಈಗಿನ ಐತಿಹಾಸಿಕ ಪರಿಶೋಧನೆಗೆ ಸರಿಬರತಕ್ಕವುಗಳಾಗಿಲ್ಲ. ಕವಿಯು ಕಥಾ ಪ್ರಸಂಗವನ್ನೇ ಮುಖ್ಯವಾಗಿಟ್ಟುಕೊಂಡು ಹಿಂದಿನ ಅನೇಕ ಕವಿಗಳು ಹೇಳಿದುದನ್ನೇ ವರ್ಣಿಸಿದ್ದಾನೆ. ಆದ ಕಾರಣ ಶ್ರೀ ಬಸವಾದಿ ಶಿವಶರಣರ ಕಾಲ, ಕಾರ್ಯಕಲಾಪ ಮೊದಲಾದ ಸಂಗತಿಗಳ ಕುರಿತು, ಇತ್ತೀಚೆಗೆ ಗೊತ್ತಾದ ಐತಿಹಾಸಿಕ ಆಧಾರಗಳಿಗೆ ಇವು ಸರಿಬರುವಂತಿಲ್ಲದಿರುವುದು ಸ್ವಾಭಾವಿಕವು.

ಇದು ಬಹಳ ಸರಳ ಶೈಲಿಯಲ್ಲಿ ರಚಿಸಲ್ಪಟ್ಟಿರುವ ಕಾರಣ, ಶಿವಶರಣರ ಕಥೆಗಳನ್ನು ಜನಸಾಮಾನ್ಯರಲ್ಲಿ ಪುರಾಣ ಪ್ರವಚನಗಳ ಮೂಲಕ ಪ್ರಸಾರಗೊಳಿಸಲು ಬಹು ಅನುಕೂಲವಾದುದಾಗಿದೆ. ಇಂಥ ಉಪಯುಕ್ತ ಗ್ರಂಥವನ್ನು ಶ್ರೀಗಳವರು ಬಹು ಪರಿಶ್ರಮಪಟ್ಟು ಪ್ರಕಟಿಸಿದುದಕ್ಕೋಸ್ಕರ, ನಾನು ಕೃತಜ್ಞಪೂರ್ವಕವಾಗಿ ಇವರ ಈ ಸ್ತುತ್ಯಕಾರ್ಯವನ್ನು ಅಭಿನಂದಿಸುತ್ತೇನೆ.

ತಾ|| ೨೯-೮-೪೫
ವೀರಶೈವ ವಿದ್ಯಾಲಯ,
ಆಲಮಟ್ಟಿ.

**ಹರ್ಡೇಕರ ಮಂಜಪ್ಪ.**

೪

ಶ್ರೀ ಶಿವಬಸವಸ್ವಾಮಿಗಳವರು ಶರಣ ಲೀಲಾಮೃತವೆಂಬ ಗ್ರಂಥದ ಪ್ರಾಚೀನ ಪ್ರತಿಗಳನ್ನು ಪರಿಶೀಲಿಸಿ, ಪರಿಶೋಧಿಸಿ ೨೫ ಸಂಧಿಗಳು ಪೂರ್ತಿಯಾಗಿ ಉತ್ತಮ ರೀತಿಯಲ್ಲಿ ಅಚ್ಚು ಮಾಡಿಸಿರುವ ಈ ಗ್ರಂಥವನ್ನು ಕನ್ನಡ ಸಾಹಿತ್ಯ ಮತ್ತು ವೀರಶೈವಸಮಾಜದಲ್ಲಿ ಅಭಿಮಾನವುಳ್ಳ ಪ್ರತಿಯೊಬ್ಬರೂ, ಓದಿ ವಿಷಯವನ್ನು ಸುಲಭವಾಗಿ ಗ್ರಹಿಸಿ, ಆನಂದಪಡುವ ಸೌಲಭ್ಯವನ್ನು ಕಲ್ಪಿಸಿ ಕೊಟ್ಟಿರುವುದು, ತುಂಬ ಶ್ಲಾಘನೀಯ ವಿಷಯವಾಗಿರುತ್ತದೆ.

ಈ ಕಾರ್ಯವನ್ನು ನೆರವೇರಿಸಿದುದು, ನನಗೆ ತಿಳಿದ ಹಾಗೆ ಶ್ರೀಗಳವರು ಬಹಳ ಶ್ರಮವಹಿಸಿರುತ್ತಾರೆ. ಈ ಗ್ರಂಥವು ಜನಸಾಮಾನ್ಯರ ಪ್ರೇಮಾದರಗಳನ್ನು ಆಕರ್ಷಿಸಿ, ತನ್ಮೂಲಕ ಅವರ ಶ್ರಮವು ಸಾರ್ಥಕ್ಯಕ್ಕೆ ಸಾಧುವಾಗುವುದೆಂದು ನಾನು ಪೂರ್ಣ ಭರವಸೆಯುಳ್ಳವನಾಗಿರುತ್ತೇನೆ.

೧೮-೯-೧೯೪೫
ಮಹಾರಾಜರವರ ಕಾಲೇಜು,
ಮೈಸೂರು.

**ಎಂ. ಸಿದ್ಧಲಿಂಗಯ್ಯ.**

# ಈ ಗ್ರಂಥ ಶೋಧನೆಯ ಪ್ರಾಚೀನ ಪ್ರತಿಗಳು

---

ಬ—ಇದು ಹಳಗನ್ನಡಾಕ್ಷರದಿಂದ ಮುದ್ರಿಸಿದ ಪ್ರತಿ, ಇದರ ಕಾಲ ನಿರ್ಧರಿಸುವುದಕ್ಕೆ ಮುಖ ಪತ್ರ ಹರಿದುಹೋಗಿದೆ.

ಅ—ಇದು ಬೆಂಗಳೂರಿನಲ್ಲಿ ಮುದ್ರಿತವಾದ ಪ್ರತಿ, ಕಾಲ ಕ್ರಿ. ಶ. ೧೯೩೬.

ಇ—ಇದು ಅರಕಲವಾಡಿ ಶ್ರೀಮಾನ್ ಚೆನ್ನಬಸಪ್ಪನವರಲ್ಲಿ ದೊರೆತದ್ದು, ತಾಳೆ ಓಲೆ ಪ್ರತಿ ಇದನ್ನು ಬರೆದ ಕಾಲ ಕ್ರಿ. ಶ. ೧೮೯೪

ಉ—ಇದು ಕೋಚನಹಳ್ಳಿ ಶ್ರೀ ಪುಟ್ಟಸ್ವಾಮಿಯವರಲ್ಲಿ ದೊರೆತದ್ದು, ಕೈಬರಹದ ಪ್ರತಿ. ಕಾಲ ತಿಳಿಯುವುದಕ್ಕೆ ಪ್ರಥಮಾಂತ್ಯ ಹರಿದುಹೋಗಿದೆ.

ಎ—ಇದು ಕಬ್ಬಹಳ್ಳಿ ಶ್ರೀಮಾನ್ ಮಾಸ್ಟರ್ ಮಾದಪ್ಪನವರಿಂದ ದೊರೆತದ್ದು, ತಾಳೆ ಓಲೆ ಪ್ರತಿ. ಇದು ಪಾರ್ಥಿವದಲ್ಲಿ ಬರೆದು ಹೆಚ್ಚಿತು ಎಂದು ಇದೆ.

ಒ—ಇದು ಸಾಗಡೆ ಶ್ರೀಮಾನ್ ಪುಟ್ಟನಂಜಪ್ಪನವರಲ್ಲಿ ದೊರೆತದ್ದು, ತಾಳೆ ಓಲೆಪ್ರತಿ ಇದು ವಿಷುನಾಮಸಂವತ್ಸರದಲ್ಲಿ ಬರೆದು ಹೆಚ್ಚಿತು ಎಂದು ಇದೆ.

ಖ—ಇದು ಹಗಿನವಾಳು ಮಠದಲ್ಲಿ ದೊರೆತದ್ದು. ಇದು ತಾಳೆ ಓಲೆ ಪ್ರತಿ ಇದರಲ್ಲಿ ಬರೆದ ಕಾಲ ಬರೆದಿಲ್ಲ.

ಗ—ಇದು ಯಡೆಯಾಲದಲ್ಲಿ ದೊರೆತದ್ದು. ಇದು ತಾಳೆ ಓಲೆ ಪ್ರತಿ ಇದನ್ನು ಬರೆದುದು, ಸಾಧಾರಣಸಂವತ್ಸರವೆಂದು ಇದೆ.

ಚ—ಇದು ಭೋಗಯ್ಯನಹುಂಡಿ ಶ್ರೀಮಹಾಂತಸ್ವಾಮಿಗಳಲ್ಲಿ ದೊರೆತದ್ದು. ಇದು ತಾಳೆ ಓಲೆ ಪ್ರತಿ. ಇದನ್ನು ಬರೆದುದು ಸಿದ್ಧಾರ್ಥಿ ಎಂದು ಇದೆ.

ಜ—ಇದು ಬಲಚವಾಡಿ ಶ್ರೀಮಾನ್ ಶೆಟ್ಟರ ಬಸಪ್ಪನವರಲ್ಲಿ ದೊರೆತದ್ದು, ತಾಳೆ ಓಲೆ ಪ್ರತಿ. ಇದರ ಕಾಲ ಶಾ. ಶ. ೧೭೩೫

ಟ—ಇದು ಕಟ್ಣವಾಡಿಮಠದ ಶ್ರೀ ರಾಚಪ್ಪಸ್ವಾಮಿಯವರಲ್ಲಿ ದೊರೆತದ್ದು, ಇದು ತಾಳೆ ಓಲೆ ಪ್ರತಿ. ಇದರ ಕಾಲ ಶಾ. ಶ. ೧೭೭೮.

ಡ—ಇದು ಮೈಸೂರು ಶ್ರೀ ಲಿಂಗದೇವರಲ್ಲಿ ದೊರೆತದ್ದು, ಕಾಗದದ ಮೇಗಣ ಕೈಬರಹದ ಪ್ರತಿ. ಇದರ ಕಾಲ ಕ್ರಿ. ಶ. ೧೯೨೨.

ತ—ಇದು ಮೈಸೂರು ಗೌರ್ನಮೆಂಟ್ ಓರಿಯಂಟಲ್ ಲೈಬ್ರರಿಯಲ್ಲಿ ದೊರೆತದ್ದು. ಕೈಬರಹದ ಪ್ರತಿ. ಇದು ತಾರಣದಲ್ಲಿ ಬರೆದುದು, ಎಂದು ಇದೆ.

ದ—ಇದು ನಂಜೆದೇವನಪುರ, ಮಠದ ಶ್ರೀ ಮಹಾಂತಸ್ವಾಮಿಯವರಲ್ಲಿ ದೊರೆತದ್ದು, ಇದರ ಪ್ರಥಮಾಂತ್ಯದಲ್ಲಿ ಬರೆದ ಕಾಲ ಬರೆದಿರುವುದಿಲ್ಲ.

ತಾ|| ೧೭-೮-೧೯೪೬ **ಸಂಪಾದಕರು :**

# ವಿಷಯಾನುಕ್ರಮಣಿಕೆ

## ಏಳನೆಯ ಸಂಧಿ



## ಎಂಟನೆಯ ಸಂಧಿ



## ಒಂಬತ್ತನೆಯ ಸಂಧಿ



## ಹತ್ತನೆಯ ಸಂಧಿ



## ಹನ್ನೊಂದನೆಯ ಸಂಧಿ

## ಹನ್ನೆರಡನೆಯ ಸಂಧಿ



## ಹದಿಮೂರನೆಯ ಸಂಧಿ



## ಹದಿನಾಲ್ಕನೆಯ ಸಂಧಿ



## ಹದಿನೈದನೆಯ ಸಂಧಿ

### ಇಪ್ಪತ್ತಮೂರನೆಯ ಸಂಧಿ



### ಇಪ್ಪತ್ತನಾಲ್ಕನೆಯ ಸಂಧಿ



### ಇಪ್ಪತ್ತೈದನೆಯ ಸಂಧಿ



### ಭಾವಚಿತ್ರಗಳು

# ಈ ಗ್ರಂಥದಲ್ಲಿ ಕಂಡ ಗ್ರಾಮ್ಯ ಶಬ್ದಗಳು

| | | | |
|---|---|---|---|
| ಅಘಾಡ | ಅಗಾಧ | ಮ್ಯಾಲೆ | ಮೇಲೆ |
| ಆಡೋರೆ | ಅಡುವರೆ | ಯಚ್ರ | ಎಚ್ಚರ |
| ಆಳ್ಯಾರು | ಆಳುವರು | ಯಲ್ಯಾದರು | ಎಲ್ಲಾದರು |
| ಇನ್ಯಾರ | ಇನ್ನಾರ | ಯಾಕೆ | ಏಕೆ |
| ಉಂಬುತ್ತ | ಉಣ್ಣುತ್ತ | ಯಿಾಗ | ಈಗ |
| ಎಂಬುತ | ಎನ್ನುತ | ಯೆಲೆ, ಯೆಲೆ | ಎಲೆ |
| ಎತ್ನ | ಯತ್ನ | ವಾಜಿ | ಓಜಿ |
| ಎಶಸ್ಸು | ಯಶಸ್ಸು | ವಾರೆ | ಓರೆ |
| ಏಸು | ಎಷ್ಟು | ವಾಲಗ | ಓಲಗ |
| ಕಷ್ಟ, ಕಸ್ಟ | ಕಷ್ಟ | ವಾಸರಿಸೆ | ಓಸರಿಸೆ |
| ಕಟ್ಪೊರೆ | ಕಟ್ಟುವರೆ | ವ್ಯಾಳೆ | ವೇಳೆ |
| ಕಠಿನ | ಕಠಿಣ | ವೂಟ | ಊಟ |
| ಕ್ವಾರದಾಡೆ | ಕೋರೆದಾಡೆ | ವೋಲೆ, ವಾಲೆ | ಓಲೆ |
| ಗ್ನಾನ | ಜ್ಞಾನ | ವೊಂದು, ವಂದು | ಒಂದು |
| ನ್ಯಾರ | ನೇರ | ಶುಲುಬ | ಸುಲಭ |
| ನುಗ್ಯಾಡಿ | ನುಗ್ಗಾಡಿ | ಸಮ್ಮಂಧ | ಸಂಬಂಧ |
| ಪ್ರಗ್ನೆ | ಪ್ರಜ್ಞೆ | ಸ್ಯಾರ | ಸೇರ |
| ಬ್ಯಾಡ | ಬೇಡ | ಸಿಪ್ಹ | ಸಿಂಹ |
| ಬ್ಯಾರೆ | ಬೇರೆ | ಸೀಕ್ಷೆ | ಶಿಕ್ಷೆ |
| ಬ್ಯಾಲ | ಬೇಲ | ಸೂಳ್ಯಕ್ಕ | ಸೂಳಕ್ಕ |
| ಮ್ಯಾರೆ | ಮೇರೆ | | ಹ್ಯಾಗೆ, ಹೇಗೆ |

**ಈ ಗ್ರಂಥದ ಪದ್ಯಗಳ ಶಬ್ದದ ಮೇಲೆ ಸಂದೇಹಬಂದೆಡೆಯಲ್ಲಿ**
**ನಿಲ್ಲಿಸಿ ೬೨೨– ೬೨೧– ೬೧೨ ಪುಟಗಳನ್ನು ನೋಡಿ**
**ಮುಂದುವರಿಯಬೇಕು**

# ಪ್ರಸ್ತಾವನೆ

ಕವಿಯ ಸ್ಥಾನ ಕಾಲ-ಮತ-ಕೃತಿ ಇತ್ಯಾದಿ

ಶ್ರೀ ಬಸವೇಶಚರಿತೆಯೆಂಬ ಈ ಶರಣ ಲೀಲಾಮೃತವನ್ನು ರಚಿಸಿದ ಕವಿ ಚೆನ್ನಪ್ಪದೇವ, 'ಇವನು ವಿಜಯನಗರದ ದಕ್ಷಿಣ ಭಾಗದಲ್ಲಿರುವ[1] ಸಿಡುಗಲ್ಲೆಂಬ ಪಟ್ಟಣದಲ್ಲಿ ವಾಸವಾಗಿದ್ದೆನೆಂದೂ ಈ ಗ್ರಂಥವನ್ನು ಅಲ್ಲಿಯ ಬಸವೇಶ್ವರನ ದೇವಾಲಯದಲ್ಲಿ ರಚಿಸಿದನೆಂದೂ ಈ ಗ್ರಂಥದ ೬೦೭ ನೆಯ ಪುಟದಲ್ಲಿ ಹೇಳಿಕೊಂಡಿದ್ದಾನೆ.

ಈತನು ತನ್ನ ಮಾತಪಿತರನ್ನು ತಿಳಿಸಿಲ್ಲವಾದ್ದರಿಂದ ಸ್ಥಳ, ಜನನ, ಮರಣ ಕಾಲವು ಗೊತ್ತಾಗುವಂತಿಲ್ಲ. ಇವನು ವೀರಶೈವ ಕವಿಯೆಂಬುದು ಇವನ ರಚನೆಯಿಂದಲೆ ಗೊತ್ತಾಗುತ್ತಿದೆ. ಈತನು ಶಿವಭಕ್ತರ ಹುಡುಗರನ್ನು ಓದಿಸುತ್ತ ಉಪಾಧ್ಯಾಯನಾಗಿದ್ದೆನೆಂದು ತಿಳಿಸಿರುತ್ತಾನೆ.[2]

ಇತರ ಕವಿಗಳು ತಮ್ಮ ಗುರುಗಳ ಪರಂಪರೆಯನ್ನು ಸ್ತೋತ್ರಮಾಡುವಂತೆ ಮಾಡದೆ ಮಲ್ಲಿಕಾರ್ಜುನನನ್ನೇ ಈ ಗ್ರಂಥದ ಆರಂಭದಲ್ಲಿಯೂ, ಅಂತ್ಯದಲ್ಲಿಯೂ ಸ್ತುತಿಸಿರುವುದರಿಂದ ಇವನ ಗುರು ಚೆನ್ನಮಲ್ಲಿಕಾರ್ಜುನನೆಂದು ತೋರುತ್ತದೆ.

ಚೆನ್ನಪ್ಪಕವಿಯು ಕನ್ನಡ ಸಾಹಿತ್ಯದ ಹುರುಳನ್ನು ಚೆನ್ನಾಗಿ ತಿಳಿದ ಕವಿ. ಈತನು ಮಲ್ಲಿಕಾರ್ಜುನನ ಶಿಷ್ಯನಾದಾಗ್ಯೂ ಇವನಿಗೆ ಕಲ್ಯಾಣಪಟ್ಟಣದ ಬಸವೇಶನ ಮೇಗಣ ಭಕ್ತಿ, ಪ್ರೀತಿ, ಶ್ರದ್ಧೆ, ಭೃತ್ಯತ್ವ ಇವೇ ಮೊದಲಾದುವುಗಳಿದ್ದುವೆಂಬುದು ಈತನ ಗ್ರಂಥದಿಂದಲೇ ವ್ಯಕ್ತವಾಗುತ್ತಿದೆ.

ಈ ಗ್ರಂಥದಲ್ಲಿ ಬಸವೇಶನ ಚರಿತೆ ಶಿವಶರಣರ ಪವಾಡಗಳು ನಿಬಿಡವಾಗಿಯೂ ಖಂಡವಾಗಿಯೂ ರತ್ನಗಳಂತೆ ತುಂಬಿ ಶೋಭಿಸುತ್ತಿವೆ. ಪೂರ್ವ ಕವಿಗಳ ಗ್ರಂಥಾಧಾರದಿಂದ ಈ ಕಾವ್ಯವನ್ನು ರಚಿಸಿರುವೆನೆಂದು ಹೇಳಿಕೊಂಡಿದ್ದಾನೆ.[3]

ಈ ಗ್ರಂಥದ ಪ್ರಥಮದಲ್ಲೇ ಆಗಲಿ ಅಂತ್ಯದಲ್ಲೇ ಆಗಲಿ ಇಷ್ಟು ಸಂಧಿಗಳುಳ್ಳ ಗ್ರಂಥವಿದೆಂದು ತಿಳಿಸಿರುವುದಿಲ್ಲ. ಈ ಗ್ರಂಥವು ಹನ್ನೊಂದು ಸಂಧಿಗಳೆಂದೇ ಸುಮಾರು ಒಂದು ಶತಮಾನದಿಂದಲೂ ಮುದ್ರಣವಾಗುತ್ತಾ ಬಂದಿದೆ. ತಾಳೆ ಓಲೆ ಕೈಬರಹದ ಕೆಲವು ಪುಸ್ತಕಗಳಲ್ಲಿ ೧೧, ಮತ್ತೆ ಕೆಲವುಗಳಲ್ಲಿ ೨೨, ಇನ್ನು ಕೆಲವುಗಳಲ್ಲಿ ೨೫ ಸಂಧಿಗಳು ದೊರೆಯುತ್ತಲೇ ಇವೆ.

ಹೀಗೆ ದೊರೆತಿರುವವುಗಳಲ್ಲಿ ಹೆಚ್ಚಿಗೆ ಭಾಗಗಳುಳ್ಳ ಪ್ರತಿಗಳೇ ಲಭಿಸಿರುವುದರಿಂದ ಈ ಹೆಚ್ಚಿಗೆ ಸಂಧಿಗಳನ್ನು ಪ್ರಕ್ಷಿಪ್ತವೆಂದು ನಿರ್ಧರಿಸಲು ಎಡೆಯಿಲ್ಲದಾಗಿದೆ. ಆದರೆ: ಈ ಗ್ರಂಥದ ಪ್ರಥಮ ಅಂತ್ಯಭಾಗ ಬಿಟ್ಟು ಮಧ್ಯದಲ್ಲಿ ಲೋಪಗಳಿದ್ದುದು ನಿರ್ಧರಕ್ಕೆ ಬರುವಂತಿಲ್ಲ, ಶಂಕೆಯಲ್ಲಿಯೇ ಇದೆ.

---

1. ಪಾವಗಡ ತಾಲ್ಲೋಕಿಗೆ ಸೇರಿದಗ್ರಾಮ ನಿಡುಗಲ್ಲು. 2. ಪುಟ ೫೮೭. 3. ಪುಟ ೮.

ಪ್ರಾಚೀನ ಪುಸ್ತಕಗಳ ಕಡೆ ನೋಡಿದರೆ ಸಾಹಿತ್ಯ ಸಾರಾಂಶ ಎಲ್ಲಾ ಪುಸ್ತಕಗಳಲ್ಲಿಯೂ ಒಂದೇರೀತಿಯಾಗಿದ್ದರೂ ಪದ್ಯಗಳ ಹೋಲಿಕೆ ಬಾರದೆ ಇರುವುದರಿಂದ ಇದು ಅನುಮಾನವೆಂದೇ ಹೇಳಬಹುದು.

ಯಾವ ಕವಿಯೋ ಒಬ್ಬ ಪೂರ್ವಸಾಹಿತ್ಯದ ಬಲದಿಂದ ಈ ಕೆಲವು ಭಾಗವನ್ನು ರಚಿಸಿ ಸೇರಿಸಿ ಈ ಗ್ರಂಥಕರ್ತನ ತಲೆಗೆ ಕಟ್ಟಿರುವಂತೆ ಕಾಣುತ್ತದೆ. ಹೀಗೇ ಮತ್ತೆ ಕೆಲವು ಬರಹಗಾರರು ನೋಡಿ ತಮ್ಮ ಇಷ್ಟ ಬಂದಂತೆ ಹಾಡುಗಬ್ಬಗಳನ್ನು ಕಲ್ಪಿಸಿರುವಂತೆ ತೋರುತ್ತದೆ.

ಈ ಹಾಡುಗಬ್ಬಗಳು ಯಾವ ಭಾನಿಯಲ್ಲೇ ರಚಿಸಿದ್ದರೂ ಪೂರ್ವಸಾಹಿತ್ಯವನ್ನೇ ಅವಲಂಬಿಸಿರುವುದರಿಂದಲೂ, ಹಿಂದಿನಿಂದ ಕೆಲವು ವಾಚಕ ವೃಂದವು ಹೆಚ್ಚು ಸಂಧಿಗಳಿರುವ ಓಲೆಪ್ರತಿಗಳಲ್ಲಿ ಪ್ರವಚನ ಮಾಡಿರವುದರಿಂದ— ಆ ಪ್ರಸಾರದ ಹಂಬಲವು ಜನಗಳಲ್ಲಿ ನಾಟಿ ಹೆಚ್ಚು ಸಂಧಿಗಳಿರುವ ಭಾಗವನ್ನು ಬಿಡಬಾರದೆಂದು ಪಾಠಕರು ಬೇಡಿದ ಕಾರಣದಿಂದಲೂ, ಇವುಗಳನ್ನು ಬಿಡಲು ಅವಕಾಶವಿಲ್ಲದುದರಿಂದ— ಸಾಧ್ಯವಾದಷ್ಟು ಪರಿಶೋಧಿಸಿ, ವಾಚಕರ ಮುಂದೆ ಇಡಲಾಗಿದೆ.

## ಗ್ರಂಥವಿವರಣೆ ಪ್ರಶಸ್ತಿ ಇತ್ಯಾದಿ

ಈ ಕಾವ್ಯವನ್ನು ಕವಿಯು ಬಹುಇಂಪುಸೊಂಪಾದ ಹಾಡುಗಬ್ಬಗಳಿಂದಲೂ ಶಿವನ ಸ್ತೋತ್ರರೂಪಾದ ವೃತ್ತಗಳಿಂದಲೂ ರಚಿಸಿರುವುದರಿಂದ— ಈ ಗ್ರಂಥದ ಮೇಲೆ ಪ್ರೀತಿಯಿಟ್ಟು ಪುರುಷರೂ, ಸ್ತ್ರೀಯರೂ ಬಾಯಿಪಾಠವಾಗಿ ಪದ್ಯಗಳನ್ನು ಸ್ತುತಿಸುತ್ತಿದ್ದಾರೆ.

ಈ ಗ್ರಂಥವು ಇಪ್ಪತ್ತೈದು ಸಂಧಿಗಳಿಂದ ಕೂಡಿ ಒಟ್ಟು ಸಂಖ್ಯೆ ೬೬೬೭ ಪದ್ಯಗಳಿಂದ ಪ್ರಕಟಿಸಿರುತ್ತದೆ. ಪ್ರತಿಯೊಂದು ಸಂಧಿಯು ಪ್ರಾರಂಭದಲ್ಲಿ ಮಲ್ಲಿಕಾರ್ಜುನನ ಸ್ತುತಿಯ ವೃತ್ತಗಳು ಶೋಭಿಸುತ್ತಲಿವೆ. ಇವುಗಳಲ್ಲಿ ಕವಿಯು ಕ್ಲಿಷ್ಟಶಬ್ದ, ಕಷ್ಟಾಕ್ಷರ ಪ್ರಾಸ, ಶ್ಲೇಷ, ಉಕ್ತಿ ಚಮತ್ಕಾರಗಳನ್ನು ಬಳಸಿದ್ದರೂ ಲಲಿತವಾದ ರೀತಿಯಲ್ಲಿ ಬಳಸಿದ್ದಾನೆ. ಸ್ತುತಿ ಪದ್ಯಗಳು ಬೇರೆ ಬೇರೆ ರೂಪದಿಂದ ಬಂದದ್ದೇ ಬರುವ ರೂಢಿ ಈ ಗ್ರಂಥದಲ್ಲಿ ಅಲ್ಲಲ್ಲಿ ಕಂಡುಬರುತ್ತದೆ.

ಈ ಗ್ರಂಥಕ್ಕೆ **ಶಿವಶರಣ ಲೀಲಾಮೃತ** ಅಥವ ಯಕ್ಷಗಾನ **ಬಸವಪುರಾಣ** ಎಂದು ಹೇಳಬಹುದು. ಕವಿಯು ಈ ಗ್ರಂಥದಲ್ಲಿ ಮಹಾತ್ಮನಾದ ಶ್ರೀ ಬಸವೇಶನ ಪೂರ್ಣಚರಿತೆಯನ್ನೂ ಶಿವಶರಣರ ಮಹತ್ವ ವಿಷಯಗಳನ್ನೂ ಸಂಗ್ರಹಿಸಿ, ಸತ್ತವರ ಕಥೆಯನ್ನು ತಿರಸ್ಕರಿಸಿರುತ್ತಾನೆ:—

**"ಹಿಂದೆ ಕಾಳಗದಲ್ಲಿ ಹೆಚ್ಚು ಕಡಿದಾಡಿ ।**
**ಸಂದುಹೋದವರ ಕಥೆ ಸಾಟಿಯಿದಕಲ್ಲಾ ॥**
**ಹಾದರವು ಹುಸಿಕಳವು ಅನ್ಯಾಯದಿಂದ ।**
**ಕಾದಿಸತ್ತವರ ಕಥೆ ಕಾವ್ಯವು ಇದಲ್ಲ" ॥**

ಎಂದು ಹೇಳಿರುವುದಲ್ಲದೆ ಹಾಸ್ಯ, ಅದ್ಭುತ, ಭಯಾನಕಾದಿ ರಸಗಳನ್ನು ಪ್ರತಿಪಾದಿಸಿದ್ದರೂ ಅವಕ್ಕೆ ಹೆಚ್ಚು ಪ್ರಾಧಾನ್ಯ ಕೊಟ್ಟಿಲ್ಲ.[1] ಭಕ್ತಿಯೇ ಮುಖ್ಯ.

ಶಿವನೇ ಶ್ರೇಷ್ಠ, ಮಿಕ್ಕಿನ ನರಸುರರೆಲ್ಲಾ ಶಿವನ ಭೃತ್ಯರೆಂದು ಭಾವಿಸಿ–ನಿರ್ದಾಕ್ಷಿಣ್ಯದಿಂದ ಪರಮತಖಂಡನೆಯನ್ನು ಆಧಾರಪೂರ್ವಕ ಪ್ರತಿಪಾದಿಸಿರುತ್ತಾನೆ.

ಈ ಗ್ರಂಥವನ್ನು ಕವಿಯು ರಚಿಸಿ ಸಾಧಾರಣ (ಕ್ರಿ.ಶ. ೧೭೫೦) ರಲ್ಲಿ ರಚಿಸಿದನೆಂದೂ ಊಹಿಸಬಹುದಾಗಿದೆ.[2] ಇದೇ ಕವಿಯು "ಚೆನ್ನ ಬಸವೇಶ್ವರನ ಕಾಲಜ್ಞಾನ"ವೆಂದು ಮತ್ತೊಂದು ಗ್ರಂಥವನ್ನು ರಚಿಸಿದ್ದಾನೆ. ಇದೂ ನಮಗೆ ದೊರೆತಿದೆ, ಆ ಗ್ರಂಥವನ್ನು ಸರ್ವಜನರ ಗಮನಕ್ಕೆ ಈಗಾಗಲೆ ಪ್ರಕಟಿಸಿರುತ್ತದೆ.

ಛಂದೋವಿವರ ಇತ್ಯಾದಿ

ಈ ಗ್ರಂಥವು ವೃತ್ತ, ಕಂದ, ಷಟ್ಪದಿ, ತ್ರಿವುಡೆ, ಅಟತಾಳ, ತ್ಯಾಗವರ್ತನ, ಜಂಪೆ, ಕೊಂಚಜಂಪೆ, ಛಲತಾಳ, ಏಕತಾಳ, ಸಾಂಗತ್ಯ, ಸೊಬಗಿನಸೋನೆವರ್ಣ, ದ್ವಿಪದಿ, ರಗಳೆ ಇವೇ ಮೊದಲಾದವುಗಳಿಂದ ರಚಿತವಾಗಿದೆ. ಚೆನ್ನಪ್ಪಕವಿಯು ಕರ್ಣಾಟಕಛಂದಸ್ಸನ್ನು ಚೆನ್ನಾಗಿ ತಿಳಿದ ಕವಿಯೆಂದು ಹೇಳಬಹುದು. ಈತನು ತನ್ನ ರಚನೆಯಲ್ಲಿ ಯತಿ, ಗಣ, ಪ್ರಾಸಗಳ ಮರ್ಮವನ್ನು ತಿಳಿಯದೆ ಕಾವ್ಯಗಳ ಜರಿವವನು ಜ್ಞಾನಿಯಲ್ಲ,[3] ಎಂದು ತಿಳಿಸುವುದಲ್ಲದೆ—ತಾನೂ ಸಹ ಛಂದಸ್ಸಿನ ಹುರುಳನ್ನು ತಿಳಿದವನಲ್ಲ[4] ಎಂದು ಉದಹರಿಸಿಕೊಂಡಿದ್ದಾನೆ. ಕವಿಗಳು ಪಾಂಡಿತ್ಯ ಪಡೆದಿದ್ದರೂ ಹೀಗೆ ತಮ್ಮನ್ನು ತಾವೇ ಹೀಯಾಳಿಸಿಕೊಳ್ಳುವುದು ಕವಿಗಳ ಪದ್ಧತಿ.

**ದ್ವಿಪದಿ.** ಇದು ಎರಡು ಪಾದವುಳ್ಳದ್ದು. ಪಾದ ಒಂದಕ್ಕೆ ಮೂರು ವಿಷ್ಣುಗಣ, ಒಂದು ಬ್ರಹ್ಮಗಣ ಬರಬೇಕು. ಇದರಂತೆ ಗಣಗಳನ್ನು ಕ್ರಮವಾಗಿ ಕವಿ ಬಳಸಿದ್ದರೂ ವಿಷಮಪಾದದ ಪದ್ಯಗಳು ಅಲ್ಲಲ್ಲಿ ಕಂಡುಬರುತ್ತವೆ. ಇದು ಯಾವ ಕಾರಣದಿಂದ ಹೀಗೆ ಬಂದಿರುವುದೋ ಗೊತ್ತಾಗುವಂತಿಲ್ಲ. ನಮಗೆ ದೊರೆತ ಕೆಲವು ಪ್ರತಿಗಳಿಂದ ಈ ದೋಷವನ್ನು ತೆಗೆದಿದ್ದರೂ ಇನ್ನೂ ಅಲ್ಲಿಲ್ಲಿ ಕಾಣುವಂತಹವು ಇದ್ದೇ ಇವೆ.

ಇಲ್ಲಿ ಕಂಡುಬರುವ ಎಲ್ಲಾ ಪದ್ಯಗಳ ಮೇಲೂ ಗಣಗಳನ್ನು ವಿಂಗಡಿಸುತ್ತಾ ಹೋದರೆ, ಕೆಲವು ಕ್ರಮವಾಗಿಯೂ, ಕೆಲವು ಅಕ್ರಮವಾಗಿಯೂ ಕಾಣಬಹುದು; ಹೀಗೆ ಕಂಡಮಾತ್ರಕ್ಕೆ ಕವಿಯು ಏನೂ ತಿಳಿಯದವನೆಂದು ಹೇಳಲು ಸಾಧ್ಯವಿಲ್ಲ. ಲಲಿತಶೈಲಿಯ ಕಾಪಾಡಿರುವುದೇ ಈ ಕವಿಯ ಮುಖ್ಯ ಗುರಿ.

ಚಿನ್ನ ಒಂದರಲ್ಲಾದ ಒಡವೆಯ ರೂಪಗಳ ಹೆಸರು ಹೆಚ್ಚುಕಡಿಮೆಯಿಂದ ಕೂಡಿದ್ದರೂ ಹೊನ್ನಿಗೆ ಲೋಪವಿಲ್ಲದಂತೆಯೂ, ಧಾನ್ಯ ಒಂದರಲ್ಲಿ ಬಹುವಿಧದ

1. ಪುಟ ೧೪೫. ಪುಟ ೩೬೪. 2. ಕರ್ಣಾಟಕ ಕವಿಚರಿತೆ ತೃತೀಯಭಾಗ, ಪುಟ ೮೫. ದ್ವಿತೀಯಭಾಗ, ಪುಟ ೪೪೦. 3. ಪುಟ ೬. 4. ಪುಟ ೮೨. ಪುಟ ೬೦೯.

ಪದಾರ್ಥಗಳಾದಾಗ್ಯೂ ಸವಿಗೆ ಕೊರತೆಯಿಲ್ಲದಂತೆಯೂ ಕವಿಯು ಯಾವ ಪದ್ಯ ಭೇದದಿಂದ ರಚಿಸಿದ್ದರೂ ಸಾಹಿತ್ಯಕ್ಕೆ ಕುಂದಕವೇನೂ ತಂದಿರುವುದಿಲ್ಲ.

ರಘುಪತಿಯೂ ತನ್ನ "ಕರ್ಣಾಟಕ ಛಂದೋರಾಜಂ" [1] ಎಂಬ ಗ್ರಂಥದಲ್ಲಿ, ದೈವಪರವಾಗಿ ಮುಸಿಹೃದಯದಿಂದ ರಚಿಸಲ್ಪಡುವ ಗ್ರಂಥಗಳಿಗೆ ಛಂದೋಬದ್ಧವನ್ನು ನೋಡಲಾಗವೆಂದು ತಿಳಿಸಿರುತ್ತಾನೆ.

ಶಂಕರದಾಸಿಮಯ್ಯ ಪುರಾಣದ ಕರ್ತೃವಾದ ಮಲ್ಲಿಕಾರ್ಜುನಕವಿಯು ಶರಣರೇ ಗಣ ಶಿವತತ್ವಾನುಭಾವವೇ ಅಲಂಕಾರವೆಂದು ಹೇಳಿರುವುದಲ್ಲದೆ, ಶಿವಶರಣರ ಚರಿತೆಗೆ ಕರ್ತೃ, ಕರ್ಮ, ಕ್ರಿಯೆ, ಛಂದಗಳ ನೋಡಲಾಗದೆಂದು ವರ್ಣಿಸಿರುತ್ತಾನೆ. [2]

ಚೆನ್ನಪ್ಪಕವಿಯು ಈ ಕಾವ್ಯದಲ್ಲಿ ಅನ್ವಯ ಶಬ್ದಗಳನ್ನು ಬಿಡಿಬಿಡಿಯಾಗಿ ಬಿಡಿಸಿ, ಹಾಡುಗಬ್ಬದ ಲಕ್ಷಣವನ್ನು ಚೆನ್ನಾಗಿ ಕಾಪಾಡಿದ್ದಾನೆ. ಹಾಡುಗಬ್ಬಗಳ ರಚಿಸುವಾಗ ಸಂಧಿ, ಸಮಾಸ, ವಿಭಕ್ತಿಗಳ ಕ್ರಮವನ್ನು ಬಹು ನೇಮವಾಗಿ ಬಳಸುವುದೆಂದರೆ: ಹಾಡುಗಬ್ಬಕ್ಕೆ ಸರಳಧಾಟಿಯು ನಿಲ್ಲುವುದು ಬಹುಶಃ ದುರ್ಲಭವೆಂದೇ ಹೇಳಬೇಕು. ಇದಕ್ಕಾಗಿ ಕವಿಯು ಈ ಗೊಂದಲಕ್ಕೆ ಮನವಿಡದೆ ಸರಳಧಾಟಿಯ ಸಾಹಿತ್ಯದ ಕಡೆ ಮನವಿಟ್ಟು ಪಾಲಿಸಿದ್ದಾನೆ.

1. ಪುಟ ೧೨೦. ದೇವತಾ ವಾಚಕಾಶ್ಶಬ್ದಾ ಯೇಚಾನ್ಯೇಭದ್ರವಾಚಕಾಃ ।
ತೇ ಸರ್ವೇ ನೈವ ನಿಂದಾಸ್ಯುಃ ಲಿಪಿತೋಗಣತೋಽಪಿವಾ ॥

2. ಸಂಧಿ ೧. ಭಾ. ಷ.

ರೂಢಿಸುವ ಕರ್ಣಾಟಕ ಲಕ್ಷಣ ।
ಗೂಡಿತಲ್ಲೀ ಕಾವ್ಯದೊಳಗೆನ ।
ಬೇಡ ತಿಳಿಯದೆ ಹೇಳ್ದುದಿಲ್ಲಂ ಶಬ್ದಶಾಸ್ತ್ರವನು ॥
ಪಾಡುಗಬ್ಬದಲಕ್ಷಣಂಗಳ ।
ನೀಡರಿದು ಪದವಿಡೆ ಸುಮೋಹನ ।
ಗಾಡಿ ಕೆಡುವುದೆನುತೆ ವಿಭಕ್ತಿ ಸಮಾಸಗಳ ನುಳಿದೆ ॥ ॥ ೧೬ ॥

ಕುಳುಕಮುಕ್ತಕ ತಿಜಸುಬಂತೋ ।
ಜ್ವಳಿಪ ಸಿದ್ಧಿಸಮಾಸ ಛಂದಂ ।
ಗಳತಿ ಮಿರುಗುವ ಗಣಸವರಸಂ ಶಬ್ದಪರ್ಯಾಯ ॥
ರಳಕುಳಾಕ್ಷರವುಂ ವಿಭಕ್ತಿ ।
ಸ್ಥಳವಲಂಕೃತ ಕರ್ತೃ ಕರ್ಮಂ ।
ಗಳ ವಿಚಾರಿಸಲಾಗದೀಶ್ವರ ಭಕ್ತ ಚರಿತೆಯೊಳು ॥ ॥ ೧೭ ॥

ಶ್ರೀ ಬಸವೇಶನ ಮಹತ್ವವೆಂಬ ಬಳ್ಳಿಯು ಕರ್ನಾಟಕ ದೇಶದಲ್ಲೆಲ್ಲಾ ಹಬ್ಬಲು ಇದೊಂದು ಪ್ರಧಾನ ಬಳ್ಳಿಯೆಂದು ಕವಿಗಳು ದ್ವಿಗುಣವಾಗಿ ವರ್ಣಿಸಿ, ಪಸ್ತಕವಾಗಿ ಇಟ್ಟ ಪೈಕಿ, ಸಿಂಗಿರಾಜ ಪುರಾಣ, ಭೀಮಕವಿಯ ಬಸವಪುರಾಣ, ಹರಿಹರನ ಬಸವೇಶ ರಗಳೆ, ಪಾಲ್ಕುರಿಕೆ ಸೋಮೇಶನ ತೆಲಗು ಬಸವ ಪುರಾಣ, ಮಲುಹಣನ ವೀರಶೈವಾಮೃತ ಪುರಾಣ, ಚೆನ್ನಪ್ಪಕವಿಯ ಶರಣ ಲೀಲಾಮೃತ, ಶಂಕರಾರ್ಯನ ಸಂಸ್ಕೃತ ಬಸವೇಶ ವಿಜಯ, ಯಳಂದೂರು ಷಡಕ್ಷರ ಕವಿಯ ವೃಷಭೇಂದ್ರ ವಿಜಯ ಇವೇ ಮೊದಲಾದ ಗ್ರಂಥಗಳು ವೃತ್ತ, ಷಟ್ಪದಿ, ರಗಳೆ, ದ್ವಿಪದಿಗಳಿಂದ ರಚಿಸಿರುವವು ಗಳಲ್ಲಿ ಸಾಧಾರಣ ಸಿಂಗಿರಾಜನ, ಭೀಮಕವಿಯ ಗ್ರಂಥಗಳ ಆಧಾರವಲ್ಲದೆ ಬಸವೇಶನಕಾಲದ ವಚನ ಸಂಗ್ರಹ ಮುತ್ತುಗಳನ್ನು ಜೋಡಿಸಿರುವುದು ಈ ಗ್ರಂಥ ದಲ್ಲಿ ಬಂದಿರುವ ಕಾಲಜ್ಞಾನ, ಹೊಸರೀತಿಯ ಪವಾಡವೇ ಮೊದಲಾದುವುಗಳಿಂದ ಕಂಡುಹಿಡಿಯಬಹುದು

ಈ ಗ್ರಂಥವು ತತ್ವವಿವೇಚನೆಯಲ್ಲಿಯೂ ಕೇಳ್ವಿಕೆಯ ಸೊಂಪಿನಲ್ಲಿಯೂ ಇಂಪಾಗಿ ರಚಿಸಿರುವುದರಿಂದ, ಯಕ್ಷಗಾನಗ್ರಂಥಗಳ ಕಡೆ ನೋಡಿದರೆ ಇದೇ ಒಂದ ನೆಯದೆಂದು ಹೇಳಲು ಏನೂ ಅನುಮಾನವೇ ಇರುವುದಿಲ್ಲ.

ಈ ಕಾವ್ಯದಲ್ಲಿ ಬಸವೇಶನೇ ಮೊದಲಾದ ಪ್ರಮುಥರು ದಾಸೋಹಂಭಾವದಿಂದ ನಡೆದು ನುಡಿದು ವೀರಶೈವ ತತ್ವಸ್ಥಾಪನಗೊಳಿಸಿ ಶಿವಸನ್ನಿಧಿಗೆ ಹೋದ ವಿಷಯವೇ ಇದಾಗಿರುವುದರಿಂದ, ಪ್ರತಿಯೊಬ್ಬ ಲಿಂಗಾಯತನೂ ಈ ಗ್ರಂಥವನ್ನು ಪ್ರವಚನ ಮಾಡಿ ತತ್ವಜ್ಞಾನಿಯಾಗಿ ಮುಕ್ತನಾಗಲು ಸಾಧನವಾಗಿದೆ.

ಈ ಗ್ರಂಥದ ಶೋಧನೆಗಾಗಿ ಎರಡು ಅಚ್ಚಿನ ಪ್ರತಿ, ನಾಲ್ಕು ಕಾಗದದ ಮೇಗಣ ಕೈಬರಹದ ಪ್ರತಿ, ಎಂಟು ತಾಳೇ ಓಲೆ ಪ್ರತಿ ಹೀಗೆ ಹದಿನಾಲ್ಕು ಪ್ರತಿಗಳು ನಮಗೆ ದೊರೆತಿದ್ದು, ಇವುಗಳಿಗೆ ಅನುಕ್ರಮವಾಗಿ (ಅ, ಇ, ಉ, ಎ, ಒ, ಖ, ಗ, ಚ, ಜ, ಟ, ಡ, ತ, ದ, ಬ. ) ಹೀಗೆ ಮಾತೃಕೆ ಗಳನ್ನು ಪ್ರಯೋಗಿಸಲಾಗಿದೆ.

ಅಚ್ಚಿನ ಪ್ರತಿಗಳಲ್ಲಿ (ಬ.) ಪ್ರತಿಯೇ ಸಾಧಾರಣ ಶುದ್ಧವಾದ ಪ್ರತಿ. ಇದು ಹನ್ನೊಂದು ಸಂಧಿ ಮಾತ್ರವೇ ಇದೆ.

ಕಾಗದದ ಮೇಗಣ ಕೈಬರಹದ ಪ್ರತಿಗಳಲ್ಲಿ (ಡ, ತ.)ಪ್ರತಿಗಳು ಇಪ್ಪತ್ತೈದು ಸಂಧಿಗಳಿದ್ದು ಕೆಲವು ಶುದ್ಧಪಾಠಗಳನ್ನು ನಿರ್ಣೈಸಲು ಅನುಕೂಲವಾಯಿತು.

ತಾಳೇ ಓಲೆ ಪ್ರತಿಗಳಲ್ಲಿ(ಇ, ಒ, ದ.) ಪ್ರತಿಗಳು ಇಪ್ಪತ್ತಮೂರು ಸಂಧಿಗ ಳಿದ್ದು ಹಲವೆಡೆಯ ಶುದ್ಧಪಾಠಗಳನ್ನು ನಿರ್ಧರಿಸಲು ಸಹಾಯವಾಯಿತು.(ಉ, ಎ, ಗ, ಚ.) ಪ್ರತಿಗಳು ಇಪ್ಪತ್ತೆರಡು ಸಂಧಿಗಳಿದ್ದು ಹೋಲಿಕೆ ಒಂದೇಯಾಗಿರುವುದಲ್ಲದೆ ಇವುಗಳಿಂದ ಅಷ್ಟು ಸಹಾಯಕಾರಿಯಾಗಲಿಲ್ಲ. (ಖ, ಜ, ಟ.)ಪ್ರತಿಗಳು ಹನ್ನೊಂದು

ಸಂಧಿಗಳಿದ್ದು (ಅ, ಬ.) ಪ್ರತಿಗಳನ್ನು ಹೋಲುವುದರಿಂದ ಕವಿಯ ಸ್ವತಂತ್ರ ಪಾಠಗಳನ್ನು ಕಂಡುಹಿಡಿಯಲು ಸಹಾಯವಾಯಿತು.

ಮೇಲ್ಕಂಡಂತೆ ಪ್ರತಿಗಳಲ್ಲಿ ಪದ್ಯಗಳು ಬೇರೆ ಬೇರೆ ರೂಪದಿಂದ ಬೇರೆ ಬೇರೆಯಾಗಿರುವುದರಿಂದ (ಇ, ಒ, ದ,ಬ.) ಪ್ರತಿಗಳನ್ನೇ ಅನುಸರಿಸಿ ಮುದ್ರಿಸಲಾಗಿದೆ.

ಯಾವ ಯಾವ ಪ್ರತಿಗಳಲ್ಲಿ ಯಾವ ಯಾವ ಪದ್ಯಗಳು ಲೋಪಹೊಂದಿವೆ ಎಂಬುದನ್ನೂ ಹೆಚ್ಚಿಗೆ ದೊರೆತಿರುವ ಪದ್ಯಗಳನ್ನೂ ಅಲ್ಲಲ್ಲಿ ಅಡಿ ಟಿಪ್ಪಣಿಯಲ್ಲಿ ಸೂಚಿಸಲಾಗಿದೆ.

ಮೇಲ್ಕಂಡ ಎಲ್ಲಾ ಪ್ರತಿಗಳಲ್ಲಿಯೂ ನಮಗೆ ಹೆಚ್ಚಿಗೆ ಶುದ್ಧವಾಗಿ ಕಂಡುಬಂದ ಶಬ್ದಗಳನ್ನು ಬಳಕೆಯಲ್ಲಿಟ್ಟು ಸಮಸಂಯುಕ್ತವಾಗಿ ಕಂಡುಬಂದ ಶಬ್ದಗಳನ್ನು ಅಡಿ ಟಿಪ್ಪಣಿಯಲ್ಲಿ ಪಾಠಾಂತರಿಸಲಾಗಿದೆ. ಎಲ್ಲಾ ಪ್ರತಿಗಳಲ್ಲಿಯೂ ಶಬ್ದಗಳು ಬೇರೆ ಬೇರೆ ರೂಪವಾಗಿ ಹೊರಟಿರುವುದರಿಂದ ಕವಿಯ ಮೂಲಶಬ್ದ ಇಂತಹದೇ ಸರಿಯೆಂದು ನಿರ್ಧರಮಾಡಲು ಬರುವಂತಿಲ್ಲ. ಇದಕ್ಕಾಗಿ ಈ ಶಬ್ದಗಳಲ್ಲಿ ಒಂದನ್ನು ಅಂಗೀಕರಿಸಿ ಇನ್ನೊಂದನ್ನು ಬಿಡಲು ಸರಿದೋರಲಿಲ್ಲವಾದಕಾರಣ ಅಡಿ ಟಿಪ್ಪಣಿಗಳಲ್ಲಿ ತೋರಿಸ ಲಾಗಿದೆ.

ಈ ಗ್ರಂಥಕರ್ತನ ಕಾಲಕ್ಕೆ ಱ ೞ ಗಳ ಪ್ರಯೋಗವಿರಲಿಲ್ಲವೆಂದು ಕಾಣುತ್ತದೆ. ಇದುವರೆವಿಗೂ ನಮಗೆ ದೊರೆತಿರುವ ಪ್ರತಿಗಳಲ್ಲಿ ಈ ಪ್ರಯೋಗವಿಲ್ಲವಾದುದರಿಂದ ಅವುಗಳನ್ನು ನಾವು ಈ ಮುದ್ರಣದಲ್ಲಿ ಬಿಟ್ಟಿದ್ದೇವೆ.

ಬಹು ಎಚ್ಚರಿಕೆಯಿಂದ ಈ ಗ್ರಂಥದ ಸಂಸ್ಕರಣಕಾರ್ಯವನ್ನು ನೆರವೇರಿಸಿದ್ದರೂ, ಅಲ್ಲಲ್ಲಿಭಿನ್ನಾಭಿಪ್ರಾಯಕ್ಕೆ ಅವಕಾಶವಿದೆಯೆಂದು ಅರಿವು ಉಂಟಾಗಬಹದು. ಹೆಚ್ಚುಭಾಗ ದೊರೆತಿರುವ ಪದ್ಯಗಳಿಗೆ ಪಾಠಾಂತರವು ಸಾಕಾದಷ್ಟು ದೊರೆಯಲಿಲ್ಲವಾದಕಾರಣ, ಅವುಗಳ ಶುಧ್ಧತೆ ನಮ್ಮ ಮೇಲೆಯೇ ಬಿದ್ದದ್ದಾಯಿತು ಅವುಗಳ ನ್ಯೂನತೆಯೇನಾದರೂ ಕಂಡುಬಂದಲ್ಲಿ ಗ್ರಾಹಕರು ತಿಳಿಸಿದರೆ ಮುಂದಿನ ಮುದ್ರಣದಲ್ಲಿ ಸರಿಪಡಿಸಲಾಗುವುದು.

ಈ ಗ್ರಂಥದಲ್ಲಿ ಗ್ರಾಮ್ಯ ಶಬ್ದಗಳ ಪ್ರಯೋಗ ವಿಶೇಷವಾಗಿತ್ತು. ಅವುಗಳನ್ನೆಲ್ಲಾ ತೆಗೆದು ಶುದ್ಧವಾದ ಶಬ್ದಗಳ ಕಡೆ ಗಮನವಿಟ್ಟು ಶೋಧಿಸಲಾಗಿನೆ.

ಮೈಸೂರು
ತಾ॥ ೨೦- ೬-೧೯೪೫

**ಶ್ರೀ ಶಿವಬಸವಸ್ವಾಮಿಗಳು,**
ದೇವನೂರುಮಠ.



॥ಓಂ॥

॥ ಶ್ರೀ ಗುರು ಬಸವ ಲಿಂಗಾಯ ನಮಃ ॥

# ಶರಣ ಲೀಲಾಮೃತ



## ಮಂಗಳಾಚರಣ ಮತ್ತು ರಜತಗಿರಿ ಕೈಲಾಸದ ವರ್ಣನೆ.

**ದ್ವಿಪದಿ.**

ಶ್ರೀ ಗುರು ಪ್ರಮಥಗಣ ಶ್ರೀಗುರು ರಮಣ
ಶ್ರೀ ಗಿರಜೆಯರ್ಧಾಂಗ ಶ್ರೀದಿವ್ಯ ಲಿಂಗಾ |
ಶ್ರೀ ಗುರುವೆ ಶಿವಲಿಂಗ ಸಿದ್ಧಾಂತರಂಗಾ ॥ ೧ ॥

ನಾಗವರ ಚರ್ಮಾಂಗ [1] ನುತಜನ ಸುಸಂಗ [1] |
ಗಂಗಾಧರಾ[2] ಬಕುತಸರಸಿಜಕೆ ಭೃಂಗಾ [2] ॥ ೨ ॥

ಫಣಿರಾಜ ಕಂಕಣನೆ [3] ಪದುಮಾಕ್ಷಿ ಭರಣ [3] |
ಮಣಿ ಭೂಷಣಾ ದೈತ್ಯ ಗರ್ವಾಪ ಹರಣ ॥ ೩ ॥

ಶಶಿಯಗ್ನಿ ರವಿನೇತ್ರ ಶರಣಜನ ಸ್ತುತ್ಯಾ |
ಭಸಿತ ಭೂಷಿತ ಗಾತ್ರ ಭವ್ಯ ಚಾರಿತ್ರ ॥ ೪ ॥

[4]ತ್ರಾಹಿ [4] ಮಾಂ ಗುರುವರಾ ತ್ರಾಹಿಮಾಂ ದೇವ |
ತ್ರಾಹಿ ಭಕ್ತರಬಂಧು ವರ ಕೃಪಾ ಸಿಂಧು ॥ ೫ ॥

ಎಂದು ನಿಮ್ಮನು ನುತಿಪೆ ಎಲ್ಲ ಕಾಲದೊಳು |
ನಂದೀಶ ನಾನಿಮ್ಮ ಪಾದಕ್ಕೆ ಎರಗಿ ॥ ೬ ॥

ಮುಂದೆ ಪೇಳುವೆ ಶರಣರ ಮುಕ್ತಿಯ ಕಥೆಯ |
ಬಂದು ದಯವಿಡು ನಿನ್ನ ಬಾಲನ ಕೃತಿಗೆ ॥ ೭ ॥

---

ಪಾಠಾಂತರ :—

* ಈ ಅರ್ಧ ಪದ್ಯ (ಇ, ಉ, ಎ, ಖ, ಗ, ದ, ) ಪ್ರತಿಗಳಲಿಲ್ಲ. 1-1 ನಮಿತಭುಜಂಗ (ಅ, ಉ, ಜ, ಟ, ಡ, ತ.) 2-2 ಕನ್ಯಾಸಂಗ ಸುರಜನೋತ್ತುಂಗ (ಚ) 3-3 ಪಾದಾಕ್ಷಯಾಣ ಅ, ಉ, ಒ, ಖ, ಜ, ಡ, ತ, ದ.) 4-4 ಪಾಹಿ (ಇ, ಎ, ಖ, ಗ, ಚ.)

ಕಂದರ್ಪ ಮದಭಂಗ[1] ಕರುಣ ಶಿವಲಿಂಗಾ[1] ।
ಚಂದ್ರಧರ ಸಲಹೆನ್ನ ಚೆನ್ನಮಲ್ಲೇಶಾ ॥ ೮ ॥

ವಚನ ॥ ಇಂತೆಂದು ಶ್ರೀಮಹಾದೇವನ ಸ್ತುತಿಯಂ ಮಾಡಿ, ಜಗದಾಂಬೆಯಾದ ಶ್ರೀ ಪಾರ್ವತಿಯಂ ನುತಿಪೆಂ.

**ಏಕತಾಳ.**

ಶಾಂಭವಿಯೆ ಶರ್ವಾಣಿ । ಶಶಿಮುಖಿಯೆ ಪರಶಿವೆ ।
[2]ಕಂಬುಕಂಧರೆ[2] ರಾಣಿ । [3]ಕಸ್ತೂರಿ ವೇಣಿ[3] ॥ ೧ ॥
ಗಿರಿರಾಜ ವರ ಸುತೆಯೆ । ಗೀರ್ವಾಣಿ ಸುರನಮಿತೆ ।
ಪರಮ ಭಕ್ತರ ಪ್ರೀತೆ । ಪಾವನ ಸುಚರಿತೆ ॥ ೨ ॥
ಅಂಬುಜೋದ್ಭವ ನುತೆಯೆ । ಅಖಿಳ ಲೋಕಖ್ಯಾತೆ ।
ನಂಬಿದೆನು ಜಗಮಾತೆ । ನಾಗೇಂದ್ರ ನಮಿತೆ ॥ ೩ ॥
ಅಂಬಿಕೆಯೆ ತಾಯಿ[4] ಜಗ । ದಂ[4] ಬಿಕೆಯೆ ಶರ್ವಾಣಿ ।
ಅಂಬೋ[5] ಜ ಮೃದು[5] ಪಾಣಿ । ಅಮಿತ ಕಲ್ಯಾಣಿ ॥ ೪ ॥
ಸಕಲ[6] ಲೋಕ[6] ಕೆ ಕರ್ತ್ರಿ । ಸಾವಿತ್ರಿ ಗಾಯತ್ರಿ ।
ಅಖಿಳ ಮಂತ್ರಕೆಮಾತೆ । ನೀಡೆನಗೆ ಕೃಪೆಯ ॥ ೫ ॥

ವಚನ ॥ ಇಂತೆಂದು ಜಗನ್ಮಾತೆಯಾದ ಭವಾನಿಯಂ ನುತಿಸಿ, ಮುಂದೆ ಸಕಲ ವಿದ್ಯಾಕರ್ತೃವಾದ ಗಣಾಧಿಪತಿಯ ನುತಿಪೆಂ.

## ಗಣಪತಿ ಸ್ತೋತ್ರ ಮತ್ತು ಶಾರದಾ ಸ್ತೋತ್ರ.

**ಜಂಪೆ.**

ಶ್ರೀಗುರುವೆ ಗಣನಾಥ । ಸಕಲ ವಿದ್ಯಕೆ[7] ತಾ[7] ತ ।
ನಾಗ[8] ಉರಧರಯುತ[8] ಯಖಿಳ ಸುರನಮಿತ ॥ ೧ ॥
ಸಾಮಜಾಸ್ಯನೆ ಸಕಲ । ಭೂಮಿ[9] ವಿಬುಧ[9] ಸ್ತುತ್ಯ !
ಪ್ರೇಮಿ ಜಯಸಲಹೆನ್ನ । ಸ್ವಾಮಿ ಗಣನಾಥ ॥ ೨ ॥
ಶ್ರೀಗಿರಿಜ ವರ ಸುತನೆ । ಸಕಲ ಮುನಿ ಜನ ನುತನೆ ।
ಬೇಗದಿಂದೀ ಕೃತಿಗೆ । ಬೀರೆನಗೆ ಮತಿಯ ॥ ೩ ॥

1-1 ಕಾಲಸಂಹಾರ (ಉ, ಎ, ಒ, ಖ, ಗ, ಚ, ಟ, ದ ) 2-2 ಶಂಭುಪಟ್ಟದ (ಉ, ಎ, ಖ, ಚ ) 3-3 ಶೈಕಥಾಶ್ರೇಣಿ (ಇ, ಉ, ಎ,ಗ,ಚ) 4-4 ಪೋ॥ ಕಾಂ. (ಎ ಒ, ಖ, ಗ. ಚ.) 5-5 ರುಹಸುಖ (ಉ, ಎ, ಖ, ಗ. ಚ.) 6-6 ವಿದ್ಯ (ಅ, ಒ, ಜ, ಡ, ತ.) 7-7 ದಾ (ಎ. ಖ. ಜ.) 8-8 ಯಜ್ಞೋಪವೀತ (ಉ. ಎ, ಗ, ಚ.) 9-9 ಯಲ್ಲಕೆ ಕರ್ತ (ಅ, ಇ, ಉ. ಒ, ಜ, ಟ, ಡ. ತ, ದ.)

ಸರಸಿಜೋದ್ಭವ ರಾಣಿ । ಸಕಲ ವಿದ್ಯಕೆ ತ್ರಾಣಿ ।
ಸರಸಿರುಹ ನಿಭಪಾಣಿ । ಕಾಳಾಹಿ ವೇಣಿ ॥ ೪ ॥

ಕಮಲಮುಖಿ ಸಂಪನ್ನೆ । ಕಾರುಣ್ಯ[1] ಪರಿಪೂರ್ಣೆ[1] ।
ವಿಮಲ ಸದ್ಗುಣರನ್ನೆ । [2] ಇರು ಎನ್ನ ಮತಿಗೇ[2] ॥ ೫ ॥

ವಚನ॥ ಇಂತೆಂದು ಶ್ರೀ ಗಣಾಧಿಪತಿಯಂ, ಶಾರದೆಯಂ, ಭಜಿಸಿ ಶ್ರೀ ಗುರು ಸಂಗಮೇಶ್ವರನ, ವರಕುಮಾರಕನಾದ ವೀರೇಶ್ವರನಂ ನುತಿಪೆಂ.

## ವೀರಭದ್ರ ಸ್ತೋತ್ರ.

**ಅಟತಾಳ.**

ಶರಣು ಶಂಭುವ ವರ ಕುಮಾರಕ । ಶರಣು ಧೀರ ಶಾಶ್ವತಾ ।
ಶರಣು ಸುರಮುನಿ[3] ನಳಿನ[3] ಭಾಸ್ಕರ– ಶರಣು ನಿಮಗೇ ॥ ೧ ॥

ಕುಂಜಭವ ಕಂಜಾಕ್ಷ ಸುರಪತಿ । ಕಂಜಮಿತ್ರ ವಂದಿತ ।
ಕಂಜರಿಪು ಕಮಲಭವ ನಗಧರ– ದಕ್ಷ ಶಿಕ್ಷಾ ॥ ೨ ॥

ಪಾಹಿ ಗೌರೀನಾಥ ಸಂಭವ । ಪಾಹಿ ರುದ್ರಾಣಾಂ ಗುರು ।
ಪಾಹಿ ಭಕ್ತೋದ್ಧಾರ[4] ಭಯಹರ– ಪಾಹಿ ವೀರೇಶಾ[4] ॥ ೩ ॥

ವಚನ॥ ಇಂತೆಂದು ಶ್ರೀವೀರಭದ್ರ ದೇವರ ಸ್ತುತಿಯಂ ಮಾಡಿ, ಸಕಲ ಜಗಮಂ ಸಲಹುವ ಸಂಗನ ಬಸವೇಶ್ವರದೇವನಂ ನುತಿಪೆಂ.

## ಶ್ರೀ ಬಸವೇಶ್ವರ ಸ್ತೋತ್ರ.

**ತ್ರಿವುಡೆ.**

ಶ್ರೀಗುರುವೆ ಶಿವ[5] ನಾಗಿಮೋಕ್ಷವ । ನೀವ[5] ಸಂಗನ ಬಸವರಾಜನ ।
ರಾಗದಲಿ ಭಜಿಸುವೆನು ಎನ್ನಯ– ಭವವುಹಿಂಗುವ[6] ಡೆ[6] ॥ ೧ ॥

ಇಂದುಧರ ಇನಕೋಟಿತೇಜನ । ಮುಂದೆ ತೊಲಗದ ಮುಕ್ತಿಗೊಡೆಯನ ।
ನಂದಿನಾಥನ ನಮಿಸಿಬದುಕುವೆ– ನೆಲ್ಲಕಾಲಮೊಳು ॥ ೨ ॥

ಆವ ಮುಖದಲ್ಲಿ ಬಂದು ಬೇಡಲು । [7] ಈವನಾಕ್ಷಣ[7] ಇಷ್ಟಬಯಕೆಯ ।
ದೇವಸಂಗನ ಬಸವ ನಂಘ್ರಿಗೆ– ಶರಣು ಶರಣೆಂಬೆ ॥ ೩ ॥

1-1 ಸಂಪೂರ್ಣೆ (ಉ, ಎ, ಖ, ಗ, ಚ.) 2-2 ಜಗದೇಕಮಾನ್ಯೇ (ಎ, ಒ ಖ, ಗ, ಚ.) 3-3 ತಿಮಿರ (ಅ, ಉ, ಜ, ಡ, ತ.) 4-4 ಕಲಿವೀರ–ಬಾರೊಕೃತಿಗೆ॥ (ಅ, ಜ, ಟ, ಡ, ತ, ಬ.) 5-5 ನಿಮ್ಮ ಮೋಹದ । ದೇವ(ಅ, ಒ, ಜ, ಟ, ಡ, ತ, ಬ.) 6-6 ರೆ(ಇ,, ಎ, ಒ, ಖ, ಗ, ಚ.) 7-7 ನೀವುದೆನಗೆಯು (ಎ. ಗ, ಚ.)

ಶರಣು ಪರುಷದ ಖಣಿ ಕುಲಾಗ್ರಣಿ । ಶರಣು ಗಣಮಣಿ ಭಕ್ತಚಿಂತಾ ।
ಮಣಿ ಮಹೋನ್ನತ ದೇವಸಂಗನ– ಬಸವ ಶರ[1] ಣಾರ್ಥಿ [1] ॥ ೪ ॥
ತ್ರಾಹಿ[2] ಶರಣರ ಜನಕೆ[2] ಬಂಧುವೆ । ತ್ರಾಹಿ[3] ಕರುಣ ಕೃಪೈಕ[3] ಸಿಂಧುವೆ ।
ತ್ರಾಹಿ ಎನ್ನಯ ಗುರುವೆ ಸಂಗನ– ಬಸವ ಶರಣಾರ್ಥಿ * ॥ ೫ ॥
ನಿಮ್ಮ ಭಜಿಸುವೆ ನಿಮ್ಮಸ್ತುತಿಸುವೆ । ನಿಮ್ಮನೆನೆವೆನು ಎಲ್ಲಕಾಲವು ।
ನಿಮ್ಮಬಾಲನ ಕೃತಿಗೆಮಂಗಳ– ವೀವು[4] ದನುದಿನವೂ[4] ॥ ೬ ॥
ದೇವ[5] ಶುಭ[5] ಕರ ದುರಿತಸಂಹರ । ಪಾವನಾತ್ಮಕ ಬಸವರಾಜನೆ ।
ದೇವ ದೇ[6] ವೋತ್ತಮನೆ ಸಂಗನ[6]– ಬಸವ ಶರಣಾರ್ಥಿ ॥ ೭ ॥

ವಚನ॥ ಇಂತೆಂದು ಬಸವರಾಜದೇವರಂ ನುತಿಗೈದು, ಮುಂದೆ ಗಣಂಗಳಂ ನುತಿಪೆಂ.

## ಶ್ರೀ ಗಣಂಗಳ ಸ್ತೋತ್ರ.

**ತ್ರಿವುಡೆ.**

ಕಿನ್ನರೇಶ್ವರ ಕೀರ್ತಿಯುತ ಸಂ । ಪನ್ನ ಗುರುಪ್ರಭು ಸಿದ್ಧರಾಮಗೆ ।
ಚೆನ್ನಬಸವಗೆ ಮಡಿವಳಯ್ಯಗೆ– ನಮಿಸಿ ಬದುಕುವೆನು ॥ ೧ ॥
ಬಮು ವನೆ[7] ಚೆರಿದಿಪ್ಪ[7] ಷಡುಷ್ಥಲ । ಬ್ರಹ್ಮಿಗಳು ಹನ್ನೆರಡುಸಾವಿರ ।
ನಿರ್ಮಲರು ಏಳ್ನೂರು ಯಪ್ಪ– ತ್ತಮರಣ ಕೆರಗೀ ॥ ೨ ॥
ಬ್ರಹ್ಮನೇಪ್ರತ್ಯಕ್ಷ ಶೂಲದ । ಬೊಮ್ಮಿಗಳು ಜಗದೇವ ಮೊಲ್ಲೆಯ ।
ಬೊಮ್ಮಿಗಳು ಹರಳಯ್ಯ ಮಧುವರ– ಸರಿಗೆ[8] ಶರಣಾರ್ಥಿ[8] ॥ ೩ ॥
ಯೋಗಿ[9] ಯತಿವ್ರತ[9] ರುದ್ರಮುನಿಗಳ । ರಾಗ ರಹಿತಪ್ಪಣ್ಣ ಶರಣರ ।
ಕೂಗಿನ ಮಾರಯ್ಯ ಮೊದಲಾ– ದಖಿಳ ಶರಣರಿಗೆ ॥ ೪ ॥
ಆಗಿಗಾಗಿಗೆ ಶರಣುಮಾಡು[10] ತ[10] । ರಾಗ ರಚನೆಗಳಿಂದ ಪಾಡುತ ।
ಕೂಗಿನಲಿನಲಿ ದಾಡಿ[11] ನೋಡು[11] ತ– ಬಾಗಿ ಶರಣೆಂಬೆ ॥ ೫ ॥

**ಕಂದಪದ್ಯ.**

ಇಂದುಧರ ನಿಮ್ಮಶರಣರ ।
ಸಂದಣಿಯ ನುತಿಸೆ ಸಹಸ್ರಜಿಹ್ವೆಯ ಶೇಷಗೆ ॥

1-1 ಜೆಂಬೆ (ಎ, ಖ ಬ.) 2-2 ಭಕ್ತರ ಕರುಣ (ಅ, ಉ, ಒ, ಡ. ತ, ಬ.) 3-3 ಶರಣರ ಕರುಣ(ಅ, ಉ, ಒ, ಖ, ಡ, ತ. ಬ.) * ಈ ಪದ್ಯ(ಗ, ಚ, ಜ.)ಪ್ರತಿಗಳಲ್ಲಿಲ್ಲ. 4-4 ನೆರೆಬನ್ನಿ (ಅ, ಜ, ಟ, ಡ, ತ, ಬ.) ; ದುಚಿತವರಿ (ಉ, ಎ, ಗ, ಚ.) 5-5 ಕೃಪ (ಡ, ಬ.) 6-6 ವಾದೀಶ ಶಂಕರ (ಇ, ಉ, ಎ, ಗ, ಚ ) 7-7 ಬೇಧಿಸುವ (ಇ, ದ.) 8-8 ನಮಿಸುವೆನು (ಇ, ಉ, ಎ, ಒ, ಗ, ಚ.) 9-9 ಗ ವ್ರತಯುತಿ (ಡ, ಬ.) 10-10 ವೆ (ಇ, ಎ, ಒ. ಖ, ಗ, ಚ.) 11-11 ಪೊಗಳು (ಟ.); ಪಾಡು (ತ.)

ಎಂದಿಗು ನಿಲುಕದು ಶೃತಿ ತತಿ ।
ದಂದುಗಕಸಾಧ್ಯವು ಶರಣು ನಂದೀಶ್ವರನೇ ॥ ೧ ॥

ವಚನ ॥ ಇಂತೆಂದು ಶಿವಗಣಂಗಳಂ ಸ್ತುತಿಸಿ, ಮುಂದೆ ಕಾವ್ಯಗಳನುದ್ಧರಿಸಿದ ಶಿವಕವಿಗಳಂ ನುತಿಪೆಂ.

## ಶಿವಕವಿಗಳ ಸ್ತೋತ್ರ.

**ದ್ವಿಪದಿ.**

ಮಲುಹಣನು ಮಯೂರನು ಮಲೆಯ ರಾಜೇಂದ್ರ ।
ಛಲದಂಕ ಬಾಣ ಸಚ್ಚರಿತ[1] ಪ್ರವೀಣ[1] ॥ ೧ ॥
ಹಲಾಯುಧ ಹಂಪೆಯಾ ಹರಿದೇವಮುಖ್ಯ ।
ಮಲಹರನ ವರಭಕ್ತ ಮಹಿತ ವಿರಕ್ತ ॥ ೨ ॥
ಸಲ್ಲಲಿತ ಪಾಲ್ಕುರಿಕೆ ಸೋಮ ವರಭೀಮ ।
ನಂದೀಶ ನಿಜಗುಣೋನ್ನತ ರಾಘವಾಂಕ ॥ ೩ ॥
ಗಂಧರ್ವ ಸುರಯಕ್ಷ ಗಾಯಕರು ಮುಖ್ಯ ।
ನಂದಿ ಧೂರ್ಜಟಿಕವಿ ವಿನಾಯಕ ವ್ಯಾಸ ॥ ೪ ॥
ಶಂಭುಮೋಹ[2] ದಾ ಶಿವ[2] ಕವಿ ಕಾಳಿದಾಸ ।
ಪುರ ಹರನ ವರ ಭಕ್ತ ಪುಣ್ಯಗುಣಯುಕ್ತ ॥ ೫ ॥
ಕೆರೆಯ ಪದ್ಮರಸಯ್ಯ ಕೇಶಿರಾಜಯ್ಯ ।
ಪರಮ ಸದ್ಗುಣ ಹಾರ ಪಾಪಸಂಹಾರ ॥ ೬ ॥
ದುರಿತ ದುರ್ಗುಣ ದೂರ ಧರ್ಮಸಂ[3] ಸಾರ[3] ।
ಇಂತು ಶಿವಕವಿಗಳಂ ಎಲ್ಲರಂ ಸ್ತುತಿಸಿ ॥ ೭ ॥
ಮುಂಪೆ ಪೇಳುವೆ ಶರಣರ ಮುಕ್ತಿಯ ಕಥೆಯ ।
ಹರನ ಭಕ್ತರುಮೆಚ್ಚಿ ಹರುಷಮಿಗೆ ಹೆಚ್ಚಿ ॥ ೮
ಪುರಹರನ ಮನಮೆಚ್ಚಿ[4] ಪುಣ್ಯಕೃತಿಪೇಳ್ವೆ[4] ॥

ವಚನ ॥ ಇಂತೆಂದು ನುತಿಸಿ ಇನ್ನು ಮುಂದೆ ಕಾವ್ಯವಂ ರಚಿಸುವುದಕ್ಕೋಸ್ಕರ, ಮಹಾದೇವನಂ ಬೇಡಿಕೊಳ್ಳುತಿರ್ದಪೆಂ.

## ಶಿವಸ್ತೋತ್ರ.

**ಏಕತಾಳ.**

ದೇವರ ದೇವನೆ । ದೇವೇಂದ್ರ ನಮಿತನೆ ।
ಪಾವನಾತ್ಮಕ ಶರಣು । ಪರಶಿವ ಮೂರ್ತಿ ॥ ೧ ॥

---

1-1 ಸೂತ್ರಾಣ (ಅ, ಉ, ಒ, ಜ, ಡ, ತ, ಬ.) 2-2 ಕವಾಸ (ಇ, ಚ )3-3 ಪೂರ (ಇ, ಜ, ಚ, ಡ, ತ.); ಪೂರ್ಣ (ಅ, ಒ, ಬ.)4-4 ಪೇಳ್ವೆನರ್ಥಿಯಲಿ. (ಅ,ಡ,ತ,ದ,ಬ.)

ಖಂಡೇಂದು ಧರ[1] ಕರ್ಣ[1] । ಕುಂಡಲದೆ ಮಂಡಿತ ।
ಖಂಡಪರಶುವೆ ಸರ್ವ । ಮಂಡಲಕೆ ನಾಥ || ೨ ||
ನಂಬಿದೆನು ನಾನಿಮ್ಮ । ನುತಭಕ್ತ ಪ್ರಸನ್ನ ।
ಶಂಭು ಭಕ್ತರ ಪೋಷ । ಕೈಲಾಸ ವಾಸ || ೩ ||
ನರಕರ್ಮ ಜೀವರಾ । ನೆರೆಸ್ತುತಿ ಬಿಟ್ಟು ನಿಮ್ಮ ।
ಶರಣರ ಮರೆಹೊಕ್ಕೆ । ಕರುಣಿಸೆನ್ನಯ್ಯ || ೪ ||
ಹಿಂದೆಮಾಡಿದ ದೋಷ । ಒಂದ ನೀ ನೋಡದಲೆ ।
ಮುಂದೆ ಸಲಹು ಎನ್ನ । ತಂದೆ ಮಾಹೇಶಾ || ೫ ||
ತರಣಿಯ ಮುಂದೆ ತಮ । ಇರುವುದುಂಟೇ ನಿಮ್ಮ ।
ಶರಣರ ನೆನೆದರೆ । ದುರಿತ ನಿಲ್ಲುವದೆ || ೬ ||
ಪರಧನವು ಪರಸತಿಯು । ಪರನಿಂದ್ಯ ತ್ರಿವಿಧಕ್ಕೆ ।
ಹರಿಯ ಬಿಟ್ಟರೆ ನಿಮ್ಮ । ಚರಣಕ್ಕೆ ದೂರ || ೭ ||
[2] ಎ[2]ಂದು ಮಾಡಿದಭಾಷೆ । ಮುಂದಕ್ಕೆ ನಿಮ್ಮಾಸೆ ।
ಕುಂದುಬಾರದಹಾಗೆ । ತಂದೆ ನೀ ಸಲಹು || ೮ ||

**ಸೀಸಪದ್ಯ.**

[3] ಸಾಗರಜ ಸಖನ ಕಿರಣವ ಗೂಗೆ ತಾ ಬಲ್ಲುದೇ[3] ।
ಕಾಗೆ ಬಲ್ಲುದೆ ಶಶಿಯ ಕಳೆಯ ಗುಣವ || ೧ ||
ನಾಗಭೂಷಣ ಶಿವನ ನಾಟಕವ ನರಿಯದವ ।
ಹೇಗೆ ಬಲ್ಲನು ಶಿವನ ಆಗಮವನು || ೨ ||
**ಯತಿ ಗಣವು ಗತಿ ಪ್ರಾಸ** ವಾವುದನ್ನರಿಯದಲೆ ।
ಕಥೆ ಕಾವ್ಯಗಳ ಜರಿವ **ಕಾಕುಜನರು** || ೩ ||
ಶಿತಿಕಂಠ ಶಿವನ[4] ಮಹಿಮೆ[4] ಯ ನರಿಯದಾ ।
[5] ಅಧಮ[5] ಶತಪಾತಕರ ಮಾತು **ಛಲಕೆ ಬಹುದೆ** || ೪ ||
ಅಮಿತ ಗಣಸಂಗ ಅಧಿಕ ಭಕ್ತಾಬ್ಜ ಭೃಂಗಾ ।
ಶ್ರೀ ಗಿರಿಜೆಯರ್ಧಾಂಗ ಶ್ರೀ ಶಂಭುಲಿಂಗಾ || ೫ ||

ವಚನ || ಇಂತೆಂದು ಸಕಲ ದೇವತಾ ಸ್ತೋತ್ರವಂ ಮಾಡಿ, ಶಿವಕವಿ ಸಂಪನ್ನರಂ ನುತಿಸಿ ಕುಹಕ ಕವಿಗಳಂ ಜರಿದು ಮತ್ತಿಂತೆಂದಂ.

---

1-1 ಮಣಿ (ಎ, ಖ, ಗ, ಚ.) 2-2 ಇ (ಖ, ಒ, ಜ, ಟ, ಡ, ತ, ದ, ಬ.) 3-3 ಗೂಗೆ ಬಲ್ಲುದೆ ರವಿಯಕಿರಣ ಪ್ರಭಾವವನು । (ಎ, ಖ, ಗ, ಚ.) 4-4 ಸದ್ಗತಿಯ (ಅ, ಖ, ಗ, ಚ, ಜ, ಡ, ತ, ಬ.) 5-5 ಖೂಳ (ಎ, ಗ, ಚ.)

**ಜಂಪೆ.**

ಹರಶರಣರ ರತಿಮೆಚ್ಚು । ಹಾಸ್ಯಜನರೆದೆಗಿಚ್ಚು ।
ಪರಶಿವನ ಮನಮೆಚ್ಚು । **ಪಾಪಿಗತಿ ಹುಚ್ಚು** ॥ ೧ ॥
ಮೃಡಶರಣರ ಒಡಲು । ಮುಕ್ತಿಯಮೃತದ ಕಡಲು ।
ಜಡರಿಗಡರಿದ ಶಿಡಿಲು । ಜಗಕೆ ಸೊಂಪಿಡಲು ॥ ೨ ॥
ಏನಹೇಳಿದನಿದನು । ಮಾನವರ ಕಥೆಯೆಂಬ ।
ಹೀನ ಮನುಜರುಗಳಿಗೆ । **ಯಮನರಕ ಕುಂಡ** ॥ ೩ ॥
ಹಿಂದೆ ತ್ರಿಶಂಕುತಾ । ಮುನಿಯ ಮಾತನು ಮಿಾರಿ ।
ಹೊಂದಿ ಹೊಲೆಶಪಿತನಾ । ದನು ಮುಕ್ತನಲ್ಲ ॥ ೪ ॥
ಸಲೆ ಬ್ರಹ್ಮರೊಳಗೆ ಸಂ । ಕಟಗೊಂಡು ಹರಿಶ್ಚಂದ್ರ ।
ಹೊಲೆಗಳೆದು ಶಿವನಿಂದ । ಹೊಂದಿದನು[1] ಪುರವ[1] ॥ ೫ ॥
ನಳನು ಪುರಕುತ್ಸವನು । ಪುರೂರವರು ಮೊದಲಾಗಿ ।
ಇಳೆಯೊಳೊರಗಿದರು ಈ । ಶನ ಕಂಡುದಿಲ್ಲ ॥ ೬ ॥
ಇಳೆಗೊಡೆಯ ಸಗರ ಯಾ । ಗವ ಮಾಡಿ ಬ್ರಹ್ಮರಿಂ ।
ದಳಿದ ಪಾತಾಳದಲಿ । ಆತ್ಮಜರು ಸಹಿತಾ ॥ ೭ ॥
ಕಾರ್ತವೀರ್ಯನು ತನ್ನ । ಕರ್ಮದಲಿ ಮುನಿಯಿಂದ ।
ಧಾತ್ರಿ ಗೊರಗಿದ ಧರ್ಮ । ನೆಲೆಯರಿತುದಿಲ್ಲಾ ॥ ೮ ॥
ಬಲಿ [2]ದಾನವಿತ್ತು[2] ರಸಾ । ತಳಕೆ ಕಳುಹಿಸಿಕೊಂಡು ।
ನೆಲೆಗಿಳಿದನವ ಮುಕ್ತಿ । ನೆಲೆಗಂಡುದಿಲ್ಲಾ । ॥ ೯ ॥
ರಾಮ ದಿಲೀಪ ಮಂ । ಧಾತ ರಾಯರುಗಳೀ ।
ಭೂಮಿಯೊಳು ಮೋಕ್ಷ ಸಾ । ಧನೆ ಗಂಡುದಿಲ್ಲಾ ॥ ೧೦ ॥
ಎಲ್ಲದೊರೆಗಳು ಭಜಿಸಿ । ಬಲ್ಲರಲ್ಲದೆ ಶಿವನ ।
ಮೆಲ್ಲಡಿಯ ಹೊಂದಿದವ । ರಿಲ್ಲ ಇವರೊಳಗೆ ॥ ೧೧ ॥
ಕರಿಕಂಠ ಶಿವನೊಡನೆ । ಕಾಯವೆರಸಿಯೆ ಪೋದ ।
ಹರಶರಣರ ಕೃತಿಯು । **ಹಾಸ್ಯಕಥೆಯಲ್ಲ** ॥ ೧೨ ॥
ಶರಣ ಲೀಲಾ ಕೃತಿಯು । ಶಾಸ್ತ್ರದನು ಪದ್ಧತಿಯು ।
ಪರಿಕಿಪುದು ಮನವೊಲಿದು । ಪ್ರಾಜ್ಞರಿದ ನರಿದು ॥ ೧೩ ॥

---

* ಈ ಪದ್ಯ (ಇ, ಖ, ಗ, ಚ.) ಪ್ರತಿಗಳಲ್ಲಿಲ್ಲ. 1-1 ಸುರರ(ಆ. ಉ, ಒ, ಜ, ಟ, ಢ, ತ, ಬ.) 2-2ಬ್ರಹ್ಮರಿಂದ (ಅ, ಇ, ಉ, ಒ, ಖ, ಚ, ಡ, ದ, ಬ.)

ಅರಿತುದನೆ ಪೇಳುವೆನು । ನೆರೆ ಜಾಣರಿದರೊಳಗೆ ।
ಒರೆದುತಪ್ಪುಳ್ಳೊಡೇ । **ಬರೆದು ತಿದ್ದುವುದೂ** ॥ ೧೪ ॥
ಸತ್ಯಸುಜ್ಞಾನ ಶಿವ । ಭಕ್ತಸಂಪನ್ನರಿದ ।
ವಿಸ್ತರಿಸಿಕೇಳಿ ಮನ । ಸುಸ್ಥಿರದಿ ನೀವೂ ॥ ೧೫ ॥

**ದ್ವಿಪದಿ.**

ಶ್ರೀಗುರು ವರಭಕ್ತ ಸಕಲ ಗುಣಯುಕ್ತ ।
ಸಾಗರಜ ಧರಚರಣ ಸೇವಕಭೃತ್ಯ ॥ ೧ ॥
ಪಂಚವರ್ಣಿಗೆ ಚೆನ್ನಮಲ್ಲಿಕಾರ್ಜುನ[1] ನಾ[1] ।
ಸಂಚಿತಾ ಕರಜಾತ[2] ಸಕಲಜನ ಪ್ರೀ[2] ತಾ ॥ ೨ ॥
ಪನ್ನಗ ಧರಪಾದ ಕರುಣಮಂ ಪಡೆದು ।
ಮುನ್ನಮಾಡಿದ ಶಾಸ್ತ್ರಮೂಲವಂ[3] ತಿಳಿ[3] ದು ॥ ೩ ॥
ಉನ್ನತಗುಣರನ್ನ ಉಚಿತ[4] ಸಂಪ[4] ನ್ನ ।
**ಚೆನ್ನಪ್ಪ ಪೇಳಿದನು** ಚೆಲುವಸತ್ಕೃತಿಯಾ ॥ ೪ ॥
ಹರನ ಭಕ್ತರುಕೇಳಿ ಹರುಷಮಂ ತಾಳಿ ।
ಸ್ಥಿರವೆಂದುಹರಿಸಿ ಸತ್ಕರಿಸಿಭಕ್ತಾಳಿ ॥ ೫ ॥
ಹಿಂದೆ ಕಾಳಗದಲ್ಲಿ ಹೆಚ್ಚು ಕಡಿದಾಡಿ ।
ಸಂದುಹೋದವರಕಥೆ **ಸಾಟಿ ಇದಕೆಲ್ಲಾ** ॥ ೬ ॥
**ಹಾದರವು** ಹುಸಿಕಳವು ಅನ್ಯಾಯದಿಂದ ।
ಕಾದಿ ಸತ್ತವರಕಥೆ ಕಾವ್ಯವು **ಇದಲ್ಲಾ** ॥ ೭ ॥
ಸಂಗನಾ ಶರಣರುಂ ಸದ್ಭಕ್ತಿಯುತರು ।
ಮಂಗಳಾತ್ಮಕ ಶಿವನ ಮಹಿಮೆಯಂ ಮೆರೆದು ॥ ೮ ॥
ಮುಂದೆ ಮುಕ್ತಿಯ ಪಡೆದು ಮುದದಿಂದ ಶಿವನ ।
ಹೊಂದಿ ಪುಷ್ಪಕವೇರಿ ಹೋದಮಹಿಮೆಯನು ॥ ೯ ॥
ಅಂದ ಚಂದವುಬಿಟ್ಟು ಅತಿವೊಪ್ಪವಿಟ್ಟು ।
ಚಂದದಿಂ ಪೇಳ್ವೆನಾ[5] ಶಾಶ್ವತ ವಿದಾಗಿ[5] ॥ ೧೦ ॥

**ಶಾರ್ದೂಲವಿಕ್ರೀಡಿತ ವೃತ್ತ.**

ಶ್ರೀ ಚಂದ್ರಾಂಕಿತ[6] ಮಸ್ತಕೋಜ್ವಲ[6] ಮಹಾದೇವಾ ಎನ್ನೊಳಂ ।
ವಾಚಾವರ್ಧನೆಯಕ್ಕರಿಂದಿಡು ಗಡ ನೀನೆನ್ನ ಜಿಹ್ವಾಗ್ರದೋಳ್ ॥

---

1-1 ನು. (ಅ, ಡ, ಬ.) 2-2 ಅಮಿತಪ್ರಖ್ಯಾ (ಎ, ಗ, ಚ.) 3-3 ಪಿಡಿ (ಜ.) 4-4 ಪಿಪ್ಪ (ಖ, ಗ, ಚ.) 5-5 ನಿದಹರುಷವಿಟ್ಟು (ಎ, ಖ, ಗ, ಚ.) 6-6 ಶಾಶ್ವಿತಂಶಿವ (ಉ, ಒ, ಜ, ಡ, ತ, ಬ.)

ಕಿಂಚಿತ್ತಾದೊಡೆ ಓರೆ ಕೋರೆ ಗೊಡದೀಶಾನಿನ್ನ ಕಾರುಣ್ಯಮಂ ।
ಆಚಂದ್ರಾರ್ಕಮದಾಗೆ[1] ಮಾಡು ಧರೆಯೋಳ್[1] ಮುಂದೀ[2] ಮಹಾ
ಕಾವ್ಯಮಂ[2] ॥ ೧ ॥

ವಚನ ॥ ಇಂತೆಂದು ಕಾವ್ಯ ಮಂಗಳ ಪೂರ್ಣ ಸೂಚನೆಯಂ ತೋರಿ, ಮುಂದೆ ಕಥಾ ಪ್ರಾರಂಭದೊಳು ಸಮುದ್ರವನಭಿವರ್ಣಿಪೆಂ.

**ತ್ರಿವುಡೆ.**

ಕುಂಭಿನೀಪತಿ ಕುಶಲಕರದೊಳ । ಗಿಂಬುಗೊಂಡಿಹ ಕನ್ನಡಿಯೊ ಇದು ।
ಅಂಬುಧಿಯೋ ಥಳಥಳಿಪ ಶಶಿರವಿ – ಬಿಂಬವ್ರೋ ಮೇಣು ॥ ೧ ॥

ತುಂಬಿತೆರೆನೊರೆ ಬುದ್ಬುದಂಗಳು । ಸಂಭ್ರಮದ ಸಂರಂಭ ನಳಿನಗ।
ಳಿಂಬುಗೊಂಡಿಹ ಶರಧಿ ಒಪ್ಪಿತು – ಸಕಲ[3] ವಿಭವದಲೀ[3] ॥ ೨ ॥

ಬಾಗಿಜಲವನು ಬಳಸಿಮೊಗೆವತಿ । ಮೇಘಮೋಹರ ಬಲುಕದಂಬದ ।
ಸಾಗರದ ಶಾಖೆಯಲಿ ನೆರೆವತಿ – ನದಿಯಭರವಶದ * ॥ ೩ ॥

ಆಗುವೇಗದ ಅತಿತರಂಗದ । ತಾಗಿನೆಗೆವತಿ ತುಂತುರ್ವನಿಯಿಂ ।
ಸಾಗರದ ಸನ್ನಾಹ ಒಪ್ಪಿತು – ವಿಪುಲ ಘೋಷದಲೀ * ॥ ೪ ॥

ಮಕರ ಕಚ್ಛಪ ತಿಮಿ ತಿಮಿಂಗಿಲ । ಶಕಲಿ ಮಂಡುಕ ಶಿಂಶುಮಾರನು ।
ಸಕಲ ಜಲಚರ ಸಹಿತಕರ್ಕಟ – ಕಮಠಮೊಳಗಿಟ್ಟು ॥ ೫ ॥

ನಕ್ರಗಂಡಕ ನೇಮಿ ಗಜ ಸಂ । ಪರ್ಕ ದಹಿಲತ ಸಹಸ್ರ ದಂಷ್ಟ್ರದಿ ।
ಅಕ್ಕರಿಂದಂಬುಧಿಯು [4]ಎಸೆವುತ[4]–ಲಿರ್ದುದರ್ಥಿಯಲಿ ॥ ೬ ॥

ಹಲವು ಜೀವನವನ್ನು ಹರುಷದಿ । ಒಲಿದು ಪುಟ್ಟಿಸಿ ಪದ್ಮದಾಸನ ।
ಬಲಿದ ಬ್ರಹ್ಮನೊಲಿರ್ದುದಂಬುಧಿ – ಉದಯ ಕಾಲದೊಳು ॥ ೭ ॥

ಗುಡಿಘುಡಿಸಿ ಭೋರ್ಗರೆದು ಜಡೆಗಳ । ತೊಡರ ಬಿಗಿಸೆಳೆದಂತೆ ತೆರೆಗಳ ।
[5]ಬ[5] ಡಿತದಬ್ಬರ ರಭಸಘೋಷದ – ಬಾಡಬಾಗ್ನಿಯಲೀ ॥ ೮ ॥

ಗಡಿಬಡಿಪ ಕಡಲಗ್ನಿಕಿಡಗಳು । ಅಡರಿಬೀಳುವ ಬಿಂದುವನಿಗಳಿಂ ।
ಮೃಡನ ಮೂರ್ತಿಯೊಲಿರ್ದುದಂಬುಧಿ – ಗ್ರೀಷ್ಮ ಕಾಲದೊಳು ॥ ೯ ॥

ಸಕಲ ಜೀವರ ಸ್ಥಿತಿಯ ಶಂಖದಿ । ವಿಕಸಿತಾಂಬುಜ ಚಕ್ರವಾಕದಿ ।
ಅಖಿಳ ತಿಳಿಜಲ ನೀಲವರ್ಣದಿ – ಸಂಜೆಕಾಲದಲಿ ॥ ೧೦ ॥

---

1-1 ಮುಂದೆಬೆಳಗುಂ (ಅ, ಉ, ಜ, ಟ, ದ.) 2-2 ಕಾವ್ಯಬ್ರಹ್ಮಾಂಡದೊಳ್ (ಅ, ಉ, ಒ, ಜ, ಟ,ಡ, ದ, ಬ.) 3-3 ಸಂಭ್ರಮದಿ (ಎ, ಗ, ಚ,) * ಈ ಪದ್ಯಗಳು (ಗ, ಚ.) ಪ್ರತಿಗಳಲ್ಲಿಲ್ಲ. 4-4 ಸಲಹು (ಒ, ಜ, ಟ, ತ.) 5-5 ದ (ಡ, ಬ.)

ಪ್ರಕಟಿಸುವ ಬ್ರಹ್ಮಾಂಡ ಜೀವರ | [1] ನಿಕರಗಳ [1] ನಿಂಬಿಟ್ಟು ಸಲಹುವ |
ಸಕಲ ವಿಷ್ಣು ವಿನಂತೆ ಸಂಜೆಯೊ – ಳೆಸೆದುದಂಬುಧಿಯು ॥ ೧೧ ॥

ಮುತ್ತು ಪವಳವು ಇವು ಮೊದಲು ನವ | ರತ್ನದಲಿ ವಾಣಿಜನವೊಲು ಮುದ
ವೆತ್ತುತಂಬುಧಿ ಒಪ್ಪುತಿರ್ದುದು – ಅರ್ಥಿಯಿಂ ಜಗಕೆ ॥ ೧೨ ॥

ವಾಡೆಯದ ಹಡಗಿನ ಸಮೂಹದ | ಗೂಡೆ ತೆಪ್ಪದ ಬೈತ್ರಮುಸಕದ
ಜೋಡುಬಿಡುವತಿ ಜಾಲಗಾರರ – ಗುಂಪು ಸೊಂಪುಗಳ ॥ ೧೩ ॥

ನೋಡುತಿಹ ನೋಟಕರು ಯತಿಜನ | ಮಾಡೆ ಸ್ನಾನವನವನಪಾ [2] ಪವ [2]
ಕೂಡೆ ಕಳವುತಲಿರ್ದುದಂಬುಧಿ–ಶಿವನ ಮಹಿಮೆಯಲಿ ॥ ೧೪ ॥

ಇಂತೆಸೆವ ಶರಧಿಗಳ ಭೇದದ | ಅಂತುವನು ಪೇಳುವೆನು ಕಂಡುದ |
ಕಂತುಹರ ತಾ ಬಲ್ಲನಲ್ಲದೆ – ಮಿಗಿಲರಿವರಾರು ॥ ೧೫ ॥

ಇಂತು ಈ ಬ್ರಹ್ಮಾಂಡದೊಳಗಣ | ಅಂತರಾಂತರ ಸಕಲ ಶರಧಿಯ |
ಅಂತುವನು ಪೇಳುವೆನು ಸಕಲರು – ಅರಿವ ಮಾಳ್ಕೆಯಲಿ ॥ ೧೬ ॥

ವಚನ ॥ ಇಂತೆಂದು ಸಪ್ತಸಮುದ್ರದ ಸಪ್ತದ್ವೀಪಂಗಳಂ ಪೇಳ್ವೆನದೆಂತೆನೆ.

**ಕೊಂಚೆಜಂಪೆ.**

ಬ್ರಹ್ಮಾಂಡದಾ ಕಡೆಯಲತ್ತ – ಬಹಳ | ಹಮ್ಮಿತದು ತನು ಭೂಮಿಸುತ್ತ |
ನೆಮ್ಮಿ ಗರ್ಭೋದಕವು ಇತ್ತ – ಅದರ | ಸಂಮುಖದಿ ಪರ್ವತದವೊತ್ತ ॥ ೧ ॥
ಮತ್ತೆ ಸುವರ್ಣದಾ ದ್ವೀಪ – ಮುಂದೆ | ಸುತ್ತಿ ಸ್ವಾದಾಂಬುಧಿಯ ಟೋಪ |
ಇತ್ತಿತ್ತ ಪುಷ್ಕರದ್ವೀಪ – ಇದರ | ಹತ್ತೆ ಕ್ಷೀರಾಂಬುವಿನ ಟೋಪ ॥ ೨ ॥
ಮುಂದೆತೋರುವ ಶಾಖದ್ವೀಪ – ಅದರ | ಮುಂದೆ ಸಾಗರ ಅಬ್ಜ ರೂಪ |
ಹೊಂದಿಹುದು ಕ್ರೌಂಚಾದ್ರಿ ದ್ವೀಪ – ಅದರ ಮುಂದಿಹುದು ಸಿಂಧುದಧಿರೂಪ ॥
ಮುಂದೆಸೆವುತಿಹ ಜಂಬುದ್ವೀಪ – ಅದನು | ಹೊಂದಿಯಾಳಿದ ನೊಬ್ಬ ಭೂಪ |
ಮುಂದೆ ತೋರುವ ಪ್ಲಕ್ಷದ್ವೀಪ – ಅದರ | ಮುಂದಣಾಬ್ಧಿಯು ಲವಣರೂಪ ॥
ಎಸೆವುತಿಹುದಲ್ಲಿ ಕುಶದ್ವೀಪ – ಬದಿಯ | ಲೆಸೆವಸಾಗರ ಸುರೆಯರೂಪ |
ಕುಶಲದತಿ ಶಾಲ್ಮಲಿಯ ದ್ವೀಪ – ಮುಂದೆ | ರಸದಾಳಿರಸ ಸಿಂಧುರೂಪ ॥ ೫ ॥

---

1-1 ನಿಕಳತೆಯ(ಅ,ಇ,ಉ, ಒ, ಖ,ಜ,ಟ, ಡ, ತ, ದ, ಬ.) 2-2 ವನ(ಇ,ಖ.)

ವಚನ॥ ಇಂತಪ್ಪ ಸಪ್ತ ದ್ವೀಪಂಗಳಂ ಆಳಿದ ಅರಸುಗಳು ಆರಾರೆಂದೊಡೆ ? ಪ್ರಥಮದರಸು ಪ್ರಿಯವ್ರತರಾಯ, ಆತನಿಗೆ ಏಳುಮಂದಿ ಮಕ್ಕಳು, ಅವರ ನಾಮಂಗಳು ಆವಾವೆಂದೊಡೆ:—ಶಮನ, ಭವ್ಯ, ದ್ಯುತಿಮಥನ, ಜ್ಯೋತಿಷ್ಕ, ಅಗ್ನಿಬಾಹು, ವೇದಾವತಿ, ಆಜ್ಞೇಯರೆಂಬ ಈ ಏಳುಮಂದಿಗೂ ಏಳು ದ್ವೀಪಂಗಳಂ, ಹಂಚಿ ಕೊಟ್ಟ ವಿವರಮಂ ಪೇಳ್ವೆನದೆಂತೆನೆ.

**ದ್ವಿಪದಿ.**

ಪ್ರತ್ಯಕ್ಷ ಸೋಮೇಶ ಲಿಂಗಮಂ ಭಜಿಸಿ |
ಪುಷ್ಕರ ದ್ವೀಪವನಾಳ್ದನಾ ಪುಣ್ಯಶಮನ ॥ ೧ ॥
ಹಾಲಾಬ್ಧಿಯೊಳ್ ಪತ್ತುಸಹಸ್ರ ಯೋಜನದ |
ಸಾಲು ನಗರಕೆ ಕರ್ತ ಸರ್ವದಾ ವಿಷ್ಣು ॥ ೨ ॥
ಶ್ರೀಕಂಠ ಶಿವ ವಿಶ್ವ ಲಿಂಗಮಂ ಭಜಿಸಿ |
ಶಾಖ ದ್ವೀಪವನಾಳ್ದ ಶಾಶ್ವತಾ ಭವ್ಯ ॥ ೩ ॥
ಕರಿಕಂಠ ಶಿವ ಸ್ಥಾಣು ಲಿಂಗಮಂ ಭಜಿಸಿ |
ಕ್ರೌಂಚನಾದ್ರಿಯನಾಳ್ದ ಕರುಣಿ ದ್ಯುತಿಮಥನ ॥ ೪ ॥
ಕುಶಲ ಸನ್ನುತ ರುದ್ರಲಿಂಗಮಂ ಭಜಿಸಿ |
ಕುಶದ್ವೀಪವಾಳ್ದನಾ ಕುಶಲ ಜ್ಯೋತಿಷ್ಕ ॥ ೫ ॥
ಸುಲಲಿತಾ ಭೀಮೇಶ ಲಿಂಗಮಂ ಭಜಸಿ |
ಶಾಲ್ಮಲಿ ದ್ವೀಪವಾಳ್ದನಾ ಶಮುದಗ್ನಿ ಬಾಹು ॥ ೬ ॥
ಪಕ್ಷಿಗಮನನು ಪಾರ್ವತೀಶನಂ ಭಜಿಸಿ |
ಪ್ಲಕ್ಷದ್ವೀಪವ ಪಾಲಿಸುವ ವೇದಾವತಿಯು ॥ ೭ ॥
ಜಂಭಾರಿನಾಥ ಶಿವಪಾದಮಂ ಭಜಿಸಿ |
ಜಂಬು ದ್ವೀಪದ ಜಗದಅರಸು ಆಜ್ಞೇಂದ್ರ ॥ ೮ ॥
ರಾಜ್ಯದಾ ಅರಸುಗಳು ಎನಿಪ ಪ್ರಾಜ್ಞತೆಯ |
[1]ವೃಷಭ ನಾಭಿಯ ಸುತನು ಉತ್ತಾನಪಾದ[1] ॥ ೯ ॥
ಸತ್ಯದಿಂ ರಾಜ್ಯವಾ ಸಲಹುತ್ತಲಿಹನು |
ಆತನಾ ವರ ಸುತರು ಅಧಿಕ ಗುಣಯುತರು ॥ ೧೦ ॥

---

1-1 ರುಷಭರಾಯನು ಅವನ ಸುತ ಉಚಿತಗ್ನಿಯುತನು ॥ (ಅ, ಒ, ಚ, ಜ, ಡ, ತ, ದ, ಬ.)

ಪ್ರೀತಿಯಿಂ ಹತ್ತುಜನ ಪ್ರಿಯದಿಂದಲಿರಲು ।
ಭರತನುಂ ಕಿಂಪುರುಷ ಭಾಗ್ಯಯುತ ಹರಿಯು ॥ ೧೧ ॥

ನಿರುತನಾ ಇಳಾವೃತ ನೀತಿಕೋವಿದನು ।
ರಮ್ಯನಾ ಹಿರಣ್ಮಯ ರಾಜಾಧಿ ರಾಜ ॥ ೧೨ ॥

ಸುಮ್ಮನಾ ಇಳಾವೃತ ಸುಕೇತುಮಾಲ್ಯ ।
ಭೂಮಿಯೊಳು ಧೃವಮುಖ್ಯ ಬುದ್ಧಿಯುಳ್ಳವರು ॥ ೧೩ ॥

ತವೆ ಹತ್ತು ಮಂದಿಗೇ ತಾರ್ಕಣ್ಯವಾಗಿ ।
ಅವನಿಯಂ ಹಂಚುತಲಿ ಆಕ್ರಮಿಸಿಕೊಂಡು ॥ ೧೪ ॥

ನವಮಂದಿ ಒಂದಾಗಿ ನಾಡೆಲ್ಲ ಹಿಡಿದು ।
ಧೃವನನೇ ಕಡೆಗೊತ್ತಿ ದೌರ್ಜನ್ಯದಿಂದ ॥ ೧೫ ॥

ಅವನಿಯಾಳುತಲಿರಲು ಅತ್ತಲಾ ಧೃವನು ।
ಶಿವನ ಕುರ್ತತಿ ಉಗ್ರ ತಪಸನೇ ಮಾಡೆ ॥ ೧೬ ॥

ಭವಹರನು ತಾಮೆಚ್ಚಿ ಬಹಳ ದಯ ಹೆಚ್ಚಿ ।
ಧೃವಲೋಕ ಪದವಿತ್ತ ದುರಿತಹರನೊಲಿದು ॥ ೧೭ ॥

ವಚನ॥ ಇತ್ತಲಾ ಉತ್ತಾನಪಾದರಾಯನು, ತನ್ನ ಮಕ್ಕಳಿಗೆ ನವಖಂಡ ಪೃಥ್ವಿಯಂ ಹಂಚಿಕೊಟ್ಟ ವಿವರವಂ ಪೇಳ್ವೆನದೆಂತೆನೆ.

**ಜಂಪೆ.**

ಹತ್ತು ಸಾವಿರದ ಯೋ । ಜನದ ನವಖಂಡವನು ।
ಇತ್ತ ಭರತಗೆ ಅದರ । ವಿಸ್ತರವ ಪೇಳ್ವೆ ॥ ೧ ॥

ಅತಿ ಚಿತ್ರವತಿಸೂತ್ರ । ಅತಿ ದೈವ ಅತಿ ಶೈವ ।
ಅತಿ ಮತವು ಅತಿ ವ್ರತವು । ಅತಿ ರಮ್ಯತರವೂ ॥ ೨ ॥

ಅತಿ ಹಾರವತಿಶೂರ । ವತಿ ಮಾಯ ಶತ ಆಯು ।
ಅತಿ ಗುಂಪು ಅತಿ ಸೊಂಪು । ಅತಿ ರಮ್ಯ ಭೋಗ ॥ ೩ ॥

ಅಂತದರ ಗಡಿಯಲ್ಲಿ । ಹತ್ತಿಹುದು ಹಿಮಗಿರಿಯು ।
ಎತ್ತರವು ಎರಡುಸಾ । ವಿರದ ಉನ್ನತವು ॥ ೪ ॥

ತಂಪುಗಿರಿಗುತ್ತರದಿ । ಕಿಂಪುರುಷರಿಗೆ ಭೂಮಿ ।
ಪೆಂಪು ನವಸಾಸಿರದ । ಸೊಂಪಿಂದಲಿಹುದು ॥ ೫ ॥

ಮತ್ತೆ ಚಿನ್ನದವರ್ಣ । ಅತ್ತಿ ಹಣ್ಣಾಹಾರ ।
[1]ವೆ[1] ತ್ತು ಸಾವಿರದಾಯು । ಕರ್ತೃ ಈಶಾನ್ಯ ॥ ೬ ॥

ಅಂತದರ ಗಡಿಯಲ್ಲಿ । ಹತ್ತಿಹುದು ಹಿಮಶಿಖರ ।
ಎತ್ತರವು ಸಾವಿರವು । ವಿಸ್ತರವೈನೂರು ॥ ೭ ॥

ಮತ್ತದರ ಶಿಖರದಲಿ । ಕರ್ತೃಈಶಾನ್ಯಕದ ।
ಸುತ್ತ ನವಸಾಸಿರದ । ವಿಸ್ತರದ ಭೂಮಿ ॥ ೮ ॥

ರಜತವರ್ಣದ ಭೂಮಿ । ರಜತವರ್ಣದ ಜನರು ।
ಭುಂಜಿಪರು ರಸದಾಳಿ । ಭಜಿಸುವರು ಶಿವನ ॥ ೯ ॥

ಸಹಸ್ರವರುಷದ ಆಯು । ದೇವರದು ಶಿವಲಿಂಗ ।
ಭಾವಿಸಲು ಹರಿಖಾಂಡ । ಬದಿಯಲುತ್ತರದಿ ॥ ೧೦ ॥

ಇನ್ನು ಆ ನಿಶಿತಾದ್ರಿ । ಯುನ್ನತವು ಸಾವಿರವು ।
ಮುನ್ನವೈನೂರಗಲ । ಮೇಲೆ ಶಿವಲಿಂಗ ॥ ೧೧ ॥

ನಿಶಿತಾದ್ರಿಗುತ್ತರದಿ । ಎಸೆವಿಳಾವೃತ ಖಾಂಡ ।
ಸಸಿನೆ ಮೂವತ್ನಾಲ್ಕು । ಸಾವಿರಮೊಳಿಹುದು ॥ ೧೨ ॥

ಹೊಂಬಣ್ಣ [2]ದುರುಭೂಮಿ[2] । ಜಂಬುಫಲದಾಹಾರ ।
ಶಂಭುಲಿಂಗನು ಮೇರು । ವಿಂಬುಗೊಂಡಿಹನು । ॥ ೧೩ ॥

ಅತ್ತಿಳಾವೃತ ಖಾಂಡ । ದುತ್ತರದಿ ನೀಲಗಿರಿ ।
ಎತ್ತರವು ಎರಡುಸಾ । ವಿರದ ಯೋಜನವು ॥ ೧೪ ॥

ಹತ್ತುಸಾವಿರದಗಲ । ನೆತ್ತಿಯಲಿ ಮಹದೇವ ।
ಒತ್ತಿಲಿಹ ಕುಜವೆಲ್ಲ । ವೈಢೂರ್ಯವರ್ಣ ॥ ೧೫ ॥

ನೆಮ್ಮಿ ನವಸಾಸಿರವು । ರಮ್ಯಖಾಂಡವು ಅದರ ।
ಸಮ್ಮುಖದ ಧರೆ ಜನರು । ಸಲೆ ನೀಲವರ್ಣ ॥ ೧೬ ॥

ಹತ್ತುಸಾವಿರದಾಯು । ಕಿತ್ತಳೆಯ ಆಹಾರ ।
ಸತ್ಯದಲಿ ಮಹದೇವ । ನುತ್ತಮದ ಪೂಜೆ ॥ ೧೭ ॥

ವಚನ॥ ಈ ರಮ್ಯಖಾಂಡವಂ ಹೊಂದಿರ್ದ ಶ್ವೇತವರ್ಣ ಪರ್ವತ ಮೊದಲಾಗಿ, ನಾಲ್ಕು ಖಾಂಡವನ್ನು ಛಲತಾಳ ವರ್ಣದಲಿ ಪೇಳ್ದಪೆಂ.

---

1-1. ಹ (ಉ, ಜ.) 2 2. ದಾವರ್ಣ (ಅ, ಉ, ಒ, ಜ, ಟ. ಡ, ತ, ದ, ಬ.)

**ಛಲತಾಳ ವರ್ಣ.** *

ಮತ್ತದಕೆ ಉತ್ತರದಿ ಶ್ವೇತವರ್ಣದ ಗಿರಿಗೆ ।
ಆತಿಹುದು ಅಧಿಕ ನವಸಾಸಿರದಗಲ ಭೂಮಿ ॥ ೧ ॥

ಶ್ವೇತವರ್ಣದ ವೃಕ್ಷ ಶ್ವೇತವರ್ಣದ ಧರೆಯು ।
ಪ್ರೀತಿಯುತ ಜನರುಳ್ಳ ಹಿರಣ್ಮಯದ ಖಾಂಡ ॥ ೨ ॥

ಹತ್ತುಸಾವಿರದಾಯು ಕಿತ್ತಳೆ ಹಣ್ಣಾಹಾರ ।
ಮತ್ತೆ ಮಾಹೇಶನ ಪೂಜೆ ಮಹಿಜನರಿಗೆಲ್ಲ ॥ ೩ ॥

ಅತ್ತದಕೆ ಉತ್ತರದಿ ಹತ್ತಿಹುದು ಶೃಂಗಗಿರಿ ।
ಮತ್ತೆಸಾವಿರದುನ್ನತ ಮೇಲೆಗಲವೈನೂರು ॥ ೪ ॥

ನೆತ್ತಿಯಲಿ ರುದ್ರನಾ ಒತ್ತಿಲಿಹ ಕುರುಖಾಂಡ ।
ಹತ್ತುಸಾವಿರ ಯೋಜನದ ವಿಸ್ತರದ ಭೂಮಿ ॥ ೫ ॥

ಹೇಳಲೇನಾ ಭೂ ಜನರು ಲೋಳ್ಸರದ ಸುಮವರ್ಣ ।
ಪೇಳುವಡವರಿಗಾಹಾರ ಕಾಮಿತದ ಊಟ ॥ ೬ ॥

ಹದಿಮೂರು ಸಾವಿರದಾಯುವು ಮದನಾರಿದೈವ ।
ಅದರಾಚೆ ಮುಂದೆರಡು ಖಾಂಡ ಶರಧಿಯೊಳಗಿಹವು ॥ ೭ ॥

ಭದ್ರಾಶ್ವಖಂಡವು ಸಮುದ್ರದೊಳಗೊಪ್ಪುತಿರೆ ।
ಸದ್ಯ ಮೂವತ್ನಾಲ್ಕು ಸಾವಿರದ ಯೋಜನವು ॥ ೮ ॥

ನೈದಿಲ ವರ್ಣದ ಭೂಮಿ ನೀಲಕಮಲಾ ಹಾರ ।
ನೈದಿಲ ಪ್ರಿಯನ ಬೆಳಗು ಆ ನಾಡ ಜನಗಳಿಗೆ ॥ ೯ ॥

ಹತ್ತು ಸಾವಿರ ವರುಷ ಮತ್ತೆ ಆಯುವು ದೈವ ।
ಸತ್ಯದಾ ಶಿವಮಹೇಶ್ವರನು ನೆಲಸಿಹನು ಅಲ್ಲಿ ॥ ೧೦ ॥

ಮತ್ತದಕೆ ಉತ್ತರದಿ ಮಾಲ್ಯವಂತದ ಗಿರಿಯು ।
ಎತ್ತರವೆರಡು ಸಾವಿರ ಮೇಲಗಲ [1] ವೈನೂರು [1] ॥ ೧೧ ॥

ಮಾಲ್ಯವಂತದ ಗಿರಿಯ ಮೇಲೆಮರ ಪೂವರ್ಣ ।
ಮೇಲೆ ಗಿರಿಯಗ್ರದಲಿ ಮಹಾದೇವ ಲಿಂಗಾ ॥ ೧೨ ॥

---

* ಈ ಛಲತಾಳ ವರ್ಣಪದ್ಯಗಳು (ಎ, ಖ, ಗ, ಚ.) ಪ್ರತಿಗಳಲ್ಲಿ ಜಂಪೆರೂಪಿನಲ್ಲಿದೆ.

1-1 ಸಾವಿರವು (ಅ, ಇ, ಉ, ಟ, ದ, ಬ.)

ಕೇತುಮಾಲ್ಯದ ಖಾಂಡಕಾತಿಹುದು ಅದರಗಲ।
ಖ್ಯಾತಿಯೊಳು ಮೂವತ್ನಾಲ್ಕು ಸಾವಿರದ ಯೋಜನವು ॥ ೧೩ ॥
ಚಲುವ ಚಂದ್ರಾಕೃತಿಯ ನೆಲವು ನೈದಿಲ ವರ್ಣ ।
ಹಲಸಿನಾ ಫಲಾಹಾರ ಹರನೆ ವರ ದೈವ ॥ ೧೪ ॥
ಜ್ಯೋತಿವರ್ಣದ ಶರೀರ ಜಾತಿಧರ್ಮದ ಖಾಂಡ ।
ಓತುಸಾವಿರ ವರುಷ ಬಾಳ್ವೊಳ್ಳಿಯಾ ದೇಶ ॥ ೧೫ ॥

**ಕಂದಪದ್ಯ.**

ಇಂತೊಪ್ಪುವ ಭೂಲೋಕದ ।
ಅಂತುವ ಸಂಕ್ಷೇಪದಲ್ಲಿ ತೋರಿದೆ ಮತ್ತಾ ॥
ಮುಂತೆ ಮೇರುವೆಯ ಘನವನು ।
ಸಂತೋಷದಿ ಪೇಳ್ವೆ ಕೇಳಿ ಸರ್ವ ಜನಂಗಳ್ ॥ ೧ ॥

ವಚನ॥ ಇಂತೀ ನವಖಂಡ ಪೃಥ್ವಿಯೆಂಬ ರತ್ನಮಾಲೆಗೆ, ಮಧ್ಯ ನಾಯಕನೆನಿಸುವ ಇಳಾವೃತ ಖಾಂಡದ ಶೃಂಗಾರ ವೆಂತಿರ್ದುದೆಂದೊಡೆ:—ಕನಕ ಪುಷ್ಪ ಮಾಲೆಯಂ ಧರಿಸಿರ್ದ ಕನ್ನಿಕೆಯೋ ! ಎಂಬಂತೆ, ಆ ಮಹಾಮೇರುವಂ ಧರಿಸಿರ್ದ ಇಳಾವೃತ ಖಾಂಡದ ಶೃಂಗಾರಮಂ ಪೇಳ್ವೆನದೆಂತೆನೆ.

**ತ್ರಿವುಡೆ.**

ಸುರರ ಲೋಕವೊ ಸುಧೆಯ ಶರಧಿಯೊ । ಪರಮು ಯತಿವ್ರತ ಫಲದ ಬಯಕೆಯೊ ।
ಹರನ ಹರುಷದ ಹರ್ಮ್ಯವೋ ಎನ – ಲೆಸೆದುದಾ ಧರಣಿ ॥ ೧ ॥
ಗಿರಿಯು ಶರಧಿಯು ಪರಿವ ನದಿಗಳು । ಸರಸಿ ಕೂಪವು ಸಲೆತಟಾಕವು ।
ಹರುಷ ಹರವರಿಯಿಂದಲೊಪ್ಪುತ – ಲಿರ್ದುದಾ ಧರಣಿ ॥ ೨ ॥
ಪಲಸು ಕಿತ್ತಲೆ ಜಂಬು ನಿಂಬೆಯು । [1]ಪ್ರೋಳೆ[1] ಪ ದ್ರಾಕ್ಷಿಯು ಮಾವು ಖರ್ಜುರ
ಬಲಿದ ಹುಣಿಸೆಯ ಬನವು ಒಪ್ಪಿತು – ಬಹು ವಿನೋದದಲೀ ॥ ೩ ॥
ಆಲ ಅರಳಿಯು ಅಡಿಕೆ ಬಸುರಿಯು । ಜಾಲ ಗುಗ್ಗುಳ[2] ಜಂಬುನೇರಿಲು[2] ।
ಹಾಲೆ ಪಾದರಿಯಿಂದಲೆಸೆದುದು – [3] ಹರನ ವರ ಧರಣಿ[3] ॥ ೪ ॥
ಬೆಲ್ಲವತ್ತವು [4] ಬೆಳಲು[4] ಬಿಕ್ಕೆಯು । ನೆಲ್ಲಿ ಕುಟಜವು ತಪಸಿ ತಂಡಿಸಿ ।
ಸಲ್ಲಲಿತ ಸನ್ನಾಹ ತರುಕುಲ – ವೆಸೆದುದರ್ಥಿಯಲೀ ॥ ೫ ॥

---

1-1 ಮಲವ (ಅ, ಒ, ಜ, ಡ, ದ.) 2-2 ಬಕುಳವಂಜುಳ (ಖ, ಚ.)
3-3 ಮೆರೆವಿಳಾವೃತವು ॥ (ಖ, ಚ.) 4-4 ಬೇವು (ಅ, ಡ, ತ, ಬ.)

ಸೊಗಸು ಚಂದನ ಸೊಂಪು ಚಂಪಕ । ಅಗರು ಅಂಬಟೆ ಅತ್ತಿ ಮತ್ತಿಯು ।
ಬಗುನಿ ಜೆಳೆದಿಹ ತೆಂಗು ದಾಡಿಮ – ಬಾಳೆ ರಸದಾಳೆ ॥ ೬ ॥

ಮಲ್ಲಿಗೆಯು ಮಂದಾರ ಮರುಗವು । ಸಲ್ಲಲಿತ ಸುರಹೊನ್ನೆ[1] ಸುರಗಿಯು[1]
ಉಲ್ಲಸಿತ ಸೇವಂತಿ ಪುಷ್ಪವು ಪಾರಿಜಾತಗಳೂ ॥ ೭ ॥

ನಂದಿವರ್ತವು ನಳಿನ ಬಕುಳವು । ಕುಂದಕೇತಕಿ ಕುಮುದ ಕರವೀರ ।
ಬಂಧುರದ ಬಹುಜಾತಿ ಕುಸುಮ ಕ– ದಂಬವಲ್ಲಿಹವು ॥ ೮ ॥

ತಳಿರು ಕುಸುಮದ ತಂಪಿನಿಂದಲಿ । ನೆಳಲು ನೆರವಿದ ಮರಗಳಿಂದಲಿ ।
ಸುಳಿವ ಅನಿಲನ ಸೊಂಪು ಇಂಪಿಂ – ದೆಸುದುದಾ ಧರಣಿ ॥ ೯ ॥

ಪರಮ ಋಷಿಗಳ ಪರ್ಣಶಾಲೆ ಭವ । ಹರನ ಭವನಗಳಲ್ಲಿಗಲ್ಲಿಗೆ ।
ಸುರಪತಿಯ ಸುಸ್ಥಲಕೆ ಮಿಗಿಲೆನಿ – ಸಿರುವುದಾ ಧರಣಿ ॥ ೧೦ ॥

ಹುಲಿಯು ಹುಲ್ಲೆಯು ಕರಿಯು ಕೇಸರಿ । ಮೊಲನು ಶಶಕನು ಇಲಿಯು ಮಾರ್ಜಾಲ ।
ಕೊಲೆಗಳಿದು ಕೂಡಿಹವು ಮೃಗಕುಲ – ಋಷಿಗಳಾಶ್ರಮದಿ ॥ ೧೧ ॥

ವಚನ॥ ಇಂತೊಪ್ಪುವ ಇಳಾವೃತ ಖಾಂಡದ ಮಧ್ಯದಲ್ಲಿ ಆ ಮಹಾ ಮೇರು ವೆಂತಿರ್ದುದೆಂದೊಡೆ:—ಭೂಕಾಂತೆಯೆಂಬ ನಾರಿಯು ನಾಭಿ ಮಂಡಲದಲ್ಲಿ, ಉದಿಸಿದ ಕನಕಾಬ್ಜ ಕರ್ಣಿಕೆಯೋ! ಎಂಬಂತೆ, ಲಕ್ಷ ಯೋಜನೋನ್ನತ ವಿಶಾಲದಿಂ, ಮಧ್ಯ ದಲ್ಲೆಸೆವ ಕಂಕಣತ್ರಯದಿಂ,· ಮೇಲೊಪ್ಪುವ ಪಂಚ ಗಿರಿಗಳಿಂ, ಪಂಚ ನದಿಗಳಿಂ, ಅಷ್ಟದಿಕ್ಪಾಲಕರಿಂ, ದೇವ ದಾನವರೊಳಗಾದ ಸಕಲ ಪ್ರಮಥರ ಗರ್ಭೀಕರಿಸಿಕೊಂಡು, ಶಿವನ ಸಿಂಹಾಸನ ಗದ್ದಿಗೆಯೋ!! ಎಂಬಂತೆ ತಳ ಹದಿನಾರು ಸಾವಿರ ಯೋಜನದಿಂ ದೊಪ್ಪುತಿರ್ದ ಮೇರುವೆಯ ಶೃಂಗಾರಮಂ ಪೇಳ್ವೆನದೆಂತೆನೆ.

## ದ್ವಿಪದಿ.

ಶ್ರೀ ಮಹಾ ಮೇರುವೆಯ ಶೃಂಗಾರಗಳನು ।
ಪ್ರೇಮದಿಂದಲಿ ಪೇಳ್ವೆ ಕೇಳಿ ಸಜ್ಜನರು ॥ ೧ ॥

ಬ್ರಹ್ಮಾಂಡದೊಳಗುಳ್ಳ ಬಹಳ ರಾಜ್ಯದೊಳು ।
ನಿರ್ಮಿಸಿದನೋ ಬ್ರಹ್ಮ ನಿಜದಿಂದ ಗಿರಿಯ ॥ ೨ ॥

ಭೂಲೋಕದೊಳಗುಳ್ಳ ಭೂ ಕ್ಷೇತ್ರ ದೊಳಗೆ ।
ಸಾಲು ಸಾಲುಗಳಿಂದ ಸಕಲಬಿತ್ತುಗಳ * ॥ ೩ ॥

---

1-1· ಪಾದರಿ (ಒ.)

* ಈ ಅರ್ಧಪದ್ಯ (ಒ, ಖ, ಗ, ಚ, ತ.) ಪ್ರತಿಗಳಲ್ಲಿಲ್ಲ.

ಮೇಲೆ ಬಿತ್ತುವೆನೆಂದು ಮೇಣಿಯಂ ಪಿಡಿದು ।
ಸಾಲು ಸಾಲನೆ ಮಾಡಿ ಸರಸದಿಂ ಹೂಡಿ ॥ ೪ ॥

ಸಪ್ತ ದ್ವೀಪದ ಸಾಲು ಪಟ್ಟಿಯಂ ಮಾಡಿ ।
ಸಪ್ತ ಸಾಗರವೆಂಬ ಶರಧಿಯಂ ತಿದ್ದಿ ॥ ೫ ॥

ಸತ್ಯಾದಿ ಸುವರ್ಣದಾ ಬಿತ್ತುವಂ ಬಿತ್ತಿ ।
ಮತ್ತೆ ಬೆಳೆದನೊ ಬ್ರಹ್ಮ ಮಹಿಧರವ ನೆಂಬಂತೆ ॥ ೬ ॥

ಚಾರು ರಜತಾದ್ರಿಯುಂ ಜಠರ ಪರ್ವತವು ।
ಪಾರಿಯಾತ್ರವು ಶೃಂಗ ಪರ್ವತವು ಮುಖ್ಯ ॥ ೭ ॥

ದೇವಕೂಟವು ದಿವ್ಯ ಗಂಧ ಮಾದನವು ।
ಮಾಲ್ಯವಂತನು ಸಹಿತ ಅವನಿಯೊಳಗೊಪ್ಪೆ ॥ ೮ ॥

ಅಷ್ಟಕುಲ ಪರ್ವತವು ಆದಿಯಾಗಿರ್ದ ।
ಇಷ್ಟನ್ನು ಎಡಬಲಮೊಳಿಂಬಿಟ್ಟುಕೊಂಡು ॥ ೯ ॥

ನಕ್ಷತ್ರ ಪತಿಯಂತೆ ನಳಿನ ಸಖನಂತೆ ।
ಯಕ್ಷೇಶ್ವರನಂತೆ ಯೋಗ ಋಷಿಯಂತೆ ॥ ೧೦ ॥

ಕಣ್ಗೆ ಮಂಗಳದಿಂದ ಕಡುರಮ್ಯವಾಗಿ ।
ಶೃಂಗಾರವೆತ್ತಿದಾ ಸುಲಲಿತದ ಮೇರು ॥ ೧೧ ॥
ಮಂಗಳವು ಆಗಿಹುದು ಮಹಿಜನಂಗಳಿಗೆ ॥

ವಚನ ॥ ಇಂತಪ್ಪ ಮೇರುವಿನ ವಿಸ್ತಾರಮಂ ಪೇಳ್ವೆನದೆಂತೆನೆ.

**ತ್ರಿವುಡೆ.**

ವನಜ ಸಂಭವ ವಸುಧೆ ತಳದೊಳು । ಕನಕವನು ಕರುವಿಟ್ಟು ಎರೆದನೊ ।
ದಿನಕರನ ಪ್ರತಿಬಿಂಬವೋ ಎನೆ – ಮೇರು ರಂಜಿಸಿತು ॥ ೧ ॥

ಪಂಚವಿಂಶತಿ ಸಹಸ್ರಯೋಜನ । ಪ್ರಥಮ ಕಂಕಣದಲ್ಲಿ ಒಪ್ಪುವ ।
ಅಂಚು ಅಗಲವು ಮೂರುಸಾವಿರ – ಅಸುರರಾಶ್ರಯವು ॥ ೨ ॥

ಮೇಲೆ ಇಪ್ಪತ್ತೈದು ಸಾವಿರ । [1] ಲೀಲೆ [1] ಸಿದ್ಧರು ಇರುವ ಸುಸ್ಥಲ ವಿ ।
ಶಾಲ ಸಾವಿರ ಆರುಮುಂದವು – ಮೂರು ಸಾವಿರವೂ ॥ ೩ ॥

ಅತಿಶಯದ ನವನಾಥ ಸಿದ್ಧರು ।ಯತಿಯು ಮುನಿಗಳು ಅವರ ಸತಿಯರು ।
ಸತತ ಹರನೋಲೈಸಿ ಇರುವರು – ದ್ವಿತಿಯ ಕಂಕಣದೀ ॥ ೪ ॥

---

* ಈ ಅರ್ಧ ಪದ್ಯ (ಒ,ಖ,ಗ,ಚ,ತ,) ಪ್ರತಿಗಳಲ್ಲಿಲ್ಲ. 1–1 ಲೋಲ (ಒ,ಖ,ಗ,ಚ,)

ಅತ್ತಲಿಪ್ಪತ್ತೈದು ಸಾವಿರ ।ದೆತ್ತರದಲಿಹ ತೃತಿಯ ಕಂಕಣ ।
ವಿಸ್ತರವು ಹದಿನೆಂಟು ಸಾವಿರ – ಮಂದವದು ಮೂರು ॥ ೫ ॥

ಟಿಂಟಣಿಪ ಸುವರ್ಣ ಗಿರಿಗಳು । ಎಂಟುದಿಕ್ಕಿಲಿ ಅದರ ಉನ್ನತ ।
ವೆಂಟುದಶ ಸಾಹಸ್ರಯೋಜನ – ಅಗಲ ಒಂಬತ್ತು ॥ ೬ ॥

ಎಂಟು ದಿಕ್ಕಿಲಿ ಮೇಲುಕಂಕಣ । [1] ದಾಂಟಿ ಮೆರೆ [1] ದಿಹ ಗಿರಿಯಮೇಲಣ ।
ಎಂಟುಪಟ್ಟಣ ವಿರುವ ಸ್ಥಾನವ – ಪೇಳ್ವೆಬಲ್ಲಂತೆ ॥ ೭ ॥

ಮೂಡಣಾದ್ರಿಯ ಶೃಂಗದಗ್ರದ । ಕಡೆಯಲೊಪ್ಪುವ ಅಮರವತಿಯದು ।
ನ್ಗೋಡೆ ಸ್ಪಟಿಕದ ಕೋಟೆತೆನೆಗಳು – ಇಂದ್ರನೀಲಗಳು ॥ ೮ ॥

ರತ್ನಖಚಿತದ ಹರ್ಮ್ಯವಾಸಕೆ ।ಮುತ್ತುಪವಳವು ವಜ್ರನೀಲವು ।
ಕೆತ್ತಿಸಿದ ಮುಖಸಾಲೆ ಮುಂದಣ – ಚಿತ್ರ ಲೋವೆಗಳು ॥ ೯ ॥

ಸೋಮ ವೀದಿಯು ಸೂರ್ಯವೀದಿಯು । ಕಾಮಧೇನುವು ಕರೆವ ಸುರಭಿಯು ।
ಆ ಮಹಾಮೃತ ಕೂಪಸರಸಿಯು – ಕಲ್ಪವೃಕ್ಷಗಳು ॥ ೧೦ ॥

ಸುರರು ಯಕ್ಷರು ಸಿದ್ಧ ಸಾಧ್ಯರು । ಗರುಡ ಗಂಧರ್ವಾದಿ ಗುಹ್ಯಕ ।
ವರ ಮುನೀಶ್ವರರಿಂದಲೊಪ್ಪುತ – ಲಿರ್ದು [2] ದಮರವತೀ [2] ॥ ೧೧ ॥

ಚಿತ್ರಲೇಖೆ ಸುಕೇಶಿ ಯೂರ್ವಸಿ । ಹಸ್ತಿಗಮನೆಯು ರಂಭೆಮೇನಕೆ ।
ಉತ್ತಮದ ಮಂಜುಘೋಷಿ ಮೇಣ್ ತಿ – ಲೋತ್ತಮೆಯು ಸಹಿತ ॥ ೧೨ ॥

ಮತ್ತೆಯಾ ಶಚಿ ಸತಿಯು ವಾಹನ। ಹಸ್ತಿ ಅಮರಾವತಿಗೆ ಅಧಿಪತಿ ।
ಕರ್ತುವಿರ್ದನು ಸಕಲ ಸಂಭ್ರಮ – ವೆತ್ತುದೇವೇಂದ್ರ ॥ ೧೩ ॥

ಹಸ್ತದಲಿ ಧೃತ ವಜ್ರದಾಯುಧ। ಮೊತ್ತದನಿಮಿಷರೋಲಗಿಸುತಿರೆ ।
ರತ್ನಲಿಂಗದ ಪೂಜೆಯಿಂದೊ – ಪ್ಪಿದನು ದೇವೇಂದ್ರ ॥ ೧೪ ॥

ವಚನ ॥ ಇಂತಪ್ಪ ಅಮರಾವತಿ ಪಟ್ಟಣಕ್ಕೆ ದಕ್ಷಿಣಭಾಗದಲ್ಲಿ, ಯಜ್ಞೇಶ್ವರನ ಪಟ್ಟಣ ಮೊದಲಾಗಿ, ಈಶಾನ್ಯ ಪಟ್ಟಣವರೆಗಂ ಸಂಕ್ಷೇಪದಲ್ಲಿ ಪೇಳ್ವಪೆಂ.

**ಏಕತಾಳ.**

ಅಗ್ನಿ ದೆಸೆಯೊಳಿರ್ಪ । ಅದ್ರಿಯ ಮೇಲೊಂದು ।
ಪ್ರಜ್ವಲಿಸುವ ತೇಜೋ । ವತಿಯ ಪಟ್ಟಣವು ॥ ೧ ॥

ಕಬ್ಬಿಣದ ಕೋಟೆಯು । ಕನಕದ ಹುಲಿಮುಖ ।
[3] ವಜ್ರದ ತೆನೆಗಳು । ಒಪ್ಪಿರುತಿಹವು [3] ॥ ೨ ॥

1-1 ವಂಟಿಚೆಳ (ಒ, ಖ,ಗ, ಚ, ಜ, ಟ, ದ.) 2-2 ದಾಪುರವು (ಉ, ಎ, ಖ, ಗ)
3-3 ಹಬ್ಬಿದ ವಜ್ರದ । ತೆನೆಗಳೊಪ್ಪಿದವು ॥ (ಚ.)

ಮೇಷವಾಹನಸತಿ । ಸ್ವಾಹಾದೇವಿ ಆಶಕ್ತಿ ।
ವಾಸಿಭಟರು ವಿಶ್ವ । ಕರ್ಮ ದೈವಕರು ॥ ೩ ॥

ಪ್ರಜ್ವಲಿಸುವನಗ್ನಿ ।[1] ಸಕಲ ಸೌಭಾಗ್ಯದಿ[1] ।
ವಜ್ರದ ಲಿಂಗವನು । ಒಲಿದು ಪೂಜಿಸುವ ॥ ೪ ॥

ಯಮನ ದಿಕ್ಕಿಲಿ ಒಂದು । ಗಮಕದ ಗಿರಿಯಮೇಲೆ
ಯಮನ ಪಟ್ಟಣವಿಹುದು । ಸುಮನಸದಲ್ಲಿ ॥ ೫ ॥

ಪಚ್ಚೆಯ ಕೋಟೆಯು । ಪೊಳೆವ ಪುಷ್ಯದರಾಗ ।
ಹೆಚ್ಚಿನ ತೆನೆಗಳು । ಮೆರೆದವಾ ಪುರದಿ ॥ ೬ ॥

ಅ[2] ತ್ಯುಗ್ರ[2] ಹುಲಿಮುಖ । ಅಧಿಪತಿ ಯಮಧರ್ಮ ।
ನಿ[3] ತ್ಯವೂ[3] ಧರ್ಮಕರ್ಮ । ನಿರ್ಣಯಿಸುವನು ॥ ೭ ॥

ದಂಡವಾಯುಧ ಕೋಣ । ಮಂಡಿತ ವಾಹನ ।
ಹೆಂಡತಿ ಶಾಮಲೆ । ಹೆಚ್ಚು ಗುಣ ಶೀಲೆ ॥ ೮ ॥

ವಾತ ಪಿತ್ತವು ಶ್ಲೇಷ್ಮ । ಕ್ಷಯ ಮೃತ್ಯು ದೂತರಿಂ ।
ದೋತು ವೋಲೈಸಿ ಕೊಂಡು । ಪ್ರೀತಿಯಿಂದಿಹನು ॥ ೯ ॥

ನಿಚ್ಚ ನಿಚ್ಚಲು ಮನವ । ನಚ್ಚಳಿಯದೆಯಮ ।
ಪಚ್ಚೆ ಲಿಂಗದಪೂಜೆ । ಪ್ರತಿದಿನವು ಮಾಳ್ಪ ॥ ೧೦ ॥

ನೈಋತಿಯ ಗಿರಿಯಮೇ । ಲಿರುವ ಕೃಷ್ಣಾವತಿಗೆ ।
ಮೆರೆವ ನೀಲದಕೋಟೆ । ಮೌಕ್ತಿಕದ ತೆನೆಯು ॥ ೧೧ ॥

ಅರಸು ನೈಋತಿಯು । ಆಯುಧವು ಕುಂತವೂ ।
ವರಸತಿ ದೀರ್ಘಾದೇವಿ । ಯೊ[4] ಪ್ಪಿರು ತಿ[4] ಹಳು ॥ ೧೨ ॥

ಪರಭೀಕರ ದೈತ್ಯರಿಂ । ದೋಲೈಸಿ ಕೊಳುತಲಿ ।
ಪರಮಾತ್ಮ ಅಣುಲಿಂಗ । ಪೂಜೆಯಿಂದಿಹನು ॥ ೧೩ ॥

ವರುಣನ ದೆಸೆಯಲ್ಲಿ । ಮೆರೆವ ಗಿರಿಯಮೇಲೆ ।
ಸ್ಥಿರದಿ ಒಪ್ಪುವ ಶುದ್ಧ । ವತಿಯ ಪಟ್ಟಣವು ॥ ೧೪ ॥

ರಜತದಾ ಕೋಟೆಯಿಂ । ರಾಜಿಪುದು ತೆನೆಕನಕ ।
ಸುಜನ ಅರಸು ವರುಣ । ಸುಖದಿ ಬಾಳುವನು ॥ ೧೫ ॥

---

1-1 ರಾಜನು ಅನುಶೃತ (ಅ, ಇ, ಒ, ಜ, ಟ, ಡ, ಬ.) 2-2 ಚುಕ್ಕು (ಅ, ಉ, ಡ, ಬ.) 3-3 ಚ್ಚಾಲು (ಅ, ಜ, ಡ, ತ, ಬ.) 4-4 ಪ್ಪುತಲಿ(ಗ, ಚ, ಜ,ಡ)

ನೆಗಳು ವಾಹನಪಾಶ । ವಾಯುಧ ಜಲದೇವ ।
ತೆಗಳೋಲಗ ಸ್ಫಟಿಕ । ಲಿಂಗದಾ ಪೂಜೆ ॥ ೧೬ ॥

ವಾಯವ್ಯ ಗಿರಿಯಮೇ । ಲೊಪ್ಪುವುದು ಗಂಧವತಿ ।
ತೀವಿ ಕನಕದಾ ಕೋಟೆ । ತೆನೆಯು ವೈಢೂರ್ಯ ॥ ೧೭ ॥

ಅರಸು ವಾಯವ್ಯನು । ಆಯುಧವು ಖಡ್ಗವು ।
ಎರಳೆ ದೇವತೆಯರಿಂ । ದೋಲೈಸಿ ಕೊಳುತ ॥ ೧೮ ॥

ವರಸತಿ ಅಂಜನೆಯು । ಅರಸು ವಾಯವ್ಯನು ।
ನಿರುತ ಲಿಂಗದಪೂಜೆ । ಸ್ಮರಣೆಯಿಂದಿಹನು ॥ ೧೯ ॥

ಕೌಬೇರ ದೆಸೆಯಲ್ಲಿ । ಕುಶಲದಾ ಗಿರಿಮೇಲೆ ।
ವಿಭವದಿಂದಳಕಪುರಿ । ಇರುವದರ್ಥಿಯಲಿ ॥ ೨೦ ॥

ವಿದ್ರುಮದ ಕೋಟೆಯು । ಇರುವ ಪಜ್ಜಿತೆನೆಗಳು ।
ಭದ್ರ ದಿಂದರಸು ಕು । ಬೇರ ನಾಳುವನು ॥ ೨೧ ॥

ಕರದಲ್ಲಿ ಖಡ್ಗವು । ತುರುಗ ವಾಹನ ಸತಿ ।
ವರ ಚಿತ್ರಲೇಖೆಯಿಂ । ದೊಪ್ಪಿರುತಲಿಹನು ॥ ೨೨ ॥

ಯಕ್ಷರಾ ಬಲದಿಂದ । ಎಲ್ಲಕಾಲವು[1] ಅಸ ।
ಮಾ[1] ಕ್ಷ ಕುಂದಣ ಲಿಂಗ । ಅಕ್ಷಯನ ಪೂಜೆ ॥ ೨೩ ॥

ಈಶಾನ್ಯ ಗಿರಿಯಲ್ಲಿ ಎಸೆವ ದೇಶೋವತಿಗೆ ।
ಶಶಿಕಾಂತಕೋಟೆ ಸೇ । ರಿದ ತೆನೆರತ್ನ ॥ ೨೪ ॥

ಅರಸು ಈಶಾನ್ಯನು । ಆಯುಧ ತ್ರಿಶೂಲವು ।
ವರಸತಿಯೆ ದೇವಿಯು । ವಾಹನವು ವೃಷಭ ॥ ೨೫ ॥

ಭಸಿತದ ಲಿಂಗದಿಂ । ದೆಸೆವ ಈಶಾನ್ಯನು ।
ಅಸಮ ಗಣಸಹಿತಲ್ಲಿ । ಅರ್ಥಿಯಿಂದಿಹನು ॥ ೨೬ ॥

ಇಂದ್ರಾಗ್ನಿ ಯಮ ನಿ । ಋತಿ ವರುಣ ವಾಯವ್ಯ ।
ಅಂದದಿಂ ಕುಬೇರ । ರೀಶಾನ್ಯ ರಿಹರು * ॥ ೨೭ ॥

---

1–1 ಸಹ । ಮೋ (ಅ, ಟ, ದ,ಬ.)

* ಈ ಪದ್ಯ (ಇ, ಉ, ಗ, ಜ.)ಪ್ರತಿಗಳಲ್ಲಿಲ್ಲ.

ಅಷ್ಟದಿಕ್ಪಾಲಕರ । ಅಧಿಕ ಪಟ್ಟಣವೆಂಟು ।
ಮುಟ್ಟೆ ತ್ರಿಕಂಕಣದ । ಮೇಲೊಪ್ಪುತಿಹವು ॥ ೨೮ ॥

ವಚನ ॥ ಅಷ್ಟದಿಕ್ಪಾಲಕರ ಪಟ್ಟಣಂಗಳ ವಳಿತಮಂ ಪೇಳ್ವನದೆಂತೆನೆ.

**ದ್ವಿಪದಿ.**

ಶೃಂಗಾರವುಳ್ಳ ಅಮರಾವತಿಗೆ ಉತ್ತರದಿ ।
ಅಂಗುಷ್ಠ ಅಜಸುರರು ಶತ ಕೋಟಿ ಇರ್ದ ॥ ೧ ॥

ಮೇಘಾವಿ ಮೇಧಾವಿ ಘೋರವತಿ ಇವು ವ ಮೂರು।
ಅಪ್ಸರರು ದೇವರ್ಕಳತಿಶಯದಿ ಇರ್ದ ॥ ೨ ॥

ಒಪ್ಪುವಾ ಸೌಂದರದ ಕಾಮವತಿಯೆ
ನಿಪ್ಪೈದು ಪುರಗಳಮರಾವತಿಗೆ ಸಲ್ವ ॥ ೩ ॥

ಆಗ್ನೇಯ ಪುರದ ಪಶ್ಚಿಮ ಭಾಗದಲ್ಲಿ ।
ಪ್ರಾಜ್ಞತೆಯ ವಿಶ್ವಕರ್ಮಾದಿ ಸುರರಿರ್ದ ॥ ೪ ॥

ನಿತ್ಯಗ್ನಿ ವಲಯಾವತಿಯು ಗ್ರಾಮವೆರಡು ।
ಸತ್ಯದಿಂ ದೊಪ್ಪಿದವು ಸಲೆತೇಜೋವತಿಯು ॥ ೫ ॥

ಯಮನಗರಿಯದರ ಪಶ್ಚಿಮ ಭಾಗದಲ್ಲಿ ।
ವಿಮಲ ಮಾತೃಕೆಯರಿರುವ ಗ್ರಾಮ ಒಂದೇ ॥ ೬ ॥

ರುದ್ರರಿಂದೊಪ್ಪುವಾ ರೋಹಿತೆಯು ಹನ್ನೊಂದು ।
ರುದ್ರರಿರುತಿಹ ಗಣಾವತಿಯವು ಮೂರು ॥ ೭ ॥

ಆ ಯಮನ ಆ ಪುರಕೆ ಸಲುವವಳಿತಗಳು ।
ನಯದಿಂದ ಯಮನ ನಾಡೊಳಗೊಪ್ಪುತಿಹವು ॥ ೮ ॥

ಸುಲಲಿತಾ ನೈಋತಿಗೆ[1] ಶುದ್ಧ[1] ಪೂರ್ವದಲೀ ।
ಸಲೆಕರ್ಮ ದೇವತೆಗಳಿರ್ದ ಪಿಂಗಳೆಯು ॥ ೯ ॥

ದೃಷ್ಟದಿಂ ಪೈಶಾಚ ದೇವತೆಯರಿರ್ದ ।
ಕೃಷ್ಣಾವತಿಯು[2] ಸಖಾ[2] ವತಿಯು ಗಾಂಧಾರ ॥ ೧೦ ॥

ನಾಲ್ಕುನೈಋತಿಗೆ ಲಕ್ಷ್ಮಾವತಿಯ ವಳಿತ ।
ತವೆನಾಲ್ಕು ಗ್ರಾಮಗಳು ತಂಪಿಂದಲಿಹವು ॥ ೧೧ ॥

---

1-1 ಸಲುವ (ಒ.) 2-2 ಶುಭಾ (ಒ.)

ವರುಣನಾ ನಗರಿಗೇ ಒಪ್ಪಿರುವವಳಿತ ।
ಧರಣಿ ದೇವತೆಯರಿರುವದು ಸಿದ್ಧಸೇನೆ ॥ ೧೨ ॥

ಅಷ್ಟವಸುಗಳು ಇರ್ದ ಆ ಹೇಮಸಂಜ್ಞೆ ।
ಇಷ್ಟರಹ ವಿದ್ಯಾಧರರಿಹ ಸಿದ್ಧವತಿಯು ॥ ೧೩ ॥

ಇವುಮೂರು ಪಟ್ಟಣವು ಆಶ್ಚರ್ಯದಿಂದ ।
ಆ ಮಹಾ ಸಿದ್ಧವತಿಗವು ಸಲೆಯೊಪ್ಪುತಿಹವು ॥ ೧೪ ॥

ವಾಯವ್ಯ ನಗರಿಗಂ ವಳಿತವಾಗಿರ್ದ ।
ದೇವಕಿನ್ನರರಿಗೊಪ್ಪುವ ಸಿದ್ಧವತಿಯು ॥ ೧೫ ॥

ಈ ಒಂದು ಪಟ್ಟಣವು ಈ ಗಂಧವತಿಗೆ ।
ಭಾವಿಸಲು ವಾಯುವ್ಯ ಭದ್ರದಿಂದಿಹನು ॥ ೧೬ ॥

ಕೌಬೇರ ನಗರಿಯನು ಕೂಡಿರುವ ವಳಿತ ।
ಶುಭ ಚಿತ್ರರಥ ಶಾರದೆಯು ಗಂಧರ್ವರು ॥ ೧೭ ॥

ನಾರದನು ತುಂಬುರರು ಇರ್ದ ವರಚಿತ್ರ ।
ಬೇರೆ ಕರ್ಮದೇವತೆಯರಿಹ ಸುಖಿಪ್ರಮುದೆ ॥ ೧೮ ॥

ಚಿತ್ರಾವತಿಯು ಕೂಡಿ ಪ್ರತ್ಯಕ್ಷವಾಗಿ ।
ವಿಮಲ ಗುಹ್ಯಕರಿರ್ದ ಇವು ಎರಡು ಗ್ರಾಮ ॥ ೧೯ ॥

ಅಳಕಾಪುರಿಗೆ ಸಲುವವು ಅವು ಎರಡು ವಳಿತ ।
ಕಳೆಜೂಟ ಶಿವನ ಕರುಣದಿ ಒಪ್ಪುತಿಹವು ॥ ೨೦ ॥

ಈಶಾನ್ಯ ನಗರಿಗೆ ಇರುವ ಪಶ್ಚಿಮದಲ್ಲಿ ।
ವಾಸುದೇವನದೊಂದು ವೈಕುಂಠ ನಗರಿ ॥ ೨೧ ॥

ಪದ್ಮಾಸನನದೊಂದು ಪದ್ಮವತಿಯೊಳಗೆ ।
ಪದ್ಮಲೋಚನೆಯರಿಪ್ಪತ್ತೇಳು ನಕ್ಷತ್ರ ॥ ೨೨ ॥

ಧನ್ವಂತ್ರಿಯಿರ್ದಾ ತಾಮಸುಖಿಯು ಸಹಿತ ।
ಇಂತು ಇವುಮೂರೂ ಯಶೋವತಿಯ ವಳಿತ ॥ ೨೩ ॥

ಇಂತೊಪ್ಪುತಿಹ ಇಪ್ಪತ್ತಾರು ಪಟ್ಟಣವು ।
ಸಂತತಂ ಮೇಲುಕಂಕಣದಿ ಸಲೆ ಒಪ್ಪುತಿಹವು ॥ ೨೪ ॥

ವಚನ ॥ ಇಂತಪ್ಪ ಮೇಲು ಕಂಕಣದ ಮೇಲೆ, ಇಪ್ಪತ್ತೈದು ಸಾವಿರ ! ಯೋಜನಾಂತರದಲ್ಲಿ ಒಪ್ಪುತಿರ್ದ ಮೇರುವೆಗೆ ಎಂಟು ದಿಕ್ಕಿನಲ್ಲಿ, ಎಂಟುರತ್ನದ ವರ್ಣವಾಗಿರ್ಪವದೆಂತೆನೆ.

**ಏಕತಾಳ – ಅರ್ಧರೇಕು.**

ಪದ್ಮರಾಗದವರ್ಣ – ಶುದ್ಧ ಪೂರ್ವದಲಿ ।
ಕಾಣಿಸುವದಗ್ನಿಯಲ್ಲಿ – ಮಾಣಿಕದ ಬೆಳಕು ॥ ೧ ॥

ಕಾಲನ ದೆಸೆಯಲ್ಲಿ – ನೀಲದವರ್ಣ ।
ನೈಋತ್ಯ ದಿಕ್ಕಿನಲ್ಲಿ – ವೈಢೂರ್ಯವರ್ಣ ॥ ೨ ॥

ಪ್ರಜ್ವಲಿಪ ವರುಣನಲ್ಲಿ – ವಜ್ರದ ಕಾಂತಿ ।
ಹೆಚ್ಚುಳ್ಳ ಮರುತನಲ್ಲಿ – ಪಚ್ಚೆಯ ಬೆಳಕು ॥ ೩ ॥

ಇರ್ದುದು ಕುಬೇರನಲ್ಲಿ – ವಿದ್ರುಮದ ಕಾಂತಿ ।
ಮತ್ತು ಈಶಾನ್ಯನಲ್ಲಿ – ಮುತ್ತಿನ ಹೊಳಹು ॥ ೪ ॥

ಚಂದದಿಂ ಮೇರುವೆಲ್ಲ – ಕುಂದಣಮಯವು ।
ಇಂತಪ್ಪ ಪ್ರಭೆಯಿಂದ – ಸಲೆಯೊಪ್ಪುತಿಹವು ॥ ೫ ॥

ವಚನ ॥ ಇನ್ನು ಆ ಮಹಾಮೇರುವಿನೊಳು, ಪರಶಿವಮೂರ್ತಿ ಎಂತೊಪ್ಪುತಿರ್ದನದೆಂತೆನೆ.

**ಶ್ಲೋಕ** ॥ ಸದ್ಯೋಜಾತೋ[1] ತ್ಥಿ[1] ತಾಭೂಮಿಃ। ವಾಮದೇವೋದ್ಭವಂ ಜಲಂ ॥
ಅಘೋರಾದ್ವಹ್ನಿರುತ್ಪನ್ನಃ । ತತ್ಪುರುಷಾದ್ವಾಯುರುತ್ಥಿತಃ ॥
ಈಶಾನ್ಯಾದ್ಗಗನಾಕಾರಃ । ಪಂಚಬ್ರಹ್ಮಮಯಂ ಜಗತ್ ॥

ಟೀಕು :—ಎಂಬದಾಗಿ ಸದ್ಯೋಜಾತ ಮುಖದಲ್ಲಿ ಪೃಥ್ವಿ ಪುಟ್ಟಿತು. ವಾಮದೇವ ಮುಖದಲ್ಲಿ ಅಪ್ಪು ಪುಟ್ಟಿತು, ಅಘೋರಮುಖದಲ್ಲಿ ಅಗ್ನಿ ಪುಟ್ಟಿತು, ತತ್ಪುರುಷ ಮುಖದಲ್ಲಿ ವಾಯು ಪುಟ್ಟಿತು, ಈಶಾನ್ಯ ಮುಖದಲ್ಲಿ ಆಕಾಶಪುಟ್ಟಿತು, ಮತ್ತು ಏನೇನು ಪುಟ್ಟಿತೆಂದೊಡೆ ?

**ಶ್ಲೋಕ** ॥ ನಂದಾ ಭದ್ರಾಚ ಸುರಭಿಃ । ಸುಶೀಲಾಸ್ಸುಮನಾಸ್ತಥಾ ॥
ಪಂಚಗಾವೋ ವಿಭೋರ್ಜಾತಾ । ಸ್ಸದ್ಯೋಜಾತಾದಿ ವಕ್ತ್ರತಃ ॥

ಟೀಕು :—ಎಂಬದಾಗಿ ಸದ್ಯೋಜಾತಮುಖದಲ್ಲಿ ನಂದೆಯೆಂಬ ಧೇನು ಪುಟ್ಟಿತು. ವಾಮದೇವ ಮುಖದಲ್ಲಿ ಭದ್ರೆಯೆಂಬ ಧೇನು ಪುಟ್ಟಿತು, ಅಘೋರಮುಖದಲ್ಲಿ ಸುರಭಿಯೆಂಬ ಧೇನು ಪುಟ್ಟಿತು, ತತ್ಪುರುಷ ಮುಖದಲ್ಲಿ ಸುಶೀಲೆಯೆಂಬ ಧೇನು ಪುಟ್ಟಿತು, ಈಶಾನ್ಯ ಮುಖದಲ್ಲಿ ಸುಮನೆಯೆಂಬ ಧೇನುಪುಟ್ಟಿತು, ಇಂತು ಪಂಚ ಧೇನುವಿನಿಂದ ಪಂಚ ವಿಭೂತಿ ಪುಟ್ಟಿತು, ಮತ್ತು ಪಂಚನದಿಗಳು ಪುಟ್ಟಿದವು. ಅವಾ

---

**1–1** ಸ್ಥಿ (ಅ, ಉ, ಜ, ಟ, ಡ, ದ.)

ವೆಂದಡೆ:—ನಂದಾನದಿ, ಭದ್ರಾನದಿ, ಸುರಭಿನದಿ, ಸುಶೀಲಾನದಿ,ಸುಮನಾನದಿ, ಇಂತಿವೆಲ್ಲವಂಬೆರಸಿ ಕೊಂಡು ಆ ಪರಬ್ರಹ್ಮನಂತೆ ಒಪ್ಪುವಾ ಮಹಾಮೇರುವೆಯ! ಪಂಚ ಮುಖಗಳಾಗಿ ಒಪ್ಪುವಾ ಪಂಚಗಿರಿಗಳಾವಾವೆಂದೊಡೆ:—ಮುಂದೆ ಪಂಚಗಿರಿಗಳ ವಿಸ್ತಾರವಂ ಪೇಳ್ವೆ ನದೆಂತೆನೆ.

**ಅಟತಾಳ.**

ಮೇರುವಿಗೆ ಪೂರ್ವದಲಿ ಒಪ್ಪುವ । ಮಂದರಾಚಲದುನ್ನತ ।
ತೋರುವುದು ದ್ವಾದಶ ಸಹಸ್ರವು ಹರವು – ಮೂರರಲಿ ॥ ೧ ॥

ಗಿರಿಯೊಳಿಹ ತರು ಕನಕ ವರ್ಣದಿ । ಇರುತಲಿರಲಿಕೆ ಕಡವದ ।
ಮರವುಸಾವಿರ ಯೋಜನೋನ್ನತ – ಇರುವುದಲ್ಲಿ ॥ ೨ ॥

ಪರಿಮಳದ ಸಂರಂಭ ಕುಸುಮಕೆ । ಮೊರೆವ ಭ್ರಮರದ ನಾದದಿಂ ।
ಮೆರೆವ ಶಾಖೆಯ ತಳಿರಸೊಂಪಿಂ – ದಿರುವುದಾವೃಕ್ಷ ॥ ೩ ॥

ಚಂದದಿಂ ತರುಮುಂದೆ ಪರಿವುದು । ನಂದೆಯೆಂಬಾ ನದಿಯದು ।
ಮುಂದೆ ಸುರಮುನಿ ದೇವಗಣ ಕಾ – ನಂದ[1] ದಿಂದ[1] ॥ ೪ ॥

ಮತ್ತೆ ಇರುವುದು ಮುಂದುಗಡೆಯಲಿ । ಚೈತ್ರರಥನಾ ವನವದು ।
ಹತ್ತುಸಾವಿರ ಯೋಜನಾಂತರ – ವಿಸ್ತರದೊಳು ॥ ೫ ॥

ಇರುವದೈನೂರ್ ಯೋಜನದೊಂದು । ಸರಸಿಯದರೊಳು ಮಧ್ಯದಿ ।
ಸರಸಿಜದ ಸೊಂಪಿರುವದತಿ ಕೆಂಪು – ಮೆರೆವ ಜಲದಿ ॥ ೬ ॥

ಕಂಗಳಿಗೆ ಚಲುವಾಗಿ ಒಪ್ಪುವ । ಕನಕ ವನದಾ ಮಧ್ಯದಿ ।
ಲಿಂಗವೆಸೆದುದು ತತ್ಪುರುಷಮುಖ – ಶೃಂಗರದೊಳು ॥ ೭ ॥

ಸಕಲ ಸುರಮುನಿ ಸಿದ್ಧಸಾಧ್ಯರು । ಸುಖಿದಿಬಂದು ಲಿಂಗವ ।
ಅಖಿಳ ದ್ರವ್ಯಗಳಿಂದ ಪೂಜಿಸಿ – ಸುಖದಲಿ ಇರುತಿಹರು ॥ ೮ ॥

ವಚನ ॥ ಇನ್ನು ಆ ಮಹಾ ಮೇರುವಿಗೆ ದಕ್ಷಿಣಭಾಗದಲ್ಲಿ, ಅಘೋರ ಮುಖವಾಗೊಪ್ಪುವ, ನೀಲಾಚಲದ ವಿಸ್ತಾರಮಂ ಬೀಳ್ವೆನದೆಂತೆನೆ.

**ಜಂಪೆ.**

ಮೇರುವಿಗೆ ದಕ್ಷಿಣದಿ । ತೋರುವ ನೀಲಾಚಲವು ।
ಮಿಾರಿದುನ್ನತವು । ಈರಾರು ಸಾವಿರವು ॥ ೧ ॥

---

1-1 ವಾಗಿ (ಉ, ಖ, ಗ, ಜ, ಟ.)

ಮೂರುಸಾವಿರದಗಲ । ತೋರುವಾ ಗಿರಿಮೇಲೆ ।
ಸೇರಿರುವ ಕುಜವೆಲ್ಲ । ನೇರಿಲಾವರ್ಣ ॥ ೨ ॥

ಸಂಭ್ರಮದಿ ಸಹಸ್ರಯೋ । ಜನದ ಉನ್ನತದೊಂದು ।
ಜಂಬುನೇರಿಲ ಮರನು । ಇಂಬು ಗೊಂಡಿಹುದು ॥ ೩ ॥

ತಳಿರಿಂದ ತಂಪಿಂದ । ಪೊಳೆವ ಪಣ್ಣುಗಳಿಂದ ।
ನೆಳಲಿಂದಲೆಸದುದಾ । ಕಳೆಯುಳ್ಳ ಮರನು ॥ ೪ ॥

ಜಂಬುನೇರಿಲ ಫಲವು । ಕುಂಭಿನಿಗೆ ಬಿದ್ದೊಡೆದು ।
ತುಂಬಿರಸ ಪರಿವುದದು । ಜಂಬು ನದಿಯಾಗಿ ॥ ೫ ॥

ರಸವುಂಡ ಜನರು ಆ । ಯುಷ ಹೆಚ್ಚಿ ಬಹುಕಾಲ ।
ಶಶಿ ರವಿಗಳಂತೆ । ಸಂತಸದಿ ಬಾಳುವರು ॥ ೬ ॥

ಜಂಬುನದಿಯೊಳು ಚಿನ್ನ । ಹೊಂಬಣ್ಣ ಕಡೆಯಾಗಿ ।
ಸಂಭ್ರಮದಿ ಸುರರಿಗದು ನಂಬಿದಾ ಒಡವೆ ॥ ೭ ॥

ಜಂಬು ನೇರಿಲ ಮರನು । ಇಂಬಾದ ಕಾರಣದಿ ।
ಜಂಬು ದ್ವೀಪವು ಎಂದು । ಜಗಕೆ ಪೆಸರಹುದು ॥ ೮ ॥

ಜಂಬುನೇರಿಲ ಮರದ । ಮುಂಬದಿಯ ಭದ್ರನದಿ ।
ತುಂಬಿ ಪರಿವುದು ಜಗಕೆ । ಸಂಭ್ರಮವ ಪೆತ್ತು ॥ ೯ ॥

ಮುಂದೆ ಭದ್ರಾನದಿಯ । ಹೊಂದಿ ಸಾವಿರದಗಲ ।
ಗಂಧಮಾದನ ವನವು । ಒಂದು ಮಧ್ಯದಲಿ ॥ ೧೦ ॥

ವಾಸವೈನೂರಗಲ । ಕಾಸಾರ ಮಡುವಲ್ಲಿ ।
ಈಶ ಅಘೋರೇಶ । ಲೇಸಿಂದಲಿಹನು ॥ ೧೧ ॥

ದೇವ ಮಾನವರು । ಕೆಂದಾವರೆಯ ಅರಳಿಂದ ।
ದೇವ ಲಿಂಗವ ಭಜಿಸಿ । ತಾವು ಸುಖಮಿಹರು ॥ ೧೨ ॥

ವಚನ ॥ ಆ ಮಹಾಮೇರುವಿಗೆ ಪಶ್ಚಿಮದಲ್ಲಿ, ಸದ್ಯೋಜಾತ ಮುಖವಪ್ಪ ನಿಷ್ಕಂಭಗಿರಿಯ ವಿಸ್ತಾರಮಂ ಪೇಳ್ವೆನದಂತೆನೆ.

**ಏಕತಾಳ.**

ಮೇರು ಪಶ್ಚಿಮ[1] ದೊಳ[1] ಗೀ । ರಾರು ಸಾವಿರೋನ್ನತ ।
ತೋರುವ ಅದ್ರಿಯುನ್ನತ । ಮೂರುಸಾವಿರವು ॥ ೧ ॥

---

* ಈ ಪದ್ಯಗಳು (ಇ, ಖ, ಗ, ಚ.) ಪ್ರತಿಗಳಲ್ಲಿಲ್ಲ. 1-I ದಿ (ಅ, ಟ, ಡ, ತ, ಬ.)

ಗಿರಿಯ ಮೇಲಿರುವಂಥ । ತರುಗುಲ್ಮ ಲತೆಯೆಲ್ಲ ।
ಮೆರೆವ ವೈಢೂರ್ಯದಿ । ಕರಮೆಸೆದು ಇಹುದು || ೨ ||

ಕುಶಲದಾಗಿರಿಯ ಮೇ । ಲೆಸೆವು[1] ದೊಂದೀವೃಕ್ಷ ।
ದೆಸೆಗೆ ಸಾವಿರದ ಮೇಲೆ । ಪಸರಿಸಿರುತಿಹುದು[1] || ೩ ||

ದೆಸೆಯೆಂಟು ಮುಸುಕಿ । ಸೊಂಪೆಸೆವ ಪರಿಮಳದಿಂದ ।
ಶಶಿಯ ಮಂಡಲದಂತೆ । ಪಸರಿಸಿರುತಿಹುದು || ೪ ||

ಅಂತಪ್ಪ ವೃಕ್ಷದ । ಮುಂದೆ ಸುರಭಿನದಿ ।
ನಿಂತು ಪರಿವುದು ಅ । ನಂತ ಕಾಲಮೊಳು || ೫ ||

ಅದರ ಮುಂಗಡೆಯಲ್ಲಿ । ಒದವಿ ಸಹಸ್ರಯೋಜನ ।
ಪುದಿದ ವೈಭ್ರಾಜ ವನ । ಮದನ ನಂತಿಹುದು || ೬ ||
ಇರುವುದಾ ವನಮಧ್ಯ । ಸರಿಸಿ ಐನೂರ್ಯೋಜನ ।
ವರ ಸದ್ಯೋಜಾತ ಮೂರ್ತಿ । ನಿರುತ ಒಪ್ಪಿಹನು || ೭ ||
ಸುರಮುನಿ ಗಣರೆಲ್ಲ । ಸ್ಮರಿಸಿ ಪೂಜಿಸಿನಿತ್ಯ ।
ಪರಮ ಸಂತೋಷದೊ । ಳಿರುವರಾ ವನದಿ || ೮ ||

ವಚನ || ಇಂತಪ್ಪ ಮೇರುವೆಯ ಬಡಗಣ ದಿಕ್ಕಿನಲ್ಲಿ, ವಾಮದೇವ ಮುಖವಾಗಿ ಒಪ್ಪುವ, ಘನಗಿರಿಯ ವಿಸ್ತಾರಮಂ ಪೇಳ್ವೆನದೆಂತೆನೆ.

**ತ್ರಿವುಡೆ.**

ಉತ್ತರದಲಿಹ ಗಿರಿಯ ಉನ್ನತ । ಎತ್ತರವು ಈರಾರುಸಾವಿರ ।
ಮತ್ತೆ ಅಗಲವು ಮೂರುಸಾವಿರ – ಅರ್ಥಿಯಿಂದಿಹುದು || ೧ ||
ಚಂದ್ರಕಾಂತದ ಗಿರಿಯ ಮೇಲತಿ । ಹೊಂದಿರುವ ತರುಗುಲ್ಮಲತೆಗಳು ।
ಚಂದಿರನ ವರ್ಣದಲಿ ಇರುವು ದಾ – ನಂದದಿಂದಲ್ಲಿ || ೨ ||
[2] ಶಂಖತರು ಮಧ್ಯದಲಿ ಒಪ್ಪುವಾ। ಕುಂಕುಮದ ವರ್ಣದಲಿ ಮರವೊಂದು[2] ।
ಕೊಂಕದಲೆ ಸಾವಿರದ ಉನ್ನತ – ಬಿಂಕಮಾಗಿಹುದು || ೩ ||
ರಸದಸಿಂಧುರ ದಂತೆರನ್ನದ । ಎಸಕವದು ಪೂರ ಪೊಣ್ಮಿದಂದದಿ ।
ಶಶಿಯ ಉದಯದ ಬಿಂಬದಂದದಿ – ಎಸೆವುದಾವೃಕ್ಷ * || ೪ ||
ಇಂತೆಸೆವ ತರುಮುಂದೆ ಪರಿವುದು । ಸಂತಸದಲತಿ ಸುಮನ ನದಿಯದು ।
ಮುಂತೆನಂದನ ಸಹಸ್ರಯೋಜನ – ದಂತರದ ಲಿಹುದು * || ೫ ||

---

1-1 ದುದ್ವಾದಶವು । ಸಶಿನೆ ಸಾವಿರಮೇಲೆ । ಎಸೆವಯೋಜನವು (ಗ, ಚ.)
2-2 ಬಿಂಕದವನಿಜಯುಗಳ ಮಧ್ಯದಿ । ಕುಂಕುಮದ ಚವಿವೃಕ್ಷವಂದತಿ । (ಉ, ಎ, ಗ, ಚ)
* ಈ ಪದ್ಯಗಳು (ಗ, ಚ.) ಪ್ರತಿಗಳಲ್ಲಿಲ್ಲ.

ಕೆಂಪುವರ್ಣದ ಜಲವು ಖಗಮೃಗ । ಕೆಂಪುವರ್ಣದ ಜನರು ಅದರೊಳು ।
ಕೆಂಪುತಾವರೆಯಿಂದ ಸರಸಿಯು – ಪೆಂಪೆಸೆವುತಿಹುದು ॥ ೬ ॥

ಆ ಮಹಾ ಜಲಮಧ್ಯ ದೇಶದಿ । ಕಾಮಹರ ಪರಮಾತ್ಮನೆನಿಸುವ ।
ವಾಮದೇವನ ಮೂರ್ತಿ ಎಸೆದನು – ಪ್ರೇಮದಿಂದಲ್ಲಿ ॥ ೭ ॥

ಸಕಲ ಸುರಮುನಿ ಸಿದ್ಧನಿಕರವು । ಅಖಿಳವಿಧ ಭಕ್ತಿಯಲಿಪೂಜಿಸಿ ।
ಪ್ರಕಟಿಸುವ ಶಂಕರನ ಕರುಣದಿ – ಸುಖದಿ ಇಹರಲ್ಲಿ ॥ ೮ ॥

**ಕಂದಪದ್ಯ**

ಇಂದುಧರ ನಿಮ್ಮ ಕರುಣದಿ ।
ಚಂದದಿ ನಾಲ್ಕೆಂಟು ಗಿರಿಗಳಂದವ ನುಸಿರ್ದೆಂ ॥
ಮುಂದಾ ಮೇರುವೆಯಗ್ರದಿ ।
ಹೊಂದಿರುತಿಹ ರುದ್ರಲೋಕದಂದವ ನೊರೆವೆಂ ॥ ೧ ॥

**ಸೊಬಗಿನಸೋನೆ ವರ್ಣ.**

ಮಿಸುನಿಯ ಗಿರಿಮೇಲೆಸೆವ ರುದ್ರಲೋಕ । ದೆಸಕವನೇನ ಬಣ್ಣಿಪೆನು ॥
ಕುಶಲವಿಟ್ಟೊರೆವೆನೆಂದರೆ ಮಹಾ ಶೇಷನ । ಅಸಮ ಜಿಹ್ವೆಗೆ ಅಸದಳವು ॥ ೧ ॥

ಶಶಿಕಾಂತ ಶಿಲೆಯಿಂದಲೆಸೆವ ರನ್ನಗಳಿಂದ । ರಸತೀವಿ ಬೆಳೆದ ನಂದನದಿ ॥
ಮಿಸುನಿಯಾ ಮಳಲಿಂದ ರಸಸುಧೆ ಕೊಳದಿಂದ । ಎಸೆದುದಾ ಚಂದ್ರ
ಮಂಡಲದಂತೆ ॥ ೨ ॥

ಚಂದನ ಕುಂದ [1] ಕೇತಕಿ [1] ನಾಗಂಸಪಿಗೆ । ಬಂಧುಕ ಗಣಿಕ ಪುನ್ನಾಗ ॥
ಇಂದ್ರವಾಣಿಯು ಮನ್ಮಥ ಬಿಲ್ವಪಾಲಾಶ । ದಿಂದಲಾ ನಂದನವೆಸೆದುದು ॥ ೩ ॥

ಸುರಗಿ ಸುರಹೊನ್ನೆ ಜಾಜಿಯು ಪಚ್ಚೆ ಮರುಗವು । ಕರವೀರ ಸೇವಂತಿ ಅತಿಮುಕ್ತ
ವರ ಪಾರಿಜಾತ ದಾಡಿಮ ರಸದಾಳೆಯು । ಕರಮೆಸೆದುದು ಮನ ಕಿರಿದಾಗಿ ॥ ೪ ॥

ನಿಂಬ ಪಾದರಿ [2]ವೃ [2]ಕ್ಷ ತುಂಬಿ ಯಮೃತದರಾಜ । ಅಂಬಟೆಯು ಅರನೆಲ್ಲಿ ನೆಗ್ರೋಧ ॥
ಜಂಬೀರ ಮತ್ತಿ ಶಾಲ್ಮಲಿ ನಾನಾ ತರುಗಳಿಂ । ಸಂಭ್ರಮದಿಂದೆಸೆವುದಾ ವನವು ॥ ೫ ॥

ನೇರಿಲು ಮಾವು ಚಂಪಕ ದ್ರಾಕ್ಷಿ ಖರ್ಜೂರ । ತಾರೆ ಮಂದಾರ ಮಾದಳ ನಿಂಬೆ ॥
ನಾರಂಗ ಪಲಸು ಕಿತ್ತಲೆ ಬಾಳೆ ಹೇರಿಳೆಯು । ಸಾಲು ಸಾಲೊಳು ವನವೆಸೆವುದು ॥ ೬ ॥

ಕಲ್ಲೆಲ್ಲ ಕನಕ ಕಲ್ಪದವೃಕ್ಷ ತರುವೆಲ್ಲ । ಹುಲ್ಲೆಲ್ಲ ಹೊಳೆವ ಮಾಣಿಕ ಜ್ಯೋತಿ ॥
ಮಲ್ಲಿಗೆ ವನವು ಮರುಗ ಪಚ್ಚೆಯು ದವನ । ಎಲ್ಲಿ ನೋಡಲು ವನದೆಡೆಯೊಳು ॥ ೭ ॥

---

* ಈ ಕಂದಪದ್ಯ ( ಇ, ಖ, ) ಪ್ರತಿಗಳಲ್ಲಿಲ್ಲ.

1–1 . ಮಂದರ (ಅ, ಉ, ಟ,ಬ) 2 –2 ಪ್ಲ (ಅ, ಖ, ಟ. ತ, ಬ.)

ಕರಿಸಿಂಹ ಕಾಳ್ಕೋಣ ಮೊರೆವ ಹುಲಿಸಾರಂಗ । ಪುರುಷ ಮೃಗ ಝಲ್ಲಿಮೃಗವಲ್ಲಿ ॥
ಕರಡಿಯು ಕಪಿ ಕಸ್ತೂರಿಮೃಗ ಸಂಕುಲ । ಹರನ ಪೂಜೆಯೊಳಿಲ್ಲದಿರಲಿಲ್ಲ ॥ ೮ ॥

ಕಾಮಧೇನುವು ಕಲ್ಪವೃಕ್ಷ ಚಿಂತಾಮಣಿ । ಆ ಮಹಾ ತೃಣಕಾಷ್ಠ ಜ್ಯೋತಿಯು ॥
ಶ್ರೀ ಮಹದೈಶ್ವರ್ಯ ಗೃಹಕಲ್ಪಗಳ ಮೊತ್ತ । ಪ್ರೇಮದಿಂದಿಹವು ಆ ವನದಲ್ಲಿ ॥ ೯ ॥

ಕರ್ಪೂರ ಮಳಲು ಸರವವೆಲ್ಲವಮೃತವು । ಪುಷ್ಪದಾ ವನಪುಣ್ಯ ನದಿಗಳು ॥
ಸರ್ಪಭೂಷಣನ ಸನ್ನಿಧಿಯ ಪ್ರಮಥಪುರ । ಇರ್ಪುದಾ ವನಮಧ್ಯದೆಡೆಯೊಳು ॥ ೧೦ ॥

ಇಂತಪ್ಪ ವನದ ಮಧ್ಯದಿ ಸತ್‌ಪ್ರಮಥರ । ಪಂತಿಯ ಪುರವೊಪ್ಪುತಿಹುದೊಂದು ॥
ಇಂತುಪೇಳುವೆ ಚಂದ್ರ ಕಾಂತದಕೋಟೆ । ದ್ವಾತ್ರಿಂಶ ಸಾಹಸ್ರ ವಿಸ್ತರದೊಳ್ * ॥

ಶಶಿಕಾಂತದ ಕೋಟೆ ಮಿಸುನಿಗೆಲಸವು ಮೇಲೆ । ಕುಶಲದ ನವರತ್ನ ತೆನೆಗಳು ॥
ಜಸವೆತ್ತ ಹುಲಿಮುಖ ವೆಸೆವ ದ್ವಾರಗಳೆಂಟು । ಅಸಮ ಭೈರವರ ಕಾವಲಿನಿಂದ ॥

ಮೂಡಣ ದ್ವಾರ ಮುಂಗಡೆ ಹುಲಿಮುಖದಲ್ಲಿ । ನೋಡೆ ಭೀಕರ ಭೈರವನಿರ್ಪ ॥
ಆಡಂಬರ[1]ದಾ ಹೇಮವರ್ಣದ ಶರೀರದಿಂ । ಕೂಡೆ ವೊಪ್ಪುವನಖಿಳ ಗಣರಿಂದ[1] ॥ ೧೩ ॥

ನಾಲ್ಕು ಹಸ್ತವು ನಯನವುಮೂರು ಸತಿಬ್ರಾಹ್ಮಿ । ತಾ ಕೈಯೊಳ್ ಪಿಡಿದಿಹ ಜಪಮಾಲೆ ॥
ಬೇಕಾದದಂಡ ಕಮಂಡಲ ಪಾಶದಿಂ । ಜೋಕೆಯಿಂದಿಹ ಪೂರ್ವದೆಸೆಯೊಳ್ ॥ ೧೪ ॥

ತನ್ನ ಸಮಾನದ ಭಟರೆಂಟು ಕೋಟಿಯಿಂ । ದುನ್ನತ ಹಂಸ ವಾಹನದಿಂದ ॥
ಪನ್ನಗಧರನ ನೆನಹು ಓರೆಪೋಗದಲೆ । ಸನ್ನುತ ಭೈರವನಿರುತಿರ್ದ ॥ ೧೫ ॥

ವೀತಿಹೋತ್ರನ ಬಾಗಿಲತಿ ಭಯಂಕರವಾಗಿ । ಅತಿಹರುಷ ಕಾಲಭೈರವನು ॥
ಗಾತ್ರದ ದೀರ್ಘದ ಸ್ವರ್ಣಶರೀರದಿಂ । ನಾಥ ಭೀಮೇಶ್ವರ ಸಹವಾಗಿ ॥ ೧೬ ॥

ಕಂಗಳುಮೂರು ಕರಗಳು ನಾಲ್ಕು ಆಯುಧ । ಹಿಂಗದೆ ಗದೆಶೂಲ ಡಮರುಗ ಖಡ್ಗ ॥
ಕಂಗೊಂಳಿಸುವ ಟೆಂಕ ಖಟ್ವಾಂಗ ಹಯವೇರಿ । ಹಿಂಗದಲೆ ಅಗ್ನಿಯಾ ದೆಸೆಯೊಳ್ ॥

ದಂಡ ಧರದೆಸೆಯಾ ದ್ವಾರವ ಕಾಯ್ವ ಪ್ರ । ಚಂಡ ಭೈರವ [2]ಲಂಡ ಉದ್ದಂಡ[2] ॥
ಮಂಡಿತ ತುರುಗ ಮಯೂರ ಸತಿಕೌಮಾರಿ । [3]ಖಂಡೆಯವು ನಾಲ್ಕು ಕೈ ಕಂಗಳ್
ಮೂರು[3] ॥ ೧೮ ॥

---

* ಈ ಅರ್ಧಪದ್ಯ (ಉ, ಗ, ಚ. ) ಪ್ರತಿಗಳಲ್ಲಿಲ್ಲ.

1 – 1 ದೇಹ ಅಮಿತ ಗಣಂಗಳಿಂ । ಕೂಡಿವಪ್ಪಿದನು ಸಂಭ್ರಮದಿ । (ಉ, ಎ, ಖ, ಗ, ಚ. ) 2–2 ಪರಮೋದ್ದಂಡ (ಉ, ಖ, ಗ, ಚ. ) 3 – 3 ಮಂಡೆಮಾಲೆಯ-ಧರಿಸಿಹರು (ಉ, ಖ, ಗ.)

ಪಿಡಿದ ತ್ರಿಶೂಲ ವಜ್ರವು ಶಕ್ತಿಗಳಿಂದ । ಕಡುಗಲಿ ಭಟರೆಂಟು ಕೋಟಿಗಳು ॥
ಎಡಬಿಡದೆ ಶಿವನೆನಹ ಮನ ತೊಲಗದೆ । ಕಡುಗಾಯ್ವ[1] ದಕ್ಷದ್ವಾರದಲಂದು[1] ॥೧೯॥

ನೈಋತ್ಯ ದೆಸೆಯ ಬಾಗಿಲ ಕಾಯ್ವ ಕ್ರೋಧ । ಭೈರವನಿಪ್ಪ ಮನಕೆ ಭೀಕರವಾಗಿ ॥
ಕರಗಳುನಾಲ್ಕು ಕಂಗಳುಮೂರು ಆಯುಧ । ವರ ಶಂಖ ಚಕ್ರ ಗದೆ ಶಾರ್ಙ್ಗಯು ॥
ಪರಮ ವೈಷ್ಣವಿ ಶಕ್ತಿ ಗರುಡನ ವಾಹನವು । ಉರವಣಿಪ ಭಟರೈದು ಕೋಟಿಯಿಂ ॥
ಶರೀರವು ಹೇಮವರ್ಣವು ಘನಗಾತ್ರದಿಂ । ದಿರುತಿಹ ನೈಋತ್ಯ ದೆಸೆಯೊಳು ॥೨೧॥

ವರುಣನ ದೆಸೆಯ ಬಾಗಿಲಕಾಯ್ವ ಉನ್ಮತ್ತ । ಭೈರವನಿರುವ ಭಯಂಕರವಾಗಿ ॥
ಕರಗಳುನಾಲ್ಕು ಕಂಗಳುಮೂರು ಆಯುಧ । ವರಶಂಖ ಹಲಗೆ ಮುಸಲಖೇಟ ॥೨೨॥

ಶರೀರವು ನವಿಲ ವರ್ಣವುಶಕ್ತಿ ವಾರಾಹಿ । ತುರಗ ಮಹಿಷದಿಂದಿರುತಿಹ ॥
ಉರುಗಾಲ ಭಟರಿಹರವರಾರು ಕೋಟಿಯಿಂ । ದಿರುತಿಹ ವರುಣನಾ ದೆಸೆಯೊಳ್ ॥

ವಾಯವ್ಯ ದೆಸೆಯ[2] ಬಾಗಿಲಕಾಯ್ವ ಭೈರವ । ನಿರುತಿಹ ಕಾಲಭೈರವನಂತೆ[2] ॥
ನಯನವು ಮೂರು ನಾಯಕ ಶಕ್ತಿ ಮಾಹೇಂದ್ರಿ । ಐರಾವತ ತುರಗವಾಯುಧ ನಾಲ್ಕು ॥

ಧನುವಜ್ರ ಶಕ್ತಿ ಸರಳುಗಳಾಯುಧದಿಂದ । ತನುಕಾಂತಿ ರತ್ನದಪ್ರಭೆಯಂತೆ ॥
ಘನತರವಾದ ಭಟರು[3] ಮೂರು[3] ಕೋಟಿಯಿಂ । ದಿನಗಾಯ್ವ ವಾಯವ್ಯದೆಸೆಯೊಳು ॥

ಬಡಗಲ ದೆಸೆಯ ಬಾಗಿಲಕಾಯ್ವ ಭೀಷಣ । ಕಡುಗಲಿ ಕಾಲಭೈರವನಂತೆ ॥
ಜಡಿವತ್ರಿಶೂಲ ಡಮರುಗ ಘಂಟಿಕಪಾಲ । ಪಿಡಿದು ತ್ರಿನೇತ್ರದಿಂದಿರುವರು ॥೨೬॥

ವಾಯಸಪಕ್ಷಿ ವಾಹನ ಶಕ್ತಿ ಚಾಮುಂಡಿ ।ಕಾಯವೆ ಧೂಮ್ರ ವರ್ಣದ ಕಾಂತಿ ॥
ಆಯತ ಭಟರು ಹನ್ನೆರಡು ಕೋಟಿಗಳಿಂದ । ಕಾಯ್ದಿಹರ್ಬಡಗ ಬಾಗಿಲನಂದು ॥

ಈಶಾನ್ಯ ದೆಸೆಯ ಬಾಗಿಲಕಾಯ್ವುತಿಹನು ಪ್ರ । ಕಾಶ ಭೈರವತಾನು ಸತತ ॥
ಲೇಸಿನಶಕ್ತಿ ಮಹಾಕಾಳಿ ವಾಹನ । ಮೂಷಕವು ಪಿಡಿದ ಆಯುಧನಾಲ್ಕು ॥೨೭॥

ಗದೆಖಡ್ಗ ಖೇಟ ಹಲಗೆಧೂಮ್ರ ವರ್ಣದಾ । ಹೃದಯವು ಹೊಳೆವ ತ್ರಿನೇತ್ರವು ॥
ಮದಗಜದಂತೆ ಭಟರು ಎಂಟುಕೋಟಿ । ಯಿಂದಿಹನು ಈಶಾನ್ಯ ಭಾಗದಲಂದು ॥೨೯॥

ಇಂತಪ್ಪ ಅಷ್ಟಭೈರವರ ಕಾವಲಿನಿಂದ । ಸಂತತವು ಮೆರೆವ ಪಟ್ಟಣವನು ॥
ಮುಂತೊಳಪೊಕ್ಕು ನೋಡಲು ಮನೋಲ್ಲಾಸದ । ಸಂತೋಷವೇನಬಣ್ಣಿಪೆ ನಾನು ॥
ಭಕ್ತಿಯ ಸ್ಥಲವೋ ಯುಕ್ತಿಯದೊಂದು ನೆಲವೀಡೊ । ಮುಕ್ತಿಗೆ ತೌರ್ಮನೆ ಎನಿಸಿತ್ತು ॥
ಸತ್ಯದ ಸಾಗರದುತ್ತಮ ಪ್ರಮಥರ । ಅರ್ಥಿಯ ನಗರ ಕಣ್ಗೆಸೆದವು ॥೩೧॥

---

1-1 ಸಡಗರದಿಂದ ದಕ್ಷಿಣದಿ (ಉ, ಖ. ಗ. ಚ. ) 2-2 ಭೈರವನೊಪ್ಪುತಿಹ ಕಾಯ । ಕಾಳಭ್ರಕಾರವುನೋಡೆ ॥ (ಉ. ಖ .ಗ. ಚ. ) 3-3 ದಾರು(ಉ, ಗ, ಚ. )

**ಶಾರ್ದೂಲವಿಕ್ರೀಡಿತ ವೃತ್ತ.**

ಧರೆಯಾಕಾಶವ ತಾಳವಾಗಿ ಪಿಡಿವರ್ ಗಿರಿಯಣ್ಣೆ ಕಲ್ಲಾಡುವರ್ ।
ಸರವನ್ನೊಕ್ಕುಡಿತಾಗಿ ಎತ್ತಿಕುಡಿವರ್ ಹರಿಬೊಮ್ಮರಂ ಲೆಕ್ಕಿಸರ್ ॥
ಸರಕುಂ ಗೊಳ್ಳರು ಮೃತ್ಯು ಮಾರಿ ಯಮರಂ ಮುರಿದಿಕ್ಕುವರ್ ಕಾಮನಂ ।
ಇರುವರ್ ಶಂಕೆಯು ದೋರದಂತೆ ಪುರದೊಳ್ [1]ಶ್ರೀ ರುದ್ರ[1] ಪ್ರಮಥಾದಿಗಳ್*
॥ ೧ ॥

ವಚನ ॥ ಇಂತಪ್ಪ ಪ್ರಮಥರ ಪುರದ, ಶೃಂಗಾರವಂ ಪೇಳ್ವೆನದೆಂತೆನೆ.

**ಜಂಪೆ.**

ಚಂದ್ರಕಾಂತದ ಶಿಲೆಯು । ಮಂದಿರದ ಮುಖಶಾಲೆ ।
ಕುಂದಣದ ಕೆಲಸ ಚಲು । ವಿಂದಲೊಪ್ಪಿದವು ॥ ೧ ॥

ಸುತ್ತ ಕನಕದ [2] ಕೋಟಿ [2] । ಎತ್ತಿರುವ ಮದನ ಕೈ ।
ರತ್ನಗೆಲಸದ ಮಾಟ । ವಿಸ್ತರಿಸಲಳವೆ ॥ ೨ ॥

ಸತ್ಯರಿಹ ಸದನಗಳು । ಭಿತ್ತಿಯಲ್ಲವು ಪರುಷ ।
ಮುತ್ತು ಬಿಗಿದಿಹ ತಳುಕು । ಸುತ್ತಲೆಸೆದಿಹವು ॥ ೩ ॥

ಪುರದೊಳಗೆ ಎಲ್ಲೆಲ್ಲಿ ಕಂ । ಡರು ಶಿವನ ಭವನಗಳ್ಗೋ ।
ಪುರ ವೆತ್ತಿಮೆರೆ [3] ದವಂ । ಬರ ಸೋಂಕುವಂತೆ [3] ॥ ೪ ॥

ಆಡಂಬರದ ಗೇಹ । ನೋಡೆ ಅಚ್ಚರಿಯಾಗಿ ।
ಕೂಡೆಬೆಳೆದಂಬರದ । ಮೋಡಮೊಳಗಿಹವು ॥ ೫ ॥

ಸೋಮವೀಧಿಯು ಸೂರ್ಯ । ಹರ್ಮ್ಯಹೇಮದ ಕಳಶ ।
ಕಾಮಧೇನುವು ಕಲ್ಪ । ವೃಕ್ಷ ಮನೆಮನೆಗೆ ॥ ೬ ॥

ವೀಧಿ ವೀಧಿಯೊಳೆಲ್ಲ । ಸಾಧು ಕಸ್ತುರಿಚಳೆಯ ।
ಮೋದ ಪರಿಮಳಮನಕೆ । ವೇಧಿಸುತಲಿಹುದು ॥ ೭ ॥

ಮಂದಾರ ಕುಸುಮದ । ಸಂದವಾಸನೆಯಿಂದ ।
ಚಂದದಿಂ ಪುರವೆಲ್ಲ । ಗಂಧವೆಸೆದಿಹುದು ॥ ೮ ॥

ಮುಕ್ತಾಂಗನೆಯರು ಶಿವ । ಭಕ್ತಿ ಸಂಪನ್ನೆಯರು ।
ಉತ್ತಮದ ರುದ್ರಗಣ । ಮೊತ್ತವಾಗಿಹರು ॥ ೯ ॥

---

1-1 ಆರೂಢ(ಅ, ಉ, ಜ, ದ, ಬ.) * ಈ ವೃತ್ತ(ಇ, ಎ, ಖ, ಗ, ಚ,)ಪ್ರತಿಗಳಲ್ಲಿಲ್ಲ.
* ಈ ಜಂಪೆ ಪದ್ಯಗಳು ( ಇ, ಗ, ಚ. ) ಪ್ರತಿಗಳಲ್ಲಿಲ್ಲ.
2-2 ಲೋವೆ । (ಎ. ಒ, ಖ. ಜ. ಟ. ) 3-3 ದುದಾ । ತರಣಿತೇಜದಲಿ॥(ಎ.)

ಭಕ್ತಿಸಂಯುತರಲ್ಲಿ । ಮುಕ್ತಿದಾಯಕರಲ್ಲಿ ।
ಸತ್ಯಜಪ ತಪ[1] ನೇಮ[1] । ನಿತ್ಯಶಿವನಲ್ಲಿ ॥ ೧೦ ॥

ಇಂತೆಸೆವ ಪುರವದರ । ಮಧ್ಯದಲ್ಲಿಹುದೊಂದು ।
ಕಂತುಹರ ರುದ್ರನಾ ನಿಶ್ಚಿಂತನರಮನೆಯು ॥ ೧೧ ॥

ಸುತ್ತನೀಲದ ಕೋಟೆ । ರತ್ನಗೆಲಸವು ಮೇಲೆ ।
ಮುತ್ತಿನತೆನೆಯು ಮಿಗೆ ಸಾ । ಲೆತ್ತಿ ರಂಜಿಪವು ॥ ೧೨ ॥

ಚಿತ್ರಬೋದಿಗೆ ಕೂಟ । ರತ್ನಗೆಲಸದ ಮಾಟ ।
ಅರ್ಥಿಯಿಂದಲಿ ದ್ವಾರ ಚೆ । ಲ್ವೆತ್ತು ರಂಜಿಪವು ॥ ೧೩ ॥

ಘನದ್ವಾರನಾಲ್ಕು ಗೋ । ಪುರವೆತ್ತಿ ಮೆರೆದವತಿ ।
ದಿನಕರನ ಪ್ರಭೆಯಂತೆ । ಮನಕೆ ಅರಿದಾಗಿ ॥ ೧೪ ॥

**ವೃತ್ತ.**

ಇಡುವಾ ರತ್ನಕಿರೀಟಮುಂ ಸ್ವಶಿರದೊಳ್ ತೊಡುವಾ ಫಣಾ ಭೂಷಣಂ ।
ಪಿಡಿವಾ ಖಡ್ಗಕಪಾಲ ಶೂಲಡಮರಂ ಧರಿಪಾಪುಲೀ ಚರ್ಮಮಂ ॥
ಕುಡಿವಾ ಹಾಲಹಲಾಗ್ನಿ ಕೂಟವಿಷಮುಂ ಸುಡುವಾದ್ವಿರ್ಷ ಮಂಡಲಂ ।
ಮೃಡನಂತಪ್ಪ ಮಹಾತ್ಮ ಶೀಲಗಣ ರೌದ್ರರು ಕಾಯ್ವರಾ ಬಾಗಿಲಂ ॥ ೧ ॥

ವಚನ ॥ ಅಂತಪ್ಪ ಪುರವನೊಳಪೊಕ್ಕು ನೋಡಲದೆಂತೆನೆ.

**ದ್ವಿಪದಿ.**

ಶೃಂಗಾರದಿಂದೆಸೆವ ಸಾಲುನಗರಗಳು ।
ಕಣ್ಗೆಮಂಗಳವಾಗಿ ಕಡುರಮ್ಯದಿಂದ ॥ ೧ ॥

ವಜ್ರಗೆಲಸಗಳಿಂದ ಒಪ್ಪುವಾನಗರ ।
ಪ್ರಜ್ವಲಿಸಿ ಪ್ರಭೆಪುರವ ಪರ್ಬಿಕೊಂಡಿಹುದು ॥ ೨ ॥

ಮತ್ತೆಕುಂದಣಗೆಲಸ ಮೆರೆವಹರ್ಮ್ಯಗಳು ।
ರತ್ನಕಲಶಗಳಿಂದ ರಾಜಿಸುತ್ತಿಹವು ॥ ೩ ॥

ಗುಡಿಯು ಗೋಪುರ ಶಿಖರ ಮೃಡನಭವನಗಳು ।
ಎಡೆಯಿಲ್ಲವಾನಗರವೆಲ್ಲಿ ನೋಡಿದರು ॥ ೪ ॥

ದೇವಗಂಗೆಯು ಧವಳ ಗಂಗೆಸುರನದಿಯು ।
ಪಾಯ್ವುತಿರ್ದುದು ನಗರ ಪ್ರಾಂತದಾ ಮುಂದೆ ॥ ೫ ॥

---

1-1 ಪೂಜೆ । (ಒ, ಜ, ಟ.) * ಈ ಪದ್ಯಗಳು (ಖ.) ಪ್ರತಿಯಲ್ಲಿಲ್ಲ.

ಆವಾವ ಠಾವಿನೊಳು ಅಮೃತದಾ ಕೊಳನು |
ತೀವಿಪುಷ್ಪದ ವನವು[1] ರಮ್ಯ[1] ವಾಗಿಹವು ॥ ೬ ॥
ಅಂತಪ್ಪ ಪುರದೊಳಗೆ ಅತಿ ವಿರಾಜಿಸುವ |
ಸಂತತಂ ಪ್ರಮಥರಾ ಸಾಹಸವ ನೊರೆವೆ ॥ ೭ ॥
ಕುಂಭಿನೀಧರ ಭರಣ ಕುಶಲವುಳ್ಳವರು |
ಅಂಬರವನೇ ಮುಕುರವಾಗಿ ಪಿಡಿವವರು ॥ ೮ ॥
ಕಾಲದೈತ್ಯರ ಶಿರವ ಕಾಲ್ಗೆ ಧರಿಸುವವರು |
ವ್ಯಾಳಪತಿ ಭೂಷಣವ ನಿಟ್ಟು ಮೆರೆವವರು * ॥ ೯ ॥
ಕಾಲಕರ್ಮಗಳ ಕಲ್ಪನೆ ಇಲ್ಲದವರು | *
ಶೂಲ ಖಡ್ಗವು ಧನುವ ಸೆಳೆದು ಪಿಡಿವವರು ॥ ೧೦ ॥
ಜನನ ಮರಣಗಳೆಂಬ ಜಾಡ್ಯವಿರಹಿತರು |
ಮನಸಿಜನ ಬಾಧೆ ಮನದೊಳಗಿಲ್ಲದಿಹರು ॥ ೧೧ ॥
ಪ್ರತ್ಯಕ್ಷರುದ್ರರಾ ಪ್ರಮಥಮೂರ್ತಿಗಳು |
ಇರ್ದರವರಿಗೆ ಕರ್ತನಿಹಕಾಲರುದ್ರ ॥ ೧೨ ॥
ರತ್ನಗೆಲಸದ ರಮ್ಯ ಸಿಂಹಪೀಠದಲಿ |
ಸತ್ಯದಿಂದಿರ್ಪನಾ ಶಾಶ್ವತದರುದ್ರ ॥ ೧೩ ॥

**ವೃತ್ತ.**

ಕರದೊಳ್ ಖಡ್ಗ ಕಪಾಲ ಶೂಲ ಡಮರುಂ ಫಾಲಾಕ್ಷಿ ಕಂಕಾಳವಾ |
ಶಿರದೊಳ್ ಸಿಂಗರಮುಳ್ಳ ರತ್ನಮುಕುಟಂ ಸರ್ಪಂಗಳಾ ಭೂಷಣಂ |
ಶರೀರಂ ರತ್ನದಕಾಂತಿಯಂತೆ ಪೊಳೆವಾ ಶಾರ್ದೂಲ ಚರ್ಮಾಂಬರಂ |
[2] ಇರುವಂ ಸತ್ ಪ್ರಮಥಾಳಿಗೂಡಿ ನಿರುತಂ ಶ್ರೀಕಾಲ ರುದ್ರೇಶ್ವರಂ [2] ॥ ೧ ॥

ವಚನ ॥ ಅಂತಪ್ಪ ಪ್ರಮಥ ಲೋಕದ ಮಧ್ಯದಲ್ಲಿ ಆ ಮಹಂಮೇರುವಿಗೆ ಈಶಾನ್ಯ ಮುಖವಾಗಿ ಒಪ್ಪುತಿರ್ಪ ರಜತಾಚಲ ಪರ್ವತದ ಶೃಂಗಾರಮಂ ಪೇಳ್ವೆನ ದೆಂತೆನೆ.

**ತ್ರಿವುಡೆ.**

ಶರಧಿಯೊಳು ಉರವಣಿಸಿ ತೋರುವ | ತರಣಿ ಕಿರಣಗಳಂತೆ ಎಸೆವುತ |
ಮೆರೆವುತಿರ್ದವು ಮೀರಿ ಕಿರಣ[3] ವ[3] – ತೋರಿ ದೆಸೆದೆಸೆಗೆ ॥ ೧ ॥

---

1-1 ತೀವ್ರ (ಅ, ಒ, ಟ, ಡ, ತ.) 2-2 ನೆರೆವಿಭ್ರಾಜಿಸೆ ಸಂತತಂ ತ್ರಿಕಾಲ ರುದ್ರೇಶ್ವರಂ ॥ (ಉ, ಖ, ಗ, ಚ, ) 3-3 ವು (ಎ, ಖ, ಗ, ಜ, ಚ,) * ಈ ಪದ್ಯ (ಅ, ಒ, ಡ, ತ, ಬ.) ಪ್ರತಿಗಳಲ್ಲಿಲ್ಲ.

ಆಣಿರತ್ನಗಳೊಳಗೆ ಪೊಳೆವ ಸು । ಪ್ರಾಣಿಯೇ ರೂಪಾಗಿ ಬೆಳೆದುದೊ ।
ಊಣೆಯಿಲ್ಲದ ವಜ್ರವದು ರೂ– ಪಾಗಿ ತೋರಿದುದೊ ॥ ೨ ॥
ಮಲ್ಲಿಗೆಯ ಅರಳಂತೆ ಶುಭ್ರದ । ವಲ್ಲಿಯನು ಮುಸುಕಿಕ್ಕಿದಂದದಿ ।
ಫುಲ್ಲಶರಸತಿ ಸಿತನಪ್ರಭೆಯೊ – ಳೆಲ್ಲ ಕಾಲದೊಳು ॥ ೩ ॥
ಇಂತೆಸೆವ ರಜತಾದ್ರಿಯುನ್ನತ । ಮುಂತೆ ಇಪ್ಪತ್ತೈದು ಸಾವಿರ ।
ಅಂತಗಲ ಹದಿನಾರು ಸಾವಿರ – ದಂತರದಲಿಹುದು ॥ ೪ ॥
ತೋರುವುದು ರಜತಾದ್ರಿಯಗ್ರದಿ । ಮೀರಿಹುದು ಕೈಲಾಸ ಪಟ್ಟಣ ।
ಮಾರಹರ ಪರಶಿವನ ಮಂದಿರ – ಇರುವುದದರೊಳಗೆ ॥ ೫ ॥

ವಚನ ॥ ಇಂತಪ್ಪ ಕೈಲಾಸಪುರದ ಶೃಂಗಾರವೆಂತೆನೆ.

**ಜಂಪೆ.**

ಮುಂದೆ ಕೈಲಾಸಪುರ । ದಂದವನು ಉಸುರುವೆನು ।
ಚಂದದಿಂ ಭಕ್ತಜನ । ವೃಂದ ಮೆಚ್ಚುವರೆ * ॥ ೧ ॥
ಕುಂದ ಮಂದಾರ ಚಂ । ದನವಗಿಲು ಖರ್ಜೂರ ।
ಬಂಧುರದ ನಾಗ ಚಂ । ಪಕದ ವನಪೂರ ॥ ೨ ॥
ರಸದಾಳಿ ಕದಳಿ ಹೇ । ರಿಳೆ ನಿಂಬೆ ದ್ರಾಕ್ಷಿಯು ।
ಕುಸುಮ ತೀವಿದ ವನವು । ರಸಿಕ ನಂದನವು ॥ ೩ ॥
ಕಮಲ ಮು[1] ಡುಕಾ[1] ಸಾರ । ವಿಮಲ ಅಮೃತದಸಾರ ।
ಸುಮನಸರ ಆಹಾರ । ಸುಧೆಯ ರಸಪೂರ ॥ ೪ ॥
ಕಲ್ಪ ವೃಕ್ಷದ ವನವು । ಬಿಲ್ವಪತ್ರೆಯ ಬನವು ।
ಮಲ್ಲಿಗೆಯ ವನ ಮಯವು । ಅಲ್ಲಿ ನಂದನವೂ ॥ ೫ ॥
ಇಂತೆಸೆವ ವನದ[illegible]ಮ । ಧ್ಯದಲೊಪ್ಪುತಿಹುದೊಂದು ।
ಕಂತುಹರ ಶಿವನ ಕೈ । ಲಾಸ ಮಂದಿರವು ॥ ೬ ॥
ಕುಂದಣದ ಕೆಲಸದಿಂ । ಬಂಧಿಸಿದ ರತ್ನದಿಂ ।
ದಿಂದ್ರ ನೀಲದ ಕೋಟೆ । ಚಂದವಾಗಿಹುದು ॥ ೭ ॥
ಮುತ್ತೆ ನವರತ್ನ ಸಾ । ಲೆತ್ತಿ ತೆನೆಗಳ ಮೇಲೆ ।
ಚಿತ್ರ ಕಿರಣಗಳಂತೆ । ಸುತ್ತ ರಂಜಿಸವು ॥ ೮ ॥
ತರಣಿ ಕೋಟಿ ಪ್ರಭೆಯ । ಪುರಕೆ ದ್ವಾರಗಳೆಂಟು ಗೋ ।
ಪುರವು ಎತ್ತಿಮೆರೆದ ವಂ । ಬರ ಸೋಂಕುವಂತೆ ॥ ೯ ॥

* ಈ ಪದ್ಯ (ಖ, ಗ, ಚ. ) ಪ್ರತಿಗಳಲ್ಲಿಲ್ಲ. 1 – 1 ಮಂಡುಕ (ಅ, ಟ, ಡ, ತ, ಬ.)

[1] ಸರಳು [1] ಧನು ಗದೆ ಖಡ್ಗ । ಬೆರಳ ಜಪಮಾಲೆಯಿಂ ।
ಉರವಣಿಸಿ ಕಾಲ ಭೈ । ರವರು ಕಾದಿಹರು ॥ ೧೦ ॥
ಅಷ್ಟ ಭೈರವರು ಬಲು । ದೃಷ್ಟಿಯಿಂದಲಿ ದ್ವಾರ ।
ವಷ್ಟರೊಳು ಕಾದು [2] ಬಹು [2] । ನಿಷ್ಠೆಯಿಂದಿಹರು ॥ ೧೧ ॥
ಶೃಂಗಾರವುಳ್ಳ ದ್ವಾ । ರವ ಪೊಕ್ಕು ನೋಡಲತಿ ॥
ಕಣ್ಗೆ ಮಂಗಳವಾಗಿ । ಕಾಣಿಸುತ್ತಿಹುದು ॥ ೧೨ ॥
ರತ್ನ ಖಚಿತದ ರಮ್ಯ । ರಾಜಮಂದಿರವದಕೆ ।
ಚಿತ್ರಗೆಲಸದ ಮಾಟ । ವಿಸ್ತರಿಸಲಳವೆ ॥ ೧೩ ॥
ಕನಕಮಣಿ ಮಯಕೆಲಸ । ಘನತರದ ಕರುವಾಡ ।
ದಿನಕರನ ಪ್ರಭೆಯಂತೆ । ಮನೆ ಮನೆಗೆ ಇಹವು ॥ ೧೪ ॥
ಚಿತ್ರಗೆಲಸದ ಲೋವೆ । ಕ [3] ಸ್ತು [3] ರಿಯ ಸಾರಣೆಯು ।
ರತ್ನವೆತ್ತಿದ ರಂಗ । ವೋಲೆ ಮನೆ ಮನೆಗೆ ॥ ೧೫ ॥
ಶಶಿ ರವಿಯ ವೀಧಿಯೊಳು । ಕುಸುಮ [4] ವಷ್ಟದ [4] ಗಂಧ ।
ದೆಸೆಯೆಂಟು ಮುಸುಕಿ ಹೊ । ತ್ತಿಸೆವುತಿಹುದಲ್ಲಿ ॥ ೧೬ ॥
ಕಾಮಧೇನುವು ಕಲ್ಪ । ವೃಕ್ಷ ಚಿಂತಾ ಮಣಿಯು ।
ಶ್ರೀ ಮಹಾ ರುದ್ರಗಣ । ದೊಳಗೊಪ್ಪುತಿಹರು ॥ ೧೭ ॥
ಸುರರ ನೆರವಿಗಳಿಂದ । ಪರಮ ಋಷಿ ಕುಲದಿಂದ ।
ವರಪಂಚ ನದಿಯಿಂದ । ಪುರಕೆ ಆನಂದ ॥ ೧೮ ॥
ಶಕ್ತಿ ದೇವತೆಯರಲ್ಲಿ । ಮುಕ್ತಿ [5] ದಾಯಕ [5] ರಲ್ಲಿ ।
ಸತ್ಯ ಶರಣರುಮಲ್ಲಿ । ಮೊತ್ತವಾಗಿಹರು ॥ ೧೯ ॥

ವಚನ ॥ ಅಂತಪ್ಪ ಕೈಲಾಸ ಮಧ್ಯದೇಶದಲ್ಲಿ ಸರ್ವದೇವ ಶಿಖಾಮಣಿ ಯಾದಂಥ ಪರಶಿವಮೂರ್ತಿಯ ಮಹಾ ನಗರ ಒಪ್ಪುತಿರ್ದುದದೆಂತೆನೆ.

**ಏಕತಾಳ.**

ಜ್ಯೋತಿರ್ಮಯದ ಕೋಟೆ । ನೂತನಗೆಲಸ ಖ ।
ದ್ಯೋತನ ಪ್ರಭೆಯಂತೆ । ಪ್ರೀತಿಯಿಂದಿಹುದು ॥ ೧ ॥
ಅಂದ ಚಂದದ ಕೋಟೆ । ಕುಂದಣಗೆಲಸ ಮೇಲೆ ।
ಹೊಂದಿದ ತೆನೆ ಪೂರ್ಣ । ಚಂದ್ರನಂತಿಹುದು ॥ ೨ ॥

---

1–1 ಪರಶು (ಉ, ತ.) 2–2 ಶಿವ (ಖ, ಗ, ಚ.) 3–3 ಸ್ತು (ಎ, ಒ, ಖ, ಗ, ಚ, ಜ, ಟ.) 4–4 ವೃಷ್ಟಿಯ (ಎ, ಖ, ಚ, ಜ, ಟ, ತ.) 5–5 ಕಾಮಿನಿ (ಇ, ಎ, ಒ, ಟ, ದ.)

ಗಂಭೀರವುಳ್ಳ ಕೋಟೆ । ಸಂಭ್ರಮದಿಂದ ಬೆಳೆದು ।
ಅಂಬರದೊಳು ತೆನೆ । ಬಿಂಬಿಸುತಿಹವು ॥ ೩ ॥
ನಾಲ್ಕು ದಿಕ್ಕಿನ[1] ದ್ವಾರ[1] । ನಾಲ್ಕು[2] ಕೋಟೆ[2] ಗಳಿಂದ ।
ನಾಲ್ಕು ಗೋಪುರವೆತ್ತಿ । ಮೇಲೆ ರಂಜಿಪವು ॥ ೪ ॥
ಅತಿನೂತ್ನವತಿಚಿತ್ರ । ಅತಿರಮ್ಯ ಅತಿಗಮ್ಯ ।
ಅತಿಭವ್ಯ ಅತಿಶುಭ್ರ । ಅರ್ಥಿಯಿಂದಿಹುದು ॥ ೫ ॥

ವಚನ ॥ ಅಂತಪ್ಪ ಘನಗೋಪುರದ ದ್ವಾರದಲ್ಲಿ ಕಾಯ್ದಿರುವಂತಹ ಗಣಾಧೀಶ್ವರರಂ ಪೇಳ್ವೆನದೆಂತೆನೆ.

**ದ್ವಿಪದಿ.**

ಶುದ್ಧ ಪೂರ್ವದ ದೆಶೆ[3] ಯ[3] ಸುಲಲಿತ ದ್ವಾರ ।
ಇರ್ದುದು ಋಗ್ವೇದ ವಿಜಯ ಗೋಪುರವು ॥ ೧ ॥
ಶುಭ್ರವರ್ಣದ ಚಿತ್ರ ಸುಶಿರಗೆಲಸದಲಿ ।
ಅಭ್ರ ಛಾಯವದಾಂಟೆ ಅತಿಯೊಪ್ಪುತಿ[4] ಹುದು ॥ ೨ ॥
ಅಂತಪ್ಪ ದ್ವಾರದಲಿ ಅತಿಗಾಯ್ದುತಿರ್ಪ ।
ಸಂತತವು ನಂದೀಶ ಸಕಲ ವಿಭವದಲಿ ॥ ೩ ॥
ಮತ್ತೆ ಭೀಕರವಾದ ವ್ಯೈಗಾವಭಟರು ।
ಉತ್ತಮದ ಕೂಷ್ಮಾಂಡ ಉಚಿತಗಣ ನಿಕರ ॥ ೪ ॥
ಸತ್ಯ ಉಳ್ಳರು ಸಂಖ್ಯೆ ಸಾಸಿರದ ಒಡನೆ ।
ಬೆತ್ತ ಹಸ್ತದಿ ಪಿಡಿದು ನಿತ್ಯಗಾಯ್ದಿರ್ಪ ॥ ೫ ॥
ದಕ್ಷಿಣದ ದೆಸೆಯಿರ್ಪ ಧರ್ಮದ್ವಾರದಲಿ ।
ಅಕ್ಷಯದ ಯಜುರ್ವೇದ ಅಧಿಕ ಗೋಪುರವು ॥ ೬ ॥
ನೀಲವರ್ಣದ ಮಯವು ನಿಲುಕದದು ಮನಕೆ ।
ಮೇಲು ಚಿತ್ರಗಳಿಂದ ಮೆರೆದುದಂಬರದಿ ॥ ೭ ॥
ಅಂತಪ್ಪ ದ್ವಾರದಲಿ[5] ಅತಿಗಾಯ್ದುತಿರ್ಪ[5] ।
ಸಂತತವು ಗಣಸಂಖ್ಯೆ ಸಾಸಿರದ ಒಡನೆ ॥ ೮ ॥
ಮತ್ತೆ ಭೀಕರವಾದ ವ್ಯೈಗಾವಭಟರು ।
ಒತ್ತಿಲಿರ್ದರು ಅಸಂಖ್ಯಾತ ಗಣಕೂಡನೆ ॥ ೯ ॥

---

* ಈ ಪದ್ಯ ( ಖ, ಗ, ಚ. ) ಪ್ರತಿಗಳಲ್ಲಿಲ್ಲ. 1–1 ಕೋಟೆ (ಉ, ಡ, ತ, ಬ.) 2–2 ದ್ವಾರ (ಉ, ಡ, ತ, ಬ.) 3–3 ಯು (ಬ.) 4–4 ಹವು 5–5 ಅಧಿಕರೋಮಜರು (ಅ, ಇ, ಖ, ಚ, ಜ, ಟ. ) * ಈ ಅರ್ಧ ಪದ್ಯ (ಬ.) ಪ್ರತಿಯಲ್ಲಿಲ್ಲ.

ಬಿನುಗು ದೈವದಗಂಡ ಪರಮ ಪ್ರಚಂಡ।
ಘನತರನು ಕಲಿವೀರ ದಿನಗಾಯ್ವನಲ್ಲಿ ॥ ೧೦ ॥

ಪಶ್ಚಿಮದ್ವಾರದಲಿ ಪೊಳೆವ ಗೋಪುರದಿ।
ಸ್ವಚ್ಛ ಸ್ಫಟಿಕದ ವರ್ಣವತಿ ಚಿತ್ರತರವು ॥ ೧೧ ॥

ಸಾಮ ವೇದದ ಮಯವು ಸಕಲ ವಿಭವದಲಿ।
ತಾಮರಸ ಬಾಂಧವನ ಸ್ಥಲವ ಸೋಂಕುವದು ॥ ೧೨ ॥

ಪಶ್ಚಿಮ ದ್ವಾರಮಂ ಪ್ರತಿದಿನವು ಕಾಯ್ವ । *
ಅಷ್ಟರುದ್ರರ ಸಂಖ್ಯೆ ಅಧಿಕರವರೊಡನೆ ॥ ೧೩ ॥

ಸಚ್ಚರಿತನಧಿಕ ಸಾಹಸದಿ ಸಂಪನ್ನ।
ನಿಚ್ಚಲುಂ ಕಾಯ್ವ ನೀಲಲೋಹಿತ ಗಣೇಶ। ॥ ೧೪ ॥

ಉತ್ತರದ ದ್ವಾರವುನ್ನತದ ಗೋಪುರವು।
ಅತ್ಯಂತ ಚಿತ್ರದಿಂದಥರ್ವಣ ವೇದಮಯವು ॥ ೧೫ ॥

ಕುಂಕುಮದ ವರ್ಣದಿಂ ಕುಶಲದಿಂ ಬೆಳೆದು।
ಪಂಕಜದ ಮಿತ್ರನಾ ಪದವ ಸೋಂಕುವದು ॥ ೧೬ ॥

ಅತ್ಯಂತ ಪ್ರಮಥರು ಅವರು ಸಂಖ್ಯೆಯಲಿ।
ಮತ್ತೆ ಬಡಗಲಗಾಯ್ವ ಮಹ ಕಾಳರುದ್ರ ॥ ೧೭ ॥

ಅಂತಪ್ಪ ರುದ್ರಗಣರಧಿಕ ಓಲಗದಿ।
ಸಂತತವು ದ್ವಾರಮಂ ಪೊಂದಿ ಕಾಯ್ದಿಹರು ॥ ೧೮ ॥

**ಕಂದಪದ್ಯ.**

ಇಂತಪ್ಪ ಚತುರ್ದ್ವಾರಂ ।
ಸಂತತ ಒಳಪೊಕ್ಕು ನೋಡೆ ಸಕಲ ಸುವಿಭವಂ ॥
ಕಂತುಹರನ ಸಿಂಹಾಸನ ।
ದಂತಸ್ಥದಿ ಮೆರೆವ ಹರನ ಸಭೆಯಂ ನುತಿಸೆಂ ॥ ೧ ॥

ವಚನ ॥ ಇಂತಪ್ಪ ಸರ್ವೇಶ್ವರನ ಸಭಾ ಮಂಟಪದ ಸಂಭ್ರಮವಂ ಪೇಳ್ವೆನದೆಂತೆನೆ.

**ಜಂಪೆ.**

ಚಿತ್ರ ಕೂಟದ ಸಾಲು। ಮತ್ತೆ ಹರ್ಮ್ಯದ ಸಾಲು।
ರತ್ನಗೆಲಸದ ರಾಜ। ಮಂದಿರದ ಸಾಲು ॥ ೧ ॥

---

* ಈ ಅರ್ಧ ಪದ್ಯ (ಅ, ಇ, ಉ, ಖ, ಗ, ಚ, ಜ, ತ, ಬ.) ಪ್ರತಿಗಳಲ್ಲಿಲ್ಲ.

ಕನಕ ಗಿರಿಯಂತೆಸೆವ । ಘನತರದ ಕರುವಾಡ ।
ಇನನ ಕಳೆಯಂತೊಪೆದು । ಗಗನ ಸೋಂಕುವುದು ॥ ೨ ॥

ಅಂತಪ್ಪ [1] ಪ್ರಮಥ [1] ಪುರ । ಮಧ್ಯದಾ ದೆಸೆಯಲ್ಲಿ ।
ಕಂತುಹರ ಪರಶಿವನ । ಸಿಂಹಾಸನವು ಇಹುದು ॥ ೩ ॥

ಕೋಟಿಸೂರ್ಯರ ಪ್ರಭೆಗೆ । ಮಿಾಟೆನಿಸಿ ಮೆರೆವದದು ।
ನೋಟಕರಿಗಿಂಬಾಗಿ । ಪಾಟಿಯಿಂದಿಹುದು ॥ ೪ ॥

ಮಾರಹರ ಪರಶಿವನು । ಏರುತಿಹ ಗದ್ದುಗೆಗೆ ।
ಸೇರಿ ಮೆರೆವಾ ರತ್ನ । ಸೂರ್ಯನಂತಿಹುದು ॥ ೫ ॥

ಚಿತ್ರ ಚಿತ್ರದಮಾಟ । ರತ್ನ ಗೆಲಸಗಳಿಂದ ।
ಮತ್ತೆ ಸಹಸ್ರಯೋಜನ । ವಿಸ್ತರದೊಳಿಹುದು ॥ ೬ ॥

ಎಂಟು ಮೂಲೆಯು ಅದಕೆ । ಎಂಟು ಮೂರ್ತಿಗಳುಂಟು ।
ಎಂಟೆಸಳ ಕಮಲದಿಂ । ಟೆಂಟಣಿಸುತಿಹುದು ॥ ೭ ॥

ವಚನ ॥ ಅಂತಪ್ಪ ರತ್ನಖಚಿತ ಮಯವಾಗಿ ಸೂರ್ಯ ಕಿರಣದಂತೆ ಪ್ರಜ್ವಲಿಸುತ್ತ, ಧರ್ಮಸಿಂಹಾಸನಕ್ಕೆ ಎಂಟು ಮೂರ್ತಿಗಳು, ಎಂಟು ಪಾದವಾಗಿ ತೋರುತಿರ್ದರವೆಂತೆನೆ.

**ಏಕತಾಳ-ಅರ್ಧರೇಕು.**

ಇಂದ್ರ ದೆಸೆಯೊಳು ಧರ್ಮ ಉ – ಪೇಂದ್ರನಂತಿಹುದು ।
ದೆಸಯಗ್ನಿಯಲಿ ಧರ್ಮ – ವೃಷಭನಂತಿಹುದು ॥ ೧ ॥

ಪ್ರಕಟ ಯಮನಲಿ ಧರ್ಮ – ವಿಕಟ ರೂಪಿಹುದು ।
ಅಂತು ನೈಋತ್ಯನಲ್ಲಿ – ಶಾಂತಿ ರೂಪಿಹುದು ॥ ೨ ॥

ಸತ್ಯದಿಂ ವರುಣನೊಳು – ರುದ್ರರೂಪಿಹುದು ।
ಮರುತನೊಳ್ಮದ ಸೊಕ್ಕಿ – ದಾನೆಯಂತಿಹುದು ॥ ೩ ॥

ಸಕಲ ಕೌಬೇರನೊಳು – ವಿಕೃತ ರೂಪಿಹುದು ।
ಈಶಾನ್ಯನೊಳೀಶ್ವರ – ವಿಶ್ವರೂಪಿಹುದು ॥ ೪ ॥

ವಚನ॥ ಇಂತಪ್ಪ ಸಿಂಹಾಸನದ ಮಧ್ಯದಲ್ಲಿ ಅಷ್ಟದಳ ಕಮಲವುಂಟು. ಆ ಅಷ್ಟದಳ ಕಮಲಂಗಳಲ್ಲಿ ಅಷ್ಟಮಹದೈಶ್ವರ್ಯವುಂಟು ಅದೆಂತೆನೆ :—

1-1 ಕೈಲಾಸ (ಒ, ಖ.) * ಈ ಪದ್ಯಗಳು (ಖ, ಗ, ಚ,) ಪ್ರತಿಗಳಲ್ಲಿಲ್ಲ.

**ಶ್ಲೋಕ** || ವಿಭೂತಿರ್ಖ್ಯಾತಿರೈಶ್ವರ್ಯ ಮಣಿಮಾಧಿಕ ಮಷ್ಟಧಾ |
ಅಣಿಮಾ ಮಹಿಮಾ ಚೈವ ಗರಿಮಾ ಲಘಿಮಾ ತಥಾ ||
ಪ್ರಾಪ್ತಿಃ ಪ್ರಾಕಾಮ್ಯ ಮೀಶತ್ವಂ ವಶಿತ್ವಂ ಚಾಷ್ಟಭೂತಯಃ ||

ಟೀಕು || ಎಂಬುದಾಗಿ :— ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯಂ, ಈಶತ್ವಂ, ವಶಿತ್ವಂಗಳು ಅಷ್ಟದಳ ಕಮಲಂಗಳಲ್ಲಿ ಅಷ್ಟ ಮಹದೈಶ್ವರ್ಯವ! ನಿಂಬುಗೊಂಡು ಮತ್ತಂ, ಮಧ್ಯಪೀಠದಲ್ಲಿ ಒಪ್ಪುತಿರ್ಪ ಚೌದಳಂಗಳಲ್ಲಿ ನೆಲಸಿರ್ದ ಚತುರ್ವಿಧ ಪದವಿ ಆವಾವೆಂದೊಡೆ:—

**ಶ್ಲೋಕ** || ಸಾಲೋಕ್ಯಂಚ ಸಾಮೀಪ್ಯಂಚ ಸಾರೂಪ್ಯಂಚ ಸಯುಜ್ಯಕಂ |
ಚತುರ್ದಳೇನ ಚೇಶತ್ವಂ ಶಿವಪೀಠ ಸ್ಸ ಉಚ್ಯತೆ ||

ಟೀಕು || ಎಂಬುದಾಗಿ :—ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯಗಳೆಂಬ ಚತುರ್ವಿಧ ಪದವಿಯನಂಗೀಕರಿಸಿ, ಒಪ್ಪುತಿರ್ದ ಸಿಂಹಪೀಠದ ಮಧ್ಯದಲ್ಲಿ ಮೂರ್ತಗೊಂಡಿರ್ದ ಪರಶಿವಮೂರ್ತಿಯ ನಿಜಸ್ವರೂಪಮಂ ಪೇಳ್ವೆನದೆಂತೆನೆ.

## ವೃತ್ತ.

ಕರದೊಳ್ ಬ್ರಹ್ಮಕಪಾಲ ಶೂಲ ಡಮುರುಂ ವರ ಖಡ್ಗ ವಜ್ರಾಂಕುಶಂ |
ಪರಶುಂ ಪಾಶ ಫಣೀಂದ್ರ ಕಂಕಣಕರಂ ಹರಿಣಾಭಯಂ ಹಸ್ತದಿಂ ||
ಶಿರದೊಳ್ ಸಿಂಗರಗಂಗೆ ಚಂದ್ರಮುಕುಟಂ ಉರಿಗಣ್ಣು ಶೀರ್ಷಂಗಳಿಂ ||
ಹರನಿರ್ದಂ ಹರಿಪೀಠದಲ್ಲಿ ನಿರುತಂ ಸಹ ರುದ್ರರಿಂದೊಪ್ಪುತಂ * || ೧ ||
ಕರಿಯಾ ಕೇಸರಿ ವ್ಯಾಘ್ರ ಚರ್ಮ ಪೊದೆದುಂ ಪರಶಕ್ತಿ ವಾಮಾಂಗದಿಂ |
ಕರದೊಳ್ ಶೂಲದಿಕಾಣ್ಬುದೊಂದು ಕುಣಪಂ ನೆರೆಗ್ರೀವದೊಳ್ ಕಂಜದಿಂ |
ಶರಿರಂ ಶಾಶ್ವತ ಶುಭ್ರದ ಶ್ಮಸದೃಶಂ ಸಲೆದಿವ್ಯ ತೇಜಾಂಗದಿಂ |
ಹರಿಬ್ರಹ್ಮಾದಿ ಸುರೇಂದ್ರ ಮಧ್ಯದೆಡೆಯೊಳ್ ನಿರುತೊಪ್ಪಿದಂ ಶಂಕರಂ * || ೨ ||

## ಮೂರ್ತಿಧ್ಯಾನವೃತ್ತ.

ಶಾಂತಂ ಪದ್ಮಾಸನಸ್ಥಂ ಶಶಿಧರಮುಕುಟಂ ಪಂಚವಕ್ತ್ರಂ ತ್ರಿನೇತ್ರಂ |
ಶೂಲಂ ವಜ್ರಂಚಖಡ್ಗಂ ಪರಶುಮಭಯದಂ ದಕ್ಷಭಾಗೇ ವಹಂತಂ ||
ನಾಗಂ ಪಾಶಂಚ ಘಂಟಾಂ ಪ್ರಳಯಹುತವಹಂ ಸಾಂಕುಶಂ ವಾಮಭಾಗೇ |
ನಾನಾಲಂಕಾರಯುಕ್ತಂ ಸ್ಫಟಿಕಂ ಮಣಿ ನಿಭಂ ಪಾರ್ವತೀಶಂ ನಮಾಮಿ || ೧ ||

---

* ಈ ವೃತ್ತಗಳು (ಎ, ಗ, ಚ.) ಪ್ರತಿಗಳಲ್ಲಿಲ್ಲ.

ವಚನ || ಶ್ರೀ ಮಹಾದೇವನಾದ ಪರಶಿವಮೂರ್ತಿ ಎಂತಿರ್ದನು ಎಂದಡೆ:- ತಾನೆ ಅರಸು, ತನ್ನ ಪಟ್ಟದರಾಣಿಯೆ ಮಹಾಶಕ್ತಿ, ಕುಮಾರನೇ ಸೇನಾಪತಿ, ಶ್ರೀ ಮಹಾ ವಿಷ್ಣುವೇ ಮಂತ್ರಿ, ಪುರೋಹಿತನೇ ಬ್ರಹ್ಮ, ಸೇನಾಧಿಪತಿಯೇ ಇಂದ್ರ, ಪುರ ರಕ್ಷಕನೇ ಯಮ, ಅಪ್ಸರ ಸ್ತ್ರೀಯರೇ ನೃತ್ಯಾಂಗನೆಯರು, ಚಂಡಕೀರ್ತಿಗಳೇ ಕೀರ್ತಿಸುವವರು. ಪ್ರಮಥ ರುದ್ರಾದಿಗಳೇ ವೈಗಾವಲು, ಈ ರೀತಿಯಲ್ಲಿ ಸಕಲ ಬ್ರಹ್ಮಾಂಡದರಸು ತಾನಾಗಿ ಒಪ್ಪುತಿರ್ದಂತಹ ! ಪರಶಿವಮೂರ್ತಿಯ ಓಲಗದ ಸಂಭ್ರಮಮಂ ಪೇಳ್ವೆನದೆಂತೆನೆ.

**ತ್ರಿವುಡೆ.**

ಕರಿ ಮುಖ[1] ರು[1] ಕರಾಳ ಭೈರವ | ರುರುತರದ ಪ್ರಮಥಾದಿ ರುದ್ರರು |
ಹರನ ಬೆನ್ನೊತ್ತಿನಲಿ ಇರ್ದರು – ರುದ್ರ ಕೋಟಿಯಲಿ || ೧ ||

ಕರದ ಚಕ್ರದ ಕಾಲ ರೌದ್ರದ | ಗರುಡ ವಾಹನ ಗದೆಯ ಶಂಖದ |
ಲಿರುತಿಹರು ಎಡದಲ್ಲಿ ಲಕ್ಷ್ಮೀ – ಶ್ವರರು ಕೋಟಿಯಲಿ || ೨ ||

ಕರದ ಪಾಶ ಕಮಂಡಲವು ದಂಡ | ಬೆರಳ ಜಪಮಾಲೆಯು ಚತುರ್ಮುಖ |
ಸರಸ್ವತಿಯು ಸತಿ ಹಂಸವಾಹನ – ದವರು ಕೋಟಿಯಲಿ || ೩ ||

ಪರಮ ಋಷಿ ಪರಮಾತ್ಮ ಜ್ಞಾನದ | ಉರುತರದ ನವ ಬ್ರಹ್ಮರೊಂದಿಲಿ |
ಇರುತಿಹರು ಪಿತಾಮಹರನೇಕದಿ – ಬಲದ ಭಾಗದಲಿ || ೪ ||

ಮಾರ ಹರ ಸ್ತುತಿ ಮಾಪ್ಪ ವೇದ ಕೈ | ವಾರಿಸುವ ಚತುರ್ದಶದ ಮನುಗಳು |
ಸಾರ ಗಂಧದ ಕುಸುಮ ವೃಷ್ಟಿಯ – ಗರೆವ ಖೇಚರ[2] ರಿಂ[2] || ೫ ||

ಯಕ್ಷ ರಾಕ್ಷಸ ಗರುಡ ಗುಹ್ಯಕ | ರಕ್ಷ ಗಂಧರ್ವಾದಿ ಸಿದ್ಧರು |
ಮೋಕ್ಷ ಕನ್ನೆಯರೊಪ್ಪಿದರು ನಿಟಿ – ಲಾಕ್ಷನೋಲಗದಿ || ೬ ||

ಖ್ಯಾತಿ ಧೃತಿ ಸಂಭೂತಿ ಅನುಸೂಯೆ | ಕ್ರಾತಿ ಪ್ರೀತಿ ಪ್ರಸೂತಿಯರುಂಧತಿ |
ಮಾತೆ ಕ್ಷಮೆ ದಮೆ ಮನ್ಮತಿ ಏಕಾದಶ – ಪತಿವ್ರತೆಯರೊಡನೆ || ೭ ||

ಪ್ರೀತಿಯಲಿ ಹರಕೆಯನು ಕೊಂಬುತ | ಜಾತಿ ಮಾತೃಕೆ ಶಚಿ ಸರಸ್ವತಿ |
ಆತು ಪರಿಚರಿಯಲ್ಲಿ ಶಿವ ಸ – ನ್ನಿಧಿಯೊಳೊಪ್ಪುವರು || ೮ ||

ಸಕಲ ಮಂತ್ರಕೆ ಮಾತೆಯೆನಿಸುವ – ಸಾವಿತ್ರಿ ಗಾಯತ್ರಿಯರಿಂ |
ಅಖಿಳ ಯೋಗಿಣಿ ಜೋಗಿಣಿಯರಿಂ – ದಧಿಕ ಶಕ್ತಿಯರಿಂ || ೯ ||

ಶಶಿ ರವಿಯ ಸಂದಣಿಗಳಷ್ಟಾ | ವಸು ಫಣೀಂದ್ರ ಪಿಶಾಚ ಕಿನ್ನರ |
ಅಸಮಗಣ ಶ್ರೀ ರುದ್ರಪ್ರಮಥರ – ತಿಂಥಿಣಿಯು ಕೂಡಿ || ೧೦ ||

1-1 ನು (ಇ, ಖ, ಜ.) 2-2 ರು (ಒ, ಖ, ಗ, ಚ, ಜ, ಟ.)

ಇಂದ್ರ ಅಗ್ನಿಯು ಯಮನು ನೈಋತಿ । ಮುಂದೆ ವರುಣ ವಾಯವ್ಯ ಧನಪತಿ ।
ಹೊಂದಿರುವ ಈಶಾನ್ಯ ದಿಕ್ಪಾ – ಲಕರ ಸಂದಣಿಯೂ ॥ ೧೧ ॥

ಸಾಲು ಚಿತ್ರದ ಸಕಲ ವಿಭವದ । ಆಲವಟ್ಟದ ಅತಿ ವಿಚಿತ್ರದ ।
ಮೇಲು ಗೆಲಸದ ಮೆರೆವ ನಂದಿಯ – ಧ್ವಜದ ಸಂಭ್ರಮದ ॥ ೧೨ ॥

ಒಂದುದೆಸೆ ತುಂಬುರರ ಗಾನವು । ಒಂದುದೆಸೆ ಭೃಂಗಿಯ ವಿನೋದವು ।
ಒಂದುದೆಸೆ ಮುನಿವೃಂದ ಶೃತಿ ಸ್ಮೃತಿ – ವೇದ ಘೋಷಣೆಯು ॥ ೧೩ ॥

ಆಟ ಪಾಟವು ಅತಿ ವಿನೋದವು । ನೋಟಕಚ್ಚರಿ ಭೃಂಗಿನಾಟ್ಯವು ।
ಮಾಟುತಿಹ ವೀಣಾದಿ ತಾಳ – ಮೃದಂಗ ಡಿಂಡಿಮದ * ॥ ೧೪ ॥

ಗಂಧ ಕಸ್ತುರಿ ಕುಸುಮ ಸೌರಭ । ದಿಂದಲೆಸೆವತಿ ಧೂಪ ಧೂಮಗ ।
ಳಿಂದ ಮೊಳಗುವ ದೇವ ದುಂದುಭಿ – ಸಕಲ ವಾದ್ಯಗಳಿಂ ॥ ೧೫ ॥

ನಂದಿ ನಾಲುಕರಿಂದ ನೃತ್ಯದ । ಇಂದು ಮುಖಿಯರು ಅಪ್ಸರಾಂಗನೆ ।
ರಿಂದಲೊಪ್ಪಿತು ಶಿವನ ಓಲಗ – ಸಕಲ ಸಂಭ್ರಮದಿ ॥ ೧೬ ॥

**ಶಾರ್ದೂಲ ವಿಕ್ರೀಡಿತ ವೃತ್ತ.**

ಬ್ರಹ್ಮಾತ್ತಾಳ ಕರೋಹರಿಃ ಪಟಹವಾನ್ ವೀಣಾಕರೀ ಭಾರತೀ ।
ವಂಶಜ್ಞೌ ಶಶಿಭಾಸ್ಕರೌ ಧ್ವನಿಧರಾಶ್ಶಿವಾಪ್ಸರಃ ಕಿನ್ನರಾಃ ॥
ಗೀತಂ ತುಂಬುರ ಗಾನ ಮಿಶ್ರಿತ ಮೃದಂಗಂ ನಂದಿನಾ ಸುಸ್ತುತಂ ।
ಶಂಭೋರ್ನೃತ್ಯಕರಸ್ಯ ಭಾವನಟನಂ ನಾಟ್ಯಂ ಸದಾ ಪಾತುವಃ ॥ ೧ ॥

ವಚನ ॥ ಎಂಬುದಾಗಿ :—ವಿಷ್ಣು ಯಶೋ ವಿನೋದದಿಂದ, ಬ್ರಹ್ಮತಾಳ ಕರದಿಂ, ಸರಸ್ವತಿ ವೀಣಾ ಸ್ವರದಿಂ, ಸೂರ್ಯ ಚಂದ್ರಾದಿಗಳು ನಾಗಸ್ವರ ನಾದಂಗಳಿಂ, ಸಿದ್ಧರು ಶಂಖ ನುಡಿಸುತ್ತಂ, ಅಪ್ಸರರು, ಕಿನ್ನರರು ದಂಡಿಗೆ ಮೊದಲಾದ ಕಿನ್ನರೀ ವಲ್ಲಕಿಗಳನಾದಂಗಳಿಂ, ತುಂಬುರರು ಗಾನ ವಿದ್ಯವಂ ಪಾಡುತ್ತಂ, ನಂದೀಶ್ವರಂ ಲಲಿತ ಗೀತತಾಳ ಭರತ ಕಟ್ಟಳೆಯಲ್ಲಿ ಮದ್ದಳೆಯಂ ನುಡಿಸುತ್ತಲು, ಆ ಪರಶಿವಮೂರ್ತಿಯ ನಿಜ ಸ್ವರೂಪವಾದ ಭೃಂಗೀಶ್ವರ ನಾಟ್ಯವಿನೋದದಿಂದ, ನಟಿಸುತ್ತಾ ಒಪ್ಪಿರುವ ಶಿವನ ಓಲಗದ ಹೊರ ವಳಯದಲ್ಲಿ ಒಪ್ಪುತಿರ್ದಂಥ, ಮಹಾ ರುದ್ರಗಣಂಗಳ ಸನ್ನಾಹವಂ ಪೇಳ್ವೆನದೆಂತೆನೆ.

**ಅಟತಾಳ.**

ಮುಂದೆಸೆವ ಮುಖಶಾಲೆಯೋಲಗ । ವೃಂದಗಣಕೇ ಅಧಿಪತಿ ।
ನಂದಿಯೂ ಮಹಂಕಾಳ ಭೃಂಗಿಯು – ಹೊಂದಿಯಿಹರು ॥ ೧ ॥

---

* ಈ ಪದ್ಯ (ಇ, ಖ, ಗ, ಚ.) ಪ್ರತಿಗಳಲ್ಲಿಲ್ಲ.

ಉಂಟು ಒಬ್ಬೊಬ್ಬರಿಗೆ ಬೆನ್ನಲಿ । ಎಂಟು ಕೋಟಿ ಪ್ರಮಥರು ।
ಟೆಂಟೆಣಿಸಿ ನಿಂದಿಹರು ಗಣಸಭೆ— ಜಂಟಿಯಾಗಿ ॥ ೨ ॥

ನಂದಿ ಗಣಸಭೆ ಹಿಂದೆಯೊಪ್ಪುವ । ವೃಂದ ಈಶ ಕಿರೀಟಿ ಇಬ್ಬರು ।
ಚಂದ ಗಣಸಭೆಯೊಳಗೆ ಕೋಟಿಗ— ಳಿಂದಲಿಹರು ॥ ೩ ॥

ಉಂಟವರ ಬೆನ್ನೊತ್ತಿನಲಿ ಒಬ್ಬ । ಘಂಟಾ ಕಾಲ ರುದ್ರನು ।
ಎಂಟು ಕೋಟಿ ಗಣರೊಡನೆ ಗಜರಿಪು— ಕಂಠೀರವನೂ * ॥ ೪ ॥

ಇನ್ನವರ ಬೆನ್ನೊತ್ತಿನಲಿ ಗಜ । ಕರ್ಣನೆನಿಪಾ ರುದ್ರನು ।
ಉನ್ನತದ ನಾಲ್ಕರ್ಬುದದ ಗಣ— ಸನ್ನಿಧಿಯೊಳೂ ॥ ೫ ॥

ಮತ್ತವರ ಬೆನ್ನೊತ್ತಿನಲಿ । ಸತ್ಯಘೋಷ ದಂಡಿ ಈರ್ವರು ।
ಉತ್ತಮದ ಗಣ ಸಂಖ್ಯೆಯೊಡನತಿ— ಸ್ವಸ್ಥಿರವೊಳು ॥ ೬ ॥

ಅಸಮ ಗಣರಿಹ ಹಿಂದುಗಡೆಯಲಿ । ವೃಷಭ ಕೇತುವು ರುದ್ರರು ।
ಸಸಿನೆ ಗಣ ಮೂವತ್ತು ಪದ್ಮದ— ಲೆಸೆವುತಿಹರು ॥ ೭ ॥

ಆ ಶರಣರಿಹ ಹಿಂದುಗಡೆಯಲಿ । ಈಶನೆಂಬಾ ರುದ್ರನು ।
[1] ಭಾಸುರದ ಗಣ ಪದ್ಮ ಸಹಿತ ವಿ— ಲಾಸದಿಂದಂ [1] ॥ ೮ ॥

ಇಂತೆಸೆವ [2] ಹನ್ನೊಂದು [2] ರುದ್ರರ । ನಂತ ಗಣರಾವೊಂದಿಲಿ ।
ಅಂತು ನಂದೀಶ್ವರನ ನುಡಿ [3] ಯೊಳು— ಸಂತತಿಹರು [3] ॥ ೯ ॥

ವಚನ ॥ ಇನ್ನು ದಕ್ಷಿಣ ಮುಖದ ಓಲಗಮಂ ಪೇಳ್ವೆನದೆಂತೆನೆ.

**ಜಂಪೆ.**

ದಕ್ಷಿಣೋಲಗಕೆ ಪ್ರ । ತ್ಯಕ್ಷ ಚತುರ್ಮುಖ ಬ್ರಹ್ಮ
ಲಕ್ಷ ಋಷಿಗಳು ಶಿವ । ಕಟಾಕ್ಷದಿಂದಿಹರು ॥ ೧ ॥

ಶಿವ ಸಹಸ್ರದ ನಾಮ । ಶೈವ ಮಂತ್ರಗಳಿಂದ ।
ಭವ ಹರನ ನುತಿಗೈವ । ತವೆ ನಾಲ್ಕು [4] ವೇದ [4] ॥ ೨ ॥

ಶಿವ ಋಷಿ ಸಮೂಹದಿಂ । ನವ ಬ್ರಹ್ಮ ಪುತ್ರರಿಂ ।
ಭವ ಹರನ ಧ್ಯಾನದೊಳು । ತವೆ ರಾಜಿಸುವರು ॥ ೩ ॥

ಪದ್ಮಾಸನವ ಬಲಿದು । ರುದ್ರಜಪ ಸರವಿಡಿದು ।
ಅಧ್ಯಾತ್ಮ ಜ್ಞಾನದಲಿ । ಬದ್ಧರಾಗಿಹರು ॥ ೪ ॥

---

* ಈ ಪದ್ಯ (ಇ, ಖ, ಗ,, ಚ.) ಪ್ರತಿಗಳಲ್ಲಿಲ್ಲ. 1-1 ವಾಸಿಗಣ ಮುವತ್ತು ಪದ್ಮದ ಲೇಸರೊಡನೆ (ಅ, ಇ, ಉ, ಒ, ಖ, ದ, ಬ.) 2-2 ಘನಮುಹಿಮ (ಇ, ಒ, ಖ, ಗ, ಚ.) 3-3 ಯಲಿ—ಪಂತಿಗೂಡಿ ॥ (ಇ, ಎ, ಒ, ಖ, ಗ, ಚ.) 4-4 ಮುಖದಿಂದ (ಇ, ಒ, ಖ.)

ಇಂತೆಸೆವ ಬ್ರಹ್ಮಸಭೆ | ತಿಂಥಿಣಿಯ ಬೆನ್ನಿನಲಿ |
ಕಂತು ಹರ ಗಣ ನಿಕರ | ಸಂತಸದೊಳಿಹರು || ೫ ||

ಕಾಲಾಗ್ನಿರುದ್ರ ಕಲಿ | ವೀ[1] ರಪಿನಾಕಿಯೆತಿ[1] |
ಕಾಲ ಕಂಠಗ್ರೀವ | ಕರಾಳರಲ್ಲಿಹರು || ೬ ||

ನೇತ್ರದಿ ಕರಾಳಮುಖ | ಸ್ತೋತ್ರದಿ ಕರಾಳಕಚ |
ಘಾತ್ರದಿ ಕರಾಳ | ತ್ರಿ ನೇತ್ರರಲ್ಲಿಹರು || ೭ ||

ಅಂಡಾಧಿ ನಾಯಕರು | ರುಂಡ ಮಾಲಾಧರರು
ಖಂಡೇಂದು ಧರನ | ಕಾರುಣ್ಯವುಳ್ಳವರು || ೮ ||

ಕೇಶ[2] ಕರಾಳರೂ | ವಿಶ್ವಮಾಲಾಧರ[2] ರು |
ಈಶ ಧ್ಯಾನದಲಿ ಸಂ | ತೋಷದಿಂದಿಹರು || ೯ ||

ಕಾಲಾಂತಕನು ಲಕು | ಲೀಶ ಮಯೂರನು |
ಬಾಲ ಚಂದಿರಧರನ | ಒಲುಮೆಯಿಂದಿಹರು || ೧೦ ||

ಇಂತು ಮುಖ್ಯವಾದ | ಹದಿನೆಂಟು ರುದ್ರಗಣರು |
ತಿಂಥಿಣಿಯ ಸಂಭ್ರಮದ | ಪಂತಿವಿಡಿದಿಹರು || ೧೧ ||

ಅಂತವರ ಬೆನ್ನಿ[3] ನಲಿ[3] | ಅಸಂಖ್ಯಾತ ರೋಮಜರು |
ಮುಂತೆ ಪಿನಾಕಿ[4] ಕಾಲ[4] | ಕಂಠರೊಡನಿಹರು || ೧೨ ||

ಅಗ್ನಿ ಕರಾಳ ಜಿ | ಹ್ವಾಗ್ನಿ ಸುಕರಾಳ ಮು |
ಖಾಗ್ನಿಕರಾಳ ರ | ತ್ಯುಗ್ರರಲ್ಲಿಹರು || ೧೩ ||

ಇಂತು ಪೇಳಿದ ರುದ್ರ | ರಂತೊಬ್ಬರೊಬ್ಬರಾ |
ನಂತ ಗಣ ಪ್ರಮಥರೊಳು | ಸಂತತಿಹರಲ್ಲಿ || ೧೪ ||

ವಚನ || ಈ ರೀತಿಯಲ್ಲಿ ದಕ್ಷಿಣಮುಖದ ಓಲಗ ಒಪ್ಪಿರಲು, ಪಶ್ಚಿಮಮುಖದ ಓಲಗಮಂ ಪೇಳ್ವೆನದೆಂತೆನೆ.

**ಏಕತಾಳ.**

ಪಶ್ಚಿಮದ ದೆಸೆಯಲ್ಲಿ | ಪಾಶುಪತಾಸ್ತ್ರ ಮೂರ್ತಿ |
ಉತ್ಸಾಹಗಣ ಸಂಖ್ಯೆ | ಉಚಿತದಿಂದಿಹನು || ೧ ||

ಪುರಹರನಿದಿರೊಳು | ಕರಗಳ ಮುಗಿದತಿ |
ಪರಮ ಸುಜ್ಞಾನದಿಂ | ದಿರುವನರ್ಥಿಯಲಿ || ೨ ||

---

1-1 ರನು ವಿನಾಯಕ | (ಇ, ಒ.) 2-2 ದಿಕರಾಳ ರಘು | ನಾಶನ ಮಹಾಗಣ | (ಇ, ಒ, ಖ, ಗ.) 3-3 ನೊಳು(ಇ, ಉ, ಒ, ಖ.) 4-4 ಕರ | (ಇ, ಉ, ಎ, ಒ, ಗ.)

ದಂಡಧರನುದ್ದಂಡ । ಪಾದಂಡ ಬಾಹು ಪ್ರ
ಚಂಡ ಕಾರ್ಯೋ ಪ್ರಚಂಡೋ । ದ್ದಂಡರಲ್ಲಿಹರು ॥ ೩ ॥

ಅಂತೊಬ್ಬರೊಬ್ಬರ । ನಂತ ಗಣಂಗಳು ।
ಸಂತತವು ಬೆನ್ನ[1] ಹಿಂದೆ[1] । ನಿಂತು ಕಾದಿಹರು ॥ ೪ ॥

ಮತ್ತವರ್ಗೊಡಿ ಮನೋ । ನ್ಮನದ ಪ್ರಮಥರು ।
ಸತ್ಯ ಸುಮನ ಸರ್ವ । ಭೂತದಯಾನ್ವಿತರು ॥ ೫ ॥

ಪರ ಬಲ ಜಯ[2] ವಿ । ತರಣ ರುದ್ರರು[2] ಕೂಡಿ ।
ಇರುತಿಹರು ಪ್ರಮಥರು । ಗಣಸಂಖ್ಯೆಯೊಡನೆ ॥ ೬ ॥

ಇಂತು ಶಕ್ತಿ ಸಮೇತ । ರಂತು ಹನ್ನೊಂದು ಗಣ ।
ತಿಂಥಿಣಿಯು ವರುಣದೆಸೆಯ । ನಂತವೊಪ್ಪಿಹರು ॥ ೭ ॥

ವಚನ ॥ ಇನ್ನು ಬಡಗಲದೆಸೆಯ ಓಲಗಮಂ ಪೇಳ್ವೆನದೆಂತೆನೆ.

**ತ್ರಿವುಡೆ.**

ಉತ್ತರದ ದೆಸೆಯಲ್ಲಿ ಒಪ್ಪುವ । ವಿಸ್ತರದ ಒಡ್ಡೋಲಗದ ಮು ।
ಹತ್ವ ಪದ ಸಂಭ್ರಮವ ಕೇಳ್ವುದು – ಸುಸ್ಥಿರದಿ ಜನರೂ ॥ ೧ ॥

ಕಾಳ[3] ಮೇಘದವೊಡ್ಡಿನಂದದಿ[3] । ನೀಲವರ್ಣದ ಮಯಶರೀರದ ।
ಕಾಲ ಚಕ್ರದ ಗದೆಯ ಶಂಖ – ಕಿರೀಟ ಕೌಸ್ತುಭದ ॥ ೨ ॥

ಮಕರ ಕುಂಡಲ ಮಯ ಕಿಂಟದ । ಸಕಲ ಸಿರಿ ಶಾರ್ಙ್ಗಿಯು ಚತುರ್ಭುಜ ।
ಪ್ರಕಟಿಸುವ ಸಾಹಸ್ರ ನಾಮದ – ಜಪ ಸಮಾಧಿಯಲಿ ॥ ೩ ॥

ತನ್ನ[4] ಬಿರುದಿನ ತತ್ವಜ್ಞಾನದ[4] । ಭಿನ್ನವಿಲ್ಲದ ಬಿರಿದು ವೊಪ್ಪುವ ।
ಉನ್ನತದ ಸೌಭಾಗ್ಯವೆತ್ತಿದ – ನೇಕ ವಿಷ್ಣುಗಳೂ ॥ ೪ ॥

ಇಂದ್ರ ಅಗ್ನಿಯು ಯಮನು ನೈರುತಿ । ಹೊಂದಿ ವರುಣ ವಾಯುವ್ಯಧನಪತಿ ।
ಮುಂದಿರುವ ಈಶಾನ್ಯ ದಿಕ್ಪಾ – ಲ[5] ಕರ ಸಂದಣಿಯು[5] ॥ ೫ ॥

ವೀರ ವಿದ್ವೇಷಣ ದಿಶಾಂಪತಿ ।[6] ಹರನಹಿರ್ಬುಧ್ನ್ಯ[6] ಏಕಪಾದನು ।
ಗಿರಿಜೆ ವರಪಶುಪತಿ·ಇಳಾಧಿಪ – ರೆಂಬ ರುದ್ರಗಣ ॥ ೬ ॥

---

1-1 ನ್ನೊಳು (ಇ, ಒ, ಖ, ಗ, ಚ.) 2-2 ವರ । ಬಾಲ ಬಾಲ (ಅ, ತ, ಬ.) 3-3 ಮುಖದವಡ್ಡು ಬಗೆದುದೊ । (ಅ, ಉ, ತ, ಬ.) 4-4 ರೂಪಿನ ಶೌರ್ಯ ಬಲದಲಿ । (ಇ, ಒ, ಖ, ಗ, ಚ.) 5-5 ಲಕರು ಬೆನ್ನಿನಲೀ ॥ (ಇ, ಒ, ಖ, ಗ, ಚ.) 6-6 ವೀರವಿಜಯನು (ಒ, ಖ, ಗ, ಚ.)

ಅವರ ಬೆನ್ನೊತ್ತಿನಲಿ ರೌದ್ರದಿ । ಜವನ ಜವಗೆಡಿಸುವ ಕರಾಳರು ।
ಭುವನ [1] ಕಚ್ಚರಿ [1] ಕಾಲರುದ್ರರು – ಕಾದುನಿಂದಿಹರು ॥ ೭ ॥

ಹಂಸ ತಲ್ಪಾಂಬರನು ಹರಿ ಯಮು । ಪುಷ್ಪ ಮಿತ್ರನು ದಿವ್ಯವರುಣನು ।
ನ್ಯಾಸದೊಳು ಮಾಂಧಾತ ಶುಕ್ರ – ಪ್ರಜನರೆಂದೆನಿಪ ॥ ೮ ॥

ದ್ವಾದಶಾದಿತ್ಯರ ಸಮೂಹವು । ಕಾದು ರುದ್ರರ ಬೆನ್ನುಗಡೆಯಲಿ ।
ಆದರಿಸಿ [2] ರಥವೇರಿನಿಂದಿಹ – ರವರು ಅರ್ಥಿಯಲಿ [2] ॥ ೯ ॥

ಧಾತೃ ಧ್ರುವ ಸೋಮಾನಿಲನನಲ । ಪ್ರತ್ಯೂಷ ಅಪ್ಪು ಪ್ರಭವರೆನಿಸುವ ।
ಉತ್ತಮಾಷ್ಟಾವಸುಗಳಿರುತಿಹ – ರವರ ಬೆನ್ನಿನಲಿ ॥ ೧೦ ॥

ಮುಂಡಿ ಪುಷ್ಕರ ಮಹಪ್ರಭಾವನು । ದಂಡಿ ಆಷಡಿ ಅಸುರ ದೇವೋ ।
ದ್ದಂಡ ನೈಮಿಷ ವರುಣರಾಜ – ಸಮೂಹರಲ್ಲಿಹರು * ॥ ೧೧ ॥

ಇಂತೆಸೆವ ರುದ್ರರಿಗೆವೊಪ್ಪುವ । ನಂತ ಕೋಟಿ ಗಣಾದಿ ಪ್ರಥಮರೊ ।
ಳಂತುವೊಪ್ಪಿದನವರ ಮಧ್ಯಧಿ – ಕಂತು ಹರ ಶಿವನು ॥ ೧೨ ॥

ಈಶ ನೊಪ್ಪಿದ [3] ಸಕಲರೊಳು [3] ಭೂ । ತೇಶನೊಪ್ಪಿದ ಸೂರ್ಯಕೋಟಿ ಪ್ರ ।
ಕಾಶನೊಪ್ಪಿದ ಸರ್ವದುರಿತವಿ – ನಾಶನೊಪ್ಪಿದನು ॥ ೧೩ ॥

ದೇವ ನೊಪ್ಪಿದ ಭಕ್ತಜನ ಸಂ । ಜೀವನೊಪ್ಪಿದನಮರರಿಗೆ ವರ ।
ವೀವನೊಪ್ಪಿದನಖಿಳ ಭುವನವ – ಕಾವನೊಪ್ಪಿದನು ॥ ೧೪ ॥

ಒಂದುದೆಸೆ ಅಮರೇಂದ್ರ ಸಂದಣಿ । ಒಂದುದೆಸೆ ತುಂಬುರರ ಸಂದಣಿ ।
ಒಂದುದೆಸೆ ಚಂದ್ರಾದಿ ತಾರಾ – ಗಣರ ಸಂದಣಿಯು ॥ ೧೫ ॥

ಒಂದುದೆಸೆ ಕಿನ್ನರರ ಸಂದಣಿ । ಒಂದುದೆಸೆ ಖೇಚರರ ಸಂದಣಿ ।
ಒಂದುದೆಸೆ ಕಿಂಪುರುಷ ಗರುಡ ಗಂ – ಧರ್ವಸಂದಣಿಯು ॥ ೧೬ ॥

ಒಂದುದೆಸೆ ವಾಸವನ ಸಂದಣಿ । ಒಂದುದೆಸೆ ದಿನಕರನ ಸಂದಣಿ ।
ಒಂದುದೆಸೆಯಲಿ ಸಿದ್ಧಸಾಧ್ಯ [4] ಗೀ – ರ್ವಾಣ ಸಂದಣಿಯು [4] ॥ ೧೭ ॥

ಒಂದುದೆಸೆಯಲಿ ಸಪ್ತ ಋಷಿಗಳು । ಒಂದು ದೆಸೆಯಲಿ ಬ್ರಹ್ಮಋಷಿಗಳು ।
ಒಂದುದೆಸೆಯಲಿ ವಿಷ್ಣು ರುದ್ರ – ಪ್ರಮಥ ಸಂದಣಿಯು ॥ ೧೮ ॥

---

1-1 ಕಥಿಪತಿ (ಇ, ಒ, ಖ, ಗ, ಚ.) 2–2 ಸಂಭ್ರಮದಿ ಕಾಯ್ದಿರು—ತಿರ್ಪರರ್ಥಿಯಲಿ ॥ (ಇ, ಒ, ಖ, ಚ.) * ಈಪದ್ಯ (ಇ, ಖ.) ಪ್ರತಿಗಳಲ್ಲಿಲ್ಲ 3–3 ನಮರರವರ (ಚ.) 4-4 ರು ಮರುದ್ಗಣಾಧಿಪರು ॥ (ಒ, ಚ.)

ಒಂದುಪೆಸೆ ನಂದಿಮುಹ ಕಾಳರು । ಒಂದುಪೆಸೆ ಭೀಕರ ಕರಾಳರು ।
ಒಂದುದೆಸೆಯ ಕರಾಳ ಭೈರವ—ಕಾಲಕಲ್ಪಿತರು ॥ ೧೯ ॥

ಮಾರಿ ಮಸಣಿಯು ದುರ್ಗಿಚೌಡಿಯು । ವೀರಕಾಳಿ ಕರಾಳಿ ಭೈರವಿ ।
ಕೋರದಾಡೆಯ ಭೀಕರದ ಮಹ—ಶಕ್ತಿ ಸಂದಣಿಯು ॥ ೨೦ ॥

ಸಪ್ತ ಮಾತೃಕೆಯರ ಸಮೂಹವು । [1]ಭಕ್ತಿ [1]ಭಾವಕಿಯರ ವಿನೋದವು ।
ಮುಕ್ತಿ ಕನ್ನೆಯರಿರುವ ಸ್ತೋಮವು—ಶಿವನ ಓಲಗದಿ ॥ ೨೧ ॥

ಆಡುತಿಹಭೃಂಗಿಯ ವಿನೋದವು । ಪಾಡುತಿಹ ಗಾಂಧರ್ವ ಗಾನವು ।
ಕೂಡೆ ಮೊಳಗುವ ಸಕಲ ವಾದ್ಯ—ಧ್ವನಿಯ ಸಂಭ್ರಮವು * ॥ ೨೨ ॥

ಇಂತೆಸೆವ ಪ್ರಮಥಾದಿ ರುದ್ರ [2] ರ [2] । ತಿಂಥಿಣಿಯ ಓಲಗದ ಮಧ್ಯದಿ ।
ಕಂತುಹರ ಪರಮೇಶನೊಪ್ಪಿದ—ಸಿಂಹಪೀಠದಲಿ ॥ ೨೩ ॥

ವಚನ ॥ ಇಂತೊಪ್ಪುವ ಪರಶಿವಮೂರ್ತಿಗೆ ದೇವಕನ್ನಿಕೆಯರು ಬಂದು ಮಂಗಳಾರತಿಯನೆತ್ತುತಿರ್ದಾರದೆಂತೆನೆ.

**ಮಂಗಳಾರತಿ ಪದ.**

ಶ್ರೀಗುರು ಪರಂಜ್ಯೋತಿ ಶೃಂಗಾರಮೂರ್ತಿಗೆ ।
ನಾಗಾರಿ ಗಮನ ನಯನಾರ್ಚಿತನಿಗೆ ।
ಭೋಗಿ ಭೂಷಣ ಭೃಂಗಿ ನಾಟ್ಯವಿನೋದಗೆ ।
ಯೋಗಿಜನ ಹೃನ್ಮಧ್ಯ ನೆಲೆವಾಸಗೆ ।
ಜಯ ಮಂಗಳಂ ನಿತ್ಯ ಶುಭಮಂಗಳಂ ॥ ೧ ॥

ಶಶಿಯಗ್ನಿ ರವಿಗಳಿಂದೆಸೆವ ತ್ರಿನೇತ್ರನಿಗೆ ।
ವೃಷಭ ವಾಹನಗೆ ರುಜೆಹರ ಶಿವನಿಗೆ ।
ಪಶುಪತಿ ಪರಬ್ರಹ್ಮ ಭಸಿತಾಂಗ ಲೇಪನಿಗೆ ।
ಶಶಿಜೂಟ ಶಂಭು ತ್ರಿದಶರೊಡೆಯನಿಗೆ ॥ ಜಯ ॥ ॥ ೨ ॥

ಸಿಂಧೂರ ದೈತ್ಯನನು ಸೀಳಿಚರ್ಮವ ಧರಿಸಿ ।
ಅಂದು ತಾರಕಾಸುರನ ಅಘಟವಂ ಮುರಿದು ।
ಅಂಧಕಾಸುರನ ತುಳಿದಂದು ನಾಟ್ಯವನಾಡಿ ।
ಮುಂದೆ ಸುರರುಳುಹಿದಾ ಮುನಿವಂದ್ಯಗೆ ॥ ಜಯ ॥ ॥ ೩ ॥

---

1-1 ಗುಪ್ತ (ಇ, ಖ, ಗ, ಚ.) * ಈ ಪದ್ಯ (ಇ, ಒ, ಖ, ಗ, ಚ.) ಪ್ರತಿಗಳಲ್ಲಿಲ್ಲ.
2-2 ರು (ಇ, ಚ, ಜ.)

ಶರಜರಿಪು ಸುತೆ ಪತಿಯ ಹರಣವನು ಕೊಂಡವಗೆ |
ತರಣಿ ತರುಣನ ಹಿರಿದು ಕೆಡಹಿದವಗೆ |
ಗಿರಿಯ ತರಿದನಿಗೊಲಿದು ಸಿರಿಯ ಪಾಲಿಸಿದವಗೆ |
ಪರಶಿವಗೆ ಪಾರ್ವತಿಯ ಪ್ರಾಣೇಶಗೆ || ಜಯ || || ೪ ||
ಕಾಲ ಕರ್ಮಗಳೆಂಬ ಕಲ್ಪನೆಯ ಮೀರಿದಗೆ |
ಶೂಲ ಪಾಣಿಗೆ ಅಜ ಕಪಾಲ ಧರಗೆ |
ಹಾಲಾ ಹಲಾಗ್ನಿ ವಿಷವನು ಧರಿಸಿ ಮೆರೆದವಗೆ |
[1] ಬಾಲ ಚಂದ್ರನ ಸೂಡಿದ ಮಹಿಮ [1] ಗೆ | || ಜಯ || || ೫ ||
ದುಷ್ಟ ನಿಗ್ರಹ ಶಿಷ್ಟ ನಿಕರ ಪರಿಪಾಲನಿಗೆ |
ಅಷ್ಟಾಂಗ ಯೋಗದೊಳು ಅಡಗಿರ್ದಗೆ |
[2] ದು [2] ಷ್ಟ ದೈತ್ಯರ ಕೊಂದು ಭುವನವಂ ಪಾಲಿಪಗೆ |
[3] ಅ [3] ಷ್ಟ ಮೂರುತಿ ಚೆನ್ನಮಲ್ಲೇಶಗೆ || ಜಯ || || ೬ ||
ಶರಣು ರಕ್ಷಾಮಣಿಗೆ ಶರಣು ಶಿಕ್ಷಾಮಣಿಗೆ |
ಶರಣು ಪರುಷದ ಖಣಿಗೆ ಶೈವ ಮಣಿಗೆ |
ಪುರ ಹರಗೆ ಪುಂಗವಗೆ ಹರಿಣನಭಯಂ ಕರಗೆ |
ಶರಣು ಶ್ರೀ ಗಿರಿವಾಸ ಪರಮೇಶಗೆ || ಜಯ || || ೭ ||
ಭೂಲೋಕ ಭುವರ್ಲೋಕ ಸುವರ್ಲೋಕ ಮಹರ್ಲೋಕ |
ಜನಲೋಕ ತಪೋಲೋಕ ಸತ್ಯಲೋಕ |
ತವೆ ಹದಿನಾಲ್ಕು ಲೋಕದ ಕರ್ತ ಭರ್ಗನೆಂ |
ದುರೆ ವೇದ ಪೊಗಳೆ ಗಾಯತ್ರಿಗಧಿಕರ್ತಗೆ * || ಜಯ || || ೮ ||
ಶ್ರುತಿಯು ಸೋಮಃ ಪವತೇ ಜನಿತೆಯೆಂದುರೆ ಪೊಗಳ್ವ |
ಅತಿಶಯದ ವೇದದಿಂ ನುತಿಗೊಂಬಗೆ |
ನುತಿಸಿ ಋಗ್ವೇದ ಏಕೋದೇವ ರುದ್ರನ |
ದ್ವಿತಿಯನೆಂದಜ ಹರಿಗಳಧಿಕರ್ತಗೆ || ಜಯ || || ೯ ||
ವೇದಕ್ಕೆ ನಿಲುಕದಗೆ ವಾದಕ್ಕೆ ಸಿಲುಕದಗೆ |
ನಾದ ಬಿಂದು ಕಲಾತೀತ ಮೃಡಗೆ |
ವಾದಿಸಿದ ಹರಿಯಜಗೆ ಪಾದ ಶಿರಗಾಣಿಸದ |
ಮೂದೇವರೊಡೆಯ ಮುಕ್ತಿಯ ಕರ್ತಗೆ || ಜಯ || || ೧೦ ||

---

1–1 ಜ್ವಾಲೆಯೊಳು ಮೆರೆದು ಸುರರನು ಕಾಯ್ದ || (ಅ. ಜ, ಟ, ಡ, ತ, ಬ.)
2–2 ಕ (ಅ, ಜ, ಡ, ತ. ಬ.) 3–3 ಪ (ಇ, ಉ, ಜ, ಟ, ಡ, ತ, ದ, ಬ.) * ಈ ಪದ್ಯ (ಇ, ಖ. ಗ, ಚ.) ಪ್ರತಿಗಳಲ್ಲಿಲ್ಲ.

ಧರೆಯ ಮೀರಿದ ಜಲಂಧರನ ಶಿರವರಿದು ।
ಚಕ್ರವ ಬೇಡೆ ಶ್ರೀ ಹರಿಗೆ ಪಾಲಿಸಿದಗೆ ।
ಮೊರೆವ ಶಾರ್ದೂಲ ದೈತ್ಯನ ಸೀಳಿ ಚರ್ಮವನು ।
ಶರಿರದೊಳು ಧರಿಸಿರ್ದ ಪರಮಾತ್ಮಗೆ || ಜಯ || । ೧೧ ||

ಅತ್ಯತಿಷ್ಠದ್ದ ಶಾಂಗುಲನೆಂಬ ಮಹಿಮಂಗೆ ।
ನಿತ್ಯಪುರುಷ ಸೂಕ್ತ ನಿಜರೂಪಗೆ ।
ಪೃಥ್ವಿಜಲಾಗ್ನಿ ಮರುತಾಕಾಶ ತತ್ವಗಳಿ ।
ಗತ್ತತ್ತ ಮೀರಿದಗಣಿತ ರೂಪಗೆ || ಜಯ || || ೧೨ ||

ಭಕ್ತಿ ಚಿಂತಾಮಣಿಗೆ ಭಕ್ತಚೂಡಾಮಣಿಗೆ ।
ಭಕ್ತ ವತ್ಸಲಗೆ ಸದ್ಭಕ್ತ ನಿಧಿಗೆ ।
ಭಕ್ತರಿಗೆ ಶಿಶುವಾಗಿ ಭಕ್ತಿಯನು ಕೈಗೊಂಡು ।
ಮುಕ್ತಿಯನು ಕೊಡುವ ಮೂಜಗದೊಡೆಯಗೆ || ಜಯ || || ೧೩ ||

ಋತಂ ಸತ್ಯಂ ಪರಬ್ರಹ್ಮವೆಂದೆಂಬ ಶೃತಿಯಿಂದೆ ||
ಅತಿಶಯದಿ ಸ್ತುತಿಗೊಂಬ ಶಿತಿಕಂಠಗೆ ।
ಶತಕೋಟಿ ಸೂರ್ಯ ಪ್ರಕಾಶದಿಂದಿರುತಿರ್ಪ ।
ಅತಿಶಯದ ಗುರುವಿಶ್ವ ಪತಿಸ್ವಾಮಿಗೆ || ಜಯ || || ೧೪ ||

ಶರಣಾಗತ ವಜ್ರ ಪಂಜರನೆಂಬ ಬಿರಿದಿನಿಂ ।
ಸುರ ದೈತ್ಯರರ್ಚನೆಯ ಕೈಗೊಂಬಗೆ ।
ಧರೆಯು ಹದಿನಾಲ್ಕು ಮೀರಿದ ಅಂಡ ಬ್ರಹ್ಮಾಂಡ ।
ಪರಿಪೂರ್ಣ ಸರ್ವವ್ಯಾಪಕ ಬ್ರಹ್ಮಗೆ || ಜಯ || || ೧೫ ||

ಪನ್ನಗೇಂದ್ರಾಭರಣವನು ತಾಳಿದ ಶಿವನಿಗೆ ।
ಉನ್ನ[1] ತಾಸನದಿ ಒಪ್ಪಿಹ[1] ಸ್ವಾಮಿಗೆ ।
ಚೆನ್ನಪ್ಪದೇವರಿಗೆ ತನ್ನ ಕರುಣವನಿತ್ತ ।
ರನ್ನಗಿರಿ ರಜತಾದ್ರಿ ನೆಲೆವಾಸಗೆ || ಜಯಮಂಗಳಂ || || ೧೬ ||

ವಚನ || ಇಂತೆಂದು ಮಂಗಳಾರತಿಯನ್ನೆತ್ತಿ, ಕರಕಮಲಂಗಳಂ ಮುಗಿದು, ಪರಶಿವಮೂರ್ತಿಯ ಸ್ತೋತ್ರಮಂ ಮಾಡಿದರದೆಂತೆನೆ.

---

1-1 ಂತ ಪ್ರಮಥ ನಿಕರ (ಇ, ಒ, ಖ, ಗ.)

**ಇಂದ್ರಜಾಲವೃತ್ತ.** *

ಶ್ರೀ ಮನ್ಮಹಾ ಭೀಮ ಭೀಮ ಕರುಣೋದ್ದಾಮ ।
ಸ್ವಾಮಿ [2] ನ [2] ಮೋ ಭಕ್ತ ಪ್ರೇಮಿ ನಮೋ ॥ ೧ ॥

ತಾಮರಸ ಸಖಾಗ್ನಿ ಸೋಮನಯನ ಪ್ರಮಥ ।
ಪ್ರೇಮಿ ನಮೋ ಉಮಾ ಪ್ರೇಮಿ ನಮೋ ॥ ೨ ॥

ದೇವಾ ನಮೋ ಭಕ್ತ ಜೀವಾ ನಮೋ ।
ಭವವ ಕಾವ ನಮೋ ಮೋಕ್ಷ ವೀವ ನಮೋ ॥ ೩ ॥

ಲಿಂಗಾ ನಮೋ [3] ಶುಭ್ರದಂ [3] ಗಾ ನಮೋ ।
ವೃಷಭ ತುರಂಗಾ ನಮೋ ಭುಜಗ ಧರಾ ನಮೋ ॥ ೪ ॥

ಸಂಗಾ ನಮೋ ತಿಮಿರ ಪತಂಗಾ ನಮೋ ।
ಪ್ರಾಣ ಲಿಂಗಾ ನಮೋ ಶರಣ ಸಂಗಾ ನಮೋ ॥ ೫ ॥

ಈಶಾ ನಮೋ ಜನ್ಮ ನಾಶಾ ನಮೋ ।
ಪಾಪ ಮೋಚಾ ನಮೋ ಪಾರ್ವತೀಶಾ ನಮೋ ॥ ೬ ॥

ಬಾಲಾರ್ಧ ಶಶಿಮೌಳಿ ಲೋಲಾ ನಮೋ ।
ಅಜಶಿರ ಕಪಾಲಾ ನಮೋ ಭಕ್ತ ಪಾಲ ನಮೋ ॥ ೭ ॥

ದಾತಾ ನಮೋಽ ಲೋಕ ನಾಥಾ ನಮೋ ।
ಗುಹಗಣ ಪದಾತೀ ನಮೋ ವೇದಾದಿ ಪ್ರೀತಾ ನಮೋ ॥ ೮ ॥

ತುಂಗಾ ನಮೋ ಜಡೆ ಗಂಗಾ ನಮೋ ।
ಗಿರಿಜಾರ್ಧಾಂಗಾ ನಮೋ ಭಕ್ತಾಬ್ಜ ಭೃಂಗಾ ನಮೋ ॥ ೯ ॥

ಫಾಲಾಗ್ನಿ ನೇತ್ರ ಜ್ವಾಲಾ ನಮೋ ।
ತ್ರಿಪುರ ನಿರ್ಮೂಲಾ ನಮೋ ಅಮರಾಧಿ ಪಾಲಾ ನಮೋ ॥ ೧೦ ॥
ಭೀಮಾ ನಮೋ ಕಲ್ಪಾಭಿ ರಾಮಾ ನಮೋ ।
ಶ್ರುತಿದಿವ್ಯ ನಾಮ ನಮೋ ಮುನಿಜನ ಪ್ರೇಮಿ ನಮೋ ॥ ೧೧ ॥
ಮಾರಹರ ಭಸ್ಮಧಾರಿ ನಮೋ ಮಣಿರತ್ನ ಹಾರಾ ನಮೋ
ಮುನಿ ಜನೋದ್ಧಾರಾ ನಮೋ ॥ ೧೨ ॥
ಕಾಲ ದರ್ಪಜಾಲ ನಾಶಾ ನಮೋ ತ್ರಿ ।
ಶೂಲಿ ನಮೋ ಮುನಿಜನ ಪಾಲಾ ನಮೋ ॥ ೧೩ ॥

---

* ಈ ವೃತ್ತಕ್ಕೆ (ಇ, ಖ, ಗ, ಚ. ಪ್ರತಿಗಳಲ್ಲಿ ಏಕತಾಳವೆಂದು ಇದೆ. 1-1 ನ್ನ (ಅ, ಇ, ಒ, ಟ, ದ, ಬ.) 2-2 ಭಸಿತಾಂ (ಇ, ಒ, ಖ, ಗ.)

ಸತ್ಯಾಜಯ ಸರ್ವ ಶತ್ರುಜಯ ಫಾಲ ।
ನೇತ್ರಜಯ ಕಾಮ್ಯಾರ್ಥ ನಮೋ || ೧೪ ||

ನಿತ್ಯ ಶಿವನಾಮ ಸ್ತುತ್ಯ ಸರ್ವಮೃತ್ಯುಹರ ।
ದೇವ ಕೃಪಾಬ್ಧೀ ನಮೋ ಪರಾಕೆ ನಮೋ || ೧೫ ||

**ಪುಷ್ಪಾಂಜಲಿ ಗ್ರಂಥ.**

ಕೈಲಾಸವಾಸ ಸರ್ವೇಶ । ತವಪಾದಸ್ತು ಸ್ತೂಯತೆ ।
ಸಯಾತಿ ಪರಮಾಂ ಮುಕ್ತಿಂ । ಶಿವಲೋಕೇ ಮಹೀಯತೆ ||

ಎಂದು ಮತ್ತಿಂತೆಂದಂ.

ತ್ರಿಯಂಬಕಂ ಯಜಾಮಹೆ । ಸುಗಂಧಿಂ ಪುಷ್ಟಿವರ್ಧನಂ ।
ಉರ್ವಾರುಕಮಿವ ಬಂಧನಾ । ನ್ಮೃತ್ಯೋ ರ್ಮುಕ್ಷೀಯ ಮಾಮೃತಾತ್ ।

ವಚನ || ಇಂತೆಂದು ತ್ರಿಯಂಬಕಾದಿ ಮಂತ್ರಗಳಿಂದ ಪುಷ್ಪಾಂಜಲಿಯಂ ಮಾಡಿ ಸಮಸ್ತ ಗಣಂಗಳ ಜಯಜಯವೆಂಬ ಜಯನಾದಂಗಳಿಂ ಶಿವನೊಪ್ಪಿರ್ದಂ.

**ವೃತ್ತ.** †

ಶ್ರೀ ಮನ್ನಾಥ ಮಹಾ ಶಿವಂ ಗುರುವರಂ ಶ್ರೀ ಚೆನ್ನಮಲ್ಲೇಶ್ವರಂ ।
ಸ್ವಾಮಿ ಶ್ರೀ ಪ್ರಭುಸಿದ್ಧರಾಮ ಬಸವೇಶಾದ್ಯಾದಿ ಸತ್ಕಿಂಕರಂ ||
ಪ್ರೇಮಂ ಪೇಳ್ದ ಚೆನ್ನಪ್ಪದೇವ **ಶರಣ ಲೀಲಾ[1] ಮೃತಂ** ಕಾವ್ಯ[1] ಮಂ ।
ಭೂಮೀ ಭಕ್ತಮಹೇಶರ್ಮೆಚ್ಚಲುಸುರ್ದಂ ಈ ಕಾವ್ಯ[2] ದೊಂದು[2] ಸ್ಥಲಂ ||

**ಅಂತು ಸಂಧಿ ೧ ಕ್ಕಂ ಗ್ರಂಥಗಣನೆ-೫೫೬ ಕ್ಕಂ ಮಂಗಳ ಮಹಾ**

**ಶ್ರೀ ಶ್ರೀ ಶ್ರೀ ಶ್ರೀ ಶ್ರೀ**



ಈ ಗ್ರಂಥಗಳು (ಅ, ಒ, ಬ.)ಪ್ರತಿಗಳಲ್ಲಿಲ್ಲ. † ಈ ವೃತ್ತ (ಎ, ಒ.)ಪ್ರತಿಗಳಲ್ಲಿಲ್ಲ.

1-1 ಕೃತಿಶಾಸ್ತ್ರ (ಆ, ಇ, ಉ, ಎ, ಟ, ಡ, ದ, ಬ.) 2-2 ಪ್ರಥಮ (ಅ, ಇ, ಉ, ತ, ದ, ಬ.)

## ಎರಡನೆಯ ಸಂಧಿ

# ಭಿಕ್ಷಾಟನ ಲೀಲೆ

---

**ವೃತ್ತ.**

ಶ್ರೀ ಮಹಾ ದೇವ ಮಜ್ಜನ್ಮಾದಿ ಭವತಿಮಿರ ಸೋಮ ವರ ಭೀಮಸ್ತ್ರಂ ।
ರಾಮಂ ಪೂಜಿತಬ್ಜ ಅಂಘ್ರಿಯುಗಳಂ ಪ್ರೇಮಂ ಸದಾ ಕಾಲಮಂ ॥
ಸ್ವಾಮಿ ಪಾಲಿಪುದಿನ್ನು ಈ ಕೃತಿಗೆ ದೇವಾ ನಿಮ್ಮ ಅಭಯಾಕರಂ ।
ಭೂಮೇಂದು ರವಿ ತಾರಮಂಬರ ಸ್ಥಿರಂ ಕಾಮಾರಿ ಒಲಿದೀವುದು * ॥ ೧ ॥

ಶರಜಾಪ್ತಂಗೆ ಸಹಸ್ರ ತೇಜ ರುಚಿಯಂ ಸುರನಾಥಗೈಶ್ವರ್ಯಮಂ ।
ಧರೆಯಾ ಸೃಷ್ಟಿಯಜಂಗೆ ಪಾಲಿಸಿದೆ ವಿಷ್ಣುಗೆ ರಕ್ಷ ಕರ್ತವ್ಯಮಂ ॥
ನಿರುತಂ ಪಾಲಿಸಿದಯ್ಯ ಶ್ರೀ ಗುರು ಮಹೇಶ್ವರ ನಿಮ್ಮ ಪ್ರಸಾದಮಂ ।
ಹರುಷಂಬಟ್ಟೆನಗೀಯೊ ದೇವ ಗಿರಿಜೇಶ್ವರ ಪ್ರೇಮದಿಂ ವಂದಿಪೆಂ ॥ ೨ ॥

ವಚನ ॥ ಇಂತೆಂದು ಶ್ರೀ ಮಹಾದೇವನಂ ಸ್ತುತಿಸಿ ಮುಂದೆ ಭಿಕ್ಷಾಟನ ಲೀಲೆಯಂ ವಿಸ್ತರಿಪೆಂ.

**ದ್ವಿಪದಿ.**

ಶ್ರೀಮನ್ಮಹಾ ದೇವ ಶೃಂಗಾರ ಮೂರ್ತಿ ।
ಆ ಮಹಾ ದೇವಾಧಿ ದೇವ ದೇವೇಶ ॥ ೧ ॥

ಸ್ವಾಮಿ ಸದ್ಗುರು ಸದಾಶಿವ ಸಾರ್ವಭೌಮ ।
ಕಾಮ [1] ನಾಶನ [1] ಕನಕ ದುರ್ಗಾಧಿ ನಾಥ ॥ ೨ ॥

ತಾಮರಸ ಸಂಭವನ [2] ದುರಹಂಕೃತಿಯನು [2] ।
ಸ್ವಾಮಿ ಮನದೊಳು ತಿಳಿದು ಸುಮ್ಮನೇಯಿರಲು ॥ ೩ ॥

ಹೋಯಿತ್ತು ಕೆಲಕಾಲ ಹೊಸ ಹೊಸತು ಬಗೆಯು ।
ಆಯಿತ್ತು ಅರಸುತನ ಅವರವರ ಬಗೆಗೆ ॥ ೪ ॥

ಹರಿಸುರಾ ದಿಕ್ಪಾಲ ಸುಜನ ಮುನಿವೃಂದ ।
ತರಣಿ ಶಶಿ ಅಸುರಾದಿ ತಾರಗಣ ವೃಂದ ॥ ೫ ॥

---

ಪಾಠಾಂತರ :—

* ಈ ವೃತ್ತ (ಇ, ಖ, ಗ.) ಪ್ರತಿಗಳಲ್ಲಿಲ್ಲ. 1-1 ಸನ್ನಿಭ (ಅ, ಉ, ಟ, ತ, ಬ.)
2-2 ತಾರತಂಮ್ಯಗಳ (ಅ, ಬ.)

ಪರಿಕಿಸಲು ಮುನಿವೃಂದ ಪ್ರತ್ಯಕ್ಷವಾಗಿ ।
ಇರುತಿರಲು ಬ್ರಹ್ಮನಾ ಹೆಮ್ಮೆಯಾದೆಸೆಯ ॥ ೬ ॥

ಎಲ್ಲ ಮುನಿಗಳು ಕೂಡಿ ಯೋಚನೆಯಮಾಡಿ ।
ಉಲ್ಲಾಸದಿಂದೊಂದು ವಾಕ್ಯ ಬ್ರಹ್ಮನೊಳು ॥ ೭ ॥

ನಿತ್ಯವಾಗಿಹ ನಿಜ ವಸ್ತುವದಾರು
ಸತ್ತುಹುಟ್ಟ [1] ದೆಯಿರ್ಪ ಸರ್ವಜ್ಞನಾ [1] ರು ॥ ೮ ॥

ಪರಕಿಸಲು ಅಣು ರೇಣು ತೃಣ ಕಾಷ್ಠದೊಳಗೆ ।
ಪರಿಪೂರ್ಣ ವ್ಯಾಪಕನು ಪರಮಾತ್ಮನಾರು ॥ ೯ ॥

ಧರೆ ಜಲಾಗ್ನಿಯು ಮರುತ ಆಕಾಶ [2] ದೊಳಗೆ [2] ।
[3] ಪರಿಪೂರ್ಣವಾಗಿರ್ದ [3] ಪರವಸ್ತುವಾರು ॥ ೧೦ ॥

ಇರುವ ಅನೇಕ ಅಂಡವನಂಗದಲ್ಲಿ ।
ಧರಿಸಿರ್ದ ಪರಿಪೂರ್ಣ ಪರ [4] ಬ್ರಹ್ಮ [4] ನಾರು ॥ ೧೧ ॥

ಎಂದ ಮುನಿಗಳ ಮಾತನೆಲ್ಲವಂ ಕೇಳಿ ।
ಮುಂದುಗಾಣದೆ ಬ್ರಹ್ಮ ಮೂದಲಿಸುತಿರ್ದ ॥ ೧೨ ॥

ವಚನ ॥ ಆ ವೇಳೆಯಲ್ಲಿ ಬ್ರಹ್ಮನು ಮುನಿಗಳೊಡನೆ ಏನನ್ನು ತಿರ್ದನ್ನು

**ಗಾಯತ್ರಿ ಸ್ತುತಿ** ॥ ಅಗ್ನಿರ್ಮುಖೇ ಬ್ರಹ್ಮ ಶಿರಸಿ ರುದ್ರೋ । ಲಲಾಟೇ ವಿಷ್ಣುರ್ಹೃದಯೇ ॥ ಎಂಬದಾಗಿ:—ಗಾಯತ್ರಿ ಸ್ವರೂಪ ನಾನಲ್ಲವೆ, ಆ ಪರ ಬ್ರಹ್ಮವೆಂಬುದು ಎಲ್ಲಿ ಉದಿಸಿತು ? ಎನ್ನ ಶಿರದಲ್ಲಿ ಉದಿಸಿತು. ರುದ್ರಾವತಾರವೆಂಬುದು ಎನ್ನ ಲಲಾಟದಲ್ಲಿ ಪುಟ್ಟಿತು. ಯಜ್ಞೇಶ್ವರನೆಂಬಾತ ಎನ್ನ ಮುಖದಲ್ಲಿ ಪುಟ್ಟಿದನು. ಆ ವಿಷ್ಣುವು ಎನ್ನ ಅಧೋದ್ವಾರದಲ್ಲಿ ಪುಟ್ಟಿದ. ಸಮಸ್ತ ಮನು ಮುನಿಗಳು ಎನ ಮಾನಸ ಪುತ್ರರಿಂದ ಪುಟ್ಟಿದರು. ಮಿಕ್ಕಿನ ಸುರನರೋರಗ ಕಿನ್ನರ, ಖೇಚರ, ಗರುಡ, ಗಂಧರ್ವ, ಯಕ್ಷ, ರಾಕ್ಷಸ, ಪಿಶಾಚ, ಗುಹ್ಯಕ ಮೊದಲಾದ ಖಗಮೃಗ ಕ್ರಿಮಿ ಕೀಟಕ ಸಚರಾಚರಾದಿ ! ಸ್ಥಾವರ ಜಂಗಮಾದಿಗಳು ! ! ಮೊದಲಾಗಿ ಇಂತಿವೆಲ್ಲರ ಸೃಷ್ಟಿಯೂ, ಎನ್ನಿಂದ ಪುಟ್ಟಿದ ನವಬ್ರಹ್ಮರಿಂದಲಾಯಿತು. ಸೃಷ್ಟಿ, ಸ್ಥಿತಿ, ಸಂಹಾರಾನುಗ್ರಹಕರ್ತ ನಾನೇ ಎಂಬ ಸಮಯದಲ್ಲಿ, ಶ್ರೀ ಮಹಾ ವಿಷ್ಣು ಬಂದು ಇಂತೆಂದಂ.

---

1-1 ದಸದ್ಯೋಽನ್ಮುಕ್ತನದಾ (ಅ, ಜ, ಟ, ತ.) 2-2 ನೆಲ್ಲ (ಅ, ಟ, ದ, ಬ.) 3-3 ಭರಿತನಾಗಿರುತಿರ್ಪ (ಇ, ಉ, ಒ, ಖ, ಗ, ಚ.) * ಈ ಪದ್ಯಗಳು (ಜ.) ಪ್ರತಿಯಲ್ಲಿಲ್ಲ. 4-4 ಮೋಶ (ಖ, ಗ.)

**ತ್ರಿವುಡೆ.**

ಬಾಳೆ ಬೆಳೆದಿಹ ಬಿದಿರು ಏಡಿಯು । ಚೇಳು ಮೊದಲಾಗಿರ್ದವಿವು ಕಡೆ ।
ಗಾಲ ಬಂದರೆ ಫಲವ ಕಾಣಿಸುವಂತೆ – ಈ ಅಜಗೇ ॥ ೧ ॥

ಭಾಳದಕ್ಷರ ತೊಡೆವ ಕಾಲಕೆ । ಕಾಳುಮತಿ ದೊರಕೊಂಡಿತೀತಗೆ ।
ಹೇಳಲೋಸುಗ ವಿಷ್ಣು ಬಂದನು – ಬ್ರಹ್ಮನಿದ್ದೆಡೆಗೆ ॥ ೨ ॥

ಎಲೆ ಮರುಳೆ ಕೇಳ್ವನಜ ಸಂಭವ । ತಲೆಗೆ ಅಡರಿತೊ ಪಿತ್ತ ಬಲಿದುದೊ ।
ಮೊಲೆಯ ನಾಗರು ಪಿಡಿದು ಚಿತ್ತವ – ಭ್ರಮೆಯ ಮಾಡಿದುದೊ ॥ ೩ ॥

ಮನದ ತಮವದು ಮಂಕು ಕವಿದುದೊ । ಘನತೆ ಎಂಬುದು ಪಾರಿಪೋದುದೊ ।
ಮನಕಗೋಚರ ಮಹಿಮ ಶಿವನನು । ಮರೆದೆಯಾಯೆಂದ ॥ ೪ ॥

ಎಂದ ಮಾತಿಗೆ ಹರಿಯೊಡನೆಯಿಂ । ತೆಂದಬ್ರಹ್ಮನು ತನ್ನ ಗರ್ವದಿ ।
ಮಂದ ಮತಿಯಲಿ ನನಗೆ ಸರಿಯಿ – ನ್ನಾರು ಜಗದೊಳಗೆ ॥ ೫ ॥

ಶಕ್ತನೇ ಶಿವ ನಿವಹ ದೈವಕೆ । ಮುಕ್ತನೇ ಚರ್ಮಾಸ್ಥಿ ಧರನವ ।
ನಿತ್ಯನೇ ಅನುಗಾಲ[1] ವಂಗದಿ – ಶಕ್ತಿ[1] ಧರಿಸಿಹನು ॥ ೬ ॥

ನಿನಗೆದೊಡ್ಡವ[2] ನಲ್ಲದಲೆ[2] ಶಿವ । ನನಗೆ ದೊಡ್ಡವನಲ್ಲ ಕೇಳ್ಹರಿ ।
ಬಿನುಗು ಮಾತುಗಳಾಡ ಬಂದೆಯ – ಬೇಡ ಸುಮ್ಮನಿರು ॥ ೭ ॥

ನೀನು ನನ್ನಲಿ ಅವನು ನನ್ನಲಿ । ಜ್ಞಾನ ನನ್ನಲಿ ಉದಿಸಿ ಸಚರಾಚರ ಸಂ ।
ಧಾನ ನನ್ನಲಿ ಪುಟ್ಟಿತೆಂಬುದ – ನೀನರಿಯೆ ಮುನ್ನ ॥ ೮ ॥

ಕೇಳು ಕೇಳೆಲೆ ವನಜ ಸಂಭವ । ಕೇಳು ನೀ ಪೂರ್ವದಲಿ ಪುಟ್ಟಿದ ।
ಕೇಳು ಪೇಳುವೆ ಶ್ರುತಿಯ ವಾಕ್ಯವ – ಕೇಳಿ ತಿಳಿ ನೀನು ॥ ೯ ॥

ಆದಿಯಲಿ ಪರ ಬ್ರಹ್ಮದಂಶಿಕ । ನಾದ ಸದಾಶಿವನವನ ಅಂಶಿಕ ।
ನಾದನೀಶ್ವರ ಅವರ ಅಂಶಿಕ – ನಾದನಾ ರುದ್ರ ॥ ೧೦ ॥

ಆದೆ ನಾನವರಂಶಿಕದಿ ನಳಿ । ನೋದರದ ಸರಸಿಜದ ಮಧ್ಯದಿ ।
ಆದೆ ನಿನಗೇತಕ್ಕೆ ಪೌರುಷ – ವೇದ ಶ್ರುತಿ ಕೇಳು ॥ ೧೧ ॥

**ಶ್ಲೋಕ॥** ಸದ್ಯೋಜಾತಾ ದ್ಭವೇದ್ಬ್ರಹ್ಮಾ । ವಾಮದೇವಾಜ್ಜನಾರ್ದನಃ ॥
ಅಘೋರಾಜ್ಜಾಯತೇ ರುದ್ರ । ಸ್ತತ್ಪುರುಷಾದ್ಭವದೀಶ್ವರೋದ್ಭವಃ ॥
ಸದಾಶಿವ ಶ್ಚೇಶಾನಾತ್ । ಪಂಚಬ್ರಹ್ಮ ಪರಶ್ಶಿವಃ ॥

---

1-1 ಶಿರದೊಳ್ । ಸತಿಯ (ಇ, ಖ, ಗ, ಚ.) 2-2 ನಾದರೇ (ಜ.)

ಎಂಬ ಶ್ರುತಿಯುಂಟಾಗಿ ಮತ್ತಿಂತೆಂದಂ.

**ಗ್ರಂಥ** ॥ ಆದಿ ಶಕ್ತಿಮಯಂ ಬೀಜಂ । ಬೀಜಶಕ್ತಿಮಯಃ ಶಿವಃ । ಶಿವಶಕ್ತಿಮಯೋ ವಿಷ್ಣುಃ । ಸರ್ವಂ ವಿಷ್ಣುಮಯಂ ಜಗತ್ ॥ ಮತ್ತಂ ॥

**ಗ್ರಂಥ** ॥ ಯಜ್ಞ ಕರ್ತಾ ಚ ದೇವೇಂದ್ರೋ। ವೇದಕರ್ತಾ ಚ ವಾಕ್ಪತಿಃ ॥
ಅಹಮೇವ ಜಗತ್ಕರ್ತಾ ಮಮಕರ್ತಾ ಮಹೇಶ್ವರಃ ॥

ವಚನ ॥ ಎಂದು ಮತ್ತಿತೆಂದಂ :—ಕೇಳಲೊ! ವನಜ ಸಂಭವ, ಯಜ್ಞಾದಿಗಳಿಗೆ ಕರ್ತ ದೇವೇಂದ್ರ, ವೇದಗಳಿಗೆ ಕರ್ತ ನೀನು, ಜಗತ್ತಿಗೆ ಕರ್ತ ನಾನು, ನನ್ನ ಕರ್ತ ಮಹೇಶ್ವರ, ಎಂದು ಮತ್ತಿಂತೆಂದಂ. ಅಂತಪ್ಪ ಪರಶಿವ ಮೂರ್ತಿಯೇ ಸರ್ವಕರ್ತನೆಂಬುದನರಿಯು, ಅದಲ್ಲದೆ "ವರ್ಣಾನಾಂ ಬ್ರಾಹ್ಮಣೋ ಗುರುಃ" ಎಂಬ ವಾಕ್ಯ ಉಂಟಾಗಿ ಅದಕ್ಕೆ **ಸಾಕ್ಷಿ**, "ಬ್ರಾಹ್ಮಣೋ ಭಗವಾನ್ ರುದ್ರಃ । ಕ್ಷತ್ರಿಯಃ ಪರಮೋ ಹರಿಃ ॥ ವೈಶ್ಯಃ ಕಮಲಗರ್ಭಶ್ಚ । ಶೂದ್ರಸ್ತು ಪಾಕ ಶಾಸನಃ "ಎಂಬದಾಗಿ "ಬ್ರಾಹ್ಮಣೋ ಭಗವಾನ್ ರುದ್ರಃ" ಎಂಬ ಕಾರಣ ಸಮಸ್ತ ದೈವಕ್ಕೂ ಸಮಸ್ತ ಜಾತಿಗೂ ಕುಲದೈವ, ಮನೆದೈವ, ಗುರುದೈವ, ಸಕಲಕರ್ತ ಆ ಪರ ಬ್ರಹ್ಮವೇ ಸದ್ಬ್ರಾಹ್ಮಣ ನಾನೇ ಕ್ಷತ್ರಿಯ, ನೀನೇ ವೈಶ್ಯ, ಶೂದ್ರಾಧಿಪತಿಯೇ ದೇವೇಂದ್ರ ಅದಲ್ಲದೆ **ಮಹಿಮ್ನ ಸ್ತೋತ್ರದಲ್ಲಿ**:—

**ಗ್ರಂಥ** ॥ ಮಹೇಶಾನ್ನ ಪರೋದೇವೊ । ಮಹಿಮ್ನಾನ್ನ ಪರಾಸ್ತುತಿಃ ।
ಅಘೋರಾನ್ನ ಪರೋಮಂತ್ರಃ । ನಾಸ್ತಿತತ್ವಂ ಗುರೋಃ ಪರಂ ॥

ಎಂಬ ಶಾಸ್ತ್ರಮುಂಟಾಗಿ ಅದಲ್ಲದೆ ಮತ್ತಮದಲ್ಲಿ :—

**ಗ್ರಂಥ** ॥ ಭೂಸುರೋ ಬ್ರಾಹ್ಮಣಶ್ಚೈವ । ಭೂರುದ್ರೋ ಜಂಗಮಸ್ತಥಾ ।
ಭೂಚಕ್ಷುಶ್ಚಂದ್ರಸ್ಸೂರ್ಯಶ್ಚ । ಸರ್ವಕರ್ತಾ ಚ ಭಾರ್ಗವಃ ॥

ಅದಲ್ಲದೆ "ಏಕೋ ದೇವೋ ರುದ್ರೋನ ದ್ವಿತೀಯಃ" ಎಂಬ ಶ್ರುತಿ, ಕೇಳಯ್ಯ ಬ್ರಹ್ಮ—ಶಿವನೇ ದೈವ ಶಿವಷಡಕ್ಷರ ಮಂತ್ರವೇ ಮಂತ್ರ ಅದೆಂತೆಂದೊಡೆ :—ವೇದ ಮಾತಾ ಚ ಗಾಯತ್ರೀ । ಮಂತ್ರಮಾತಾ ಷಡಕ್ಷರೀ । ವಿಭೂತಿಧಾರಣಂ ಚೈವ । ಸರ್ವ ಪೀಡಾ ನಿವರ್ತಕಂ " ಎಂದು ಸಮಸ್ತ ಮಂತ್ರಕ್ಕೆ ತಾಯಿಯಾದಂಥಾದ್ದೇ ಷಡಕ್ಷರ ಮಂತ್ರ, ಸದಾ ಧಾರಣವಾದ ವಿಭೂತಿಯೇ ಸಕಲ ಭೂತ, ಪ್ರೇತ, ಪಿಶಾಚ, ಪೀಡಾಹರ, ಬ್ರಹ್ಮರಾಕ್ಷಸ, ಜಟ್ಟಿಗ, ಮೊದಲಾದವೆಲ್ಲ ಉಚ್ಚಾಟನ ಅದಲ್ಲದೆ :—ಸರ್ವತೀರ್ಥಸ್ನಾನಾದಿಫಲ, ಸಕಲ ಯಜ್ಞಂಗಳ ಮಾಡಿದ ಫಲ, ಸಕಲ ಸೂತಕ ಕರ್ಮಾದಿ ದೋಷಂಗಳು ಪರಿಹರವೆಂದು ಶ್ರುತಿಯುಂಟು, ಅದೆಂತೆಂದೊಡೆ :—

**ಭೀಮಾಗಮದ ಗ್ರಂಥ** ॥ ಸರ್ವತೀರ್ಥೇಷು ಯತ್ಪುಣ್ಯಂ । ಸರ್ವಯಜ್ಞೇಷು ಯತ್ಫಲಂ।
ತತ್ಫಲಂ ಕೋಟಿಗುಣಿತಂ । ಭಸ್ಮಸ್ನಾನಾನ್ನ ಸಂಶಯಃ ॥ **ಮತ್ತಂ** ॥

**ವೇದ ಶ್ರುತಿ ||** ಅವಿರ್ಯ ಭಸ್ಮತ್ರಿಸಂಧ್ಯಾಯ | ಮುದ್ಧೂಳ್ಯೇ ದಿವ್ಯಸ್ನಾನೆ ಶಿವಂ ಧ್ಯಾಯೇತ್ | ಎಂದು ಮತ್ತಂ ಆ ಮಹಾದೇವನ ಅಕ್ಷಿ ಬಿಂದುವಿನಿಂದಾದ ರುದ್ರಾಕ್ಷಿಯೇ ವಿಶೇಷವೆಂದು ಪೇಳ್ಕುಂ.

**ಗ್ರಂಥ ||** ನಕ್ಷತ್ರೇಷು ಯಥಾ ಚಂದ್ರೋ | ಗ್ರಹೇಷು ಚ ಯಥಾ ರವಿಃ |
ಆಯುಧೇಷು ಯಥಾ,ವಜ್ರಂ | ಪಕ್ಷಿಣಾಂ ಗರುಡೋ ಯಥಾ ||
ಗಜೇಷ್ವೈರಾವತಶ್ಚೈವ | ಗೌರೀ ದೇವೀಷು ವೈಯಥಾ |
ನದೀನಾಂ ಮಣಿಕರ್ಣಿಸ್ತು | ಮುನೀನಾಂ ಕಶ್ಯಪೋ ಯಥಾ ||
ಮಣಿಷ್ವಪಿ ಚ ಸರ್ವೇಷು | ರುದ್ರಾಕ್ಷಂಚ ವಿಶೇಶಿತಂ |

ಎಂದು ಶಿವರೂಪಾದ ರುದ್ರಾಕ್ಷಿಯೇ ಉತ್ತಮೋತ್ತಮವೆಂದು ಹೇಳಲ್ಪಟ್ಟಿತು.

**ಶಾರ್ದೂಲ ವೃತ್ತ.**

ಗಂಗಾ ಪುಷ್ಕರ ನರ್ಮದೇ ಚ ಯಮುನಾ ಗೋದಾವರೀ ಗೋಮತೀ |
ಗಂಗಾ ದ್ವಾರ ಗಯಾ ಪ್ರಯಾಗ ಬದರೀ ವಾರಣಾ ಸೀವಾನದೀ ||
ಕನ್ಯಾಸೇತು ಸರಸ್ವತೀ ಪ್ರಭೃತಯೋ ಬ್ರಹ್ಮಾಂಡ ಮದ್ಯಾಖಿಲ |
ತೀರ್ಥಸ್ನಾನ ಸಹಸ್ರಕೋಟಿ ಫಲದಂ ಶ್ರೀ ಶಂಭು ಪಾದೋದಕಂ * || ೧ ||

ವಚನ || ಇಂತೆಂದು ಶ್ರುತಿ ಮತ್ತಂ " ಅಣೋರಣೀಯರ್ಾ ಮಹತೋ ಮಹೀಯರ್ಾ " ಎಂಬ ಪರಾತ್ಪರ ಕಾರಣನಾದಂಥ ಆ ಪರಬ್ರಹ್ಮವಂ ನೀನು ಮುಂದುಗಾಣದೆ ನುಡಿಯುತ್ತಿರುವೆ. ನಿನ್ನ ಕರ್ಮಫಲವೇನೆಂದರಿಯಬಾರದು. ನೀನು ವೇದಂಗಳಂ ಕೇಳಿಕೋ, ಎಂದು ವಿಷ್ಣು ಕಡೆಗಾಗಲು, ಆ ವೇಳೆಯಲ್ಲಿ ನಾಲ್ಕು ವೇದಂಗಳು ಬಂದು ಬ್ರಹ್ಮನ ಇದಿರೊಳ್ನಿಂದು ಏನನ್ನುತಿರ್ದಪವು.

**ಜಂಪೆ.**

ಮೊದಲು ಋಗ್ವೇದ ಮೂ | ರ್ತಿವೆತ್ತು ಕಮಲಜನ |
ಇದಿರೊಳಗೆ ನಿಂತು ಇಂ | ತೆಂದುದಾಕ್ಷಣದಿ ||೧||

ಶರಜ ಸಂಭವ ಕೇಳು ಈ | ಸಕಲ ಬ್ರಹ್ಮಾಂಡಗಳ |
ಧರಿಸಿ ಕೊಂಡಿರುವಂಥ | ಪರಮಾತ್ಮ ದೈವಂ ||೨||

ಇರುವೆ ಕಡೆಯಾನೆ ಮೊದ | ಲೆಂಬತ್ತು ನಾಲ್ಕು ಜೀ |
ವರ ಸೂತ್ರಮಂ ಪಿಡಿದು | ಚರಿಸುತಿಹ ದೈವಂ ||೩||

---

* ಈ ವೃತ್ತ (ಎ, ಜ.) ಪ್ರತಿಗಳಲ್ಲಿಲ್ಲ.

ಪರಮ ಋಷಿಗಳ ಹೃದಯ ದೊ । ಳಿರುವ ನವ ಚಕ್ರಗಳ ।
ಸರಸಿಜದಿ ಚರಿಸುತಿಹ । ಪರಹಂಸ ದೈವಂ ॥ ೪ ॥
ಇರುವ ಸಚರಾಚರ । ಸ್ಥಾವರಾದಿಗಳೊಳಗೆ ।
ಚರಿಸಿ ಬಳಲದೆ ಇರ್ಪ । ಪರಮನೇ ದೈವಂ ॥ ೫ ॥

**ಋಗ್ವೇದಶ್ರುತಿ ॥**

ಯಸ್ಯಾಂತಃ ಸ್ಥಾನಿ ಭೂತಾನಿ । ಯತಸ್ಸರ್ವಂ ಪ್ರವರ್ತತೇಃ ।
ಆಹುಸ್ತಂ ತತ್ಪರಂ ತತ್ವಂ । ಸದೇವಶ್ಚ ಮಹೇಶ್ವರಃ ॥ ೧ ॥

ಓಂ ನಮೋ ರುದ್ರ ಮನ್ಯವೇ ಎಂದು ಋಗ್ವೇದವು ಅ ಮಹಾರುದ್ರಂಗೆ ನಮಸ್ಕಾರವಂ ಸಮರ್ಪಿಸಿ, ಎಲೆ ಬ್ರಹ್ಮ ಮುಂದನರಿಯದೆ ಮಾತನಾಡಬೇಡ, ಇನ್ನು ಯಜುರ್ವೇದವಂ ಕೇಳಿಕೋ ಎಂದು ಋಗ್ವೇದವು ಕಡೆಗಾಗಲು, ಯಜುರ್ವೇದ ವಿಂತೆಂದುದು.

**ಕೊಂಚ ಜಂಪೆ.**

ಕೇಳು ಕೇಳೆಲೊ ಬ್ರಹ್ಮದೇವಾ—ನಿನಗೆ । ಕಾಳುಮತಿ ದೊರಕಿತೇ ಭಾವ ।
ಕೋಳು ಹೋಯಿತು ನಿನ್ನ ಜೀವಾ—ನೀನು । ತಾಳಿ ಕೊಂಡಿರು ಒಂದುಜಾವ ॥
ಸಕಲ ವ್ಯಾಪಕನೆಂಬುದರಿಯಾ—ನಿನ್ನ । ವಿಕಳ ಬುದ್ಧಿಗಳನ್ನು ಮರೆಯ ।
ಅಖಿಳರೊಡೆಯನ ಶಿವನನರಿಯಾ – ನಿನ್ನ ಸುಕೃತವೇ ಪರಿ ಹುಚ್ಚುಕುರಿಯೆ ॥
ಈರೆರಡು ಕಮಲ ದಳಮೀರಿ – ಮೇಲೆ । ಆರೆಸಳ ದಳವ ತಾನೇರಿ ।
ತೋರುವಾ ನವ ಚಕ್ರಗಳ ಮೀರಿ – ಶಿವನು । [1] ಬೇರಿರು [1] ತಿಹ ಬ್ರಹ್ಮ ಕಳೆ ಗೂಡಿ ॥ ೩ ॥

ಇಂತೆಸೆವ ಪರ ಬ್ರಹ್ಮವನ್ನು – ನೀನು । ಸಂತಸದಿ ತಿಳಿ ಮನದೊಳಿನ್ನು ।
ಕಂತು ಹರನನು ಮರೆದೆ ನೀನು – ನಿನಗೆ । ಎಂತಹುದೊ ಅರಿಯೆ ನಾನಿನ್ನು ॥
ಪೇಳುವೆನು ಮುಂದೆ ನೀ ಕೇಳು – ಪ್ರಳಯ । ವೇಳೆಯೊದಗಿತು ನಿನಗೆ ತಾಳು ।
ಭಾಳಲೋಚನ ಶಿವಗೆ ಕೀಳು – ನೀವು । ಜಾಳು ದೈವಗಳು ಶಿವನಾಳು ॥ ೫ ॥

**ಯಜುರ್ವೇದ ಶ್ರುತಿ ॥** ಯೊಯೊಗ್ನೆ ರಭಿವ್ಯೈ ಈಶಃ । ಯಾಗೇನ ಚ ಸಮುಚ್ಚಯಃ।
ಯಮಾಹುರೀಶ್ವರಂ ದೇವಂ ಸದ್ಯಶ್ಯೋऽಹಿ ಪಿನಾಕ ಧೃತ್ ॥ ೧ ॥

ಓಂ ನಮೋ ರುದ್ರಮನ್ಯವೇಯೆಂದು ಆ ಮಹಾರುದ್ರಂಗೆ ನಮಸ್ಕಾರವಂ ಸಮರ್ಪಿಸಿ, ಇನ್ನು ಸಾಮವೇದಮಂ ಕೇಳಿಕೋಯೆಂದು ಯಜುರ್ವೇದ ಕಡೆಗಾಗಲು, ಸಾಮವೇದವು ಬಂದು ! ಬ್ರಹ್ಮನ ಇದಿರೊಳು ನಿಂತು !! ಇಂತೆಂದುದು.

---

*ಈ ಪದ್ಯ ( ಗ, ಚ. ) ಪ್ರತಿಗಳಲ್ಲಿಲ್ಲ. 1–1 ಬೀರು ( ಡ, ತ, ಬ.)

**ಅಟತಾಳ.**

ಜಲಜ ಸಂಭವ ಕೇಳು ಮಾಯೆಗೆ । ಸಿಲುಕದೆಲ್ಲಾ ಜೀವರ ।
ಕುಲಾಲ ಚಕ್ರದ ಬಗೆಯ ತಿಳುಹುವ – ಸುಲಭನವ ದೈವಂ ॥ ೧ ॥

ಸಂಚಿತ ಪ್ರಾರಬ್ಧವೆನಿಸುವ । ವಂಚನೆಗಳಾ ಅರಿವವ ।
ಪಂಚ ತತ್ವವ ಮೀರಿ ನಡೆವ ನಿ – ಶ್ಚಿಂತನವದೈವಂ ॥ ೨ ॥

ಕಾಣಿಸುವ ನೋಡುವರ ಕಣ್ಣಿಗೆ । ಕಾಣದಂತೆಯೆ ಇರುವನು ।
ಪ್ರಾಣದಲಿ ಭಜಿಸುವ ಮಹಾತ್ಮರ – ಕೇಣಿಗೊಂಡಿರುವ ॥ ೩ ॥

ಎಲ್ಲಿ ನೆನಸಿದಡಲ್ಲಿ ತೋರುವ । ನೆಲ್ಲದೇವರ ಒಡೆಯನು ।
ಬಲ್ಲಮಹಿಮರ ಹೃದಯದೊಳಗಿಹ – ನೆಲ್ಲಕಾಲದೊಳು ॥ ೪ ॥

ಮನಕಗೋಚರ ಮಹಿಮ ಶಿವನನು । ಮರೆದೆಯಲ್ಲಾ ಕಮಲಜ ।
ನಿನಗೆ ಕಾಲವದೇನೊ ತಿಳಿಯದು – ನೀನೇ ಬಲ್ಲೆ ॥ ೫ ॥

**ಸಾಮವೇದ ಶ್ರುತಿ** ॥ ಯೇನೇದಂ ಜಾಯತೇ ಚಕ್ರಂ ।
ಯೇನತ್ವಾ ಶಾಂತರಂ ಮಹತ್ । ಯೋಗಿಭಿರ್ವೇದ್ಯತೇ ತತ್ವಂ ।
ಮಹಾದೇವೇಶ ಶಾಂಕರಂ ॥ ೧ ॥

ಓಂ ನಮೋ ರುದ್ರಾಯತೇ ನಮೋ ಎಂದು ಸಾಮವೇದ ಮಹಾ ರುದ್ರಂಗೆ ನಮಸ್ಕಾರವಂ ಸಮರ್ಪಿಸಿ, ಎಲೊ ! ಬ್ರಹ್ಮ ನೀನು ಅಥರ್ವಣ ವೇದವಂ ಕೇಳಿಕೋ !!! ಎಂದು ಸಾಮವೇದ ಕಡೆಗಾಗಲು, ಅಥರ್ವಣ ವೇದ ಬಂದು ಬ್ರಹ್ಮಗಿಂತೆಂದುದು.

**ತ್ಯಾಗಮಾನ–ಅಟತಾಳ.**

ಗುರುವೆ ಪರಬ್ರಹ್ಮವಹುದು ಎಲೆ ಬ್ರ – ಹ್ಮ – ಆತ–
ಅರಿಷಡ್ವರ್ಗದೊಳಗೆ ಸಿಲುಕನೆಲೆ ಬ್ರ – ಹ್ಮ ॥ ೧ ॥

ಪರಮ ಋಷಿಗಳಂತರ್ಯಾಮಿ ಎಲೆ ಬ್ರ – ಹ್ಮ – ನೀನು –
ಹರನ ಕುರುಹು ಮರೆದೆಯಲ್ಲಾ ಎಲೆ ಬ್ರ – ಹ್ಮ ॥ ೨ ॥

ಪ್ರಕೃತಿ ವಿಕೃತಿ ಷಡ್ಭ್ರಮೆಯೆಂಬ ಎಲೆ ಬ್ರ – ಹ್ಮ – ಇಂಥ –
ಸಕಲವನ್ನು ಮೀರಿದವನು ಎಲೆ ಬ್ರ – ಹ್ಮ * ॥ ೩ ॥

ಅಖಿಳಮುನಿಗಳಾತ್ಮ ಜ್ಯೋತಿ ಎಲೆ ಬ್ರ – ಹ್ಮ – ನಿನ್ನ –
ಪ್ರಕೃತಿ ಗುಣವ ಬಿಟ್ಟು ಬದುಕು ಎಲೆ ಬ್ರ – ಹ್ಮ – * ॥ ೪ ॥

ಸದಮಲ ಸಚ್ಚಿದಾನಂದ ಎಲೆ ಬ್ರ – ಹ್ಮ – ಸರ್ವ –
ಹೃದಯ ಸೂತ್ರ ಧಾರಕನು ಎಲೆ ಬ್ರ – ಹ್ಮ ॥ ೫ ॥

* ಈ ಪದ್ಯಗಳು (ಖ, ಗ, ಚ.) ಪ್ರತಿಗಳಲ್ಲಿಲ್ಲ.

ಮದವ ಕಳೆದು ಮಾತನಾಡೋ ಎಲೆ ಬ್ರ – ಹ್ಮ – ನಿನ್ನ–
ಸದೆವ ಕಾಲವು ಕಾಣಬಂತು ಎಲೆ ಬ್ರ – ಹ್ಮ ॥ ೬ ॥

**ಅಥರ್ವಣವೇದಶ್ರುತಿ** ॥ ಯಃ ಪ್ರಪಶ್ಯತಿ ದೇವೇಶಂ । ಯತಃ ಸೋಯಂ ತತಃ
ಪರಂ । ಮಹೇಸಂ ಪುರುಶಂ ರುದ್ರಂ ಸ ದೇವೋ ಭಗರ್ವಾ ಶಿವಃ ॥ ೧ ॥

ಓಂ ನಮೋ ಅಸ್ತು ರುದ್ರಮನ್ಯವೆ ಎಂದು, ಮಹಾ ರುದ್ರಂಗೆ ನಮಸ್ಕಾರವಂ ಸಮರ್ಪಿಸಿ, ಅಥರ್ವಣವೇದವಿಂತೆಂದುದು. ಎಲೊ! ಬ್ರಹ್ಮ ಕೇಳು ನಾವು ನೀವು ಎಲ್ಲರೂ ಆ ಮಹಾ ರುದ್ರನೆಂಬ ಸೂತ್ರಧಾರಕನ ಕೈಯೊಳಗಣ ಬೊಂಬೆಗಳು ಎಂದು ಅಥರ್ವಣವೇದ ಕಡೆಗಾಗಲು, ಬ್ರಹ್ಮ ವಿಷ್ಣುವಿನ ಮುಖವಂ ನೋಡಿ ಗಹ ಗಹಿಸಿ ನಕ್ಕು ಇಂತೆಂದಂ.

**ತ್ರಿವುಡೆ.**

ಕೋಕ ಸಂಭವ ತನ್ನ ಗರ್ವದಿ । ನಾಲ್ಕು ವೇದದ ಮಾತ ಕೇಳದೆ ।
ಲೋಕ ಹಾಸ್ಯದ ಮಾತನಾಡುತ – ಕಾಕು ಬುದ್ಧಿಯಲಿ ॥ ೧ ॥
ಮಾಧವನೆ ಕೇಳಾದರೆಯು ಮೊದ । ಲಾದಿ ಬ್ರಹ್ಮಾನಾನೆಂದರಿಯದೆ ।
ಬೂದಿಮೆಯ್ಯನ ಘನವ ಪೊಗಳುವ – ವೇದಗಳ ನೋ[1] ಡು[1] ॥ ೨ ॥
ಯಾವ ಸುಗುಣಗಳುಂಟು ಈಶಗೆ । ಯಾವ ಮೊದಲಿಗನಾವಹಿರಿಯನು ।
ಸಾವಧಾನದಿ ಮಾಡಿ ಇಟ್ಟಿಹೆ – ಸಕಲ ಜಗವನ್ನು ॥ ೩ ॥
ಕಾಮನನು ಕಣಿಂದಲುರುಹಿದ । ಕಾಲನನು ಸಂಹಾರ ಮಾಡಿದ ।
ಕೀಲ ಮುರಿದಿಕ್ಕುತಲಿ ಉರುಹಿದ – ಮೇಲೆ ಪುರಮೂರ ॥ ೪ ॥
ತಲೆಗೆ ಸುತ್ತಿದ ಪಾವ ವ್ಯಾಘ್ರನ । ಸುಲಿದು ಧರಿಸಿದ ತೊಗಲು ಮೈಯೊಳು ।
ಎಲುವ ಧರಿಸಿದ ಜೋಗಿ ದೈವಕೆ – ಸಲುವ ಮೊದಲಿಗನೆ ॥ ೫ ॥
ಉರಿವ ನಯನದ ಉಗ್ರವೇಷದ । ಗೊರವನಿಗೆ ಇನಿತಾದರೆಯು ದಯ ।
ಇರುವುದೇ ಎಲ್ಲರೊಳಗಂತವ – ಸರಿಯೆ ನಮಗೆಂದ ॥ ೬ ॥

ವಚನ ॥ ಇಂತೆಂದು ಬ್ರಹ್ಮನಾಡಿದ ಮಾತಂಕೇಳಿ ವಿಷ್ಣು ಕೋಪಾರೂಢ ನಾಗಿ ಏನೆನ್ನು ತಿರ್ದನು.

**ಜಂಪೆ.**

ಕೇಳೆಲೋ ವನಜಸಂ । ಭವನಿನ್ನ ಗರ್ವದಲಿ ।
ಭಾಳ ಲೋಚನ ಶಿವನ । ಬೈದು ನಿಂದಿಪರೆ ॥ ೧ ॥
ಕೇಳ ಬಾರದು ನುಡಿಯ । ತಾಳ ಬಾರದು ನಿಮಿಷ ।
ಕೋಳುಗೊಂಬೆನು ನಿನ್ನ । ಭಾಳದಕ್ಷರವ ॥ ೨ ॥

1-1 ಡೋ (ಒ, ಖ.) ; ಡಾ(ಜ,ಟ, ಡ, ತ, ಬ,) *ಈ ಪದ್ಯ(ಅ, ಇ, ಉ, ಜ, ಬ.) ಪ್ರತಿಗಳಲ್ಲಿ ಮಾತ್ರವಿದೆ.

ಮಗಳ ಕಾರಣ ನಿನ್ನ । ಅಘಹರನು ಎಸೆಯಿತಲೆ ।
ನೆಗೆದೆ ನಕ್ಷತ್ರಕದ । ಗಗನ ದೊಳ [1] ಗರಿಯು [1] ॥ ೩ ॥

ಹಿಂದೆ ದೈತ್ಯನಿಗಂಜಿ । ಬಂದೆ ಪುಷ್ಪಾದ್ರಿಯಲಿ ।
ಚಂದ್ರ ಧರ ಶಿವಪೂಜೆ । ಯಿಂದ ನೀನುಳಿದೆ ॥ ೪ ॥

ಶಿಶು ಜಲಂಧರ ನಿನ್ನ । ಹೊಸೆದು ಗಡ್ಡವ ಕೀಳೆ ।
ಹಸಗೆಟ್ಟು ಕಣ್ಣೀರು । ಒಸರಿದುದನರಿಯಾ ॥ ೫ ॥

ಇಷ್ಟು ಮಾತ್ರಕೆ ನೀನು । ಭ್ರಷ್ಟನಾಗವರೊಡನೆ ।
ಎಷ್ಟುಂಟು ನೀ ಶಿವನ । ದೃಷ್ಟಿಯೊಳಗಿಹೆಯಾ ॥ ೬ ॥

ನಾಡಮಾತುಗಳೇಕೆ । ರೂಢೀಶನಂತಿರಲಿ ।
ಮೂಢ ಬ್ರಹ್ಮನೆ ಕೇಳು । ಈಡೆ ನೀನೆನಗೆ ॥ ೭ ॥

ಹಿಂದೆ ಉರಿಲಿಂಗದಲಿ । ಅಂದುಹುಸಿ ಮಾತಾಡಿ ।
ಎಂದೆಂದು ಪೂಜೆಯ । ಹೊಂದದಂತಾದೆ ॥ ೮ ॥

ಇನ್ನು ಇಷ್ಟರ ಮೇಲೆ । ಅನ್ಯಾಯವಾಡಿದರೆ ।
ನಿನ್ನ ಪ್ರಾಣವ ಕೊಲ್ಲ । ದಿನ್ನು ನಾ ಬಿಡೆನು ॥ ೯ ॥

ವಚನ ॥ ಇಂತೆಂದ ವಿಷ್ಣುವಿನ ಮಾತಿಗೆ ಬ್ರಹ್ಮ ಕೋಪಾರೂಢನಾಗಿ ಏನನ್ನುತಿರ್ದನು.

**ಏಕತಾಳ.**

ಶರಜ ನಾಭನೆ ನಿನ್ನ । ಪರಿಯನೆಲ್ಲವ ಬಲ್ಲೆ ।
ಪರಿಕಿಸುತ ಕೇಳಿನ್ನು । ವಿರಚಿಪೆನು ನಾನು ॥ ೧ ॥

ಆದಿಯಲಿ ಮೂಲ ನ । ಕ್ಷತ್ರದಿ ಜನಿಸೆನಿನ ।
ಗಾದಿ ಮೂಲನುಯೆಂಬ । ಪೆಸರಾದುದರಿಯ ॥ ೨ ॥

ಅಲ್ಲದಾ ನಕ್ಷತ್ರ । ದಲ್ಲಿ ಪುಟ್ಟಿದಾ ಶಿಶುವ ।
ಹೊಲ್ಲವೆನುತಲಿ ಧಾತ್ರಿ । ಯಲ್ಲಿ ಬೀಸಾಡೆ ॥ ೩ ॥

ಭೂದೇವಿ ಸಲಹಿ ಭೂ । ಕಾಂತನೆನೆ ಪೆಸರಿಟ್ಟು ।
ಆದಿ ರುದ್ರನ ಪೂಜೆ । ಸಾಧಿಸೆಂದೆನಲು ॥ ೪ ॥

ಸಕಲ ವಿಧದಲಿ ಪೂಜೆ । ಪ್ರಕಟಿಸಿಯೆ ಮಾಡಲು ।
ಅಕಳಂಕ ಶಿವ ನಿನ್ನ । ಪ್ರಕೃತಿಯನು ತಿಳಿದು ॥ ೫ ॥

---

1 – 1 ಗಿರದೆ (ಎ, ಒ, ಖ, ಚ, ತ. ) 2 – 2 ಆ ವಿಷ್ಣುವಿನ ಮುಂದೆ (ಅ, ಎ, ಒ, ಖ, ಚ, ಜ. ಟ, ಬ.)

ಹರನು ಪೌರಾಣವನು । ಕರಸಿ ಈ ವಿಷ್ಣುವಿನ ।
ಕರ್ಮ ಕ್ಷಯವ ನೋಡಿ । ಪರಿಯ ಪೇಳಿನಲು ॥ ೬ ॥
ಬಂದು ಪೌರಾಣಂಗ । ಳಂದಾಗ ಈಶನಿಗೆ ।
ವಂದಿಸುತ ನಿಂತುಯಿಂ । ತೆಂದು ಪೇಳಿದವು ॥ ೭ ॥

ಶ್ರುತಿ ॥ ಓಂ ಮೂಲಾ ನಕ್ಷತ್ರ ಜಾತಶ್ಚ । ಮಾತರಂ ಹಂತಿ ನಿಶ್ಚಯಂ ।
ತಸ್ಮಾದ್ದೋಷ ನಿವೃತ್ಯರ್ಥಂ । ಸ್ಥಾಪಯೇ

ದುರ್ವರಾಸ್ಥಲಿ । ಜನನ ಪಾಪಂ ಪರ್ವತ ಸ್ಥೂಲಂ ॥ ಇಂತೆಂದು ಪುರಾಣಂಗಳು ಹೇಳಲಾಗಿ ಆ ಪುರಾಣಂಗಳ ಕೈಯ ದೀಕ್ಷಿತನಾಗೆ "ಪುರಾಣ ಪುರುಷೋತ್ತಮಃ" ಎಂಬ ಪೆಸರು ಬಳಿಕಲಾಯಿತು. ಅದಲ್ಲದೆ ಜಲಂಧರನ ಸತಿ ವೃಂದಾದೇವಿಗೆ ಮನಸೋತು, ಮತಿಗೆಟ್ಟು ಮಂಕಾಗಿ ಲೋಕದ ಸ್ಥಿತಿಗಳಂ ಮರೆದು, ಆ ವೃಂದೆಯ ಹೋಮ ಕುಂಡದ ಮೇಲೆ ಕುಳಿತಿರಲಾಗಿ, ನಾರದಂ ಕಂಡು, ಕೈಲಾಸಕ್ಕೆ ಪೋಗಿ, ಪಾರ್ವತಿ ಪರಮೇಶ್ವರನು ಓಲಗಂಗೊಟ್ಟಿರುವ ಸಮಯದಲ್ಲಿ, ನಿನ್ನ ಸ್ಥಿತಿಯಂ ಬಿನ್ನಹವಂ ಮಾಡಲು, ಆಗ ದೇವಿಯರು ತಮ್ಮ ಮುಡಿಯೊಳಗಣ ಬಿತ್ತುಗಳಂ ತೆಗೆದು ಕೊಡಲು, ಆ ಬಿತ್ತುಗಳಂ ನಾರದ ಮುನಿ ತಂದು[1] ಆ ವೃಂದೆಯ ಹೋಮ ಕುಂಡದ ಮೇಲೆ[1] ಬಿತ್ತಲು, ಅವು ಶ್ರೀ ತುಳಸಿಯ ಗಿಡವಾಗಿ ಬೆಳೆಯಲು, ಆ ಗಿಡವಿನ ಸಮೂಲಮಂ ಕಿತ್ತು ವನಮಾಲೆಯಂ ಮಾಡಿ, ಧರಿಸಿಕೊಂಡು ಭ್ರಮೆಯಳಿದು ವೈಕುಂಠಕ್ಕೆ ಪೋದೆ. ಅದಲ್ಲದೆ ತಾರಕನಟ್ಟುಳಿಗಾರದೆ ಈಶ್ವರನ ನೊಸಲಗ್ನಿಗೆ ನಿನ್ನ ಮಗನಂ ಕೊಟ್ಟು, ನಿನ್ನ ಪ್ರಾಣವನುಳಿಹಿಸಿಕೊಂಡೆ ಎನಲು, ಆ ಮಾತಿಗೆ ವಿಷ್ಣು ಕೋಪದಿಂದ ಏನನ್ನು ತಿರ್ದನು.

**ದ್ವಿಪದಿ.**

ಎಲೆ ಬ್ರಹ್ಮ ಕೇಳು ನಿನಗಿಷ್ಟೊಂದು ಮಾತು ।
ತಲೆಗೆ ಚಕ್ರದಲಿಟ್ಟು ನೆಲಕೆ ಕೆಡಹುವೆನು ॥ ೧ ॥
ಎಂದ ಮಾತಿಗೆ ಬ್ರಹ್ಮ ಇಂತೆಂದು ನುಡಿದ ।
ಬಂಧಿಸಿ ನಾನಿನ್ನ ಪಾಶುಪತಾಸ್ತ್ರದಲಿ ॥ ೨ ॥
ಕೊಂದುಹಾಕುವ ತನಕ ಕೋಪನಿಲ್ಲುವುದೆ ।
ಎಂದು ಇಬ್ಬರು ಎದ್ದು ಇದಿರಿದಿರು ನಿಂದು ॥ ೩ ॥
ಸಂಧಿಸಿದ ಸಭೆಯೆಲ್ಲ ಸ್ತೈವೆರಗಾಗೆ ।
ಮದಗಜಗಳೆರಡು ತಾವು ಮಲೆತು ನಿಂತಂತೆ ॥ ೪ ॥

---

**1—1** ಆ ವಿಷ್ಣುವಿನ ಮುಂದೆ (ಅ,ಎ,ಒ,ಖ,ಚ,ಜ,ಟ,ಬ.)

* ಈ ಅರ್ಧಪದ್ಯ (ಅ,ಒ,ಖ,ಗ,ಚ,ಡ,ತ,ಬ.) ಪ್ರತಿಗಳಲ್ಲಿಲ್ಲ.

ಕುಲಗಿರಿಗಳೆರಡೆದ್ದು ಕೂಡಿ ಕದನಕ್ಕೆ |
ಮಲೆತು ನಿಂತಂತವರು ಮಥನಿಸುತ ನಿಲಲು || ೫ ||

ಸಿಡಿಲ ಗರ್ಜನೆಯಂತೆ ಶೀಘ್ರಕೋಪದಲಿ |
ಗಡ ಬಡಿಸಿ ಈರ್ವರು ಗರ್ಜಿಸುತಲೇಳೆ || ೬ ||

ಕೂಡಿದೋಲಗವೆಲ್ಲ ಕೊಸರಿ ತಮ ತಮಗೆ |
ಓಡಿತು ಸುರನಿಕರ ಒಂದೊಂದು ಕಡೆಗೆ || ೭ ||

ಜಲಜಾಕ್ಷ ಚಕ್ರವಂ ಝಳಪಿಸುತ ಪಿಡಿದು |
ತಲೆಗೆ ಸರಿಸವ ನೋಡಿ ತಪ್ಪದಲೆ ಇಡಲು || ೮ ||

ರೋಷವೆಗ್ಗಳವಾಗಿ ರೋಮ ಗುಡಿಗಟ್ಟಿ |
ಪಾಶುಪತಾಸ್ತ್ರವ ಬ್ರಹ್ಮ ಪಸರಿಸಿ ಇಡಲು || ೯ ||

ಶರಜಭವನಿದಿರ ಚಕ್ರವ ಹೋಗಗೊಡದೆ |
ತರುಬುತಲೆ ಆ ಚಕ್ರ ಹರಿ ಮುರಿಯ ಮಾಡೆ || ೧೦ ||

ಇಂತು ಚಕ್ರವು ಬಾಣವೆರಡು ಕಿತ್ತಾಡೆ |
ಎಂತು ನಿಲ್ಲಲು ಬಹುದು ಯಾರು ಬಿಡಿಸುವರು || ೧೧ ||

ಪ್ರೊಡವಿಗೀಶ್ವರಕಣ್ಣು ಕಿಡಿಯು ಬಿಟ್ಟಂತೆ |
ಸಿಡಿಲ ಬಳಗವು ಕೂಡಿ ಹೊಡೆದಾಡುವಂತೆ || ೧೨ ||

ಕಿಡಿ ಕಿಡಿಯು ಮಸಗುತ್ತ ಖೇಚರತ್ವದಲಿ |
ಬಿಡದೆ ಕಾದಿದವೆರಡು ಭೀಕರವಾಗಿ || ೧೩ ||

ವಚನ || ಆ ವೇಳೆಯಲ್ಲಿ ಮಹಾ ಪ್ರಣವ ಬಂದು, ಆಕಾಶದಲ್ಲಿ ನಿಂತು, ಓಂಕಾರಾಕೃತಿಯಲ್ಲಿ ಏನೆನ್ನುತಿರ್ದುದು.

**ಕೊಂಚೆ ಜಂಪೆ.**

ಮಂದಮತಿಯಜ ಕೇಳು ನಿನ್ನ – ಗರ್ವ | ಮುಂದು ಗೆಡಿಸದೆ ಬಿಡದುಮುನ್ನ |
ಚಂದ್ರ ಧರ ಶಿವ ತಾನು ಬಂದು – ನಿನ್ನ | ಕೊಂದನಲ್ಲದೆ ಬಿಡನು ಇಂದು || ೧ ||
ಮಗ ತಾಯಿ ಬಂಜೆಯೆಂಬಂತೆ – ನಿನ್ನ | ಬಗೆಯು ಇಲ್ಲಿಗೆ ಕಾಣಬಂತೆ |
ಅಘ ಹರನು ಬರುತಾನೆ ಮುಂತೆ – ನಿನ್ನ | ತಗಲಿಸುವ ತಲೆಯು ನೆಗೆವಂತೆ ||
ಜಗವನೆಲ್ಲವ ಕಾಬಕಣ್ಣು – ತನ್ನ | ತಗಲ್ವ ಕೊಲೆಯನು ಕಾಣದಿನ್ನು |
ಅಘ ಹರನ ಮರೆದೆ ನೀನಿನ್ನು – ನಿನ್ನ | ಬಗೆಯೇನೊ ಕಾಣಿಸದು ಇನ್ನು ||
ಪರಮಾತ್ಮ ನಿಮಿಷ ಮಾತ್ರದಲಿ – ನೀನು | ಹರಣಗಳೆದೊಂದು ಕೋಟಿಯಲಿ |
ಬರುತಿರುವೆ ಬಹಳ ಭವಗಳಲಿ – ಶಿವನೆ | ಸ್ಥಿರನೆಂದು ನಂಬಲರಿಯದಲಿ || ೪ ||

ರೋಗಿ ಬಲ್ಲನೆ ಹಾಲ ರುಚಿಯ – ಹಗಲ । ಗೂಗೆ ಬಲ್ಲುದೆ ಕಾಗೆ ನಿರೆಯ ।
ಯೋಗಿ ಬಲ್ಲನೆ ಕರ್ಮ ಹುಸಿಯ – ಕಾಕು । ಜೋಗಿಬಲ್ಲನೆ ಶಿವನ ಬಿಸಿಯ ॥೫॥

ನಿತ್ಯ ನಿರ್ಮಲ ವಸ್ತುವರಿಯೆ – ನಿನ್ನ । ಅಸ್ತವ್ಯಸ್ತವ ಮುಂದೆ ಮರೆವೆ ।
ಸಚ್ಚಿದಾನಂದ ಶಿವ ಪರಮು – ಪರ । ವಸ್ತು ವೆಂಬುದನು ಕೇಳ್ದರಿಯ ॥ ೬ ॥

ಗುರುವವಿರಳಾನಂದ ಪರದೇವ – ಅವನು । ಪರಮ ಭಕ್ತರ ಮನದ ಜೀವ ।
ಮರೆ ಹೊಕ್ಕವರನ್ನು ನೆರೆಗಾಯ್ವ – ಶಿವನ । ಅರಿಯದಿರ್ದವನೆ ದುರ್ಭಾವ ॥ *

ವಚನ ॥ ತಂದೆ ತಾಯಿಯ ಇಂದ್ರಿಯದಲ್ಲಿ ಬಂದವನು ದೇವನಲ್ಲ, ಸಂದೇಹ ವೆಂಬ ಕುಳಿಯಲ್ಲಿ ಬಿದ್ದವನು ದೇವನಲ್ಲ. ಶುಕ್ಲ ಶೋಣಿತದಲ್ಲಿ ಹೊಕ್ಕು ಬೆಳೆದವನಲ್ಲ, ಎಂತಿರ್ದಂತೆ ! ಆ ಪರವಸ್ತು ನೋಡ, ಅಂಥ ಸಕಲ ದೇವತಾ ಶಿರೋಮಣಿ, ಸರ್ವ ಜಗದಕರ್ತ ಬೇರೆ ಇದ್ದಾನೆ, ನಿಮ್ಮಿಬ್ಬರಿಗೆಯು ಕದನ ಬೇಡವೆಂದು ಪ್ರಣವ ಇಂತೆಂದುದು.

**ಶ್ರುತಿ ॥** ನೇಹಾಸ್ತಿ ಭಗರ್ವಾ ಆತ್ಮಾ । ಸ್ವಾತ್ಮನೋ ಪ್ಯತಿರಿಕ್ತತಃ ।
ಕದಾಚಿತ್ ಪವತೇ ರುದ್ರಃ । ಸದೃಶೋಪಿ ಮಹೇಶ್ವರಃ ॥ ೧ ॥

ಅಯಂಚ ಭಗರ್ವಾನೀಶಃ । ಸ್ವಯಂ ಜ್ಯೋತಿಃ ಸನಾತನಃ ।
ಸ್ವಾನಂದ ಭೂತೋऽ ನಾದೀಶೋ । ದೇವೋऽ ನಾಗಂತುಕಃ ಶಿವಃ ॥ ೨ ॥

ಎಂಬ ಪ್ರಣವದ ಮಾತಿಂಗೆ ಆ ಬ್ರಹ್ಮ ಏನನ್ನುತಿರ್ದನು.

**ತ್ರಿವುಡೆ.**

ಕಡಲ ಕದಡುವೆ ಸುಡುವೆ ಲೋಕವ । ಅಡಿಯಲೊತ್ತುವೆ ಪೊಡವಿಯುಳಿವೊಲು ।
ಒಡಿವೆ ನಭವನು ಬಡಿವೆ ಮಲೆತರ – ಪಡಿಯು ಎನಗಾರು ॥ ೧ ॥

ಹರಿಯ ಚಕ್ರವನೊರಸಿ ಬಿಸುಡುವೆ । ಹರನ ಶೂಲವ ಮುರಿದು ಬಿಡುವೆನು ।
ಸುರರ ಅಸುರರ ಸರಕುಗೊಳ್ಳೆನು – ಸರಿಯು ಎನಗಾರು ॥ ೨ ॥

ಸೃಷ್ಟಿ ಸ್ಥಿತಿ ಲಯ ಮೂರಕ್ಕೊಡೆಯನಾ । ನಷ್ಟಮಹ ಸಿದ್ಧಿಗಳ ಕೊಡುವೆನು ।
ಎಷ್ಟು ದೈವಗಳುಂಟು ಅವರಿಗೆ – ಶ್ರೇಷ್ಠ ನಾನೆಂದ ॥ ೩ ॥

ಹರನು ಹುಟ್ಟಿದ ಹಣೆಯ ಮಧ್ಯದಿ । ಹರಿಯು ಹುಟ್ಟಿದ[1] ಕಟಿಯ[1] ಮಧ್ಯದಿ ।
ನರ ಸುರೋರಗ ಸಚರಾಚರವೆನ್ನ – ಕರುಣದಿಂದಿಹುದು ॥ ೪ ॥

ಸಕಲ ಕರ್ತನು ಸಕಲ ಹೆತ್ತನು । ಸಕಲ ಸನ್ನಾಹಕ್ಕೆ ಒಡೆಯನು ।
ಅಖಿಳ ವ್ಯಾಪಕನೆನಗೆ ಬದಲಿ – ನ್ನುಂಟೆ ಜಗದೊಳಗೆ ॥ ೫ ॥

---

* ಈ ಪದ್ಯ (ಗ, ಚ. ) ಪತ್ರಿಗಳಲ್ಲಿಲ್ಲ.

1 – 1 ಉದರ (ಅ, ಒ, ಪ.) ; ಉರದ (ಇ, ಎ, ಖ, ಗ, ಚ, ಜ, ಡ, ತ, ಬ.)

**ಕಂದಪದ್ಯ.**

ವರ ಮಿಂಚು ಪುಳುವು ದೀಪವ |
ತರಣಿಯ ಕಿರಣವ ಘೂಕಂ ಪಳಿವಾ ಬಗೆಯೊಲ್ ||
ಪರ ಶಿವನಂ ಮರೆದಜನಿಗೆ |
ಶಿರ ಗಡೆಯೆಂದೆನುತ ಪ್ರಣವ ಬೆರಗಾಗಿರ್ಕುಂ || ೧ ||

ವಚನ || ಆ ವೇಳೆಯಲ್ಲಿ ಮಹಾ ದೇವ ಬರುತಿರ್ದ್ದನದೆಂತೆನೆ:—

**ಅಟತಾಳ.**

ಘೋರ ತರದಮವಾಸ್ಯೆದಿನ ಸರಿ | ರಾತ್ರಿಯಲ್ಲಿ ಈಶನು |
ತೋರಿದನು ನಿಜರೂಪುಯೆಣಿಸಿದ — ಸೂರ್ಯನಂತೇ || ೧ ||

ಥಳ ಥಳಿಪ ಕೆಂಜೆಡೆಯು ಮಕುಟದ | ಪೊಳೆವ ಚಾರು ಚಂದ್ರನ |
ಜ್ವಲನ ನಯನದ ದಶಭುಜದ ಪಂಚ — ಹೊಳೆವ ಕಳೆಮುಖದ || ೨ ||

ವಿಷಗೊರಳು ಬಿಸಿಗಣ್ಣು ಮೈಯೊಳು | ಎಸೆವ ವ್ಯಾಘ್ರದ ಚರ್ಮದ |
ಮಿಸುಪ ಮೃಗ ತ್ರಿಶೂಲ ಡಮರುಗ — ಭಸಿತದಿಂದ || ೩ ||

ಇಟ್ಟ ಉರಗಾ ಭರಣ ಪಾದದಿ | ಮೆಟ್ಟಿದಂಥಾ ಪಾವುಗೆ |
ಅಟ್ಟಹಾಸದಿ ಬಂದ ಬ್ರಹ್ಮನ — ದೃಷ್ಟಿಗಿದಿರ || ೪ ||

ದೇವನಿದಿರೊಳು ಬಂದು ನಿಲ್ಲಲು | ಜೀವ ಕಾಮ್ಯವನರಿಯದ |
ಗಾವಳಿಗನಜನೆತ್ತ ಬಲ್ಲನು — ಸಾವು ನಿತ್ಯವನು || ೫ ||

ನೀರನುಳಿದಮೃತವನು ಕೊಂಬ | ಮರಾಳ ತಾನೇ ಬಲ್ಲುದಲ್ಲದೆ |
ನೀರ ಕಾಗೆ ತಾನೇನ ಬಲ್ಲದು — ಕ್ಷೀರ ಗುಣವನ್ನು || ೬ ||

ಹೊಳೆವ ಮಣಿಗಳ ಗುಣವ ರತ್ನಾ | ವಳಿಗ ತಾನೇ ಬಲ್ಲನು |
ಇಳೆಯೊಳ್‌ಕಪಿ ತಾನೇನಬಲ್ಲದು — ರತ್ನಗಳ ಗುಣವ || ೭ ||

ರೂಢಿಗೀಶನ ಮಹಿಮೆ ಭಕ್ತ ಸ | ಗಾಢರವರೇ ಬಲ್ಲರಲ್ಲದೆ |
ಮೋಡಿ ಗರ್ವದಿ ಶಿವನ ಬಲ್ಲನೆ — ಮೂಢ ಬ್ರಹ್ಮ || ೮ ||

ಹರಿ ಸುರೇಂದ್ರ ದಿಕ್ಪಾಲರೆಲ್ಲರು | ಕರವ ಮುಗಿಯುತ ಸ್ತುತಿಸಲು |
ಪುರಹರನು ತಾ ಬಂದು ಬ್ರಹ್ಮನ — ಇದಿರೊ[1] ಳಗೆ ನಿಲಲು || ೯ ||

ವಚನ || ಆ ವೇಳೆಯಲ್ಲಿ ಬ್ರಹ್ಮನು ಶಿವಮೂರ್ತಿಯಂ ಕಂಡು ಉಗ್ರ ಕೋಪಮಂ ತಾಳಿ ಏನೆನ್ನುತಿರ್ದ್ದನು.

1 — 1 ಳಿರಲು || (ತ, ಬ.)

**ಜಂಪೆ.**

ಯಾಕೆ ನಿನಗೈದು ಮುಖ | ಏನಪ್ಪೆ ನೀನೆನಗೆ
ಸಾಕು ನಿಂದಿರ ಬೇಡ | ಸಾರು ನೀ ಕಡೆಗೆ || ೧ ||

ನಿನ್ನ ನಾಟಕವ[1] ನಿಲ್ಲಿ | ಎನಗೆ[1] ತೋರಿಸಬಂದೆ |
ನಿನ್ನ ಪೂರ್ವವ ನೀನು | ಮರೆದೆಯಾಯೆಂದ || ೨ ||

ಎಲ್ಲಿ ಹುಟ್ಟಿದೆ ನೀನು | ಯಾರಿಂದ ಘನವಾದೆ |
ಇಲ್ಲಿ ನಿನ್ನಯ ಬಲುಮೆ | ಕೊಳ್ಳದೆನ್ನೊಡನೆ || ೩ ||

ಶೂಲವೇತಕೆ ನಿನಗೆ | ಸುರಗಿಯೇತಕೆಯೆನ್ನ |
ಮೇಲೆನೀಕಾದಿ ಕಳೆ | ದುಳಿದು ಬದುಕುವೆಯ || ೪ ||

ಭರದಿಂದಲೆನಗಿದಿರ | ಕರವ ಮುಗಿಯುತ ಬಂದು |
ಶರಣು ಹೊಕ್ಕರೆ ನಿನ್ನ | ಹರಣವನು ಕಾಯ್ವೆ || ೫ ||

ವಚನ || ಆ ವೇಳೆಯಲ್ಲಿ ಪರಶಿವ ಮೂರ್ತಿ ಬ್ರಹ್ಮನಾಡಿದ ಮಾತಂ ಕೇಳಿ, ರೌದ್ರ ಕೋಪಮಂ ತಾಳಿ, ಈ ಬ್ರಹ್ಮನ ಗರ್ವವಂ ಪರಿಹರಿಸುವೆನೆಂದು ಕಾಲ ಭೈರವ ರೂಪಂ ತಾಳಿದನದೆಂತೆನೆ.

**ಭವಕ್ರೀಡಾ ವೃತ್ತ.**

ಏಕಂ ಖಟ್ವಾಂಗಹಸ್ತಂ ಪುನರಪಿ ಭುಜಗಂ ಪಾಶಮೇಕಂ ತ್ರಿಶೂಲಂ |
ಕಾಪಾಲಂ ಖಡ್ಗಹಸ್ತಂ ಡಮರುಗಸಹಿತಂ ವಾಮಹಸ್ತಂ ಪಿನಾಕಂ ||
ಚಂದ್ರಾರ್ಕಂ ಕೇತು ಮಾಲ್ಯಂ ವಿಕೃತನರಶಿರಃ ಸರ್ಪ ಯಜ್ಞೋಪವೀತಂ|
ನೀಲಂ ಜೀಮೂತವರ್ಣಂ ಸಕಲ ಶಿವಮಯಂ ಭೈರವಂ ಭೀಮರೂಪಂ ||
ರೌದ್ರಂ ರುದ್ರಾವತಾರೋ ಜ್ವಲಿತ ಶಿವಮಹೋ ನೀಲಕೇಶಂ ಸುದಂಷ್ಟ್ರಂ |
ಭೀಮಾಂಗಂ ಭೀಮರೂಪಂ ಖಿಲಿ ಖಿಲಿ[2] ತ[2] ರವಂ ಭೈರವೇಶಂ ನಮಾಮಿ ||

ವಚನ || ಅಂಥಾ ಮೂರ್ತಿ ಹೇಗೆ ಬರುತಿರ್ದಪನದೆಂತೆನೆ:—

**ತ್ರಿವುಡೆ.**

ಕಾಳಿಮೇಘದ ಒಡ್ಡು ಬೆಳೆದುದೊ | ಕಾಳವೇ ರೂಪಾಗಿ ನಿಂದುದೊ |
ಪೇಳಲೇನದ್ಭುತದ ಕಳೆ ಬ್ರ—ಹ್ಮಾಂಡ ಬಿರಿವಂತೆ || ೧ ||

ಕೆಂ[3] ಜುರಿ[3] ಯ ಕಿಡಿಗಣ್ಣು ನೊಸಲಿನ | ಕೆಂಜೆಡೆಯ ಕೆದರಿದ ಮಹಾಶಿರ |
ನಂಜುಗೊರಳಿನ ನಾಟಕದ ಭೀ—ಕರದ ರೂಪಿನಲಿ || ೨ ||

---

1-1 ನೀ | ನೆನ (ಖ.) 2-2 ಶ (ಅ, ತ, ಬ.) 3-3 ಜಡೆ (ಎ, ಖ, ಗ, ಚ, ಡ, ತ, ಬ.)

ಪಿಡಿದ ಶೂಲವು ಗದೆಪಿನಾಕವು । ತೊಡರು ಪೆಂಡೆಯು ಖಡ್ಗ ಡಮರುಗ ।
ಘುಡು ಘುಡಿಪ ಘನ ಘರ್ಜನೆಯ ಹೂಂ – ಕಾರ ಘೋಷದಲಿ ॥ ೩ ॥

ಪೊಡವಿಯೊಡೆದಂದದಲಿ ಅಂಬರ । ನಡೆದು ರೂಪಾದಂತೆ ರೌದ್ರದಿ ।
ಗಡಿ ಬಡಿ[1] ಸುತಾ ಬಹಳ[1] ಕೋಪದಿ – ಕಿಡಿಯನುಗುಳುತಲಿ ॥ ೪ ॥

ನಡೆದು ನಿಂದೆಯ ನುಡಿದಜನ ಶಿರ । ಪಿಡಿದು ನಖದಿಂ ಚಿವುಟ ಬಿಸುಡಲು ।
ಕಡಲುವೊಡೆದಂತಜನ ರಕುತವು – ಪೊಡವಿ ತುಂಬಿದುದು ॥ ೫ ॥

ಸಿಡಿಮಿಡಿ ಗೊಳುತ ತೊಡರಿ ನಡುಗುತ । ಮೃಡನ ಭಯಂಕರ ರೂಪಕಾಣುತ
ಕಡುಭಯದಿ ಕಂಗೆಟ್ಟು ಮೂರ್ಛೆಯೊಳ್ – ಕೆಡೆದನಾ ಬ್ರಹ್ಮ ॥ ೬ ॥

ನೋಡಿದರು ಸುರಮುನಿಗಳೆಲ್ಲರು । ಮಾಡಿದರು ಹಾಸ್ಯವನು ತಮತಮ ।
ಗಾಡಿದರು ಗರ್ವಿತಗೆ ಶಿಕ್ಷೆಯ – ನೋಡು ನೋಡೆನುತ ॥ ೭ ॥

ಆಯಿತೇ ನಿನ್ನೈದನೆಯ ಶಿರ ತಾ । ಹೋಯಿತೇ ಗರ್ವಿಕೆಯು ಪರಿಹರ ।
ವಾಯಿತೆ ಈಶನನು ಶರಣ್ಹೊಗು – ಎಂದುದಖಿಳ ಜನ ॥ ೮ ॥

ಅಜನು ಮೂರ್ಛೆಯ ತಿಳಿದುಮೆಲ್ಲನೆ । ಭುಜಗ ಭೂಷನ ಭಕ್ತಿಯಿಂದಲಿ ।
ಭಜಿಸುತೆಸೆದನು ದೈನ್ಯದಿಂದಲಿ – ಪೇಳಲೇನದನು * ॥ ೯ ॥

ಶರಜ ಭವ ತಾ ನೆದ್ದು ಮೆಲ್ಲನೆ । ಕರವ ಮುಗಿಯುತ ಕಾಲಭೈರಗೆ ।
ಶರಣು ಶರಣೆಂದೆನುತಲಿರ್ದನು – ಸುರರು ಬೆರಗಾಗೆ ॥ ೧೦ ॥

**ಗ್ರಂಥ** ॥ ಹಸ್ತಾಂಗುಷ್ಠ ನಖೇನಾಶು । ವಹತೋ ಯಜ್ಞಮೇವಹಿ ।
ಕೃಂತಾ ಚ ತನ್ಮಹದ್ ಘೋರಂ । ಬ್ರಹ್ಮಣಃ ಪಂಚಮಂ ಶಿರಃ । ॥ ೧ ॥

ಎಂದು ಶಾಸ್ತ್ರಮುಂಟಾಗಿ ಆ ಸಮಯದಲ್ಲಿ ವಿಷ್ಣು ಮುಂತಾದ ಸಕಲ ದೇವತಾ ಸಮೂಹವು ಏನೆಂದು ನುಡಿವುತಿರ್ದರು.

**ತ್ಯಾಗಮಾನ– ಅಟತಾಳ.**

ಎನ್ನ ಮಾತ ಕೇಳದೋದೆ ಎಲೆ ಬ್ರ – ಹ್ಮ – ಇಂದು –
ನಿನ್ನ ಪ್ರಾಪ್ತಿ ಇಷ್ಟಾಯಿತೆ ಎಲೆ ಬ್ರ – ಹ್ಮ ॥ ೧ ॥
ಇನ್ನು ಶಿವನ ಹರಿಕೆ ಕುರಿಯು ಎಲೆ ಬ್ರ – ಹ್ಮ – ನೀನು–
ನಿನ್ನ ಗರ್ವದಿಂದಕೆಟ್ಟೆ ಎಲೆ ಬ್ರ – ಹ್ಮ ॥ ೨ ॥
ನಾಲ್ಕು ವೇದ ಹೇಳಲಾಗಿ ಎಲೆ ಬ್ರ – ಹ್ಮ – ನೀನು–
ಲೋಕ ಹಾಸ್ಯವಾಡಿ ಕಳೆದೆ ಎಲೆ ಬ್ರ –ಹ್ಮ ॥ ೩ ॥

1–1 ಸಿ ಬಹಳುಗ್ರ (ಚ.) * ಈ ಪದ್ಯ. (ಇ, ದ.) ಪ್ರತಿಗಳಲ್ಲಿ ಮಾತ್ರವಿದೆ.

ಸಾಕಾಯಿತೆ ನಿನ್ನ ಜನ್ಮ ಎಲೆ ಬ್ರ – ಹ್ಮ – ಶಿವಗೆಯ –
ನೇಕ ತೆರದಿ ನಮಿಸಿಬದುಕು ಎಲೆ ಬ್ರ – ಹ್ಮ ॥ ೪ ॥

ಹರನ ಮಹಿಮೆಯರಿಯದೆ ಪೋದೆ ಎಲೆ ಬ್ರ – ಹ್ಮ – ನೀನು –
ಕುರಿಗಿಂದ ಕರ ಕಷ್ಟವಾದೆ ಎಲೆ ಬ್ರ – ಹ್ಮ ॥ ೫ ॥

ಶಿರವುಹರಿದು ಧರೆಗೆ ಬಿದ್ದುದು ಎಲೆ ಬ್ರ – ಹ್ಮ – ಶಿವನ –
ಸ್ಮರಿಸಿ ಚರಣಕ್ಕೆರಗಿ ಬದುಕು ಎಲೆ ಬ್ರ – ಹ್ಮ ॥ ೬ ॥

ಘುಡು ಘುಡಿಸಿ ಕಾಲಭೈರವ ಎಲೆ ಬ್ರ – ಹ್ಮ – ನಭವ –
ನಡೆದನೆದ್ದು ನೀನುನೋಡು ಎಲೆ ಬ್ರ – ಹ್ಮ * ॥ ೭ ॥

ನುಡಿದ ನಿಂದೆಯ ದೊಡ್ಡ ಶಿರವ ಎಲೆ ಬ್ರ – ಹ್ಮ – ಶಿವನು –
ಪಿಡಿದು ನಖದಿಂ ಚಿವುಟಿ ಬಿಸುಟ ಎಲೆ ಬ್ರ – ಹ್ಮ ॥ ೮ ॥

ಆದಿ ಮೂಲ ಕರ್ತನೆಂದು ಎಲೆ ಬ್ರ – ಹ್ಮ – ನೀನು –
ಭೇದಿಸಿ ನೋಡದಲೆ ಹೋದೆ ಎಲೆ ಬ್ರ – ಹ್ಮ ॥ ೯ ॥

ಹೋದಿತ್ತೀಗ ನಿನ್ನ ಶಿರವು ಎಲೆ ಬ್ರ – ಹ್ಮ – ಲೋಕ –
ಗಾದೆಗೆ ನೀ ನಗೆಗೀಡಾದೆ ಎಲೆ ಬ್ರ – ಹ್ಮ ॥ ೧೦ ॥

ವಚನ ॥ ಕಾಲಭೈರವಮೂರ್ತಿ ಬ್ರಹ್ಮನ ಶಿರವಂ ಚಿವುಟ ನೆಲಕ್ಕೊಗೆದು, ಮೇಲೆ ಕಾದುತಿರ್ದ ಚಕ್ರ ಪಾಶುಪತಾಸ್ತ್ರಂಗಳೆರಡನ್ನೂ ಎರಡು ಹಸ್ತದಿಂ ಪಿಡಿದು, ಭೀಕರ ರೂಪಿನಿಂದಿರಲು, ಆ ಕಾಲಭೈರವ ಮೂರ್ತಿಯ ರೌದ್ರಜ್ವಾಲೆಗೆ ಜಗತ್ತಿನ ಸರ್ವ ಜೀವಪ್ರಾಣಿಗಳು ತಳಮಳಗೊಂಡು ಸಾಯುವಂತಾಗಲು, ವಿಷ್ಣು ಮುಂತಾದ ಸಕಲ ದೇವತಾ ಸಮೂಹವೇನೆಂದು ಕೊಂಡಾಡುತಿರ್ದರು.

**ಯಾಲಪದ.**

ಶರಣು ಶರಣು ರಕ್ಷಾಮಣಿಯೆ । ಶರಣು ಶರಣು ದೈವಾದಣಿಯೆ ।
ಶರಣು ಶರಣು [1] ಮೋಕ್ಷದ [1] ಅಗ್ರಣಿ – ಯೆ – ಪರುಷದಾ ಕಣಿ – ಯೆ –
ಹರನೆ ನಿಮ್ಮೆಯ ಕರುಣ – ವಿರಲಯ್ಯಾ ॥ ೧ ॥

ಶರಣಾಗತ ರಕ್ಷ ಬಿರುದಾಂಕ । ಜನನ ಮರಣ ರಹಿತ ನಿಷ್ಕಳಂಕ ।
ಕರುಣಿಸು ಕಾರುಣ್ಯಸಿಂಧು – ನೀ – ಹೇ ಲೋಕದ ಬಂಧು – ವೆ –
ಮರುಳರಲೆ ನಾವೇನ ಬಲ್ಲೇವು ॥ ೨ ॥

* ಈ ಪದ್ಯ (ಎ, ಜ.) ಪ್ರತಿಗಳಲ್ಲಿಲ್ಲ. 1-1 ಶಾಸ್ತ್ರ (ಅ, ಇ, ಜ, ಟ, ಡ, ಖ.)

ಉರಿದರೆಯುವೊಲೆ ಹೊತ್ತಿಲೋಕ। ಇರುವದದು ಶಂಕೆಯಿಲ್ಲದಲೆ।
ಧರೆಯುಹತ್ತಿ ಬೇಯುತಿರಲಾ – ಗ – ಈಲೋಕವೆಲ್ಲ – ವು –
ಇರುವುದಕ್ಕೆ ತಾವುಯೆಲ್ಲಿಯದು ॥ ೩ ॥

ತಾಯಿ ತಂದೆ ಗುರುವು ದೈವ। ದಾಯಾದ್ಯರು ಸಕಲವು ನೀನೆ।
ನ್ಯಾಯವೇ ನೀ[1] ನೆಮ್ಮೊಳು ಮುನಿವ[1] – ರೆ – ದೇವರಾದೇ – ವ –
ಸಾಯದೇ ಈ ಲೋಕ ಉಳಿವುದೇ ॥ ೪ ॥

ಸಕಲ ಲೋಕದ ರಕ್ಷಕರ್ತ। ಅಖಿಳಬ್ರಹ್ಮಾಂಡಗಳೊಡೆಯ।
ಸುಖವೆ ನಿಮ್ಮನರಿಯದ ನರರಿಂ – ಗೆ – ಹೇ ಕಾಯಜ ಭಂ – ಗ –
ಅಕಳಂಕ ಈಶ್ವರನೆ ಕರುಣಿಸು ॥ ೫ ॥

ಆದಿನಾಥ ಅಖಿಳದಾತ। ಮೂದೇವ ಮೂರ್ತಿಗಳತಾತ
ಸಾಧಕ ಸನ್ಮುನಿ ಜನ ಪ್ರೀ – ತ – ಲೋಕಪ್ರಖ್ಯಾ – ತ –
ಆದಿಮೂರ್ತಿ ಸಲಹೈ ನಮ್ಮನ್ನು ॥ ೬ ॥

ಮಲಹರನೆ ನಿಮ್ಮನಿಂದಿಸಿಯೆ। ತಲೆಯನೀಗಿಕೊಂಡ ಅಜಗೆ।
ಒಲಿದು ನಿಮ್ಮಯ ಕರುಣದಲಿ ಬೇ – ಗ – ಪಾಲಿಪುದೀ – ಗ –
ಸುಲಭಮೂರ್ತಿ ಸಲಹು ಸತ್ಕೀರ್ತಿ ॥ ೭ ॥

ಹೋಯಿತೆ ನಿನ್ನೈದನೆ ತಲೆ। ಆಯಿತೆ ವೋಟನ ಘಾಯ।
ಆಯಿತೆ ನೀ ಮಾತ ಕೇಳದ – ಲೆ – ಹಾಸ್ಯಕ್ಕೊಳಗಾ – ದೆ –
ನ್ಯಾಯವೇ ಎಂದುದು ಋಗ್ವೇದ ॥ ೮ ॥

ಎಲ್ಲರಾ ಮಾತ ಕೇಳದಲೆ – ಬಲ್ಲಿದನೆಂದಾಡಿಕೊಂಡೆ।
ಎಲ್ಲಿ ನಿನ್ನಯ ಸಾಹಸವೀ – ಗ – ತೋರಿಸೆಲೆ ಬೇ – ಗ –
ಖುಲ್ಲ ನೀ ಕೇಳೆಂದುದು ಯಜುರ್ವೇದ ॥ ೯ ॥

ನಾಡಾಡಿ ದೈವದಂತಲ್ಲ। ರೂಢೀಶಂಗಿದಿರಹರಿಲ್ಲ।
ಬೇಡವೆಂದು ಆಡಿದೆನಾ – ನು – ಹೇಮೂಢಬ್ರ – ಹ್ಮ –
ಖೋಡಿಯಾದೆಯ ಎಂದುದು ಸಾಮವೇದ ॥ ೧೦ ॥

ಹರನ ನಿಂದೆಯಿಂದ ನಿನಗೆ। ಮರಣವೆಂದಾಡಿದೆನಾನು।
ಗರ್ವ ಹೆಚ್ಚಿ ಕೇಳದಲೆ ನೀ – ನು – ನೀಗಿದೆಯ ತಲೆ – ಯ –
ಕುರಿಯಾದೆ ಎಂದುದು ಅಥರ್ವಣವೇದ * ॥ ೧೧ ॥

---

1–1 ನಿಂತುಮುನಿದಾ (ಡ, ತ.) ; ನೀವೆನಡೆದಾ (ಅ, ತ, ಬ.) ; ಮಾರಿನೀವು ಮುನಿದಾ (ಇ, ಟ.) * ಈ ಪದ್ಯ (ಗ, ಚ.) ಪ್ರತಿಗಳಲ್ಲಿಲ್ಲ.

ಶಿತಿಕಂಠನನರಿಯದಲೆ ಲೋಕ । ಹತವಾಗಿ ರುಜೆಯಿಂದಲಿ ದು ।
ರ್ಗತಿಗೆಬಿದ್ದು ಹೋಗುತಲಿ – ದೆ – ಮೋಕ್ಷಗಾಣ – ದೆ —
ಗತಿ ನೀನೆ ಸಲಹೊ ನಮ್ಮಯ್ಯ ॥ ೧೨ ॥

ವಚನ ॥ ಇಂತೆಂದು ವಿಷ್ಣು ಮೊದಲಾದ ಸಕಲ ದೇವತಾಮುನಿವೃಂದ ಕೊಂಡಾಡಲು, ಆ ಕಾಲಭೈರವ ಮೂರ್ತಿಗೆ ದಯೆ ಪುಟ್ಟಿ, ಜಲಪ್ರಳಯವಾಗಿರ್ದ ಬ್ರಹ್ಮನ ರಕ್ತವನ್ನೆಲ್ಲ ನೊಸಲಗ್ನಿಯಿಂದ ಒಣಗಿಸಲು, ಬಿದ್ದಿದ್ದ ಬ್ರಹ್ಮನ ಶಿರಸ್ಸು ಶಿವಮೂರ್ತಿಯಂ ಕಂಡು ಏನೆಂದು ಕೊಂಡಾಡುತಿರ್ದುದು.

**ಏಕತಾಳ.**

ಜಯ ಜಯ ಈಶ ಮಾ । ಹೇಶ ಕರ್ಮವಿನಾಶ ।
ಜಯ ಜಯ ಜಗಧೀಶ । ಜಯ ಪರಮೇಶ ॥ ೧ ॥
ತ್ರಾಹಿ ಭಕ್ತರ ಬಂಧು । ತ್ರಾಹಿ ಕರುಣಾಸಿಂಧು ।
ತ್ರಾಹಿ ಸಲಹು ಇಂದು । ಪಾಹಿ ದಯಾಸಿಂಧು ॥ ೨ ॥
ಮತ್ತನಾಂ ಮದಡನಾಂ । ಯುಕ್ತಿ[1] ಶೂನ್ಯ[1] ನು ನಾನು ।
ಮುಕ್ತಿದಾಯಕ ನೀನು । ಮುನಿಯದಲೆ ಸಲಹು ॥ ೩ ॥
ದೇವರ ದೇವನೆ । ದೇವ ಕೃಪಾಕರ ।
ಪಾವನನೆ ಪರಂಜ್ಯೋತಿ । ಕಾಯ್ದುದೆನ್ನಯ್ಯ ॥ ೪ ॥
ಹೀನನಾ ದೀನನಾ । ಜ್ಞಾನ ಶೂನ್ಯನು ನಾನು ।
ಮಾನ ನಿಧಿಯೆ ಈಶ । ನೀನೆನ್ನ ಸಲಹು ॥ ೫ ॥
ಹರ ನಿಮ್ಮ ನುಡಿದಂಥ । ಅರಿಯದಪರಾಧಕ್ಕೆ ।
ಶಿರವೆ ಕಾಣಿಕೆ ನಿಮ್ಮ । ಚರಣ[2] ಕ್ಕೆ ದೇವ[2] ॥ ೬ ॥
ಹೆತ್ತವರ ಅರಿಯದಾ । ಯುಕ್ತಿ ಶೂನ್ಯನು ನಿಮ್ಮ ।
ತೊತ್ತೆಂದು ಸಲಹಯ್ಯ । ಸತ್ಯ ಸಂಪನ್ನ ॥ ೭ ॥
ಅರುಳನಾ ಮರುಳನಾ । ಮರುಳನಾ ತರಳನಾ ।
ಗುರುವೆ ಎನ್ನವಗುಣವ । ಪರುಕಿಸಲು ಬೇಡ ॥ ೮ ॥
ಎನ್ನ ಅವಗುಣಗಳನು । ಇನ್ನು ನೀ ನೋಡದೆ ।
ಚೆನ್ನಡಿಯ ದಯವಿತ್ತು । ಮನ್ನಿಸೆನ್ನಯ್ಯ ॥ ೯ ॥

ವಚನ ॥ ಇಂತೆಂದು ಅನೇಕವಿಧದಿಂ ಸ್ತುತಿಮಾಡಲು, ಬಿದ್ದಿರ್ದ ಬ್ರಹ್ಮನ ಶಿರಮಂ ಹಸ್ತದಲ್ಲಿ ಪಿಡಿದುಕೊಂಡು ಕೈಲಾಸಕ್ಕೆ ಪೋಗಲು, ಸಕಲ ಓಲಗವು ಹರಿದು

---

1,1 ಹೀನ (ಅ, ಇ, ತ, ಬ.) * ಈ ಪದ್ಯಗಳು (ಗ, ಚ.) ಪ್ರತಿಗಳಲ್ಲಿಲ್ಲ.
2·2 ಯುಗಳಕ್ಕೆ ॥ (ಚ.)

ಹೋಗಲು, ಅತ್ತ ಮಹದೇವನು ಬ್ರಹ್ಮನಶಿರಮಂ ನೋಡಿ ಮುಗುಳ್ನಗೆಯಿಂದಿರಲು, ಅಜಶಿರಸ್ಸು ಸ್ವಾಮಿ ಹಸಿವೆನೆನಲು ಮಹಾದೇವನು ತನ್ನ ಕಾಲಭೈರವ ರೂಪಂ ತೀರಿಸಿ, ಯತೀಶ್ವರನಂತೆ ಸೌಂಧರ್ಯ ರೂಪಮಮಂ ತಳೆದು ಬ್ರಹ್ಮನ ಶಿರಮಂ ಪಿಡಿದು ಭಿಕ್ಷಾಟನ ಲೀಲೆಯಂ ನಟಿಸುತಿರ್ದನದೆಂತೆನೆ.

**ದ್ವಿಪದಿ.**

ಶ್ರೀ ಗುರು ಪರಂಜ್ಯೋತಿ ಶಶಿಮೌಳಿದೇವ |
ನಾಗಕಂಕಣಧರ ನವರತ್ನ ಹಾರ ‖ ೧ ‖

ಭೋಗಿಭೂಷಣ ಭಾಳನೇತ್ರ ಸುಗಾತ್ರ |
ಸಾಗರಜಭವ ಶಿರಪಾತ್ರ ಪವಿತ್ರ ‖ ೨ ‖

ಯೋಗಿಜನ ಹೃನ್ಮಧ್ಯ ವಾಸ ಮಹೇಶ |
ರಾಗ ರಹಿತೋಲ್ಲಾಸ ರಮ್ಯಪ್ರಕಾಶ ‖ ೩ ‖

ಶ್ರೀ ಮಹಾದೇವತಾ ಶೃಂಗಾರಲೀಲೆ |
ಪ್ರೇಮದಿಂ ನಟಿ[1] ಸುವದ[1] ಪೇಳಲಿನ್ನೇನು ‖ ೪ ‖

ಮಂದಹಾಸವು ಮುದ್ದುಮುಖವು ಸುಲಿಪಲ್ಲು |
ಚಂದ್ರತೇಜವ ಪಳಿವ ಚಲ್ವಕಾಂತಿಯಲಿ ‖ ೫ ‖

ಕೆಂಜೆಡೆಯು ಮಕುಟವು ಕಂಜಲೋಚನವು |
ನಂಜುಗೊರಳಿನ ಚೆಲ್ವ ನಾಸಿಕವು ಒಪ್ಪೆ ‖ ೬ ‖

ಗಂಧ ಕಸ್ತುರಿಯಗಿಲು ಕರ್ದಮಂಗಳನು |
ಇಂದುಧರ ಧರಿಸಿದನು ಇಂಪು ಸೊಂಪಿನಲಿ ‖ ೭ ‖

ಕುಂದ ಮಂದಾರ ಚಂಪಕ ಪಾರಿಜಾತ |
ಬಂಧುರದ ಪುಷ್ಪಗಳ ಮಾಲೆಯಳವಡಿಸಿ ‖ ೮ ‖

ರಕ್ತಬೀಜಾಸುರನ ರಕ್ತದಿಂದಾದ |
ಮುಕ್ತಾಂಬರವ ಕಾವಿ ಮೈಯೊಳಗೆಧರಿಸಿ ‖ ೯ ‖

ಕಂಗೊಳಿಪ ಜಲಂಧರನ ಕಳೆಯುಳ್ಳಶಿರವನೆ |
ಜಂಗುಮಾಡಿಯೆ ಝಾನು ಮಧ್ಯದಲಿ ಧರಿಸಿ ‖ ೧೦ ‖

ಕಡುಚೆಲ್ವ ಮುಖವೊಂದು ಕರವುನಾಲ್ಕರಲಿ |
ಪಿಡಿದಶೂಲವು ಖಡ್ಗ ಪಿತಾಮಹನಶಿರವು ‖ ೧೧ ‖

---

1–1 ಸಿದನು (ಅ, ಇ, ಖ, ಬ.)

ಸಿಡಿಲ ಮೀರಿದ ವಜ್ರ ಸಿಂಗರದಿ ಪಿಡಿದು |
ಅಡಿಯಬೊಪ್ಪುವ ರನ್ನ ಪಾವುಗೆಗಳಿಂದ || ೧೨ ||

ನಡೆದುಪ್ರಮಥರಗೂಡಿ ನಲಿದು ಅರ್ಥಿಯಲ್ಲಿ |
ಅಡಿಯಿಟ್ಟು ಹರಿ [1] ಸುರರ [1] ದೃಢವ ನೋಡುವರೆ || ೧೩ ||

ವಚನ || ಶ್ರೀ ಮಹಾದೇವನು ಬ್ರಹ್ಮನ ಶಿರಮಂ ಪಿಡಿದು ಭಿಕ್ಷಕ್ಕೆ ನಡೆವ ಸಂಭ್ರಮವಂ, ಖೇಚರದಲ್ಲಿ ಸಕಲ ದೇವತಾಸಮೂಹ ನೋಡುವುದಕ್ಕೆ ಬರುತ್ತಿರ್ದ ಪರದೆಂತೆನೆ.

**ಏಕತಾಳ-ಅರ್ಧರೇಕು.**

ಒಂದು ಮೇಘದಿ ಶರಣ — ಪ್ರಮಥ ಸಂದೋಹ |
ಒಂದು ಮೇಘದಲಿ ಕಿಂ — ಪುರುಷ ಸಂದೋಹ || ೧ ||

ಒಂದು ಮೇಘದಿ ಯಕ್ಷ — ರಾಕ್ಷಸ ಸಂದೋಹ |
ಒಂದು ಮೇಘದೊಳು — ಗರುಡ ಸಂದೋಹ || ೨ ||

ಒಂದು ಮೇಘದಲಿ ಸಿದ್ಧ — ಸಾಧ್ಯ ಸಂದೋಹ
ಒಂದು ಮೇಘದಿ ಶಕ್ತಿ — ನಿಚಯ ಸಂದೋಹ || ೩ ||

ಒಂದು ಮೇಘದಿ ಗಾಂ — ಧರ್ವ ಸಂದೋಹ
ಒಂದು ಮೇಘದಿ ಸಕಲ — ಭೈರವರ ಸಂದೋಹ | || ೪ ||

ಒಂದು ಮೇಘದಲಿ ಕು — ಮಾರ ಸಂದೋಹ |
ಒಂದು ಮೇಘದಿ ದೇವ — ದುಂದುಭಿಯ ನಾದ || ೫ ||

ಒಂದು ಮೇಘದಲಿ ಖೇ — ಚರರೆಲ್ಲ ಕೂಡಿ |
ಗಂಧ ತೀವಿದ ಕುಸುಮ — ವೃಷ್ಟಿಗರೆವುತಲಿ || ೬ ||

ದ್ಯೋದಿವಿಜರ್ಜಯವೆಂದು — ಪೊಗಳುತ್ತಲಿರಲು |
ಮೇದಿನಿಯೊಳಗುಳ್ಳ — ಕ್ಷೇತ್ರಚರಿಸುತಲಿ * || ೭ ||

ಬಂಧದಿಂ ತಪಗೈವ — ಮುನಿಗಳ್ಗೆ ಬೋಧಿಸುತ |
ಬಂಧನವ ಬಿಡಿಸವರ್ಗೆ — ನಿಜವರುಹುತಲಿ * || ೮ ||

ಅಂದ ಚಂದದಲಿ ಸಕಲ — ಸನ್ನಾಹದಿಂದ |
ಬಂದನೀಶ್ವರ ಮೃತ್ಯು — ದೇವಿಯ ಮನೆಗೆ || ೯ ||

ವಚನ || ಆ ಮೃತ್ಯುದೇವತೆ ಪರಶಿವಮೂರ್ತಿಯ ಬರಮಂ ಕಂಡು

---

1-1 ಯಜರ (ಅ, ಇ, ಉ, ಎ, ಒ, ಖ, ಗ, ಡ, ತ, ಬ.) * ಈ ಪದ್ಯಗಳು ( ಇ, ಚ, ದ.) ಪ್ರತಿಗಳಲ್ಲಿ ಮಾತ್ರವಿವೆ.

ಭೀಕರಶಕ್ತಿಯರ ಸಂದಣಿಗೂಡಿ, ದೇವರಿಗೆ ಇದಿರೆದ್ದು ಬಂದು ಸಾಷ್ಟಾಂಗ ದಂಡ ಪ್ರಣಾಮವಂ ಮಾಡಿ, ಕರಕಮಲಮಂ ಮುಗಿದು, ಏನೆಂದು ಭಿನ್ನಹ ಮಾಡುತಿರ್ದಳು.

**ಜಂಪೆ.**

ಏನುಕಾರಣ ಭಿಕ್ಷ | ದಾನಂದ ಲೀಲೆಯಿದು |
ಜ್ಞಾನ ಮೂರುತಿ ತಿಳುಹಿ | ಏನೆಂಬುವೆನಗೆ ॥ ೧ ॥

ಧನ ಕನಕ ವಸ್ತು ವಾ | ಹನ ಹೇಮಗಿರಿಯಿರಲು |
ಘನಗುರುವೆ ಈ ಲೀಲೆ | ಯನುವಪೇಳೆನಗೆ ॥ ೨ ॥

ಹರಿಯಜರು ಸುರರೊಳಗೆ | ಗರ್ವ ಹೆಚ್ಚಿತುಯೆಂದು |
ಪರುಕಿಪ್ರೊಡೆ ಈ ರೂಪ | ಧರಿಸಿದಿರೊ [1] ಒಲಿದು [1] ॥ ೩ ॥

ಎಂದ ದೇವತೆಯೊಡನೆ | ಇಂದುಧರ ನುಡಿದಜನ |
ಕೊಂದಕಾರಣ ಹತ್ಯ | ದಿಂದ ಬಂದೆನೆನಲು ॥ ೪ ॥

ಹರನಮಾತಿನ ಠಕ್ಕು | ಗಿರಿ ತಾಗಿ ಆ ಮೃತ್ಯು |
ಬೆರಗಾಗಿ ನಿಂದಿರಲು | ಹರನು ಕೇಳಿದನು ॥ ೫ ॥

ಏನು ಕಾರಣ ನೀನು | ಮೌನದಲಿ ಬೆರಗಾದೆ |
ಏನು ತಿಳಿಯಿತು ಮನಕೆ | ನೀನದನು ಪೇಳು ॥ ೬ ॥

ಮತ್ತೆ ಬ್ರಹ್ಮನ ಕೊಂದ | ಹತ್ಯವೆಂದಿರಿಯಜನು |
ಸತ್ತುದಿಲ್ಲವು ನಿಮಗೆ | ಹತ್ಯವೆಂತಹುದು ॥ ೭ ॥

ಫುಲ್ಲಶರಪಿತರಜರ | ಕೊಲ್ಲುವೆನು ಬಹು ಸುರರ |
ಇಲ್ಲ ಹತ್ಯವುಯೆನಗೆ | ಎಲ್ಲಿಯದು ನಿಮಗೆ ॥ ೮ ॥

ಜಲಪ್ರಳಯ ಕಾಲದಲಿ | ಕೊಲುವೆ ಬಹುಜೀವರನು |
ಕೊಲೆಯೆಂಬುದೆನಗಿಲ್ಲ | ಕೊಲೆಯುಂಟೆನಿಮಗೆ ॥ ೯ ॥

ನಿಮ್ಮ ಠಕ್ಕಿನ ಮಾತಿ | ಗೆನ್ನಮನ ಬೆರಗಾ [2] ಯ್ತು [2] |
ನಿಮ್ಮ ಹರುಷವುನಾನು | ನಿಮ್ಮ ಸೇವಕಳು ॥ ೧೦ ॥

ಎಂದು ಈಶನಚರಣ | ಕಂದೆರಗಿ ದೇವತೆಯು |
ಚಂದದಿಂ ಶಿವಪೂಜೆ | ಅಂದುಮಾಡಿದಳು ॥ ೧೧ ॥

ಅಷ್ಟವಿಧ ಪೂಜೆಯನು | ನಿಷ್ಠೆಯಿಂದಲಿ ಮಾಡಿ |
ಅಷ್ಟಮೂರ್ತಿಗೆ ಮೃತ್ಯು | ಸಾಷ್ಟಾಂಗವೆರಗಿ ॥ ೧೨ ॥

---

1-1 ಯನಲು (ಖ, ಗ, ಚ, ಜ.) 2-2 ಗೆ | (ಅ, ಟ, ಡ, ತ, ಬ.)

ವಚನ || ಆ ಮೃತ್ಯುದೇವತೆ ಕರಕಮಲಂಗಳಂ ಮುಗಿದು ಏನೆನ್ನುತಿರ್ದಳು.

**ಬ್ರಹ್ಮಾಂಡಪುರಾಣ ಗ್ರಂಥ.**

ಯದಾ ಯಾವ ತ್ತರ್ಜಯಾಮಿ | ಚೇಷ್ಟಿತುಂ ಗಿರಿಜಾಪತೇ |
ಸಂಹಾರಕಾಲೇ ಸಂಪ್ರಾಪ್ತೇ | ದೇವಾಮುನಿಗಣಾನತಾಃ ||
ಬ್ರಾಹ್ಮಣಃ ಸಕಲೋ ಹನ್ಯಃ | ಅನಿ [1] ತ್ಯಾ [1] ಹಿ ಜಗನ್ಮಯಾ |
ಬ್ರಹ್ಮಹತ್ಯಾ ಕೃತಂ ಪಾಪಂ | ಕಿಂಚಿನ್ನಾಸ್ತಿ ತತಸ್ತವಾ ||

**ಕೂರ್ಮಪುರಾಣ ಗ್ರಂಥ.**

ತ್ವಯೋದಗ್ರಜಗದ್ವ್ಯಾಪೀ | ಅಶ್ಯತಾಪಿ ಪಿತಾಮಹಃ |
ಹತೋಯಶ್ಚ ಜಗನ್ನಾಥ | ಕಸ್ತತೇ ನಾಸ್ತಿ ಕಿಲ್ಬಿಷಂ ||

ಎಂದು ಮನೋಹರವಾದ ಭಕ್ಷ್ಯ ಭೋಜ್ಯಂಗಳಂ, ನವರತ್ನಾದಿ ದಿವ್ಯ ವಸ್ತುಗಳಂ, ಸ್ವಾಮಿಪಾದಕ್ಕೆ ಸರ್ಮಪಿಸಿ, ಎನ್ನ ಜನ್ಮ ಸಫಲವಾಯಿತೆಂದು ಕರ ಕಮಲಮಂ ಮುಗಿದು, ನಿಮ್ಮ ಮನೋಹರಮಾದಲ್ಲಿ ಚರಿಸಾಡಿಯನಲು, ಅಲ್ಲಿಂದ ವಿಷ್ಣುವಿನ ಮನೆಗೆ ಬರುತಿರ್ದನದೆಂತೆನೆ.

**ತ್ರಿವುಡೆ.**

ಈಶ ನಡೆದನು ಸಕಲ ಗುರು ಭೂ | ತೇಶ ನಡೆದನು ಸೂರ್ಯಕೋಟಿ ಪ್ರ |
ಕಾಶ ನಡೆದನು ಘೋರ ದುರಿತವಿ – ನಾಶ ತಾ ನಡೆದ || ೧ ||
ದೇವ ನಡೆದನು ಸಕಲ ಲೋಕ ಸಂ |ಜೀವ ನಡೆದನು ದೇವಮುನಿಗಣ |
ಜೀವ ನಡೆದನು ಮನದ ಬಯಕೆಯ – ಈವವನು ನಡೆದ || ೨ ||

ಸಕಲ ಮುನಿ ಗಣ ವೃಂದ ಮೇಘದಿ | ಅಖಿಳ ದೇವಸಮೂಹ ಸಂದಣಿ |
ಪ್ರಕಟಿಸುವ ಸನ್ನಾಹ ಸಕಲ – ಧ್ವನಿಯ ವಾದ್ಯದೊಳು || ೩ ||

ಲೋಕದೊಡೆಯನ ಮನದ ಲೀಲೆಯ | ಲೋಕ ಬಲ್ಲುದೆ ಶಿವನ ಮಹಿಮೆಯ |
ಲೋಕ ಲೋಕದ ಜೀವ ಜಾಲದ – ಮನವ ನೋಡುವರೆ || ೪ ||

ಲೋಕಕರ್ತನು ಹಲವು ಲೋಕವಾ | ಲೋಕಿಸುವ ಮಹಿಮೆಯಲಿ ಪರಶಿವ |
ಸಾಕಿ ಸಲಹುವ ಅರ್ಥಿಯಲಿ ಹರಿ – ಲೋಕಕ್ಕೈತಂದ || ೫ ||

ಬಂದನಾ ವೈಕುಂಠ ಪುರದಾ | ಮುಂದೆ ತೋರುವ ಸಕಲ ಬುಧಕುಲ |
ಸಂದಣಿಯನೀಕ್ಷಿಸುತ ಜೇಗದಿ – ಬಂದ ಹರಿ ಪುರಕೆ || ೬ ||

---

1-1 ನ್ಯಾ (ಅ, ಡ, ತ, ಬ.)

ನೋಟಕಚ್ಚರಿಯಾಗಿ ತೋರುವ | ತೋಟ ಕೆರೆ ವನ ಕೂಪ ಸರಸಿಯು |
ಕೋಟಿ ಕೊತ್ತಳ ಕನಕ ಕಲಶದ – ಕೂಟ ರಂಜಿಸಿತು || ೭ ||

ವಚನ || ಮುಂದೆ ವೈಕುಂಠಪುರದ ಶೃಂಗಾರವೆಂತಿರ್ದುದೆಂತೆನೆ.

**ದ್ವಿಪದಿ.**

ಶೃಂಗಾರವೆಸೆವ [1] ಅತಿ [1] ಸುಸಿರಗೆಲಸದಲಿ |
ಬಂಗಾರವೆಸೆದಿಹುದು ಬಹು ರಮ್ಯತರವು || ೧ ||

ಮುಗನ ಮಂಟಪ ಕುಡ್ಯ ಮಂದಿರಗಳಿಂದ |
ಚದುರಗೆಲಸದ ಚೆಲ್ವ ಹರ್ಮ್ಯಂಗಳಿಂದ || ೨ ||

ಮುದವೆತ್ತು ಮಂದಿರದ ಮುಖಸಾಲೆಯಿಂದ |
ಒದ [2] ಗಿ [2] ವೊಪ್ಪುವ ಸೋಮ ಸೂರ್ಯ ವೀದಿಯಿಂದ || ೩ ||

ಪುದಿದ ಕಸ್ತುರಿ ಚಳಯ ಪುಷ್ಪ ವೃಷ್ಟಿಯಲಿ |
ಮುದನಪಿತ ಮಂದಿರವು ಮನಕೆ ಅಚ್ಚರಿಯು || ೪ ||

ಒದವಿತೋರುವ ಶತ ಯೋಜನದಗಲವು |
ಅಂತಪ್ಪ ವೈಕುಂಠಕಧಿಕ ನಗರದಲಿ || ೫ ||

ಸದನ ಕಂಗೊಳಿಸಿತು ಸಲೆ ರಮ್ಯವಾಗಿ | *
ಚಿಂತಾಮಣಿಯು ರತ್ನಸಿಂಹಪೀಠದಲಿ || ೬ ||

ಸಂತತವು ಹರಿಯೊಪ್ಪೆ ಸಕಲ ವಿಭವದಲಿ |
ಅಂತರದಿ ತಾಮಸದಧಿಕ ಗುಣ ಸಿದ್ಧಿ || ೭ ||

ಸಾತ್ವಿಕದ ಬಹಿರಂಗ ಬಹುವಿಧದ ಬುದ್ಧಿ |
ಸ್ಥಿತಿಯ ಕರ್ತವ್ಯಕ್ಕೆ ಶ್ರೇಷ್ಠನೆಂದೆನಿಸಿ || ೮ ||

ಅಷ್ಟಮಹ ಲಕ್ಷ್ಮಿಯರ ಐಶ್ವರ್ಯದಿಂದ |
ಕಡು ಚೆಲ್ವ ಮುಖವೊಂದು ಕರವು ನಾಲ್ಕರಲಿ || ೯ ||

ಪಿಡಿದ ಚಕ್ರವು ಶಂಖ ಶಾರ್ಙ್ಗದಾ ಗದೆಯಿಂದ |
ಉಟ್ಟಪೀತಾಂಬರ ವನಮಾಲೆಯಿಂದ || ೧೦ ||

ತೊಟ್ಟ ಭೂಷಣ ರತ್ನ ಕಿರೀಟದಿಂದ |
ಕೌಸ್ತುಭದ ಮಣಿಯು ಕನಕಾಬ್ಜ ನಾಭಿಯಲಿ || ೧೧ ||

---

**1 – 1** ಧರೆ (ಅ, ಡ, ಬ.) **2 – 2** ವಿ (ಅ, ಜ, ಬ.) * ಈ ಅರ್ಧ ಪದ್ಯ (ಅ, ಒ, ಖ, ಟ, ಡ, ತ, ಬ.) ಪ್ರತಿಗಳಲ್ಲಿಲ್ಲ.

ರವಿತೇಜ ರತ್ನ ಹಾರವು ಯಜ್ಞೋ ಪವೀತ ।
ಗಂಧ ಕಸ್ತುರಿ ದಿವ್ಯ ಪುಷ್ಪ ಮಾಲೆಯಲಿ ॥ ೧೨ ॥
ಚಂದದಿಂ ತನ್ನ ಭಕ್ತರ ಸುಮೇಳದಲಿ ।
ಮತ್ಸ್ಯ ಕೂರ್ಮನು ವರಾಹ ನರಸಿಂಹರೆಂಬ ॥ ೧೩ ॥
ಉತ್ಸಾಹದ ವಾಮನ ಶ್ರೀ ರಾಮರಿಂದ ।
ಎಸೆವ ಕೃಷ್ಣನು ಕಲ್ಕಿ ದಶ ರೂಪದಿಂದ ॥ ೧೪ ॥
ಭೀಷ್ಮಾಂಗ ಸಂಕೇತ ಬೌದ್ಧರವರಿದಿಂದ ।
ಅನಿರುದ್ಧ ರುಕ್ಮಾಂಗ ಅಧಿಕ ಪ್ರಹ್ಲಾದರ್ ॥ ೧೫ ॥
ಘನಮುನಿ ನಾರದ ಘನ ಅಂಬರೀಷ ।
ಕ್ಷಪನು ಏಕದಂಡಿಯು ತ್ರಿದಂಡಿಗಳು ॥ ೧೬ ॥
ಸಕಲ ಮುನಿಗಳು ಭಕ್ತ ಭಾಗವತರಿಂದ ।
ಅತ್ಯಂತ ಏಕಾದಶ ರುದ್ರರಂ ಕುರಿತು ॥ ೧೭ ॥
ಮತ್ತೆ ಮಾಡುವ ಏಕಾದಶಿಯ ವ್ರತದಿಂದ ।
ಕಾಲಹರ ಶಿವ ನೀಲ ಲಿಂಗಪೂಜೆಯಲಿ ॥ ೧೮ ॥
ಕಾಲ ಕಾಲವು ಬಿಡದೆ [1] ಕಡು [1] ಭಕ್ತಿಯಲ್ಲಿ ।
ಎಸೆವ ರುದ್ರಾಕ್ಷಿಯು ಭಸಿತ ಧಾರಣದಿ ॥ ೧೯ ॥
ಅಸಮಾಕ್ಷ ಧ್ಯಾನವಂ ಆವಾಗ ಬಿಡದೆ ।
ನಿರ್ಮಿಸುವ ಸ್ಥಿತಿಕರ್ತೃ ನಿಜ ವಸ್ತುವಾಗಿ ॥ ೨೦ ॥
ಬ್ರಹ್ಮೇಂದ್ರ ಸುರರಿಂದ ಓಲೈಸಿ ಕೊಳುತ ।
ತನ್ನ ಸಮಾನ ಪಟು ಭಟರು ಕೋಟಿಯಲಿ ॥ ೨೧ ॥
ಉನ್ನತಾಸನದಲ್ಲಿ ಒಪ್ಪಿರ್ದ ಹರಿಯು ।

**ಶಾರ್ದೂಲ ವಿಕ್ರೀಡಿತಾ ವೃತ್ತ.**

ಫಾಲೇ ಭೂತಿ ವಿಲೇಪನಂ ಕರತಳೇ ಲಿಂಗಂ ಹೃದಾಲಿಂಗಿತಂ ।
ರುದ್ರಾಕ್ಷೀವಲಯಂಗಳೇ ಶಿರಸಿ ವೈಭಿಭ್ರಜ್ಜಟಾ ಮಂಡಲಂ ॥
ಜಿಹ್ವಾಗ್ರೇ ಶಿವಮಂತ್ರ ಜಾಪ್ಯಮನಿಶಂ ರಾತ್ರಿಂ ದಿವಾ ಕೀರ್ತನಂ ।
ಏವಂ ಶೈವ ಮಯಂ ಹರೇಃ ಶಿವಮತಂ ವ್ಯಕ್ತಂ ಪುರಾಣೋದಿತಂ ॥ ೧ ॥

ವಚನ ॥ ಎಂದು ಶಾಸ್ತ್ರಮುಂಟಾಗಿ ಇಂತಪ್ಪ ಶ್ರೀ ಮಹಾವಿಷ್ಣು ಓಲಗಂ

1.1 ಪರಮು (ಚ.)

ಗೊಟ್ಟಿರಲು, ತನ್ನ ಸಮಾನವಾದ ವಿಷ್ವಕ್ಸೇನನಂ ದ್ವಾರದಲ್ಲಿ ಕಾವಲಿಟ್ಟು, ತಾನು ಅಂತಃಪುರದಲ್ಲಿ ಸ್ತ್ರೀಲೋಲನಾಗಿರುವ ಸಮಯದಲ್ಲಿ, ಆ ಪರಶಿವಮೂರ್ತಿ ಬಾಗಿಲಿಗೆ ಬರಲು, ಆ ವಿಷ್ವಕ್ಸೇನನೇನನ್ನುತಿರ್ದನು. *

**ಕಂದಪದ್ಯ.**

ಬರಬೇಡ ನೀನು ಶ್ರೀ ಹರಿ ।
ಯರಸಿಯರೊಳಗತಿ ವಿನೋದದಿಂದಿರುತಿಹನ್ನೈ ॥
[1] ಭರದಿಂ [1] ಪೊಗದಿರ್ ದ್ವಾರವ ।
ಸರಿದಾಚೆಗೆ ತೊಲಗಿ ನಿಲ್ಲು ಸದೆವೆನು ಬಂದೈ ॥ ೧ ॥

ಈಶಂ ಮಾತನು ಕೇಳುತ ।
ರೋಷದಿ ತ್ರಿಶೂಲದಿಂದಲಿ ತಿವಿದೆತ್ತಲೊಡಂ ॥
ಈಶನ ಮಹಿಮೆಯನರಿಯುತ ।
ಸಾಸಿರಬಗೆಯಲಿ ನುತಿಸುತ್ತಿರ್ದನಾ ಬಳಿಕಂ ॥ ೨ ॥

**ತ್ರಿವುಡೆ.**

ದೇವ ಬದುಕಿದೆ ಭಕ್ತಜನ ಸಂ । ಜೀವಬದುಕಿದೆ ಎನ್ನಭವದೊಳು ।
ಕಾವ ಬದುಕಿದೆ [2] ಸಲಹು ಎನ್ನನು [2] – ಈಶ ಸರ್ವೇಶ ॥ ೧ ॥

ತಂದೆ ಬದುಕಿದೆ [3] ಭಜಕ [3] ಭಕ್ತರ । ಬಂಧು ಬದುಕಿದೆ ಎನ್ನ ಸಲಹುವ ।
ದೆಂದು ಪಲಬಗೆಯಲ್ಲಿ ನುತಿಸು – ತ್ತಿರ್ದನವನಾಗ ॥ ೨ ॥

ನಿನ್ನನೆತ್ತಿದೆ ಶೂಲದಲಿ ಹಿರಿ । ದಿನ್ನು ಬದುಕುವ ಬಗೆಯದಾವುದು ।
ನಿನ್ನ ಕಾವಲು ಬಯಲು ಬಾಗಿಲ – ತಡೆವವರು ಯಾರು ॥ ೩ ॥

ಇನ್ನು ಬಾಗಿಲಗೊಡವೆ ಏತಕೆ । ನಿನ್ನ ಕರುಣವು ಎನಗೆ ದೊರಕಿತು ।
ಎನ್ನ ಭವಗಳ ಪರಿದುಕಳೆದೆನು – ನಾನು ಸುಖಿಯಾದೆ ॥ ೪ ॥

ಮುಡಿಯ ಕಾಣದೆ ಬ್ರಹ್ಮ ಹೋದನು । ಅಡಿಯ ಕಾಣದೆ ಹೋದ [4] ಶ್ರೀಹರಿ [4]
ಮೃಡನೆ ನಿಮ್ಮಯ ಶ್ರೀ ಮಕುಟ ಕೆಂ – ಜೆಡೆಯ ನಾ ಕಂಡೆ ॥ ೫ ॥

---

* ಈ ಸಂಧಿಯಲ್ಲಿ ಇಲ್ಲಿಂದ ಮುಂದೆ (ಇ, ಉ, ಎ, ಒ, ಗ, ಚ, ಡ, ತ, ದ.) ಪ್ರತಿಗಳಲ್ಲಿ ವೈಕುಂಠಪುರದ ವೇಶ್ಯಾವರ್ಣನೆ ದೊರೆತಿದೆ. ಇವುಗಳ ಸಾರಾಂಶ ಒಂದಾದರೂ, ಹೋಲಿಕೆ ಬೇರೆಬೇರೆಯಾಗಿದೆ. ಮತ್ತು ಇವುಗಳು ಯತಿ, ಗಣ,ಪ್ರಾಸ, ತಾಳ ಬಿಟ್ಟಿರುವುದಲ್ಲದೆ, ಪುನರುಕ್ತಿ ಹೊಂದಿರುವುದರಿಂದ ಇವುಗಳನ್ನೆಲ್ಲ ಇಲ್ಲಿ ಬಿಟ್ಟಿರುತ್ತೆ. 1-1 ನಿರುತ (ಅ, ಇ, ಒ, ಜ, ಟ, ಡ, ತ, ಬ.) 2-2 ಯನ್ನ ಸಲಹುವ (ಅ, ಉ, ಡ, ಬ.) 3-3 ಸಕಲ (ಎ, ಗ, ಚ,) 4-4 ವಿಷ್ಣುವು (ಗ, ಚ.)

ಮಾಣದೀಪರಿ ನುತಿಸಿ ವಿಷ್ವ | ಕ್ಸೇನ ಮುಕ್ತಿಯ ಕೇಳಿ ಭಕ್ತಾ |
ಧೀನನತಿ ಕರುಣದಲಿ ಇವನೊಳು – ನುಡಿದನಿಂತೆಂದು || ೬ ||
ಮೆಚ್ಚಿದೆನು ಬೇಡೀಗ ನಿನ್ನೆಯ | ಅಚ್ಚುಗದಮಾತಿಂಗೆ ನೀಂ ಮನ |
ಮೆಚ್ಚುವಂದದಿ ಕೊಡುವೆ ಕೇಳ್ಕೊ – ಜಗದ ಪದವಿಯನು || ೭ ||
ಏಕೆ ನನಗೀ ಲೋಕಪದಗಳು | ಸಾಕು [1] ನನಗವ [1] ನೇನಮಾಡುವೆ |
ಲೋಕನಾಯಕ ಶಿವನೆ ನಿಮ್ಮಡಿ – ಯೆಡೆಯ ಬಿಡದಿಹೆನು

**ಇದಕ್ಕೆ ಸಾಕ್ಷಿ ಕೂರ್ಮ ಪುರಾಣ ಗ್ರಂಥ.**

ಅವಿಜ್ಞಾಯ ಪರಂ ಭಾವಂ | ದಿವ್ಯಂ ತತ್ಪರಮೇಶ್ವರಂ |
ನ್ಯವರೋಧ ತ್ರಿಶೂಲಾಂಕಂ | ದ್ವಾರಪಾಲೋ ಮಹಾಬಲಃ || ೧ ||
ದೃಷ್ಟ್ವಾಚೌಭಿ ಮುಖಂರುದ್ರ | ಶ್ಚಕ್ಷುಷೇಚ ಸುದರ್ಶನಂ |
ಶೂಲೇನೋರಸಿ ನಿರ್ಭೇದ್ಯ | ಪಾತಯಾಮಾಸ ತಂ ಭುವಿ || ೨ ||
ತತ್ಯಾಜ [2] ವಿಜಿ [2] ತಂ ದೃಷ್ಟ್ವಾ | ಮೃತ್ಯುನ್ಯಾಧಿರ್ಹತಂ ಯಥಾ |
ನಿಹತ್ಯ ವಿಷ್ಣು ಪುರುಷಂ | ಸಾರ್ಧಂ ಪುರುಷ ಪುಂಗವೈಃ || ೩ ||
ವಿ [3] ವೇಶ [3] ಚಾಂತರಂ ಗೇಹಂ | ಸಮಾದಾಯ ಕಲೇವರಂ || ಮತ್ತಂ ||

**ಕಾಳಿಕಾಖಂಡದಲ್ಲಿ ಗ್ರಂಥ.**

ದದರ್ಶ ಯಸ್ಯ ಶೂಲಾಗ್ರೇ | ವಿಷ್ವಕ್ಸೇನಂ ಜನಾರ್ದನಃ

ಎಂಬದಾಗಿ ಇಂತಪ್ಪ ವಿಷ್ವಕ್ಸೇನನ ತ್ರಿಶೂಲಾಗ್ರದಲ್ಲಿ ಇಂಬಿಟ್ಟುಕೊಂಡು, ವಿಷ್ಣುವಿನ ದ್ವಾರಮಂ ಪೊಗುವ ಸಮಯದಲ್ಲಿ, ಶ್ರೀ ಮಹಾವಿಷ್ಣುವಿನ ಕಾವಲವರು ಬಂದು ಈ ವಾರ್ತೆಯಂ ಬಿನ್ನವಿಸುತಿರ್ದರು.

**ಕಂದಪದ್ಯ.**

ಇಂದೊಬ್ಬ ಕೃತಕವೇಷದಿ |
ಬಂದೆಮ್ಮ ದ್ವಾರಪಾಲನಂ ನೆರೆಕೊಂದಂ ||
ಎಂದಾಗಲೆ ಹರಿಗೆ ಪೇಳೆ |
ಸಂದೇಹಂ ಬಟ್ಟು ಕೋಪದಲಿ ಹರಿಯೆದ್ದಂ || ೧ ||

ವಚನ || ಈ ವಾಕ್ಯಮಂ ವಿಷ್ಣು ಕೇಳಿ ರೌದ್ರದಿಂ ಬರುತ್ತಿರ್ದನದೆಂತೆನೆ.

**ಜಂಪೆ.**

ದ್ವಾರಪಾಲಕನ ಸಂ | ಹಾರ ಮಾಡಿದನೆಂಬ |
ವಾರತೆಯ ಕೇಳಿ ಬಹು | ವೀರದಲಿ ಹರಿಯು || ೧ ||
ಕಾಳ ಮೇಘವು ರೂಪು | ತಾಳಿ ತಾ ಬೆಳೆದಂತೆ |
ಹೇಳಲೇನಂಬರವ | ತಾಳಿದಂತಿಹನು || ೨ ||

---

* ಈ ಪದ್ಯ (ಎ, ಗ, ದ, ಬ.) ಪ್ರತಿಗಳಲ್ಲಿ ಮಾತ್ರವಿದೆ. 1-1 ನಾನದ (ಇ, ಒ, ಖ, ಟ.) 2-2 ಜೀವಿ (ಜ.) 3-3 ಶೇಷಂ (ಇ, ಜ, ಟ, ತ.)

ಕಡುಕೋಪದಲಿ ಗದೆಯ । ಪಿಡಿದು ಚಕ್ರಾಯುಧವ ।
ಇಡುವೆನವನಾರೆಂದು । ನುಡಿದು ಗರ್ಜಿಸುತ ॥ ೩ ॥

ಎದ್ದ ಭರಕಂ ಲೋಕ । ಗದ್ದಲಿಸಿ ಧರೆ ನಡು[1] ಗೆ[1] ।
ಭದ್ರದಿಂ ನಡೆದ ಹರಿ । ರುದ್ರನಿದ್ದೆಡೆಗೆ ॥ ೪ ॥

ಹರನಾಗಲೀ ದೈತ್ಯ । ಸುರನಾಗಲೀ ಬ್ರಹ್ಮ ।
ನಿರಲಾಗಲವರ ಸಂ । ಹರವಮಾಡುವೆನು ॥ ೫ ॥

ಎಂದು ನಡೆದನು ಹರಿಯು । ಇಂದು ಧರನಿದ್ದೆಡೆಗೆ ।
ನಿಂದು ನೋಡಿದ ಶಿವಾ । ನಂದ ಲೀಲೆಯನು ॥ ೬ ॥

ಉರಿವ ಮಹದಗ್ನಿಯೊಳು । ಶರಧಿ ತಾ ಪರಿದಂತೆ ।
ಹರನ ಕಾಣುತ ಕೋಪ । ತರಹರಮದಾಗೆ ॥ ೭ ॥

ವಚನ ॥ ಆ ಮಹಾವಿಷ್ಣು ಶಿವಮೂರ್ತಿಯಂ ಕಂಡು, ಈ ಮಹಾದೇವನ ಲೀಲೆ ಏನೆಂದರಿಯಬಾರದು, ಎಂದು ತನ್ನ ಕೋಪಮಂ ಶಾಂತವಂ ಮಾಡಿ ಅಜ ಕರ್ಪರವಂ ನೋಡಿ, ಭಿಕ್ಷಾಟನ ಲೀಲೆಯೆಂದರಿತು, ತನ್ನ ಹಣೆಯಂ ಚಕ್ರದಲ್ಲಿ ಕೊರೆದು, ಬ್ರಹ್ಮಕಪಾಲಕ್ಕೆ ಭಕ್ತಿಯಿಂದಾಹುತಿಯಂ ಕೊಡುತಿರ್ದನದೆಂತೆನೆ

**ಅಟತಾಳ.**

ಹರನ ಬರವನು ಕಂಡು ಶ್ರೀ ಹರಿ । ಹರುಷದಿಂದಲಿ ತನ್ನೆಯ ।
ಕರದ ಚಕ್ರದಿ ಹಣೆಯ ರಕ್ತವ — ಸುರಿದನಾಗ ॥ ೧ ॥

ಧಾರಿಣಿಯನಂಬುಧಿಯು ಮೇಘಕೆ । ಏರಿ ತಾ ಪರಿವವೊಲು ।
ನೂರುಯೋಜನದಲ್ಲಿ[2] ರಕ್ತದ — ಧಾರೆ ಸುರಿಯೆ[2] ॥ ೨ ॥

ಅಂಬರವನೊಡ ಕೊಂಡು ಸುರಿವತಿ । ಅಂಬುಧಿಯ ವೋಲ್[3] ಪರಿಯಲು[3] ।
ತುಂಬಲಿಲ್ಲವು ಅಜಕಪಾಲವು — ಏನೆಂಬೆನದನು ॥ ೩ ॥

ಅಂಬರವು ತಾ ಬಾಯಿ । ತೆರದರೆ ಅಂಬುಧಿ[4] ಗಳು ಒಳಪೊಗೆ[4] ।
ತುಂಬಲಿಲ್ಲವು ಅಜಕಪಾಲವು — ಎಂದಿಗಾದರೆಯು ॥ ೪ ॥

ಪರಿಯೆ ರಕ್ತವು ದಿವ್ಯಸಾಸಿರ । ವರಷತನಕವು ವಿಷ್ಣುವು ।
ಸೊರಗಿದನು ಚೈತನ್ಯವಿಲ್ಲದೆ — ಒರ[5] ಗು[5] ತಿರಲು ॥ ೫ ॥

---

1-1 ಗಿ (ಅ, ಒ, ತ, ಬ.) 2-2 ತುಂಬಿತು । ರಕ್ತ ಧಾರೆಗಳು॥ (ಖ.) 3-3 ವಳ ಪೊಗೆ । (ಇ, ಒ, ಖ, ಚ.) 4-4 ಯಂತೊರಿಯೆ ರಕ್ತವು । (ಒ, ಖ.) 5-5 ಳು (ಗ, ಚ.)

**ಸಾಕ್ಷಿ ಕೂರ್ಮ ಪುರಾಣಗ್ರಂಥ**

ಸಪ್ರಣುತ್ಯ ಜಗನ್ನಾಥೋ । ಲಲಾಟೇ ನಿರ್ಬಿಭೇದ ಸಃ ।
ತತಶ್ಚಾನೇಕವರ್ಷಾಣಿ । ರಕ್ತಧಾರಾಃ ಪತಂತಿ ವೈ ॥ ೧ ॥
ಕಪಾಲಸ್ಯೋಧ್ಯರಂ ಪರ್ಶ್ಯ । ರಕ್ತ ಕರ್ದಮ ಪೂರಿತಂ ।
ತತೋ ನಾರಾಯಣೋ ದೇವಂ । ತುಷ್ಟಾವತು ವೃಷಭಧ್ವಜಂ ॥ ೨ ॥
ಸ್ತೋತ್ರಮೇತನ್ಮಹೇಶಸ್ಯ । ವೇದ ವೇದಾಂಗ ಸಂಮತಂ ॥

ಎಂದು ಶಾಸ್ತ್ರಮುಂಟಾಗಿ ಆ ವೇಳೆಯಲ್ಲಿ ಮಹಾದೇವಂಗೆ ದಯಪುಟ್ಟಿ, ವಿಷ್ಣುವಿಗೆ ಚೈತನ್ಯಮಂ ಕೊಟ್ಟು, ಮತ್ತಂ ಮೀರಿದ ರಾಕ್ಷಸರಂ ಸಂಹರಿಸುವ ಸಾಮರ್ಥ್ಯಮಂ ಕೊಟ್ಟು ಸತ್ಕರಿಸಿ, ಶಿರವಂ ತಡಹಿ ಸುಖಮಿರು ಎಂದು ಅಲ್ಲಿಂದ ಕಳುಹಿಸಿಕೊಂಡು, ಅಮರಾವತಿಗೆ ಬರುತಿರ್ದನದೆಂತೆನೆ.

**ಕೊಂಚೆಜಂಪೆ**

ಏಣಾಂಕಧರ ತಾನು ಆಗ – ದೈವ । ಪ್ರಾಣ ಬಂದನು ಮತ್ತೆ ಬೇಗ ।
ಜಾಣ ಚೆತುರತೆಯ ಚೆಲ್ವಿಗ – ಸಕಲ । ಕೇಣಿಗೊಂಡನು ಎಂಬೊಲಾಗ ॥ ೧ ॥
ಇಂದುಧರ ಶಿವ ತಾನು ಬಂದ – ದೈವ । ವೃಂದ ಗಣ ಸಕಲರಾನಂದ ।
ಇಂದೆಮ್ಮ ಪುರಕೆ ಶಿವಬಂದ – ಎಂದು । ಇಂದ್ರನೊಳು ನಾರದನು ಎಂದ ॥ ೨ ॥
ಶರಜಭವ ಶಿರವನರಿದೀಗ – ನಿಮ್ಮ । ಪರಿಕಿಸಲು ಬರುತಾನೆ ಬೇಗ ।
ವರಶಚಿಯು ಸಕಲರೊಡನೀಗ – ಇಂದ್ರ । ಶರಣುಪೊಗು ತ್ವರಿತದಿಂದೀಗ ॥ ೩ ॥

ವಚನ ॥ ಎಂದ ನಾರದನ ಮಾತಂ ಕೇಳಿ, ಇಂದ್ರ ಸಕಲ ಸನ್ನಾಹದಿಂದ ಇದಿರುಗೊಳ್ಳುತಿರ್ದನದೆಂತೆನೆ.

**ದ್ವಿಪದಿ.**

ಗಂಗಾಧರೇಶ್ವರನು ಗಮಿಸೆ ಹರುಷದಲಿ ।
ಶೃಂಗರಿಸಿ ಪಟ್ಟಣ[1] ದ[1] ವೀದಿ ವೀದಿಯೊಳು ॥ ೧ ॥
ಕಸ್ತೂರಿ ಚಳಯವು ಕನಕ ತೋರಣವು ।
ಮುತ್ತಿನ ರಂಗವಲಿ ಮನೆ ಮನೆಗಳಲ್ಲಿ ॥ ೨ ॥
ಮುದವೆತ್ತಿ ತೋರುವವು ಮುಂಗಡೆಯ ದ್ವಾರದಲಿ ।
ರಾಜಿಪ ರತ್ನಹರ್ಮ್ಯದ ಮಂದಿರಗಳು ॥ ೩ ॥

---

1 – 1 ವ (ಇ, ಒ, ಖ, ಟ, ಡ, ತ.)

ಸೋಜಿಗವು ನೋಟಕ್ಕೆ ಸೊಗಸು ತೋರುವವು ।
ಅಂತಪ್ಪ ಪಟ್ಟಣದ ಅರಸು ದೇವೇಂದ್ರ ॥ ೪ ॥

ಕಂತು ಹರನಿದಿರ್ಗೊಂಬ ಕಡು ಹರುಷದಲ್ಲಿ ।
ಪಟ್ಟದೈರಾವತ ಪಲ್ಲಣಿಸಿ ಬಿಗಿದು । ॥ ೫ ॥

ತೊಟ್ಟಿಲು ಶೃಂಗಾರ ತೋರಣವ ಬಳಸಿ ।
ಘಂಟೆ ಸರಪಣಿ ಝಲ್ಲಿ ಗಮುಕದಿಂ ಬಿಗಿದು ॥ ೬ ॥

ಜಂಟಿ ಸರಪಣಿ ಕಣ್ಗೆ ರಂಜಿಸುತ್ತಿರಲು ।
ಅಂತು ವಾರಣ ಮುಂದಪ್ಸರಾಂಗನೆಯರು ॥ ೭ ॥

ಸಂತಸದಿ ದೇವಗಣ ಸನ್ನಾಹದಿಂದ ।
ಕಂತುಹರ ಶಿವನನ್ನು ಕಾಣ್ಬ ಸಂಭ್ರಮದಿ ॥ ೮ ॥

ಅಂತು ಶಚಿ ಸಹಿತಿಂದ್ರ ಅರ್ಥಿಯಿಂ ಪೊರಟು ।
ಬಂದನಾ ಪರಶಿವನು ಬರವ ಸುಸ್ಥಲಕೆ * ॥ ೯ ॥

ವಚನ ॥ ಈ ರೀತಿಯಲ್ಲಿ ದೇವೇಂದ್ರ ಹೊರವಂಟು, ಸರ್ವದೇವ ಶಿಖಾಮಣಿಯಪ್ಪ ಪರಶಿವಮೂರ್ತಿಗೆ ವಂದಿಸಿ, ನಮ್ಮ ಜನ್ಮ ಸಫಲವಾಯಿತೆಂದು ಇಂತೆಂದಂ.

**ಗ್ರಂಥ** ॥

ಶಿವಸ್ಯ ದರ್ಶನಂ ಪುಣ್ಯಂ । ಸ್ಪರ್ಶನಂ ಪಾಪನಾಶನಂ ।
ಸರ್ವತೀರ್ಥಕೃತಸ್ನಾನಾ । ನ್ನಮಸ್ಕಾರೇ ಮಹಾಫಲಂ ॥

ಇಂತೆಂದು ಶ್ರೀ ಮಹಾದೇವನನ್ನು ಗಜವನೇರಿಸಿ, ಉತ್ಸವವಂ ಮಾಡಿಕೊಂಡು ಬರುತ್ತಿರ್ದನದೆಂತನೆ.

**ಸೀಸಪದ್ಯ.**

ಶಂಭುವಿನ ಎಡಬಲದಿ ಸಂಭ್ರಮದಿ ಸುರಗಣರು ।
ಮುಂಗಡೆಯಲಿಂದ್ರನು ಮುನೀಂದ್ರ ನಿವಹ ॥ ೧ ॥

ನುಡಿವ ಮದ್ದಳೆ ಭೇರಿ ಹೊಡೆವ ನಿಸ್ಸಾಳವು ।
ಪೊಡೆವ ಡಿಂಡಿಮ ಶಂಖ ವಾದ್ಯದಿಂದ ॥ ೨ ॥

ಪೊಗಳ್ವ ಸುತಾಳ ಕಿನ್ನರಿ ವೀಣೆ ಥರ ಥರದ ।
ರಾಗ ಸಂಮೇಳ ಮಧುರ ಮಧ್ಯ ಮಂದ್ರದಲಿ ॥ ೩ ॥

---

* ಈ ಅರ್ಧಪದ್ಯ (ಅ, ಒ, ಖ, ಗ, ಜ, ಟ, ತ, ಬ.) ಪ್ರತಿಗಳಲ್ಲಿಲ್ಲ.

ಆಡುತಿಹ ಅಪ್ಸರಾಂಗನೆಯರಾಟ ಪಾಟಂ ।
ನೋಡುತಿಹ ನೋಟಕರ ಸಂದಣಿಗಳಿಂದ ॥ ೪ ॥

ಶೃಂಗಾರ ಕನ್ನೆಯರ ಮಂಗಳಾರತಿಗಳಿಂದ ।
ಹಿಂಗದಿಹ ಕುಸುಮ ವರ್ಷಂಗಳಿಂದ ॥ ೫ ॥

ಸಂಭ್ರಮದ ಸಕಲ ಸನ್ನಾಹ ವಿಭವಗಳಿಂದ ।
ಶಂಭು ಬಂದ ದೇವೇಂದ್ರ ಮಂದಿರಕ್ಕೆ ॥ ೬ ॥

ವಚನ ॥ ಇಂತಪ್ಪ ಉತ್ಸಾಹದಿಂದ ದೇವೇಂದ್ರ ತನ್ನರಮನೆಗೆ ಬಿಜಯಂಗೈಸಿ, ರತ್ನಮಯ ಸಿಂಹಾಸನದ ಗದ್ದುಗೆಯ ಮೇಲೆ ಮೂರ್ತಂಗೊಳಿಸಿ, ಸಕಲ ವಿಧ ಪೂಜೆಯಿಂ ಪೂಜಿಸಿ, ನವರತ್ನ ಚಿಂತಾಮಣಿ ಮೊದಲಾಗಿ ಪಾದಗಾಣಿಕೆಯನಿಕ್ಕಿ, ಸ್ವಾಮಿ ನಿಮ್ಮ ಕೃಪೆ ಇರಲೆಂದು ಕರ ಕಮಲವಂ ಮುಗಿದು, ನಿಮ್ಮ ದಾಸಾನು ದಾಸನೆಂದು ನಿಂದಿರಲು, ಆ ಪರಶಿವಮೂರ್ತಿ ಅವರ ಸತ್ಕರಿಸಿ, ಅಲ್ಲಿಂದ ಕಳುಹಿಸಿ ಕೊಂಡು ಸಕಲ ಲೋಕಂಗಳಂ ನೋಡುತ್ತ ಬರುತ್ತಿರ್ದನದೆಂತೆನೆ.

**ಏಕತಾಳ.**

ಅಲ್ಲಿಂದ ಹೊರಟು ತೇ । ಜೋವತಿಯಧಿಪತಿ ।
ಬಲ್ಲಿದ ಅಗ್ನಿಯು । ರ್ದರ್ಲ್ಲಿಗೇ ಬಂದ ॥ ೧ ॥

ಈಶನಾ ಬರವ ಸಂ । ತೋಷದಿಂ ಕಾಣುತ್ತ ।
ಮೇಷವಾಹನ ಬಂದು । ಈಶಂಗೆ ನಮಿಸೆ ॥ ೨ ॥

ವರಸ್ವಾಹದೇವಿಯಗ್ನಿ । ಹರನಂಘ್ರಿ ಪೂಜಿಸಿ ।
ಗುರುವೆ ನಿಮ್ಮಯ ದಯ । ವಿರಲೆಂದು ನಮಿಸೆ ! ೩ ॥

ಸ್ವಾಮಿಯಲ್ಲಿಂದ ಶ್ಯಾಮ । ಲಾವತಿ ಪುರವನ್ನು ।
ಪ್ರೇಮದಿಂ ನೋಡ ಬಂದ । ಕಾಮ ಸಂಹರನು ॥ ೪ ॥

ಯಮ ಬಂದು ಸಕಲ ಸ । ನ್ನಾಹದಿಂದೀಶನಂಘ್ರಿ ।
ಕಮಲವನು ಪೂಜಿಸಿ । ಸುಮನವೇರುತಲಿ ॥ ೫ ॥

ದೇವ ಜಯತು ಸಕಲ । ಜೀವ ದಯನೇ ಎನ್ನ ।
ಕಾವ ಕುರಣಿಯೆಂದು । ಕರಗಳನು ಮುಗಿದ * ॥ ೬ ॥

ಬಂದಿರಲು ಲಕ್ಷವತಿ । ಗಿಂದುಧರನು ಬೇಗ
ಅಂದು ನೈಋತಿಯು ಆ ।ನಂದದಲ್ಲಿ ನಮಿಸೆ * ॥ ೭ ॥

* ಈ ಪದ್ಯಗಳು(ಗ, ಚ.) ಪ್ರತಿಗಳಲ್ಲಿಲ್ಲ

ಸಕಲ ವೈಭವದಿಂದ । ಅಕಳಂಕನ ಪೂಜಿಸಿ ।
ಮುಕುಳಿತ ಹಸ್ತನಾಗಿ । ಮುಂದೆ ನಿಂದಿರ್ದ ॥ ೮ ॥

ಅಲ್ಲಿಂದ ಸಿದ್ಧಾವತಿಗೆ । ನಿಲ್ಲದೆ ಬರೆ ಹರನ ।
ಮೆಲ್ಲಡಿ ಕಾಣುತ್ತ । ಬಲ್ಲಿದನು ವರುಣ ॥ ೯ ॥

ದೇವನಂಘ್ರಿಯ ಪೂಜೆ । ಭಾವದಿಂ ಭಜಿಸುತ್ತ ।
ಪಾವನಾತ್ಮಕ ಶರಣು । ದೇವ ನೀಂ ಸಲಹೈ ॥ ೧೦ ॥

ಬಂದನಲ್ಲಿಂದ ಶಿವ । ಗಂಧವತಿಯ ಪುರಕೆ ।
ಚಂದದಲಿ ವಾಯುವಿನ । ಮುಂದಿರದೆಡೆಗೆ ॥ ೧೧ ॥

ಕಾಣುತ್ತ ವಾಯು ತಾ । ಪ್ರಾಣ ಬಂದಂತೆ ಹರುಷ ।
ಪೊಣ್ಮಿ ತಾ ಹರನಂಘ್ರಿ । ಜಾಣ ಪೂಜಿಸಿದ ॥ ೧೨ ॥

ಅಷ್ಟವಿಧದ ಪೂಜೆ । ನಿಷ್ಠೆಯಿಂದಲಿ ಮಾಡಿ ।
ದೃಷ್ಟಮೂರ್ತಿ ಅಂಘ್ರಿಗೆ । ಸಾಷ್ಟಾಂಗವೆರಗಿ ॥ ೧೩ ॥

ಕಳಿಧರ ಬಂದಿರಲು । ಅಳಕಾವತಿಯ ಪುರಕೆ ।
ಪುಳಕದಿಂ ಕೌಬೇರ । ಘಳಿಲನೆಯೆ ಬಂದು ॥ ೧೪ ॥

ಈಶನಂಘ್ರಿಯ ಪೂಜೆ । ಲೇಸಿನಿಂದಲಿ ಮಾಡಿ ಮ ।
ಹೇಶ ಸಲಹೈಯೆಂದು । ಈಶಂಗೆ ನಮಿಸೆ ॥ ೧೫ ॥

ಶಶಿಧರ ಬಂದನು । ಯಶೋವತಿ ಪುರಕಾಗಿ ।
ಸಸಿನೆ ಈಶಾನ್ಯನು । ಪಶುಪತಿಗೆ ಎರಗಿ ॥ ೧೬ ॥

ಇಂದುಧರನ ಪೂಜೆ । ಚಂದದಿಂದಲ್ಲಿ ಮಾಡಿ ।
ನಿಂದನು ಕರಮುಗಿ । ದಂದು ಸಂತಸದಿ ॥ ೧೭ ॥

ಭುವರ್ಲೋಕ ಭೂಲೋಕ । ಸುವರ್ಲೋಕ ಮಹಾಲೋಕ ।
ತವೆಹದಿನಾಲ್ಕು ಲೋ । ಕವನು ಚರಿಸುತಲಿ ॥ ೧೮ ॥

ಅಲ್ಲಿಂದ ಹೊರವಂಟು । ಮೆಲ್ಲನೆಯೆ ಸಕಲ ಲೋಕ ।
ವೆಲ್ಲವನು ನೋಡುತ್ತ । ನಿಲ್ಲದೈತಂದ ॥ ೧೯ ॥

ಸಕಲ ಲೋಕವನೆಲ್ಲ । ಅಕಳಂಕ ಚರಿಸುತ್ತ ।
ಸುಖದಿಂ ಕೈಲಾಸ ಪುರ । ದರಮನೆಗೆ ಬಂದ ॥ ೨೦ ॥

ವಚನ ॥ ಆ ಪರಶಿವಮೂರ್ತಿ ಬಂದನೆಂಬ ಸಂತೋಷದಿಂದ ದೇವಿಯರು ಇದಿರು ಬಂದರದೆಂತೆನೆ.

**ದ್ವಿಪದಿ.**

ಶ್ರೀ ಮಹಾ ದೇವನಾ ಶೃಂಗಾರಮೂರ್ತಿ ।
ಆ ಮಹಾ ಅಖಿಳ ಲೋಕಾಧಿಪತಿಗಳಲಿ ॥ ೧ ॥

ಪ್ರೇಮದಿಂ ಸಕಲ ಪೂಜೆಯನು ಕೈಕೊಂಡು ।
ಕಾಮಿತಾರ್ಥವನಿತ್ತು ಕಡು ಹರುಷದಲ್ಲಿ ॥ ೨ ॥

ಸಕಲ ಲೋಕವ ತಿರುಗಿ ಸಂತೋಷದಿಂದ ।
ಅಕಳಂಕ ತನ್ನ ಕೈಲಾಸ ಪುರಕೈತರಲು ॥ ೩ ॥

ಸಿದ್ಧರೂ ಸಾಧ್ಯರೂ ಸಕಲ ಮುನಿನಿವಹ ।
ರುದ್ರರೂ ಪ್ರಮಥರೂ ಋಷಿಗಣ ಸಮೂಹ ॥ ೪ ॥

ನಂದಿಯೂ ಭೃಂಗಿಯೂ ವೀರ ವಿಘ್ನೇಶರ್ ।
ಕಂದರ್ಪ ಪಿತರಾಗ ಕಮಲ ಸಂಭವರು ॥ ೫ ॥

ಸ್ಕಂದ ಮೊದಲಾಗಿರ್ದ ಸುರ ಸತಿಯರೊಡನೆ ।
ಬಂದಳಾ ಮಹಾದೇವಿ ಭಾಳಾಕ್ಷನಿದಿರ ॥ ೬ ॥

ನಿಂದಲ್ಲಿ ಕರ ಮುಗಿದು ಅಖಿಳ ಗಣ ಸಹಿತ ।
ಮಂಗಳಾರತಿಯೆತ್ತಿ ಮನೆಗೆ ಕರೆದೊಯ್ದು ॥ ೭ ॥

ಶೃಂಗಾರ ಸಕಲ ಸಂಭ್ರಮದ ವಾದ್ಯದಲಿ ।
ಕರ [1] ವಿಡಿದು [1] ಕನಕ ಮಯ ಸಿಂಹಾಸನದಲಿ ॥ ೮ ॥

ಪರಮ ಸಂತಸದಿ ಕುಳ್ಳಿರಿಸಿ ಪೂಜಿಸಲು ।
ಪರಮಾತ್ಮ ಕುಳ್ಳಿರ್ದ [2] ನರ್ಕಶತ ತೇಜದಲಿ [2] ॥ ೯ ॥

**ಕಂದಪದ್ಯ.**

ಆಡುತಿರೆ ಭೃಂಗಿ ನಾಟ್ಯವ । ಛಡಾಳಿಸಿ ನಂದಿ ಮದ್ದಳೆಯಂ ನುಡಿಸುತಿರಲ್ ॥
ಪಾಡಲು ಗಂಧರ್ವ ಗಾನವ । ರೂಢೀಶನು ಸಕಲ ಪ್ರಮಥರೊಳಗೊಪ್ಪಿರ್ದಂ॥ ೧ ॥
ಇಂದು ಧರ ವರಕುಮಾರಕ । ಚಂದದಿ ಚೆನ್ನಪ್ಪದೇವ ಪೇಳಿದ ಕೃತಿಯಾ ॥
ಸಂಧಿಯೆರಡಮೃತ ರಸವಿದು । ಇಂ [3] ದ್ರನ [3] ಸಂಪದವನೀವ ಕೇಳ್ವಗ್ರೀಶಂ॥ ೨ ॥

ಇಂತಿ ಪದ್ಯಗಳು ೩೪೪

**ಅಂತು ಸಂಧಿ ೨ ಕ್ಕಂ ಸಂಪೂರ್ಣ ಗಣನೆ—೯೦೦ ಕ್ಕಂ ಮಂಗಳಮಹಾ**

**ಶ್ರೀ ಶ್ರೀ ಶ್ರೀ ಶ್ರೀ ಶ್ರೀ**



1–1 ಮೊಯ್ದು (ಇ, ಉ, ಎ, ಒ, ಗ, ಟ.) 2-2 ಪ್ರತಿ ಸೂರ್ಯನಂತೆ॥ (ಅ, ಋ, ಟ, ಡ, ತ, ಬ,) 3-3 ದು ಧರ (ಗ, ಚ.)

## ಮೂರನೆಯ ಸಂಧಿ

# ದಕ್ಷಬ್ರಹ್ಮನ ಸಂಹಾರ

---

**ಶಾರ್ದೂಲ ವೃತ್ತ.**

ಶ್ರೀ[1]ಗೌರೀ ವದನಾರವಿಂದ ಭ್ರಮರಂ ಸಾಕ್ಷಾದುಮಾರ್ಧಾಂಗನುಂ[1] ।
ಶ್ರೀ ಗಂಗಾಭಿತರಂಗ ಮಂಗಳ ಜಟಾ ತುಂಗಾಶ್ರಯಂ ಶಂಕರಂ ॥
ನಾಗಾರೀಗಮನೇಂದ್ರ ಬೊಮ್ಮ ಪದಮಂ ಭೋಗಾದಿ ಭೋಗಂಗಳಂ ।
ಬೇಗಂ ಪಾಲಿಸಿದಂತೆ ಶ್ರೀ ಗುರುವರಾ ಇತ್ತೆನ್ನ ನೀಂ ರಕ್ಷಿಸೈ ॥ ೧ ॥

**ತ್ರಿವುಡೆ.**

ಶರಣು ಶ್ರೀ ಗುರು ವರ ಮಹೇಶ್ವರ । ಶರಣು ಶಾಂಭವಿ ಪ್ರಾಣನಾಯಕ ।
ಶರಣು ಶ್ರೀ ಗಿರಿಮಲ್ಲಿಕಾರ್ಜುನ – ಶರಣು ಸಲಹೆನ್ನ ॥ ೧ ॥

ಈಗ ನಿಮ್ಮೆಯ ಶರಣ ಸ್ತುತಿಗಳ । ಸಾಗಿಸುವೆ ಬಲ್ಲಂತೆ ಹರುಷದಿ ।:
ಶ್ರೀ ಗುರುವೆ ಈ ಕೃತಿಗೆ ನಿಮ್ಮೆಯ – ಕರುಣವಿರಲಯ್ಯ ॥ ೨ ॥

ಸತ್ಯ ಶರಣರು ಸಕಲ ಕರ್ತರು । ಉತ್ತಮರು ಉಚಿತಜ್ಞ ಹಿರಿಯರು ।
ಭಕ್ತಿಯುತ ಸಂಪನ್ನರಿಗೆ ಕೈ – ಯೆತ್ತಿ ನಮಿಸುವೆನು ॥ ೩ ॥

ದೇವ ನಿಮ್ಮೆಯ ಶರಣ ಸ್ತುತಿಗಳಿ । ಗಾವ ವಿಘ್ನತೆ ಬಾರದಂದದಿ ।
ಕಾವುದೆನ್ನನು ಕರುಣಿ ಶ್ರೀ ಗುರು – [2] ಶಿವ ಮಹಾದೇವ [2] ॥ ೪ ॥

**ಛಂದ ಗಣ ಯತಿ** ಪ್ರಾಸ ವಡಿಗಳ । ಬಿಂದುವು ವಿಸರ್ಗಾದಿ ಗುರುಲಘು ।
ಒಂದು ಭೇದದವೊಡಲ ಹಸುಗೆಯ – **ನೋಡಿದವನಲ್ಲ** ॥ ೫ ॥

ಕುಂದು ಬಾರದ ಹಾಗೆ ಶ್ರೀಗುರು । ತಂದೆ ನಿಮ್ಮೆಯ ಕರುಣ ರಸದಾ ।
ನಂದ ಸುಧೆಯನು ಎರೆದು ಸಲಹೈ – ತಂದೆ ಪರಶಿವನೆ ॥ ೬ ॥

ಜಯ ಕೃಪಾಕರ ದುರಿತ ಸಂಹರ । ಜಯತುಜಾಹ್ನವಿ ಪ್ರಾಣನಾಯಕ ।
ಜಯತು ಶ್ರೀ ಗಿರಿಮಲ್ಲಿಕಾರ್ಜುನ ಜಯ ಮಹಾದೇವ ॥ ೭ ॥

ಇನ್ನು ಪೇಳುವೆ ದಕ್ಷ ಪರಶಿವ । ನನ್ನು ಕೊಲ್ಲುವೆನೆಂದು [3] ಯಾಗವ [3] ।
ಮುನ್ನ ಮಾಡಿದ ಕಥನವನು ಕೇ – ಳಿನ್ನು ಸಜ್ಜನರು ॥ ೮ ॥

---

1-1 ಶ್ರೀ ಗಿರಿಜಾಸ್ಯ ಮುಖಾಬ್ಜ ಭೃಂಗಲಿಂಗ ಶ್ರೀ ಗಾರಿಗರ್ಧಾಂಗಮುಂ । (ಅ, ಎ, ಒ, ಟ, ಡ, ದ, ಬ.) 2-2 ದೇವ ಶರಣಾರ್ಥಿ । (ಎ, ಗ, ಜ.) 3-3 ಯಜ್ಞವ (ಒ, ಟ, ಡ, ತ.)

ಹಿಂದೆ ದಕ್ಷನು ಬಹು ತಪಸ್ಸನು । ಇಂದು ಧರನನು ಕುರಿತು ಮಾಡಲು ।
ಅಂದು ಪರಶಿವ ಮೆಚ್ಚಿದೆನು ಬೇ – ಡೆಂದು ಕೇಳಿದನು ॥ ೯ ॥

ಇನ್ನು ಕರುಣಿಸು ದೇವ ಸಾಸಿರ । ಕನ್ನೆಯರ ನಾ ನೀಸುರಾಳಿಗೆ ।
ಕನ್ಯಾದಾನವ ಕೊಡುವೆ ಈವುದು – ಎನ್ನ ಬಯಕೆಯನು ॥ ೧೦ ॥

ಎಂದ ದಕ್ಷಗೆ ಮನದ ಬಯಕೆಯ । ಅಂದು ಪಾಲಿಸಿ ಈಶ ಕೈಲಾಸ ।
ಮಂದಿರಕೆ ಚಿತ್ತೈಸೆ ದಕ್ಷನು – ಬಂದ ಹರುಷದಲಿ ॥ ೧೧ ॥

ಅಂದು ದಕ್ಷನು ತನ್ನ ಸುತೆಯರ । ಚಂದ್ರ ಕಶ್ಯಪ ಸಕಲ ಸುರರಿಗೆ
ಚಂದದಿಂ ವಿವಾಹವ ಮಾಡಿದ – ನಂದು ಹರುಷದಲಿ ॥ ೧೨ ॥

ಮತ್ತು ಹರನನು ಕುರಿತು ಉಗ್ರ ತ । ಪಸ್ಸುಮಾಡಲು ದಕ್ಷಬ್ರಹ್ಮಗೆ ।
ಮೃತ್ಯುಹರ ತಾ ಮೆಚ್ಚಿ ಕೇಳ್ಮನ – ದರ್ಥಿ ಬಯಕೆ ಎನೆ ॥ ೧೩ ॥

ಸ್ವಾಮಿ ಕರುಣಿಸು ಮನದ ಬಯಕೆಯ । ಪ್ರೇಮದಿಂವೆನಗೊಬ್ಬ ಕುವರಿಯ ।
ಸೋಮಧರ ನಿನಗೀವೆನೆನೆ ಕರು – ಣಿಸಿದ ಪರಶಿವನು ॥ ೧೪ ॥

ಪರಶಿವನು [1] ಶಕ್ತಿಯನು [1] ದಕ್ಷಗೆ । ನಿರುತ ಸುತೆಯಾಗೆಂದು ನೇಮಿಸಿ ।
ಪರಮಗುರು ಕೈಲಾಸಕ್ಕೈದಿದ – ಪ್ರಮಥ ಸನ್ನಿಧಿಗೆ ॥ ೧೫ ॥

ಪರಮ ಶಕ್ತಿಯು ದಕ್ಷಬ್ರಹ್ಮಗೆ । ವರ ಸುತೆಯು ತಾನಾಗೆ ಹರುಷದಿ ।
ಕರೆದ ಪ್ರೀತಿಯಿಂ ಗೌರಿ ಈಶ್ವರಿ – ಎಂದು ಹರುಷದಲಿ ॥ ೧೬ ॥

ಲೋಕ ಸುಂದರಿಯಾದ ಶಿಶುವಿಗ । ನೇಕ ವಿದ್ಯೆಯ ಕಲಿಸಿ ಬಾಲ್ದೊಡಿ ।
ಗಿಕ್ಕಿ ಸಲಹಿದ ದಕ್ಷಗೌರಿಯ – ನೇಕ ವೈಭವದಿ * ॥ ೧೭ ॥

ಇಂದು ಧರನಿಗೆ ಗೌರಿದೇವಿಯ । ನಂದು ನೇಮಿಸಿ ಸಕಲ ವಿಭವದಿ ।
ಚಂದ್ರ ಧರನನು ಕುರಿತು ತಪವನು – ಮಾಡಿದನು ದಕ್ಷ ॥ ೧೮ ॥

ಮಾಡಿದನು ಅತ್ಯುಗ್ರ ತಪವನು । ನೋಡಿದನು ಶಿವ ಮೆಚ್ಚಿ ದಕ್ಷಗೆ ।
ಬೇಡು ನಿನ್ನಯ ಮನದ ಬಯಕೆಯ – ನೀಡುವೆನು ಎಂದ ॥ ೧೯ ॥

ಸ್ವಾಮಿ ಹರಿಯಜ ಸಕಲ ಸುರಮುನಿ । ಪ್ರೇಮದಿಂದೆನ್ನೋಲೈಸುತಲಿಹ ।
ಆ ಮಹಾ ಪದವಿಯನು ಪಾಲಿಸ – ಬೇಕು ಶ್ರೀ ಗುರುವೆ ॥ ೨೦ ॥

ಎಂದ ಮಾತಿಗೆ ದಕ್ಷನತಿಪುರ । ವೊಂದ [2] ನಿರ್ಮಿಸಿ [2] ಸುಖಮಿರೆನುತಲಿ ।
ಇಂದುಧರ ತಾ ನೈದಿದನು ಕೈ – ಲಾಸ ಮಂದಿರಕೆ ॥ ೨೧ ॥

1-1 ಪರ (ಒ, ಜ, ಟ.) * ಈ ಪದ್ಯ (ಎ.) ಪ್ರತಿಯಲ್ಲಿ ಮಾತ್ರವಿದೆ.
2-2 ನೇಮಿಸಿ (ಅ, ಉ, ಟ, ಪ, ಬ.)

ವಚನ || ಇಂತು ದಕ್ಷಾವತಿಯೆಂಬ ಪಟ್ಟಣಮಂ ನಿರ್ಮಿಸಿ, ದಕ್ಷಗೆ ಪಟ್ಟವಂ ಕಟ್ಟಿ ಹರಿ ಸುರ ಬ್ರಹ್ಮಾದಿಗಳ ಕೈಯ್ಯಿಂ ಓಲೈಸಿಕೊಂಬಂತೆ ಮಾಡಿ, ಈಶ್ವರಿಯಂ ಕೈಗೊಂಡು, ಈಶ್ವರಂ ಕೈಲಾಸಕ್ಕೆ ಪೋಗಲು, ಇತ್ತ ದಕ್ಷಬ್ರಹ್ಮನೈಶ್ವರ್ಯ ಹೆಚ್ಚಿ, ತನಗಾರೂ ಇದಿರಿಲ್ಲವೆಂದುಮುದಲ್ಲದೆ ಈಶ್ವರಂ ತನ್ನಳಿಯನೆಂಬ ಗರ್ವದಿಂದ ಕೆಲ ಕಾಲಂ ಕಳೆದು, ಶಿವನ ಓಲಗಮಂ ನೋಳ್ಪೆನೆಂದು, ಕೈಲಾಸಕ್ಕೆ ದಕ್ಷಬ್ರಹ್ಮ ಬರುತಿರ್ದ ಸಮಯದಲ್ಲಿ, ಶಿವನ ಓಲಗದಲ್ಲಿ ಚಂಡಕೀರ್ತಿಗಳು ಏನೆಂದು ಕೊಂಡಾಡುತಿರ್ದರನೆಂತೆನೆ.

**ಸೀಸಪದ್ಯ.**

ಹರಿ ಬಂದ ಹಂಸವಾಹನ ಬಂದ ಸುರಕರ್ತೃ |
ಕರಿಗಮನ ಬಂದ ಶ್ರೀ ಗುರು ಪರಾಕು || ೧ ||

ವೀತಿಹೋತ್ರನು ಪಿತೃಪತಿಯು ನೈಋತಿ ಬಂದ |
ಅತ್ತ ವರುಣನು ಮರುತನು ಅತಿಪರಾಕು || ೨ ||

ಕಿನ್ನರೇಶ ಬಂದನೀಶಾನ್ಯ ಸುರಮುನಿ ನಿವಹ |
ಪನ್ನಗೇಂದ್ರ ಪ್ರಮಥಪತಿ ಪರಾಕು || ೩ ||

ಯಕ್ಷ ರಾಕ್ಷಸ ಪ್ರತ್ಯಕ್ಷ ದಕ್ಷನು ಬಂದ |
ರಕ್ಷಿಸೈ ಶ್ರೀ ಗುರುವೆ ಮೋಕ್ಷನಾಯಕನೆ || ೪ ||

ಎಂದು ಕೊಂಡಾಡಿ ಚಂಡಕೀರ್ತಿಗಳು ಪೊಗಳೆ |
ಗಂಧರ್ವ ಮುನಿವೃಂದ ಮುಂದೆ ಸ್ತುತಿಸೆ || ೫ ||

ಸ್ಕಂದ ಗಣನಾಥರುಮೆಯರಾನಂದದಿಂದ |
ಇಂದು ಧರನಿರ್ದ ರವಿಕೋಟಿ ತೇಜದಿಂದ || ೬ ||

ವಚನ || ಆವೇಳೆಯಲ್ಲಿ ದಕ್ಷಬ್ರಹ್ಮನು ವಾಹನ ಸಹಿತನಾಗಿ ಇಳಿಯದೆ ಸಭಾಸ್ಥಾನಕ್ಕೆ ಬರಲು, ಪರಶಿವಮೂರ್ತಿಯು ಆ ದಕ್ಷನ ಗರ್ವಮಂ ತಿಳಿದು - ಮೌನವಾಗಿರೆ, ಶಿವಂಗಿದಿರಾಗಿ ನಿಂದಿರ್ದ ದಕ್ಷನನ್ನು ಯಾರೂ ಸಡ್ಡೆ ಮಾಡದೆ ಸುಮ್ಮನಿರಲು, ದಕ್ಷನು ಖಿನ್ನನಾಗಿ ತನ್ನೊಳು ತಾನೆ ಏನೆನ್ನುತಿರ್ದನು.

**ಜಂಪೆ.**

ಇಂದುಧರನನು ನೋಡ | ಬಂದೆನೆನ್ನನು ನೋಡಿ |
ಬಂದು ಕುಳ್ಳಿರು ಕ್ಷೇಮ | ವೆಂಬ ಮಾತಿಲ್ಲ || ೧ ||

ಬಾರಯ್ಯ ಮಾವ ನೀ | ವಾರಾರು ಬಂದಿರಿ |
ಊರಕಡೆ ಕ್ಷೇಮವೆಂ | ದೆಂಬ ಮಾತಿಲ್ಲ || ೨ ||

ಮತ್ತೆನ್ನ ಮಾವ ಬಾ । ಅತ್ಯಂತಹಿರಿಯ ಬಾ ।
ಇತ್ತ ಬಾ ಕುಳ್ಳಿರೆನೆ । ಮುತ್ತು ಪೋಗುತಿಹವೆ ॥ ೩ ॥

ತಿರಿತಿಂಬ ಜಂಗಮನ । ಕರೆದು ಮಗಳನು ಕೊಟ್ಟು ।
ಕಿರಿದಾದೆ ನಾ ದೇವ । ಹಿರಿಯ ಸಭೆಯೊಳಗೆ ॥ ೪ ॥

ಹರಿಯಜರ ಸುರರೊಳಗೆ । ಹಿರಿದು ಮಾಡದೆ ಎನ್ನ ।
ಬರಿಗಂಟು ಘನಮಾಡಿ । ಸರಕುಗೊಳಲಿಲ್ಲ ॥ ೫ ॥

ಇವಗೇಕೆ ಇಷ್ಟು ನಾ । ತವೆ ಯಜ್ಞವನು ಮಾಡಿ ।
ಶಿವನ ಕೊಂದಾನು ಶಿವ । ಲೋಕವಾಳುವೆನು ॥ ೬ ॥

ಎಂದು ಹರಿಯಜ ಸುರರ । ಹಿಂದಿಟ್ಟು [1]ತಿರುಗಿ ತಾ[1] ।
ಬಂದ ದಕ್ಷಾವತಿಯ । ಮಂದಿರಕೆ ಬೇಗ ॥ ೭ ॥

ವಚನ ॥ ಆ ದಕ್ಷಬ್ರಹ್ಮನು ತನ್ನ ಪಟ್ಟಣಕ್ಕೆ ಬಂದು, ಹರಿ ಸುರ ಬ್ರಹ್ಮಾದಿಗಳಂ ತನ್ನ ವಶವಮಾಡಿಕೊಂಡು, ಶಿವನ ಕೊಲ್ಲುವೆನೆಂದು ಯಜ್ಞಮಂ ರಚಿಸುತಿರ್ದನದೆಂತೆನೆ.

**ಅಟತಾಳ.**

ಹರಿಯಜೇಂದ್ರ ದಿಕ್ಪಾಲ ಮನು ಮುನಿ । ತರಣಿ ಚಂದ್ರರು ಮುಖ್ಯರ ।
ಕರೆಸಿದನು ದಕ್ಷೇಂದ್ರ ಹೋಮವ – ವಿರಚಿಸುವಡೆ ॥ ೧ ॥

ಬಂದರಾಕ್ಷಣ ಸಕಲ ಮನು ಮುನಿ । ವೃಂದಗೂಡುತ ದಕ್ಷನ ।
ಮಂದಿರವು ಮುಖಸಾಲೆ ಮಂಟಪ – ಸಂದುಗೊಡದೆ ॥ ೨ ॥

ಸುರ ಮುನೀಂದ್ರರ ಹಿರಿಯನೆನುತ । ಕರೆದು ಹೆಣ್ಣನು ಕೊಟ್ಟೆನು ।
ಸರಕುಗೊಳ್ಳದೆ ಹೋದ ತನ್ನೆಯ – ಪುರದೊಳೆನ್ನ ॥ ೩ ॥

ನೋಡು ಶ್ರೀ ಹರಿ ಎನ್ನ ತುಚ್ಛವ । ಮಾಡಿದಾ ಈಶ್ವರನನು ।
ರೂಢಿಯರಿವೊಲು ಕೊಲುವೆ ಯಜ್ಞವ – ಮಾಡಿಯೆಂದ ॥ ೪ ॥

ಎಂದ ಮಾತಿಗೆ ಸಕಲ [2]ಮನು[2] ಮುನಿ । ವೃಂದವಾಗಲೆ ಮಾಡಿತು ।
ಅಂದಚಂದದ ಯಜ್ಞಶಾಲೆಯ – ಮಂದಿರಗಳ ॥ ೫ ॥

ಮಂಡಲೇಶ್ವರ ಮಕುಟವರ್ಧನ । ದಂಡುಗೂಡುತ ಹೋಮದ ।
[3]ಕು[3]ಂಡವನು ಮಾಡಿದರು ಭೂಮಿಗು – ದ್ದಂಡಮಾಗಿ ॥ ೬ ॥

---

1-1 ಕರಮೊಯ್ದು । (ಇ, ಎ, ಖ.) 2-2 ಸುರ (ಇ, ಎ, ಖ.) 3-3 ಕೊ (ಇ,ಒ,ಖ,ಜ.)

ಅತ್ತಿಯಾಲವ ಅರಳಿ ಬಸರಿಯ । ಉತ್ತರಣೆಯಾ ಮಾವನು ।
ಹೊತ್ತು ತಂದರು ಸಮಿತು ದರ್ಭೆಯ – ನೊತ್ತಮಾಗಿ ॥ ೭ ॥
ಕ್ಷೀರ ಘೃತ ಮಧು ದಧಿಯು ಶರ್ಕರಿ । ಸಾರಗಟ್ಟಲು ಹಿಡಿಯಿತು ।
ಮಿೀರಿ ತಂಡುಲ ಶಾಕಫಲಗಿರಿ – ತೋರುವಂತೆ ॥ ೮ ॥
ಸೋಮಯಾಜಿಯು ಸರಸಿಜೋದ್ಭವ । ಅಮಿತ ಯಜ್ಞದ ಕರ್ತನು ।
ಆ ಮಹಾ ಶ್ರೀ ಹರಿಯು ಅಧಿಪತಿ – [1] ಭ್ರಮೆಯ [1] ಸುರರಿಂಗೆ ॥ ೯ ॥
ವೇದ [2] ದ [2] ಧಿಪತಿ ದಕ್ಷಯಜ್ಞದ । ಭೇದವರಿಯುತ ಆಹುತಿ ।
ಆದರಿಸಿ ಕೊಡಲುರಿಯು ಗಗನಕೆ – ಹೋದುದಾಗ ॥ ೧೦ ॥

ವಚನ ॥ ಆಗ ನಾರದಮುನಿಯು ದಕ್ಷಗೆ ಯಜ್ಞಮಾಡುವ ಹಿತವನ್ನೇ ಬೋಧಿಸುತ್ತಿರೆ, ಆ ವೇಳೆಯಲ್ಲಿ ಪುರೋಹಿತ ಭಟ್ಟರು ಬರುತಿರ್ದರದೆಂತೆನೆ.

**ದಂಡಾವಳಿ ರಾಗ.**

ಮಾಧವ ನಾರಾಯಣ ಶ್ರೀ ಹರಿಯೆಂದಂ । ಭೇದದಿ ನಾರದ [3] ನಿಂತೆಂ [3] ದಂ *॥
ಆ ದಕ್ಷನೊಳತಿ ಕೌತುಕದಿಂದಂ । ಸಾಧಿಸು ಈಶನ ಸಖವೇನೆಂದಂ * ॥ ೨ ॥
ಹರಿ ನಾರಾಯಣ ಅರಸಾಗಿರಲು । ಸುರಪತಿ ದಿಕ್ಪಾಲರು ನಿನಗಿರಲು ॥ ೩ ॥
ಉರುತರ ಭೈರವ ರವಿ ಶಶಿ ಇರಲು । ಸಂಹರಿಸುವದೊಳ್ಳಿತು ಪುರಹರನೆಂದಂ ॥
ಶ್ರೀ ಹರಿ ಕೇಶವ ಯಜ್ಞಕೆ ಕರ್ತಂ । ಆ ಮಹ ದಕ್ಷನು ಬಹಳ ಸಮರ್ಥಂ ॥
ಶ್ರೀ ಹರ ತಾನಿನ್ನೇತಕೆ ವ್ಯರ್ಥಂ । ಓ ಕೈಲಾಸವು ನಿರರ್ಥಂ ॥ ೬ ॥
ನಾರದ ಪೇಳುತ ಘೋರನೆ ಪೋದಂ । ಸಾರಿದ ಶಿವನೋಲಗ ಸನ್ನಿಧಿಗಂ ॥ ೭ ॥
ಮಾರಾರಿಗೆ ಈ ವಾರ್ತೆಯ ಪೇಳುತ । ಸಾರಿದ ದಕ್ಷನ ಹೋಮದ ದೆಸೆಗಂ ॥೮॥
ಇತ್ತಲು ದಕ್ಷನ ಯಜ್ಞದಶಾಲೆಯ । ಅರ್ಥಿ ವಿನೋದವ ವಿಸ್ತರಿಸುವೆನು ॥ ೯ ॥
ಸುತ್ತಲು ಸುರ ಮುನಿ ಪುರೋಹಿತ ಭಟ್ಟರ । ಮೊತ್ತದ ಬಗೆಯನು ಬಣ್ಣಿಸಿ ಪೇಳ್ವೆಂ ॥ ೧೦ ॥
ಶೇಷಂಭಟ್ಟರು ಕೇಶಂಭಟ್ಟರು । ಭೂಸುರ ಕುಲಗಳು ಬೇಗದಿ ಬನ್ನಿ ॥ ೧೧ ॥
ಯಂಗಂಭಟ್ಟರು ಲಿಂಗಂಭಟ್ಟರು । ಮಂಗಳ ಜಯಪ್ರದ ಮರೆಯದೆ ಬನ್ನಿ ॥
ತಿಪ್ಪಂಭಟ್ಟರು ತಿರು [4] ಕಂ [4] ಭಟ್ಟರು । ತುಪ್ಪದವೋಕುಳಿ ದೊರೆಕಿತು ಬನ್ನಿ ॥
ಕೋಡಂಭಟ್ಟರು ಕೋನಂಭಟ್ಟರು । ದ್ಗುಂಡಿತ ಭೋಜನ ದೊರೆಕಿತು ಬನ್ನಿ ॥
ಸುಬ್ಬಾಭಟ್ಟರು ತಮ್ಮಾಭಟ್ಟರು । ಹಬ್ಬೂಟ ದೊರಕಿತು ಇಬ್ಬರು ಬನ್ನಿ † ॥

---

1-1 ಅಖಿಳ (ಅ, ಟ, ದ, ಬ.) 2-2 ವ (ಇ, ಬ.) 3-3 ಬೇಗದಿಬಂ (ಅ, ಟ, ಬ.) * ಈ ಪದ್ಯಗಳು (ಇ, ಬ.) ಪ್ರತಿಗಳಲ್ಲಿಲ್ಲ. 4-4 ಮಲ (ಇ, ಬ, ಟ.) † ಈ ಪದ್ಯ (ಟ.) ಪ್ರತಿಯಲ್ಲಿ ಮಾತ್ರವಿದೆ.

ಹೂರಿಗೆ ಪಾಯಸ ಗಾರಿಗೆ ಅತಿರಸ । ಪೂರಿತ ಭೋಜನ ಭೋರನೆ ಬನ್ನಿ ||
ಕಿಚ್ಚಡಿ ಬೋನವು ಪಚ್ಚಡಿ ತಾಳಿಲು । ಹೆಚ್ಚಿನ ಪಳಿದೆಯು ಉತ್ಸಹ ಬನ್ನಿ ||
ಸರಳಿಗೆ ಪಾಯಸ ಸಜ್ಜಿಗೆ ಪಾಯಸ । ಪರಿಪರಿ ಪಾಯಸ ಪಾಕವು ನಮಗಂ ||
ಹಪ್ಪಳ ಸಂಡಿಗೆ ಉಪ್ಪಿನಕಾಯುಂ । ತುಪ್ಪದ ಒಗ್ಗರಣೆ ರುಚಿಗಳು ಬನ್ನಿ || ೧೯ ||
ಜುಟ್ಟ [1] ನೇವರಿಸು [1] ತ ಹೊಟ್ಟೆಯ ಸವರುತ । ಕಟ್ಟಿಗೆ ಮಣೆಯೊಳು ಕುಳಿತುಣ ಬನ್ನಿ || ೨೦ ||
ಯಂಗಮ್ಮನೆ ರಂಗಮ್ಮನೆ ತಿರುಮಲೆ । ಮುಂಗಮ್ಮನೆ ಮರೆಯದೆ ಬಾರೆನುತಂ ||
ಕೋನಮ್ಮನೆ ಕೊಂಡಮ್ಮನೆ ನೆರೆ । ಮನೆ ಬಾಗಮ್ಮನೆ ಬೇಗದಿ ಬಾರೆನುತಂ ||
ಶೇಷಮ್ಮ ಹರಿಯಮ್ಮನ ಮಗಳೆ । ಲೇಸಮ್ಮ ಬಾ ಬಾ ಎಂದೆನುತಂ ‡ || ೨೩ ||
ಇಟ್ಟರಸಿ ಪುಟ್ಟರಸಿ ನರಸಿ । ಹೊಟ್ಟೆಯ ಬ್ರಹ್ಮರಸಿ ನಾಗರಸಿಯರೀಗಳ್ || ೨೪ ||
ಇಡುವರೆ ಒಡವೆಯ ತೊಡುವರೆ ರವಕೆಯ । ಉಡುವರೆ ಸೀರೆಯ ಕೇಳುವೆವೆನುತಂ || ೨೫ ||
ಎಲ್ಲರನೊಡಗೊಳ್ಳುತ್ತತಿ ಹರುಷದಿ । ಮೆಲ್ಲನೆ ಬಂದರು ದಕ್ಷನಯೆಡೆಗಂ || ೨೬ ||
ದಕ್ಷನು ಬಲು ಅಧ್ಯಕ್ಷನು ಎಮ್ಮಂ । ರಕ್ಷಿಸು ಹಿಡಿ ಮಂತ್ರಾಕ್ಷತೆ ಎನುತಂ ||
ಹುಡಗರು ಪಡುಗರು ನಿಮ್ಮವರಯ್ಯ । ಕಡು ಬಡವರು ನಮ್ಮನು ಸಲಹಯ್ಯ ||
ಶ್ರೀ ಹರಿ ನಾರಾಯಣ ಗೋವಿಂದ । ದೇವರು ನಿಮ್ಮಯ ಕರುಣಾನಂದ || ೨೯ ||
ತೀವಿ ನಿಮ್ಮ ಮನದೊಳಿರಲೆಂದು । ಭಾವದಿ ಭಜಿಸೆವು ಮುನಿ ಜನವೃಂದ ||
ಎಂದೆಲ್ಲರು ಹರಿ ಸ್ತುತಿಗೊಳುತಾಗಂ । ಬಂದರು ಹೋಮದ ಬಳಿಗತಿ ಬೇಗಂ ||
ತಂದರು ಕದಳಿ ಎಳೆನೀರುಗಳಂ । ಬಂದವು ಹೊರೆ ಹೊರೆ ರಸದಾಳಿಗಳುಂ ||
ಸಕ್ಕರೆ ಸವಿ ಖರ್ಜೂರದ ಫಲವಂ । ಚೊಕ್ಕಟಬಿಳಿಯೆಲೆ ಕಳಿಯಡಕೆಗಳಂ ||
ದಿಕ್ಕಾವರಿಸುವ ಸಾಂಬ್ರಾಣಿಗಳಂ । ಗಕ್ಕನೆ ತಂದರು ಘನದ್ರವ್ಯಗಳಂ ||೩೪ ||
ಹೋಮದ ಸಾಟಿಯ ರೋಮದ ಕುರಿಯಂ । ಕಾಮನಪಿತಗರ್ಥಿಯ ಕಾಣಿಕೆಯಂ || ೩೫ ||
ಸ್ವಾಮಿಯೆ ಸಲಹೆನ್ನುತ ಸಂತಸದಿಂ । ಆ ಮಹ ಮುನಿಜನ ಕೊಂಡಾಡುತ್ತಂ ||
ಗಣಪತಿ ಬಂದನು ಅಣಕವನಾಡುತ । ಕುಣಿಗಣ್ಣಜ್ಜ ಕುಳಿತೆನು ಎಂದಂ ||೩೭||
ಉಂಡಲಿಗೆಯು ಕಜ್ಜಾಯವು ಅತಿರಸ । ಸೊಂಡಿಲು ಬೆನಕನೆ ಸುಖಮಿರು ಎಂದಂ * || ೩೮ ||
ಚಿತ್ತಲೆ ಭೈರವ ಬಂದನು ದಕ್ಷನ । ಹೆತ್ತಯ್ಯ ನಾ ಬಂದೆನು ಎಂದಂ * || ೩೯ ||

---

1-1 ನೆವರು (ಇ, ಒ, ಡ, ತ, ಬ,) ‡ ಈ ಪದ್ಯ (ಬ.) ಪ್ರತಿಯಲ್ಲಿ ಮಾತ್ರವಿವೆ.
* ಈ ಪದ್ಯಗಳು( ಇ, ಒ,ಡ, ತ. ) ಪ್ರತಿಗಳಲ್ಲಿಲ್ಲ.

ಮತ್ತೊಳ್ಳಿತು ಹೊರಬಾಗಿಲ ಕಾವಲು । ಸುತ್ತಲು ನಿನ್ನದು ಸುಖಮಿರು
ಎಂದಂ * ॥ ೪೦ ॥

ದೇವ ಬ್ರಾಹ್ಮರು ಹಸಿದರ್ಹೈಯವರಿಗೆ । ತೀವಿ ಬೇಗನೆ ಉಣಬಡಿಸಲುಬೇಕು ॥
ಯಂಗಮ್ಮಗೆ ರಂಗಮ್ಮನೆ ಬೇಗದಿ । ಶೃಂಗರಿಸಿರೆಡೆ ಬಡಿಸಲು ಬೇಕು ॥ ೪೨ ॥
ಸುತ್ತಲು ಬ್ರಾಹ್ಮರು ಗಕ್ಕನೆ ಬನ್ನಿ । ಪತ್ರಾವಳಿಗಳ ಪಸರಿಸಿಕೊಳ್ಳಿ ॥ ೪೩ ॥
ಹತ್ತಿರ ಹೊಂದಪೆ ಅತ್ತತ್ತೆನುತಂ । ಸುತ್ತು ಮುತ್ತಲು ಕುಳಿತರು ಬೇಗಂ ॥೪೪॥
ಹತ್ತಿರ ಚೆಂಬು ಪತ್ರಾವಳಿಗಳ । ವಿಸ್ತೀರ್ಣದಿ ಹಾಸಿದರತಿ ಬೇಗಂ ॥ ೪೫ ॥
ಕೋನಮ್ಮನು ಕೊಂಡಮ್ಮನು ಬೇಗದಿ । ಬೋನವನೆಡೆ ಬಡಿಸುತ ಬನ್ನೆನುತಂ ॥
ತಾಳಿಲು ಬಡಿಸೆ ಹೋಳಿಗೆ ನೀಡೆ । ಬೇಳೆ ಪಳಿದ್ಯವ ಹಣಿಸುತ ಬಾರೆ ॥ ೪೭ ॥
ತುಪ್ಪವನೆರೆಯೆ ಹಪ್ಪಳವೀಯೆ । ಉಪ್ಪಿನ ಕಾಯೆಡೆ ಬಡಿಸುತ ಬಾರೆ ॥ ೪೮ ॥
ಸೂಸಲ ಕೊಳ್ಳಿ ದೋಸೆಯ ನೀಡೆ । ಮಿಾಸಿಲ ಹಾಲೆಡೆ ಬಡಿಸುತ ಬಾರೇ ॥೪೯॥
ಮತ್ತೀಪರಿ ಎಡೆ ಬಡಿಸಲು ಭಟ್ಟರು । [1] ಹಸ್ತ [1] ವ ನಿಕ್ಕುತ ಸವಿ ನೋಡಿದರು ॥
ಶ್ರೀ ನಾರಾಯಣನಿಗೆ ಪೂರ್ಣಾಹುತಿಗಳ । ಕೊಡುತುಣ್ಣುತ ಸಂಭ್ರಮಗೊಳಲು ॥
ತುಂಬಿದರೂರಡವಿಯ ಭೂಸುರರು । ಇಂಬಾಗುಂಡರು ಹಾರುವರೆಲ್ಲರು ॥ ೫೨ ॥
ಕುಂಭಿನಿ ಸುರರಿಹ ಡಂಭಾಚಾರವ । ಶಂಭು ತಾ ಬಲ್ಲನು ಸಾಕೀಮಾತು ॥ ೫೩ ॥
ವಚನ ॥ ಆ ವೇಳೆಯಲ್ಲಿ ವಿಷ್ಣು ಇಂತೆಂದಂ.

**ದ್ವಿಪದಿ.**

ಶಾರದೆ ಗಣಪತಿ ಸಕಲ ಮುನಿ ನಿವಹ ।
ಸಾರಿ ಬಂದರು ನಮ್ಮ ಸಮ್ಮುಖಕೆ ಈಗ ॥ ೧ ॥

ಬಾರನು ದಧೀಚಯು ಬಲು ಸಮರವಂತ ।
ಯಾರಾದರೂ ಪೋಗಿ ಎಬ್ಬಿಸಿ ತನ್ನಿ ॥ ೨ ॥

ಎಂದ ಮಾತಿಗೆ ಚರರು ಅತಿಬೇಗ ಪೋಗಿ ।
ವಂದಿಸಿ ಮುನಿವರನ ಒಡೆನೆಂದರಾಗ ॥ ೩ ॥

ಇಂದು ದಕ್ಷನು ಯಾಗಮಂ ಮಾಡುತಹನೆ
ಬಂದರ್ಹೈ ದೇವಗಣ ಬಲು ಸ್ತೋಮವಾಗಿ ॥ ೪ ॥

ತಂದೆ ನಿಮ್ಮನು ಕರೆದು ತರಹೇಳಲಾಗಿ ।
ಬಂದೆವೀಗಲು ನಿಮ್ಮ ಬಳಿಗೆ ಎಂದೆನಲು ॥ ೫ ॥

---

* ಈ ಪದ್ಯ (ಇ, ಒ, ಡ, ತ.) ಪತ್ರಿಗಳಲ್ಲಿಲ್ಲ. 1 - 1 ಚಿತ್ರಾನ್ನ (ಅ,ಖ,ಜ,ಟ,ತ,ಬ.)

ಆರಾರು ಬಂದರು ಯಜ್ಞಶಾಲೆಯೆಡೆಗೆ ।
ಮಾರಾರಿ ಬಂದನೆ ಮಾಜದಲೆ ಪೇಳಿ ॥ ೬ ॥

ಎಂದ ಮಾತಿಗೆ ಸ್ವಾಮಿ ಎಲ್ಲರೂ ಅಹರೆ ।
ಬಂದು ನೋಡಿರಿ ಜೇಗ ಬಹಳ ಮಾತೇನು ॥ ೭ ॥

ಕಾಮಹರನನು ನೋಳ್ಪ ಕಡು ಹರುಷದಿಂದ ।
ಹೋಮಶಾಲೆಗೆ ಬಂದ ಪ್ರೇಮದಿಂ ಮುನಿಪ ॥ ೮ ॥

ನಿಂದು ನೋಡಿದ ಹರಿ ಸುರೇಂದ್ರ ಮುನಿಗಳನು ।
ಇಂದುಧರನಿಹ ಸುಳುಹು ಇಸಿತಾದರಿಲ್ಲ ॥ ೯ ॥
ತೋರಿರೋ ಈಶನ ಯಾರಾದರೀಗ ।

ಮಾರಹರನಿಹನೆಂದು ಮಾಜಿದಿರಿ ನೀವು ॥ ೧೦ ॥
ಇಂದುಧರನಿಲ್ಲದ ಯಜ್ಞಶಾಲೆಯೊಳು ।
ಹೊಂದೆ ದೋಷವು ಎಂದು ಉಗ್ರದಿಂ ನುಡಿದ ॥ ೧೧ ॥

**ಕಂದಪದ್ಯ.**

ಭಾಳಾಕ್ಷ ಬಾರದ ಯಜ್ಞ ।
ಹಾಳಾಗಲಿ ಹರಿಯಜೇಂದ್ರ ದಕ್ಷನ ತಲೆಯುಂ ॥
ಕೋಳುಗೊಳಲೀಶ ನಿಮ್ಮಯ ।
ನಾಲಿಗೆ ನಾಸಿಕವನೆಂದು ಶಪಿಸಿದ ಮುನಿಪಂ ॥ ೧ ॥

ವಚನ ॥ ಈ ರೀತಿಯಲ್ಲಿ ದಧೀಚಿಮುನಿಯು ಯಜ್ಞಶಾಲೆಗೆ ಶಾಪವಂ ಕೊಟ್ಟು ಪೋಗಲು, ಅತ್ತ ಕೈಲಾಸದಲ್ಲಿ ಈ ದಕ್ಷನ ಹೋಮವಾರ್ತೆಯಂ ದೇವಿಯರು ಕೇಳಿ ಪುಷ್ಪರಥಾರೂಢರಾಗಿ ನಂದೀಶ್ವರನಂ ಹಿಂದಿಟ್ಟುಕೊಂಡು, ದಕ್ಷನ ಯಜ್ಞಶಾಲೆಗೆ ಬಂದರದೆಂತೆನೆ.

**ಜಂಪೆ.**

ತಂದೆ ಹೋಮವ ನೋಳ್ಪೆ । ನೆಂದು ಪುಷ್ಪಕವೇರಿ ।
ನಂದೀಶನೊಡಗೊಂಡು । ಬಂದಳಾ ದೇವಿ ॥ ೧ ॥
ಬಂದು ದಕ್ಷನ ಬಳಿಯ । ನಿಂ [1] ದಳಾಕ್ಷಣ ದೇವಿ [1] ।
ಬಂದು ಕುಳ್ಳಿರು ಮಗಳೆ । ಎಂಬ ಮಾತಿಲ್ಲ ॥ ೨ ॥
ಇತ್ತ ಬಂದರೆ ಮುಖವ । ನತ್ತ ತಿರುಗಿಸಿಕೊಂಬ ।
ಅತ್ತ ಬಂದರೆ ಮುಖವ । ನಿತ್ತ ತಿರುಹುವನು ॥ ೩ ॥

1-1 ದಿರಲು ಶ್ರೀ ಗೌರೀ (ಇ, ಒ.)

ಏತಕಿಲ್ಲಿಗೆ ಬಂದೆ । ಏನು ನಿನಗುದ್ಯೋಗ ।
ಸಾಕು ನಿಂದಿರ ಬೇಡ । ಸಾರು ನೀ ಕಡೆಗೇ ॥ ೪ ॥

ಎಂದಿಗಾದರು ಶಿವನ । ಅಳಿಯನೆನ್ನಲಿಬಹುದೆ ।
ಕುಂದು ಮಾಡಿದನೆನ್ನ । ಕೂಡಿದೋಲಗದಿ ॥ ೫ ॥

ಹಿರಿಯನೆನುತಲಿ ಬಂದೆ । ಸುರ ಮುನಿಯ ಸಭೆಯೊಳಗೆ ।
ಸರಕುಗೊಳ್ಳದೆ ಎನ್ನ । ಕಿರಿದು ಮಾಡಿದನು ॥ ೬ ॥

ಕೊರಳಿಗೆಲುವನು ಹಾಕಿ । ತಿರಿದುಂಬ ಜಂಗಮನ ।
ಹಿರಿದ ಮಾಡಿದ್ರು.ದೀಗ । ಕಿರಿದೆನ್ನ ಬುದ್ಧಿ ॥ ೭ ॥

ಮಂದಮತಿ ಹೀನನನು । ಅಮಂಗಲದ ಗೊರವನನು ।
ಕೊಂದು ಹಾಕುವೆ ಹೋಗು । ಹೊಂದೆ ನಿನ್ನವನ ॥ ೮ ॥

ಹಿರಿಯತನದಲಿ ಸುಮ್ಮ । ನೆಯೆ ಹೋಗು ನೀನಿಲ್ಲಿ ।
ಇರಬೇಡವೆಂದು ಅ । ಬ್ಬರಿಸಿ ಗದರಿದನು ॥ ೯ ॥

ಅಳಿಯನೊಳು ಪಗೆಯಾಗಿ । ಅಣುಗಿ ನಂಟುಗಳುಂಟೆ ।
ಘಳಿಲನೆ ಪೋಗು ಇ । ಲ್ಲಿರಬೇಡವೆಂದ ॥ ೧೦ ॥

ವಚನ ॥ ಆ ದಕ್ಷನೆಂದಮಾತಿಗೆ ದೇವಿಯು ಉಗ್ರಕೋಪದಿಂದ ಏನನ್ನು ತಿರ್ದಳು.

**ಏಕತಾಳ.**

ಸಿಡಿಲಂತೆ ಕೋಪದಿ । ಕಿಡಿ ಕಿಡಿ ಮಸಗುತ್ತ ।
ಕಡು ದ್ರೋಹಿ ಶಿವ ನಿಂದೆ । ನುಡಿಯಲಿಕೆಬಹುದೆ ॥ ೧ ॥

ಹರ ಹರ ಎನುತೆರಡು । ಕರದಿ ಕರ್ಣವ ಮುಚ್ಚಿ ।
ಮೊರೆದು ಗರ್ಜಿಸಿ ಶಾಪ । ವೊರೆದಿತ್ತಳಾಗ ॥ ೨ ॥

ಹಾಳಾಗಿ ನಿನ್ನ ಯಜ್ಞ । ಹಸಗೆಟ್ಟು ನಿಮ್ಮ ತಲೆ ।
ಕೋಳು ಹೋಗಿ ಹೋಮದಿ । ಬೀಳಲೈ ಎಂದು ॥ ೩ ॥

ಖಂಡೇಂದುಧರನನರಿ । ಯದಾ ನಿಮ್ಮ ಸತಿಯರು ।
ರಂಡೆರಾಗಲಿ ಎಂದು । ದ್ದಂಡೆ ಶಾಪಿಸುತ ॥ ೪ ॥

ಪಾತಕಿಯು ಇವ ನನ್ನ । ತಾತನಲ್ಲವು [1] ನಾನು ।
ಈತನ [1] ಮಗಳಲ್ಲ । ಏತಕೆಂದೆನುತ ॥ ೫ ॥

---

1 - 1 ಎಂದು । ನಾನೀತಗೆ (ಅ, ಡ, ಬ. )

ಘುಡಿ ಘುಡಿಸುತಾಕೋಪ । ವಡರಿ ಪರ್ಮ್ಯೊರೆವುತ್ತ ।
ನಡೆದು ಬಿದ್ದಳು ಉರಿಯ । ನಡು ಹೋಮದೊಳಗೆ ॥ ೬ ॥

ಬಿದ್ದಳಾ ಕಾಳಿಯಾ । ಗಿದ್ದವಳು ಹೋಮದೊಳಗೆ ।
ಹೊದ್ದಿ ಕರ್ಮವು ದಕ್ಷ । ನಿದ್ದ ಚಿಂತೆಯಲಿ ॥ ೭ ॥

ವಚನ ॥ ಆ ಸಮಯದಲ್ಲಿ ನಂದೀಶ್ವರನು ಕೈಲಾಸಕ್ಕೆ ಬಂದು, ದೇವಿಯರು ಹೋಮದಿ ಬಿದ್ದ ವಾರ್ತೆಯಂ ಪರಶಿವಂಗೆ ಪೇಳಲು, ಪರಶಿವಂ ಕೋಪಾರೂಢನಾಗಿ ತನ್ನ ನೊಸಲ ! ಬೆವರಂ ತೆಗೆದು ನೆಲಕ್ಕಿಡೆ !! ವೀರೇಶ್ವರಂ ಪುಟ್ಟಿದನದೆಂತೆನೆ.

**ದ್ವಿಪದಿ.**

[1] ಮೃಡನು [1] ನಂದೀಶ್ವರನ ನುಡಿಯ ಕೇಳುತಲಿ ।
ಕಿಡಿ ಕಿಡಿಯ ಮಸಗುತ್ತ ಕಡು ಕೋಪದಿಂದ ॥ ೧ ॥

ಕಡುದ್ರೋಹಿ ದಕ್ಷನಂ ಕಡಿದವನ ತಲೆಯ ।
ಸುಡುವೆ ಹೋಮದೊಳಿಟ್ಟು ಸುರರು ಕೋಟಿಗಳ ॥ ೨ ॥

ತಡಬಡಗೊಂಬಂತೆ ತಲ್ಲಣವಗೊಳಿಸಿ ।
ಕಡಿಸದಲೆ ಬಿಡುವೆನೇ ಕೇಳು ನಂದೀಶ ॥ ೩ ॥

ಎಂದು ತನ್ನಯ ನೊಸಲಿಂದಿಳಿವ ಬೆವರ ।
ನಂದು ಧಾತ್ರಿಗೆ ಇಡಲು ಅಖಿಳ ಸುರವೈರಿ ॥ ೪ ॥

ಚಂದ್ರಜೂಟನ ಪ್ರೋಲ್ವ ಚೆಲ್ವ ಕಾಂತಿಯಲಿ ।
ಅಂದು ಪುಟ್ಟಿದ ವೀರನತಿ ಉಗ್ರದಿಂದ ॥ ೫ ॥

ಪೊಡವಿಯಿಬ್ಬಗೆಯಾಗಿ ಒಡೆದು ನಿಂತಂತೆ ।
ಸಿಡಿಲ ಬಳಗವು ಕೂಡಿ ಗಡ ಬಡಿಸುವಂತೆ ॥ ೬ ॥

ಹಿಡಿದು ಬ್ರಹ್ಮಾಂಡವನು ಹಿಸುಕಿ ಬಿಡುವಂತೆ ।
ಕಡು ಭೀಕರದ ರೂಪು ಕಣ್ಗೆ ರ್ಝೋಂಪಿಸಲು ॥ ೭ ॥

ಜಡಿದು ಮೂವತ್ತೆರಡು ದಿವ್ಯ ಆಯುಧವ ।
ಕೊಡು ಕೊಡೈ ಬೆಸನೆಂದು ಕೋಪವೆಗ್ಗಳಿಸೆ ॥ ೮ ॥

ಗಿರಿ ಗುಂಡು ಉರುಳಿದವು ಶರಧಿ ಕುದಿಗೊಂಡು ।
ಭರದಿ ನಕ್ಷತ್ರಗಳು ಬಿರುಬಿರನೆ ಉದುರೆ ॥ ೯ ॥

---

1-1 ಪೊಡವೀಶ (ಅ, ಟ, ಬ, ) ಈ ಪದ್ಯ (ಅ, ಒ, ಖ, ಜ, ಬ.)ಪ್ರಗಳಲ್ಲಿಲ್ಲ.

ಮೃಡನ ಪಾದಕೆ ಎರಗಿ ಮುದದಿ ಕೇಳಿದನು ।
ತಡವೇಕೆ ವೈರಿಗಳ ತೋರು ತನಗೆನುತ ॥ ೧೦ ॥

ಒಡನೆ ಹರನಿದಿರಲ್ಲಿ ರುದ್ರವೀರೇಶ ।

ವಚನ ॥ ಇಂತೆಂದ ವೀರಭದ್ರನ ರೌದ್ರವಂ ನೋಡಿ, ಈ ರೂಪಿಗೆ ಜಗತ್ತು ನಿಲ್ಲಲಾರದೆಂದು ಮಹಾ ಕಾಳಾಂಬಮಂ ಬಲಿದು ಭದ್ರಕಾಳಿಯಂ ನಿರ್ಮಿಸಿ, ವೀರಭದ್ರಂಗೆ ವಿವಾಹವಂ ಮಾಡಿಸಿ, ಶಾಂತಿಯಂ ಪುಟ್ಟಿಸಿ, ಬಹು ರೂಪಂ ನಿಲ್ಲಿಸಿ, ಏಕ ಮುಖ ಚತುರ್ಭುಜದಿಂದ ದಕ್ಷನ ಯಜ್ಞಮಂ ಸಂಹಾರ ಮಾಡೆನಲು, ಅಪ್ಪಣೆಯಂ ಕೈಕೊಂಡು ವೀರಭದ್ರದೇವರು ಪಯಣವಾಗಿ ಪ್ರೌಢಮಡುವುದಂ ಪೇಳುವೆನದೆಂತೆನೆ.

**ಸೀಸಪದ್ಯ.**

ಪಿಡಿದಿರ್ದ ಹ[1]ಲ[1]ಗೆಯ ಪಿನಾಕಿಖಡ್ಗವು ಬಾಣ ।
ಜಡಿವ ತ್ರಿಶೂಲ ಬೊಬ್ಬಿಡುವ ರವದಿ ॥ ೧ ॥

ಕಿಡಿಗಣ್ಣು ಹೊಳೆವ ಕೆಂಜೆಡೆ ಮಕುಟ ಪಾದದಿಂ ।
ದಡಿಯಿಡುವ ಪಾವುಗೆಯು ಕಡೆಯದಿಂದ ॥ ೨ ॥

ವೀರಗಾಸೆಯನುಟ್ಟು ಭಾರಿನಿಗಳವ ಹಾಕಿ ।
ವೀರ ನಿಂದನು ರಣೋದ್ಧಾರನಾಗಿ ॥ ೩ ॥

ಮಾರಿ ಮಸಣಿ ವೀರದುರುಗಿ ಚೌಡಿಯ ಸಂದಣಿ ।
ಕೋರೆದಾಡೆಯು ಶಕ್ತಿ ನಿವಹದಿಂದ ॥ ೪ ॥

ಭೂತ ಬೇತಾಳ ಶಾಕಿನಿ ಡಾಕಿನಿಯರ್ಗೂಡಿ ।
ಖಾತಿಯಿಂ ಬಂದ ದಕ್ಷ ಪಡೆಯ ಎಡೆಗೆ ॥ ೫ ॥

ವಚನ ॥ ವೀರಭದ್ರದೇವರು ಯಜ್ಞ ಶಾಲೆಗಭಿಮುಖವಾಗಿ ನಡೆದು ಬರಲು, ದಕ್ಷನ ಸಭೆಯಲ್ಲಿ ಉತ್ಪಾತಂಗಳು ಪುಟ್ಟಿದುವದೆಂತೆನೆ.

**ಕಂದಪದ್ಯ.**

ಧರೆ ನಡುಗಿತು ಉರಿ ಹೊಗರಿತು ।
ತರುಣಿಯರಿಟ್ಟೋಲೆ ಸರಿದುವು ಧಾತ್ರಿಗೆ ಬೀಳ್ದುಂ ।
ಉರಿಗೊಂಡಿತು ನಡುಗಂಭವು ।
ಪರಿದೆದ್ದವು ಧೂಮಕೇತು ಅಂಬರದೆಡೆಯೊಳ್ ॥ ೧ ॥

ವಚನ ॥ ಇಂತು ಉತ್ಪಾತವಂ ನೋಡಿ, ಸಕಲ ಸುರ ಮುನಿಗಳು ಎದ್ದು, ಭಯಂಗೊಂಡು ಯೋಚನೆಯಂ ಮಾಡಲು, ದಕ್ಷಬ್ರಹ್ಮ ಏನೆನ್ನುತಿರ್ದನು.

---

1-1 ರಿ (ಅ, ಇ, ಒ.,ಖ ಚ , ಟ, ದ, ಬ.)

**ಏಕತಾಳ–ಅರ್ಧರೇಕು**

ಏಕೆ ಯೋಚನೆ ನಿಮಗೆ – ಎಲ್ಲಾ ಋಷಿಗಳಿರಾ ।
ನಾಕಾಧಿ ಪತಿಗಳು – ನಮ್ಮೊಳಗೆ ಇರಲು ॥ ೧ ॥

ನೂಕುವೆನು ಮೀರಿಬಂದ – ನೇಕ ಭಾರವನು ।
ಹೋಮದ ಉಪಟಳ – ಹೊಸತೊಂದದಿಲ್ಲ ॥ ೨ ॥

ಭೂಮಿಯೊಳ್ಯ್ಯಾಂತಿಯ – ಹೋಮಕ್ಕೆ ಮಾಳ್ಪೆ ।
ಈ ಮಹ ಉತ್ಪಾತ – ವೀಕ್ಷಣವೆ ಕಳೆವೆ ॥ ೩ ॥

ತಾಮಸದ ಚಿಂತೆ ನಿಮ್ಮ – ಮನದಲ್ಲಿ ಬೇಡ ।
ಪ್ರೇಮದಿಂದಿರಿ ಎಂದು – ಪೇಳ್ದನಾ ದಕ್ಷ ॥ ೪ ॥

ಆ ಮಹಾಸುರರಿಂಗೆ – ಅತಿ ಧೈರ್ಯವಿತ್ತು ।
ಪಂಚಮೇಢ್ರಾಸುರನು – ಪಥವ ಕಾಯ್ದಿರಲು ॥ ೫ ॥

ಅಂಚಂಚು ಸುರಪತಿ – ದಿಕ್ಪಾಲರಿರಲು ।
ಸಂಚಿತದಿ ಸಕಲ ಋ – ಷಿಗಳೆಮ್ಮೊಳಗಿರಲು ॥ ೬ ॥

ಪಂಚಮುಖನ ಭಯ – ಕಿಂಚಿತ್ತು ಉಂಟೆ ।
ಧರೆಯ ಪಾಲಿಪ ಶ್ರೀ – ಹರಿ ನಮ್ಮೊಳಗಿರಲು ॥ ೭ ॥

ಸರಸಿಜೋದ್ಭವ ನಮ್ಮ – ಸನ್ನಿಧಿಯೊಳಿರಲು ।
ನೆರೆ ವೀರ ಭೃಗು ಬೃಹ – ಸ್ಪತಿಯೆಮ್ಮೊಳಿರಲು ॥ ೮ ॥

ಹರನುಪಟಳವೆಮ್ಮ – ನೆರೆ ಸೇರುತಿದೆಯೆ ।
ಶಶಿ ರವಿ ಸಕಲರೂ – ವಶವಾಗಿ ಇರಲು ॥ ೯ ॥

ಅಸಮ ಭಟರೂ ಅಷ್ಟ – ದೆಸೆಯ ಕಾಯ್ದಿರಲು ।
ಅಸಮರನು ಕೊಲುವ ಸಾ – ಹಸವೆಮ್ಮೊಳಗಿರಲು ॥ ೧೦ ॥

ಪಶುಪತಿಯ ಉಪಟಳವು – ಪತ್ತಲಮ್ಮುವದೆ ।
ವಚನ ॥ ಎಂದು ಮತ್ತಿಂತೆಂದಂ.

**ದ್ವಿಪದಿ.**

ಧರೆಯಜಾಂಡಗಳನೊಂದು ದವಡೆಯೊಳಗಾಂತ ।
ಹರಿಯು ನಮ್ಮೊಳಗಿರಲು ಹರನ ಮಾತೇನು ॥ ೧ ॥

ಸೃಷ್ಟಿಸುವ ಸಕಲ ಲೋಕವನೆಲ್ಲ ಬ್ರಹ್ಮ ।
ಇಷ್ಟವಾಗಿರೆ ನಮಗೆ ಈಶ ಭಯವುಂಟೆ ॥ ೨ ॥

ಮಾರಿದರೆ ಶಿವನಿರ್ಪ ಮೇರುವಂ ಕಿತ್ತು ।
ದೂರ ಬಿಸುಡುವೆ ಜಗವ ಮಾರಿ ಪೋಪಂತೆ ॥ ೩ ॥
ಅಷ್ಟ ಗಿರಿಗಳನೆತ್ತಿ ಅಣ್ಣೆ ಕಲ್ಲಾಡುವೆ ।
ಎಷ್ಟುಂಟು ಶಿವ ನನ್ನ ದೃಷ್ಟಿಗವನಿದಿರೆ ॥ ೪ ॥
ಮಾರಿದರೆ ಸುತ್ತಿರ್ದ ವಾರಿಧಿಯನೇಳ ।
ಸೇರಿ ಕರದೊಳಗೆತ್ತಿ ತೋರಿ ನುಂಗುವೆನು ॥ ೫ ॥
ಅಂತಪ್ಪ ವೀರರು ಅಧಿಕ ಬಲಯುತರು ।
ಸಂತತವು ಇಲ್ಲಿರಲು ಸರಿಯಾರು ನಮಗೆ ॥ ೬ ॥
ಎಂದು ಪೌರುಷಗಳನು ಎಲ್ಲರೊಳು ದಕ್ಷ ।
ಅಂದು ಪೇಳುತಲಿರಲು ಅಷ್ಟರೊಳು ವೀರ ॥ ೭ ॥
ದುಂದುಭಿ ನಿಸ್ಸಾಳ ದೂರದಿಂ ನುಡಿಯೆ ।
ಮುಂದೆ ಬಿರುದಿನ ಕಹಳೆ ಮುದದಿ ಉಗ್ಘಡಿಸೆ ॥ ೮ ॥
ಬಂದನಾ ನಾರದನು ಬಹು ಬೇಗದಿಂದ ।
ಎಂದ ಹರಿಯಜ ದಕ್ಷ ಎಲ್ಲರಾ ಮುಂದೆ ॥ ೯ ॥
ಬಂದ [1] ನಾ [1] ಪರವಾದಿ ಮಸ್ತಕದ ಶೂಲ ।
ಬಂದನಾ ಪರವಾದಿ ಮೇಷ ತಲ್ಲಣಿಗ ॥ ೧೦ ॥
ಬಂದನಾ ಪರವಾದಿ ಮೇಘ ಸಮೀರ ।
ಬಂದನಿಮ್ಮೆಲ್ಲರಾ ತಲೆಗೊಂಬ ಗಂಡ ॥ ೧೧ ॥
ಬಂದನಾ ಕಲಿವೀರ ಬಹಳ ರಣಶೂರ ।
ಸಂದು ದೂರವಿರಿರೈ ಸಕಲ ಸುರರೆಲ್ಲ ॥ ೧೨ ॥
ಎಂದು ಪೇಳುತ ಹಾಸ್ಯದಿಂದ ನಾರದನು ।
ಅಂದು ಖೇಚರಕಡರಿ ನಿಂದು ನೋಡುತಲಿ ॥ ೧೩ ॥

ವಚನ ॥ ಆ ವೇಳೆಯಲ್ಲಿ ವೀರಭದ್ರದೇವರು ಯಾಗಶಾಲೆಯ ಸಕಲ ಸನ್ನಾಹವಂ, ದೂರದಿಂ ನೋಡಿ, ಏನೆನ್ನುತಿರ್ದನು. ※

---

1-1 ನಿದೆ (ಇ, ಒ, ಖ.) ※ ಈ ವಚನದ ಮುಂದೆ (ಇ, ಉ, ಎ, ಗ, ಚ, ಡ, ತ, ದ.) ಪ್ರತಿಗಳಲ್ಲಿ, ಹರಿಸುರ ಬ್ರಹ್ಮಾದಿ ಅಷ್ಟದಿಕ್ಪಾಲಕ ನವಗ್ರಹಾದಿಗಳ ಪಡೆಯನ್ನು ಇವರಾರಾರೆಂದು ಭದ್ರಕಾಳಿಯು ವರ್ಣಿಸಿ ಕೇಳುತ್ತಲೂ, ಅದಕ್ಕೆ ಪ್ರತ್ಯುತ್ತರವನ್ನು ವೀರನು ಹೇಳುತ್ತಲೂ, ಇರುವುದಲ್ಲದೆ, ನವಗ್ರಹಾದ್ಯಷ್ಟದಿಕ್ಪಾಲಕರು, ಸುರ, ಬ್ರಹ್ಮ, ಹರಿ, ಸ್ತೋಮಗಳೆಲ್ಲಾ ಒಬ್ಬೊಬ್ಬರಾಗಿ ಯುದ್ಧಕ್ಕೆ ಬರುವಂತೆಯೂ, ಭದ್ರಕಾಳಿ ವೀರಭದ್ರರೀರ್ವರೂ, ಸಂಹರಿಸುವಂತೆ ಉಕ್ತವಾಗಿದೆ. ಇವುಗಳೆಲ್ಲಾ ವೀರಭದ್ರನೃಪಾಲ ರಚಿಸಿರುವ "ವೀರಭದ್ರ ವಿಜಯ" ದ, ಸಾರಾಂಶವನ್ನು ಹೊಂದಿದ್ದರೂ ರೂಪುಗಳು ಬೇರೆಬೇರೆಯಾಗಿ ಹೋಲಿಕೆಗೆ ಬರುವುದಿಲ್ಲ; ಇವುಗಳೆಲ್ಲ ಯತಿ, ಗಣ, ಪ್ರಾಸ, ತಾಳ ಸರಿಯಿಲ್ಲವಾದುದರಿಂದ ಅವುಗಳನ್ನಿಲ್ಲಿ ಬಿಡಲಾಗಿದೆ.

**ತ್ರಿವುಡೆ.**

ತರಗೆಲೆಯ ಮುಸುಕಿಟ್ಟು ಪರ್ವತ । ದುರಿಯ ನಂದಿಪನಂತೆ ದಕ್ಷನು ।
ಸುರರ ನೆರವಿಯ ನಂಬಿ ಈಶನ – ಕೆರಳ್ದು ಜೀವಿಪನೆ ॥ ೧ ॥

[1] ಮ [1] ರುಳುತನದಲಿ ಹರನ ನಿಂದಿಪ । ಸುರರ ನೆರವಿಯ ನೊರಜು ಪಾದದಿ ।
ಒರಸಿ ದಕ್ಷನ ಶಿರವರಿದು ಹೋ – ಮದೊಳು ಬಿಸುಡುವೆನು ॥ ೨ ॥

ಹಿಂಡು ಸುರರುದ್ದಂಡವನು ನಾ । ಕಂಡು ಬಿಡುವೆನು ಎಂದು ಮಾರಿಯ ।
ದಂಡ ಬಿಟ್ಟನು ವೀರ ದಕ್ಷನ – ಪಡೆಯ ಮೇಲೆ ॥ ೩ ॥

ಹೊತ್ತು ಕವಿದುದು ಯಜ್ಞಶಾಲೆಯ – ಸುತ್ತ ಮಾರಿಯ ದಂಡು ಭೂತದ ।
ಮೊತ್ತವೇರಿತು ಸುರರ ಬೆನ್ನಿಲಿ – ಮೃತ್ಯುವಡರಿದುದು ॥ ೪ ॥

ಯಜ್ಞಭೋಜನ ಉಣ್ಣಬಂದರ । ವಿಘ್ನಗೈದವು ಮೂಗು ಕಿವಿ ಮೊಲೆ ।
ಭಗ್ನದಿಂದಲಿ ಎದ್ದು ಭೂತಗ – ಳುಗ್ರದಿಂದಲ್ಲಿ * ॥ ೫ ॥

ಸುರರಸಭೆ ಕಂಗೆಟ್ಟು ಬೆದರುತ । ಅರೆ ಹುರೆಂದಬ್ಬರಿಸಿ ಓಡುತ ।
ಭರದಿ ಬಂದರು ಹರಿಯಜೇಂದ್ರರು – ಇರುವ ಸನ್ನಿಧಿಗೆ ॥ ೬ ॥

ಹರಿಯಜೇಂದ್ರರು ನೋಡಿದರು ಅ । ಬ್ಬರಿಸಿ ಬರುತಿಹ ಭೂತಪಡೆಯನು ।
ತರುಬಿ ಬೆನ್ನಟ್ಟಿದರು ವೀರನ – ತನಕ ಪೋಪಂತೆ ॥ ೭ ॥

ನೋಡಿದನು ವೀರೇಶ ತನಗಿದಿ । ರೋಡಿ ಬರುತಿಹ ಭೂತಪಡೆಯನು ।
ಕೂಡಿ ನಡೆದಂ ಕುಜಕುಠಾರ – ಕಂಠೀರವನು ॥ ೮ ॥

ಉರುಗವೊತ್ತಕೆ ಉನ್ನತದಗಿರಿ । ಗೆರಗುತಿಹ ಬರ ಸಿಡಿಲಿನಂದದಿ ।
ಎರಗಿ ಹೊಯ್ದನು ಸಕಲಸುರರಿಗೆ – ಹಿರಿಯ ಕರ್ತರನು ॥ ೯ ॥

ಹರಿಯು ಪರಿದನು ನಿಲ್ಲಲಾರದೆ । ಎರಳೆ ರೂಪಾಂತಾಗ ಓಡಲು ।
ಭರದಿ ಅಸುರರು ಸುರಮುನೀಂದ್ರರು – ಇರದಲೋಡಿದರು † ॥೧೦॥

ಉರಿಗೆ ನೂಕಿದ ಕೆಲರ ತಲೆಗಳ । ಕೊರೆದುಹಾಕಿದ ಹೋಮ ಕುಂಡಕೆ ।
ಕರ ಶಿರವ ನಾಲಿಗೆಯ ನಾಸಿಕ – ವರಿದ ಕೆಲಬರನು ॥ ೧೧ ॥

ಧರೆಗೆ ಹಾಕೊರಸಿದನು ಕೆಲಬರ । ಹಿರಿದು ಬಾಣದೊಳಿಟ್ಟ ಕೆಲಬರ ।
ನೊರಜು ಎಂದುಳುಹಿದನು ಕೆಲಬರ – ಧೀರ [2] ಕಲಿವೀ [2] ರ ॥ ೧೨ ॥

ಒಡಲುವೊಡೆಯಲು ಒದೆದ ಕೆಲಬರ । ನಡು ಮುರಿಯಲಿಕ್ಕಿದನು ಕೆಲಬರ ।
ಕೆಡಹಿ ಹಲ್ಲನು ಮುರಿದ ಕೇಣಿಗ – ಳ್ವಿಡಿದ ಕೆಲಬರನು ॥ ೧೩ ॥

---

1-1 ದು (ಇ, ಖ, ಜ, ಟ.) * ಈ ಪದ್ಯ (ಇ,ದ.) ಪ್ರತಿಗಳಲ್ಲಿ ಮಾತ್ರವಿವೆ,
† ಈಪದ್ಯ (ಒ,ಜ.) ಪ್ರತಿಗಳಲ್ಲಿ ಮಾತ್ರವಿದೆ 2-2 ರಣಶೂ (ಒ, ಖ.)

ಕಡಿದ ಕೆಲಬರ ಬಡಿದ ಕೆಲಬರ । ಕೆಡಹಿ ತುಳಿದೊರಸಿದನು ಕೆಲಬರ ।
ಹಿಡಿದು ಕೊಸರೀಡಾಡಿಯುಂಬರಕ್ಕಿ– ಟ್ಟ ಕೆಲಬರನು ॥ ೧೪ ॥
ಮಾರಿ ಮಸಣಿಯ ಹಿಂಡು ರಕ್ತವ । ಹೀರಿ ಹೆಣಗಳ ತಿಂದು ತೇಗುತ ।
ವೀರಭದ್ರನ ಹಾಡಿ ಹರಸಿ ಕೊಂ – ಡಾಡಿ ಪೊಗಳಿದವು ॥ ೧೫ ॥
ಹೋಮದೊಳು ಮಹಂಕಾಳಿ ವೀರನ । ಪ್ರೇಮದಿಂ ಕೊಂಡಾಡಿ ಹರಸುತ ।
ಸ್ವಾಮಿ ದ್ರೋಹಿಯ ಕೊಂದು ಕೀರ್ತಿಯ – ತಂದೆ ಹಾ ಎನುತ ॥ ೧೬ ॥
ಕಂದ ಸುಖಬಾಳೆನುತ ಹರಸುತ । ಅಂದು ಹರನಾಜ್ಞೆಯಲಿ ಮೇನಕೆ ।
ನಂದನೆಯು ತಾನಾಗಿ ಬೆಳೆದಳು – ಅಂದು ಗಿರಿಜಾತೆ ॥ ೧೭ ॥

**ಲಿಂಗಪುರಾಣದ ಗ್ರಂಥ.**

ಯಜ್ಞೇಶ್ಚದಕ್ಷ ಶಿರಚ್ಛೇತ್ತಾ । ಪೂಷದಂತ ವಿನಾಶಕಃ ।
ವಹ್ನಿ ಜಿಹ್ವಾ ಛೇತ್ಯ ಹಸ್ತೋ । ಭೃಗುನೇತ್ರನಿಪಾತನಃ ॥ ೧ ॥
ಉಪೇಂದ್ರೇಂದ್ರ ಯಮಾದ್ಯಾಂಶ್ಚ । ದೇವಾನಾಹತ್ಯ ರಕ್ಷಕಃ ।
ಸರಸ್ವತ್ಯಾ ಮಹಾದೇವೋ । ನಾಸಿಕೋಷ್ಠಾರ್ಧ ಕೃಂತನಃ ॥ ೨ ॥

ಎಂದು ಸಾಕ್ಷಿಯುಂಟಾಗಿ ಇಂತಪ್ಪ ವೀರಭದ್ರನ ಪ್ರತಾಪವನ್ನು, ಖೇಚರದಲ್ಲಿ ಪ್ರಮಥಗಣಂಗಳು, ನಾರದರಿಂಕೇಳಿ, ತಾವೂಕಂಡು, ಆಶ್ಚರ್ಯವಂಪಟ್ಟು ಏನೆನ್ನು ತಿರ್ದರು.

**ಸೊಬಗಿನಸೋನೆ ವರ್ಣ.**

ಭಾಪುರೆ ತಿಮಿರ ಭಾಸ್ಕರರಿಪು ಮರ್ಧನ ।
ಭಾಪುರೆ ಗಜಕಂಠೀರವನೆ ಶೂರ ।
ಭಾಪುರೆ ಬಣಗು ದೈವದಗಂಡ ಭೇರಂಡ ।
ಭಾಪೆಂದು ನುತಿಸಿ ಕೀರ್ತಿಸುತ್ತಿರ್ದರು ॥ ೧ ॥
ಅಂಡದಧಿಪತಿಯಧಿಕ ಬಲವಂತರು ।
ಮಂಡಲೇಶ್ವರ ಮಕುಟವರ್ಧನರು ॥
ದಿಂಡುಗೆಡೆದು ಉರುಳಿದರು ವೀರೇಶನಾ ।
ಖಂಡೆಯದ ಕರದ ಸಾಹಸವೇನು ॥ ೨ ॥
ಯಜ್ಞ [1] ಬೋನ [1] ವನುಣ ಬಂದ ದೇವತೆಗಳು ।
ಭಗ್ನವಾದರು ಹೋಮದೆಸೆಯಿಂದ ॥
ಸುಜ್ಞಾನವಳಿದು ಸುಖವು ತಪ್ಪಿ ಶಿವಪೂಜೆ
ವಿಘ್ನರಾದರು ಎಲ್ಲ ಸುರರಾಗ ॥ ೩ ॥

---

1-1 ಭಾಗ (ಅ, ಖ, ಜ, ಡ.)

ಮುಟ್ಟಿತಲೆ ಮುನಿಯ ಶಾಪವು ಮೂಜಗನ್ಮಾತೆ ।
ಇಟ್ಟ ಶಾಪವು ಎಲ್ಲ ಸುರರಿಂಗೆ ॥
ತಟ್ಟಿತದು ತಳಮಳಗೊಳುತ ವೀರೇಶನಾ ।
ಪೆಟ್ಟನಲಿ ಬಿದ್ದೊರಗಿದರಾಗ ॥ ೪ ॥

ಎಂದು ಅಂಬರದಿ ನಾರದ ಮುಖ್ಯ ಪ್ರಮಥರು ।
ದುಂದುಭಿ ಕಹಳೆ ಘೋರ್ಗರೆಯುತ್ತ ॥
ಚಂದ ಚಂದದಿ ಪುಷ್ಪ ವೃಷ್ಟಿಯ ಕರೆಯುತ ।
ಅಂದಿರ್ದರಂಬರದ ಎಡೆಯಲ್ಲಿ ॥ ೫ ॥

ಇತ್ತ ವೀರೇಶ ನಿಂದಕ ಸುರ ಮುನಿಗಳ ।
[1] ತೊತ್ತಳ [1] ತುಳಿದು ಸಂಹರಿಸುತ್ತ ॥
ಸ್ವಸ್ಥಿರದಿಂ ಶಿವ ಪುರಿಗಭಿಮುಖವಾಗೆ ।
ಮತ್ತೆ ಬಂದಳು ವೇದವತಿ ಬೇಗ ॥ ೬ ॥

ಸುತ್ತಲು ಸುರರ ಸತಿಯರೊಡಗೊಂಡು ತಾ ।
ಎತ್ತಿದಳು ವೀರಗಾರತಿಗ [2] ಳ [2] ॥
ಮುತ್ತೈದೆತನವ ಪಾಲಿಸು ದೇವ ಎಂದೆನ ।
ಲಿತ್ತನೆಲ್ಲರ ಪ್ರಾಣಪದವನ್ನು ॥ ೭ ॥

ಕಡುಗಲಿ ವೀರ ದಕ್ಷಗೆ ಕುರಿದಲೆಯಿತ್ತು ।
ಒಡಗೊಂಡು ಕೈಲಾಸ ಪುರಕತ್ತ ॥
ಸಡಗರ ಸಕಲ ವಾದ್ಯಗಳು ಘೋರ್ಗರವುತ್ತ ।
ನಡೆದ ಪ್ರಮಥ ಗಣರೊಡ [3] ಗೂಡಿ [3] ॥ ೮ ॥

ಎಡಮುರಿಯೊಳಗಿಹ ಹರಿ ವಿರಂಚಿ ಸುರರು ।
ಪೊಡವಿಪರು ದಿಕುಪಾಲರೆಲ್ಲ ॥
ಬಿಡದೆ ರವಿ ಶಶಿಮುಖ್ಯರೆಲ್ಲ ಸಹಿತದಲಿ ।
ಒಡನೆ ಭೂತಗಳಿಂದ ಹೊರಿಸಿದ * ॥ ೯ ॥

ಪಿಡಿದಿರ್ದ ಖಡ್ಗ ಪಿನಾಕ ಹಲಗೆ ಬಾಣ ।
ಜಡಿವ ಕಾಸೆಯು ಝಲ್ಲಿ ಎಳೆಹೂಟ ॥
ನುಡಿವ ಮದ್ದಳೆ ಮಲಹರಿಯಂಬ [4] ವಾದ್ಯದಿಂ [4] ।
ನಡೆದನ್ನೈ ವೀರ ಶಿವಪುರಿಗಾಗಿ ॥ ೧೦ ॥

---

1-1 ಮೊತ್ತವ (ಇ, ಒ,) 2-2 ಯ (ಇ, ಒ,ಟ.) 3-3 ಗೊಂಡು (ಇ, ಒ, ಖ, ಜ, ಟ.) * ಈ ಪದ್ಯ (ಇ, ದ.) ಪತ್ರಿಗಳಲ್ಲಿ ಮಾತ್ರವಿದೆ. 4-4 ನಾಟ್ಯದಿ (ಒ, ಖ, ಜ, ಟ.)

ಎಡಬಿಡದೆ ಇಂದುಧರನ ಓಲಗದಲ್ಲಿ ।
ಗಡಣ ಸಂದಣಿ ಏನ ಪೇಳ್ವೆ ॥
ಮೃಡಶರಣ ಪ್ರಮಥ ಸ್ತೋಮಕ್ಕೆ ಸೆರಗಾಗ ।
ಒಡನೆ ಸೋಂಕಲು ವೀರ ನಡೆದನು * ॥ ॥ ೧೧ ॥
ಪೊಕ್ಕನು ಕೈಲಾಸ ಪುರವ ವೀರೇಶ್ವರ ।
ಮುಕ್ಕಣ್ಣಗೆರಗಿ ಕೈ ಮುಗಿಯುತ್ತ ॥
ಸೊಕ್ಕಿದಾ ದಕ್ಷನ ಹಿಡಿತಂದೆ ನೋಡೆಂದು ।
ಮುಕ್ಕಣ್ಣಗಡ್ಡಗೆಡಹಿದನಾಗ ॥ ೧೨ ॥
ಖಂಡೇಂದು ಧರನು ಕರುಣದಿ ವೀರೇಶನ ।
ಮುಂಡಾಡಿ ಮುಖವ ಮುದ್ದಿಸುತಾಗ ॥
ಕೊಂಡಾಡಿ ವೀರಾಧಿ ವೀರ ಸ್ಥಿರಬಾಳೆಂದು ॥
ಖಂಡ ಪರಶುವಭಯವನಿತ್ತ ॥ ೧೩ ॥
ಬಂದಳಾ ಬಾಲೆ ಭಾವಕಿ [1] ಗಂಗೆ [1] ಪತಿವ್ರತಾ ।
ವೃಂದ ಸಹಿತ ಆರತಿಗೊಂಡು ॥
ಕಂದ ವೀರೇಶನಿಗೆ ಬೆಳಗಿ ಸೇಸೆಯನ್ನಿಟ್ಟು ।
ಮುದ್ದಿಸುತ ಹರಸಿ ಮನೆಗೆ ಎಯ್ದಿದರು ॥ ೧೪ ॥
ನಂದೀಶ ಭೃಂಗಿಯು ಅಖಿಳ ಪ್ರಮಥಾದಿ [2] ಯ [2] ।
ಚಂದ್ರಧರನ ಚೆಲ್ವ ಸಭೆಯೊಳು ॥
ಕಂದ ವೀರೇಶ ಕಪರ್ದಿ ಬಲದೆಡೆಯೊಳು ।
ಅಂದೊಪ್ಪುತಿರ್ದ [3] ನರ್ಥಿಯಲಿ [3] ॥ ೧೫ ॥

**ಕಂದಪದ್ಯ.**

ಇಂದುಧರ ಸುತನು ದಕ್ಷನ ।
ಕೊಂದೆಲ್ಲರ ಸಲಹಿ ತಾನು ಕೈಲಾಸಕ್ಕಂ ॥
ಬಂದನಿದೆ ಎಂಬ ಠಾವಿಗೆ ।
ಸಂಧಿಯು ಮೂರಾಯ್ತೀಶಂ ಸಲಹುಗೆ ನಮ್ಮಂ ॥ ೧ ॥

ಇಂತಿ ಪದ್ಯಗಳು ೨೧೪

**ಅಂತು ಸಂಧಿ ೩ ಕ್ಕಂ ಸಂಪೂರ್ಣಗಣನೆ–೧೧೧೪ ಕ್ಕಂ ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ**

---

* ಈ ಪದ್ಯ (ಎ, ಒ, ಖ, ಜ.) ಪ್ರತಿಗಳಲ್ಲಿಲ್ಲ. 1-1 ರನ್ನೆ ( ಅ, ಬ.) 2-2 ಯು (ಒ, ಟ. ) 3–3 ಲಂದೂ ॥ (ಇ. ಒ, ಜ.)

# ನಾಲ್ಕನೆಯ ಸಂಧಿ

## ಶ್ರೀ ನಂದೀಶ್ವರನು ಅನಿಮಿಷ ರಾಜನಿಗೆ ಲಿಂಗವಿತ್ತುದ್ದು

---

**ಶಾರ್ದೂಲ ವಿಕ್ರೀಡಿತಾ ವೃತ್ತ.**

ವಂದೇ ದೇವ ನಿರಂಜನಂ ವಿಷಧರಂ ಕಾಮಾರೀ ಸರ್ವೇಶ್ವರಂ |
ಮಂದಾರಾದ್ರಿ ನಿವಾಸ ನಿರ್ವೃತಿಶಿವಂ ಜ್ಞಾನಾಮೃತಸ್ಸಾಗರಂ ||
ಚೂಡಾಲಂಕೃತ ಚಾರು ಸೋಮ ಕಲಿಕಾ ಪ್ರೇಂಖಚ್ಛಿಖಾ ಪ್ರೋಜ್ವಲಂ |
ಶ್ರೀಮತ್ಪಾರ್ವತಿ ವಲ್ಲಭಂ ಭವಹರಂ ಸ್ವೇಷ್ಟಾರ್ಥದಂ ಶಂಕರಂ ||೧||

**ಕಂದಪದ್ಯ.**

**ಸೂ** || ಮುಂದಣ ಶಿವಕಥೆಯೆಂತೆನೆ |
ನಂದೀಶನು ಅನಿಮಿಷಂಗೆ ಲಿಂಗವನಿತ್ತುಂ ||
ಬಂದಡೆ ಕೈಲಾಸ ದ್ವಾರದಿ |
ನಿಂದಿರಿಸೆ ದ್ವಾರಪಾಲಕ ಶಾಪವ ತಾಳ್ದಂ ||೧||

**ದ್ವಿಪದಿ.**

ಶ್ರೀ ಮೇರು ಮಂದಿರದಿ ಶಿವನ ಓಲಗದಿ |
ಆ ಮಹಾ ನಂದೀಶ ಅರ್ಥಿಯಿಂದಿರುತ ||೧||

ಭೂಮಿಯಂ ನೋಡುವಾ ಬುದ್ಧಿಯಂ ನೆನೆದು ||
ಪ್ರೇಮದಿಂ ಧರೆಗಿಳಿದ ಪೇಳಲಿನ್ನೇನು ||೨||

ಕುಂಭಿನಿಯ ಒಳಗೇಳು ಕುರುಹುಳ್ಳ ದ್ವೀಪ |
ಮುಂಬದಿಯೊಳಿಹುದೊಂದು ಮುಕ್ತಿಯಾ ದ್ವೀಪ ||೩||

ಜಂಬುದ್ವೀಪವು ಮೇರು ಜಗಕೆ ಅರಿದಾಗಿ |
ಸಂಭ್ರಮವೆತ್ತಿಹುದು ಸಕಲ ವಿಭವದಲಿ ||೪||

ಅದರೊಳಗೆ ನವಖಂಡ ಅರ್ಥಿಯಿಂದಿಹವು |
ಚದುರತನದಿಂ ಜಗಕೆ ಚೆಲುವ ಮಾಡುತಲಿ ||೫||

ಅಂತಪ್ಪ ನವಖಂಡದ[1] ಧಿಕವೆಂದೆನಿಸಿ[1] |
ಸಂತತೊಪ್ಪುಪದೊಂದು ಸಲೆ ಭರತಖಂಡ ||೬||

---

1-1 ರ್ಥಿಯಿಂದಿಹುದು| (ಜ.) * ಈ ಅರ್ಧ ಪದ್ಯ(ಅ, ಒ, ಟ, ತ, ಬ.) ಪ್ರತಿಗಳಲ್ಲಿಲ್ಲ.

ಪುಣ್ಯನದಿ ಪುಣ್ಯಕ್ಷೇತ್ರವು ಪುಣ್ಯ ವನವು |
ಪುಣ್ಯಪುರುಷರು ಪುಣ್ಯಸ್ತ್ರೀಯರಿಂ ಧರಣಿ ॥ ೭ ॥

ಇಂಪಿಂದ ತಂಪಿಂದ ತಂಪು ಜಲದಿಂದ |
ಸೊಂಪೆಸೆವ ಸಕಲ ಪುಷ್ಪದ ವನಗಳಿಂದ ॥ ೮ ॥

ಕಣ್ಗೆ ಮಂಗಳವಾಗಿ ಕಡುರಮ್ಯದಿಂದ |
ಬಣ್ಣಿಸುವರಳವಲ್ಲ ಭರತಖಂಡವನು * ॥ ೯ ॥

ಶೃಂಗಾರವೆತ್ತಿಹುದು ಸ್ವಸ್ಥಿರದಿ ಭೂಮಿ |
ಅಂಗಜಾರಿಯ ಪುರಕೆ ಮಿಗಿಲೆನಿಪುದಲ್ಲಿ * ॥ ೧೦ ॥

ಅವರೊಳಗೆ ನಂದೀಶ ಅತಿಹರುಷದಿಂದ |
ಚದುರನ್ನೈವತ್ತಾರು ದೇಶಮಂ ಚರಿಸಿ ॥ ೧೧ ॥

ಪೃಥ್ವಿಯೊಳಗೊಪ್ಪುವ ಪುಣ್ಯಕ್ಷೇತ್ರಗಳ |
ಅತ್ಯಂತ ನದಿಗಳ ಅಖಿಳ ಭೂಮಿಗಳ ॥ ೧೨ ॥

ಮತ್ತೆ ನೋಡುತಲಿ ಮಲ್ಲಿಕಾರ್ಜುನನ ಗಿರಿಗೆ |
ಅತ್ತ ದಕ್ಷಿಣದಲ್ಲಿ ಆಡಿ ನೋಡುತಲಿ ॥ ೧೩ ॥

ಮುಂದಕ್ಕೆ ಶರಣರಾ ಮಹಿಮೆ ಮೆರೆಯಲ್ಕೆ |
ನಂದೀಶ ಬಂದ ಆನಂದಮಯನಾಗಿ * ॥ ೧೪ ॥

ಹಿಂಡಿಗನ ಹಾಳಲ್ಲಿ ಹೆಂಡಿಯಂ ಹಾಕಿ |
ನಂದಿಕುಳಿಯೆಂಬಲ್ಲಿ ನಯದಿ ಮಲಗಿರ್ದು ॥ ೧೫ ॥

ಅಲ್ಲಿಂದ ನಂದೀಶನತಿ ಹರುಷದಿಂದ |
ಮೆಲ್ಲನೆ ಮಾಳೆದೇಶದಲ್ಲಿಗೈತಂದ ॥ ೧೬ ॥

ಮನಸಿಜಾರಿಯ ಭಕ್ತ ಮಹಿಮ ವಿರಕ್ತ |
ಅನಿಮಿಷನು ಭವನಾಶ ಅಧಿಕಮಾಹೇಶ ॥ ೧೭ ॥

ಅಲ್ಲಮ ಪ್ರಭು ಪ್ರಾಣ ಅತಿ ಸುಪ್ರವೀಣ |
ಉಲ್ಲಾಸದಿಂಸ್ವಾರಿ ಅಲ್ಲಾಡುತಿರ್ದ ॥ ೧೮ ॥

ವಚನ ॥ ಆ ಅರಣ್ಯದಲ್ಲಿ ಅನಿಮಿಷಯ್ಯಗಳೆಂಬ ಅರಸು ಸ್ವಾರಿಮಾರ್ಗವಾಗಿ ಬರಲು, ಇವನ ಹೊಂದಿದ್ದ ಅಶ್ವವು ಸಚಿವಾಪ್ತಸೇನಾ ಪರಿವಾರವಂ ಬಿಟ್ಟು, ಹೇರಡವಿಯ ಕಡೆಗೆ ಓಡುತ್ತಾ ಬಂದು, ಆ ಕುದುರೆಯು ಬಯಲಾಗಲು, ಅನಿಮಿಷರಾಜನು

---

* ಈ ಅರ್ಧರ್ಧ ಪದ್ಯಗಳು (ಅ, ಒ, ಟ, ತ, ಬ. ) ಪ್ರತಿಗಳಲ್ಲಿಲ್ಲ.



**ಶಿವನ ಓಲಗದಿಂದ ನಂದಿಯು ಧರೆ ನೋಡಲು ಇಚ್ಛಿಸಿ**
**ಶಿವನ ಆಶೀರ್ವಾದದಿಂ ಹೊರಡುವಿಕೆ**
**(ದ್ವಿ. ಪದ್ಯ ೧ – ೨)**



ಶ್ರೀ ನಂದಿಯು ಭೂ ಶೈಲದಲ್ಲಿ ಅನಿಮಿಷರಾಜನಿಗೆ
ಲಿಂಗಕೊಡುವಿಕೆ (ಪ. ಪದ್ಯ ೯ – ೧೧)



ಶ್ರೀ ನಂದಿಯು ಕೈಲಾಸಕ್ಕೆ ಬರಲು ದ್ವಾರಪಾಲಕರು
ತಡೆದು ಪ್ರಶ್ನೆಮಾಡುವಿಕೆ (ಪ. ೧೩ – ೧೪)

ಹುಡುಕಿ ಬೇಸತ್ತು ಚಿಂತಿಸಿ, ಶಿವಲಿಂಗಾರ್ಚನಾ ತತ್ಪರನಾದ ತನಗೆ ತೃಷೆವೆಗ್ಗಳಿಸಿತು ! ತನ್ನ ಶಿವಲಿಂಗವಾದರೋ! ಸೇನಾಪರಿವಾರದಲ್ಲಿಯೇ ಉಳಿಯಿತು. ಇನ್ನೇನು ಗತಿಯೆಂದು ಬಳಲಿ ಹಸಿದು, ಲಿಂಗಪೂಜೆಯಿಲ್ಲದೆ ಉಣ್ಣ ಬಾರದೆಂದು, ಲಿಂಗವನರಸುತ್ತಾ ಬರಲಾಗಿ, ನಂದೀಶ್ವರಂ ಕಂಡು ಏನೆನ್ನುತಿರ್ದನು.

**ಏಕತಾಳ.**

ಗಿರಿತರು ಶರಧಿಯನು । ಕೊಳಗಿಡ ಲತೆಗಳನು ।
ಇರದೆ ತಿರುಗಿ ಹಸಿದು । ಕರಬಳಲಿದನು ॥ ೧ ॥

ಸಂಗಮೇಶನ ಭಕ್ತ । ಸರಸಗುಣ ವಿರಕ್ತ
ಲಿಂಗವನು ಪೂಜಿಸದೆ । ಅಂಬುವನು ಕೊಳ್ಳ ॥ ೨ ॥

[1] ಹೇ [1] ರಡವಿಯೊಳಲ್ಲಿ । ಮಾರಾರಿಯರಸುತ್ತ ।
ಸಾರಿಬರಲಿಕೆ ನಂದಿ । ಭೋರನೆಯೆ ಕಂಡ ॥ ೩ ॥

ರೂಢಿಯೊಳೀಶನ । ನೋಡುವಾರಾಯನನು ।
ನೋಡುವದೇನೆಂದು । ಕೂ [2] ಡೆ [2] ಕೇಳಿದನು ॥ ೪ ॥

ಶ್ವೇತಗಿರಿಯ ರೂಪ । ನಾಂತು ರಂಜಿಸುತಿಹ ।
ನೂತನದ ಗೂಳಿಯನು । ತಾ ತಿಳಿಯನೋಡಿ ॥ ೫ ॥

ಮಾತನಾಡುವದೇನು । ವಿಚಿತ್ರವೆನುತಲಿ ।
ಭೂತಳಾಧಿಪ ಚೋದ್ಯ । ಬಟ್ಟು ಇಂತೆಂದ ॥ ೬ ॥

ಹಸಿದೆನಾದರೆ ಸ್ವಾಮಿ । ಪಶುಪತಿಯ ಕಾಣದಲೆ ।
ಹಸಗೆಟ್ಟು ಈ ಘೋರ । ವಿಷಮದಡವಿಯೊಳು ॥ ೭ ॥

ಲಿಂಗವನು ಕಾಣದೆ । ಕಂಗೆಟ್ಟೆನಯ್ಯ ಸ್ವಾಮಿ
ಲಿಂಗವ ಕಂಡಲ್ಲದೆ । ಹಿಂಗದೆನ್ನಸಿವು ॥ ೮ ॥

ಎಂದ ಮಾತಿಗೆ ಪ್ರಾಣ । ಲಿಂಗವನು ನಂದೀಶ ।
ಅಂದನಿಮಿಷನಿಗೆ । ಕುಂತು ತೋರಿದನು ॥ ೯ ॥

ನೋಡಿದನು ಲಿಂಗವ । ನೋಟಕಚ್ಚರಿಯಾಗಿ
ಕೂಡೆ ಪಿಡಿದು ಲಿಂಗ । ಗೂಡಿ ಧರೆಗಿಳಿದ ॥ ೧೦ ॥

ಲಿಂಗ ಹೋಗಲು ಬೆದರಿ । ಕಂಗೆಟ್ಟು ನಂದೀಶ ।
ಅಂಗಜಾರಿಯ ಪುರಿಗೆ । ಹಿಂಗದಲೆ ಪೋದ ॥ ೧೧ ॥

---

1-1 ಘೋ (ಅ, ಉ, ಜ, ಡ, ತ, ಬ.) 2-2 ಗಿ (ಎ, ಗ, ಚ.) *ಈ ಪದ್ಯಗಳು (ಇ, ದ.) ಪ್ರತಿಗಳಲ್ಲಿ ಮಾತ್ರವಿವೆ.

ತ್ವರ್ಯದಿಂ ಕೈಲಾಸ । ದ್ವಾರವನು ಪೊಗಲಾಗ ।
ಸಾರೆಂದು ತಡೆದ [1] ನು [1] । ದ್ವಾರಪಾಲಕ [2] ನು [2] ॥ ೧೨ ॥

ಲಿಂಗವಿಲ್ಲದ ಭವಿ । ಇಂಗಿತವನರಿಯದೆ ।
ಹೆಂಗೆ ಹೊಗುವೆ ನೀನು । ಹಿಂಗಿರು ಕಡೆಗೆ ॥ ೧೩ ॥

ಇಂತೆಂದು ತಡೆಯಲು । ಕಂತುಹರ ನಂದೀಶ ।
ನಿಂತನಾ ಶಿವನಾಜ್ಞೆ । ಶಕ್ತಿಯನು ವಹಿಸಿ * ॥ ೧೪ ॥

ವಚನ॥ ದ್ವಾರಪಾಲಕನು ಎಂದ ಮಾತಂ ಕೇಳಿ ನಂದೀಶ್ವರನು ನಿಂದಿರಲು, ಈ ವೃತ್ತಾಂತವಂ ಮಹಾದೇವ ತಿಳಿದು, ಆ ದ್ವಾರದ ಬಳಿಗೆ ಬಂದು ದ್ವಾರಪಾಲಕನ ಮುಖವಂ ನೋಡಿ, ಈಶ್ವರನೇನೆನ್ನುತಿರ್ದನು.

**ಜಂಪೆ.**

ಪರಶಿವನು ಬಸವಂಗೆ । ಶರಿರವೆಲ್ಲವು ಲಿಂಗ ।
ಅರಿಯದಲೆ ಭವಿಯೆಂದು । ಜರಿದು ನಿಂದಿಪರೆ ॥ ೧ ॥
ಶಿವಮೂರ್ತಿ ನಂದಿಯನು । ಭವಿಯೆಂದು ನುಡಿದುದಕೆ ।
ಭುವಿಯೊಳಗೆ ನೀ ಪೋಗಿ । ಭವಿಯಾಗಿ ಜನಿಸು
ಅಲ್ಲಿ ಚಾ [3] ಳೋಕ್ಯ [3] ರಾ । ಯನ ಗರ್ಭದಲಿ ಜನಿಸಿ ।
ಕಲ್ಯಾಣದರಸು ಬಿ । ಜ್ಜಳರಾಯನಾಗು ॥ ೩ ॥
ಎಂದಿಗೆನ್ನೆಯ ಶಾಪ । ಹಿಂಗುವುದು ಸದ್ಗುರುವೆ ।
ಬಂದು ನಿಮ್ಮೆಯ ಪಾದ । ಕ್ಕೆಂದು ಹೊಂದುವೆನು ॥ ४ ॥
ವೀರಮಡಿವಾಳ ಮೊ । ಲ್ಲೆಯಬೊಮ್ಮ ಜಗದೇವ
ಧೀರರಿವರಿಂದಳಿದು । [4] ಸೇ [4] ರು ನಮ್ಮವನು ॥ ೫ ॥
ಎಂದು ಪೇಳುತ ಈಶ । ನಂದಿಯನು ಮುಖನೋಡಿ ।
ಹಿಂದಿಟ್ಟು ಕರೆದೊ [5] ಯ್ದು [5] । ಮಂದಿರಕೆ ಬೇಗ ॥ ೬ ॥
ಪರಶಿವನು ನಂದಿಯನು । ಕರದೊಯ್ದು ಶಿರದಡಹಿ ।
ಇರು ಸತತ ಪ್ರಮಥರಿಗೆ ದೊರೆಯಾಗಿ ನೀನು ॥ ೭ ॥
ಎಂದು ನಂದಿಯ ಪ್ರಮಥ । ವೃಂದ [6] ಮಧ್ಯ [6] ದೊಳಿರಿಸಿ ।
ಚಂದದಿಂ ಶಿವನಿರ್ದ । ನಂದು ಓಲಗದಿ ॥ ೮ ॥

---

1-1 ರು (ಗ, ಜ, ಟ.) 2-2 ರು (ಇ, ಒ, ಖ, ಗ, ಚ, ಜ, ಟ, ತ.) * ಈ ಪದ್ಯ (ಇ, ದ.) ಪ್ರತಿಗಳಲ್ಲಿ ಮಾತ್ರವಿದೆ. 3-3 ಳಾಂಕ (ಅ, ಖ, ಚ, ಟ, ದ, ಬ.) ; ಳುಕ್ಯ ಎಂದು ತಿಳಿಯಬರುತ್ತೆ. 4-4 ಸಾ (ಎ, ಖ, ಗ, ಚ,) 5-5 ಯ್ದು (ಒ, ಖ, ಗ, ಚ, ಡ, ತ ಬ,.) 6-6 ಗಣ (ಒ, ಡ, ತ, ದ, ಬ.)

ಹರನ ಓಲಗದಲ್ಲಿ | ವರ [1] ಕಥಾ [1] ಸುದ್ದಿಗಳ |
ಪರಿಕಿಪಡೆ ಶೇಷನಿಗೆ | ವಿರಚಿಸುವಡರಿದು || ೯ ||

ವಚನ || ಹರನ ಓಲಗದಲ್ಲಿ ನಡೆದ ಕಥಾ [2] ವೃತ್ತಾಂತ [2] ಅನೇಕವುಂಟು ಅದೆಂತೆಂದೊಡೆ.

**ದ್ವಿಪದಿ.**

ಹರಿಯಜೇಂದ್ರರು ಹೋರಿ ಶರೀರಗಳ ನುಂಗಿ |
ಸರಸಿಜನ ಆಸನದಿ ಹೊರವಂಟ ಕಥೆ [3] ಯು [3] || ೧ ||
ಧರೆಯ ಮಿಾರಿದ ಜಲಂಧರನ ಶಿರವರಿದು |
ತರುಣಿ ವೃಂದೆಯ ವಿಷ್ಣು ನೆರೆದಂಥ ಕಥೆಯು || ೨ ||
ಧರೆಯು ಹದಿನಾಲ್ಕು ಲೋಕದ ವೈರಿ ವ್ಯಾಘ್ರ |
ಸುರ ಗಜಾಸುರ ತಾರಕನ ಕೊಂದಂಥ ಕಥೆಯು || ೩ ||
ಸುರಲೋಕ ವೈರಿ ಮಹಿಷಾಸುರನ ದೇವಿ |
ಭರದಿ ಸಂಹರಿಸಿ ನಿಜ ಪುರಕೈದ ಕಥೆಯು || ೪ ||
ಧರೆಯ ರಥವನು ಮಾಡಿ ದಾನವರ ಪುರವ |
ನುರುಹಿ ಕೆಡಿಸಿದ ಕಥೆಯು ಉರಿಲಿಂಗದಲ್ಲಿ || ೫ ||
ಹರಿಯಜೇಂದ್ರರು ದೇವ ಸುರಮುನಿಗಳೆಲ್ಲ |
ಹರನ ಪೂಜಿಸಿ ವರವ ಪಡೆದಂಥ ಕಥೆಯು || ೬ ||
ಹರಿ ಸಹಸ್ರಾಬ್ಜದಲಿ ಹರನಂಘ್ರಿಗೆರಗಿ |
ಕರದಿ ಶಂಖವು ಚಕ್ರ ಧರಿಸಿರ್ದ ಕಥೆಯು || ೭ ||
ಹತ್ತು ಭವಗಳ ಹರಿಯು ಎತ್ತಿದಾ ಕಥೆಯು |
ಮತ್ತೆ ತನ್ನೊಳು ಶಿವನು ಮಡಗಿದ ಕಥೆಯು || ೮ ||
ಸಾನಂದ ಮನಕೆ ಬಲು ಆನಂದ ಋಷಿಯು |
ತಾನು ಯಮ ಲೋಕಕ್ಕೈತಂದಂಥ ಕಥೆಯು || ೯ ||
ಪೌಲಸ್ತ್ಯ ಬ್ರಹ್ಮನ ಪಟ್ಟದ ಮಗನು |
ನೀಲಕಂಠನ ಅಗವನೆತ್ತಿದ ಕಥೆಯು || ೧೦ ||
ಇಂತಪ್ಪ ಪೂರ್ವವನು ವಿಸ್ತರಿಸಿ ಪೇಳುವರೆ ಅ |
ನಂತ ಧರೆಯೊಳಗುಂಟು ಅವನೆಲ್ಲ ತಿಳಿದು || ೧೧ ||
ಪೃಥ್ವಿಯಾಳಿದ ಪೂರ್ವ ಚಕ್ರವರ್ತಿಗಳು |
ಮತ್ತೆ ಷೋಡಶ ಮಹಾರಾಯರ ಕಥೆಯು || ೧೨ ||

---

1–1 ತರ್ಕ (,ಇ ಒ,ಟ, ಡ.) 2–2 ಕುಳುಪು (ಅ,ಟ, ಡ, ತ, ಬ.)
3–3 ಯ (ಎ, ಖ, ಟ, ತ.)

ಧರೆಯ ಯುಗಮೂರರಲಿ ಇದ್ದಾಳಿದಂಥ ।
ದೊರೆಗಳೆಲ್ಲರ ಮಾತ ದೂರದಲಿ ನಿಲಿಸಿ ॥ ೧೩ ॥

ಅಷ್ಟದಶ ವರ್ಣಕ್ಕೆ ಶ್ರೇಷ್ಠವಾಗಿರ್ದ ।
ಸೃಷ್ಟಿಯೊಳಗುಳ್ಳ ಶಿವಾಚಾರ ಮಹಿಮೆಯನು ॥ ೧೪ ॥

ಕಲಿಯುಗದಿ ಕರಿಕಂಠ ಶಿವನನ್ನು ಒಲಿಸಿ ।
ಮಲಹರನ ಪುರಕ್ಕೈದಿದಾ ಮಹಿಮೆಯಂ ಪೇಳ್ವೆ ॥ ೧೫ ॥

ವಚನ ॥ಮುಂದೆ ಪರಶಿವನ ಓಲಗದಲ್ಲಾದಂಥ ವಿವರಮಂ ಪೇಳ್ವೆನದೆಂತೆನೆ.

**ಅಟತಾಳ.**

ಇಂದುಧರ ಪರಶಿವನ ಓಲಗ । ಚಂದದಿಂದಲಿ ಒಪ್ಪಿತು ।
ಚಂದ್ರ ಸೂರ್ಯ ಸುರಾಳಿ ಮುನಿಗಣ – ವೃಂದದೊಡನೆ ॥ ೧ ॥

ನಂದಿ ಭೃಂಗಿಯು ವೀರಭದ್ರನು । ಹೊಂದಿದಂತಹ ರುದ್ರರು ।
ಸಂದಣಿಯ ಸಡಗರದಲೊಪ್ಪಿದ – ನಿಂದುಧರನು ॥ ೨ ॥

ಎಡ ಬಲದಿ ಹರಿಯಜರ ಸಂದಣಿ । ಯೊಡನೆ ಈಶನ ಶಕ್ತಿಯು ।
ಎಡಬಿಡದೆ ದೇವಿಯರ ಒಂದಿನಲಿ – ಮೃಡನು ಒಪ್ಪಿರಲು ॥ ೩ ॥

ಬಂದನಾ ಸಮಯದಲಿ ನಾರದ । ಭಕ್ತಿಯಿಂದಲಿ ಈಶಗೆ ।
ವಂದಿಸುತ ಕರಮುಗಿದು ಪೇಳಿದ – ಬಂದ ಹದನ ॥ ೪ ॥

ಸ್ವಾಮಿ ನಾ ಭೂಲೋಕದೊಳಗಿಹ । ಭೂಮಿಯೆಲ್ಲಾ ತಿರುಗಿದೆ ।
ಕಾಮಹರ ನಿಮ್ಮ ಪಾದ ಭ[1] ಕ್ತಿಯ[1] – ಕಾಣಲಿಲ್ಲ ॥ ೫ ॥

ನಿಂದಕರು ನಿಜವರಿಯದಿಹ ಭವ । ಬಂಧ ಕರ್ಮದ ಜೀವರು ।
ಸಂದು ಹುಸಿಕರು ಸತ್ಯಹೀನರು – ಹಂದೆ ಜನರು ॥ ೬ ॥

ದೂಷಕರು ದುರ್ಬುದ್ಧಿ ಮನುಜರು । ಹೇಸಿಜನರಾ ಲೋಕದಿ ।
ಪಾಶಬದ್ಧರು ಪಶುವು ಪಾಮರ – ಪಾಪಿಜನರು ॥ ೭ ॥

ಭರತಖಂಡದೊಳೆಲ್ಲ ನಿಮ್ಮಯ । ಭಕ್ತಿಯುಳ್ಳ ಮನುಜ[2] ರ[2] ।
ಅರಸಿ ನೋಡಿದರೆಲ್ಲಿ ಕಾಣೆನು – ಕರುಣನಿಧಿಯೆ ॥ ೮ ॥

ಕುಟಿಲ ಕುಹಕ ಕುಬುದ್ಧಿ ಮನುಜರು । ಕೂಡಿ ಸತ್ಯರ ಹಿರಿಯರ ।
ಅಟಮಟದ ಸಟೆಗಳಲಿ[3] ಅವರನು[3] – ದಿಟಕೆ ತರರು ॥ ೯ ॥

---

1-1 ಕ್ತರ (ಗ, ಚ.) 2-2 ರು (ಗ, ಚ, ಟ, ತ, ಬ.) 3-3 ಸುಜನರ (ಖ.)

ಕಳ್ಳ ಕಪಟದ ಕರ್ಮಜೀವರು । ಒಳ್ಳೆರೆಂದೂ ಧರೆಯೊಳು ।
ಸುಳ್ಳುಮಾತಿಗೆ ನಂಬುವರು ಕುರಿ – ಪ್ರೊಳ್ಳು ನೃಪರು ॥ ೧೦ ॥
ಸತ್ಯ ಸಟೆಗಳನರಿಯದರಸರ । ಹತ್ತಿರೊಂದನು ಬೋಧಿಸಿ ।
ಹೊತ್ತುಗಳೆವರು ಒಡಲ ಹೊರೆವುತ – ಪೃಥ್ವಿಯೊಳಗೆ ॥ ೧೧ ॥
ಹಾದಿ ಮಾತನು ಹಲವು ಸಟೆಯನು । ಬೋಧಿಸುತಲಾ ನೃಪರನು ।
ಹಾದಿಗೆಡಿಸಿಯೆ ಕೆಡಹುವರು ಕರ್ಮದ – ಬಾಧೆಗವರ ॥ ೧೨ ॥
ದಾನ ಧರ್ಮದ ಹೊಲಬು ತಪ್ಪಿತು । ಧಾತ್ರಿಯೊಳಗೆ ನೋಡಲು ।
ಮಾನನಿಧಿ ಪರಮಾತ್ಮ ಸದ್ಗುರು – ನೀನೆ ಬಲ್ಲೆ ॥ ೧೩ ॥

ವಚನ ॥ ಇಂತೆಂದು ನಾರದ ಪೇಳಿದ ಮಾತಂ ಕೇಳಿ, ಮಹಾದೇವ ನಂದೀಶ್ವರನ ಮುಖಮಂ ನೋಡಿ, ದ್ವಿತೀಯಶಂಭುವೆ ಬಾರೆಂದು ಕರೆಯಲು, ಪ್ರಮಥರೆಲ್ಲರೂ "ಏಕೋ ದೇವಃ ಶಂಭುಃ" ಎಂದು ಸರ್ವರೂ ಪ್ರಾರ್ಥಿಸಿ, ಮುಕ್ತಿಯಂ ಪಡೆವರು, ಅದನುಳಿದು "ದ್ವಿತೀಯಶಂಭು" ಎಂಬ ನಾಮವೀತಗೇಕೆಂದು ಕೋಪಿಸಲು, ಇವನಿಗೆ ಸಲುವುದೊ ? ಸಲ್ಲದೋ ? ನೋಡಿಬನ್ನಿ ಎಂದು, ಎಲ್ಲರನ್ನು ಧರೆಗೆ ಕಳುಹಿಸಬೇಕೆಂಬ ಯೋಚನೆಯಿಂದ, ಮಹಾದೇವನೇನೆನ್ನುತಿರ್ದನು.

**ಜಂಪೆ.**

ಕೇಳು ಪಾರ್ವತಿ ನಿನ್ನ । ಚಲುವೆಸೆವ ವರ ಕಳೆಯ ।
ಲೀಲೆಯಿಂ ಕಳುಹು ಮಾ । ದಲಾಂಬೆಯ ಗರ್ಭದಲಿ ॥ ೧ ॥
ಷಡ್ಗಳನು ಧರೆಯೊಳಗೆ । ಸೊಗಸಿಂದಲುದಿಸಿ ಆ
ಪೊಡವಿ ದೂಷಕರ ಹೊಡೆ । ದೊಡನೆ ಕೆಡಹಲಿಕೆ ॥ ೨ ॥
ಅಕ್ಕನಾಗಲೆಯಾಗಿ । ಅವನಿಯೊಳು ಇರಲಲ್ಲಿ ।
ಗಕ್ಕನವಳಲಿ ಮೂಡಿಯಾ ।ಸ್ಕಂದನುದಯಿಸಲಿ ॥ ೩ ॥
ಈಶನಪ್ಪಣೆಯಿಂದ। ಈಶ್ವರಿಯ ವರ ಕಳೆಯು ।
ಶಾಶ್ವತದಿ ಮಾದಲಾಂಬೆ। ಸುತೆಯಾದಳಲ್ಲಿ ॥ ೪ ॥
ಬಾಗೆವಾಡಿಯು ಪುರವ । ಪಾಲಿಸುವ ಮಾದರಸ ।
ಭೋಗ ಭಾಗ್ಯದಿ ಸುಖದಿ । ಬಾಳುತಿರಲಂದು ॥ ೫ ॥
ಪುತ್ರಿಯನು ಪಡೆದು ಪೆಸ ।ರಿಟ್ಟು ನಾಗಲೆಯೆಂದು ।
ಧಾತ್ರಿಯೊಳು ನಾಲ್ಕಾರು । ವರುಷ ನಡೆಯಲಿಕೆ ॥ ೬ ॥
ಗಂಡುಮಗನನು ಬಯಸಿ । ಕಳವಳಂಗೊಳುತಲ್ಲಿ ।
ಮಂಡಲದಿ ಶ್ರೀ ನಂದಿ । ನೋಂಪಿಗೈಯ್ದಿಹರು ॥ ೭ ॥

* ಈ ಜಂಪೆಯ ಪದ್ಯಗಳು (ಉ, ಒ, ಗ, ಜ.) ಪ್ರತಿಗಳಲ್ಲಿ ಮಾತ್ರವಿವೆ.

**ಕೊಂಚೆ ಜಂಪೆ.**

ಸಂಭ್ರಮದಿ ಸಕಲ ಗಣರೊಳಗೆ– ದ್ವಿತಿಯ । ಶಂಭುವೆ ಬಾರೆನ್ನ ಬಳಿಗೆ ನಿ[1]ನ್ನ[1] ॥
ಬೆಂಬಿಡೆನು ನಾನೊಂದು ಗಳಿಗೆ– ನನ್ನ । ನಂಬಿ ಹೋಗುವದೀಗಲಿಳೆಗೆ ॥ ೧ ॥
ಧರೆಯ ದೂಷಕಜನರ ನೋಡಿ– ಅವರ । ಭರದಿ ಸಂಹರವ ನೀ ಮಾಡಿ ।
ಹರಭಕ್ತ ಶರಣರೊ[2] ಡಗೂ[2] ಡಿ– ನೀನು । ಇರು ರಸಾನ್ನವ ನೀ[3]ಡು[3] ಮಾಡಿ ॥
ನಿನ್ನ ತರುಬಿದ ದ್ವಾರಪಾಲಕನು– ಕಲ್ಯಾಣ । ದರಸಾದ ವೀರ ಬಿಜ್ಜಳನು ।
ತ್ವರಿತದಿಂದಲಿ ಪೋಗು ನೀನು– ಬಿಜ್ಜಳಗೆ । ವರಮಂತ್ರಿ ನಡೆಸು ರಾಜ್ಯವನು ॥
ಇದಕೊ ಹಿಡಿ ಪಂಚಪರುಷವನು– ನೀನು । ಸದಮಲ ಜ್ಞಾನ ಭಕ್ತಿಯಲಿ ।
ಎಂದು ನಂದಿಗೆ ಈಶ ಪೇಳೆ– ಪ್ರಮಥ । ವೃಂದವೆಲ್ಲವು ಕೋಪಿಸೇಳೆ * ॥ ೪ ॥
ಇಂದೇಕೆ ದ್ವಿತಿಂು ನಾಮವೀತನಿಗೆ– ಸ್ವಾಮಿ । ನಂದಿ [4] ಬಗೆಯನು [4] ಪೇಳಿ ನಮಗೆ ॥
ಸಲ್ಲದೋ ಸಲ್ಲುವದೆಂದೀಗ– ನೀವು । ಎಲ್ಲರೂ ಧರೆಗಿಳಿದು ಬೇಗ ॥ ೫ ॥
ಅಲ್ಲಿ ಬಸವನ ಭಕ್ತಿ ಈಗ– ನೀವು । ಎಲ್ಲ ಶೋಧಿಸಿ ನೋಡಿರಾಗ ।
ಇಲ್ಲಿ ಹೇಳುವುದೇನು ನಿಮಗೆ– ಪ್ರಮಥ । ರೆಲ್ಲ ಬೇಗದಿ ಹೋಗಿರಿಳೆಗೆ ॥ ೬ ॥
ಬಾರಯ್ಯ ಭಕ್ತ ಮಂದಾರ– ವೀರ । ಭೂರಿ ದೂಷಕರ ಸಂಹಾರ ।
ಮಾರಿದಾ ದಕ್ಷನನು ಕೊಂದು– ಹರುಷ । ವೇರಿ ನಾಟ್ಯವನಾಡಿ ಬಂದೆ ॥ ೭ ॥
ವೀರಗಾಸೆಯು ಸೋಂಕಲಂದು– ಕೋಪ । ವೇರಿ ಪ್ರಮಥಾಳಿ ಮನನೊಂದು ।
ಧಾರಿಣಿಗೆ ಪೋಗು ನೀನಿಂದು– ಅಲ್ಲಿ ವೀರ ಮಡಿವಾಳನಾಗೆಂದು ॥ ೮ ॥
ಬಸವಾದಿ ಪ್ರಮಥರೊಳು ಬಂದು– ಚೆಲ್ವ । ಎಸೆವ ಭಕ್ತಿಯ ತಾಳಿ ನಿಂದು ।
ಅಸಮ ಬಿಜ್ಜಳನ ನೀ ಕೊಂದು– ಬೇಗ । ಸಸಿನದಿಂ ಬಾ ಇಲ್ಲಿಗೆಂದು ॥ ೯ ॥
ಲಂಡನಾರದನೆ ಹೋಗೀಗ– ನೀನು । ಕೊಂಡೆಯಾ ಮಂಚನ್ನೆ ಬೇಗ ।
ದಂಡನಾಯಕನ ಕೀರ್ತೀ ಗ– ನೀನು । ಮಂಡಲದಿ ಮೆರೆಸು ಅತಿಬೇಗ ॥ ೧೦ ॥
ಮಂಡಿಗೆಯ ಮಾದರಸರರಸಿ – ತಾನು । ಮಾದಲಾಂಬಿಕೆ ಹರಷವೆರಸಿ ।
ಗಂಡುಮಗನನು ಬಯಸಿ ತಪವಾ– ಬಸವ । ನೋಂಪಿಯನು ಮಾಡುವರು ವ್ರತವ *॥ ೧೧ ॥
ವಸುಧೆಯೊಳು ದಂಪತಿಗಳೀಗ– ತಪಗೆಯ್ವ । ರವರಿಂಗೆ ಪುತ್ರನಾಗೆಂದು ।
ಪಶುಪತಿಯು ಪ್ರೀತಿಯಿಂ ಪೇಳೆ– ವೃಷಭ । ಹರುಷದಿಂ ಬಂದನಾಯತದಿ * ॥

1-1 ಮ್ಮ (ಜ,ಬ.) 2-2 ಳಗಾ (ತ.) 3-3 ಡಿ (ಅ, ಇ, ಎ, ಒ, ಗ, ಚ, ಜ, ಡ, ತ,ಬ.) * ಈ ಪದ್ಯಗಳು (ಅ, ಒ, ಖ, ಜ, ಟ, ಡ, ತ, ಬ.) ಪ್ರತಿಗಳಲ್ಲಿಲ್ಲ. 4-4 ಮಹಿಮೆಯ (ತ.)

ವಚನ || ಆ ವೇಳೆಯಲ್ಲಿ ಮಹಾದೇವನು ಗಂಗಾಭವಾನಿಯಂ ಕರೆದು, ನೀನು ಕಲ್ಯಾಣಕ್ಕೆ ಪೋಗಿ ಬಲದೇವ ಮಂತ್ರಿಗೆ ಸುತೆಯಾಗಿ ಪುಟ್ಟಿ, ಬಸವಂಗೆ ಸತಿಯಾಗೆಂದು ಪೇಳಲು, ಆ ಮಹಾಗಂಗೆ ಏನೆನ್ನುತಿರ್ದಳು.

**ತ್ಯಾಗವಾನ– ಅಟತಾಳ.**

ಸಕಲ ದೇವ ಸುರರ ಕರ್ತೃ ಎಲೆ ದೇ – ವ – ನೀನು–
ಅಖಿಳ ಬ್ರಹಾಂಡಗಳಿಗೊಡೆಯ ಎಲೆ ದೇ – ವ || ೧ ||
ಅಕಳಂಕ ನಿಮ್ಮರಸಿ ನಾನು ಎಲೆ ದೇ – ವ – ನಿಮಗೆ –
ಸುಖವೆ ನಾನೊಬ್ಬರ ಸತಿಯಾಗುವುದು ಎಲೆ ದೇ – ವ || ೨ ||
ಆದಿಮೂರ್ತಿ ಅಖಿಳಕೀರ್ತಿ ಎಲೆ ದೇ – ವ – ನೀನು –
ವೇದ ಪೌರಾಣಂಗಳೊಡೆಯ ಎಲೆ ದೇ – ವ || ೩ ||
ಆದೆ ನಿಮ್ಮ ಅರಸಿ ನಾನು ಎಲೆ ದೇ – ವ – ಬಿಟ್ಟು–
ಹೋದೆನೆಂತು ಮತ್ತೊಂದು ಕಡೆಗೆ ಎಲೆ ದೇ – ವ || ೪ ||
ನಿನ್ನ ಮೋಹದರಸಿಯಾಗಿ ಎಲೆ ದೇ – ವ – ಪರರಿ –
ಗಿನ್ನು ಸತಿ ನಾನಾಗಲಾರೆ ಎಲೆ ದೇ – ವ || ೫ ||
ನಿನ್ನ ಕರುಣ ತಪ್ಪಿತೇನೋ ಎಲೆ ದೇ – ವ – ಎನ್ನ–
ಅನ್ಯವಶವ ಮಾಡುತಿದ್ದಿ ಎಲೆ ದೇ – ವ || ೬ ||
ಕಂಜಮುಖಿ ಕಮಲಾಕ್ಷಿ ಕೇಳು ಎಲೆ ಗಂ – ಗೆ – ನೀನು –
ಅಂಜಬೇಡ ಮಾತ ಕೇಳು ಎಲೆ ಗಂ – ಗೆ || ೭ ||
ಮಂಜುಳಾಂಗ ಮಂತ್ರಜೀವ ಎಲೆ ಗಂ – ಗೆ – ಬಸವ –
ಸಂಜೀವ ಸಕಲ ವ್ಯಾಪಕನು ಎಲೆ ಗಂ – ಗೆ || ೮ ||
ಆದಿಯಲ್ಲಿ ಎನ್ನ ಕಳೆಯು ಎಲೆ ಗಂ – ಗೆ – ಕೇಳು ಶೀ–
ಲಾದ ಋಷಿಗೆ ಕಂದನಾದನೆಲೆ ಗಂ – ಗೆ || ೯ ||
ಭೇದವಿಲ್ಲ ಬಸವಾನೆನಗೆ ಎಲೆ ಗಂ – ಗೆ – ಬಸವ–
ನಾದಿಕಾಯನು ನಾನೆ ಪ್ರಾಣ ಎಲೆ ಗಂ – ಗೆ || ೧೦ ||
ಕಾಯವೆರಡು ಜೀವವೊಂದು ಎಲೆ ಗಂ – ಗೆ – ಸರ್ವೋ –
ಪಾಯದಲ್ಲಿ ಆಡುತಿಹೆವು ಎಲೆ ಗಂ – ಗೆ || ೧೧ ||
ನೋಯಬೇಡ ಧರೆಗೆ ಪೋಗು ಎಲೆ ಗಂ – ಗೆ – ನಿಮ್ಮ –
ಕಾಯದೊಳಗೆ ಆಡುತಿಹೆವು ಎಲೆ ಗಂ – ಗೆ || ೧೨ ||
ರೂಢಿಯೊಳಗೆ ಪ್ರಮಥಗಣಕೆ ಎಲೆ ಗಂ – ಗೆ – ನೀನು –
ನೀಡಿಮಾಡಿ ಸುಖದಲ್ಲಿರು ಎಲೆ ಗಂ – ಗೆ || ೧೩ ||
ಕೂಡೆ ಬಂದು ಸಕಲ ಗಣಕೆ ಎಲೆ ಗಂ – ಗೆ – ನೀವು –
ಬೇಡಿದಿಷ್ಟಾರ್ಥಂಗಳ ಕೊಡುವೆ ಎಲೆ ಗಂ – ಗೆ || ೧೪ ||

ವಚನ || ಇಂತು ಶ್ರೀ ಗಂಗೆಗೆ ಪೇಳಿ, ಒಡಂಬಡಿಸಿ ಮುದ್ದಿಸಿ ಬಳಿಕ ಜ್ಞಾನಶಕ್ತಿಯಂ ಕರೆದು ಏನೆನ್ನುತಿರ್ದನು

**ಏಕತಾಳ.** *

ಭ್ರಮರಕುಂತಳೆ ಶಕ್ತಿ | ಸುಮನಸ ಗುಣಯುತೆ |
ಅವನಿಗೈದುತೆ ನೀನು | ಒಂದು ಕಾರಣದಿ || ೧ ||

ಚಾ [1] ಳೋಕ್ಯ [1] ರಾಯನ | ಶಿಶುವಾಗಿ ನೀನಿರ್ದು |
ಭಾಳಾಕ್ಷ ಬಸವಂಗೆ | ಭಾರ್ಯೆ ನೀನಾಗು || ೨ ||

ಇಂದುಧರನಾ ಮಾತ | ನಂದು ಕೇಳುತ ಶಕ್ತಿ |
ಒಂದು ಪ್ರತಿ ನುಡಿಯದಲೆ | ಹಸಾದವಿಂತೆನಲು || ೩ ||

ಇಂತಿವರೆಲ್ಲರು ಕಂತುಹರ ನೇಮದಿ |
ಭೂತಳಕೆ ಇಳಿದರು | ಮಹಿಮೆ ಬೀರಲಿಕೆ || ೪ ||

**ಕಂದಪದ್ಯ.**

ಇದು ಶರಣರ ಲೀಲಾಮೃತ |
ವೊದಗಲು ಮುಂದಣ ಕಥನಕೆ ಸೂಚನೆಯುಸುರ್ದಿಂ ||
ಮದನ ಹರನಾಜ್ಞೆಯಿಂದೆಲ್ಲ |
ರೊದಗಿಯೆ ತಾವಿಳಿದಲ್ಲಿಗೆ ಸಂಧಿಗಳ್ನಾಲ್ಕುಂ || ೧ ||

ಇಂತಿ ಪದ್ಯಗಳು ೧೧೫

**ಅಂತು ಸಂಧಿ ೪ ಕ್ಕಂ ಸಂಪೂರ್ಣ ಗಣನೆ — ೧೨೯ ಕ್ಕಂ ಮಂಗಳ ಮಹಾ**

**ಶ್ರೀ ಶ್ರೀ ಶ್ರೀ ಶ್ರೀ ಶ್ರೀ**



* ಈ ಏಕತಾಳ ಪದ್ಯಗಳು (ಉ, ಗ, ಚ.) ಪ್ರತಿಗಳಲ್ಲಿ ಮಾತ್ರವಿದೆ. 1-1 ಳಾಂಕ (ಅ, ಖ, ಚ, ಟ, ಜ, ತ, ಬ.); ಳುಕ್ಯ ಎಂದು ತಿಳಿಯುತ್ತೆ.

# ಐದನೆಯ ಸಂಧಿ

# ಬಸವೇಶ್ವರನ ಜನನ ಮತ್ತು ಸಂಗಮೇಶ್ವರನ ಸನ್ನಿಧಿಗೆ ಅಕ್ಕನು ಬಸವೇಶ್ವರನು ಪೋದದ್ದು

---

**ಶಾರ್ದೂಲ ವಿಕ್ರೀಡಿತಾ ವೃತ್ತ.**

ಶ್ರೀಮನ್ನಾಥ ಮಹೇಶ ಸದ್ಗುರುವರಾ ಶ್ರೀ ಚಂದ್ರಚೂಡಾಂಕಿತಾ ।
ರಾಮಾದ್ಯರ್ಚಿತ ರಾಜಿತಾಂಘ್ರಿಯುಗಳಾ ನಿನ್ನಂ ಸದಾ ಪೂಜಿಪೆಂ ॥
ಕಾಮಾರೀ ಕನಕಾದ್ರಿವಾಸ ಪರಮೇಶಾ ನಿನ್ನ ಕಾರುಣ್ಯಮಂ ।
ಸ್ವಾಮಿ ಪಾಲಿಸಿ ರಕ್ಷಿಸೆನ್ನ ದೊರೆಯೇ ಶ್ರೀ ಚೆನ್ನಮಲ್ಲೇಶ್ವರಾ ॥ ೧ ॥

**ಕಂದಪದ್ಯ**

**ಸೂ ॥** ಮುಂದೆಯು ಬಸವಂ ಜನಿಸುತ ।
ತಂದೆಯು ತಾಯ್ವೇಳ್ದ ಮುಂಜಿಯನು ಜರಿಯುತ್ತಂ ॥
ಬಂದುರೆ ಕೂಡಲ ಸಂಗಮು ।
ಮಂದಿರದೋಳ್ ಸುಖದಿ ಭಕ್ತಿಯಿಂ ತಾನಿರ್ದಂ ॥ ೧ ॥

ವಚನ ॥ ಪಾರ್ವತಿಯ ವರ ಕಳೆಗೂ, ನಂದೀಶ್ವರ ವೀರಭದ್ರ ಷಣ್ಮುಖ ನಾರದರಿಗೂ, ಗಂಗಾಭವಾನಿ ಜ್ಞಾನಶಕ್ತಿಗೂ, ಅವನಿಯಲ್ಲುದಿಸಿರೆಂದಪ್ಪಣೆಯಿತ್ತು, ಮಹಾದೇವನು ಕಳುಹಲು, ಇತ್ತ ಬಾಗೆವಾಡಿ ಪುರದಲ್ಲಿ ಬಸವೇಶ್ವರನ ಬಾಲ ಲೀಲೆಯೆಂತೆನೆ.

**ತ್ರಿವುಡೆ.**

ಇಂದುಧರ ಇನಕೋಟಿ ತೇಜನು । ಎಂದ ಮಾತಿಗೆ ಸಕಲ ಪ್ರಮಥರು ।
ಚಂದಚಂದದಿ ಧರೆಗಿಳಿದರಾ – ನಂದದಿಂದ ॥ ೧ ॥

ಹರನ ಮಾತಿನ ಹರುಷದಿಂ ಕೆಲರ್ । ಧರೆಯ ಧರ್ಮವ ನೋಡುವರೆ ಕೆಲರ್ ।
ಭರದಿ ಬಸವನ ಭಕ್ತಿಯನು ಬಗೆ – ಗೊಂಬೆವೆಂದು ಕೆಲರ್ ॥ ೨ ॥

ತ್ವರಿತವಿಳಿದರು ಸಕಲ ಪ್ರಮಥರು । ಪರಿಪರಿಯ [1]ಮತಗಳ [1]ಲಿ ಉದಯಿಸಿ ।
ಹರನ ಲೀಲೆಯೊಳಾಡುತಿರ್ದರು – ಅವರು ಅವನಿಯಲಿ ॥ ೩ ॥

---

**1-1** ಪಯಣದ (ಅ, ಜ, ಟ,ಬ.)

ಮಂಡಿಗೆಯ ಮಾದರಸರರಸಿಯು । ಗಂಡು ಮಗನನು ಬಯಸಿ ಬಸವನು ।
ದ್ದಂಡ ನೋಂಪಿಯನೋಂತು ಚದುರೆ ಪ್ರ – ಚಂಡೆ ಧಾತ್ರಿಯೊಳು ॥ ೪ ॥

ಒಂದು ದಿನವತಿ ಭಕ್ತಿಯಿಂದಲಿ । ಮಂದಗಾಮಿನಿ ಬಸವನರ್ಚಿಸಿ ।
ನೊಂದು ದೈನ್ಯದಿ ಬೇಡಿ ಬಳಲಿದ – ಳಂದು ರಾತ್ರಿಯಲಿ ✝ ॥ ೫ ॥

ಶಶಿಮುಖಿಯು ವರ ಮಾದಲಾಂಬಿಕೆ । ನಿಶಿತ ರಾತ್ರಿಯ ನಿದ್ರೆ ಸ್ವಪ್ನದಿ ।
ಬಸವ ನಾ ನಿನ್ನ ಬಸುರೊಳಗೆ ಬಹೆ – ನೆಂದು ಪೇಳಿದನು ॥ ೬ ॥

ಮಾದಲಾಂಬಿಕೆ ಮನದ ಬಯಕೆಯ । ಭೇದವಿಲ್ಲದೆ ಬಲಿದು ಗರ್ಭವು ।
ಆದುದದು ನವ ಮಾಸ ಮೀರಿತು – ವರುಷ ಮೂರರೊಳು ॥ ೭ ॥

ನೆನೆದ ಬಯಕೆಯನೆಲ್ಲ ಸವಿಯುತ । ಮನದಿ ಬಸವಾ ಬಸವ ಎಂಬಳು ।
ಜನರು ಅಚ್ಚರಿಗೊಂಡು ಫಲವನು – ಶಕುನ ಆರಯ್ಯೆ ✝ ॥ ೮ ॥

ಮೂರು ವರುಷವು ಗರ್ಭ ಲೋಕದಿ । ನಾರಿಗುಂಟೇ ಎಂದುಪಚಾರ ।
ನೀರೆಯರುಗೈಯ್ದಿಹರು ಪರಿಪರಿ – ಹರುಷದಿಂದ ✝ ॥ ೯ ॥

ನಾರಿರುಪಚಾರದಲಿ ಮಾದಲೆ । ತೋರಿ ನಿದ್ರೆಯೊಳಿರಲು ಮಗ್ಗುಲೊಳ್ ॥
ಗಾರುಗಾರೆಂತೆಂಬ ಶಬ್ದವ – ತೋರಿಸಿದನು ✝ ॥ ೧೦ ।

ಪ್ರಸವ ವೇದನೆಯೇನು ತೋರದೆ । ಶಶಿಮುಖಿಯರು ಆರು ಅರಿಯದೆ ॥
ಶಿಶುವು ಮಗ್ಗುಲೊಳಿರಲು ಅಚ್ಚರಿ – ಎಸೆದುದಾಗ ✝ ॥ ೧೧ ॥

ಶುಭ ತಿಥಿಯು ಶುಭ ಲಗ್ನವಾರದಿ । ಶುಭ ಕರಣ ನಕ್ಷತ್ರ ಯೋಗದಿ ।
ಶುಭದಿ ಜನಿಸಲು ಅಭವನಾಕ್ಷಣ – ಬಂದ ಸಂಗಮನು ॥ ೧೨ ॥

ಪುರ ಹರನು ಶಿಶುವಿಂಗೆ ಭಸ್ಮವ । ಧರಿಸಿ ಮಂತ್ರವನರುಹಿ ಲಿಂಗವ ।
ಧರಿಸಿ ಹೃದಯದೊಳಿರಿಸಿ ಪೋದನು – ತನ್ನ ನಿಜ ತಲಕೆ ॥ ೧೩ ॥

ಅತ್ತ ಸಂಗಮ ಪೋಗೆ[1] ಶಿಶುವು ತಾ[1] । ನಿತ್ತಲಳುತಿರೆ ಮಾದಲಾಂಬಿಕೆ ॥
ಎತ್ತಿ ಕೊಂಡಗ್ಗಣಿಯನೆರೆಯುತ – ಮೊಲೆಯನೂಡಿದಳು ॥ ೧೪ ॥

ಪುತ್ರ ಜನಿಸಲು ಪಿತಗೆ ಸಂತಸ । ವೆತ್ತು ಭೂಸುರರಿಂಗೆ ಷೋಡಶ ।
ಯುಕ್ತದಿಂ ಮಹದಾನವಿತ್ತನು – ಅಧಿಕ ಉಲ್ಲಸದಿ ✝ ॥ ೧೫ ॥

ದೇವದುಂದುಭಿ ಮೊಳಗೆ ಮೇಘದಿ । ಹೂವಿನಾ ಮಳೆ ಸುರಿಯೆ ಪುರದೊಳು ।
ತೀವಿ ತುಂಬಿತು ಏನನೆಂಬೆನು – ಆ ಮಹೋತ್ಸವವ * ॥ ೧೬ ॥

---

✝ ಈ ಪದ್ಯಗಳು (ಅ, ಒ, ಚ, ಜ, ಬ.) ಪ್ರತಿಗಳಲ್ಲಿಲ್ಲ. 1-1 ಬಸವನು (ಅ, ಟ, ಬ.) * ಈ ಪದ್ಯ (ಉ, ಗ, ಟ, ತ.) ಪ್ರತಿಗಳಲ್ಲಿಲ್ಲ.



ಶ್ರೀ ಬಸವೇಶ್ವರನ ಜನನ ಮತ್ತು ಸಂಗಮೇಶನಿಂದ ಲಿಂಗದೀಕ್ಷೆ

ಮಂಡಿಗೆಯ ಮಾದರಸ ಮಗನನು । ಕಂಡು ಮನ ಮುಂಕೊಂಡು ಹರುಷದಿ ।
ಮಂಡಲೇಶ್ವರ ಮಾಡಿದನು ನಿಜ – ನಾಮಕರಣವನು ॥ ೧೭ ॥

ಬಸವಸರನೆಂದೆಂಬ ನಾಮುವ – ನೊಸೆದು ಕರೆವುತ ತಂದೆ ತಾಯ್ಗಳು ।
ವಸುಧೆಯೊಳು ಪಾಲಿರೆದು ಸಲಹುತ – ಲಿರ್ದರರ್ಥಿಯಲಿ ॥ ೧೮ ॥

ಬಸವರಾಜನು ಬಾಲ ಚಂದ್ರನು । ಒಸೆದು ಬೆಳೆವಂದದಲಿ ಧರೆಯೊಳು ।
ಶಿಶುಗಳೊಳು ಸುಳಿದಾಡಿ ಬೆಳೆವುತ – ಲಿರ್ದನರ್ಥಿಯಲಿ ॥ ೧೯ ॥

ಬಸವ ನೋಂಪಿಯ ವ್ರತವು ಫಲಿಸಿತು – ವಸುಧೆ ದೇವರಿಗೆಲ್ಲ ದೇವನು ।
ಶಿಶುವು ಪ್ರತ್ಯಕ್ಷದಲಿ ತೋರಿದ – ನೆಂದು ಪೊಗಳುತಿರೆ † ॥ ೨೦ ॥

ಮಾತ್ರುಪಿತ್ರುಗಳು ಸುತನ ಹರುಷದಿ । ಓತು ನೋಡುತ ಪೆಚ್ಚಿ ಮನದಲಿ ।
ಪ್ರೀತಿಯಲಿ ಬಾಲ್ದೊಡಿಗೆ ಇಟ್ಟರು – ರಮ್ಯತರಮಾಗಿ † ॥ ೨೧ ॥

ಕಮಲ ರವಿಯನು ಕಂಡು ನಗುವೋಲ್ – ಕುಮುದ ಶಶಿಯಂ ಕಂಡು ಪೆರ್ಚು
ವೋಲ್ ।
ಸುಮತಿ ಮಾದಲೆ ಶಿಶುವ ನೋಡಿಯೆ – ಹರುಷಗೊಂಡಿಹಳು † ॥ ೨೨ ॥

ಬಂಧು ವರ್ಗಕೆ ಸಕ್ರೆ ವೀಳ್ಯವ । ಮಂದಿರಂಗಳ ನೋಡಿ ಈಯುತ ।
ಅಂದು ಜಾತಕ ಫಲವ ಜೋಯಿಸ – ರಿಂದರಿಯೆ ಕೇಳಿ † ॥ ೨೩ ॥

ಪರಶಿವನ ಕರುಣದಲಿ ಉದಿಸಿಹ । ಶರಣ ಜನ ಮಹಿಮಾಬ್ಧಿ ಚಂದ್ರನು ।
ಧರೆಗೆ ಅಚ್ಚರಿ ಮಹಿಮೆ ಮೆರೆವಾ – ಪರಿಯ ಪೇಳ್ದರ್ † ॥ ೨೪ ॥

ವಚನ ॥ ಇಂತೀ ಬಸವೇಶ್ವರನುದ್ಭವಿಸಲು, ಸ್ತ್ರೀಯರು ರನ್ನದ ತೊಟ್ಟಿಲೊಳಿಟ್ಟು, ಜೋಗುಳವಂ ಪಾಡುತಿರ್ದರದೆಂತೆನೆ.

**ಜೋಗುಳಪದ.**

ಜೋ ಜೋ ಈಶ ಜ್ಯೋತಿ ಪ್ರಕಾಶ ।
ಜೋ ಜೋ ಭಕ್ತರ ಹೃದಯ ನಿವಾಸ ॥ ಜೋ ಜೋ ॥ ॥ ಪ ॥

ರನ್ನದ ತೊಟ್ಟಿಲಿಗೆ ಚಿನ್ನದ ಸರಪಣಿಯ ।
ಚೆನ್ನೆಯರು ಬಂಧುರದಿಂದೆಲ್ಲ ಬಿಗಿದು ।
ರನ್ನದ ಪಟ್ಟಾವಳಿಗಳ ಹಾಸಿ ಮೂರು ।
ಕಣ್ಣಿನ ಶಿವ ಶಿಶುವೆಂದು ಪಾಡಿದರು ॥ ॥ ಜೋ ಜೋ ॥ ॥ ೧ ॥

---

† ಈ ಪದ್ಯಗಳು (ಅ, ಜ, ಟ, ಡ, ತ, ಬ.) ಪ್ರತಿಗಳಲ್ಲಿಲ್ಲ. ಈ ಜೋಗುಳಪದ (ಅ. ಉ, ಎ, ಗ, ಚ, ಜ, ಟ,ಬ.) ಪ್ರತಿಗಳಲ್ಲಿಲ್ಲ.

ಕನ್ನೆಚೆನ್ನೆರು ವೃದ್ಧೆ ಮುತ್ತೈದೆಯರು ।
ಸನ್ನುತ ಸೌಖ್ಯದಿಂದಾಭರಣವಿಟ್ಟು ।
ಬಿನ್ನಣದಿ ಬೆಡಗಿಯರು ಬಿಂಕದಿಂ ಪಿಡಿದು ।
ಪನ್ನಗಧರ ಶಿಶುವ ಪಾಡಿ ತೂಗಿದರು ॥ ॥ ಜೋ ಜೋ ॥ ॥ ೨ ॥
ಬಟ್ಟ ಕುಚ ಬಡ ನಡುವು ಬಳಕುತ್ತಲಾಗ ।
ಇಟ್ಟು ಅಡಿಗಳ ಹಸ್ತವೆತ್ತಿ ಸರಪಣಿಯ ॥
ಕಟ್ಟಾಣಿವೆಣ್ಣುಗಳು ತೊಟ್ಟಿಲಡಿ ಪಿಡಿದು ।
ನಿಟಲಾಕ್ಷ ಶಿವ ಶಿಶುವ ತೂಗಿದರಾಗ ॥ ॥ ಜೋ ಜೋ ॥ ॥ ೩ ॥
ಸಾದಲಾಂಬೆಯ ಮನದ ಹರುಷಾಬ್ಧಿ ಚಂದ್ರ ।
ಮಾದರಸನ ವಂಶ ಉದ್ಧಾರ ಸಾಂದ್ರ ॥
ಮೇದಿನಿಗೆ ದರ್ಪಣದಂತೆ ವೃಷಭೇಂದ್ರ ಜಗ ।
ವಾದರಿಪ ಭಕ್ತವತ್ಸಲ ಮೋಕ್ಷಸಾಂದ್ರ ॥ ಜೋ ಜೋ ॥ ॥ ೪ ॥
ನಂದೀಶನ ವ್ರತ ವರದ ಕಂದನೆ ಜೋ ಜೋ ।
ಕಂದರ್ಪ ಸಮರೂಪ ಕರ್ಮಹರ ಜೋ ಜೋ ॥
ಇಂದು ಶೇಖರ ಮಂತ್ರ ಬೀಜನೆ ಜೋ ಜೋ ।
ಚಂದದಿಂದೀ ಜನನಿ ಇಷ್ಟದಾಯಕನೆ ಜೋ ಜೋ ॥ ಜೋ ಜೋ ॥ ॥ ೫ ॥

ವಚನ ॥ ಇಂತೆಂದು ಜೋಗುಳವಂ ಪಾಡಿ, ಬಾಲದೊಡಿಗೆಗಳಿಟ್ಟು, ಬಸವರಸನಂ ಸಲಹುತಿರ್ದರದೆಂತೆನೆ.

**ಏಕತಾಳ-ಅರ್ಧರೇಕು. ***

ಕಟ್ಟಾಣಿ ಶಿಶುವಿಗೆ – ದೃಷ್ಟಿ ದಂಡೆಯನು ।
ಕಟ್ಟಿದರು ಆಗ ಕಾಲ್ಗೆ – ಕಮಲ ಮುಖಿಯರು ॥ ೧ ॥
ಕಂಠಸರವು ಘನ – ಒಂಟಿ ಚವುಕುಳಿಯು ।
ನಿಟ್ಟಸೆ ಭಾನು ತೇಜ – ದಂತೆ ರಂಜಿಸಲು ॥ ೨ ॥
ಅರಳೆಲೆ ಮಾಗಾಯಿ – ಬೆರಳ ಉಂಗುರವು ।
ಕಾಲ ಅಂದಿಗೆ ಗೆಜ್ಜೆ – ಗಗ್ರಿ ಕಾಲ್ಕಡಗ ॥ ೩ ॥
ಶಿರಕೆ ರನ್ನದ ಟೋಪಿ – ಶೃಂಗಾರವಾಗಿ ।
ಕಾಪಾಲಿ ಬಸವನು – ಕಣ್ಗೆ ರಂಜಿಸುವ ॥ ೪ ॥
ಅಂಬೆಗಾಲಿಟ್ಟು ತೊದಲ್ – ನುಡಿಯ ಬೀರುವನು ।
ಸಂಭ್ರಮಗೊಳಿಸುವ – ಜನನಿ ಜನಕರನು ॥ ೫ ॥

* ಈ ಏಕತಾಳ-ಅರ್ಧರೇಕು (ಅ, ಉ, ಎ, ಗ, ಚ, ಜ, ಟ, ಬ.) ಪ್ರತಿಗಳಲ್ಲಿಲ್ಲ.

ಉಂಬುತ್ತ ಉಡುತಲಿ – ಬೆಂಬತ್ತಿ ಬರುತ |
ಬೇಡುವನು ಒಂದೊಂದ – ಬಸವ ಜನನಿಯನು || ೬ ||

ಕಾಡುವನು ಕೊಡದಿರೆ – ಗಾರು ಮಾಡುವನು |
ರೂಢಿಗೆ ಆಶ್ಚರ್ಯ – ಆಡಿ ತೋರುವನು || ೭ ||

ಶಶಿ ಕಳೆ ದಿನ ದಿನಕೆ – ಬೆಳೆವಂತೆ ಬಸವ |
ಶಶಿ ಜೂಟನೊಲುಮೆಯಿಂ – ಬೆಳೆದನರ್ಥಿಯಲಿ || ೮ ||

ವಚನ || ಬಸವೇಶ್ವರದೇವರಿಗೆ ಐದು ವರುಷವಾಗಲಿಕ್ಕೆ, ವಿದ್ಯಾಮಠಕ್ಕೆ ಕಳುಹಿದರದೆಂತೆನೆ.

## ಬಸವರಸನ ವಿದ್ಯಾಭ್ಯಾಸ ಮತ್ತು ಬೆನಕನಿಗೆ ಪ್ರಾಣವಿತ್ತ ಪವಾಡ.

**ಜಂಪೆ.**

ವೇದ ಮಂತ್ರಕೆ ಮೊದಲು | ಆದಿ ಪಂಚಾಕ್ಷರಿಯ |
ಓದಿದನು ಬಸವಣ್ಣ | ಮೇದಿನಿಯ ಮೇಲೆ || ೧ ||

ದಿನ ದಿನಕೆ ವಿದ್ಯೆಯನು | ಘನವಾಗಿ ರೂಢಿಸಲು |
ಮನಕೆ ಅಚ್ಚರಿಗೊಂಡು | ಜನರು ಕೊಂಡಾಡೆ || ೨ ||

ಕಡೆಯಿಲ್ಲದಿಹ ಶಾಸ್ತ್ರ | ಒಡಲೊಳಗೆ ತುಂಬಿಹಗೆ |
ನುಡಿದು ವಿದ್ಯೆಯ ಕಲಿಸಿ | ಕೊಡುವರಿನ್ನಾರು || ೩ ||

ಇರುವಂತಿ ಮೊಲ್ಲೆ ಮ | ಲ್ಲಿಗೆ ಜಾಜಿ ಸಂಪಿಗೆಗೆ
ತಿರುಗಿ ಪರಿಮಳಗಳನು | ತುಂಬಿದವರುಂಟೆ || ೪ ||

ಪರಶಿವನ ಕಳೆಯು ತಾ | ಧರೆಗಿಳಿದು ಬಂದಿರಲು
ಒರೆದು ಪೇಳ್ವರೆ ವಿದ್ಯೆ | ಧರೆಯ ಮಾನವರು || ೫ ||

ಬಸವನೋದುವ ವ್ಯಕ್ತ | ಕುಶಲ ಶಬ್ದಾದಿಗಳ |
ವಸುಧೆ ಮಾನವರಿಂಗೆ | ವಶವೆ ಎಲ್ಲರಿಗು * || ೬ ||

ಷಡಷಕಾರಗಳಷ್ಟು | ನುಡಿವ ವ್ಯಕ್ತದ ಚಲ್ವ
ಪಡಿ ಪ್ರಾಸ ಲಕ್ಷಣವ ಉ | ಪಾಧ್ಯ ಮೆಚ್ಚಿದನು § || ೭ ||

* ಈ ಪದ್ಯ (ಅ, ಇ, ಎ, ಒ, ಜ, ಟ, ಡ, ತ, ದ, ಬ.) ಪ್ರತ್ರಿಗಳಲ್ಲಿಲ್ಲ § ಈ ಪದ್ಯ (ಆ, ಗ, ಚ, ಜ, ತ, ಬ.) ಪ್ರತಿಗಳಲ್ಲಿಲ್ಲ.

ವಿದ್ಯಾಗುರು ತಾ ಮೆಚ್ಚಿ । ಮುದ್ದಿಸುತ ಮನ ಮೆಚ್ಚಿ
ಸದ್ಯ ಕೇಳುತ ಬಂದ । ವಿದ್ಯೆಯೆಲ್ಲವನು || ೮ ||

ಮೆಚ್ಚಿ ಓದಿಸುವಯ್ಯ । ಅಚ್ಚ ಶಬ್ದ ಸುವಾಕ್ಯ ।
ಹೆಚ್ಚುಗಾಣಿಸಿ ತಾನು । ಮಾದರಸಗರುಹಿ * || ೯ ||

ಘನ ತ್ಯಾಗದುಡುಗೊರೆಯ । ತನಗೆ ಕೊಂಬೆನು ಎಂದು
ಮನದಿ ಯೋಚಿಸಿ ಬಂದು । ಮಾದರಸನೆಡೆಗೆ * || ೧೦ ||

ಕೇಳಯ್ಯ ಮಾದರಸ । ಬಾಲ ಚಂದಿರ ಬಸವ
ಲೀಲೆಯಿಂದಲಿ ಕಲಿತ । ಬಹಳ ವಿದ್ಯೆಗಳ * || ೧೧ ||

ನಿನ್ನ ಕರುಣವ ಪಡೆವೆ । ನೆಂದು ಅರುಹಿದೆ ವಿದ್ಯೆ
ಚೆನ್ನಾಗಿ ಲಾಲಿಪುದು । ಷಡಷಕಾರಗಳ * || ೧೨ ||

ಮತ್ತು ಸಂತೋಷ ನಮಗೆ । ಅತ್ಯಂತ ಉತ್ಸಹವು ।
ಅರ್ಥಿಯೊಳು ನುಡಿಸೆನಲು । ಆಗ ಬಸವನನು * || ೧೩ ||

ಪಿತನ ಸಮುಖದಿ ನಿಲಿಸಿ । ಮತಿ ಯುಕ್ತ ವಿದ್ಯೆಯನು ।
ಹಿತದಿ ಪೇಳೆನಲಾಗ । ಸುತ ಬಸವ ಪೇಳ್ದ * || ೧೪ ||

ಕಡುವೇಗ ಮಾದರಸ । ರೊಡನೆ ಪೇಳೆನಲಾಗ ।
ಬಿಡದೆ ನುಡಿದನು ಬಸವ । ತಡ ಬಡೆಯನಾಗ || ೧೫ ||

ಕಡು ಜಾಣ ಸುತನೆಂದು । ನುಡಿದೆ ಇಲ್ಲದ ಮಾತ ।
ಒಡಲಾಸೆ ಮಾತೆಂದು । ನುಡಿದ ಮಾದರಸ || ೧೬ ||

ಪಿತನೊಡನೆ ವಿದ್ಯೆದು । ನ್ನತಿ ಪೇಳದವನೆಂದು ।
ಸುತನೊಡನೆ ವಿದ್ಯಗುರು । ಖತಿಯ ತಾಳಿದನು || ೧೭ ||

**ಕಂದಪದ್ಯ.**

ಓದುವ ಮಕ್ಕಳೊಳೋರ್ವಗೆ ।
ಓದಿಸುತಿಹ ಅಯ್ಯ ಸೇರದಿರ್ದಡೆ ಮತ್ತಂ ||
ಓದುತಿಹ ಮಕ್ಕಳೆಲ್ಲರು ।
ಸಾಧಿಸುತಾವೊಬ್ಬನೊಡನೆ ಹಗೆಯಾಗಿರ್ಪರ್ || ೧ ||

ವಚನ || ಈ ಬಸವರಸನು ತಂದೆ ತಾಯಿಗಳ ಮುಂದೆ, ಕಲಿತಂಥಾ ವಿದ್ಯೆಯ ಪೇಳದೆ ಹೋದನೆಂದು, ಆ ಓದಿಸುವ ಅಯ್ಯ ಸಿಟ್ಟಾಗಲು, ಈ ಬಸವರಸರ ಮೇಲೆ ಓದುವ ಮಕ್ಕಳೆಲ್ಲರೂ ಹಗೆಯಾಗಿರ್ದರದೆಂತೆನೆ.

* ಈ ಪದ್ಯಗಳು (ಅ, ಗ, ಚ, ಜ, ತ, ಬ.) ಪ್ರತಿಗಳಲ್ಲಿಲ್ಲ.

**ಏಕತಾಳ.**

ತನ್ನಿಂದ ಬರೆಯನಿವ । ಎ [1] ಮ್ಮ [1] ಮಾತನು ಕೇಳ ।
ಎನ್ನುತಯ್ಯಗೆ ಚಾಡಿ । ಯನ್ನು ಪೇಳುವರು ॥ ೧ ॥

ಗುಣಿತ ಗಣಿತ ಲೆಕ್ಕ । ಗ್ರಂಥ ಶಬ್ದಗಳನ್ನು ।
ಎಣಿಕೆಗೊಳ್ಳದೆ ತಾನು । ಏನಾದರು ಬರೆಯ * ॥ ೨ ॥

ಬರೆಯೆನಲ್ಬಸವನು । ಶಿರವೆತ್ತಿ ನೋಡುವ ನಮ್ಮ ।
ಒರೆದು ಹೇಳಲು ಕೇಳ । ಔಡನಗಿವುತಲಿ * ॥ ೩ ॥

ಇಂತೆಲ್ಲ ತರಳರು । ಅಯ್ಯಂಗೆ ಪೇಳಲಿಕೆ ।
ಮುಂತೆ ಕಠಿಣ ವಾಕ್ಯ । ನುಡಿವನುಪಾಧ್ಯ * ॥ ೪ ॥

ಇರಲೊಂದು ದಿವಸದಿ । ತರಳರೊಮ್ಮುಖವಾಗಿ ।
ತರುಬಿ ತೊಳೆವರೆ ಹಲಿಗೆ । ಹೊರಟರಾ ಕೊಳಕೆ * ॥ ೫ ॥

ಎಳೆ ಮಕ್ಕಳೆಲ್ಲರೂ । ತೊಳೆವರೆ ಹಲಗೆಯ ।
ಕೊಳನ ತೀರಕೆ ಬಂದು । ಕುಳಿತರು [2] ಬೇಗ [2] ॥ ೬ ॥

ಬಸವನವರ ಬಿಟ್ಟು । ಜೇರೊಂದು ದೆಸೆಯೊಳು ।
ಹಸನಾಗಿ ಹಲಗೆಯನು । ತೊಳೆಯುತ್ತಲಿರಲು * ॥ ೭ ॥

ಇಳಿದೆವೆನ್ನುತ ಪಾದ । ಹೊರಳಿ ಬೆನಕನೊಬ್ಬ ।
ಕೊಳ [3] ದೊ [3] ಳು ಮುಳುಗುತ । ಕಳೆದ ಹರಣವನು ॥ ೮ ॥

ಇಂದು ನೂಕಿದ ಬಸವ । ನೆಂದು ಚಿಕ್ಕವರವರ ।
ತಂದೆ ತಾಯಿಗೆ ಪೇಳೆ । ಬಂದರು ಅಳುತ ॥ ೯ ॥

ಒಂದು ಮಾದರಸನೊ । ಳೆಂದರು ನಿಮ್ಮೆಯ ।
ಕಂದ ನಮ್ಮಣುಗನ । ಕೊಂದ ಭಾವಿಯೊಳು ॥ ೧೦ ॥

ಬಾರಯ್ಯ ಬಸವರಸ । ಊರವರ ಹುಡುಗರ ।
ನೀರೊಳು ನೂಕಿ ಹೀಗೆ । ಗಾರು ಮಾಡುವರೆ ॥ ೧೧ ॥

ನಾನು ನೂಕಿದುದಿಲ್ಲ । ತಾ [4] ನೆ ಜಾರಿದನೆಂದು [4] ।
ನಾನು ನುಡಿಸುವೆನವನ । ಏನೆಂಬುವದನು ॥ ೧೨ ॥

---

1-1 ನ್ನ (ಇ, ಜ, ಟ.) * ಈ ಪದ್ಯಗಳು (ಅ, ಎ, ಜ, ಟ, ಬ.) ಪ್ರತಿಗಳಲ್ಲಿಲ್ಲ.
2-2 ಯಲ್ಲ (ಇ,) 3-3 ನೊ (ಒ, ಬ.) 4-4 ನು ಜಾರಿದನವನು (ಜ.)

ಎಲ್ಲರನೊಡಗೊಂಡು । ಬ[1] ಂದಲ್ಲಿ [1] ಬಸವರಸ ।
[2] ಅಲ್ಲಿ ಶಿಶು ಬಿದ್ದಿರುವ । ಜಲದಲ್ಲಿಗೆ ಬಂದ [2] ॥ ೧೩ ॥

ಬಾರಯ್ಯ ಬೆನಕ ನಿ । ನ್ನಾರು ನೂಕಿದರು ಈ ।
ನೀರೊಳೆನುತ ಕೇಳೆ । ಘೋರನೆಯೆ ಎದ್ದ ॥ ೧೪ ॥

ನನ್ನಾರು [3] ನೂಕ [3] ಲಿಲ್ಲ । ನನ್ನ ನಾ ಜಾರಿದೆ ।
ಎನ್ನುತಲಿ ಎಲ್ಲರೊಳು । ನನ್ನಿಯಿಂ ನುಡಿದ ॥ ೧೫ ॥

ನೆರೆದ ಜನರು ನೋಡಿ । ಕರ ಚೋದ್ಯವನೆ ಮಾಡಿ ।
ಎರಗಿ ಬಸವನ ಮೃದು । ಚರಣ ಕೊಂಡಾಡಿ ॥ ೧೬ ॥

ವಚನ ॥ ಆ ಶಿಶುವಿನ ಪ್ರಾಣ ಬಂದುದಂ ಕಂಡು, ಸಕಲ ಜನರು ಆಶ್ಚರ್ಯಮಂಬಟ್ಟು, ಆ ಬಸವರಸನ ಸ್ತುತಿಸಿ ಕೊಂಡಾಡಿ, ಕೀರ್ತಿಸಿ, ಆ ಶಿಶುವಿನ ತಂದೆ ತಾಯಿಗಳು ಬಸವರಾಜ ಮೊದಲಾದ ಮಾದರಸರ ಪಾದಕ್ಕೆರಗಿ, ಸಂತೋಷದಿಂ ಮನೆಗೆಯ್ದಲು, ಇತ್ತಲಾ ಬಸವರಸನು ಎಂದಿನಂತೆ ವಿದ್ಯಾಮಠದಲ್ಲಿ ಇರುತಿರ್ದನದೆಂತೆನೆ.

## ಹುಡುಗರು ಕೃತ್ರಿಮದಿಂದ ಮಲಗಿಸಿದ ಚಾಮನಿಗೆ ಪ್ರಾಣವಿತ್ತ ಪವಾಡ.

**ಏಕತಾಳ–ಅರ್ಧರೇಕು.**

ಇಂದು ಧರನ ರೂಪ – ನಂದಿಕೇಶ್ವರನು ।
ಚಂದದಿಂ ಶಿಶು ವೇಷ – ದಿಂದೋದುತಿರಲು ॥ ೧ ॥

ಕುಂದು ಹೆಚ್ಚನರಿಯದ – ಕುಹಕ ಸಣ್ಣವರು ।
ಒಂದೊಂದು ಕುಚಿತ್ತ – ವಂದು ಮಾಡುವರು ॥ ೨ ॥

ಮತ್ತೆ ಸಣ್ಣವರೆಲ್ಲ – ಮೊತ್ತದಿಂ ಕೂಡಿ ।
ಮತ್ತೊಬ್ಬ ಕುವರನ – ಸತ್ತಂತೆ ಮಾಡಿ ॥ ೩ ॥

ಮತ್ತೆ ಬಸವನೊಳು – ಮಾತಾಡಬೇಡ ।
ಅರ್ಥಿಯಿಂ ನಮ್ಮೊಳು – ಆಡು ನೀ ಮಾತ ॥ ೪ ॥

ಎಂದವನಿಗೆ ಪೇಳಿ – ವಾಸಿ ಮಲಗಿಸಲು ।
ಬಂದವರು ಬಸವಣ್ಣ – ನಿರುವಾ [4] ಸನ್ನಿಧಿಗೆ [4] ॥ ೫ ॥

1-1 ಲ್ಲೀಪ ( ಬ, ಜ, ಟ.) 2-2 ಸಿಲ್ಲದೈದಿಯೆ ಕೊಳ । ವಲ್ಲೀಗೆ ಬಂಮೂ । (ಬ.)
3-3 ದಬ್ಬ (ಜ, ಟ.) 4-4 ಸಮ್ಮುಖಕೆ (ಉ, ಗ, ಚ.)



**ಶ್ರೀ ಬಸವೇಶ್ವರನು ಕೊಳದೊಳು ಬಿದ್ದ ಬೆನಕನ ಮಾತನಾಡಿಸುವಿಕೆ**

(ಏ. ಪದ್ಯ, ೧೪.)

ಅಂದು ನೀರೊಳು ಸತ್ತ – ಬೆನಕನೆಬ್ಬಿಸಿದೆ ।
ಇಂದಿವನ ನೀ ನುಡಿ – ಸೆಂದು ಪೇಳಿದರು ॥ ೬ ॥

ಬಂದು ನೋಡಿದ ಬಸವ – ಬಾಲರಾ ಕುಹಕ ।
ಎಂದು ಸತ್ತನೊ ಇವನ – ದೆಂತು ನುಡಿಯುವನು ॥ ೭ ॥

ಇಂದೆನ್ನೊಳಾಗದದು – ಮುಂದೆ ನೀವು ನುಡಿಸಿ ।
ಎಂದರಾ ತರಳರು – ಎಲ್ಲರೊಂದಾಗಿ ॥ ೮ ॥

ನೋಡಯ್ಯ ಶವವನ್ನು – ಮಾತಾಡಿಸುವೆವು ।
ಬಂದು ಕರೆದರವನ – ಬಾಲರೆಲ್ಲಾಗ ॥ ೯ ॥

ಒಂದು ಮಾತನು ಆಡ – ಓ ಎಂದು ನುಡಿಯ ।
ಸಂದನಿನ್ನೇನೆಂದು – ನಿಂದರ್ಚಿಂತೆಯಲ್ಲಿ ॥ ೧೦ ॥

ಕೆಲವು ತರುಳರು ಓಡಿ – ಕೈ ಚಪ್ಪಾಳೆಯೊಳು ।
ಚಾಮನ ಮಾತೆ ಪಿತರ್ಗೆ – ನಿಲ್ಲದಲೆ ಪೇಳೆ ॥ ೧೧ ॥

ಬಂದರು ಅಳುತ್ತಲ್ಲಿ – ತಂದೆ ತಾಯಿಗಳು ।
ಸಂದ ಸುತನ ನೋಡಿ – ನಿಂದು ಶೋಕಿಸುತ ॥ ೧೨ ॥

ಈಕ್ಷಣ ಸುತನಿಗೆ – ಅಡರಿತೆ ಮರಣ ।
ಮಂದ ಮತಿ ತರಳರೀ – ಮಾಡಿದ ಕಾರ್ಯ ॥ ೧೩ ॥

ನಿಂದಿರ್ದ ಬಸವಂಗೆ – ವಂದಿಸುತ ಬೇಗ ।
ಕಂದನ ಪ್ರಾಣವನು – ಕಾಯ್ದು ಸಲಹಯ್ಯ ॥ ೧೪ ॥

ಎಂದು ಸೆರೆಗೊಡ್ಡಿ ಬೇಡಿ – ಎಲ್ಲರ ಮುಂದೆ ।
ತ್ರಾಹಿ ಬಸವರಾಜ – ತ್ರಾಹಿ ಮಾಂ ದೇವ ॥ ೧೫ ॥

ತ್ರಾಹಿ ಕರುಣಾಸಿಂಧು – ತ್ರಾಹಿ ದಮ್ಮಯ್ಯ ।
ಕಂದನ ಪ್ರಾಣವಂ – ಕರುಣಿಸೈ ಬಸವ ॥ ೧೬ ॥

ಸತಿಯಳಾ ದೈನ್ಯಕ್ಕೆ – ಸಾಕ್ಷಾತು ಬಸವ ।
ಏಳಯ್ಯ ಚಾಮ ನೀನು – ಎಂದವಾಕ್ಯಕ್ಕೆ ॥ ೧೭ ॥

ಸುತಗೆ ಪ್ರಾಣವನಿತ್ತು – ಕರೆದನೇನೆಂಬೆ ।
ಎದ್ದು ನಿಂದವನ ನೋಡಿ – ಎರಗಿದನು ಆಗ ॥ ೧೮ ॥

ನೆರೆದ ಜನರು ನೋಡಿ – ಕಡು ಚೋದ್ಯವಾಗಿ ।
ಸಾಕ್ಷಾತು ಪರಶಿವ – ಶಿಶುವಲ್ಲ ಇವರ್ಗೆ ॥ ೧೯ ॥

ಪೃಥ್ವಿಗೀತನೆ ಬ್ರಹ್ಮ – ನೆಂದು ಪೊಗಳಿದರು ।
ಮರಣ ವಿರಹಿತ ಬಸವ – ಮೆರದೀ ಪವಾಡ ॥ ೨೦ ॥

## ರಂಗಾಭಟ್ಟನೆಂಬ ಮೂಗನನ್ನು ಮಾತನಾಡಿಸಿದ ಪವಾಡ. *

ವಚನ ॥ ಇಂತೀಪರಿಯಲ್ಲಿ ಪವಾಡಮಂ ಮೆರೆಯೆ, ದಿಗ್ದೇಶವೆಲ್ಲಾ ಪ್ರಸಿದ್ಧಿಯಾಗಲು, ಆ ಕಲ್ಯಾಣ ಪುರದ ನಾರಾಯಣ ಭಟ್ಟನ ಮಗ ರಂಗಾಭಟ್ಟ ಮೂಗನಾಗಿರಲು, ಬಸವರಸನ ಮಹಿಮಾ ಪ್ರಭಾವವಂ ಕೇಳಿ, ತನ್ನ ಮಗನಂ ಕರೆತಂದು, ಬಸವರಸಂಗೆರಗಿಸಿ, ಕೈಗಟ್ಟಿ ನಿಂದು ಸ್ತುತಿಸಿದನದೆಂತೆನೆ.

**ಕಂದಪದ್ಯ.**

ಪಶು ಪತಿ ವಾಹನನೆ ಬಸವ ।
ಪೆಸರಿನ ಪರಮಾತ್ಮ ಧರ್ಮಸುಕೃತದ ಪುಂಜಾ ॥
ಪಸರಿಸಿ ನರ ರೂಪಾಗಿಯೆ ।
ವಸುಧೆಯ ಪಾವನವ ಗೈಯಲೈದಿದ ಮಹಿಮಾ ॥ ೧ ॥

ಶರಣಾರ್ಥಿ ನಿನ್ನ ಮೃದುತರ ।
ಚರಣಕ್ಕೆ ನಮೋ ನಮೋ ಎನ್ನಯ ಸುತನಂ ನೀಂ ॥
ಧರೆಮೆಚ್ಚೆ ವಾಕ್ಯವಾಡಿಸಿ ।
ಕರುಣಿಸಿ ಪೊರೆಯನ್ನಭೀಷ್ಟವನಿತ್ತು ಬೇಗಂ ॥ ೨ ॥

ವಚನ ॥ ಇಂತು ಸ್ತೋತ್ರಮಂ ಮಾಡಿದ, ನಾರಾಯಣಭಟ್ಟನ ಮಗ ರಂಗಾಭಟ್ಟ ಮೂಗನಂ ಮಾತನಾಡಿಸುತಿರ್ದನದೆಂತೆನೆ.

**ತ್ರಿವುಡೆ.**

ರಂಗ ಭಟ್ಟನೆ ಇವರೊಳ್ಮಾತಿನ । ಸಂಗ ಬಿಟ್ಟು ನೀನಿರ್ಪ ಕಾರಣ ।
ಇಂಗಿತವ ಪೇಳೆಂದು ಕೇಳ್ದನು – ಸಂಗನಾ ಬಸವ ॥ ೧ ॥

ದೇವ ಕೇಳೆನ್ನ ಪೂರ್ವ ಕರ್ಮವು । ಆವರಿಸಿ ನಾಲಿಗೆಯು ಮಾತಿಗೆ ।
ಠಾವು ಕೊಡದಿರೆ ನುಡಿಯಲಿಲ್ಲವು – ಇಂದಿನಾತನಕ ॥ ೨ ॥

ನಿಮ್ಮ ಜಿಹ್ವೆ ಪ್ರಸಾದ ವಾಕ್ಯವು – ಗಮ್ಮನೆನ್ನಂಗದಲಿ ಹರಿಯಲು ।
ನೆಮ್ಮಿ ನಿಲದಲೆ ಭವದ ಕಲುಷವು – ತೊಲಗಿತ್ತೈ ದೇವ ॥ ೩ ॥

ಶರಣು ಲೋಕಾಧಾರ ಮಹಿಮನೆ । ಶರಣುಪರುಷದ ಖಣಿ ಕುಲಾಗ್ರಣಿ ।
ಶರಣು ಭಕ್ತೋದ್ಧಾರ ಕಾಯ್ದೈ – ಶರಣು ಬಸವೇಶ ॥ ೪ ॥

---

* ಈ ಪವಾಡ (ಇ, ಡ, ತ, ದ.) ಪ್ರತಿಗಳಲ್ಲಿ ಮಾತ್ರವಿವೆ.

ಎಂದು ಸ್ತುತಿಸುತ ಮತ್ತೆ ಎರಗಲು । ಚಂದದಿಂ ಶಿರದಡಹಿ ಸುಖಮಿರು ।
ಎಂದು ಕಳುಹಿದ ಮಹಿಮೆ ಮೆರೆವುತ – ಅಂದು ಬಸವರಸ ॥ ೫ ॥

ವಚನ ॥ ಬಸವರಾಜನ ಪವಾಡವಂ ನೋಡಿ, ಸರ್ವ ಜನರು ಕೊಂಡಾಡುತ್ತಿರೆ, ಜನನಿ ಜನಕರು ಈ ಬಸವರಸನಿಗೆ ಏಳು ವರುಷವಾಯಿತೆಂದು, ಉಪನಯನದ ಮಹೋತ್ಸವವಂ ಆಲೋಚಿಸಿದರದೆಂತೆನೆ.

## ಉಪನಯನಮಂ ನಿರಾಕರಿಸಿದುದು.

**ದ್ವಿಪದಿ.**

ಶ್ರೀ ಗುರು ವರ ಮೂರ್ತಿ ಸಕಲ ಸತ್ಕೀರ್ತಿ ।
ನಾಗಭೂಷಣ ಮೂರ್ತಿ ಅಖಿಳ ಜಗದರ್ಥಿ ॥ ೧ ॥

ಶಿಶು ವೇಷದಿಂ ಬಸವ ವಸುಧೆಗೈತಂದು
ಶಿಶುವಲ್ಲ ಬಸವ ಪಶುಪತಿಯಾಗದಿಹನೆ ॥ ೨ ॥

ಎಂದು ಪುರ ಜನರೆಲ್ಲ[1] ಅ[1] ಂದು ಕೊಂಡಾಡೆ ।
ಅಂದು ಮಾದರಸರು ಸತಿಯು ಮಾದಲಾಂಬೆ ॥ ೩ ॥

ಕಂದನಾ ಮುಖ ನೋಡಿ ಕಡು ಹರುಷ ಮಾಡಿ ।
ಚಂದ್ರನನು ಕಂಡ ಅಂಬುಧಿ ಹೆಚ್ಚುವಂತೆ ॥ ೪ ॥

ಒಂದಾರು ಭುಜವಾಗಿ ಒಡನೆ ತಾವ್ ಹಿಗ್ಗಿ ।
ಇಂದಿಗೇ ಏಳ್ವರುಷ ಈ ಕುಮಾರನಿಗೆ ॥ ೫ ॥

ಬಂಧು ವರ್ಗವ [2] ಕರೆದು [2] ಬಹು ವಿನೋದದಲಿ ।
ಮುಂದೆ ಬ್ರಾಹ್ಮಣ ತನಕೆ ಮುಖ್ಯವಪ್ಪಂತೆ ॥ ೬ ॥

ಇಂದು ಗಾಯತ್ರಿ ಮಂತ್ರವನರುಹಬೇಕು
ಎಂದು ಯತ್ನವ ಮಾಡಿ ಎಲ್ಲ ಶೃಂಗರಿಸಿ ॥ ೭ ॥

ಮಂದಿರವು ಮುಖಸಾಲೆ ಮದನ ಮಂಟಪವು
ಅಂದ ಚಂದದಲಿ ಚಪ್ಪರ ಮೇಲು ಕಟ್ಟು ॥ ೮ ॥

ಗಂಧ ಕಸ್ತೂರಿ ಚಳಯ ಗಮಕದಿಂ ಚೆಲ್ಲಿ
ತಂದರಾಕ್ಷಣದಲ್ಲಿ ಸಕಲ ಸಾಧನವ ॥ ೯ ॥

---

1-1 ಬ (ಅ, ಎ, ಜ.) 2-2 ಕೂಡಿ (ಜ. )

ಅಕ್ಕಿ ಬೇಳೆಯು ಕಣಿಕ ಅಧಿಕ ಖರ್ಜೂರ ।
ಸಕ್ಕರೆಯು ರಸದಾಳಿ ಸಲೆ ಇಕ್ಷು ಗಟ್ಟಿ ॥ ೧೦ ॥

ಲೆಕ್ಕವಿಲ್ಲದ ಶಾಕ ಲೇಹ್ಯ ಚೋಹ್ಯಗಳ ।
ಗಕ್ಕನೆಯೆ ತಂದರು ಘನ ದ್ರವ್ಯಗಳನು ॥ ೧೧ ॥

ತಂದರಲಸದೆ ಆಗ ಸಮಿತು ದರ್ಭೆಯನು ।
ಅಂದು ಕರೆಸಿದರಧಿಕ ಆಗಮಜ್ಞರನು ॥ ೧೨ ॥

ವೇದ ವೇದಾಢ್ಯರನು [1] ಎ [1] ಲ್ಲ ಹಿರಿಯರನು ।
ಸಾಧಕರ ಜಪ ತಪದ ಸರ್ವ ಪ್ರಾಜ್ಞರನು ॥ ೧೩ ॥

ಇಂತು ಸಂಭ್ರಮವಾಗಿ ಇರಲು ಆ ಎಡೆಗೆ ।
ಮುಂದೆ ಬಂದನು ಬಸವ ಮಠದಿಂದಲಾಗ * ॥ ೧೪ ॥

ಬಂದು ಕಂಡನು ಬಸವ ಬಹಳ ಸಂಭ್ರಮವ ।
ಅಂದು ಕೇಳಿದ ತಮ್ಮ ತಂದೆ ತಾಯ್ಗಳನು ॥ ೧೫ ॥

ವಚನ ॥ ಶ್ರೀ ಬಸವೇಶ್ವರದೇವರು ಉಪನಯನದ ಸಕಲ ಸಂಭ್ರಮವಂ ನೋಡಿ, ತಮ್ಮ ತಂದೆಯಾದ ಮಾದರಸರನ್ನು ಈ ಸಂಭ್ರಮವೇನೆಂದು ಕೇಳಲು, ಆ ಮಾದರಸರು ಇಂತೆಂದರು, ಅಯ್ಯ ! ಬಸವರಸ ನಿನಗೆ ಗಾಯಿತ್ರಿ ಉಪದೇಶದಿಂದ ಬ್ರಾಹ್ಮಣನಂ ಮಾಡಬೇಕು. ಆದಕಾರಣ ನಿನ್ನ ಉಪನಯನದ ಸಂಭ್ರಮವೆನಲು, ಆ ಬಸವರಾಜದೇವರು ಏನೆನ್ನುತಿರ್ದರು.

**ಶ್ಲೋಕ** ॥ ಶಿವ ದೀಕ್ಷಾ ಧನ್ಯ ಜನುಷಾಂ । ದ್ವಿಜದೀಕ್ಷಾ ನ ಕಾಂಕ್ಷಿತಾ ॥
ಸುಧಾಸ್ವಾದ ಸುಖಾಸಕ್ತೇ । ಮಧುಸ್ವಾದೋ ನ ರೋಚತೇ ॥ ೧ ॥

ಎಂದು ಇಂತೆಂದಂ.

**ಜಂಪೆ.**

ಭೂರಿ ಯುಗ ಯುಗ [2] ದಲ್ಲಿ [2] । ವೀರಶೈವದ ದೀಕ್ಷೆ ।
ಮಾರಾರಿಯಿಂ ಪಡೆದೆ । [3] ಬೇರುಂಟೆ ನನಗೆ [3] ॥ ೧ ॥

ಜನನ ಕಾಲದಿ ಬಂದು । ಘನ ಶೈವ ದೀಕ್ಷೆಯನು ।
ನನಗೆ ಸಂಗಮ ಕೊಟ್ಟ । ನಾನೊಲ್ಲೆನಿದನು ॥ ೨ ॥

---

1-1 ಬ (ಜ.) * ಈ ಪದ್ಯ (ಬ.) ಪ್ರತಿಯಲ್ಲಿಲ್ಲ. 2-2 ಗಳಲಿ (ಇ, ಒ, ಗ, ಜ.)
3-3 ನಾನೊಲ್ಲೆನದನು ॥ (ಒ, ಗ, ಜ.)

ಅಣ್ಣೆ ವಾಲತಿ ರಸವು । [1] ಸಣ್ಣ ಕ್ಕಿ ಪಾಯಸವು [1] ।
ಉಣ್ಣು ವಂತದನುಳಿದು । ಮಣ್ಣ [2] ತಿಂಬುವರೇ [2] ॥ ೩ ॥
ಭೂರಿ ಯಜ್ಞವ ಮಾಡಿ । ಮೀರಿ ಸ್ವರ್ಗವ ಸೇರಿ ।
ಧಾರಿಣಿಗೆ ತಿರುಗುವದು । ಹಾರುವರ ದೀಕ್ಷೆ ॥ ೪ ॥
ಮಿಾರಿ ಹಣದಾಸೆಗೆ । ಭೂರಿ ದಾನವ ಹಿಡಿದು ।
ಸೇರಿ ಕರ್ಮಕೆ ಹೋಹ । ದಾರಿ ನಿಮ್ಮ ದೀಕ್ಷೆ ॥ ೫ ॥
ಷೋಡಶ ಮಹಾ ಕರ್ಮ । ರೂಢಿಯೊಳು ಸಂಕಲ್ಪ ।
ಮಾಡಿ ಪಂಚ ಸೂತಕದಿ । ಕೂಡಿಹುದು ದೀಕ್ಷೆ ॥ ೬ ॥
ಇಂಥ ಸಂಕಲ್ಪವ । ನಂತವುಂಟಿದನೊಲ್ಲೆ ।
ಕಂತು ಹರ ಶಿವದೀಕ್ಷೆ । ಮುಂತೆ ನಮಗುಂಟು ॥ ೭ ॥
ಸಕಲ ಮಂತ್ರಕೆ [3] ಕರ್ತ [3] । ಸಿದ್ಧ ಶಿವ ಮನುವಿದಕೆ ।
ಅಖಿಳ ಮಂತ್ರಕೆ ಗುರುವು । ಆದಿ ಶಿವದೀಕ್ಷೆ ॥ ೮ ॥
ಹಾರುವರ ಹವಣಕ್ಕೆ । ಧಾರಿಣಿಯ ಧರ್ಮಕ್ಕೆ ।
ತೋರುವುದು ಸುರ ಲೋಕ । ಮಿಾರಿ ಪೋಗುವರ ॥ ೯ ॥
ಹದಿನಾಲ್ಕು ಲೋಕ ಮಿಾ । ರಿದುದು ಶಿವ ಪದಭಕ್ತಿ ।
ಮದನ ಹರ ಪುರದೊಳಗೆ । ಪದುಳದಿಂದಿಹರು ॥ ೧೦ ॥

ವಚನ ॥ ಇಂತೆಂದು ಬಸವಯ್ಯನು ಶಿವದೀಕ್ಷೆಯಲ್ಲದೆ ದ್ವಿಜ ದೀಕ್ಷೆಯ ನೊಲ್ಲೆನೆಂದು ನುಡಿಯಲು, ಆ ಮಾತಿಗೆ ಮಾದರಸರು ಏನೆನ್ನುತಿರ್ದರು.

**ಶ್ಲೋಕ** ॥ ದೇವಸ್ಯ ಬ್ರಾಹ್ಮಣೋ ರುದ್ರ । ಇತ್ಯಸ್ಯಾಗಮಿಕಂ ವಚಃ ॥
ತಸ್ಮಾತ್ ರುದ್ರ ಕುಲೋತ್ಪನ್ನೋ । ಬ್ರಾಹ್ಮಣ್ಯಾ ಭವತ್ ತಥಾ ॥ ೧ ॥

ಮತ್ತಂ, " ಬ್ರಾಹ್ಮಣೋ ಭಗವಾನ್ ರುದ್ರಃ " ಎಂಬ ಶ್ರುತಿಯುಂಟಾಗಿ, ಆ ರುದ್ರನೆಂಬವನೇ ಬ್ರಾಹ್ಮಣನಾಗಿ ಬಂದು, ಸಕಲ ದೇವಾಸುರರಿಗೆಲ್ಲ ಗುರುವಾಗಿ, ಗಾಯತ್ರಿ ಉಪದೇಶಮಂ ಮಾಡಿ, ರುದ್ರಕುಲೋದ್ಭವರೆನಿಸಿ, ದ್ವಿಜ ದೀಕ್ಷೆಯಂ ನಿಶ್ಚೈಸಿ, ಬೃಹಸ್ಪತಿಯೆಂಬ ಆಚಾರ್ಯನಂ ಮಾಡಿ, ಆ ರುದ್ರ ತನ್ನ ನಿಜಪುರಿಗೈದಿದ ನೆನಲು, ಅದುಕಾರಣ ನಾವು ಮಾಡುವುದು ಶಿವದೀಕ್ಷೆ ಎನಲು, ಆ ಮಾತಿಗೆ ಬಸವರಸ ನಿಂತೆಂದಂ.

**ಏಕತಾಳ – ಅರ್ಧರೇಕು.**

ಸಕಲ ಜನ್ಮವ ಕಳೆದು – ಸಲೆ ಸುರಭಿ ಜನ್ಮ ।
ಸುರಭಿ ಜನ್ಮವ ಕಳೆದು – ಶೂದ್ರನಾಗುವನು ॥ ೧ ॥

---

1-1 ಹಣ್ಣು ಸಕ್ಕರೆ ಜೇನು । (ಇ, ಒ, ಗ, ಚ, ಜ, ಟ.) 2-2 ಭಕ್ಷಿಪರೆ (ಇ,ಗ,ಚ,)
3-3 ತಾತ (ಡ, ತ.)

ಶೂದ್ರ ಜನ್ಮವ ಕಳೆದು – ಸುಲಲಿತ ವೈಶ್ಯ ।
ವೈಶ್ಯ ಜನ್ಮವ ಕಳೆದು – ಒಪ್ಪುವನುಕ್ಷತ್ರ ॥ ೨ ॥
ಕ್ಷತ್ರ ಜನ್ಮವ ಕಳೆದು – ಬ್ರಾಹ್ಮಣನಾಗುವನು ।
ಬ್ರಾಹ್ಮಣ ಜನ್ಮವ ಕಳೆದು – ಭಕ್ತನಾಗುವನು ॥ ೩ ॥
ಭಕ್ತ ಪ್ರಾಣವೆ ಭವ್ಯ – ಜಂಗಮನಾಗಿ
ಮುಕ್ತರಹರ್ರೈ ಮುಂದೆ – ಶಿವನ ಹೊಂದುವರು ॥ ೪ ॥
ಜಂಗಮ ಲಿಂಗವಾಗಿ – ಜಗಕೆ ಗುರುವಾಗಿ ।
ಸಂಗನ ಶರಣರು – ಸಲೆ ಒಪ್ಪುತಿಹರು ॥ ೫ ॥

ವಚನ ॥ ಬಸವರಸ ಮತ್ತು ಇಂತೆಂದಂ.

**ಶ್ಲೋಕ** ॥ ಭೂಸುರೋ ಬ್ರಾಹ್ಮಣಶ್ಚೈವ । ಭೂರುದ್ರೋ ಜಂಗಮಸ್ತಥಾ ॥
ಎಂದು ಶಾಸ್ತ್ರವುಂಟಾಗಿ, ದ್ವಿಜ ದೀಕ್ಷೆಯಿಂದ ದೇವತೆಗಳೆನಿಸಿ ಕೊಂಬರು, ಶಿವದೀಕ್ಷೆಯಿಂದ ರುದ್ರರೆನಿಸಿ ಕೊಂಬರು, ಅದು ಕಾರಣ ಶಿವದೀಕ್ಷೆಯಂ ಪಡೆದು ಸಾಂಬ ಲೋಕವ ಹೊಂದಿ ಸಾಯುಜ್ಯದಲ್ಲಿ ಇರಬೇಕಲ್ಲದೆ, ದ್ವಿಜದೀಕ್ಷೆಯಂ ಪಡೆದು ಸುರ ಲೋಕವ ಹೊಂದಿ ಮರಳಿ ಮರಳಿ ಧರೆಗಿಳಿವಂಥ ನಿಮ್ಮ ದ್ವಿಜ ದೀಕ್ಷೆಯಂ ನಾನೊಲ್ಲೆನೆನಲು, ಬೇಡವೈ ಪಿತನ ಮಾತನತಿಗಳೆಯಬಾರದು. ನಿನ್ನಿಂದ ಪಿತೃತರ್ಪಣಕ್ಕೆ ಉದ್ಧಾರವು ಎನ್ನುತಿರ್ದೊಡಂ, ನೀನು ಪ್ರತಿಯಾಡಬೇಡವೆನಲು, ಬಸವರಸನಿಂತೆಂದಂ.

**ಅಟತಾಳ.** *

ಕೇಳು ತಾತ ನಿಮ್ಮ ಪಿತೃ ಮಾತೃವ । ಬಾಳ ಬಂಧು ಹಿರಿಯರ ।
ಆಲಿಯಲಿ [1] ನೋಡೆಂದು ಕರೆಸುವೆ [1] – ಅವರ ನಿಲ್ಲಿ ॥ ೧ ॥
ನಿನ್ನ ತಾಯಿ ಮುತ್ತಾತ ಸ್ತ್ರೀಯರ । ಇನ್ನು ನೋಡೈ ಸತ್ತರೆಲ್ಲರ ।
ನಿನ್ನಭೀಷ್ಟೆಯ ಪಿತೃ ತರ್ಪಣ – ವನ್ನು ಮಾಡು ॥ ೨ ॥
ಬೇಗ ಮಾಡಿಸು ಭಕ್ಷ್ಯ ಭೋಜ್ಯವ । ಈಗ ಅವರುಗಳೆಲ್ಲ ತೋರುವೆ ।
ಲಾ [2] ಗಿನಲಿ [2] ಪಂತಿಯಲ್ಲಿನಾ ಕುಳಿ – ತೆಲ್ಲರುಣ್ಣಿಸುವೆ ॥ ೩ ॥
ಎನ್ನಗುರು ಮಂತ್ರೋಪದೇಶವ । ಎನ್ನ ಪರೀಕ್ಷೆಯ ನೋಡೆಂದು ।
ಸನ್ನುತದಿ [3] ಜ್ಞಾನ ಭಾವ ಪರುಷದಿ – ಧ್ಯಾನಿಸಲಿಕೆ [3] ॥ ೪ ॥
[4] ಪರುಷ ಜ್ಞಾನದಿ ಕರೆಯೆ ಬಂದರು । ಪಿತೃದೇವತತಿಗಳೆಲ್ಲರು ।
ಭರದಿ ಕಂಡರು ಗುರುತಿನರಿಕೆಯೊ – ಳ್ತಾವು ಎಲ್ಲರನು [4] ॥ ೫ ॥

---

* ಈ ಅಟತಾಳದ ಪದ್ಯಗಳು (ಇ, ಉ, ಎ, ಗ, ಚ, ಡ, ತ, ದ.) ಪ್ರತಿಗಳಲ್ಲಿ ಮಾತ್ರವಿದೆ. 1-1 ತರಿಸುವೆನು ನೋಡಿನ್ನು । (ಇ, ದ.) 2-2 ಗುವೇಗದಿ (ಇ, ದ.) 3-3 ಗುರುಮಂತ್ರದೃಷ್ಟಿಯ । ಪರುಷಪರಿಯ । (ಇ, ದ. ) 4-4 ಭಾವ ಮಂತ್ರದಿ ಶಿವನನೇಮದಿ । ಬಸವನೆನೆಯಲು ಆಕ್ಷಣ । ಯಾವಕಾಲದ ಹೆತ್ತ ಮುತ್ತರು । ಬರಲು ಎಲ್ಲರನು ॥ (ಇ, ದ.)

ಬಂದು ಕುಳಿತರು ಎಲ್ಲರಾಕ್ಷಣ | ಪಿತೃದೇವ ತತಿಗಳು |
ಅಂದು ಪಂತಿಯ ಪತ್ರಾವಳಿಗಳು – ಮುಂದೆ ಎಲ್ಲರಿಗೆ ॥ ೬ ॥
ಯಾರು ಪಿತರು ಯಾರು ಹಿರಿಯರು | ನೀನು ತೋರೈ ಎನಗೆನೆ |
ಧಾರಿಣಿಯ ದ್ವಿಜರೆಲ್ಲ ಕಂಡತಿ – ಚಾರು ವಿಸ್ಮಿತದಿ ॥ ೭ ॥
ಈತ ಪಿತನು ಈತ ತಾತ ಮು | ತ್ತಾತ ಈಕೆ ಮಾತೆಯು |
ಈತ ಹಿರಿಯಯ್ಯ ಈತ ಕಿರಿಯಯ್ಯ – [1] ಇವರು ಪಿತೃಗಳು [1] ॥ ೮ ॥
ಎಲ್ಲ ತಮ್ಮವರರಿತ ಹಿರಿಯರು | ಎಂದು ಸಂತೋಷ ಯುಕ್ತರಾಗಲು |
ಉಲ್ಲಸದಿ ಭೋಜನವಗೈಸಿದ – ಎಲ್ಲ [2] ಹಿರಿಯರಿಗೆ [2] ॥ ೯ ॥
ತೋರಿಸಿದನು ಬಸವರಸ ಪಿತೃಗಳ | ಹಾರಿಸಿದನೈ ಎಲ್ಲರ |
ಕಾರು ಕಾರಂ [3] ದು ಕಾಗೆಯಾಗಿಯೆ – ಹಾರಿ ಪೋಗಲಿಕೆ [3] ॥ ೧೦ ॥

ವಚನ ॥ ಇಂತೀಪರಿಯಲ್ಲಿಬಸವರಸನು ಮನೋ ಭಾವ ಮಂತ್ರ ಪರುಷದಿಂ, ಮಾದರಸನ ಮಾತೃ ಪಿತೃ ಹಿರಿಯರೆಲ್ಲರಂ, ಕರೆಸಿ ತೋರಿ, ವಾಯಸರೂಪದಿಂ ಹಾರಿಸಲು ! ಇಂತೀ ಮಹತ್ತಂ ನೋಡಿ ದ್ವಿಜರೆಲ್ಲ ಆಶ್ಚರ್ಯಮಂ ಪಟ್ಟಿರಲು, ಈತಂ ತಮ್ಮಂತೆ ಬ್ರಾಹ್ಮಣ ನಾಗುವುದಿಲ್ಲವೆಂದು ಚಿಂತಿಸಿ, ಮಾದರಸರು ಮಗನಿಗಿಂತೆಂದರು.

**ಕಂದಪದ್ಯ**

ಜಾತಿ ಕುಲ ವರ್ತನೆ ಚೆಲ್ವ |
ಮಾತಿನ ಜಾಣ್ಮೆಯ ಮಹಿಮನೆ ಮತ್ತಿದ ನೀನುಂ ॥
ಖಾತಿಯ ಮಾಡುತ ಜರಿದೊಡೆ |
ಭೂತಳದೊಳು ಮೆಚ್ಚರಿದನು ನೀ ತಿಳಿ ಮಗನೆ ॥ ೧ ॥

ವಚನ ॥ ಮತ್ತು ಇಂತೆಂದಂ .

**ಅಟತಾಳ.**

ರೂಢಿಯೊಳು ದ್ವಿಜ ದೀಕ್ಷೆಯಿಲ್ಲದೆ | ಕೂಡರಯ್ಯಾ ಬ್ರಾಹ್ಮರು |
ಖೋಡಿಗಳೆಪರು ಶೂದ್ರನೆನುತಲಿ – ಆಡುತಿಹರು ॥ ೧ ॥
ಅನ್ನ ಅಗ್ಗಣಿಯನ್ನು ಕೊಳ್ಳರು | ಅಖಿಳ ದ್ವಿಜರು ನಿನ್ನನು |
ಇನ್ನು ಪಂತಿಯಲ್ಲಿಟ್ಟು ಉಣ್ಣರು – ಮುದ್ದು ಮಗನೆ ॥ ೨ ॥
ಎಂದ ಮಾತಿಗೆ ಬಸವರಾಜನು | ಎಂದನವರ ಸಂದಣಿ |
ಮುಂದೆ ತನಗದು ಏನು ಹತ್ತದು – ಮುಕ್ತ ನಾನು ॥ ೩ ॥

1-1 ರಿವರೆಲ್ಲರನು ಕಂಡು ॥ (ತ.) 2-2 ಪಿತೃಗಳ ॥ (ಇ, ದ.) 3-3 ದೆನುತ ವಾಯಸ | ಹಾರಿಪೋಗೆ ॥ (ಡ, ತ.) * ಈ ಕಂದ ಪದ್ಯ (ಇ, ಉ, ಎ, ಗ, ಚ, ಡ, ತ, ದ.) ಪ್ರತಿಗಳಲ್ಲಿ ಮಾತ್ರವಿದೆ.

ತನ್ನ ನಿಮಿತ್ತದಿ ನಿಮ್ಮ ಕುಲಜರು । ಚುನ್ನವಾಡುವದೇತಕೆ ।
ಖಿನ್ನತನ ಬಂದಪುದು ಘನತೆಯ – ಚೆನ್ನಿದಲ್ಲಾ † ॥ ೪ ॥

ಈಗ ಕೂಡಲ ಸಂಗನಲ್ಲಿಗೆ । ಪೋಗುತಿಹೆ ನಾಂ ನನಗಿಲ್ಲಿ ।
ಆಗದೆನುತಲಿ ಬಸವರಾಜನು – ಬೇಗ ಹೊರಟ ॥ ೫ ॥

ತಂದೆ ತಾಯ್ಗಳನಗಲಿ ಪೋಪರೆ । ಕಂದ ಎನಲಿಕೆ [1] ನನಗಲ್ಲಿ [1] ।
ತಂದೆ ತಾಯ್ಗಳು ರುದ್ರ ಪ್ರಮಥರು – ಮುಂದೆ ಅಹರೆ ॥ ೬ ॥

ತಪದ ನೋಂಪಿಯ ನೋಂತು ನಂದಿಗೆ । ಸಫಲವಾಗಿಯೆ ದಕ್ಕದಾಯಿ [2] ತೆ [2] ।
ಚಪಲೆ ಮಾದಲೆ ಸುತಗೆ ಹಲು [3] ಬುತ – ಶೋಕಗೈವಳ್ [3] ॥ ೭ ॥

ಕಣ್ಣ ಪುಣ್ಯವು ದಕ್ಕದಾಯಿತೆ ಮು । ಕ್ಕಣ್ಣ ಶಿವನೆ ಎನ್ನುತ ।
ರನ್ನೆ ಮಾದಲೆ ಸುತಗೆ ದೈನ್ಯತೆ – ಯಿಂದ ಪೇಳೆ * ॥ ೮ ॥

ಮಗನೆ ನಿನ್ನಯ ಸೌಖ್ಯ ಕರದಲಿ । ಮಿಗಿಲು ಎನುತಲಿ ಮುಂದಕೆ ।
ಸೊಗಸು ಸ್ಥಿರಮನವಾಗಿಯಿರ್ದೆನು – ಸುತನೆ ನಾನು * ॥ ೯ ॥

ಜಾತಿ ಕುಲವರ್ತನೆಯ ಪೇಳ್ದಡೆ । ಮಾತು ಕಳೆಯುತ ಪೋಪರೆ ।
ನೀತಿಯೇನಿದು ಧರ್ಮವೇ ಸ್ವಯಂ – ಜ್ಯೋತಿ ರೂಪ * ॥ ೧೦ ॥

ನಿತ್ಯ ನಿನ್ನಯ ಮುಖದ ದರುಶನ । ವಿತ್ತು ನಮ್ಮ ದುರಿತವ ।
ಹತ್ಯಮಾಡಿಯೆ ಕೀರ್ತಿ ಪಡೆಯದೆ – ಹಿತವೆ ಪೋಗುವುದು * ॥ ೧೧ ॥

ತಾಯ ದುಃಖವ ಬಸವರಾಜನು । ಆಯತದೊಳು ಮನ್ನಿಸಿ ।
ನೋಯ ಬೇಡಮ್ಮ ನಿನ್ನ ಮನದೊಳು – ನಲಿಯುತಿಹೆನು * ॥ ೧೨ ॥

ನೆನೆದ ಕ್ಷಣದೊಳು ಬಂದು ನಿಲುವೆನು । ಜನನಿ ಕೇಳೌ ಎನ್ನುತ ।
ವಿನಯದಿಂದಲಿ ತಂಪಗೈದನು – ಬಸವರಾಜ * ॥ ೧೩ ॥

ಮಗನೆ ನಡವಳಿಯೆಲ್ಲ ಉಸುರ್ದೆನು । ಸೊಗಸು ನಮ್ಮನು ಬಿಟ್ಟು ನೀ ।
ಅಗಲಿ ಪೋಪೆಯ ಕಂದ ಎನ್ನುತ – ಅಳಲ್ದ ಪಿತನು * ॥ ೧೪ ॥

ನಿಮ್ಮ ಮನದೊಳು ಸತತವೋಲಾಡಿ । ಸುಮ್ಮನದಿ ನಾನಿರ್ಪೆನಯ್ಯನೆ ।
ಕಮ್ಮಗೋಲನ ವೈರಿ ರಕ್ಷಿಪ – ನೆಂದು ಸಂತವಿಸಿ * ॥ ೧೫ ॥

---

† ಈ ಪದ್ಯ (ಅ, ಉ, ಎ, ಒ, ಗ, ಚ, ಜ, ಟ, ಬ.) ಪ್ರತಿಗಳಲ್ಲಿಲ್ಲ.
1-1 ಪಿತಮಾತೆ (ಒ, ಡ, ತ.) 2-2 ತು (ತ, ಡ.) 3-3 ಬಿಡ । ಅಧಿಕ ಚಿಂತೆಯಲಿ ॥ (ಡ, ತ.) * ಈ ಪದ್ಯಗಳು (ಇ, ಖ, ಡ, ತ, ದ.) ಪ್ರತಿಗಳಲ್ಲಿ ಮಾತ್ರವಿವೆ.



**ಶ್ರೀ ಬಸವೇಶ್ವರನು ಪಿತನುಪನಯನವಂ ನಿರಾಕರಿಸಿ ಹೋಗುವಿಕೆ**

**(ಆ ಪದ್ಯ ೫-೧೬)**



ಶ್ರೀ ಬಸವೇಶ್ವರನನ್ನು ಅಕ್ಕನಾಗಮ್ಮನನ್ನು ಕೃಷ್ಣಾನದಿಯು ತಡೆದಿರೆ ಸಂಗಮೇಶನು ಉದಯಿಸಿ ಕರೆಯುವಿಕೆ
(ತ್ರಿ. ಪದ್ಯ ೧೧ - ೧೨)

ಚಿಕ್ಕ ಪ್ರಾಯದ ಚಲುವ ನೊಬ್ಬನೆ । ಗಕ್ಕನೆದ್ದು ನಡೆಯಲು ।
ಅಕ್ಕನಾಗಲೆ ಸಹಿತ ಹೊರಟಳು – ಅಕ್ಕರಿಂದ ॥ ೧೬ ॥

ಬಂಧು ಜನ ಸರ್ವರು ಸಮಸ್ತರು । ನಂದಿ ಬಸವಗೆ ಎರಗಿ ಹರುಷದಿ ।
ಚಂದದಿಂ ಬಿನ್ನೈಸೆ ಕೇಳದೆ – ಮುಂದಿಸುತ್ತಲ್ * ॥ ೧೭ ॥

ಕಳುಹ ಬಂದರನೆಲ್ಲ ಸಾಗಿಸಿ । ಮಲಹರನ ಧ್ಯಾನದಲಿ ಬಸವೇಶ ।
ಲಲನೆ ಅಕ್ಕನು ಸಹಿತ ಹೊರಟನು – ಬಸವನಂದು * ॥ ೧೮ ॥

ಗಿರಿ ತರು ಲತೆ ಸರೋವರಂಗಳ । ಇರದೆ ದಾಂಟುತ ಬಂದರು ।
ಪರಮ ಸದ್ಗುರು ಸಂಗಮೇಶನ – ಹೊರೆಗೆ ಬೇಗ ॥ ೧೯ ॥

ವಚನ ॥ ಬರೆ ಬರೆ ಮುಂದೆ ಸಂಗಮೇಶ್ವರನ ಆಲಯು ಒಪ್ಪುತಿರ್ದುದ ದೆಂತೆನೆ.

**ಜಂಪೆ.**

ಶಶಿಕಾಂತ ಶಿಲೆಯಂತೆ । ಎಸೆವ ಮಲ್ಲಿಗೆಯಂತೆ ।
ರಸ ಸುಧಾಮೃತದಂತೆ । ಎಸೆದುದಾ ಭವನ ॥ ೧ ॥

ಇಂದುವಿನ ರುಚಿಯಂತೆ । ಕುಂದದಾ ಹರಳಂತೆ ।
ಚಂದ್ರ ಮಂಡಲದಂತೆ । ಮುಂ [1] ದೆ ಕಾಣಿಸಿತು [1] ॥ ೨ ॥

ಗೋಪುರ ಪ್ರಕಾರದಿಂ । ದೀಪಿಸುವ ಶಿಖ [2] ರಿಯಿಂ [2] ।
ಕಾಪಾಲಿ ಶಿವ ನಿಳಯ । ಕಣ್ಗೆ ರಂಜಿಸಿತು ॥ ೩ ॥

ನೆಳಲಿಂದ ಕೊಳದಿಂದ । ತಳಿಲಿಂದ ತಂಪಿಂದ ।
ಇಳೆಯಬೊಪ್ಪುವದಲ್ಲಿ । [3] ಕಳೆಧ [3] ರನ ಭವನ ॥ ೪ ॥

ಕಣ್ಗೆ ಮಂಗಳವಾಗಿ । ಕಡು ರಮ್ಯದಿಂದಿಹುದು ।
ಸಂಗಮೇಶ್ವರನಲ್ಲಿ । ಸಲೆಯೊಪ್ಪುತಿಹನು ॥ ೫ ॥

ವಚನ ॥ ಇಂತು ಬಸವೇಶ್ವರ ದೇವರು ಅಕ್ಕನಂ ಹಿಂದಿಟ್ಟುಕೊಂಡು, ಸಂಗ ಮೇಶ್ವರನ ಸಮೀಪಕಂ ಬರಲು, ಮಹೋನ್ನತವಾಗಿ ಹೊಳೆ ಕಟ್ಟಿ ಹರಿಯುತಿರ್ದುದ ದೆಂತೆನೆ.

---

* ಈ ಪದ್ಯಗಳು (ಇ, ಖ, ಜ, ತ, ವ.) ಪ್ರತಿಗಳಲ್ಲಿ ಮಾತ್ರವಿವೆ.
1-1 ದೊಪ್ಪುತಿಹುದು ॥ (ಗ, ಚ, ತ.) 2-2 ರದಿಂ (ಇ, ಒ, ಗ, ಚ, ತ.) 3-3 ಮಲಹ (ಇ, ಒ.)

## ಗಂಗೆಯು ಇಬ್ಭಾಗವಾಗಿ ದಾರಿಬಿಟ್ಟ ಪವಾಡ.

**ತ್ರಿವುಡೆ.**

ಮೃಡನ ಜಡೆಯೊಳಗಿರ್ದ ಗಂಗೆಯು । ತುಡುಕಿ ಜಡಿದತಿ ಪೊಡವಿಗಿಳಿದುದೋ ।
ಕಡಲ ತೆರೆ ನೊರೆ ಮೀರಿ ಧಾತ್ರಿಯ – ಲೊಡೆದು ಪರಿವಂತೆ ॥ ೧ ॥

ಗಡ ಬಡಿಸಿ ಬಡಿದೆದ್ದು ತೆರೆಗಳು । ದಡವ ಹೊಡೆದಪ್ಪಳಿಸಿ ಏಳುತ ।
ಗಿಡ ಮರಂಗಳ ಕೆಡಹಿ ಪರಿವುತ – ಲಿರ್ದುದಾ ನದಿಯು ॥ ೨ ॥

ಎಳೆಯ ಮೀನ್ಗಳ ಹೊಳಹಿನಿಂದಲಿ । ಹೊಳೆ[1] ಯ[1] ಅಬ್ಬರ ಸುಳಿಗಳಿಂದಲಿ ॥
ಘುಳಿ ಘುಳಿಪ ಜಲ ತೆರೆಯು ಬುದ್ಬುದ – ಬಹಳ ಮೋಹರ[2] ದಿ[2] ॥ ೩ ॥

ಇಳೆಯು ಇಬ್ಬಗೆಯಾಗಿ ಪರಿವುತ । ಸುಳಿಯು ಬಹು ಘನವಾಗೆ[3] ತೋ[3]ರುತ ।
ಇಳೆಗೆ ಅಚ್ಚರಿಯಾಗಿ ಪರಿ[4] ಯುವ[4] – ಹೊಳೆಯ ನೋಡಿದರು ॥ ೪ ॥

ನೋಡಿದನು ಮನವೊಲಿದು ಬಹು ಕೊಂ । ಡಾಡಿದ[5] ನು[5]ಸಂಗಮನ ಬರವನು
ಬೇಡಿದನು ಆನಂದ ಹರುಷವ ಮಾಡಿದನು ಬಸವ ॥ ೫ ॥

ದೇವ ಸಂಗಮ ಜಯತು ಭವಹರ । ಕಾವುದೆಮ್ಮನು ಕರುಣನಿಧಿ ಸಂ ।
ಜೀವ ಜಯ ಜಯ ಸಲಹು ಎಮ್ಮನು – ಪಾವನಾತ್ಮಕನೆ ॥ ೬ ॥

ಮಾರಹರ ನಿರ್ಮಾಲಯವ ನಾವ್ । ಸೇರುವರೆ ಹೊಳೆ ಅಡ್ಡ ಬಿದ್ದಿದೆ ।
ಆರೈದು ಸಲಹೆಮ್ಮ ಶ್ರೀ ಗುರು – ಸಂಗಮೇಶ್ವರನೇ ॥ ೭ ॥

ಪೊಡವಿಗೀಶನು ಬಸವರಾಜನ । ನುಡಿಗೆ ಪ್ರತ್ಯಕ್ಷದಲಿ ಇದಿರಿಗೆ ।
ನಡೆದು ಬರೆ ಎರ[6] ಡಾದುದಿಬ್ಬಗೆ – ಅಧಿಕದಲಿ ಗಂಗೆ[6] ॥ ೮ ॥

ಪೊಡವಿಯೊಳಗಡಿ ಇಡುವ ಸರ್ಪನ । ಕಡಿಯೆ ಶಿರ ಮುಂಡ ನಡೆಯೆ ಹಿಂಗಡೆ ।
ನಡೆಯಲಾರ[7] ದ[7] ಬಾಲ ಅವನಿಗೆ – [8] ಕೆಡೆದು ಬಿದ್ದಂತೆ[8] ॥ ೯ ॥

ಮೃಡನ ಮೋಹದ ಬಸವರಾಜನ । ಅಡಿಯ ನೋಡುವೆನೆಂದು ಗಂಗೆಯು ।
ತಡೆದಳೋ ಎಂಬಂತೆ ಗಳಿಗೆಯು – ತಡೆದುದಾನದಿಯು * ॥ ೧೦ ॥

ಸಂಗಮೇಶ್ವರ ಸಕಲ ಹರುಷದಿ । ಲಿಂಗ ಬಸವನನಪ್ಪಿ ಕೊಳ್ಳಲು ।
ಹಿಂಗದೆರಗಿದ ಬಸವರಾಜನು – ಸಂಗಮೇಶ್ವರಗೆ ॥ ೧೧ ॥

---

1-1 ಯು (ಇ,) ಚ.) 2-2 ವು (ತ.) 3-3 ಮಾ (ಒ, ಜ, ಟ.) ;ಬೀ(ಚ);ನಡೆಯಲು (ತ.) 4-4 ವಂಥ (ಇ, ಒ, ಚ.) 5-5 ರು (ಇ, ಗ, ಚ.) 6-6 ಹೊಳೆಯೆರಡು ಇಬ್ಬಗ। ವಾದುವೇನೆಂಬೆ ॥ (ಇ, ಒ,ಜ, ಟ, )7-7 ದೆ (ಇ, ಎ,-ಬ.) 8-8 ನಡೆದು ಬಂದಂತ್ತೆ ॥ (ಅ, ಇ, ಡ. ) *ಈ ಪದ್ಯ (ಎ, ತ.) ಪ್ರತಿಗಳಲ್ಲಿಲ್ಲ.

ಬಡವ ಭಾಗ್ಯವನೆಡಹಿ ಕಂಡ ವೋಲ್ । ತಡೆದ ಮಳೆ ಹೊಡೆ ಬೆಳೆಗೆ ಬಂದ ವೋಲ್ ।
ಪ್ರೊಡವಿಗೀಶನ ಅಡಿಯ ಕಾಣುತ – ಕೆಡೆದನರ್ತಿಯಲಿ ॥ ೧೨ ॥

ಅಡಿಗೆ ಎರಗಿದ ಬಸವರಾಜನ । ಪಿಡಿದು ಶಿರವೆತ್ತಿದನು ಸಂಗಮ ।
ಒಡನೆ ಈರ್ವರ ಕರೆದು ಒಯ್ದನು – ತನ್ನ ನಿಜ ಗೃಹಕೆ ॥ ೧೩ ॥

ಎಂದೊ ಅಗಲಿದ ಶಿಶುವು ತನ್ನಯ । ತಂದೆ ತಾಯ್ಗಳ ಕಂಡ ಹರುಷದಿ ।
ಅಂದು ಇದ್ದರು ಸಂಗಮೇಶನ –' ಮಂದಿರದೊಳು ॥ ೧೪ ॥

ಅಂದು ಬಸವೇಶ್ವರನು ತನ್ನೆಯ । ತಂದೆ ತಾಯ್ಗಳ ಬಿಟ್ಟು ಬೇಗದಿ ।
ಬಂದ ಸಂಗಮದೇವನಲ್ಲಿಗೆ – ಸಂಧಿ ಪೂರಣವು ॥ ೧೫ ॥

ಇಂತಿ ಪದ್ಯಗಳು ೨೦೦

**ಅಂತು ಸಂಧಿ ೫ ಕ್ಕಂ ಸಂಪೂರ್ಣ ಗಣನೆ—೧೪೨೯ ಕ್ಕಂ ಮಂಗಳ ಮಹಾ**

**ಶ್ರೀ ಶ್ರೀ ಶ್ರೀ ಶ್ರೀ ಶ್ರೀ**



* ಈ ಪದ್ಯ (ಇ, ಗ, ಚ, ತ.) ಪ್ರತಿಗಳಲ್ಲಿಲ್ಲ.

ಆರನೆಯ ಸಂಧಿ

# ಬಸವೇಶ್ವರದೇವರ ವಿವಾಹ

---

**ವೃತ್ತ.**

ಶಶಿಯಂ ತಾಳ್ದಿ ಶಿರಾಗ್ರ ಕೇಶದೆಡೆಯೋಳೋರಂತೆಯಾ ಗಂಗೆಯಂ ।
ವಿಷಮಂ ಕಂಠದಿ ತಾಳ್ದಿಯಂದು ನೊಸಲೊಳ್ ಭಸ್ಮಂಗಳಂ ಪೂಸಿದಂ ॥
ಅಸಮಾಕ್ಷಾ ನಿಜ ಪಾದ ಪದ್ಮ ಭಜಕರ್ಗಿತ್ತೈ ತದಿಷ್ಟಾರ್ಥಮಂ ।
ಪಶುರಾಟ್ ಪಾರ್ವತಿ ವಲ್ಲಭಾ ಎರಗಿ ಬೇಗಂಗೈವೆನೀ ಕಾವ್ಯಮಂ ॥ ೧ ॥

**ಕಂದಪದ್ಯ.**

ಬಿ[1] ಸ[2] ಜೋದ್ಭವ ಪ್ರಸೂನನ ।
ಶಿಶುವಿನ ಶಿಶು[3] ತಾನಾಳಿದನಾ ಪಟ್ಟಣವಂ[3] ॥
ಪಶು ಪತಿ ಪುರಕೊಯ್ದಾತನ ।
ನೊಸೆದಪ್ಪಿದ ವಿಷಮ ಲೋಚನಂಗೆರಗುವೆ ನಾಂ ॥ ೧ ॥

ವಚನ ॥ ಅತ್ತ ಸಂಗಮೇಶ್ವರನ ದೇವಾಲಯದಲ್ಲಿ ಬಸವೇಶ್ವರದೇವರು ಇರುತ್ತಿರಲು, ಇತ್ತ ಕಲ್ಯಾಣ ಪಟ್ಟಣದ ಶೃಂಗಾರಮಂ ಪೇಳ್ವೆನದೆಂತೆನೆ.

**ದ್ವಿಪದಿ.**

ಶ್ರೀ ಮಹಾ ದೇವನಾ ಶೃಂಗಾರ ಪುರಿಯೊ ।
ಆ ಮಹಾ ಸುರಲೋಕವವನಿಗೈದಿದುದೊ ॥ ೧ ॥
ಕಾಮ ಪಿತನರಸಿಯಾ ಕೈಯ್ಯ ಕನ್ನಡಿಯೊ ।
ಪ್ರೇಮದಿಂದಿರುತಿಹುದು ಪೇಳಲಿನ್ನೇನು ॥ ೨ ॥
ಚಂದನವು ಖರ್ಜೂರ ಚಂಪಕವು ದ್ರಾಕ್ಷಿ ।
ಮಂದಾರ ಸುರಹೊನ್ನೆ ಮಾದಲವು ಅರೆನೆಲ್ಲಿ ॥ ೩ ॥
ಬಂಧೂರ ಕದಳಿಯು ವಕುಳ ಪುನ್ನಾಗ ।
ನಿಂಬೆ ಕಿತ್ತಲೆ ಪನಸು[4] ಹೇರಳೆ[4] ಮಾವು ॥ ೪ ॥
ತುಂಬಿದಮೃತದ ರಾಜ ಕುರುಹುಳ್ಳ ವೃಕ್ಷ ।
ಜಂಬು ನೇರಿಲು ಬದರಿ ನಿಂಬ ತರು ಬಿಲ್ವ ॥ ೫ ॥

---

1-1 ವಿ (ಜ,ಟ, ಡ.) 2-2 ಷ (ಡ, ತ, ?.) 3-3 ತಳನಾಳಿ ಪಟ್ಟಣಮಂ (ಅ, ಇ ಎ, ಒ, ಜ, ಟ, ಬ.) 4-4 ನೇರಿಲು (ಅ, ಇ, ಜ, ಟ, ತ, ಬ.)

ಅತ್ತಿಯಾಲವು ಅರಳಿ ಮತ್ತಿ ಮಹಿಸಾಕ್ಷಿ ।
ಮುತ್ತುಕವು ಮುನಿವೃಕ್ಷ ಮುಳ್ಳುತರಂಜ ॥ ೬ ॥
ತೆಂಗು ತೇರಣ ಅಡಕೆ ಅಂಗಜನ ವೃಕ್ಷ ।
ಹೊಂಗೇದಿಗೆಯು ಮರುಗ ನಂದಿ ವರ್ತಕವು ॥ ೭ ॥
ಮೊಲ್ಲೆ ಮಲ್ಲಿಗೆ ಜಾಜಿ ಮುಡಿವಾಳ[1] ದವನ[1] ।
ಎಲ್ಲಿ ನೋಡಲು ಗಂಧವೆಸೆವ ಸೇವಂತಿ ॥ ೮ ॥
ಕರವೀರ[2] ದೂರ್ವೆಯು[2] ಕಮಲ ಕಾಸಾರ ।
ಇರುವಂತಿ ಸುರಹೊನ್ನೆಯೆಸೆವ ಪಾದರಿಯು ॥ ೯ ॥
ಸರಸಿ ಕೂಪ ತಟಾಕ ಪರಿವ ಹಳ್ಳಗಳು ।
ಇರುತಿಹವು ಆ ವನದಲಿಂಪು ಸೊಂಪಿನಲಿ ॥ ೧೦ ॥
ಶುಕ ಪಿಕಂ ನವಿಲಂಚೆ ಮಕರಿ ಮಾರ್ಜಾಲ ।
ವಿಕಸಿತಾಂಬುಜಕೆರಗಿ ಮೊರೆವ ಭ್ರಮರಗಳು ॥ ೧೧ ॥
ತಳಿರಿಂದ ನೆಳಲಿಂದ ಕೊಳನುದಕದಿಂದ ।
ಇಳೆಯಲೊಪ್ಪುವದಲ್ಲಿ ಕಳೆಯುಳ್ಳ ಪುರವು ॥ ೧೨ ॥
ಇಂತೊಪ್ಪುತಿಹ ವನವು ಅದರ ಮಧ್ಯದಲಿ ।
ಸಂತತೊಪ್ಪುವದೊಂದು ಸರ್ವೇಶ ಭವನ ॥ ೧೩ ॥
ಕಲ್ಯಾಣ ಪಟ್ಟಣವು ಕಡು ರಮ್ಯವಾಗಿ ।
ಸಲ್ಲೀಲೆಯಿಂದಿಹುದು ಸಕಲ ವಿಭವದಲಿ । ॥ ೧೪ ॥

ವಚನ॥ ಅಂತಪ್ಪ ಕಲ್ಯಾಣ ಪಟ್ಟಣದ ಶೃಂಗಾರವೆಂತೆನೆ.

**ಏಕತಾಳ.**

ಕೆತ್ತುಗಲ್ಲಿನ ಕೋಟೆ । [3] ಎ [3] ತ್ತಿದಾ ತೆನೆಗಳನು ।
ಕೊತ್ತಳವು ಸಾರಣೆ । ವಿಸ್ತರಿಸಲಳವೆ ॥ ೧ ॥
ಹುಲಿ ಮುಖ ದ್ವಾರವು । ಬಲಿದ ಅಳ್ವೇರಿಯು ।
ನೆಲೆಗಾಣದಗ[4] ಳಿನ । ಜಲಧಿ [4] ಯೊಪ್ಪಿಹುದು ॥ ೨ ॥
ಸೌರಣೆಯು ಕೊತ್ತಳ । ಏರುವಾ ಡೆಂಕಣಿ ।
ಮೀರಿದಾ ಟಕ್ಕೆಯು । ತೋರಿ ಮೆರೆ[5] ಯುವುದು[5] ॥ ೩ ॥
ಪರರಾಯರೆದೆಗೆ ಭೀ । ಕರವಾಗಿ ಕಲ್ಯಾಣ ।
ಅರಿ ಭಯಂಕರವಾಗಿ । ಮೆರೆದು ರಾಜಿಸಿತು ॥ ೪ ॥

1-1 ಪಚ್ಚೆ (ಇ, ಒ, ಗ, ಟ.) 2-2 ದವನ (ಇ, ಒ, ಗ, ಚ, ಟ.) * ಈ ಪದ್ಯ (ಜ.) ಪ್ರತಿಯಲ್ಲಿ ಮಾತ್ರವಿದೆ. 3-3 ಗೆ (ಇ, ತ.) 4-4 ಳುಗ । ಳ್ಪಳಸೀ (ಇ, ಒ, ಗ, ಚ, ತ, ಡ.) 5-5 ವಾವು (ಇ, ಚ, ಜ, ಟ.)

ಸೋಮ ವೀದಿಯು ಸೂರ್ಯ । ವೀದಿ ಶಿವಾಲಯ ।
ಹೇಮ ಕಳಶ ದ್ವಾರ । ಸಾಲು ಮನೆಮನೆಗೆ ॥ ೫ ॥

ರತ್ನ ಮಾಣಿಕ ಸಾಲು । ಮುತ್ತಿನಂಗಡಿ ಸಾಲು ।
ಮತ್ತೆ ಕನಕಾಭರಣ । ದರ್ಥಿಯ ಸಾಲು ॥ ೬ ॥

ಕೇಣಿಯಂಗಡಿ ಸಾಲು । ನಾಣ್ಯವಸ್ತ್ರದ ಸಾಲು ।
ಪುನುಗು ಜವ್ವಾಜಿ ಸಾಲು । ಎಣಿಸಲೆನ್ನಳವೆ ॥ ೭ ॥

ಮಾಲೆಗಾರರ ಸಾಲು । ಜಾಲಗಾರರ ಸಾಲು
ಸಾಲು ಸಾಲಂಗಡಿ । ಸಕಲರು ಇಹರು ॥ ೮ ॥

ಅಂತಪ್ಪ ಪುರವನಾ । ಳುವನು ನೃಪ ಬಿಜ್ಜಳ ।
ಸಂತತ ಸಕಲ ವೈ । ಭವದಲೊಪ್ಪಿಹನು ॥ ೯ ॥

ಆನೆ ಕುದುರೆಯು ಮಂದಿ । ಸೇನೆ ರಥ ಪತಾಕೆ ।
[1] ಜೈನ [1] ಕುಲೋದ್ಭವ । ತಾನೊಪ್ಪುತಿಹನು ॥ ೧೦ ॥

ಅಂತಪ್ಪ ಅರಸನ । ಮಂತ್ರಿ ಬಲದೇವನು ।
ಸಂತತ ಸಕಲ ಭಾ । ರವ ನಡೆಸುವನು ॥ ೧೧ ॥

ಆತನಾ ವರ ಸುತೆ । ಖ್ಯಾತೆ ಮೂಜಗಮಾತೆ ।
ಜಾತೆ ಗಂಗಾಂಬಿಕೆ । ಪ್ರೀತಿಯಿಂದಿಹಳು ॥ ೧೨ ॥

ಸಕಲ ವೈಭವದಿಂದ । ಲಖಿಳ ಜನರ ಕೈಯ ।
ಮುಕುರವೆಂಬಂದದಲಿ । ಸುಖದಿ ಬಾಳುವಳು ॥ ೧೩ ॥

ವಚನ ॥ ಇಂತಪ್ಪ ಬಲದೇವ ಮಂತ್ರಿಯ ಬಳಿಗೆ, ಮಂಡಿಗೆಯ ಮಾದರಸರು ಪತ್ರಿಕೆಯಂ ಕಳುಹಿದರದೆಂತೆನೆ.

**ಜಂಪೆ.**

ಶ್ರೀ ಮತು ಸ್ವಸ್ತಿ ಪ್ರ । ಶಸ್ತಿ ಎನ್ನ ಮೈದುನಗೆ ।
ಪ್ರೇಮದಿಂದೆರಗಿ ಮಾ । ಡುವ ನಮಸ್ಕಾರ ॥ ೧ ॥

ಚೆನ್ನಿಗನು ಬಸವರಸ । ನಮ್ಮ ನಡೆಯುಪನಯನ ।
ವನ್ನು ಮಾಡುವೆವೆನಲು । ಮತ್ತದನೆ ಜರಿದು * ॥ ೨ ॥

ಶಿವ ದೀಕ್ಷೆಯುಲ್ಲದೆ । ದ್ವಿಜ ದೀಕ್ಷೆಯೊಲ್ಲೆನೆಂದು ।
ಕವಿದು ಕೋಪದಿ ಮುನಿದು । ಕೇಳದೆನ್ನೊಡನೆ * ॥ ೩ ॥

1-1 ಜಿನ್ನ (ಇ, ಟ.) * ಈ ಪದ್ಯಗಳು (ಅ, ಇ, ಉ, ಜ, ಢ, ತ, ಪ, ಬ.) ಪ್ರತಿಗಳಲ್ಲಿಲ್ಲ.

ನಿಮ್ಮಳಿಯ ಬಸವರಸ । ನೆ [1] ಮ್ಮೊ [1] ಡನೆ ಮುನಿದೀಗ ।
ನಿ [2] ಮ್ಮೆ [2] ಡೆಗೆ ಬಂದಹನೆ । ಚೆನ್ನಾಗಿ ಸಲಹಿ ॥ ೪ ॥
ಚಿಕ್ಕ ಬಸವನು ತನ್ನ । ಅಕ್ಕನಾಗಲೆ ಸಹಿತ ।
ಮುಕ್ಕಣ್ಣ ಸಂಗಮನ । ಮಂದಿರಕೆ ಬಂದ ॥ ೫ ॥
ಎಂದ ಓಲೆಯ ಮಾತ । ನಂದು ಕೇಳುತ ಮಂತ್ರಿ ।
ಒಂದಾರು ಭುಜವಾ [3] ಗಿ । ಒಡೆನೆ ತಾ ಹಿಗ್ಗಿ [3] ॥ ೬ ॥
ಬಸವನಾ ಮಹಾತ್ಮೆ । ವಸುಧೆಯಲಿ ಹರಿದಿರಲು ।
ಜಸವ ಕೇಳುತ ಹರುಷ । ರಸವಡೆದ ಮಂತ್ರಿ ॥ ೭ ॥
ಮನದೊಳಗೆ ಬಸವಂಗೆ । ಮಗಳ ಕೊಟ್ಟೇನೆಂದು ।
ತನಗೆ ತನ್ನೊಳು ಮಂತ್ರಿ । ಘನ ಹರುಷವಾದ ॥ ೮ ॥
ಬಸವನಾ ಮಹಾತ್ಮೆಯ । ಪಸರಿಸುವಡಳವಲ್ಲ ।
ಶಿಶುವಿತ್ತು ಅವನನ್ನು । ವಶಮಾಡಿಕೊಂಬೆ ॥ ೯ ॥
ಎಂದು [4] ಯೋಚಿಸುತಾಗ [4] । ಬಂದು ಬಸವಯ್ಯಂಗೆ ।
ವಂದಿಸುತ ಕರೆದೊಯ್ದು । ನಂದು ನಿಜಪುರಿಗೆ ॥ ೧೦ ॥
ಕಲ್ಯಾಣ ಪುರಕವನ । ನಿಲ್ಲದಲೆ ಕರೆದೊಯ್ದು ।
ವಲ್ಲಭೆಗೆ ತೋರಿದನು । ಉಲ್ಲಾಸದಿಂದ ॥ ೧೧ ॥
ದೊರೆ ಮಂತ್ರಿ ಬಸವಂಗೆ । [5] ಎರಗಿ [5] ಗಂಗಾಂಬಿಕೆಯ ।
ಇರದೀವೆ ಕೈಕೊಳ್ಳಿ । ಭರವಸದೊಳೆಂದ ॥ ೧೨ ॥
ಬಲದೇವ ಮಂತ್ರಿ ತನ್ನ । ಲಲನೆ ಸಹಿತಲಿ ಬಂದು ।
ಚೆಲುವೆ ಗಂಗಾಂಬಿಕೆಯ । ಚರಣಕೆರಗಿಸಲು ॥ ೧೩ ॥
ಮಂತ್ರಿಯೆರಗಿ [6] ಸಲಾಗ [6] । ಸಂತೋಷದಿಂ ಬಸವ ।
ಕಂತು ಹರ ಬಲ್ಲನಿದ । ರಂತ ರಂಗವನು ॥ ೧೪ ॥
ಮಂತ್ರಿ ಮಾತಿಗೆ ಬಸವ । ಮುಂತೆ ಇದು ಪರಶಿವನ ।
ತಂತ್ರವೆನ್ನುತ ಮಾತಿ । ಗಂತೊಪ್ಪಿಕೊಂಡ ॥ ೧೫ ॥
ಅಕ್ಕ ನಾಗಾಂಬಿಕೆಯು । ಚಿಕ್ಕ ಸಂಗನ ಬಸವ ।
ಮುಕ್ಕಣ್ಣ ವರ ಸುತರು । ಅಕ್ಕರಿಂದಿರಲು ॥ ೧೬ ॥

---

1-1 ನ್ನೊ (ಒ, ಚ, ಜ.) 2-2 ನ್ನೆ (ಇ, ಗ, ಚ, ಜ, ಟ, ತ.) 3-3 ದ । ನಂದು ಮಂತ್ರೀಶ ॥ (ಒ, ಗ, ಚ, ಜ, ಟ.) * ಈ ಪದ್ಯ (ಅ, ಇ, ಉ, ಜ, ಡ, ತ, ದ, ಬ.) ಪ್ರತಿಗಳಲ್ಲಿಲ್ಲ. 4-4 ಅತಿವೇಗದಿಂ (ಅ, ಜ, ಟ, ಬ.) 5-5 ಇರದೆ (ಅ, ಬ.) 6-6 ಸೆವಪ್ಪಿ (ಅ, ಟ, ತ, ದ, ಬ.)

ಇತ್ತ ಮಂತ್ರಿಯು ತನ್ನ । ಪುತ್ರಿಯ ವಿವಾಹಕ್ಕೆ ।
ಸು[1] ತ್ರಲಾ[1] ಬಳಗವನು । ಮತ್ತೆ ಕರೆಸಿದನು ॥ ೧೭ ॥

ಪೇಳ್ದ ಮಾವಗೆ ಬಸವ ನಿ । ಮ್ಮಾತ್ಮಜೆಗೆ ಹರ ಮತದ ।
ಲೀಲೆ ನಡೆ ಶಿವದೀಕ್ಷೆ । ಗೆಯ್ಯಬೇಕೆನಲು † ॥ ೧೮ ॥

ನಿಮ್ಮ ಹರುಷವೆ ಎನ್ನ । ಕರ ಲೇಸು ಬಸವಯ್ಯ ।
ನಿಮ್ಮ ಗುರು ಸಂಗಮನಿಂ । ಗೆಯ್ಸಿ ದೀಕ್ಷೆಯನು † ॥ ೧೯ ॥

ಎಂದ ಮಾವನ ಮಾತಿ । ಗಂದು ಉಲ್ಲಸದಿಂದ ।
ನಿಂದು ಸ್ತುತಿಸಲು ಬಂದ । ನಂದು ಸಂಗಮನು † ॥ ೨೦ ॥

ಎನ್ನ ಪ್ರೀಯದ ಕಂದ । ನೆನೆದೇಕೆ ನೀ ಕರೆದೆ ।
ಅನುವನೆಲ್ಲವ ಪೇಳು । ಎನಲು ಸಂಗಮನು † ॥ ೨೧ ॥

ನಿನ್ನ ನೆನೆವರ ಮನದ । ಕೊನೆಯೊಳೋಲಾಡುವಗೆ ।
ಇನ್ನು ಪೇಳುವದೇನು । ನಿನ್ನ ಲೀಲೆಯನು † ॥ ೨೨ ॥

ಎಂದ ಬಸವನ ಮಾತಿ । ಗಂದು ಸಂಗಮದೇವ ।
ಬಂದು ಗಂಗೆಯ ಕರೆದು । ಕಂದಗರುಹಿದನು † ॥ ೨೩ ॥

ಇದುವೆ ಕ್ರಿಯಾ ಲಿಂಗ । ಇದುವೆ ಮೋಕ್ಷದ ಲಿಂಗ ।
ಇದರೊಳ್ಸಾಧಿಸುಯೆಂದು । ಶಿವದೀಕ್ಷೆಗೈದ † ॥ ೨೪ ॥

ವಚನ ॥ ಬಸವಣ್ಣನವರ ಮದುವೆಯ ಶೃಂಗಾರವಂ ಪೇಳ್ವೆನದೆಂತೆನೆ.

**ತ್ರಿವುಡೆ.**

ಶ್ರೀ ಗುರುವು[2] ಪ[2] ರಶಿವ ಕುಮಾರ ಸು । ರಾಗ ಬಸವಗೆ ಮಂತ್ರಿ ಕುವರಿಯ ।
ಆಗ ಮದುವೆಯ ಮಾಳ್ಪ ಸಂಭ್ರಮ – ದಲ್ಲಿ ತೊಡಗಿದರು ॥ ೧ ॥

ಪ್ರಥಮದಲಿ ಚಪ್ಪರಕೆ ವರಮತಿ । ಯುತದಬ್ಬೈದೆಯರಾಗ ಕಂಬವ ।
ಮಿತದ ವಾದ್ಯವು ಕಲಶ ಕನ್ನಡಿ – ಯೊಲಿಯೆ ಶೋಭನದಿ * ॥ ೨ ॥

ಅಷ್ಟವಿಧದರ್ಚನೆಯ ಮಾಡುತ । ಮುಟ್ಟಿ ಗುರುಹಿರಿಯರ್ಬೈದೆಯರಾಗ ।
ನೆಟ್ಟರೀಶಾನ್ಯದೆಸೆಯ ಭಾಗದಿ – ಗಟ್ಟಿಯಾಗಿ * ॥ ೩ ॥

ಮದುವೆ ಸಂಭ್ರಮದಲ್ಲಿ ಹಸಿ ಜಿಗು । ಟಾದ ಮೃತ್ತಿಕೆ ಸೋಸಿ ತಂದರು ।
ಮುದದಿ ಹಾಕಿದರಾಗ ಜಗುಲಿಯ – ಮುದ್ದು ಮುದ್ದಿನಲಿ * ॥ ೪ ॥

---

1-1 ತ್ರೇಳು (ಇ, ಚ, ಜ, ಟ, ಡ, ತ.) ; ಮುಂತೇಳು (ಒ.) † ಈ ಪದ್ಯಗಳು (ಇ, ಋ, ಪ.) ಪ್ರತಿಗಳಲ್ಲಿ ಮಾತ್ರವಿವೆ. 2-2 ಪ (ಅ, ಎ, ಒ, ಜ, ಟ.) * ಈ ಪದ್ಯಗಳು (ಅ, ಉ, ಎ, ಗ, ಚ, ಜ, ಟ, ಬ.) ಪ್ರತಿಗಳಲ್ಲಿಲ್ಲ.

ಮಂದಿರವು ಮುಖಸಾಲೆ ಮಂಟಪ । ಚಂದವೆಸೆವತಿ ಸೌಧ ಕಳಶಗ ।
ಳಿಂದಲೊಪ್ಪುವ ದ್ವಾರ ಚಾವಡಿ – ಯನ್ನು ಶೃಂಗರಿಸಿ ॥ ೫ ॥
ಮದನ ಮಂಟಪ ಚಪ್ಪರಂಗಳು । ಮುದದಿ ಬಿಗಿದತಿ ರತ್ನ ತೋರಣ ।
ಒದವಿದತಿ ಸಕಲಾತಿ ಕುಶಲದ – ಮೇಲು ಕಟ್ಟುಗ[1] ಳಿಂ[1] ॥ ೬ ॥
ಆಶ್ಚರ್ಯಕರಮಾದ ಮಂಟಪ । ಅರ್ಥಿಯಲಿ ಕುಚ್ಚುಗಳು ಮೆರೆಯಲು ।
ಮೋಕ್ಷಕನ್ನೆಯರಿರುವ ಸುಸ್ಥಲ – ವಿವಾಹ ಚಪ್ಪರವು ॥ ೭ ॥
[2] ನೆಲ್ಲಿ ನೇರಿಲು ಮಾವು ಕೊನೆಗಳು । ಅಲ್ಲಿ ಅರಳಿಯು ಆಲಬಸುರಿಯು [2] ।
ಪಲ್ಲವಿಸುತಿಹ ತಳಿರ ಚಪ್ಪರ – ವೆಸೆದುದರ್ಥಿಯಲಿ ॥ ೮ ॥
ಸಕಲ ಸಂಭ್ರಮದಿಂದ ಮದುವೆಗೆ । ಯುಕುತಿಯಲಿಯೆಲ್ಲವನು ಒದಗಿಸಿ ।
ಸಕಲಶಾಸ್ತ್ರಾಗಮ ಪ್ರವೀಣರ – ಕರೆಸಿದನು ಮಂತ್ರಿ ॥ ೯ ॥
ಕಳಶ ಕನ್ನಡಿ ವಾದ್ಯ ಶೋಭನ । ನಳಿನ ಮುಖಿರೈದೆಯರು ಹಿರಿಯರು ।
ಬಳಗದಾ ಗೃಹಗೃಹಕೆ ಇತ್ತರು – ಎಣ್ಣೆ ಅರಸಿನವ † ॥ ೧೦ ॥
ಗೌರಿ ಪೂಜೆಯಮಾಡಿ ಹಸೆಯೊಳು । ನಾರಿಯರು ಬಳಿದೊಟ್ಟು ಮುದದಲಿ ।
ವಾರಿರುಹ ಮುಖಿ ಗಂಗೆ ಸಹಿತಲೆ – ಮನದ ಹರುಷದಲಿ † ॥ ೧೧ ॥
ಬಂದರಾಕ್ಷಣ ಸತಿಯಶೋಭನ । ದಿಂದ ಬಾಗಿನ ವಿಡಿದು ಪಾಡುತ ।
ಅಂದು ಬಸವಗೆ ಬಾಲೆಗಂಗೆಗೆ – ಮಿಾಯಲೆರೆಸಿದರು ॥ ೧೨ ॥
ಕರಮೆಸೆವ ಕಮ್ಮೆಣ್ಣೆಯೊತ್ತುತ । ಪರಿಮಳದ ಪನ್ನೀರ ಜೆರೆಸುತ ।
ತರುಣಿಯರು [3] ನಲವಿಂದ ಪಾಡುತ [3] – ಎರೆದರಗ್ಗಣಿಯ ॥ ೧೩ ॥
ದ್ರವವನೊರಸುತ ಉಡಿಸಿದರು [4] ದು । ಕೂಲವನು ಕುಚ ಬಂಧಗಳು ಸಹ [4] ।
ಯುವತಿಯರು ಈರ್ವರಿಗು ಸಲೆ ಶೃಂ – ಗಾರ ಮಾಡಿದರು * ॥ ೧೪ ॥

ವಚನ ॥ ಮೋಕ್ಷಕನ್ನೆಯರು ಅಭ್ಯಂಗನವಂ ಮಾಡಿಸಿ, ದಿವ್ಯಾಂಬರವನುಡಕೊಟ್ಟು, ಆಭರಣಂಗಳಿಟ್ಟು, ಶೃಂಗಾರಮಂ ಮಾಡುತಿರ್ದರದೆಂತೆನೆ.

**ಜಂಪೆ.**

ಉಟ್ಟ ಎಳನೀರಗಾ । ವಿಯ ಸುಧೋತ್ರದಂಗಿಯನು ।
ತೊಟ್ಟು ಧರಿಸಿದ ಪಾಗ । ಸೃಷ್ಟೀಶ ಬಸವ ॥ ೧ ॥
ಸುತ್ತಿದನು ಚಿಮ್ಮುರಿಯ । ಸತ್ಯ ಪಾಲಕ ಬಸವ ।
ಮತ್ತದರ ಮೇಲಿಟ್ಟ । ಮುತ್ತಿನ ತುರಾಯ ॥ ೨ ॥

---

1-1 ಳ (ಆ, ಜ, ಟ, ಬ.) 2-2 ಅತ್ತಿ ಅಲವು ಅರಳಿಬಸುರಿಯು । ಉತ್ತರಣೆಯು ಮಾವಿನ । (ಅ, ಬ.) † ಈ ಪದ್ಯಗಳು (ಅ, ಉ, ಗ, ಚ, ಜ, ಟ, ಬ.) ಪ್ರತಿಗಳಲ್ಲಿಲ್ಲ. 3-3 ತಮುತಮುಗೆ ಪ್ರೀಯುದಿ (ಅ,ಎ,ಗ,ಚ,ಜ,ಟ.ಬ.) 4-4 ಅತಿ । ದಿವ್ಯ ತರದು ಕುಲಗಳು ಈರ್ವರಿಗೆ (ಬ.) * ಈ ಪದ್ಯ (ಅ, ಉ, ಎ, ಗ, ಚ, ಜ, ಟ, ಬ.) ಪ್ರತಿಗಳಲ್ಲಿಲ್ಲ.

ರನ್ನ ಗೆಲಸದ ರಮ್ಯ । ಹೊನ್ನುಂಗರವನಿಟ್ಟು ।
ಚಿನ್ನದಾ ಸರವಿಟ್ಟ । ತನ್ನ ಕೊರಳಿಡೆಗೆ ॥ ೩ ॥
ಗಂಟೆಚೌಕುಳಿ ಪದಕ । ಕಂಠಮಾಲೆಯನಿಟ್ಟು ।
ಒಂಟಿನೀಲವು ಕರ್ಣ । ಜಂಟಿಯೊಳಗಿಟ್ಟ ॥ ೪ ॥
[1] ಚ [1] ರಣ ಪೆಂಡೆಯವಿಟ್ಟು । ಮೆರವ ತಾಯತವಿಟ್ಟು ।
ಶರಣಮಣಿ ಬಸವ ಆ॰। ಭರಣವಳವಟ್ಟ ॥ ೫ ॥
ಅಂಗ ಶೃಂಗರವಾಗಿ । ಅಧಿಕ ದಿವ್ಯಾಂಬರವ ।
ಮಂಗಳಾತ್ಮಕ ಬಸವ । ಮೈಯೊಳಗೆ ಪ್ರೊದೆದ ॥ ೬ ॥
ಭಸಿತ ರುದ್ರಾಕ್ಷಿಗಳ । ಒಸೆದು ಧರಿಸಿದ ಬಸವ ।
ಕುಸುಮ ಶರಗಿಮ್ಮಡಿಯೊ । ಳೆಸೆದು ರಂಜಿಸಿದ ॥ ೭ ॥
ಅತ್ತಲಿರುತಿರೆ ಬಸವ । ಇತ್ತ ಗಂಗಾಂಬಿಕೆಗೆ ।
ಮತ್ತೆ ದಿವ್ಯಾಂಬರವ । ಅರ್ಥಿಯಿಂದುಡಿಸಿ ॥ ೮ ॥
ಓಲೆ ಮೂಗುತಿ ಕೊಪ್ಪು । ಮೇಲೆ ರನ್ನದ ಕುಸುಮು ।
ಕೀಲು ಚಿಂತಾಪೌಂಚಿ । ಕಡಗ ಹೊನ್ನ ಬಳೆಯು ॥ ೯ ॥
ಕೊರಳ ಮುತ್ತಿನ ಹತ್ತ । ಸರವು ಬಣ್ಣದ ಸರವು ।
ಸರಪಳಿಯು ಚಿನ್ನದ । ಸರ ಪದಕ ಸರವು ॥ ೧೦ ॥
ಕಾಲುಂಗರವು ಪಿಲ್ಲಿ । ಕಡೆಯ ಸರಪಳಿಗಳನು ।
ಕೀಲು ಜೆಡೆ [2] ಗೆಲಸ [2] । ದೊಡ್ಯಾಣ ನಡುವಿನಲಿ ॥ ೧೧ ॥
ಎಸೆವ ಮುತ್ತಿನ ಬಟ್ಟು । ನೊಸಲ ಮಧ್ಯದೊಳಿಟ್ಟು ।
ಮಿಸುನಿ ರನ್ನದ ತೋಳ । ಭಾಪುರಿಯನಿಟ್ಟು ॥ ೧೨ ॥
ಸಕಲ ಭರಣವ ತೊಟ್ಟು । ಸಾದು ನಯ್ಸ್ಪಣೆಗಿಟ್ಟು ।
ಅಖಿಳರೊಳು ಗಂಗಾಂಬೆ । ಮುಕುರದಂತಿಹಳು ॥ ೧೩ ॥
ಸುದತಿಯರು ಜನಗೂಡಿ । ಮದವಳಿಗರನು ಮಾಡಿ ।
ಮುದದಿ ಸೇಸೆಯ [3] ನೀ [3] ಡಿ । ಮುದ್ದು ಮುಖ ನೋಡಿ ॥ ೧೪ ॥
ಧರೆಯೊಳ್ಬಸವನ ಮದುವೆ । ಸುರರಿಗರುಹುವೆನೆಂದು ।
ಶರಧಿಗಿಳಿವಂದದಲಿ । ತರಣಿ ಧರೆಗಿಳಿದ ॥ ೧೫ ॥
ಇಂದು ಬಸವನ ಮದುವೆ । ಚಂದ ನೋಡುವೆನೆಂದು ।
ಬಂದ ಪೂರ್ವದ ಗಿರಿಗೆ । ಚಂದ್ರನತಿವೇಗ ॥ ೧೬ ॥

ವಚನ ॥ ಆ ವೇಳೆಯಲ್ಲಿ ಅಸ್ತಮಯ ಸಮಯವಾಗಲು, ಬಸವಯ್ಯನವರ ಮದುವೆಯ ಉತ್ಸಾಹಮಂ ಪೇಳ್ವೆನದೆಂತೆನೆ.

---

**1-1** ಛ (ಅ, ಜ, ಟ, ಬ.) 2-2 ಭರಣ (ಇ, ಒ, ತ.) 3-3 ನೂ (ಬ.)

**ಏಕತಾಳ-ಅರ್ಧರೇಕು.**

ಬಸವಂಗೆ ಬಾಸಿಂಗ – ಕುಶಲದಿಂ ಧರಿಸಿ ।
ಶಶಿಧರನ ಶರಣರ – ಸಂಗಡವೇ ಕರೆಸಿ ॥ ೧ ॥
ಹಸನಾದ ದಂಡಿಗೆಯ – ಒಸೆದು ಶೃಂಗರಿಸಿ ।
ಬಸವನೇರಲು ವಾದ್ಯ – ದೆಸೆಯ ಮೋಹರಿಸೆ ॥ ೨ ॥
ಸುರರ ದುಂದುಭಿ ಕಹಳೆ – ಮೊರೆಯೆ ಶಂಖಗಳು ।
ಪರಿ ಪರಿಯ ವಾದ್ಯ ವಿ – ಸ್ತರಿಸಲೆನ್ನಳವೆ ॥ ೩ ॥
ತಾಳ ಮದ್ದಳೆ ವೀಣೆ – ಮೇಳ ಸಂಭ್ರಮವ ।
ಪೇಳಲಳವೇ ರಾಗ – [1] ಗೀತ ವಾದ್ಯ [1] ಗಳು ॥ ೪ ॥
ಛತ್ರ ಚಾಮರ ಢಾಳು – ವಿಸ್ತರಿಸಲಳವೇ ।
ಎತ್ತಿ ನಂದಿಯ ಧ್ವಜ – ವರ್ಥಿಯಿಂ ನಡೆಯೆ ॥ ೫ ॥
ಭರದಿ ಪಾಠಕ ಭಟರು – ಬಿರುದ ಕೊಂಡಾಡೆ ।
ತರುಣಿಯರು ದೃಷ್ಟಿ ನಿ – ವಾಳಿಯಂ ಮಾಡೆ ॥ ೬ ॥
ಹರ ತನ್ನ ಪ್ರಮಥರ – ನೆರವಿಯೊಳ್ಬಂದು ।
ಭರದಿ ಆಗಂಬರ – ಸರಿಸದೊಳ್ನಿಂದ ॥ ೭ ॥
ಮೊರೆದವು ದೇವ ದುಂ – ದುಭಿಯು [2] ಭುಗಿಲೆಂದು [2]
ಸುರಿದವು ಪೂಮಳೆ – ತ್ವರಿತದಿಂ [3] ಬ [3] ಂದು ॥ ೮ ॥
ಸಕಲ ವಿನೋದದಿಂದ – ಸಂಗನ ಬಸವ ।
ಅಖಿಳ ಜನರ ಕೂಡಿ – ಅರ್ಥಿಯಿಂ ನಡೆದ ॥ ೯ ॥
ಬಂದು ಚಪ್ಪರದಲ್ಲಿ – ನಿಂದನರ್ಥಿಯಲಿ ।
ತಂದು ಪಿಡಿದರಾಗ – ಚಂದದಾರತಿಯ ॥ ೧೦ ॥
ಗಂಗೆಗೆ ತೊಂಡಿಲ – ಶೃಂಗರವ ಮಾಡಿ ।
ಸಂಗಡ ಸಕಲ ಸ್ತ್ರೀ । ಸನ್ನಾಹಗೂಡಿ ॥ ೧೧ ॥
ಬಂದಾಗ ಚಪ್ಪರ – ಹಸೆಯ ಜಗುಲಿಗೆ ।
ನಿಂದರು ಜವನಿಕೆ – ಸಂಧಾನದೆಡೆಗೆ ॥ ೧೨ ॥
ಗುರು ಹಿರಿಯರು ರಾಜ – ರ್ತಂಡುಲವ ಹಿಡಿದು ।
ಹರಸ್ತುತಿ ಮಾಡುತ್ತ – ಎಸೆದರ್ಭಕ್ತಿಯಲಿ ॥ ೧೩ ॥

ವಚನ ॥ ಇಂತು ಬಸವರಾಜಗೆ ಗಂಗಾಬಿಕೆಗೆ ಧಾರೆಯನೆರೆಯುವ, ಸಂಭ್ರಮವಂ ಪೇಳ್ವೆನದೆಂತನೆ.

---

1-1 ಗದ್ಯ ಪದ್ಯ (ಡ, ತ.) 2-2 ಭೋರೆಂದು । (ಬ, ಗ, ಜ.) 3-3 ಅ (ಬ.)

## ದ್ವಿಪದಿ.

ಪರಶಿವನ ವರ ಭಕ್ತ ಪರಮ ವಿರಕ್ತ ।
ಸರಸ ಸದ್ಗುಣಯುಕ್ತ ಸಹಜ ನಿಜ ಮುಕ್ತ ॥ ೧ ॥
ಮುಕ್ಕಣ್ಣನರಿವಿಡಿದು ಮುಂದಕ್ಕೆ ನಡೆದು ।
ಅಕ್ಕಿಗೊಡೆಯ ಮೆಟ್ಟಿ ಅತಿ ಹರುಷಪುಟ್ಟಿ ॥ ೨ ॥
ಅಕ್ಕರಿಂ ದೃಢವಿಡಿದು ಅಕ್ಕಿಯಂ ಪಿಡಿದು ।
ಮುಕ್ತಾಂಗನೆ ಗಂಗೆಯ ಮುಡಿಗೆ ಅಭಯವನು ॥ ೩ ॥
ಇತ್ತು ಸ್ಥಿರಬಾಳೆಂದು ಮಾಳ್ಕೆ ಹಸ್ತವನು ।
ಎತ್ತಿ ತಂಡುಲವೆರೆದನರ್ಥಿಯಿಂ ಬಸವ * ॥ ೪ ॥
ಹಸುಳೆ ಗಂಗಾಂಬಿಕೆಯು ಶಶಿಧರನ ನೆನೆದು ।
ಹಸೆಯ [1] ಮಣೆಯಂ [1] ಮೆಟ್ಟಿ ಅತಿ ಭಕ್ತಿ ಪುಟ್ಟಿ ॥ ೫ ॥

ಜಡಿದು ಅಕ್ಕಿಯ ಪಿಡಿದು ಕಡು ವೇಗ ಶಿವನ ।
ಮುಡಿಗೆ ತುಂಬೆಯ ಅರಳ ಮುಡಿಸುವಂದದಲಿ ॥ ೬ ॥

ನಾಡ ಜನ ಮೆಚ್ಚೆ ಬಸವನ ಮುಡಿಯ ಮೇಲೆ
ನೀಡಿದಳು ಮಹಗಂಗೆ ನೋಡೆ ಅಕ್ಕಿಯನು ॥ ೭ ॥

ಮುತ್ತಲ್ಲಿ ಬಂಧು ಜನರೆತ್ತಿ ಇಳುಹುತಲಿ ।
ಸತ್ಯರಿಗೆ ಧಾರೆಯೆರೆವವರ್ಥಿಯಂ ಪೇಳ್ವೆ ॥ ೮ ॥

ಬಂದು ಬಲದೇವ ಮಂತ್ರಿಯು ಭಕ್ತಿಯಲ್ಲಿ ।
ತಂದು ಕ್ಷೀರ ಘೃತವ ತನ್ನ ಹಸ್ತದಲಿ ॥ ೯ ॥

ಆದಿ ಶೃತಿ ಬುಧವರ್ಗ ವೇದವನ್ನೋದೆ ।
ಮೂದೇವ ಪತಿ ಮಂತ್ರ ಮುನಿಗಳು [2] ಪೇಳೆ [2] ॥ ೧೦ ॥

ಗುರು ಮೂರ್ತಿ ಜಂಗಮರು ಹರನ ಸ್ತುತಿಯೋದೆ ।
ಇರುತಲಾಕ್ಷಣದಲ್ಲಿ ಬಲದೇವ ಬಂದ * ॥ ೧೧ ॥

ಸತ್ಯ ಬಸವ ಗಂಗೆ ಹಸ್ತದೊಳು ಮಂತ್ರಿ ।
ಮತ್ತೆ ಕ್ಷೀರವನೆರೆದು ಮಾಡಿ [3] ದಾ [3] ಭಾಷೆ ॥ ೧೨ ॥

ಸತಿ ಪತಿಗಳ್ಹಸ್ತದಲಿ ಸಂಬಂಧ ಮಾಲೆಯಂ ।
ಪರಿಸಿ ಶಿವ ಸ್ತುತಿಯಿಂದ ಪಿಡಿಸೆ ಹಸ್ತದೊಳು * ॥ ೧೩ ॥

---

* ಈ ಪದ್ಯಗಳು (ಅ, ಉ, ಗ, ಚ, ಟ, ಬ.) ಪ್ರತಿಗಳಲ್ಲಿಲ್ಲ. 1-1 ಕಲ್ಲಂ (ಅ, ಇ, ಉ ಒ, ಟ, ಡ, ಬ.) 2-2 ಪೋದೆ (ಇ, ಒ, ಜ, ಟ.) 3-3 ಸಿದ (ಜ, ಟ.)



ಶ್ರೀ ಬಸವೇಶ್ವರ ಗಂಗಾಂಬಿಕೆಯರ ವಿವಾಹ (ಏ. ಆ. ದ್ವಿ. ಪದ್ಯಗಳು ೧-೧೩-೧-೧೭.)

ಪರಧನವು ಪರಸತಿಯರಿಗೆರಗದಾ ಭಾಷೆ ।
ಇದೆಕೊ ಕೊರಳ್ಗೆಯೆಂದು ಧರಿಸಿದನು ಬಸವ ॥ ೧೪ ॥

ಪರಪುರುಷರಿಗೆ ಮನವು ಅರಿಯದಾ ಭಾಷೆ ।
ಎಂದೆನುತ ಭಕ್ತಿಯೊಳ್ಗಂಗೆ ಅನುವಿಂದ ॥ ೧೫ ॥

ಪತಿಕೊರಳ್ಗಿದೆಕೊಯೆಂದು ಧರಿಸಿದಳು ಗಂಗೆ
ಸತ್ಯ ಭಾಷೆಯ ಮಾಡಿ ಸಕಲರೊಡನಾಡಿ ॥ ೧೬ ॥

ಸತಿಪತಿಗಳೀರ್ವರೂ ಸೊಗಸಿಂದ ಧರಿಸಿ ।
ಮತ್ತೆ ಹಸ್ತವು ಕೂಡಿ ಮನೆಗೆ ಬಿಜಮಾಡಿ ॥ ೧೭ ॥

ವಚನ ॥ ಇಂತು ಮದುಮಕ್ಕಳೀರ್ವರ ಮನೆಗೆ ಬಿಜಯಂಗೈಸಿ ಭೂಮವ ಸಲಿಸುತಿರ್ದರನೆಂತೆನೆ.

**ಭೂಮದ ಹಾಡು.**

ಮುತ್ತೈದೆಯರು ಕೂಡಿ ಮುತ್ತಿನಾ ಹಸೆಮಾಡಿ ।
ಅರ್ಥಿಯಿಂ ಭೂಮಕ್ಕೆಡೆಮಾಡಿ
ಗಲಿರಂದವಲ್ಲೆ ಇಳೆಗೊಡೆಯ ಬಸವನಲ್ಲೆ
ಶ್ರೀ ಗಂಗೆ ಭೂಮದಾ ಬಳಿಗೊಮ್ಮೆ ಸುಳಿದುನಿಲ್ಲೆ ॥ ಗಲಿ ॥ ॥ ೧ ॥

ಅಂಗನೆಯರತಿಶಯದಿ ಲಿಂಗ ಬಸವನಕೈ [1] ಯ [1] ।
ಗಂಗೆಗಮೃತದ ತುತ್ತ ಕೊಡಿಸಿದರು ॥ ಗಲಿ ॥ ॥ ೨ ॥

ಜಾತೆ ಗಂಗೆಯು ಪ್ರೀತಿ ಪ್ರಸಾದವ ಬಸವಗೆ ।
ಓತು ಬಳಗಕ್ಕೆಲ್ಲ ನಡಸಿದರು ॥ ಗಲಿ ॥ ॥ ೩ ॥

ರಾಶಿ ಬಳಗವು ಬಸವ ಶೇಷ ಪ್ರಸಾದವನು ।
ಲೇಸಿಂದ ಹರಸುತ್ತ ಸಲಿಸಿದರು ॥ ಗಲಿ ॥ ॥ ೪ ॥

ಇಳೆಯ ಕರ್ಮವನೆಲ್ಲ ಕಳೆದು ಮುಕ್ತಿಯ ಬೆಳೆಯ ।
ಉಳಿದಂತೆ ಹಸ್ತಗಳ ತೊಳೆದರೆಲ್ಲ ॥ ಗಲಿ ॥ ॥ ೫ ॥

ವಚನ ॥ ಈ ರೀತಿಯಲ್ಲಿ ಭೂಮವಂ ಸವಿದು, ಸಕಲ ವೈಭವದಿಂದ ವಿವಾಹ ಚಪ್ಪರಕ್ಕೆ ಕರೆದೊಯ್ದು ಗುರು ಹಿರಿಯರಿಗೆ ನಮಸ್ಕರಿಸಿ, ಸತಿಪತಿಗಳಂ ಹಸೆಯಲ್ಲಿ ಕುಳ್ಳಿರಿಸಿ, ಮುತ್ತೈದೆಯರು ಧವಳ ಶೋಭಾನೆಯಂ ಪಾಡಿದರದೆಂತೆನೆ.

---

* ಈ ಪದ್ಯಗಳು (ಅ, ಉ, ಗ, ಚ, ಟ, ಬ.) ಪ್ರತಿಗಳಲ್ಲಿಲ್ಲ. 1-1 ಯ್ಗೆ (ಇ, ಒ, ಖ, ಗ, ಚ.)

## ಶೋಭಾನೆ ಪದ.

ಶ್ರೀ ಗುರು ಬಸವಂಗೆ ಶಿವನ ಕುಮಾರಂಗೆ । ನಾಗ ಭೂಷಣನಂಘ್ರಿ ನಮಿಪನಿಗೆ ।
ಭೋಗಾದಿ ಮೋಕ್ಷವನೀಯುವ ದೇವಗೆ । ಶ್ರೀ ಗುರು ಬಸವ ರಾಜನಿಗೆ * ॥ಶೋಭಾನೆ ॥
ಸತ್ಯನಿಗೆ ಸಕಲ ವಿರಕ್ತನಿಗೆ ತ್ರೈಲೋಕ । ಮುಕ್ತನಿಗೆ ಮೂಲೋಕ ಕರ್ತನಿಗೆ ।
ತೆತ್ತೀಸ ಕೋಟಿ ದೇವರ್ಕಳ ಸಲಹುವ । ನಿತ್ಯನಿಗೆ ಪರಮ ಸ್ತುತ್ಯನಿಗೆ ॥ ಶೋ ॥ ॥ ೧ ॥
ದೇವರ ದೇವಗೆ ಸಕಲ ಸಂಜೀವಗೆ । ಭವಗಳ ಕಾವಗೆ ಮೋಕ್ಷವನೀವನಿಗೆ ।
ಭೂವಳಯ ಭಕ್ತರ್ಗೆ ಜೀವ ಕಾಮ್ಯಾರ್ಥವ । ಈವ ಸದ್ಗುರು ಬಸವ ದೇವನಿಗೆ ॥ಶೋ॥ ೨ ॥
ಶಶಿಮುಖಿಯರು ಕೂಡಿ ಬಸವಯ್ಯನೆಬ್ಬಿಸಿ । ಹಸುಳೆಗರಿಸಿನವನಿಡಿಸುವರೆ ।
ಬಸವಯ್ಯ ಶ್ರೀಗಂಗೆ ಹಸೆಯೊಳಗೆ ಕರವಿಡಿದು।ಕುಶಲದಿಂದೆಣ್ಣೆಯರಿಸಿನವನಿಡಿಸಿಯೆ ॥
ಮಂದಗಮನೆಯರು ದಿವ್ಯ ಗಂಧವನೆ ಹದಮಾಡಿ । ತಂದು ಬಸವಯ್ಯಗೆ ಕೊಡಲಾಗ ।
ತಂದು ಬಸವಯ್ಯಗೆ ಕೊಡಲು ಗಂಗಾಂಬಿಕೆಯ । ಇಂದುಮುಖಿ ಕಂಧರಕೊರಸಿದನು ॥
ಗಂಧದ ಬೊಟ್ಟಿಟ್ಟು ಗಮಕದಿಂದಕ್ಷತೆಯ । ತಂದು ನೊಸಲಿಗೆ ಧರಿಸಿದ ।
ತಂದು ನೊಸಲಿಗೆ ಧರಿಸಿ ದೃಷ್ಟಿಯನೆತ್ತಿ । ಬಂದು ಹಸೆಯಲ್ಲಿ ಕುಳಿತನು ॥ ಶೋ ॥ ೫ ॥
ಕನ್ನೆ ಗಂಗಾಂಬಿಕೆಯ ಚೆನ್ನೆಯರು ಎಬ್ಬಿಸಿ । ಇನ್ನು ಎಣ್ಣರಿಸಿನವ ಬಸವನಿಗೆ ।
ಇನ್ನು ಎಣ್ಣರಿಸಿನವ ಬಸವನಿಗೆ ಧರಿಸೆಂದು । ಕನ್ನೆಯರು ನಗುತ ನುಡಿದರು ॥ ಶೋ ॥
ಪದ್ಮಲೋಚನೆ ಗಂಗೆ ಎದ್ದು ಸೆರಗನೆ ಬಿಗಿದು । ಮುದ್ದು ಬಸವಯ್ಯನ ಕರವಿಡಿದು ।
ಮುದ್ದುಬಸವಯ್ಯನ ಕರವಿಡಿದುಕಸ್ತೂರಿ । ಕರ್ದಮವನೊಲಿದು ಧರಿಸಿದಳು ॥ ಶೋ ॥
ಮಂದಗಮನೆ ಗಂಗೆ ಗಂಧವಟ್ಟಲವಿಡಿದು । ಚಂದದಿಂ ನೊಸಲಿಗಿಡುವಾಗ ।
ಚಂದದಿಂ ನೊಸಲಿಗಿಡುವಾಗ ಶ್ರೀಗಂಗೆ । ಗಂಧ ಮೇಲಕ್ಕೆಎಳೆದಳು ॥ ಶೋಭಾನೆ ॥ ೮ ॥
ಗಂಧ ಅಕ್ಷತೆಯಿಟ್ಟು ತಂದುದೂಣಿಕ್ಯದ । ಅಂದು ಆರತಿಯ ಬೆಳಗುತಲಿ ।
ಅಂದು ಆರತಿಯ ಬೆಳಗಿದೃಷ್ಟಿಯನಿಟ್ಟು । ಬಂದು ಹಸೆಯಲ್ಲಿ ಕುಳಿತಳು ॥ಶೋ ॥ ೯ ॥

ವಚನ ॥ ಇಂತೀಪರಿಯಲ್ಲಿ ಮುತ್ತೈದೆಯರು ಶೋಭಾನೆಯಂ ಪಾಡುತ್ತ ಶ್ರೀ ಗಂಗೆಯಿಂದಾರತಿ ಬೆಳಗಿಸಿ, ತಾವು ಪರಾಕಿನ ಶೋಭಾನೆಯಂ ಪಾಡುತ್ತ, ಮದು ಮಕ್ಕಳೀರ್ವರಿಗು ಆರತಿಯಂ ಬೆಳಗುತಿರ್ದರದೆಂತೆನೆ.

## ಪರಾಕಿನ ಆರತಿ ಶೋಭಾನೆ. †

ಇಂದುಶೇಖರ ವಿಶ್ವೇಶ ಪರಾಕು । ಕಂದರ್ಪ ಭಸಿತವನಿಟ್ಟೆ ಪರಾಕು ।
ನಂದಿವಾಹನವೇರಿದವಗೆ ಪರಾಕೆಂದು । ಕುಂದಣದಾರತಿಯ ಬೆಳಗಿದರು ॥ ಶೋಭಾನೆ॥
ಫಾಲಲೋಚನ ಪರಬ್ರಹ್ಮ ಪರಾಕು । ನೀಲಲೋಹಿತ ನಿತ್ಯ ಲೋಲ ಪರಾಕು ।
ಬಾಲಚಂದ್ರನ ಸೂಡಿದವನೆ ಪರಾಕೆಂದು । ನೀಲದಾರತಿಯ ಬೆಳಗಿದರು ॥ಶೋ ॥೨ ॥

---

* ಈ ಪದ್ಯ (ಉ, ಗ.) ಪ್ರತಿಗಳಲ್ಲಿಲ್ಲ † ಈ ಪರಾಕಿನ ಶೋಭಾನೆ (ಖ.) ಪ್ರತಿಯಲ್ಲಿ ಮಾತ್ರವಿದೆ.

ಮೂರು ಲೋಕದ ಕರ್ತ ಮಹಿಮ ಪರಾಕು | ಮಾರ ಮಥನ ತ್ರಿಪುರಾರಿ ಪರಾಕು |
ಧೀರ ದೇವೇಶ ಮಹೇಶ ಪರಾಕೆಂದು | ಓರಣದಾರತಿಯ ಬೆಳಗಿದರು ||ಶೋಭಾನೆ||೩||
ಪೃಥ್ವಿ ಯೊಳ್ಮಾದಲಾಂಬೆ ಪುತ್ರ ಪರಾಕು | ನಿಃಸ್ತ್ರೀ ಗಂಗಾಂಬೆಯು ಗೆಲಿದೆ ಪರಾಕು |
ಸತ್ತ ಬೆನಕಗೆ ಪ್ರಾಣವಿತ್ತೆ ಪರಾಕೆಂದು | ಮುತ್ತಿನಾರತಿಯ ಬೆಳಗಿದರು ||ಶೋಭಾನೆ ||
ತುಂಗ ವಿಕ್ರಮ ಬಲದೇವನಳಿಯ ಪರಾಕು | ಸಂಗಮೇಶ್ವರ ಭಕ್ತ ಬಸವ ಪರಾಕು |
ಲಿಂಗ ಸಂಗಿಯು ತತ್ವ ಜ್ಞಾನಿ ಪರಾಕೆಂದು | ಮಂಗಳಾರತಿಯ ಬೆಳಗಿದರು || ಶೋ ||

ವಚನ || ಈ ಪರಿಯಲ್ಲಿ ಆರತಿಗಳಂ ಬೆಳಗಿ, ಉಲ್ಲಾಸದಿಂದ ನಾನಾವಿಧ ಪುಷ್ಪದ ಚೆಂಡುಗಳಂ ಗಂಧದ ಪುಡಿಯಂ ತಟ್ಟೆಯೊಳಿಟ್ಟು, ಮದುಮಕ್ಕಳೀರ್ವರ ಎದುರೆದುರಿಗೆ ಕುಳ್ಳಿರಿಸಿ, ಚೆಂಡನಾಡಿಸಿದರದೆಂತೆನೆ.

**ಚೆಂಡಿನ ಹಾಡು.**

ಚೆಂಡನಾಡಿದರು – ಹೂವಿನ – ಚೆಂಡನಾಡಿದರು |
ದಂಡನಾಯಕ ಬಸವ ಗಂಗೆ | ದಂಡೆ ತೊಂಡಿಲ್ ಬಾಸಿಂಗದಿ ||ಚೆಂಡ|| || ಪ ||

ಮಿಸುನಿಗೆಲಸದ – ಚೆಲ್ವ – ಉಯ್ಯಾಲೆ ಮಣೆಯೊಳು |
ಎಸೆವ ರಜತ ಸರಪಳಿಯು | ಕುಸುಮಗಂಧಿ ಹೆಣ್ಣು ತೂಗೆ || ಚೆಂ || || ೧ ||

ರಾಜ ಬಸವನು – ಚೆಲ್ವ – ತೇಜದಿಂದಲಿ |
ಜಾಜಿ ಹೂವ್ವ ಚೆಂಡ ಪಿಡಿದು | ರಾಜೀವಾಕ್ಷಿ ಗಂಗೆಗಿಟ್ಟು || ಚೆಂ || || ೨ ||

ಪಲ್ಲವ ಪಾಣಿಯು – ಚೆಲ್ವ – ಚಿಗುರು ಬೋಣಿಯು |
ಮಲ್ಲಿಗೆ ಹೂವಿನ ಚೆಂಡ ಗಂಧ | ದುಡಿಂಯೊಳದ್ದಿ ಬಸವಗಿಟ್ಟು || ಚೆಂ || || ೩ ||

ದೇವ ಬಸವನು – ತಾನು – ಠೀವಿಯಿಂದಲಿ |
ಸೇವಂತಿ ಹೂವಿನ ಚೆಂಡ ಪಿಡಿದು | ಭಾವೆ ಗಂಗೆ ಮೇಲೆಯಿಟ್ಟು || ಚೆಂ || || ೪ ||

ಸ್ವರ್ಣ ಬಣ್ಣ ದ – ಮೈಯ್ಯ – ಸುದತಿ ಗಂಗೆಯು |
ಸುರಗಿ ಹೂವಿನ ಚೆಂಡಿನಿಂದ | ಸೊಗಸು ಬಸವನ ಮುಖಕ್ಕಿಟ್ಟು || ಚೆಂ || || ೫ ||

ನಂದಿ ಬಸವನು – ತಾನಾ – ನಂದದಿಂದಲಿ |
ನಂದವರ್ತಿ ಹೂವಿನಿಂದ | ಗಂಗೆ ನೊಸಲಿಗಿಟ್ಟು ನಗುತ || ಚೆಂ || || ೬ ||

ಪದುಮ ಗಂಧಿಯು – ಗಂಗೆ – ಒದಗಿ ಧೈರ್ಯದಿ |
ಪಾದ್ರಿ ಹೂವಿನ ಪಚ್ಚೆತೆನೆಯ | ಚೆಂಡೊಳಿಟ್ಟಳಧಿಪನನ್ನು || ಚೆಂ || || ೭ ||

ವಚನ || ಇಂತಿ ಉಲ್ಲಾಸದಿಂದ ಚಂಡಾಡಿಸಿ, ವೀಳ್ಯಮಂ ನಡೆಸಿ, ಮದುಮಕ್ಕಳಂ ಮನೆಗೆ ಬಿಜಯಂಗೈಸಲು ಬೆಳಗಿನ ಸೂಚನೆ ತೋರುತಿರ್ದುದದೆಂತೆನೆ.

* ಈ ಚಂಡಿನ ಹಾಡು(ಅ, ಉ, ಒ, ಚ, ಜ, ಟ, ಬ) ಪ್ರತಿಗಳಲ್ಲಿಲ್ಲ.

**ಜಂಪೆ**

ಅಂದು ಬಸ [1] ವೋತ್ಸವವ [1] | ಇಂದು ಧರನಿಗೆ ಪೇಳ್ವ |
ಚಂದದಲಿ ತಾಮ್ರ ಶಿಖಿ | ಅಂದು ಕೂಗಿದವು || ೧ ||

ಈಶ ವರ ಭಕ್ತ ಬಸ | ವೇಶಗತಿ ಜನದ ಸೆಕೆ |
ಬೇಸರವ ಕಳೆವಂತೆ | ಬೀಸೆ ತಂಗಾಳಿ || ೨ ||

ಪರಿ ಪರಿಯ ರಾಗ ರಚ | ನೆಗಳಿಂದ ಖಗ ಜಾತಿ |
ಅರಿದು ಬಗೆ ಬಗೆಯಲ್ಲಿ | ಉಲುಹು ಮಾಡಿದವು || ೩ ||

ಲೇಸಿನಲಿ ಶಶಿ ಪಡುವ | ಲೋಸರಿಸೆ ಕುಮುದ ಅವ |
ನಾಸೆ ನಮಗೇಕೆಂದು | ಓಸರಿಸೆ ಮುಖವ || ೪ ||

ಪಗಲೊಡೆಯ ನಮ್ಮ ಸಖ | ಜಗದೊಳಗೆ ಎಣೆಯಾರು |
ಮಿಗೆ ಹೆಚ್ಚಿ ಪದ್ಮಗಳು | ನಗುತಲರಳಿದವು || ೫ ||

ಸೊಂಪಡರಿ ಜಗಕೆ ಬಲು | ಇಂಪಡರಿ ಪೂರ್ವದಲಿ |
ಸಂಪಿಗೆಯ ಅರಳಂತೆ | ಕೆಂಪು ಅಡರಿದುದು || ೬ ||

ಉರವಣಿಸಿ ಸಾಸಿರದ | ಕಿರಣಗಳ ಬೀರುತಲಿ |
ಭರದಿ ಪೂರ್ವಾದ್ರಿಯಲಿ | ತರಣಿ ಅಡರಿದನು || ೭ ||

ಹಿರಿಯ ಕಿರಿಯರು ನಾರಿ | ಧರೆಯ ಖಗ ಮೃಗ ಜಾತಿ |
ತರಣಿಯುದಿಸಲು ಹೆಚ್ಚಿ | ಹರುಷವೇರಿದವು || ೮ ||

ವಚನ || ಆ ಸಮಯದಲ್ಲಿ ತರಣಿ ಉದಯವಾಗಲು, ಸಕಲ ವಿನೋದ ದಿಂದ ಹೊತ್ತುಗಳೆದರದೆಂತನೆ.

**ಏಕತಾಳ–ಅರ್ಧರೇಕು.**

ಉದಯ ಕಾಲದಿ ಬಸವ – ಮ [2] ದ [2] ಹರನ ನೆನೆದು |
ಮುದದಿ ಷಡಕ್ಷರಿಯ – ಹೃದಯದಲಿ ನಿಲಿಸಿ || ೧ ||

ಜ್ಞಾನಾಮೃತದ [3] ಭ [3] ಕ್ತಿ – ಸ್ನಾನವನು ಮಾಡಿ |
ತಾನುಟ್ಟ ಚಿತ್ಪ್ರಕಾಶ – ದಂದದಾ ಮಡಿಯ || ೨ ||

ಶಶಿಯನೇಳಿಪ ಶುಭ್ರ – ಭಸಿತವನು ಧರಿಸಿ |
ಎಸೆವ ರುದ್ರಾಕ್ಷಿ ಅಷ್ಟ – ತನುವಿನೋಳ್ಧರಿಸಿ || ೩ ||

1-1 ವನಪುಮನೆ (ಉ, ಗ, ಚ.) 2-2 ಲ (ಗ.) 3–3 ಮು (ಒ,ಖ,ಗ,ಚ,ಜ,ಟ.)

ಮಂಗಳಾತ್ಮಕ ಜ್ಯೋತಿ – ಅಂಗ ಬೆಳಗಿನಲಿ |
ಹಿಂಗದಲಿ ಚಿ [1] ದ್ಘನ – ಲಿಂಗ [1] ವನು ನೋಡಿ || ೪ |
ಕಲಶಾಮೃತದಭಿಷೇಕ – ಚೆಲುವಿಂದ ನೀಡಿ |
ಒಲಿದು ಶಮೆ ದಮೆ ಗಂಧ – ವೊಲವಿಂದ ಧರಿಸಿ || ೫ ||
ಅಕ್ಷಯ ಅಗಣಿತಾ – ಧ್ಯಕ್ಷ ಆಯುವಿನ |
ಮೋಕ್ಷಾಧ್ಯಕ್ಷಗೆ [2] ತಿ – ಲಾಕ್ಷತೆಯ [2] ಧರಿಸಿ || ೬ ||
ನಿರ್ಮಲ ಜ್ಞಾನದಿಂ – ಪ್ರೇರ್ಮೆಯಿಂ ಶಿವಗೆ |
ಧರ್ಮ ರೂಪ ಸಾಹಸ್ರ – ದಳವನರ್ಪಿಸಿದ || ೭ ||
ಧೂಪ ದೀಪ ತಾಂಬೂಲ – ನೈವೇದ್ಯದಿಂದ |
ಕಾಪಾಲಿಯರ್ಚನೆಯ – [3] ಕ್ರಮ [3] ದಿಂದ ಮಾಡಿ || ೮ ||
[4] ಪರಮ [4] ಗುರು ತೀರ್ಥ ಪ್ರ – ಸಾದಮಂ ಸವಿದು |
ಹೊರವಂಟು ಮುಖಸಾಲೆಗೆ – ಹರುಷದಿಂ [5] ಬಂದು [5] || ೯ ||
ನವರತ್ನ ಖಚಿತ ಪೀಠ – ದಲ್ಲಿ ಮಂಡಿಸಿದ |
ಕಿರಿಯ ಗೆಳೆಯರ ಕೂಡೆ – ಸರಸವಾಡುತಲಿ || ೧೦ ||
ವೇದ ಶಾಸ್ತ್ರಗಳರ್ಥ – [6] ಭೇ [6] ದಿಸಿಕೊಳುತ |
ಆದಿನವ ಕಳೆಯುತ್ತ – ಇರುವ ಸಮಯದಲಿ || ೧೧ ||

ವಚನ || ಆಸಮಯದಲ್ಲಿ ಅಸ್ತಮಯವಾಯಿತದೆಂತೆನೆ.

**ತ್ರಿವುಡೆ. ‡**

ಪರಮ ಶ್ರೀ ಗುರು ಬಸವನುತ್ಸವ | ಹರಗೆ ಪೇ [7] ಳಲು ಪೋಪೆನೆಂಬೊಲು [7] |
ತರಣಿ ಪಡುಗಡಲಿಳಿದು ಪೋದನು – ಮಿಕ್ಕು ಮಿಾರುತಲಿ || ೧ ||

ಸಂ [8] ಜೆ [8] ರಾಗವು ಸಾರಿದೋರಿತು | ಕಂಜ ರಿಪು ಕಳೆ ಪೂರ್ವಕಡರಿತು |
ಕಂಜ ಮುಗಿದವು ಕುಮುದ ವಿಕಸಿತ – ಸಂಜೆದೋರಿದುದು || ೨ ||

ಭೂರಿ ಜನ ಪಶುವೂರ ಸಾರ್ದವು | ಏರಿದವು ಖಗ ಮರವ ಹರುಷದಿ |
ತೋರಿದವು ಶಾರ್ದೂಲ ಭಲ್ಲುಕ – ನಿ [9] ಶಾಚರಂಗಳಿಗೆ [9] || ೩ ||

ಶಶಿಯ [10] ರುಚಿ [10] ಶಾರ್ವರಿಯ ತುಂಬಿತು | ಎಸೆದವಂಬರದಲ್ಲಿ ತಾರೆಗಳ್ |
ದೆಸೆ ದೆಸೆಯ ನೋಡಿದರೆ ಮಲ್ಲಿಗೆ – ಕುಸುಮವಿದ್ದಂತೆ || ೪ ||

1-1 ದ್ರೂಪ - ನವಲಿಂಗ (ಒ, ಟ.) 2-2 ನಿಟೆ - ಲಾಕ್ಷಗೆ (ಒ, ಜ.) 3-3 ಕರುಣ (ಅ, ಜ, ಟ, ಬ.) 4-4 ವರ (ಒ, ಟ, ತ.) 5-5 ಕುಳಿತು (ಅ, ಬ.) 6-6 ವೋ (ಒ, ಚ) ‡ ಈ ತ್ರಿವುಡೆ (ಇ, ಗ, ಚ, ಡ, ತ.) ಪ್ರತಿಗಳಲ್ಲಿಲ್ಲ 7-7 ಳುವೆನೆಂದು ಪೋದೊಲು | (ಬ.) 8-8 ದ್ಯ (ಅ, ಉ, ಬ.) 9-9 ಮುಷ್ಟಮಾತ್ರದಲಿ (ಜ.) 10-10 ಕಳೆ (ಜ.)

ರಾತ್ರಿಯಿನ ರಚಯಲಿ ಮನೆ ಮನೆ । ಜ್ಯೋತಿಯೆಸೆದವು ಸಕಲ ವಿಭವದಿ ।
ನೂತನದ ವಿಟ ಜನ ವಿನೋದದ – ಪ್ರೀತಿ ಪೊಣ್ಮಿದುದು ॥ ೫ ॥

ವಚನ ॥ ಆ ರಾತ್ರಿಯಲ್ಲಿ ಬಸವಯ್ಯನ ನಾಗವಲಿಯ ಸಂಭ್ರಮವಂ ಪೇಳ್ದಿನದೆಂತೆನೆ.

**ದ್ವಿಪದಿ.**

ಶ್ರೀ ಮಹಾ ದೇವನ ಶೃಂಗಾರ ನೆಲೆಯೊ ।
ಆ ಮಹಾ ಪ್ರಮಥರ್ಕಳರ್ಥಿಯ ಸ್ಥಲವೊ ॥ ೧ ॥
ಅಂತೊಪ್ಪುತ ವಿವಾಹವಧಿಕ ಚಪ್ಪರದಿ ।
ಮುಂತೆ ಕಂಬದ ಮೊದಲ ವೇದಿಕೆಯ ತೀರ್ಚಿ ॥ ೨ ॥
ಸೃಷ್ಟಿಗಚ್ಚರಿ ದಿವ್ಯ ಚಪ್ಪರದ ಮಧ್ಯ ।
ಅಷ್ಟದಳ ಕಮಲವನು ಅಲ್ಲಿ ನಿರ್ಮಿಸುತ ॥ ೩ ॥
ಇಂದ್ರಾಗ್ನಿ ಯಮ ನೈಋತ್ಯ ವರುಣ ವಾಯವ್ಯ ।
ಚಂದ್ರ ಧರ ವೃಷಭ ತುರಂಗರಂ ನಿಲಿಸಿ ॥ ೪ ॥
ವೇದ ಶಾಸ್ತ್ರಾಗಮದ ಅಧಿಕ ಶಿವ ಬುಧರು ।
[1] ಓದಿ [1] ಸುತ ಮಧ್ಯದಲಿ ಪೂಜಿಸುತ ಶಿವನ ॥ ೫ ॥
ಸಕಲ ಬುಧ ಜನ ಸಹಿತ ಸನ್ನಾಹಗೂಡಿ ।
ಅಖಿಳವಿಧದುಪಕರಣ ಅರ್ಥಿಯಿಂ ನಡೆಸಿ ॥ ೬ ॥
ಶತ ಕೋಟಿ ಕರ್ಮ ಹರ ಶಾಶ್ವತದ ದರ್ಭೆ ।
ಕ್ರತು ಮುಖ್ಯ ಬ್ರಹ್ಮ ಕರ್ಮದ ಶಾಸ್ತ್ರವಿಧಿಯ ॥ ೭ ॥
ಮಿತಿ ತಪ್ಪದಣುಮಾತ್ರ ಮಿಗಿಲಿಲ್ಲವೆನಿಸಿ ।
ಅತಿಶಯದ ನಾಗವಲಿಯರ್ಥಿಯಲಿ ಬೇಗ ॥ ೮ ॥
ಮದುಮಕ್ಕಳಂ ಮಿಾಯಿಸಿ ಮಡಿವರ್ಗವಿತ್ತು ।
ಮುದದಿ ಮುತ್ತೈದೆಯರು [2] ಮುಂದೆ [2] ನಡೆಸಿದರು ॥ ೯ ॥

ವಚನ ॥ ಅ ವೇಳೆಯಲ್ಲಿ ಸ್ತ್ರೀ ಸನ್ನಾಹಗೂಡಿ, ಒರಳಕ್ಕಿಯಂ ಹೊಯ್ದು ಪಾಡಿದರದೆಂತೆನೆ.

**ಒರಳಕ್ಕಿ ಹಾಡು. ರಾಗ – ಮಲಹರಿ – ಆದಿತಾಳ.**

ಸುವ್ವಿ ಸುವ್ವಿ ಸೋಮ ಧರೆಗೆ । ಸುವ್ವಿ ಸುವ್ವಿ ಶೂಲ ಕರಗೆ ।
ಸುವ್ವಿ ಸುವ್ವಿ ಸುರರ ಕರ್ತೃಗೆ ಪರಮ ಗುರುವಿಗೆ ॥ ಪ ॥

---

1-1 ಬಂಧಿ (ಅ, ಡ, ಬ.) 2-2 ವಿಧಿಯ (ಎ, ಗ, ಜ.)

ಕಮಲ ಮುಖದ ಕಲಶ ಕುಚದ । ಕನಕ ಲತೆಯ ಕಾಂತಿಮಯದ ।
ವಿಮಲ ಗುಣದ ವೀರಶೈವ ಹೆಣ್ಗಳೆಲ್ಲರು ।
ದ್ಯುಮಣಿ ಕೋಟಿ ದಿವ್ಯ ತೇಜ । ನಣುಗ ಬಸವ ವಿವಾಹದರ್ಥಿ ।
ರಮಣಿ ರಾಜ ಮುಖಿಯರೊಲಿದುಚ್ಚಳಿಸಿರಕ್ಕಿಯ ॥ ಸು ॥ ॥ ೧ ॥
ಅಡಿಯು ಅಂಚೆ ನಡೆಯಲೊಪ್ಪ । ವಿಡುವ ಮಧ್ಯ ನೀಲವರ್ಣ ।
ಜಡಿವ ಕನ್ನೆವೆಣ್ಗಳೆಲ್ಲ ಮುಸಲವಿಡಿದು ಪಾಡುತ ।
ತೊಡರು ಕಾಲು ಕಡೆಯ ಝಣರು । ಇಡುವ ಕಂಕಣ [1] ಧ್ವನಿಗ ।
ಳೊಡನೆ [1]ಪೆಣ್ಗಳೆಲ್ಲ ಮುಸಲ ವಿಡಿದು ಪಾಡುತ ॥ ಸು ॥ ॥ ೨ ॥
ವಸುಧೆ ಜೀವ ಜಾಲ ಸಕಲ । ಚರಾಚರಂಗಳಿಗೊಡೆಯನಾದ ।
ಬಸವ ಭಕ್ತಿ ಎಸೆವ ಶಿವನ ಅಸುವ ತಾಳ್ದಗೆ ।
ಶಶಿಯ ಸೂಡಿದಭವನಂಘ್ರಿ । ಯೊಸೆದು ನೆನೆದು ಕರ್ಮದೂರ ।
ಬಸವ ಬಸವ ಶರಣು ಶರಣುಯೆಂದು ಪಾಡುತ ॥ ಸು ॥ ॥ ೩ ॥
ಕಡಗ ಕಂಕಣಗಳ ಕೈಯ್ಯ । ಒಡನೆ ಚಂದನಂಗಳೊನಕೆ ।
ವಿಡಿದು ನಡೆದು ಜಡಿದು ಮೇಲಕ್ಕಿಡುವ ಸಡಗರ ।
ನಡುವು ಬ [2] ಳುಕಿ [2] ಸುತ್ತ ಕೈಯ್ಯ । ಒಡನೆ ಬೀಸಿ ಸುವ್ವಿಯೆಂದು ।
ಮೃಡನ ಪಾಡುಚ್ಚಳಿಸುವಂಥ ಬೆಡಗುವೆಣ್ಗಳು ॥ ಸು ॥ ॥ ೪ ॥
ಓಲೆ ಕೊಪ್ಪು ಕೀಲು ಬಳೆಯು । ಮೇಲೆ [3] ಜಡೆಯ ಕಳಶವದುರೆ [3] ।
ವಾಲಿ ವಾಲುಚ್ಚಳಿಸಿ ಕಿರಿಯ ಬೆಮರನಿಕ್ಕುತ ।
ಬಾಲೆ ಜನರ ಭಾವ ಬಲಿದು । ಲೀಲೆಯಿಂದ ಶಿವನ ಮನದಿ ।
ಲೋಲ ಲೋಚನೆಯರೊಲಿದುಚ್ಚಳಿಸಿರಕ್ಕಿಯ ॥ ಸು ॥ ॥ ೫ ॥
ಸಂಗಮೇಶ ಬಸವರಾಜ । ಲಿಂಗ ನಿವಹದರ್ಥಿ ಕೋಮ ।
ಲಾಂಗನೆಯರು ಒಲಿದು ನಲಿದು ಹಲವು ರಾಗದಿಂ ।
ಕಂಗಳರ್ಥಿ ಕರ್ಮದೂರ । ಹಿಂಗದಖಿಳಲೋಕದೊಡೆಯ ।
ಸಂಗಮೇಶ ಶರಣು ಶರಣು [4] ಸಲಹು ನಮ್ಮನು [4] ॥ ಸು ॥ ॥ ೬ ॥
ರನ್ನ ಗಿರಿಯ ರಾಜ ಸುವ್ವಿ । ಪನ್ನಗೇಂದ್ರಾಭರಣ ಸುವ್ವಿ ।
ಕನ್ನೆಗೊಲಿದ ದೇವ ಸುವ್ವಿ ಕಾಮ ಸಂಹರ ।
ಮುನ್ನ ಸುರರ ಸಲಹಿ ಗರಳ । ವನ್ನು ಧರಿಸಿದಂಥ ದೇವ ।
ಚೆನ್ನಮಲ್ಲಿಕಾರ್ಜುನಯ್ಯ ಸಲಹು ನಮ್ಮನು ॥ ಸು ॥ ॥ ೭ ॥

---

1–1 ಗಳ ಧ್ವನಿಯ । ಗಡಣ (ಎ, ಚ.) 2-2 ಗ್ಗಿ (ಜ, ಟ.) 3-3 ಕುಚದ ಮಧ್ಯಹಾರ (ಖ.) * ಈ ಪದ್ಯ (ಚ.) ಪ್ರತಿಯಲ್ಲಿಲ್ಲ. 4-4 ಯಂದು ಪಾಡುತ ॥ (ಖ.)

ವಚನ ॥ ಇಂತು ಸ್ತ್ರೀಯರು ಒರಳಕ್ಕಿಯಂ ನಿಲ್ಲಿಸಿ, ಮದುಮಕ್ಕಳಂ ಕುಳ್ಳಿರಿಸಿಕೊಂಡು ವಿನೋದದಿಂದ ಜೋಗುಳವಂ ಪಾಡಿದರದೆಂತೆನೆ.

**ಜೋಗುಳ ಪದ.**

ಜೋ ಜೋ ಈಶ ಜ್ಯೋತಿ ಪ್ರಕಾಶ ।
ಜೋ ಜೋ ದೇವ ಭಕ್ತ ಸಂಜೀವ ॥ ಜೋ ಜೋ ॥ ॥ ಪ ॥
ಭಕ್ತಿ ಕಲ್ಪದ್ರುಮದ ಕಂಬವಂ ಹೂಡಿ ।
ಸತ್ಯ ಸಮ್ಯಜ್ಞಾನದಾ ಸರಪಳಿಯ ಬಿಗಿದು ।
ಮುಕ್ತಿನೆಲೆ ತೊಟ್ಟಿಲೊಳು ಮುದದಿ ಶಿವಶಿಶುವ ।
ಮುಕ್ತ್ಯಾಂಗನೆಯರು ಮುದವೆತ್ತಿ ತೂಗಿದರು ॥ ಜೋ ಜೋ ॥ ॥ ೧ ॥
ಆದಿ ಅನಾದಿಯಿಲ್ಲದತ್ತತ್ತಲಂದು ।
ಮೂದೇವ ಮೂರ್ತಿಗಳು ಮುನ್ನಿಲ್ಲದಂದು ।
ನಾದ ಬಿಂದು ಕಳೆ ಧ್ವನಿದೋರದಂದು ನಾಲ್ಕು ।
ವೇದಕ್ಕಗೋಚರವಾದಂಥ ಶಿಶುವೆ ॥ ಜೋ ಜೋ ॥ ॥ ೨ ॥
ಸತ್ತು ಹುಟ್ಟುವ ಸಕಲ ದೈವರ ಗಂಡ ।
ಭಕ್ತಿಯರಿಯದ ಬಣಗು ದೈವರ ಮಿಂಡ ।
ಮೃತ್ಯು ಮಾರಿಯ ಮಾರಿದವನೆ ಮಾರ್ತಾಂಡ ನಮ್ಮ ।
ಭಕ್ತರಿಗೆ ಶಿಶುವಾಗಿ ಇತ್ತ ಮೊಲೆಯುಂಡ ॥ ಜೋ ಜೋ ॥ ॥ ೩ ॥
ಸಿಂಧು ಬಲ್ಲಾಳನಾನಂದದಾ ಶಿಶುವೆ ।
ಮುಂದೆ ಅಮ್ಮವ್ವೆಯ ಮುಕ್ತಿಯಾ ಶಿಶುವೆ ।
ಚಂದಯ್ಯನರ್ಥಿಯಾ [1] ನಂದದಾ [1] ಶಿಶುವೆ ।
ಬಂಬೆ ನೀ ಬಸವನ ಭಕ್ತಿಯಾ ಶಿಶುವೆ ॥ ಜೋ ಜೋ ॥ ॥ ೪ ॥
ನಿಂಬೆ ಚೋಳಕ್ಕನೊಳುಂಬುವದ ಕಲಿತೆ ।
ಸಂಭ್ರಮದ ಸಾಕ್ಷಿ ನುಡಿ ಕಿನ್ನರಯ್ಯನಿಂ ಕಲಿತೆ ।
ನಂಬಣ್ಣನೊಡನಾಡಿ ನಡೆದಾಟ ಕಲಿತೆ ನಮ್ಮ ।
ಕುಂಬಾರ ಗುಂಡಯ್ಯನೋಳ್ಕುಣಿದಾಟ ಕಲಿತೆ ॥ ಜೋ ಜೋ ॥ ॥ ೫ ॥
ಸತ್ಯಕ್ಕ ಚಂಗಳೆ ಸಂಗನಾ ಶರಣೆ ನಾಗಮ್ಮ ।
ಮುಕ್ತಾಯಿ ಮಹಾದೇವಿ ಮುಗ್ಧ ಸಂಗವ್ವೆ ।
ಭಕ್ತಿಗೆ ಶಿಶುವಾದ ಭಾಳಾಕ್ಷ ಶಿವನನಿಂತು ।
ಉತ್ತಮದ ಶರಣೆಯರು [2] ಚಿತದಿಂ ತೂಗಿ [2] ॥ ಜೋ ಜೋ ॥ ॥ ೬ ॥

1-1 ಕಂಪಸೀ (ಅ, ಟ, ಬ. ) ; ಹೊಂದಿ (ಉ, ಗ.) 2-2 ತೂಗಿದರಾಗ ॥ (ಒ, ಖ,)

ಉನ್ನತದ ಶರಣೆರೆಲ್ಲರು ಒಂದುಗೂಡಿ ।
ಪನ್ನ [1] ಗೇಂದ್ರನ ಬೇಡಿ [1] ಪಾಡಿ ಕೊಂಡಾಡಿ ।
ಕನ್ನೆವೆಣ್ಣುಗಳೆಲ್ಲ ತೂಗಿ ಪಿರಿದಾಡಿ ನಮ್ಮ ।
ಚೆನ್ನಮಲ್ಲಯ್ಯನ ಶಿಶು [2] ವೆಂದು [2] ತೂಗಾಡಿ ॥ ಜೋ ಜೋ ॥ ॥ ೭ ॥

ವಚನ ॥ ಆ ವೇಳೆಯಲ್ಲಿ ನಾರಿಯರೆಲ್ಲರೂ ಜೋಗುಳಮಂ ಪಾಡಿ ಬಾಗಿನಮಂ ತೀರಿಸಿ, ಶ್ರೀ ಗಂಗೆಯ ಹಸ್ತಕಮಲದಿಂದ ಶ್ರೀ ಬಸವಣ್ಣನವರ ಚರಣಕಮಲಮಂ ಪೂಜಿಸಿ, ತಮ್ಮ ತಮ್ಮ ಗಂಡಹೆಂಡಿರ ಹೆಸರಂ ಕೇಳಿ, ಹಾಸ್ಯಮಂ ಮಾಡುತಿರ್ದ್ದರ ದೆಂತೆನೆ-

**ಕೊಂಚೆ ಜಂಪೆ.**

ಕಡು ಜಾಣೆವೆಣ್ಣುಗಳು ಕೂಡಿ – ಆಗ । ತಡಬಡನೆ ಹಿಡಿದು ಬಡಿದಾಡಿ ।
ಮಡದಿ ಗಂಡರ ಮುಖವ ನೋಡಿ – ಪೆಸರ । ಬೆಡಗ ಪೇಳೆಂದು ಹೊಡೆದಾಡಿ ॥ ೧ ॥

ನಿನ್ನ ಗಂಡನ ಹೆಸರೇಳೆ ಲಿಂಗಿ – ನೀನು । ಎನ್ನ ಕಾಡಲಿ ಬೇಡ ತಂಗಿ ।
ಇನ್ನತ್ತ ತೊಲಗೆ ಹೆರೆಹಿಂಗಿ – ನಿನ್ನ । ಬಿನ್ನಣೆಯ ಮಾತದಂತಿರಲಿ ॥ ೨ ॥

ಬಸವಯ್ಯ ನಿಮ್ಮ ಮಡದಿಯರ – ಪೆಸರ । ಉಸುರಯ್ಯ ಜೀಯ ದಮ್ಮಯ್ಯ ।
ಕೊಸರ ಬೇಡಿ [3] ಕಾಣಿರಯ್ಯ [3] – ನಮ್ಮ । ಶಶಿಧರನ ಪ್ರೀಯ ಬಸವಯ್ಯ ॥ ೩ ॥

ಸತಿಯರರಸಿಯೆ ಗಂಗೆ ಕೇಳೆ – ನಿನ್ನ । ಪತಿಯ ಪೆಸರೆಮ್ಮೊಡನೆ ಪೇಳೆ ।
ಮತಿವಂತೆ ಮಾಣಿಕದ ಹರಳೆ – ಗಂಗೆ । ಕ್ಷಿತಿಯೊಳಗೆ [4] ನೀನು [4] ಸ್ಥಿರಬಾಳೆ ॥ ೪ ॥

ಹುಡುಗಾಟ ಹೆಣ್ಣುಗಳ ಕೈಯ್ಯ – ಇವರ । ಎಡೆಯಲ್ಲಿ ಇರಬಾರದಯ್ಯ ।
ನಡೆ ಗಂಗೆ ಹಿಡಿ ಮನೆಗೆ ಕೈಯ್ಯ – ನಿಮ್ಮ । ಒಡನೆ ಬಹೆನೇಳಿ ಬಸವಯ್ಯ ॥ ೫ ॥

ಎಂದ ಮಾತಿಗೆ ನಕ್ಕರೆಲ್ಲ – ಈ ನುಡಿಯ । ಹಿಂದೆ ಯಾರುಬಲ್ಲರೀ ಸೊಲ್ಲ ।
ಚೆಂದವಾಯಿತು ಎಂದರೆಲ್ಲ – ಈ ಬೆಡಗ । ನಂದಿ ನಾಥನೆ ಬಲ್ಲನಲ್ಲ ॥ ೬ ॥

ನುಡಿದೆ ಮದುವೆಯ ಮಾತನೆಲ್ಲ – ಲೋಕ । ನಡೆವಂಥ ನಡೆವಳಿಯನೆಲ್ಲ ।
ಪೊಡವಿಗೀಶ್ವರ ತಾನೆ ಬಲ್ಲ – ಶಾಸ್ತ್ರ । ದೊಡಲ ಮಾತಂತೀತನಲ್ಲ ॥ ೭ ॥

**ಕಂದ ಪದ್ಯ.**

ನಾಗವಲಿ [5] ವಿಧಿಯ [5] ನಡೆಸುತ ।
ಬಾಗಿನವ ತೀರ್ಚಿ ಧೃತ ಕಂಕಣವಿಳುಹುತ್ತಂ ॥

---

1-1 ಗಾಭರಣನ (ಚ.) 2-2 ವ (ಇ, ಚ, ಜ, ಟ.) 3-3 ನುಡಿಯಯ್ಯ (ಇ, ಒ, ಜ, ಟ.) 4-4 ಅತಿಗಾಲ (ಎ, ಟ, ಡ.) 5-5 ಶಾಸ್ತ್ರನ (ಅ, ಟ, ಬ.)

ಆಗ ಮದುಮಕ್ಕಳೀರ್ವರಿಗೆ |
ಬೇಗಾರತಿ ದೃಷ್ಟಿಯೆತ್ತಿ ಮನೆಯಂ ಪೊಕ್ಕರ್ || ೧ ||

**ಮಂಗಳ ಪದ. ***

ಮಂಗಳಂ ಮಂಗಳೆಯರಸಗೆ ಶುಭ | ಮಂಗಳಂ ಶಿವಲಿಂಗ ಮಹೇಶಗೆ || ಪ ||
ಹರನಿರೂಪದಿ ಪ್ರಮಥರ ಭಕ್ತಿಗೆಯ್ಯಲ್ಕೆ | ಧರೆಯೊಳು ಮಾದಲಾಂಬೆಗೆ ಕಂದನಾಗಿ |
ಗುರು ಸಂಗಮೇಶನ ಸೂತ್ರವಿಡಿದು ಬಂದು | ತರುಣಿ ಶ್ರೀ ಗಂಗೆಯ ಗೆಲಿದನಿಗೆ || ೧ ||
ಸ್ಮರಹರ ಪುರಹರ ಕಾಲನ ಸದೆದಂಥ | ಹರಿಯ ಭಕ್ತಿಗೆ ಮೆಚ್ಚಿ ಘನ ಚಕ್ರವ |
ಕರುಣದಿಂದಲಿ ಇತ್ತ ಗಿರಿಜೆಯಕಾಂತನ | ಶರೀರದೊಳಾಂತ ಶ್ರೀ ಬಸವೇಶಗೆ || ೨ ||
ಸಿರಿಮೊಮ್ಮಗನ ಮಾವನ ಭಕ್ತಿಗೆ ಒಲಿದು | ಹರುಷದಿಂದವನ ದ್ವಾರವ ಕಾಯ್ದಗೆ |
ಪರತರ ಪಾವನಗೆ ಪರಂಜ್ಯೋತಿರೂಪಗೆ | ಶರೀರೈಕ ಭಾವ ಶ್ರೀ ಬಸವೇಶಗೆ || ೩ ||

ವಚನ|| ಈ ರೀತಿಯಲ್ಲಿ ಮದುವೆಯ ಸಂಭ್ರಮಂ ಮುಗಿದು ಸಕಲರೊಡ ನಿರುತ್ತಿರಲು, ಬಸವಯ್ಯ ಸಂಗಮನ ಸೂಚನೆಯ ಸನ್ನಾಹಗೂಡಿ, ಇರುತಿರ್ದನದೆಂತೆನೆ.

**ಜಂಪೆ.**

ಸಕಲ ಸಂಭ್ರಮದಿ ಸಂ | ಗನ ಬಸವನಿಗೆ ಮದುವೆ |
ಅಖಿಳ ಜನ ಮೆಚ್ಚಲ | ರ್ಥಿಯಲಿ ಮಾಡಿದರು || ೧ ||

ಇತ್ತ ಗಂಗಾಂಬಿಕೆಯ | ಅರ್ಥಿಯಿಂ ಹಸೆನಿಂದು |
ಮತ್ತೆ ಸಂಗಮನೆಡೆಗೆ | ಅತ್ತನಡೆಗೊಂಡ || ೨ ||

ಬಲದೇವ ಮಂತ್ರಿ ತನ್ನ | ಬಾಲೆಯಳಿಗಿತ್ತ ಬಹು |
ತಳಿತ ಹೇಮದ ಮಂಚ | ಲೇಪು ಮುಸ್ತೈದ † || ೩ ||

ಕುಂದಣದ ಆಭರಣ | ದಿವ್ಯ ದುಕೂಲಗಳ |
ಇಂದುವದನೆಯರ ಉಪ | ಚಾರಗೆಯ್ವುದಕೆ † || ೪ ||

ಇತ್ತ ಅಳಿಯನಿಗೆ ಮೇ | ಲ್ರತ್ನ ಮುತ್ತಿನ ಹಾರ |
ವಸ್ತು ಪೀತಾಂಬರದ | ಹೇಮದಂದಣವ † || ೫ ||

ಅಕ್ಕನಾಗಲೆಗಿತ್ತ | ಅಂಗದಾಭರಣಗಳ |
ಚೊಕ್ಕ ರನ್ನದ ಪಲ್ಲಕಿ | ಯಕ್ಕರಿಂದಿತ್ತ † || ೬ ||

ಸಕಲ ಸಂಪದದಿಂದ | ಸಂಭ್ರಮದಿ ಕಳುಹಿದನು |
ಅಖಿಳ ಜನ ನೋಡಿ | ಆಶ್ಚರ್ಯಗೊಳಲು † || ೭ ||

---

* ಈ ಮಂಗಳ ಪದ (ಡ, ತ.) ಪ್ರತಿಗಳಲ್ಲಿ ಮಾತ್ರವಿದೆ.

† ಈ ಪದ್ಯಗಳು (ಅ, ಉ, ಎ, ಒ, ಗ, ಚ, ಟ.) ಪ್ರತಿಗಳಲ್ಲಿಲ್ಲ.

ಕಂಗೊಳಿಪ ಕಪ್ಪಡಿಯು । ಸಂಗನಿಹ ನಿಜ ಸ್ಥಲವ ।
ಹಿಂಗದೆ ಕಂಡರತಿ । ಮಂಗಳೋತ್ಸಹದಿ ॥ ೮ ॥

ಧರೆ ಗಿರಿಯು ತರು ಶರಧಿ । ಪುರದ ಶೃಂಗರವ ವಿ ।
ಸ್ತರಿಸುವರಳವಲ್ಲ । ಶಿವತಾನೆ ಬಲ್ಲ ॥ ೯ ॥

ಕಲ್ಲೆಲ್ಲ ಕನಕ ಕಾ । ಸಾರ ಅಮೃತದ ಕೊಳಗ ।
ಳೆಲ್ಲ ತಾವರೆಯಲ್ಲ । ದಿಲ್ಲ ಮತ್ತೊಂದು ॥ ೧೦ ॥

ಮಲ್ಲಿಗೆಯ ವನವು ಮಾ । ಮರ ತೆಂಗು ಹಲಸು ಕುಜ ।
ವೆಲ್ಲ ಸುರ ತರುವಲ್ಲ । ದಿಲ್ಲ ಮತ್ತೊಂದು ॥ ೧೧ ॥

ಸತಿಯರೊಳಗೆಲ್ಲ ಪತಿ । ವ್ರತೆಯರಲ್ಲದೆ ಜಾರ ।
ಸತಿ [1] ಬಂಧಕಿ [1] ಯರ ಪ । ದ್ಧತಿಗಳಲ್ಲಿಲ್ಲ ॥ ೧೨ ॥

ಪುರುಷರೊಳು ದೇವ ಸ । ತ್ಪುರುಷರಲ್ಲದೆ ಅನ್ಯ ।
ಪುರುಷರತಿ ಜಾರ ಚೋ । ರರ ಹುಟ್ಟಲ್ಲಿಲ್ಲ ॥ ೧೩ ॥

ಧನ ಕನಕ ವಸ್ತು ವಾ । ಹನ ಹೇಮ ಸೌಭಾಗ್ಯ ಸು ।
ಜನದ ಕಪ್ಪಡಿಯ ಪುರ । ಮನಕೆ ಕಾಣಿಸಿತು * ॥ ೧೪ ॥

ಆ ಪುರದಿ ಒಪ್ಪುತಿಹ । ಕಾಪಾಲಿ ಸಂಗಮನ ।
ಗೋಪುರವ ಕಂಡ ಚಿ । ದ್ರೂಪ ಬಸವಣ್ಣ ‡ ॥ ೧೫ ॥

ಕಡು ಭಕ್ತಿ ಕಳೆಗೊಂಡು । ಧೃಡವಿಡಿದು ಮನದೊಳಗೆ ।
ಅಡಿಗಡಿಗೆ ಸ್ತುತಿಸುತ್ತ । ಗುಡಿ ಪೊಕ್ಕರಾಗ ॥ ೧೬ ॥

**ಕಂದಪದ್ಯ.**

ಪರಮ ಗುರು ಸಂಗಮೇಶನ ।
ಹರುಷದಿ ಕಾಣುತ ಪಾದಕ್ಕೆರಗಲು ಮೂವರ್ ॥
ಶಿರವಿಡಿದೆತ್ತಿದ ಸಂಗಮ ।
ಚಿರದಿಂ ಬಾಳೆಂ [2] ದು [2] ಹರಸಿ ಧರಿಸಿದ ಭಸಿತಂ ॥ ೧ ॥

ವಚನ ॥ ಇಂತೆಂದು ಸಂಗಮೇಶ್ವರ ಪ್ರತ್ಯಕ್ಷನಾಗಿ, ಬಸವಣ್ಣ ಮುಂತಾದ ಅಕ್ಕನಾಗಲೆ ಗಂಗಾಂಬಿಕೆಯರ ಮುಖವಂ ನೋಡಿ, ಮುದ್ದಿಸಿ ಮುದ್ದಾಡಿ ಸಂಗಮೇಶ್ವರ ದೇವರು ಏನೆಂದು ಭಕ್ತಿಯಂ ಬೋಧಿಸುತಿರ್ದರು.

---

1-1 ಯು ಸಷೆ (ಇ, ಒ, ತ.) * ಈ ಪದ್ಯ (ಅ, ಉ, ಎ, ಒ. ಗ, ಙ, ಟ.) ಪ್ರತಿಗಳಲ್ಲಿಲ್ಲ. ‡ ಈ ಪದ್ಯ (ಚ, ಡ, ತ.) ಪ್ರತಿಗಳಲ್ಲಿಲ್ಲ. 2-2 ದೆನುತ (ಇ, ಒ, ಗ, ಚ, ಜ, ಟ.)

## ಸಂಗಮೇಶ್ವರನು ಬಸವೇಶನಿಗೆ ಭಕ್ತಿ ಬೋಧಿಸಿದ ಠಾವು.

**ಅಟತಾಳ.**

ಮತ್ತೆ ಕೇಳ್ಬಸವಯ್ಯ ನಿಮ್ಮಯ । ಸತ್ಯ ನಡತೆ [1] ಬಗೆಯ [1] ನು ।
ನಿತ್ಯ ನಿತ್ಯವು ಕೇಳಿ ಹರುಷವ – ನೆತ್ತುತಿಹೆವು ॥ ೧ ॥

[2] ಗತಕಲಾ [2] ವರ್ತನೆಯ ನಡವಳಿ । ಗತಿಯು ತಪ್ಪಿ ನಡೆವ [3] ಗೆ [3] ।
ವ್ರತದ ಭಕ್ತಿಯ ಮರೆಯದಿರು ನೀಂ – ಸತತ ಬಸವ ॥ ೨ ॥

ಭಸಿತ ರುದ್ರಾಕ್ಷಿಗಳ ಧರಿಸಿದ – ವಸುಧೆ ಭಕ್ತರ ಜನರನು ।
ಅಸಮ ಲೋಚನನೆಂದು ನಂಬೈ – ಬಸವ ನೀನು ॥ ೩ ॥

ಫಾಲ ಲೋಚನ ಪರಮ ಭಕ್ತರ । ಶೀಲ ವ್ರತರ ಕಂಡರೆ ।
ಮೂಲೋಕ ಮುನಿ ಜನಕೆ ಅವರಡಿ – ಮೇಲುಯೆನ್ನು ॥ ೪ ॥

ಶತ್ರು ಜನವಾರಾದಡೆಯು ಶಿವ । ಭಕ್ತಿಯಿರಲು ಅವರನು ।
ಮಿತ್ರ ನಿನ್ನವರೆಂದು ನಂಬೈ – ಪುತ್ರ ಬಸವ ॥ ೫ ॥

ಹಿಡಿದ ವ್ರತ ಮಿತಿ ತಪ್ಪಿಪ್ರಾಣಕೆ । ನಡೆವುತಿರಲು ಹೆದರದೆ ।
ಬಿಡದೆ ನಡೆಸುವುದೀಗ ಮನಧೃಡ– ವಿಡಿದು ಬಸವ ॥ ೬ ॥

ಜಾತಿಯಲಿ ಆರಾದ [4] ಡೆ [4] ಯು ಲಿಂಗ । ಪ್ರೀತಿಯಿರಲು ಹೃದಯದಿ ।
ಜಾತಿ ನಿನ್ನವರೆಂದು ನಂಬು ಸು – ಜಾತಿ ಬಸವ ॥ ೭ ॥

ಈಶ ಭಕ್ತರ ಹಳಿವ ಪಾತಕ । ಹೇಸಿ ಜನರನು ಕಂಡರೆ ।
ರೋಷದಿಂ ದಂಡಿಸಲು ಅವರನು – ದೋಷವಿಲ್ಲ ॥ ೮ ॥

ವೇದ ಶಾಸ್ತ್ರಾಗಮ ಪುರಾಣ ಸಂ । ಪಾದಿಸಿರ್ದ ಭಕ್ತಿಯ ।
ಮೇದಿನಿಗೆ ನೀ ತೋರಿ ಅರುಹು ವಿ – ನೋದಿ ಬಸವ ॥ ೯ ॥

ಬೈದರೆಯು ಕೋಪದಲಿ ಪಳಿದರೆ । ಹೊಯ್ದರೆನ್ನೆಯ ಭಕ್ತರು ।
ನೋಯದಿರು ಎಳ್ಳನಿತು ಮನದೊಳು – ಕಾಯಿ ಬಸವ ॥ ೧೦ ॥

ಯಾವ ತಪ್ಪುಗಳನ್ನು ಎಣಿಕೆಯ । ಗೊಳ್ಳಬೇಡ ಭಕ್ತರಾ ।
ಜೀವದಲಿ ಪರಧನ ಪರಾರ್ಥಕೆ – ಹಾ [5] ರ [5] ಬೇಡ * ॥ ೧೧ ॥

ಸದ್ಯ ಶಿವ ಭಕ್ತ ಪ್ರಸಾದವ । ಸಲಿಪುದಲ್ಲದೆ ಅನ್ಯವ ।
ಮೇಧ್ಯಕಿಂ ಕಡೆಯೆಂದು ಕಾಂಬುದು – ಮುದ್ದುಬಸವ ⁑ ॥ ೧೨ ॥

---

1-1 ಯಿರವ (ಗ, ಚ.) 2-2 ಘಾತಕರ (ಇ, ಒ, ಟ.) 3-3 ರೆ (ಇ, ಒ, ಟ.) 4-4 ರೆ (ಒ, ಗ, ಟ.) 5-5 ಯ (ಇ, ಒ, ಗ, ಚ, ಟ.) ⁑ ಈ ಪದ್ಯಗಳು (ಎ) ಪ್ರತಿಯಲ್ಲಿಲ್ಲ.

ಪಂಚಮುಖ ಶಿವ[1] ಭಕ್ತ[1]ರೊಳಗತಿ । ವಂಚನೆಗಳಂ ಮಾಡದೆ ।
ಸಂಚಿತಾರ್ಥವನಿತ್ತು ನಡೆ ಪ್ರ – ಪಂಚವಳಿದು ॥ ೧೩ ॥
ಯಾವ ಜಂಗಮ ಬಂದು ಬೇಡಲು । ದೇವನೆಂದೇ ಭಾವಿಸು ।
ತೀವಿಕೊಂಬುದು ಸುಪ್ರಸಾದವ – ನಾವಕಾಲ ॥ ೧೪ ॥
ಯಾವ ಬಗೆಯೊಳು ಎನ್ನ ಮರಯದೆ । ಭಾವದಲ್ಲಿಯೆ ನೆನೆವುದು ।
ಭಾವಿಸಲು ನಿನಗಾರು ಸರಿಯ್ಯೆ – ದೇವ ಬಸವ ॥ ೧೫ ॥
ಮನದಿ ಬೇಕಾದಂಥ [2] ವಸ್ತು[2] ವ । ತನುಜ ನಿನಗೆ ಕೊಟ್ಟಪೆ ।
ನಿನಗೆ ಮುಂದೊರೆದಂಥ ಜ್ಞಾನದಿ – ತಿಳಿದುಕೊಳ್ಳೈ * ॥ ೧೬ ॥

ವಚನ ॥ ಈ ರೀತಿಯಲ್ಲಿ ಸಂಗಮೇಶ್ವರ ದೇವರು ಬಸವಯ್ಯಂಗೆ ಭಕ್ತಿಯಂ ಬೋಧಿಸಿ, ತಕ್ಕೈಸಿ ಮುಂಡಾಡಿ, ತನ್ನ ಗುಡಿಯಂ ಪೊಕ್ಕು ಎಂದಿನಂತೆ ಬಯಲಾಗಲು, ಅಲ್ಲಿರ್ದ ಪ್ರಜೆಗಳೆಲ್ಲ ವಿಸ್ಮಯಂಬಟ್ಟು ಏನೆನ್ನುತಿರ್ದರು.

**ಕೊಂಚೆ ಜಂಪೆ.**

ಶರಣು ಶ್ರೀ ಗುರುಬಸವಲಿಂಗ – ನಿ[3] ಮು[3] ಗೆ । ಸರಿಯಾರು ದೇವ ದಿವ್ಯಾಂಗ ।
ಧರೆಯೊಳಗೆ ಅರಿದು ಶಿವಲಿಂಗ – ನಿಮಗೆ । ಗುರುವಾಗಿ ಬೋಧಿಸಿದ ಸಂಗ ॥ ೧ ॥
ನೋಡಿದಿರೆ ಬಸವನ ವರ ಭಕ್ತಿ – ಶಿವನ । ಕೂಡೆ ಒಲಿಸಿದುದೊಂದು ಮುಕ್ತಿ ।
ನಾಡ ಜನಕೇಕೆ ಈ[4] ಶ[4] ಕ್ತಿ – ಸಂಗ । ಕೂಡೆ ಬಸವಗೆ ಕೊಟ್ಟ ಮುಕ್ತಿ ॥ ೨ ॥
ವಸುಧೆ ಜನರಿಗೆ ಶಿವನು ಬಹನೆ – ಬಸವ । ಪಶುಪತಿಯು ತಾನಲ್ಲದಿಹನೆ ।
ಋಷಿ ವೇಷ[5] ದಿಂ[5] ಶಿವನು ಬಹನೆ ನರಗೆ । ಅಸಮ ಬೋಧೆಯ ಬೋಧಿಸುವನೆ ॥ ೩ ॥
ಜಡೆ ಮುಡಿಯು ಕಂತೆ ಲಾಕುಳವು – ಕರದಿ । ಪಿಡಿದ ಜಪಮಾಲೆ ಪುಸ್ತಕವು ।
ಗುಡಿಯಿಂದ ತಾ ಹೊರಟು ಬಂದ – [6] ತಪಸಿ[6] । ಗುಡಿ ಹೊಕ್ಕು ಬಯಲಾಗಿ ನಿಂದ ॥ ೪ ॥
ಎಂದಾದರು ಕಂಡರಿಳೆಯೊಳಗೆ – ತಪಸಿ । ಎಂದಿರ್ದ ಈ ಗುಡಿಯವೊಳಗೆ ।
ಬಂದು ತನ್ನ ಮೋಹ ಬಾಲನಿಗೆ – ಕೃಪೆ । ಯಿಂದ ಬೋಧಿಸಿದ ಬಸವನಿಗೆ ॥ ೫ ॥
ಭಾಪುರೆ ಭಾಗ್ಯ ಸಂಪನ್ನ – ಬಸವ । ರೂಪು ಕಾಂಬುವರಾರು ನಿನ್ನ ।
ಶ್ರೀ ಪತಿಯು ಅಜ ಸುರರು ನಿನ್ನ – [7] ತೆರದಿ[7] । ಕಾಪಾಲಿಯೊಲಿಸಿದರೆ ಮುನ್ನ ॥ ೬ ॥
ಸಕಲ ಸಭೆ ಬಸವನನು ನೋಡಿ – ತಾವು । ಅಖಿಳ ವಿಧ ಬಗೆಯ ಕೊಂಡಾಡಿ ।
ಸಕಲ ವಿಧ ಪೂಜೆಯನು ಮಾಡಿ – ಬಸವ । ಸುಖವ ಕೊ[8] ಡಿ[8] ನಮಗೆಂದು ಬೇಡಿ ॥

ವಚನ ॥ ಈರೀತಿಯಲ್ಲಿ ಶ್ರೀ ಬಸವೇಶ್ವರ ದೇವರು[9] ಸರ್ವ[9] ಜನರಿಂಕೊಂಡಾಡಿಸಿಕೊಳ್ಳುತ್ತ, ತ್ರಿ ಸಂಧ್ಯಾ ಕಾಲದ [10] ಲ್ಲೂ[10] ಸಂಗಮೇಶ್ವರನ ಪೂಜೆಯಲ್ಲಿ

1-1 ಶರಣ (ಡ, ತ.) 2-2 ಕಾರ್ಯ (ಗ, ಚ.) * ಈಪದ್ಯ (ಉ, ಎ, ಖ, ಗ, ಚ.) ಪ್ರತಿಗಳಲ್ಲಿ ಮಾತ್ರವಿದೆ. 3-3 ನ (ಒ, ಗ, ಚ, ಟ, ಬ.) 4-4 ಯು (ಒ, ಗ, ಚ,) 5-5 ವಲಿ (ಇ. ಗ, ಟ, ಡ, ತ.) 6-6 ಬೇಗ (ಡ, ತ.) 7–7 ನಿಜವ (ಇ, ಬ.) 8-8 ಡು (ಇ, ಚ, ಜ) 9-9 ಪುರ (ಅ, ಬ.) 10-10 ಲ್ಲಿ (ಟ, ಡ, ತ.)

ಇರುತ್ತಿರಲು, ಅತ್ತ ಕಲ್ಯಾಣಪಟ್ಟಣದಲ್ಲಿ ಬಲದೇವಮಂತ್ರಿಯ ಪ್ರಮಥರು ಕೈಲಾಸಕ್ಕೆ ಕರೆದೊಯ್ಯಲು, ಬಿಜ್ಜಳರಾಯ ಸಕಲ ಮಂತ್ರಿಗಳಂ ಕರೆಸಿಕೊಂಡು ಏನೆನ್ನುತಿರ್ದನು.

**ದ್ವಿಪದಿ.**

ಬನ್ನಿರೈ ಸಕಲ ಸಾಮಾಜಿಕ ಮಂತ್ರಿಗಳು ।
ಬನ್ನಿರಿ ಬಹಳ ಕಾಲದ ಪ್ರೌಢ ಜನರು ॥ ೧ ॥
ಹಿರಿಯರೂ ಕಿರಿಯರೂ ನೆರೆ ಜಾಣರೆಲ್ಲ ।
ಪರಿಕಿಸೀ ಈ ರಾಜ್ಯಭಾರ ಕರ್ತರನು ॥ ೨ ॥
ಬಲದೇವ ಮಂತ್ರಿಯೆನ್ನೆಯ ಭಾಗ್ಯ ಕರ್ತ ।
ಸಲೆ ಸಂದನವನಂಥ ಸತ್ಪುರುಷರುಂಟೆ ॥ ೩ ॥
ದಳವಾಯಿ ಮಂತ್ರಿಗ[1]ಳ[1] ಧರ್ಮ ನಡೆಸುವ[2]ರ[2] ।
ಇಳೆಗಿವರು ಬೇಕೆಂದು ತಿಳುಹಿ ನಮ್ಮೊಡನೆ ॥ ೪ ॥
ಮುಡುಪು ಜೊಕ್ಕಸಕೆ ಹಣ ಕಡಿಮೆ ಇಲ್ಲದೊಲು ।
ಪಡಿ ಜೀತರಾಳುವೆಗೆ ಕ[3]ಡೆಯಿ[3]ಲ್ಲದಂತೆ ॥ ೫ ॥
ಪೊಡವಿಯೊಳು ಧರ್ಮ ನಡವಳಿ ತಪ್ಪದಂತ ।
ಗಡಿ ದುರ್ಗ ಠಾಣ್ಯವೆಚ್ಚರದಪ್ಪದಂತೆ ॥ ೬ ॥
ಒಡೆಯನೊಡವೆಯೊಳು ವಂಚನೆಯಿಲ್ಲದಂತೆ ।
ಕಡು ಜಾಣರಾರೆಂದ ಪೊಡವಿ ಪಾಲಕನು ॥ ೭ ॥

ವಚನ ॥ ಆ ಮಾತಿಗೆ ಹಿರಿಯರಿಂತೆಂದರು.

**ಜಂಪೆ.**

ವಸುಧೀಶ ನಿಮ್ಮ ಮಂತ್ರಿ । ಮೋಹದಳಿಯನು ಇಹನು ।
ಬಸವರಸ ಶಿವಸರಸ ಬಹು । ಹರಷ ನಮಗೆಲ್ಲ ॥ ೧ ॥

ಹರನ ಮೋಹದ ಕಂದ । ಪುರ ಜನರ ಆನಂದ ।
ಧರೆಯ ಸಲಹಲಿ ಬಂದ । ದೊರೆ ನಿಮಗೆ ಚಂದ ॥ ೨ ॥

ಕೇಳು ಬಿಜ್ಜಳರಾಯ । ಭಾಳಾಕ್ಷ ನಿಜ ರೂಪ ।
ತಾಳಿ ಧರೆಗಿಳಿದಿಹನೆ । ಪೇಳಲಿನ್ನೇನು ॥ ೩ ॥

ಧರೆ ಹೆಚ್ಚು ರಾಜ್ಯದೈ । ಶ್ವರಿ ಹೆಚ್ಚು ಧರ್ಮದ ।
ಪರಿ ಹೆಚ್ಚು ಬಸವಯ್ಯ । ನಿರಬೇಕು ಜೀಯ ॥ ೪ ॥

---

1-1 ಳು 2-2 ರು (ಇ, ಒ. ಜ, ಟ, ಡ, ತ.) 3-3 ಡಮಿ (ಇ, ಓ.)

ಪರಮ ಪುರುಷನು ಬಸವ । ವರ ಮಂತ್ರಿ ನಿಮಗಾಗೆ ।
ಸಿರಿ ಹೆಚ್ಚಿ ಕಲ್ಯಾಣ । ಭರದಿ ಹಿಗ್ಗುವದು ॥ ೫ ॥
ವಸುಧೆಯೊಳು ಶಿಶು ಬಾಲ । ಬಸವ ಸದ್ಗುಣ ಶೀಲ ।
ವಸುಧೆಯೊಳು ಶಿವನೊಲಿಸಿ । ಜಸವಡೆದ ಜಗಕೆ ॥ ೬ ॥
ಮದನ ಸಮ ರೂಪ ಬಿ । ಜ್ಜಳಕೇಳು ನೀ ಪೋಗಿ ।
ಇದಿರ್ಗೊಂಡು ಬಸವನನು । ಮುದದಿ ಕರೆತಹುದು ॥ ೭ ॥

ವಚನ ॥ ಆಮಾತಿಗೆ ಬಿಜ್ಜಳರಾಯ ಏನೆನ್ನುತಿರ್ದನು.

**ಏಕತಾಳ.**

ಮೊರೆ ರಾಜ ಮಂತ್ರಿ ಪ್ರ । ಧಾನ ಪ್ರೌಢರಾದ ।
ಹಿರಿಯರು ನೀ [1] ವ್ಪೋಗಿ [1] । ಕರೆತಹುದು ಎನಲು ॥ ೧ ॥
ಕೊಟ್ಟರೆ ಸೇರಕ್ಕಿ । ಇಟ್ಟಂತೆ ಇರುವೆನು ।
ಪಟ್ಟಣಕಧಿಪತಿ । ದಿಟ್ಟ [2] ತಾಂ [2] ಬಸವ ॥ ೨ ॥
ಈಗ ಈಕ್ಷಣ ಪೋಗಿ । ಬೇಗದಲಿ ಕರೆತನ್ನಿ ।
ಸಾಗಿ ಸನ್ನಾಹ ಇದಿರ । ಈಗಲೇ ಬಹೆನು ॥ ೩ ॥
ಎಂದು ಮಂತ್ರೀಶ್ವರ । ರಂದು ಕಳುಹುತ ರಾಯ ।
ಚಂದದಿಂ ಪಟ್ಟಣವ । ಶೃಂಗರಿಸಿರೆಂದ ॥ ೪ ॥
ಪುರ ರಕ್ಷಕರನ್ನೆಲ್ಲ । ಕರೆಸಿ ಪಟ್ಟಣವನ್ನು ।
ಭರದಿ ಶೃಂಗರಿಸೆಂದು । [3] ಇರದೆ ಪೇಳಿದನು [3] ॥ ೫ ॥
ಎಂದ ಮಾತಿಗೆ ಚರ । ರಂದು ಬೇಗದಿ ಪೋಗಿ
ಚಂದದಿಂ ಪಟ್ಟಣವ । ನಂದು ಶೃಂಗರಿಸೆ ॥ ೬ ॥
ಕನ್ನಡಿಯ ತೋರಣ । ಕಸ್ತೂರಿ ಚಳಯದಿ ।
ಚೆನ್ನಾಗಿ [4] ಪಟ್ಟಣ । ವನ್ನು ಶೃಂಗರಿಸಿ ॥ ೭ ॥
ಇತ್ತವರಿರುತಿರಲು । ಅತ್ತ ಬಸವನೆಡೆಗೆ ।
ಸುಸ್ಥಿರದಿ ಮಂತ್ರಿಗಳು । ಅರ್ಥಿಯಿಂ ಪೋಗಿ ॥ ೮ ॥
ಕಂಡರೀ ಜಗಕೆ ಅ । ಖಂಡ ಪರಶುವೆಂಬ ।
ದಂಡೇಶ ಬಸವನು । ದ್ದಂಡ ಪಾದವನು ॥ ೯ ॥
ತ್ರಾಹಿ ಬಸವ ರಾಜ । ತ್ರಾಹಿ [5] ಮಾರ್ತಾಂಡ [5] ತೇಜ ।
ತ್ರಾಹಿಕಲ್ಪ [6] ವಿಭೂ [6] ಜ । ಪಾಹಿ ಮಾಂ ದೇವ ॥ ೧೦ ॥

---

1-1 ವೈದಿ (ಇ, ಒ, ಗ, ಚ, ಡ.) 2-2 ನಾ (ಇ, ಉ, ಒ, ಗ, ಚ.) 3-3 ತ್ವರಿತಾದಿ ಪೇಳೆ । (ಒ.) * ಈ ಪದ್ಯಗಳು (ಚ.) ಪ್ರತಿಯಲ್ಲಿಲ್ಲ. 4-4 ಕೇರಿಶ್ರೇಣಿ । ಚಲ್ವೆಸೆದಿರಲು ॥ (ಒ.) 5-5 ಭಾಸ್ಕರ (ಇ, ಒ, ಗ, ಚ.) 6-6 ಮಹೀ (ಒ, ಗ, ಚ.)

ಶರಣು ಶ್ರೀ ಬಸವೇಶ । ದುರಿತ ದುಷ್ಕೃತ ನಾಶ ।
ಗುರುವೆ ಸಲಹು ಈಶ । ಪರಿಭವ ನಾಶ * ॥ ೧೧ ॥
ಧರೆಯ ರಕ್ಷಿಸುವಂಥ । ಪರಮ ಸದ್ಗುರುವಿಗೆ ।
ಶರಣೆಂದು ಸಾಷ್ಟಾಂಗ । ವೆರಗಿದರಾಗ * ॥ ೧೨ ॥
ಎರಗಿದಂಥವರನ್ನು । ಶಿರವಿಡಿದೆತ್ತುತ ।
ಹರಸುತ್ತ ಅವರನ್ನು । ಒರೆದು ಕೇಳಿದನು ॥ ೧೩ ॥
ಬಂದ ಕಾರ್ಯವಿದೇನು । ಚಂದದಿಂ ಪೇಳಿರಿನೆ ।
ನಂದೀಶ ಬಸವಗಿಂ । ತೆಂ[1] ದು ಪೇಳಿದ[1] ರು * ॥ ೧೪ ॥
ಪೃಥ್ವೀಶ ಕಳುಹಿದ । ವೃತ್ತಾಂತವೆಲ್ಲವ ।
ಮತ್ತೆ ಬಸವನೊಳು । ವಿಸ್ತರಿಸಿದರು ॥ ೧೫ ॥
ಕೇಳುತಲೆ ಹರುಷವ । ತಾಳಿದ ಸಂಗನೊಳು ।
ಪೇಳಿದ ಮುಂದೆ ಬಹ । ಆಲೋಚನೆಗಳ ॥ ೧೬ ॥

ವಚನ ॥ ಇಂತೆಂದು ಬಸವಯ್ಯ ಬಂದ ಹದನಂ ಕೇಳಲು ಬಿಜ್ಜಳರಾಯನ ಮಂತ್ರಿಗಳು ಏನೆಂದು ಬಿನ್ನಹ ಮಾಡುತಿರ್ದರು.

**ಅಟತಾಳ.**

ಮೃಡನ ಮೋಹದ ಭಕ್ತ ಕೇಳ್ಬಸ । ವಯ್ಯ ನಿಮ್ಮ ಬಿಜ್ಜಳ ।
ಪೊಡವಿ ಪತಿ ಕಳುಹಿದನು ನಿಮ್ಮಡಿ – ಎಡೆಗೆ ನಮ್ಮ ॥ ೧ ॥
ಮುಂಡಲೇಶನು ಕರೆಯ ಕಳುಹಿದ । ಮಹಿಗೆ[2] ನಿಮ್ಮ ಹರುಷದಿ[2] ।
ದಂಡ ನಾಯಕ ಪಟ್ಟವೀಯಲು – ದ್ದಂಡವೆನಲು ॥ ೨ ॥
ನಿಮ್ಮ ರಾಜ್ಯದ ಭಾರ[3] ಕೃತ್ಯಕೆ[3] । ನಿಮ್ಮ ದೊರೆಯು ಕಳುಹಿದ ।
ನಮ್ಮ ದೊರೆಯಪ್ಪಣೆಯನಿತ್ತರೆ – ನಾ[4] ಸು[4] ಬಹೆ[5] ನು[5] ॥ ೩ ॥
ಜ್ಞಾನದಲಿ ಸಂಗಮನ ನೆನೆ[6] ಯಲು[6] । ತಾನು ಸಂಗ ನುಡಿದನು ।
ನೀನು ಪೋಗೈ ಬಸವ ಸಂಗಡ – ನಾನು ಬಹೆನು ॥ ೪ ॥
ಮನದೊಳಗೆ ನೀ ನೆನೆದ ಕಾರ್ಯವ । ಅನುದಿನವು ನಾ ನಡೆಸಿಕೊಡುವೆನು ।
ಅನುಮನಸು ನಿನಗೇಕೆ ಕಂದ ಪೋ – ಗೆಂದ ಸಂಗಮನು ॥ ೫ ॥
ಎಂದ ಮಾತಿಗೆ ಬಸವ ಸಂಗಮು । ಗೊಂದಿಸುತಲಿ[7] ನುಡಿ[7] ದನು ।
ಮುಂದೆ ಪೋಪೆನು ಸೂತ್ರ ನಿಮ್ಮದು – ಯೆಂದು ಹೊರಟ ॥ ೬ ॥

---

1-1 ದರವ (ಡ.) * ಪದ್ಯಗಳು (ಡ, ತ.) ಪ್ರತಿಗಳಲ್ಲಿ ಮಾತ್ರವಿವೆ. 2-2 ಸರ್ವಾಧಿಪತ್ಯವ । (ಚ.) 3-3 ವಹಿಸಲು (ಗ, ಚ.) 4-4 ವು 5-5 ವು (ಇ, ಒ, ಜ, ಟ.) 6-6 ದರೆ (ಅ, ಇ, ಒ, ಟ, ಡ, ತ, ಬ.) 7-7 ನಡ (ಅ.)

ಅಂದಣದಿ ಸತಿ ಗಂಗೆ ಬೇರೊಂ | ದಂದಣದಿ ಅಕ್ಕನಾಗಲೆ ಮ
ತ್ತೊಂದಂದಣದಲ್ಲಿ ಬಸವನು – ಕರ್ತುರ್ಗ ಗಣರುಗಳು * || ೭ ||
ನಡೆದ ತನ್ನೊಡ ಹುಟ್ಟಿ ಸಂಗಡ | ಮಡದಿ ಸಹಿತ ಮಂತ್ರಿಗ |
ಳೊಡನೆ ಹರುಷದಿ ಬಸವ ಕಲ್ಯಾಣ – ದೆಡೆಗೆಬಂದ || ೮ ||
ಬಂದು ವನದೊಳು ನಿಂದು ಮಂತ್ರಿಯ | ಮುಂದೆ ಕಳುಹೆ ನೃಪನೊಳು |
ಅಂದು ಪೇಳ್ದರು ಬಸವರಾಜನು – ಬಂದನೆಂದು || ೯ ||

ವಚನ || ಆ ಬಿಜ್ಜಳರಾಯ ಮಂತ್ರಿಗಳ ಮಾತಂ ಕೇಳಿ, ಚಂದ್ರನ ಕಳೆಗೆ ಹೆಚ್ಚುವ ಅಂಬುಧಿಯಂತೆ ಮನಂಪೆರ್ಚಿ, ಆ ಬಸವರಾಜನ ಪಾದವಂ ಕಂಡು, ಕೃತಾರ್ಥನಹೆನೆಂದು, ಪ್ರಯಾಣವಾಗುತಿರ್ದನದೆಂತೆನೆ.

**ದ್ವಿಪದಿ.**

ಶ್ರೀಮನ್ಮಹಾರಾಜ ನತ ಕಲ್ಪ ಭೂಜ |
ಆ ಮಹಾ ಬಿಜ್ಜಳನು ಅಧಿಕ ಸಂತಸದಿ || ೧ ||

ಕರೆಸಿದನು ಬಲ್ಲಂಥ ಹಿರಿಯ ಪ್ರಾಜ್ಞರನು |
ಪುರವ ಶೃಂಗರಿಸೆಂದು ಪೇಳಲಾಕ್ಷಣದಿ || ೨ ||

ಬಂದು ವೀದಿಗಳ್ಗೆ ಬಹಳ ಜನರೆಲ್ಲ |
ಮಂದಿರವ ಮಳಿಗೆಗಳ ಶೃಂಗರಿಸ ಪೇಳೆ || ೩ ||

ಕಸ್ತೂರಿ ಚಳಯವು ಕನಕ ತೋರಣವು |
ವಿಸ್ತರಿಸಲಳವಲ್ಲ ವೀದಿ ಶೃಂಗರವ || ೪ ||

ಮಂದಿರವು ಮುಖಸಾಲೆ ಮದನ ಮಂಟಪವು |
ಚಂದದಾ ಗೋಪುರ ಚೆಲುವ ಸೌಧಗಳು || ೫ ||

ಅಂದು ಶೃಂಗರಮಾಡಿ ಅತಿ ಹರುಷದಿಂದ |
ಬಂದು ಪೇಳ್ದರು ನೃಪಗೆ ಭಯಭಕ್ತಿಯಿಂದ || ೬ ||

ಕೇಳಿದನು ಬಿಜ್ಜಳನು ತಾಳಿ ಹರುಷವನು |
ಪೇಳಿದನು ದಳಪತಿಗೆ ದಳವ ಶೃಂಗರಿಪೆ || ೭ ||

ದೊರೆಗಳಾ ಮಂತ್ರಿಗಳು ಧುರದ ಕಲಿ ಭಟರು |
ಕರಿ ತುರಗ ಶೃಂಗರಿಸಿ ಭರವಸದಿ ಬರಲು || ೮ ||

ಅಂದಳವು ಛತ್ರಚಾಮರ ಪತಾಕೆಗಳು |
ಬಂದರಾಕ್ಷಣ ಬಹಳ ಮೇಳ ಪಾತ್ರಗಳು || ೯ ||

---

* ಈ ಪದ್ಯ (ಇ, ವ,) ಪ್ರತಿಗಳಲ್ಲಿ ಮಾತ್ರವಿದೆ.

ಗಿಡಿ ಬಿಡಿ ನಿಸ್ಸಾಳ ಹೊಡೆವ ವಾದ್ಯಗಳು ।
ನುಡಿವ ಕಹಳೆಯು ಭೇರಿ ಪೊಡವಿ ಗರ್ಜಿಸಲು ॥ ೧೦ ॥

ಭಟ್ಟರೂಳಿಗದವರು ಕಟ್ಟಿಗೆಯ ಚರರು ।
ಇಟ್ಟಡಿಯ ಸಂದಣಿಯ ಎಡೆಯ ಬಿಡಿಸುವರು ॥ ೧೧ ॥

ಹಾಕು ಪಾವಡದವರು ಹಾಸ್ಯ ಜನರೊಡನೆ ।
ಸಾಕಿಲ್ಲವೆಂದೆಂಬ ಸಂದಣಿಗಳಿಂದ ॥ ೧೨ ॥

ಪುರುಷರೂ ಸತಿಯರೂ ಪುಣ್ಯಾತ್ಮರೊಡನೆ ।
ಮೊರೆ ಹೊರಟ ಬಸವನನು ಇದಿರ್ಗೊಳ್ಳೆಸೆನುತ ॥ ೧೩ ॥

ವಚನ॥ ಆ ಸಮಯದಲ್ಲಿ ಶುಭ ಶಕುನಂಗಳಾಗುತ್ತಿರ್ದುವದೆಂತೆನೆ.

**ತ್ರಿವುಡೆ.**

ಅರಸನರಮನೆಯಿಂದ ಹೊರಡಲು । ತ್ವರಿತ ಕ್ಷುತು ಎರಡಾಗೆ ಅರಸನ ।
ಶಿರದ ಬಲಬದಿ ಬಾಹುಕೆತ್ತಲು – ಹರುಷವೇರಿದನು ॥ ೧ ॥

ಮುಂದು ಮುಂದಕೆ ನಡೆಯಲಾಕ್ಷಣ । ಬಂದರೀರ್ವರು ಭೂಸುರೋತ್ತಮ ।
ರಂದು ಮಂತ್ರಾಕ್ಷತೆಯ ಜಯಪ್ರದ । ವೆಂದು[1] ಹರಸಿದರು[1] ॥ ೨ ॥

ಅತ್ತ ಮುಂದಕೆ ನಡೆಯೆ ವಾಯಸ । ಹ[2]ತ್ತಿ[2] ತಿದ್ದುತ ಹರಿಯೆ ವೃಕ್ಷಕೆ ।
ಮತ್ತೆ ಮುಂಗಡೆ ಮಂಜರವು ಬಲ – ನೆಡಕೆ ಪಾರಿದುದು ॥ ೩ ॥

ಮುಂದೆ ಹೋಗುತ್ತಿರಲು ಕಾವಡಿ । ಯಿಂದ ಪಾಲ್ಗೊಡ ಸಾಲು ಪಿಡಿದೈ ।
ತಂದರದ ನೋಡಿದನು ಬಿಜ್ಜಳ – ನಂದು ಹರುಷದಲಿ ॥ ೪ ॥

ಬಲ್ಲವರ ಕೇಳುತ್ತ ಶಕುನಗ । ಳೆಲ್ಲವನು ವಿಸ್ತರವ ಮಾಡುತ ।
ನಿಲ್ಲದೈದಿದ ಭೂಪ ಬಸವಯ್ಯ – ನಲ್ಲಿಗತಿ ಬೇಗ ॥ ೫ ॥

ವಚನ ॥ ಬಿಜ್ಜಳರಾಯನು ಬಸವಯ್ಯನಂ ನೋಡಿ, ಆಶ್ಚರ್ಯಬಟ್ಟು, ಈತ ದೈವಪುರುಷನೆಂದು ಕರಕಮಲಮಂ ಮುಗಿದು, ಪೀಠದಲ್ಲಿ ಕರವಿಡಿದು ಕುಳ್ಳಿರಿಸಿಕೊಂಡು ಪ್ರಸಂಗವಂ ಮಾಡುತಿರ್ದನದೆಂತೆನೆ.

**ತ್ಯಾಗವಾನ- ಅಟತಾಳ.**

ಪರಮ ಪುರುಷ ಪಾವನಾಂಗ ಬಸವ – ಯ್ಯ – ಸಕಲ –
ಧರೆಯ ಸಲಹುವಂಥ ದೇವ ಬಸವ – ಯ್ಯ ॥ ೧ ॥

ಹಿರಿದು ರಾಜ್ಯ ಭಾರಕರ್ತ ಬಸವ – ಯ್ಯ – ಸಂದ –
ಒರೆಯಬೇನು ನಿಮ್ಮ ಮಾವ ಬಸವ – ಯ್ಯ ॥ ೨ ॥

---

1–1 ಕೊಡಲು (ಉ, ಗ, ಜ, ತ.) 2–2 ತ್ರ (ಬ, ಗ, ಜ.)

ಆತ ಮಾಳ್ಪ ಕಜ್ಜವನ್ನು ಬಸವ – ಯ್ಯ – ನಿಮಗೆ –
ಖ್ಯಾತಿಮಿಗಿಲು ಕೊಡುವೆ ನಾನು ಬಸವ – ಯ್ಯ || ೩ ||
ಪ್ರೀತಿಯಿಂದ ಒಪ್ಪಿಕೊಳ್ಳಿ ಬಸವ – ಯ್ಯ – ಬದಲು –
ಮಾತನಾಡಬೇಡ ಜೀಯ ಬಸವ – ಯ್ಯ || ೪ ||
ನಾವು ಶಿವನ ಭಕ್ತಿಯುತರು ಎಲೆ ರಾ – ಯ – ನೀವು –
ಜಾವಕ್ಕೊಂದು ಮನಸಿನವರು ಎಲೆ ರಾ – ಯ || ೫ ||
ಭಾವ ಶುದ್ಧವಿಲ್ಲನಿಮಗೆ ಎಲೆ ರಾ – ಯ – ನಿಮ್ಮ –
[1] ಆವರಿಸಿ [1] ಹ ಕುಚಿತ್ತದ ಜನರು ಎಲೆ ರಾ – ಯ || ೬ ||
ಒಡಲ ಕಿಚ್ಚಿಗಾಗಿ ಕೆಲರು ಎಲೆ ರಾ – ಯ – ಬಹಳ –
ಚಡಿತ ಚಾಡಿಗಳನು ಆಡಿ ಎಲೆ ರಾ – ಯ || ೭ ||
ಕಡೆಯಲಾರು ಬಾರದಂತೆ ಎಲೆ ರಾ – ಯ – ಸಂದು –
ಗೊಡದೆ ಕಾದುಕೊಂಡು ಇಹರು ಎಲೆ ರಾ – ಯ || ೮ ||
ಕೆಡಲಿ ರಾಜ್ಯ ಸುಡಲಿ ಕೇಳು ಎಲೆ ರಾ – ಯ – ತಮಗೆ –
ಮುಡುಪು ಬಂದರೊಂದೇ ಸಾಕು ಎಲೆ ರಾ – ಯ || ೯ ||
ಹುಡುಗತನದ ದೊರೆಗಳೊಡನೆ ಎಲೆ ರಾ – ಯ – ಬದುಕು –
ಸಡಲಿ ಮಾಡಬಾರದಯ್ಯ ಎಲೆ ರಾ – ಯ || ೧೦ ||
ಮತ್ತೆ ದೊರೆಗಳೊಬ್ಬರಲ್ಲಿ ಎಲೆ ರಾ – ಯ – ಅನ್ನ –
ತುತ್ತನುಂಡ ಬಳಿಕ ಕೇಳು ಎಲೆ ರಾ – ಯ || ೧೧ ||
ಹತ್ತಿ ಒಲುಮೆ ಮುದ್ದು ತಲೆಗೆ ಎಲೆ ರಾ – ಯ – ಅವರ –
ತೊತ್ತಾಗಿ ಮಾತ ಕೇಳುವರು ಎಲೆ ರಾ – ಯ || ೧೨ ||
ಹೋದ ಹಣದ ಹೊಲಬನರಿಯರೆಲೆ ರಾ – ಯ – ರಾಜ್ಯ –
ಕ್ಕಾದ ಕೇಡ [2] ವಿಚಾರಿಸರು ಎ [2] ಲೆ ರಾ – ಯ || ೧೩ ||
ಸಾಧಿಸಿದ ಹಣವ ತೋರರೆಲೆ ರಾ – ಯ – ಜೀವ –
ದಾದಿಯೆಂದು ಮಡಗಿ ಕೊಂಬರೆಲೆ ರಾ – ಯ || ೧೪ ||
ಕಚ್ಚಿ ಹರುಕು ಕಪಟ ಜನರು ಎಲೆ ರಾ – ಯ – ಹೀನ –
ತುಚ್ಛರುಗಳ ಮಾತ ಕೇಳ್ವರೆಲೆ ರಾ – ಯ || ೧೫ ||
ಹೆಚ್ಚು ಹಿರಿಯರೆನ್ನದವರ ಎಲೆ ರಾ – ಯ – ಬಹಳ
ತುಚ್ಛದಲ್ಲಿ ಆಡುತಿಹರು ಎಲೆ ರಾ – ಯ || ೧೬ ||
ಸತಿಯ ಮಾತ ಕೇಳಿ ರಾಮು ಎಲೆ ರಾ – ಯ [3] – ತಾನು [3] –
ಮತಿಗೆಟ್ಟಡವಿಯ ತಿರುಗಿದನೆಲೆ ರಾ – ಯ || ೧೭ ||

---

1-1 ತಾವಿಲಿ (ಒ, ಗ. ಚ.) 2-2 ಕೇಳಲರಿಯಾರೆ (ಒ, ಗ, ಚ.) 3-3 ಕಡೆಗೆ (ಡ)

ಸತಿಯ ಮಾತ ಕೇಳಿದವರು ಎಲೆ ರಾ – ಯ – ರಾಜ್ಯ – |
ಸ್ಥಿತಿಯ ತಾವು ಕಾಣಲರಿಯರೆಲೆ ರಾ – ಯ || ೧೮ ||

**ಗ್ರಂಥ** || ರಾಜಾರಾಕ್ಷಸರೂಪಶ್ಚ ಪ್ರಧಾನಂ ವ್ಯಾಘ್ರ ರೂಪಕಃ |
ಪರಿವಾರೋ ಗಾರ್ಧರೂಪಶ್ಚ ಯಥಾ ರಾಜಾ ತಥಾಪ್ರಜಾ || ೧ ||

ಟೀಕು || ರಾಜ ರಾಕ್ಷಸನಂತೆಯೂ, ಮಂತ್ರಿ ವ್ಯಾಘ್ರನಂತೆಯೂ, ಸೇನೆಗಳು ಕತ್ತೆಯಂತೆಯೂ, ಒಬ್ಬರಿಗೊಬ್ಬರಿಗೆ ಕಲಹ ವೈರತ್ವವಿರುವ ರಾಜ್ಯವು ಕ್ಷೀಣವಾಗುವುದೆಂದು ಮತ್ತು ಇಂತೆಂದಂ.

**ಗ್ರಂಥ** || ರಾಜಾ ಪೃಥ್ವೀ ಸಮಶ್ಚೈವ ಪ್ರಧಾ [1] ನಂ ಗಿರಿರೇವ ಚ [1] |
ಪರಿವಾರಃ [2] ಕಲ್ಪವೃಕ್ಷಶ್ಚ [2] ಯಥಾರಾಜಾ [3] ತಥಾ ಪ್ರಜಾಃ [3] ||೨||

ಟೀಕು || ರಾಜನು ಭೂದೇವಿಯಂತೆಯೂ, ಪ್ರಧಾನಿ ಪರ್ವತದಂತೆಯೂ, ಸೇನೆಗಳು ಕಲ್ಪವೃಕ್ಷದ ಹಾಗೆ ಇದ್ದಂಥ ರಾಜ್ಯವು ವೃದ್ಧಿಯಾಗುವುದೆಂದು, ಶ್ರೀ ಬಸವೇಶ್ವರದೇವರು ಪೇಳಲು ಬಿಜ್ಜಳರಾಯಏನೆನ್ನುತಿರ್ದನು.

**ತ್ರಿವುಡೆ.**

ಕೇಳು ಬಸವೇಶ್ವರನೆ ಲೋಕದ | ಕಾಳುಮತಿಯಾ ದೊರೆಗಳ |
ಹೇಳಬೇಡ ಆರೀತಿ ಅವರಿಗೆ – ಹೇಳಬಹುದು || ೧ ||
ಪನ್ನಗೇಂದ್ರನಾಭರಣ ಪರಶಿವ | ನಿನ್ನನಿಲ್ಲೀ ಕಳುಹಿದ |
ನನ್ನ ಕರ್ಮವು ದೂರಹೋಯಿತು – ನಾನು ಮುಕ್ತಾ || ೨ ||
ಲೋಕದೊಳಗಿಹ ಕಾಕು ದೊರೆಗಳು | ಸಾಕು ನನಗೇಂ ಸಾಟಿಯೆ |
ಲೋಕ ನಾಯಕ [4] ದೇ [4] ವ ಕರುಣಿಸು – ವಿವೇಕಿ ನಾನು || ೩ ||
ಅರಸ ನನ್ನಭಿಮಾನ ನಿನ್ನದು | ಅಖಿಳ ರಾಜ್ಯಾಕರ್ತ್ತನು |
ಹರುಷದಿಂ ಸೇರಕ್ಕಿ ಇತ್ತರೆ – ಸಾಕು ನ [5] ಮ [5] ಗೆ || ೪ ||
ನಾನು ನಿನಗೀ ಮಾತು ತಪ್ಪೆನು | ನನ್ನ ಸ್ವಾಮಿ ಜಿನ್ನನ |
[6] ಧ್ಯಾನ [6] ತಪಸಿಗಳಾಣೆ ನಮ್ಮಯ – ಗುರುಗಳಾಣೆ || ೫ ||

ವಚನ || ಇಂತೆಂದ ಬಿಜ್ಜಳನ ಮಾತಿಗೆ ಬಸವಯ್ಯನವರು ಒಪ್ಪಿ ಹರುಷಿತರಾಗಲು, ಆಗ ಬಿಜ್ಜಳರಾಯಂ ಸಕಲ ವೈಭವದಿಂದ, ಬಸವಯ್ಯನವರಂ ಕರೆದೊಯ್ಯುತಿರ್ದನದೆಂತೆನೆ.

---

1-1 ನಿಕಲ್ಪವೃಕ್ಷಯೊ | 2-2 ಕಾಮಧೇನಂ (;ಒ, ಗ, ಡ, ತ.) 3-3 ವೃದ್ಧಿವರ್ಧನಂ (ಒ, ಗ, ಚ, ಟ, ಡ, ತ.) 4-4 ದೈ (ಇ, ಎ, ಟ, ಡ, ಬ.) 5-5 ನ (ಇ, ಎ, ಒ, ಗ, ಬ.) 6-6 ಜ್ಞಾನಿ (ಇ, ಎ, ಗ, ಚ, ಡ, ತ.)

# ಶ್ರೀ ಬಸವೇಶ್ವರನ ಕುಂಜರದಂಬಾರಿಯುತ್ಸವ.

**ಏಕತಾಳ.**

ಪಟ್ಟದಾನೆ [1] ಯ ಮೇಲೆ [1] । ತೊಟ್ಟಿಲ ಶೃಂಗರಿಸೆ ।
ಮುಟ್ಟಯೇರಿದ ಬಸವ । ದೃಷ್ಟ ಮೂರುತಿಯು ॥ ೧ ॥
ಆನೆಯನೇರಿಸಿ । [2] ಅತಿವೇಗ ಬಿಜ್ಜಳ [2] ।
ತಾನು ಸಂತೋಷದಿಂ । ತುರಗವೇರಿದನು ॥ ೨ ॥
ನುಡಿವ ಕಹಳೆಯು ಭೇರಿ । ಹೊಡೆವ ನಿಸ್ಸಾಳವು ।
ಪೊಡವಿ ನಡುಗುವಂತೆ । ಘುಡಿ ಘುಡಿಸಿದವು ॥ ೩ ॥
ಛತ್ರಿಚಾಮರ ಢಾಳು । ಎತ್ತಿ ಮುಂಗಡೆಯೊಳು ।
ಅರ್ಥಿಯಿಂ ಕೈವಾರ । ವೆತ್ತಿ ಉಗ್ಘಡಿಸೆ ॥ ೪ ॥
ಅಂದಳ ಅರಸು ಕು । ಮಾರರು ಎಡಬಲದಿ ।
ಮುಂದೆ ನಂದಿಯ ಧ್ವಜ । ಮುದದಿಂದ ನಡೆಯೆ ॥ ೫ ॥
ಭಟ್ಟರೂಳಿಗದವರು । [3] ಯಷ್ಟಿಯ [3] ನ್ನು ಪಿಡಿದು ।
ಇಟ್ಟಡಿಯ ಸಂದಣಿಯ । ಎಡೆಯ ಬಿಡಿಸುವರು ॥ ೬ ॥
ಮದ್ದಳೆ ತಾಳ ತಂ । ಬೂರಿ ವಾದ್ಯಗಳಿಂದ ।
ಮುದ್ದುವೆಣ್ಗಳ ಮೇಳ । ಮುಂದೊಪ್ಪಿ ನಡೆಯೆ ॥ ೭ ॥
ಆನೆ ಕುದುರೆ ಮಂದಿ । ಸೇನೆ ರಥ ಪತಾಕೆಯಿಂ ।
ತಾನು ನಡೆದನು ರಾಯ । ಆನಂದದಿಂದ ॥ ೮ ॥
ಅರಸು ಬಿಜ್ಜಳ ಮಂತ್ರಿ । ವೆರಸಿ ಬಸವರಾಜ ।
ಸರಸದಿಂ ಕಲ್ಯಾಣ । ಪುರದೊಳು ನಡೆಯೆ ॥ ೯ ॥
ರಾಜ ಬೀದಿಯೊಳೆಲ್ಲ । ರಾಜೀವ ಮುಖಿಯರು ।
ತೇಜದಿಂದಾರತಿಯ । ತರುಣಿಯರ್ ಬೆಳಗೆ * ॥ ೧೦ ॥
ಪುರಜನರೆಲ್ಲ ಸಾಂ । ಬ್ರಾಣಿ ಧೂಪಗಳಿಂದ ।
ಭರದಿ ಅರ್ಪಿಸುತಾಗ । ಹರುಷದಿಂ ನಡೆಯೆ * ॥ ೧೧ ॥
ಬೀದಿ ಬೀದಿಗಳೊಳು । ಸಾದು ಕಸ್ತೂರಿ ಚಳಯ ।
ಮೋದದಿಂ ಪುಷ್ಪ ನಿ । ವಾಳಿಸುತ್ತಿರಲು * ॥ ೧೨ ॥
ಬಸವ ಕುಮಾರನೆ । ಶಶಿಧರ ಸಮರೂಪ ।
ಅಸಮಾಕ್ಷ ಜಯವೆಂದು । ವಸುಧೆಯುಗ್ಘಡಿಸೆ ‡ ॥ ೧೩ ॥

ವಚನ ॥ ಇಂತೀ ವೈಭವದಿಂದ ಮುಂಚೆ ಬರೆಬರೆ, ಪಟ್ಟಣದ ಪ್ರಜೆಗಳೆಲ್ಲ ನೋಡಬರುತಿರ್ದರದೆಂತೆನೆ.

---

1-1 ಗೆರಸ್ನ (ಇ, ಗ.) 2-2 ಹರಭಕ್ತ ಬಸವನ (ಚ.) 3-3 ಕಟ್ಟಿಗೆ (ಅ, ಟ, ಡ, ತ, ದ, ಬ.) * ಈ ಪದ್ಯಗಳು (ಒ, ಖ, ಡ, ತ.)ಪ್ರತಿಗಳಲ್ಲಿ ಮಾತ್ರವಿದೆ.
‡ ಈಪದ್ಯ (ಜ)ಪ್ರತಿಯಲ್ಲಿ ಮಾತ್ರವಿದೆ.

**ಜಂಪೆ.**

ಧರೆಗಧಿಕ ಬಸವನಾ । ಮೆರವಣಿಗೆ ನೋಡುವರೆ ।
ಪುರದ ಜನ ಬರುವ ಭರ । ವಸವನೇನೆಂಬೆ ॥ ೧ ॥
ತಡೆಬಡೆಯಗೊಳ್ಳುತಲಿ । ಎಡಹಿ ಮುಗ್ಗರಿಸುತ್ತ ।
ಕೆಡುವದರಿಯದೆವೋಡಿ । ನಡೆಯೆ ಪುರಜನರು ॥ ೨ ॥
ಅಂಗನೆಯರಾಭರಣ । ಶೃಂಗಾರವನು ತಮ್ಮ ।
ಅಂಗದೊಳು ತೊಡುವ ತೀ । ವ್ರಂಗಳೇನೆಂಬೆ ॥ ೩ ॥
ಒಡೆಯ ಬಸವನನೋಳ್ಪ । ಕಡು ವೇಗಲೋರ್ವಸತಿ ।
ಉಡುವದಿತಿ ತಡವೆಂದು । ನಡುವ ಸುತ್ತಿದಳು ॥ ೪ ॥
ಚರಣ ಕಡೆಯವ ತನ್ನ । ಕರಕಿಟ್ಟು ಒಬ್ಬ ಸತಿ ।
ಕರದ ಕಡಗವ ತನ್ನ । ಚರಣಕಿಕ್ಕಿದಳು ॥ ೫ ॥
ಕೊಪ್ಪು ನಾಸಿಕಕ್ಕಿಟ್ಟು । ಸುಪ್ಪಾಣಿ ಮೂಗುತಿಯ ।
ಒಪ್ಪದಿಂದಲಿ ಕಿವಿಗೆ । ತಪ್ಪದಿಕ್ಕಿದಳು ॥ ೬ ॥
ಮೃಡನ ಭಕ್ತನನೋಳ್ಪ । ಕಡುವೇಗಲೊಬ್ಬ ಸತಿ ।
ನಡುವಿನೊಡ್ಯಾಣ ಕೊರ । ಳೆಡೆಗೆ ಧರಿಸಿದಳು * ॥ ೭ ॥
ಕಾಲುಂಗುರವ ತೆಗೆದು । ಕೀಲಿಸಿಯೆ ಕೈ ಬೆರಳ್ಗೆ ।
ಕಾಲಿಗಿಟ್ಟಳು ಕೈಯ್ಯ । ಬೆರಳ ಮುದ್ರಿಕೆಯ ॥ ೮ ॥
ಅಡಕೆ ಬಾಯೊಳಗಿಟ್ಟು । ಮುಡುಪು ಕಿವಿಯೊಳಗಿಟ್ಟು ।
ಕಡುವೇಗ ಒಬ್ಬ ಸತಿ । ನಡೆದು ನೋಡುವಳು ॥ ೯ ॥
ಸಣ್ಣ ಬಣ್ಣವನುಟ್ಟು । ಎಣ್ಣೆಗಂಟನು ಹಾಕಿ ।
ಕಣ್ಣು ಕಪ್ಪಿನ ಜಾಣೆ । ವೆಣ್ಣುಗಳು ನಡೆಯೆ ॥ ೧೦ ॥
ಕಡಗ ಕಂಕಣ ಕೀಲು । ಜಡಿವ ಒಡ್ಯಾಣದತಿ ।
ಬೆಡಗುವೆಣ್ಗಳು ಕೂಡಿ । ನಡೆದರತಿ ಜೇಗ ॥ ೧೧ ॥
ಬನ್ನಿರೇ ಅಕ್ಕಗಳು । ಬನ್ನಿರೈ ಅಣ್ಣಗಳು ।
ಬನ್ನಿರೆಲ್ಲರು ಬಸವ । ನನ್ನು ನೋಡುವರೆ ॥ ೧೨ ॥
ಮುಕ್ತ್ಯಾಂಗನೆಯರೆಲ್ಲ । ಮುತ್ತಿನಾರತಿವಿಡಿದು ।
ಮೊತ್ತ ಮೊತ್ತದಿ ಬಸವ । ಗೆತ್ತೆ ಆರತಿಯ ॥ ೧೩ ॥
ಗುಡಿ ಗೋಪುರದಿ ಸಜ್ಜೆ । ವಿಡಿದುಪ್ಪರಿಗೆ ಸಂದು ।
ಗೊಡದೆ ನೋಟಕ ಜನಕೆ । ಯೆಡೆಯಿಲ್ಲ ತಾವು * ॥ ೧೪ ॥
ಅಂಬರದಿ ದೇವಸಭೆ । ಮುಂಬರಿದು ನೋಡುತಲಿ ।
ಗಂಭೀರ ಪೂಮಳೆಯ । ಸಂಭ್ರಮದಿ ಸುರಿಯೆ ॥ ೧೫ ॥

* ಈ ಪದ್ಯಗಳು (ಗ, ಜ.) ಪ್ರತಿಗಳಲ್ಲಿಲ್ಲ.

ವಚನ || ಈ ರೀತಿಯಲ್ಲಿ ಸಕಲ ಸಂಭ್ರಮದಿಂ ಅರಮನೆಗೆ ಬಿಜಯಂ ಗೆಯ್ದು, ರತ್ನಖಚಿತವಾದ ಸಿಂಹಾಸನದ ಮಧ್ಯದಲ್ಲಿ ಬಸವೇಶ್ವರದೇವರಂ ಬಿಜ್ಜಳ ರಾಯನು ಕರವಿಡಿದು ಮೂರ್ತವಂ ಮಾಡಿಸಿ, ಕುಳಿತಿರುವ ಸಮಯದಲ್ಲಿ ಕೈಲಾಸದಿಂದ ಲಿಪಿಗಳ್ಳ ಬೀಳಲು, ಆಗ ಬಿಜ್ಜಳರಾಯನು ಕರಣಿಕರಂ ಕರೆಸಿ ಏನನ್ನುತಿರ್ದನು.

## ಶ್ರೀ ಬಸವೇಶ್ವರನು ದೇವಲಿಪಿಯನ್ನು ಓದಿದ ಪವಾಡ.

**ದ್ವಿಪದಿ.**

ಸಕಲ ಸಾಮಾಜಿಕರು ಸರ್ವರಿರುತಿಹರು |
ಅಖಿಳ ಶಾಸ್ತ್ರವ ಬಲ್ಲ ಆಗಮಾಯುತರು || ೧ ||
ಅಟ್ಟವಶೆ ಕುಳವರ್ಗ ಅಧಿ[1]ಕ ಪ್ರತಿಕರ್ತ[1] |
ಶ್ರೇಷ್ಠರಾದರು ಬನ್ನಿ ಸೇರಿಲ್ಲಿತನಕ || ೨ ||
ವೇದ ಶಾಸ್ತ್ರಾಗಮವ ಸಾಧಿಸಿರ್ದವರು |
ವೇದಾಗಮಗಳರ್ಥ ಶೋಧಿಸಿರ್ದವರು || ೩ ||
ವೇದ ಶಾಸ್ತ್ರಗಳನ್ನು ಒಡಲ ತುಂಬಿದರು |
ಎಂದು[2] ಕರೆಸ[2]ಲು ರಾಯರೆಲ್ಲರೊಂದಾಗಿ || ೪ ||
ಬಂದು ನೋಡಿದರು ಲಿಪಿಯ ಬಹಳ ಬಗೆಯಲ್ಲಿ |
ಹಿರಿಯರೂ ಕಿರಿಯರೂ ನೆರೆ ಜಾಣರೆಲ್ಲ || ೫ ||
ಒರೆದು ನೋಡೀ ಲಿಪಿಯ ಒಡಲ ಬಲ್ಲವರು |
ಆರೆ ಪಾರಸಿಯಲ್ಲ ಅರಬ್ಬಿಯಲ್ಲ || ೬ ||
ಗೀರ್ವಾಣ ತಾನಲ್ಲ ಗಿರಿಜೆಪತಿ ಬಲ್ಲ |
ಆಂಧ್ರ ದ್ರಾವಿಡ ಕನ್ನಡಾದಿ ಮೊದಲಾದ || ೭ ||
ಹೊಂದಿದಾ ಲಿಪಿಯಲ್ಲ ಹೊಸತು ಈಧರೆಗೆ |
ಎಂದು ಎಲ್ಲರು[3] ನೋಡಿ[3] ಯಾರು ತಿಳಿಯದಲೆ || ೮ ||
ಮುಂದುಗಾಣದೆ ಎಲ್ಲ ಮುಖವ ಬಗ್ಗಿಸಲು |
ಅಂದು ಕಂಡನು ರಾಯ ಅವರ ಬಗೆಯನ್ನು* || ೯ ||

ವಚನ || ಇಂತು ಮುಖವಂತಗ್ಗಿಸಿದ ಕರಣಿಕರಂ ನೋಡಿ, ಬಿಜ್ಜಳರಾಯ ಏನೆನ್ನುತಿರ್ದನು.

**ಕೊಂಚೆ ಜಂಪೆ.**

ಅಗ್ರಹಾರವನುಣ್ಣ ಬನ್ನಿ – ಹೆರರೊಡವೆ | ನುಗ್ಗಾಡಿ ತಿನ್ನುವರೆ ಬನ್ನಿ |
ಸ್ವರ್ಗತನಕಲಿ ಮಾತಾಡಬನ್ನಿ – ನಿಮ್ಮ | ಅಗ್ಗ[4]ಳಿಯ[4] ಕಳಕೊಂಡೆವೆನ್ನಿ || ೧ ||

---

1-1 ಪತಿಗಳಾದ (ಇ, ಒ, ತ.) 2-2 ಪೇಳ (ಅ, ಒ, ಜ, ಪ, ತ, ಬ.) 3-3 ನೋಂದಿ (ಇ, ಒ, ತ.) * ಈ ಅರ್ಧ ಪದ್ಯ (ಅ, ಒ, ಜ, ಬ.) ಪ್ರತಿಗಳಲ್ಲಿಲ್ಲ. 4-4 ಳಿಕೆ (ಒ, ಗ, ಚ.)

ತೊವ್ವೆ ತುಪ್ಪ ಪಾಯಸ ಉಣ್ಣ ಬನ್ನಿ – ಹೊಟ್ಟೆಯನು। ನೇವರಿಸಿ ಬಿವರಿಸಿ ಉಣ್ಣ ಬನ್ನಿ।
ಜಗದ ಮಾತುಗಳಾಡ ಬನ್ನಿ – ನಿಮ್ಮ। ಬಗೆ ಇಲ್ಲಿ ಕಾಣಿಸಿತು ಎನ್ನಿ ॥ ೨ ॥
ಯಕ್ಷರೊಳಗಣ ಮಾತನೆಲ್ಲ – ಒಂದು। ಲಕ್ಷವಾದರೆ ನುಡಿವಿರೆಲ್ಲ।
ಭಿಕ್ಷಪಾತ್ರಕರು ನೀವೆಲ್ಲ – ಮೂರು। ಅಕ್ಷರವ ಗುರುತರಿಯರಲ್ಲ ॥ ೩ ॥
ಮಧುವರಸ ಜಾಣ ಮಂತ್ರೀಶ – ಒಬ್ಬ। ಚದುರನಿಲ್ಲವೆ [1]ಮಂತ್ರಿ[1] ಪ್ರಕಾಶ।
ಸದರಿನೊಳು ಎನ್ನ ಮನ ಲೇಸ – ಪಡೆವ। ಹೃದಯನನು ತೋರು ಮಂತ್ರೀಶ ॥ ೪ ॥
ಕೇಳು ಬಿಜ್ಜಳರಾಯ ನೀನು – ಸದ್ಯ। ಭಾಳಾಕ್ಷ ಬಸವಯ್ಯ ತಾನು।
ಪೇಳುವನು ಸಕಲ ವಿವರವನು – ಮನಸು। [2]ಕೋಳು ಹೋಗದೆ[2] ಕೇಳು ನೀನು ॥೫॥

ವಚನ ॥ ಆ ಮಾತಿಗೆ ಬಿಜ್ಜಳರಾಯಂ ಸಂತೋಷಂಬಟ್ಟು, ಬಸವಯ್ಯನ ಮುದ್ದಿಸಿ ಮುಂಡಾಡಿ ಮುಖವಂ ನೋಡಿ, ಈ ಲಿಪಿ ಶಾಸ್ತ್ರಮಂ ಹಸ್ತದಲ್ಲಿತ್ತು ಎನ್ನ ದೇವ ಈ ಪ್ರಸಾದ ವಾಕ್ಯಮಂ ಪಾಲಿಸೆನಲು, ಬಸವೇಶ್ವರದೇವರು ಆ ಲಿಪಿ ನಿರೂಪಮಂ ಓದುತ್ತಿರ್ದರದೆಂತೆನೆ.

**ಕಂದ ಪದ್ಯ**

ಶ್ರೀ ಮತು ಗಿರಿಜಾನಾಥಂ।
ಪ್ರೇಮದಿ ಬಿಜ್ಜಳಗೆ ಹರಸಿ ಕಳುಹಿದ ವಿವರಂ॥
ಹೇಮಗಿರಿ ಪ್ರಮಥ[3] ನಿಕರಂ[3]।
ಭೂಮಿಗೆ[4] ಬಂದಿಹರಿದ ತಿಳಿ[4] ತಾಮಸ ಬೇಡಂ ॥ ೧ ॥
ಧರೆ ಹೆಚ್ಚುತ್ತೈತೆ ರಾಜ್ಯದ।
ಸಿರಿ ಹೆಚ್ಚುಗೆ ಮುಂದೆ ನಿನ್ನ ಭೋಗಂ ಪೆರ್ಚುಗುಂ॥
ಪುರ ನಾಲ್ವತ್ತೆಂಟು ಯೋಜನ।
ಭರದಿಂ ಕಲ್ಯಾಣ ಹಿಗ್ಗಿ ಮೆರವುದು ಮುಂದುಂ ॥ ೨ ॥
ಅರಸನ ಗದ್ದುಗೆ ಕೆಳಗೆಯೆ।
ಇರುವುದು ಏಳ್ತಾಳದೇಳು ಕೊಪ್ಪರಿಗೆ ಹಣಂ॥
ಇರುವುದು ಮುತ್ತಿನ ಗದ್ದುಗೆ।
ಗುರುತಿದು ನೋಡೀಗ ರಾಯ ಪರಿಕಿಸು[5] ಎಂದಂ[5] ॥ ೩ ॥

**ಜಂಪೆ.**

ಎಂದ ಮಾತಿಗೆ ರಾಯ। ಒಂದಾರು ಭುಜವಾಗಿ।
ಇಂದು ಇದರೊಳು ಕಾಂಬೆ। ನಂದಿ ಮಹಿಮೆಯನು ॥ ೧ ॥

---

1-1 ಸಭೆಗೆ (ಚ.) 2-2 ಊನವಿಲ್ಲ (ಅ, ಉ, ಒ, ಜ, ಟ, ಡ, ತ, ಬ.) 3-3 ಗಣರೀ (ಅ, ಚ, ಟ, ಬ.) 4-4 ಬರುತಹರೆಯಚ್ರ। (ಅ, ಇ, ಉ, ಎ,ಟ, ಡ, ತ, ದ, ಬ.) 5-5 ಬೇಗ (ಅ, ಟ, ಡ, ತ, ದ, ಬ.)

ಬಸವನ ಮಹಾತ್ಮೆಯನು । ಒಸೆದು ನೋಡಿದರೊಳಗೆ ।
ಹುಸಿಯಿಲ್ಲದಿರೆ ರಾಜ್ಯ । ವಶವ ಮಾಡುವೆನು ॥ ೨ ॥
ಎಂದು ಗದ್ದುಗೆಯ ಕೆಳ । ಗಂದಗಿಸಿದನು ರಾಯ ।
ಅಂದು ಕಂಡನು ಬಸವ । ನೆಂದಂಥ ಕುರು[1] ಹ[1] ॥ ೩ ॥
ಏಳು ಕೂರಿಗೆಯ ತಾ । ಳಿನ ಪ್ರಮಾಣದಿ ಹೊನ್ನು ।
ಏಳು ಕೊಪ್ಪರಿಗಿರಲು । ತಾಳಿ ಹರುಷವನು ॥ ೪ ॥
ಮತ್ತೆ ಕಂಡನು ರಾಯ । ಮುತ್ತಿನ ಸಿಂಹಾಸನವ ।
ಎತ್ತಿ ಮುಂಡಾಡಿದನು । ಸತ್ಯ ಮೂರುತಿಯ ॥ ೫ ॥
ಬಾರಯ್ಯ ಬಸವಯ್ಯ । ಬಾರೆನ್ನ ಜೀವನವೆ ।
ಬಾರಯ್ಯ ಜಗದೊಳಗೆ । ಆರು ಸರಿ ನಿಮಗೆ ॥ ೬ ॥
ಅಖಿಳ ರಾಜ್ಯವು ಎನ್ನ । ಅರಮನೆಯ ಬೊಕ್ಕಸವು ।
ಸಕಲ ನಿನ್ನದು ಎನ್ನ । ಸಲಹು ಬಸವಯ್ಯ ॥ ೭ ॥
ಎನ್ನ ಸೋದರಿ ನೀಲ । ಲೋಚನೆಯ ಬಸವಯ್ಯ
ಇನ್ನು ನಿಮಗಿತ್ತು ವಿ । ವಾಹ ಮಾಡುವೆನು ॥ ೮ ॥
ಎಂದು ನೀಲಾಂಬಿಕೆಯ । ಅಂದು ಬಸವಯ್ಯನಿಗೆ ।
ಇಂದುಧರಮೆಚ್ಚಿ ವಿವಾ । ಹವನು ಮಾಡಿದನು ॥ ೯ ॥
ಸಕಲ ವಿನಿಯೋಗ ಸ । ನ್ನಾಹದೊಳು ಬಸವನಿಗೆ ।
ಅಖಿಳ ರಾಜ್ಯದ ಮುದ್ರೆ । ಆಗಿತ್ತ ಕರಕೆ ॥ ೧೦ ॥
ಮಂಡಲದಿ ಬಸವಂಗೆ । ದಂಡನಾಯಕ ಪಟ್ಟ ।
ಮಂಡಲೇಶ್ವರನಿ[2] ತ್ತ । ಸಂಧಿ ಸಂಪೂರ್ಣಂ[2] * ॥ ೧೧ ॥

**ಕಂದಪದ್ಯ.**

ಇದು ಬಸವ ವಿವಾಹೋತ್ಸವ । ಸದು ಹೃದಯರುರೆ ಬಕುತಿಯಿಂ ಕೇಳಲ್ ॥
ಒದಗುವುದಾಯುಂ ಶ್ರೀಯುಂ । ಮುದದಿಂ ಚೆನ್ನಪ್ಪನೊರೆದೀ ಕಾವ್ಯವನೀಗಳ್ ॥

ಇಂತಿ ಪದ್ಯಗಳು ೪೬೧

**ಅಂತು ಸಂಧಿ ೬ ಕ್ಕಂ ಸಂಪೂರ್ಣ ಗಣನೆ – ೧೪೯೦ ಕ್ಕಂ ಮಂಗಳಮಹಾ**

**ಶ್ರೀ ಶ್ರೀ ಶ್ರೀ ಶ್ರೀ ಶ್ರೀ**



1-1 ಹುಗಳ (ಇ, ಉ, ಎ, ಒ, ಗ, ಚ, ತ.) 2-2 ತ್ತು । ಅಂ...ರಮುಗಿದ ॥ (ಜ.) * ಈ ಪದ್ಯ (ಎ, ಜ.) ಪ್ರತಿಗಳಲ್ಲಿ ಮಾತ್ರವಿವೆ.

# ಏಳನೆಯ ಸಂಧಿ

# ಕಲ್ಯಾಣ ಪಟ್ಟಣದ ವರ್ಣನೆ

**ವೃತ್ತ.**

ಶ್ರೀ ಗುರು ಸಂಗನ ಬಸವ ರಾಜನಡಿಗಂ ಶ್ರೀ ಅಲ್ಲಮನಂಘ್ರಿಗಂ
ಶ್ರೀ ಗುರು ಸೊನ್ನಲದ ಸಿದ್ಧರಾಮನಡಿಗಂ ರುದ್ರಮುನಿಯಂಘ್ರಿಗಂ ।
ಶ್ರೀ ಗುರು ಚೆನ್ನಬಸ[1] ವನ ಪಾದದ ಯುಗಕಂ[1] ವೀರಮಡಿವಾಳಗಂ ।
ಈಗ ಗಣಂಗಳ ಪದಕೆ ವಂದಿಸುತಲಾಂ ಸಾಗಿಸುವೆ ನೀ ಕಾವ್ಯಮಂ ॥ ೧ ॥

**ಏಕತಾಳ.**

ಬಸವನ ಮಹಿಮೆಯು । ಪಸರಿಸೆ ಪುರವೆಲ್ಲ ।
ಪಶುಪತಿ ಸಾಕ್ಷಾತು । ಬಲದೇವನಳಿಯ * ॥ ೧ ॥
ದಿನ ಮೂರುಗಳೆದಾಗ । ಘನ ಹರುಷದೊಳಾಗ ।
ಜನಪ ಬಿಜ್ಜಳ ನೋ । ಲಗದ ಮಧ್ಯದಲಿ * ॥ ೨ ॥
ಗಣಿಕ ಸಾಮಾಜಿಕ । ಘನ ಉದ್ಯೋಗಸ್ಥರು ।
ಅನುವಿಂದ ಓಲೈಸಿ । ಇರಲಾಗ ಸಭೆಯು * ॥ ೩ ॥
ಭರದಿ ಬಸವ ಬಂದು । ಮೆರೆವ ಹಜಾರಕ್ಕೆ ।
ಕರೆದು ಕೇಳಿದ ರಾಜ್ಯ । ದಿರವ ನಿರ್ಣಯವ ॥ ೪ ॥
ಸಕಲ ಸಾಮಾಜಿಕ । ಸಭೆ ಪ್ರತಿ ಕರ್ತರ ।
ಅಖಿಳ ರಾಜ್ಯದ ಸಿಸ್ತ । ನರುಹ ಬೇಕೆಂದ ॥ ೫ ॥
ತೆರಿಗೆ ಹೊರೆಯು ಸುಂಕ । ತೆರುವೆರಾಳುವೆ ವೆಚ್ಚ ।
ಧರೆಯ ಧರ್ಮವನೆಲ್ಲ । ಇರದೆ ಕೇಳಿದನು ॥ ೬ ॥
ಹರಿ ಹರ ಬ್ರಹ್ಮಾದಾಯ । ಬೊಕ್ಕಸದ ದ್ರವ್ಯವ ।
ಧರಣಿ ಪತಿಗಳು ತೆರುವ । ಕಪ್ಪ ಕಾಣಿಕೆಯ † ॥ ೭ ॥
ಮುಡುಪು ಬೊಕ್ಕಸ ಚೀಟು । ಪೊಡವಿನಾಣ್ಯದ ಹುಟ್ಟು ।
ಗಡಿದುರ್ಗ ನಡವಳಿ । ಬಿಡದೆ ಕೇಳಿದನು ॥ ೮ ॥
ಸಕಲ ನಿರ್ಣಯ ಲೆಕ್ಕ । [2] ಕೇಳಿ ಹರುಷವ ತಾ [2] ಳಿ ।
ಅಖಿಳ ಜನಕೆ ಜೀವ । ಸುಖದಿ ನಡೆಸಿದನು ॥ ೯ ॥

---

1-1 ವೇಶ ನಂಘ್ರಿಗೆರಗಿಂ (ಅ, ಉ, ತ.) * ಈ ಪದ್ಯಗಳು (ಉ, ಎ, ಖ, ಗ, ಚ.) ಪ್ರತಿಗಳಲ್ಲಿ ಮಾತ್ರವಿದೆ. † ಈ ಪದ್ಯ (ಇ, ಜ, ಟ, ದ.) ಪ್ರತಿಗಳಲ್ಲಿಲ್ಲ. 2-2 ಜಾಣ್ಮೆಕೆಂದಕೇ (ಬ.)

ವರ ಮಾತೆ ಪಿತರಾ । ರ್ಜಿತ ದ್ರವ್ಯ ಭಾಗವ ।
ತೆರೆದು ತೋರಿದ ರಾಯ । ಸ್ಥಿರದಿ ನಡಸೆಂದು * ॥ ೧೦ ॥
ವಿಕ್ರಮ ಸಂವತ್ಸರ । ಲೆಕ್ಕ ಶೋಧನೆಗೊಂಡು ।
ಇಕ್ಕಿದ ಸರ್ವಕ್ಕು । ಆಪ್ತರಹ ಜನವ * ॥ ೧೧ ॥
ತರಣಿ ತೇಜದ ದಿವ್ಯ । ಅರಮನೆ ಬಿಡದಿಯ ।
ಧರಣೀಶನಿತ್ತನು । ದೊರೆ ಮಂತ್ರಿಗಾಗ ॥ ೧೨ ॥
ಅಂದು ಬಸವಯ್ಯನ । ಮಂದಿರಕೆ ಕಳುಹಿಸಿ ।
ಬಂದು ಗೃಹದಿ ರಾಯ । ನಂದುಕುಳ್ಳಿರ್ದ ॥ ೧೩ ॥
ಸಕಲ ಸ್ವೈಧನ ಶಾಖ । ಘೃತ ಮುಖ್ಯ ವಸ್ತುವ ।
ಅಖಿಳೋಪಚಾರವ । ಅರಸ ಕಳುಹಿಸಿದ ॥ ೧೪ ॥
ಬಸವ ಬಂದುಲುಪೆಯ । ನೊಸೆದು ತಾ ಕೈಕೊಂಡು ।
ಶಶಿಧರನ ಭಕ್ತಿ ಸಂ । ತಸದೊಳಗಿರ್ದ ॥ ೧೫ ॥
ವಸುಧೆಯೊಳ್ಬಸವ ಕಲ್ಪ । ದ್ರುಮದ ಫಲವ ಕಂಡು ।
ಶಶಿಧರ ಶರಣ ಪ । ಕ್ಷಿಗಳೆರಗಿದುವು ॥ ೧೬ ॥

**ದ್ವಿಪದಿ.**

ಶ್ರೀ ಗುರು ವರ ಭಕ್ತಿ ಸ್ಥಿರಗೊಳಿಸಿ ಮುಕ್ತಿ ।
ಭೋಗ ಮೋಕ್ಷಾರ್ಥಗಳ ಬಗೆಗೊಂಬ ಯುಕ್ತಿ ॥ ೧ ॥
ಯೋಗಿ ಜನ ಶಿವಶರಣರೊಲಿಸುವಾ ಶಕ್ತಿ ।
ಬೇಗ ಈಶ್ವರನಂಘ್ರಿ ಬೆರೆವ ವಿರಕ್ತಿ ॥ ೨ ॥
ಸಕಲ ಸಮ್ಯಜ್ಞಾನ ಸಹಜ ಮಾರ್ಗದಲಿ
ಅಖಿಳ ಜನರೊಳಗೊಬ್ಬನಾಗಿ ಬಸವಯ್ಯ ॥ ೩ ॥
ಶಿವಭಕ್ತಿ ಶಿವಪೂಜೆ ಶಿವಮಾರ್ಗಗಳನು ।
ಭುವಿಯೊಳಂಗೀಕರಿಸಿ ಭೂ ಭಾರ ವಹಿಸಿ ॥ ೪ ॥
ಅರಸು ಆಳುವ ರಾಜ್ಯ ಅಷ್ಟದೆಸೆಗಳಲಿ ।
ವರ ಪೇಟೆ ಕಾವಲು ಕ್ರಮಗಳು ತಪ್ಪದಂತೆ ॥ ೫ ॥
ಧರೆಯೊಳಗೆ ಧರ್ಮ ನಡವಳಿ ತಪ್ಪದಂತೆ ।
ದೊರೆಗಳಿಗೆ ಸಲುವ ದ್ರವ್ಯವು ಹೋಗದಂತೆ ॥ ೬ ॥
ಕೆರೆಯು ಕಾಲುವೆ ಕೂಪ ಸರಸಿಗಳ ನಿರ್ಮಿಸುತ ।
ಸ್ಥಿರಗೊಳಿಸಿ ಭೂಮಿಗಚ್ಚರಿಯಾಗುವಂತೆ ॥ ೭ ॥
ಕದಳಿ ಮಾಮರ ತೆಂಗು ವಕುಳ ಖರ್ಜೂರ ।
ಪುದಿದ ಬನ ಪುಷ್ಪವಾಟಿಗಳು ಜಗವೆಲ್ಲ ॥ ೮ ॥

* ಈ ಪದ್ಯಗಳು (ಇ, ಜ, ಟ, ದ.) ಪ್ರತಿಗಳಲ್ಲಿಲ್ಲ.

ಮಿಗೆ ಹೆಚ್ಚಿ ಮಳೆ ಬೆಳೆಯು ಮಿತಿತಪ್ಪದಂತೆ ।
ಸೊಗಸು ಮಾರುತ ಸಕಲ ಜಗವು ಸೊಂಪಡರಿ ॥ ೯ ॥
ಅಕಂಳಕ ಪರಶಿವನ ಆಜ್ಞೆಯೊಳಲ್ಲಿ ।
ಅಖಿಳ ರಾಜ್ಯದೊಳೆಲ್ಲ ಬರವಿಲ್ಲದಂತೆ ॥ ೧೦ ॥
ಶರಜರಿಪುವನು ನೆನೆವ ಚಕೋರನಂತೆ ಬಸವ ।
ಇರುತಿರ್ದ ಶರಣರಾ ಬರವ ಹಾರೈಸಿ ॥ ೧೧ ॥

ವಚನ ॥ ಸಕಲ ರಾಜ್ಯದ ಸ್ಥಿತಿಯ ನಿರ್ಣಯಿಸುತ್ತ ಸಕಲ ದೇಶದ ವರ್ತಕ ಪ್ರಜೆಗಳಂ ಕರೆಸುತ್ತ ಕಾಲಕ್ರಮಗಳಂ ನಡೆಸುತ್ತ ಇರಲು, ಸಕಲ ದೇಶದ ವರ್ತಕ ಪ್ರಜೆಗಳೂ ಸಹ ತುಂಬಿ, ಕಲ್ಯಾಣ ಪಟ್ಟಣ ಬೆಳೆವುತಿರ್ದುದದೆಂತೆನೆ.

**ಜಂಪೆ.**

ಹರಿಣ ಧರ ಕಿರಣಕಾಂ । ಬುತ ಶರಧಿ ಹೆಚ್ಚುವಂತೆ ।
ಇರೆ ಧರೆಗೆ ಅರಿದೆನಿಸಿ । ಮೆರೆಯೆ ಕಲ್ಯಾಣ ॥ ೧ ॥
ಧರೆಗಧಿಕ ಶ್ರೀ ಗಿರಿಯ । ಪರುಷೆ ಕೂಡುವ ತೆರದಿ ।
ಹಿರಿದಡವಿ ಜನ ತುಂಬಿ । [1] ಪುರವು ಕಾಣಿಸಿತು [1] ॥ ೨ ॥
ತಟ್ಟೆ ಹನ್ನೆರಡು ಯೋ । ಜನದಳತೆಯಾ ಕೋಟೆ ।
ಹುಟ್ಟಿತದು ಕಲ್ಯಾಣ । ಪಟ್ಟಣವ ಬಳಸಿ ॥ ೩ ॥
ಊರು ಬಾಗಿಲು ಅದಕೆ । ಸಾವಿರದ ಎಂಬತ್ತು ।
ಚೋರ ದಿಡ್ಡಿಗಳದಕೆ । ನೂರ ಹದಿನೈದು ॥ ೪ ॥
ಪ್ರಜ್ವಲಿಪ ಮುನ್ನೂರು । ಅರವತ್ತು ಬಾಗಿಲಿಗೆ ।
ವಜ್ರಧಾರೆಯ ಕದವು । ಸಜ್ಜಾಗಿ ಒಪ್ಪೆ ॥ ೫ ॥
ಇನ್ನು ನಾನೂರ । ಅರವತ್ತು ದ್ವಾರಗಳು ಸು ।
ವರ್ಣಗೆಲಸದ ಕದವು । ಚೆನ್ನಾಗಿ ಇಹವು ॥ ೬ ॥
ಇನ್ನೂರ ಹದಿನೈದು । ಕಲ್ಲುಗೆಲಸದ ಕದವು ।
ಚೆನ್ನಾಗಿ ಬಿಲದ್ವಾರ । ಚೆಲ್ವಿನಿಂದಿಹವು ॥ ೭ ॥
ನೂರ ಇಪ್ಪತ್ತೈದು । ಚೋರದಿಡ್ಡಿಗಳದಕೆ ।
ಸೇರಿಸಿದ ಮೊಳೆಯ ಕದ । ತೋರಿ ಒಪ್ಪಿಹವು ॥ ೮ ॥
ಮುನ್ನೂರು ಅರವತ್ತು । ಸಣ್ಣ ದಿಡ್ಡಿಗಳದಕೆ ।
ಚೆನ್ನಾಗಿ ಅಲ್ಲಲ್ಲಿ । ಇನ್ನೊಪ್ಪುತಿಹವು ॥ ೯ ॥
ಸೊಗಸಿಂದ ಇಪ್ಪತ್ತು । ತೆಗೆದ ಹೆಬ್ಬಾಗಿಲು ।
ಹಗಲಿರುಳು ಯಾವಾಗ । ತೆಗೆದು [2] ರಾಜಿಪವು [2] ॥ ೧೦ ॥

1-1 ಮೆರೆಯೆ ಕಲ್ಯಾಣ (ಇ, ಒ.) 2-2 ಕೊಂಡಿಹರು (ಅ, ಜ, ಬ.)

ಅಂತರಾಂತರದಿ ಕೊ । ತ್ತಳ ಕೋಟಿ ತೆನೆಗಳ[1] ಲಿ[1] ।
ಅಂತರಾಂತರದಿ ಎ । ತ್ತಿದ ಹೊನ್ನ ಕಳಶ ॥ ೧೧ ॥
ಟೆಂಟಣಿಸುತ ಬಳಸಿ । ದಾ ಕೋಟಿ ನಾಲ್ವತ್ತು ।
ಎಂಟು ಯೋಜನದ ವಿ । ಸ್ತೀರ್ಣದೊಳಗಿಹುದು ॥ ೧೨ ॥

ವಚನ ॥ ಇಂತಿರ್ದ ಪುರದ ಶೃಂಗಾರಮಂ ಪೇಳ್ವೆನದೆಂತೆನೆ.

**ತ್ರಿವುಡೆ.**

ಹನ್ನೆರಡು ಬಿಲ್ಲಳತೆಯಗಲವು । ಹನ್ನೆರಡು ಯೋಜನದ ನೀಳವು ।
ಉನ್ನತದಲೊಪ್ಪುವವು ಸೋಮ – ಸೂರ್ಯ ವೀದಿಗಳು ॥ ೧ ॥
ಸದನ ಸಾವಿರ ಲಕ್ಷ ಸಂಖ್ಯೆಯು । ಮದನ ಮಂಟಪ ಮಂದಿರಂಗಳು ।
ಪುದಿದ ಗುಡಿ ಗೋಪುರವು ಸೌಧವೆ – ಲ್ಲೆಡೆಯು ನೋಡಿದರೆ ॥ ೨ ॥
ಲಕ್ಷ ತೊಂಬತ್ತಾರು ಸಾವಿರ । ಲೆಕ್ಕದಲಿ ಶಿವನಿಳೆಯಕೊಪ್ಪುವ ।
ಅಕ್ಷಯನು ಅಗಣಿತನು ತ್ರಿಪುರಾಂ – ತಕನು ಒಪ್ಪಿಹನು ॥ ೩ ॥
ಪುರದೊಳಗೆ ಅಲ್ಲಲ್ಲಿಗೊಪ್ಪುವ । ಕೆರೆಯು ಕಾಲುವೆ ತೋಟ ವನಗಳು ।
ಸರಸಿರುಹ[2] ತುಂಬಿ[2] ರ್ದ ಮಡು ಮು – ನ್ನೂರು ಅರವತ್ತು ॥ ೪ ॥
ಎರಡು ಲಕ್ಷದ ಮೇಲೆ ಇಪ್ಪ । ತ್ತೈದು ಸಾವಿರದೇಳುನೂರಿನ ।
ಇರುವ[3] ದೆ[3] ಪ್ಪತ್ತೈದು ದಾಸೋ – ಹಿಗಳ ಮಠವಲ್ಲಿ ॥ ೫ ॥
ಸಕಲ ಭಕ್ತರ ಮಠಕೆ ಅಧಿಪತಿ । ಸಕಲ ಕರ್ತನು ಬಸವರಾಜನು ।
ಸಕಲರಿಗೆ ಸಖ[4] ತಾನು ತಾನಾ – ಗಿರ್ದ[4] ಬಸವಯ್ಯ ॥ ೬ ॥
ಬಸವ ರಾಜನ ಅರಮನೆಯು ಅ । ಲ್ಲೆಸೆವ ಯೋಜನವರೆಯು ಅಗಲದ ।
ಕುಶಲಗೆಲಸದ ಕುರುಹು ಪಂಚಾ – ಕ್ಷರಿಯ ಶಾಸನದ ॥ ೭ ॥
ಮಿಸುನಿಗೆಲಸದ ಮೇಲು ಗೋಪುರ । ಎಸೆವ ನಂದಿಯ ಧ್ವಜ ಪತಾಕದ ।
ದೆಸೆ ದೆಸೆಯ ಮೇಲ್ಕಟ್ಟು ರುದ್ರಾ – ಕ್ಷಿಗಳ ತೋರಣದ ॥ ೮ ॥
ಸಾಲು ಸಾವಿರ ಕಂಬ ರತ್ನದ । ರತ್ನಗೆಲಸದ ಕಳಶ ಸಾವಿರ ।
ಲೀಲೆಯಿಂದುಪ್ಪರಿಗೆ ನಗರದ – ಮಧ್ಯ ದೆಸೆಯಲ್ಲಿ ॥ ೯ ॥
ಮತ್ತೆ ಬಸವನ ಭವನಕೆತ್ತಿದ । ರತ್ನಗೆಲಸದ ಕಳಶ ಸಾವಿರ ।
ಮುತ್ತು ಮಾಣಿಕ ಬಿಗಿದ ಅರಳೆಲೆ – ಸುತ್ತ ಲೋವೆ[5] ಯಲಿ[5] ॥ ೧೦ ॥
ಅರಮನೆಗೆ ಅಗ್ಗಣಿಯ ನಡೆಸುವ । ಹಿರಿಯ ಹೊಕ್ಕರಣೆಗಳು ನಾಲುಕು ।
ಹಿರಿದುಗೆಲಸದ ರತ್ನದ್ವಾರಗ – [6] ಳೆಂಟು[6] ಅರಮನೆಗೆ ॥ ೧೧ ॥

---

1-1 ಠಿ (ಜ.) 2-2 ಶೀವಿ (ಉ, ಗ, ಚ.) 3-3 ದಿ (ಇ, ಜ, ಡ.) 4-4 ನಾಗಿಯಿದ್ದನು । ಯಾಶ (ಇ, ಒ.) 5-5 ಗಳು (ಇ, ಉ, ಎ, ಚ.) 6-6 ಳಯ್ದು (ಜ, ಟ.)

ಬಸವರಾಜನ ಮನೆಯಲುಣ್ಣುವ । ಅಸಮ ಜಂಗಮ ಒಂದು ಲಕ್ಷದ ।
ಲೆಸೆವ ತೊಂಬತ್ತಾರು ಸಾವಿರ – ಕುಶಲ ಕೋವಿದರು ॥ ೧೨ ॥
ಪೂಜೆ ಫಲದಗ್ಗಣಿಯು ಹಾಯಲು । ಬೀಜವರಿ ಹನ್ನೆರಡು ಖಂಡುಗ ।
ರಾಜಾನ್ನ ಸಾಲುಗಳು ಬೆಳದತಿ – ಭೋಜನಕೆ ಬಹುದು ॥ ೧೩ ॥

ವಚನ ॥ ಇಂತಪ್ಪ ಬಸವೇಶ್ವರದೇವರ ಒಂದಿನಲ್ಲಿ ಇರುತಿರ್ದಂಥಾ, ಅಸಂಖ್ಯಾತ ಮಹಾ ಗಣಂಗಳ ಸಂಪ್ರದಾಯಕರೆಷ್ಟೆಂದರೆ :—

**ಏಕತಾಳ.**

ನಿತ್ಯ ಹನ್ನೆರಡು ಸಾ । ವಿರ ಜಂಗಮಕೆ ಮಾಳ್ಪ ।
ಭಕ್ತರು ಇಪ್ಪತ್ತು । ಎಂಟು ಸಾವಿರವು ॥ ೧ ॥
ಹನ್ನೆರಡು ಸಾವಿರ । ಅಚ್ಚಪ್ರಸಾದಿಗಳು ।
ಇನ್ನೈದು ಸಾವಿರ । ವ್ರತ ನೇಮರ ಮಠವು ॥ ೨ ॥
ಸಾವಿರದ ಅರವತ್ತು । ನಾಲ್ಕು ಶೀಲ ವ್ರತರು ।
ಕಾಲಹರನ ಪೂಜೆ । [1] ಕ್ರಮ [1] ದೊಳಗಿಹರು ॥ ೩ ॥
ನಿತ್ಯ ಸಾವಿರ ಜಂಗ । ಮಕೆ ನೀಡುತಿಹ ಶಿವ ।
ಭಕ್ತರು ಮೂವತ್ತು । ಎರಡು ಸಾವಿರವು ॥ ೪ ॥
ನಿತ್ಯವೈನೂರಕ್ಕೆ । ನೀಡುವ ಮಠಗಳು ।
ಮತ್ತೆ ಐವತ್ತೆಂಟು । ಸಾವಿರವಿಹವು ॥ ೫ ॥
ನಿತ್ಯ ಸಾವಿರದೈ । ನೂರಕ್ಕೆ ಮಾಳ್ಪವರು ।
ಮತ್ತೆ ಹನ್ನೊಂದು ಸಾ । ವಿರದ ಮಠಗಳು ॥ ೬ ॥
ಮನಸು ಬಂದಂತೆ ಮಾ । ಡುವ ಸದ್ಭಕ್ತರು ।
ಘನವೊಂದು ಲಕ್ಷದೊಂ । ದನುವಿನೊಳಿಹರು ॥ ೭ ॥
ಭಾಳಾಕ್ಷ ಭಕ್ತಿ ಸಮ । ಯಾಚಾರ ಭಕ್ತರು ।
ಏಳ್ನೂರು ಎಪ್ಪತ್ತು । ಹೇಳುವಡೆ ಅರಿದು ॥ ೮ ॥
ಅಂತೆರಡು ಲಕ್ಷದೆಂ । ಬತ್ತೈದು ಸಾವಿರ ।
ಮುಂತೆ ಏಳ್ನೂರು ಎ । ಪ್ಪತ್ತೈದು ಮಠವು ॥ ೯ ॥
ಇಳೆಗೆ ಕೈಲಾಸದಿಂ । ದಿಳಿದ ಪ್ರಮಥರಾ ।
ಸ್ಥಳದಿ ಏಳ್ನೂರು ಎ । ಪ್ಪತ್ತು ಒಪ್ಪಿಹರು ॥ ೧೦ ॥
ಸಕಲ ಪ್ರಮಥರಿಗೆ । ಮುಕುರ ಶಿ [2] ಖಾ [2] ಮಣಿ ।
ಅಕಳಂಕ ಬಸವಯ್ಯ । ಅರ್ಥಿಯಿಂದಿಹನು ॥ ೧೧ ॥

ವಚನ ॥ ಮತ್ತು ಅವರಲ್ಲದೆ ಭವಿ ಪ್ರತ್ಯೇಕ ಜನರಂ ವಿಸ್ತರಿಪೆಂ.

---

1-1 ಕರುಣ (ಅ, ಜ,ಟ, ಡ, ಬ.) 2-2 ರೋ (ಎ, ಗ, ಚ.)

**ಸೀಸಪದ್ಯ.**

ಭೂಸುರೋತ್ತಮ ಕ್ಷತ್ರಿ ಭೂರಿ ವಾಣಿಜ ವೈಶ್ಯ ।
ಲೇಸೆನಿಪ ಶೂದ್ರ ಕಾರುಕ ಕುಲಾಲ ॥ ೧ ॥
ರಾಶಿ ದೈವದ ಭಜಕ ರಜಕ ತಿಲ ಮರ್ಧನರು ।
ಕೇಶಹರ ಧೇನು ಮೇಷ ರಕ್ಷಕರು ॥ ೨ ॥
ಕಂತು ಕಾರಕ ವ್ಯಾಧವಂತೆ ಜೊನ್ನಿಗ ಜಿನ್ನ ।
ಸಂತತವು ಸಕಲ ಜಾತಿಗಳು ಒಪ್ಪೆ ॥ ೩ ॥
ಕರಿ ತುರುಗ ನರಸೇನೆ ಹಿರಿದು ರಥ ಪತಾಕೆಯಲಿ ।
ಧರೆಗೊಡೆಯ ಬಿಜ್ಜಳನು ಅರಸು ಒಪ್ಪೆ ॥ ೪ ॥
ಧರೆ ಗಿರಿ ಸರೋವರಂಗಳು ತುಂಬಿ ಕಲ್ಯಾಣ
ಭರದಿ ಹೆಚ್ಚಿತು ಬಸವಯ್ಯನಿಂ ಬೇಗ ॥ ೫ ॥

ವಚನ ॥ ಅಂತಪ್ಪ ಕಲ್ಯಾಣದ ಸತ್ಯವೆಂತೆನೆ.

**ಅಟತಾಳ.**

ದಾನ ಧರ್ಮವು ದಯವು ಪರಹಿತ । ಧ್ಯಾನ [1] ರೂಢ [1] ರಲ್ಲದೆ ।
ಮಾನವರು ಮತಿಹೀನ ದುರ್ಜನ – ರೇನು ಇಲ್ಲ ॥ ೧ ॥
ಸತ್ಯಹಿತ ಸಾಹಿತ್ಯ ಸದ್ಗುಣ । ನಿತ್ಯರಲ್ಲಿ ಅಲ್ಲದೆ ।
ಮತ್ತ ಜನ ಮತಿಹೀನ ದುರ್ಜನ – ರತ್ತಲಿಲ್ಲ ॥ ೨ ॥
ಸಕಲ ಆಗಮ ಸಾಧಕರು ಸಾ । ತ್ವಿಕರು ಅಲ್ಲಿಯಲ್ಲದೆ ।
ವಿಕಳ ಮತಿ ವಿಧಿ ವಶದ ಮನುಜರ – ಪ್ರಕಟವಿಲ್ಲ ॥ ೩ ॥
ಪರಮ ಭಕ್ತರು ಪಾಶ ಮುಕ್ತರು । ಧರ್ಮಗುಣರಹರಲ್ಲದೆ ।
ಕರ್ಮ ಜೀವರು ಕಾಕು ಮನುಜರ – ಸ್ಮರಣೆಯಿಲ್ಲ ॥ ೪ ॥
ಜ್ಞಾನಿಗಳು ಮೌನಿಗಳು ಪರಸಂ । ಧಾನರಲ್ಲಿಹರಲ್ಲದೆ ।
ಹೀನ ಹಿಸುಕರು ಹಿಂಸೆ ಪಾತಕ – ರೇನು ಇಲ್ಲ ॥ ೫ ॥
ದೇವ ಪೂಜೆಯ ಜಪ ಸಮಾಧಿಯ । ನಾವ ಕಾಲದಿ ನಡೆಸುವ ।
ದೇವ ಪುರುಷರು ಅಲ್ಲದನ್ಯ – ಜೀವರಿಲ್ಲ ॥ ೬ ॥
ಪಾಪಿ ಕೋಪಿ ಕುತಾಪಿ ಕುಚಿತ್ತ ಕು । ಜಾತಿ ಪೊಗಲು ಪುರದೊಳು ।
ರೂಪನಳಿಸುವ ಕಾಲಭೈರವ – ಕೋಪದಿಂದ ॥ ೭ ॥
ಮಾರಿ ಮಸಣಿಯು ದುರ್ಗಿ ಚೌಡಿಯು । ಊರ ಹೊಗದಲೆ ಹೊರಗಡೆ ।
ಸೇರಿ ಇರುವರು [2] ಅವರ [2] ತಡೆಯದೆ – ಮೇರೆಯಾಗಿ ॥ ೮ ॥

---

1-1 ನಿಷ್ಠಾ (ಗ, ಚ.) 2-2ಅಗ (ಅ, ಬ.)

ತರಣಿ ಕಿರಣದ ಉರವಣೆಯದಿಲ್ಲ । ಕರೆಯಲಿಲ್ಲವು ರೋಗವ ।
ಉರುತರದ ಬಿರುಗಾಳಿ ಪುರದೊಳು – ಬೀಸಲಮ್ಮದು ॥ ೯ ॥
ಕಾಲ ಕಲ್ಪನೆ ತುಂಬಿದಲ್ಲದೆ । ಕರೆಯಲಿಲ್ಲಾ ರೋಗ [1] ದ [1] ।
ಜಾಲ ಜನ ಶಿಶು ಪಶು [2] ವಿಗದರ [2] – ಮೂಲವಿಲ್ಲ ॥ ೧೦ ॥

ವಚನ ॥ ಇಂತಪ್ಪ ಕಲ್ಯಾಣಕ್ಕೆ ಶಿವಗಣಂಗಳು ಬರುತಿರ್ಪರದೆಂತೆನೆ.

**ಜಂಪೆ.**

ಬಸವ ಭಕ್ತಿಯ ಚೆಲ್ವ । ಕುಸುಮ ವಾಸನೆ ನಾಲ್ಕು ।
ದೆಸೆಯ ಮುಸುಕಲು ಶರಣ । ರೊಸೆದು ಕೇಳಿದರು ॥ ೧ ॥
ಶಶಿಧರನ ಭಕ್ತ ಬಸ । ವೇಶನಂಘ್ರಿಯ ನೋಡೆ ।
ವಸುಧೆ ಶಿವ ಗಣರು ಸಂ । ತಸದಿ ಎಯ್ದಿದರು ॥ ೨ ॥
ಒಡೆಯ ಬಸವನ ನೋಳ್ಪ । ಸಡಗರದಿ ಬಹ ಜನರು ।
ಎಡೆಯಿಲ್ಲ ದಾರಿ [3] ಎ । ಲ್ಲೆಡೆಯ [3] ನೋಡಿದರೆ ॥ ೩ ॥
ಜಡೆ ಮಕುಟ ಕಟಿ ಸೂತ್ರ । ಪಿಡಿದ ಲಾಕುಳ ದಂಡ ।
ಜಡಿವ ಪುಸ್ತಕದಿಂದ । ನಡೆದರರ್ಥಿಯಲಿ ॥ ೪ ॥
ಕಾವಿ ಕಾಷಾಯಾಂಬರವು । ಕಂತೆ ಜಾಡಿಯು ಜೊದಡೆ ।
ತೀವಿ ಮೈಯೊಳು ಭಸಿತ । ದೇವಗಣ ನಡೆಯೆ ॥ ೫ ॥
ಭಾರಿ ಕಂತೆಯು ಬಟುವು । ಉರದಿ ರುದ್ರಾಕ್ಷಿ ಮಣಿ ।
ಮಿಾರಿ ಹಾವುಗೆ ಮೆಟ್ಟಿ । ದಾರಿಯಲಿ ನಡೆಯೆ ॥ ೬ ॥
ದೇವ ಮಹಂತರು ಮಾನ್ಯ । ರೂ ಮಕುಟ ವರ್ಧನರು ।
ತೀವಿ ತಾ ಕಲ್ಯಾಣ । ಎಲ್ಲೆಲ್ಲಿ ನೋಡೆ ॥ ೭ ॥
ಆಡಲ್ಕೈವತ್ತಾರು । ದೇಶಂಗಳವರೆಲ್ಲ ।
ನೋಡ ಬಂದರು ಬಸವ । ರೂಢೀಶನಿರವ ॥ ೮ ॥
ಸಂಭ್ರಮದಿ ನಾಲ್ವತ್ತು । ಎಂಟು ಯೋಜನದಗಲ ।
ತುಂಬಿತಾ ಕಲ್ಯಾಣ । ಇಂಬಿಲ್ಲವೆನಿಸಿ ॥ ೯ ॥
ಬಂದ ಹಿರಿಯರಿಗಿದಿರ । ಬಂದು ಬಸವಯ್ಯ ಶರ ।
ಣೆಂದು ಬಿಜಯಂಗೈಸೆ । ಮಂದಿರಕೆ ಅವರ * ॥ ೧೦ ॥
ಮಾಡುವರು ಮನಮುಟ್ಟಿ । ಶಾಕ ಪಾಕಾದಿಗಳ ।
ನೀಡುವರು ಜಂಗಮಕೆ । ನಿಜದ ಭಕ್ತಿಯಲಿ * ॥ ೧೧ ॥

ವಚನ ॥ ಆ ವೇಳೆಯಲ್ಲಿ ಭಕ್ತ ಮಹೇಶ್ವರರ ಸಂಭ್ರಮವದೇನ ವರ್ಣಿಪೆಂ.

---

1-1 ದಿ (ಇ, ಒ, ಚ, ತ.) 2-2 ವು ಘಾತಕ (ಒ, ಜ, ಟ.) 3-3 ಯೊಳುಯಲ್ಲಿ (ಓ. ) * ಈ ಪದ್ಯಗಳು (ಉ, ಗ, ಚ.) ಪ್ರತಿಗಳಲ್ಲಿಲ್ಲ.

**ದ್ವಿಪದಿ.**

ಶ್ರೀ ಗುರುವು ಬಸವೇಶ ಸೃಷ್ಟಿಗೈತಂದು ।
ಸಾಗಿಸುವ ನವ ವಿಧದ ಭಕ್ತಿಗಳನಂದು ॥ ೧ ॥

ಭೋಗ ಮೋಕ್ಷಾರ್ಥಗಳ ಭುಕ್ತಿ ಭೋಜ್ಯಗಳ ।
ನಾಗ ಭೂಷಣನೊಲುಮೆ ನಾಟಕಂಗಳನು ॥ ೨ ॥

ಆಗ ಶರಣರು ನೋಡಿ ಅತಿ ಹರುಷ ಮಾಡಿ ।
ಬೇಗ ತಮ್ಮೊಳು ಬೆರಗುವಟ್ಟಂತೆ ನೋಡಿ ॥ ೩ ॥

ಚಂದ್ರನಂ ಕಂಡಾ ಚಕೋರನಂದದಲಿ ।
ಅಂದು ಸೂರ್ಯನ ಕಂಡ ಅಂಬುಜದ ತೆರದಿ ॥ ೪ ॥

ಶಶಿಯ ಕಾಂತಿಗೆ ಶರಧಿ ಅತಿ ಹೆಚ್ಚುವಂತೆ ।
ಹಸಗೆಟ್ಟ ಜನರು ಹಣದೆಸೆಯ ಕಂಡಂತೆ ॥ ೫ ॥

ಚಿಂತೆ ಋಣ ಹರಿದು ನಿಶ್ಚಿಂತರಾದಂತೆ ।
ಸಂತಸದಿ [1] ಶಿವಭಕ್ತ [1] ಸಕಲ [2] ಗಣರಿರಲು [2] ॥ ೬ ॥

## ಮಡಿವಾಳ ಮಾಚಯ್ಯಗಳ ಕಾಯಕ.

**ದ್ವಿಪದಿ.**

ಪೃಥ್ವಿಯೊಳು ಘನ ಮಹಾ ಪುಣ್ಯಕ್ಷೇತ್ರವದು ।
ಸತ್ಯ ಸದನದ ನಾಡು ಸಾಂಬ ಶಿವಸ್ಥಲವು ॥ ೧ ॥

ಲಾಟ ದೇಶದಲಿ ಪಿಪ್ಪಲಿ ಎಂಬ ಪುರದಿ ।
ಪಟುತರದಿ ನೆಲಸಿರ್ಪ ಪರಮ ಹರುಷದಲಿ ॥ ೨ ॥

ಮಲ್ಲಿನಾಥನ ಚೆನ್ನಮಲ್ಲಿಕಾರ್ಜುನನ ।
ವರ ಮಂತ್ರವಿತ್ ಪಿಂಡ ವೈಕಾರಿತ್ವದಲಿ ॥ ೩ ॥

ಜನಿಸಿ ಮಾಯಾ ಶಿಶುವು ಸಲೆ ಸುಂದರದಲಿ ।
ಪಿಪ್ಪಲಿಯ ಗ್ರಾಮದಲಿ ಪರುವತಯ್ಯನಿಗೆ ॥ ೪ ॥

ಒಪ್ಪಿ ಪ್ರಿಯ ಬಾಲಕನು ಒಲಿದಾಡಿ ಬೆಳೆದು ।
ದಿನ ದಿನಕೆ ವೃದ್ಧಿಸುತ ದ್ಯುಮಣಿ ತೇಜದಲಿ ॥ ೫ ॥

ಘನ ಶಾಸ್ತ್ರ ವೇದಾಂತ ಘನ ಮಹತ್ತುಗಳ ।
ಓದಿ ತಾ ಕ್ರಿಯಗಳನೊಡಂಬಡಿಸಿ ತನಗೆ ॥ ೬ ॥

---

1-1 ಬಸವಯ್ಯ 2-2 ರೊಡಸಿರ್ಪ (ಜ.)

ಜನನ ಕಾಲದಿ ವೀರಶೈವ ಮಾರ್ಗಗಳ ।
ಘನ ಗುರುವು ಲಿಂಗ ಧಾರಣ ಮಂತ್ರ ಕೊಡಲು ॥ ೭ ॥

ಪ್ರಜ್ವಲಿಸಿ ಶರಣಸ್ಥಲ ಪಾಂಗಿತದಲರಿದು ।
ಗುರುವಿನಪ್ಪಣೆವಿಡಿದು ಮಡಿವಾಳ ದೇವ ॥ ೮ ॥

ಮಾಚಯ್ಯಗಳು ಎಂದು ಮಹಿಮೆ ಬೀರುತಲಿ ।
ದೇಶಗಳ ನೋಡುತ ಕಲ್ಯಾಣಕ್ಕೈತಂದ ॥ ೯ ॥

ಬಸವಣ್ಣನಂ ಕಂಡು ಭಕ್ತಿ ಗೈಯ್ಯಲ್ಕೆ ।
ಪೊಸತು ಮನದಿಂ ವೋಗಿ ಪರಮ ಹರುಷದಲಿ ॥ ೧೦ ॥

ಕಂತು ಹರ ಪ್ರಮಥರ ಕಾಯಕವ ನೋಡಿ ।
ಸಂತೋಷವನು ತಾಳ್ದ ಮಡಿವಾಳ ದೇವ ॥ ೧೧ ॥

ವಚನ ॥ ಇಂತೀ ಮಡಿವಾಳ ಮಾಚಿದೇವರು ಕಲ್ಯಾಣ ಪಟ್ಟಣಕ್ಕೆ ಬಂದು, ಬಸವಣ್ಣನಂ ಕಂಡು, ಆ ಬಸವೇಶ್ವರನ ಭಕ್ತಿಯಂ ಕೈಗೊಳ್ಳುತ್ತ, ತಾನೂ ಶಿವಶರಣರ ಭಕ್ತಿಗೈವಲ್ಲಿ ಭೃತ್ಯರ ಅಗ್ರೇಸರನಾಗಿ, ಬಸವೇಶಗೆ ಮನದ ಪ್ರಿಯಾಪ್ತನಾಗಿ, ಶಿವಭಕ್ತಿ, ಅಷ್ಟಾವರಣ, ಪಂಚಾಚಾರ, ಷಟ್ಸ್ಥಲ, ಲಿಂಗಾಂಗ ಸಾಮರಸ್ಯಗರಿಷ್ಠನಾಗಿ ಶಿವನ ವಾಕ್ಯದಂತೆ ಶರಣರ ಮೈಲಿಗೆಗಳಂ ತೊಳೆವ ಕಾಯಕವಂ ಕೈಗೊಂಡ ನದೆಂತೆನೆ.

**ತ್ರಿವುಡೆ.**

ತ್ರಿಪುರ ಸಂಹರ ಲಿಂಗ ಸರಸಿಗೆ । ಅಪರಿಮಿತ ಸೌಖ್ಯದಲಿ ಪ್ರತ್ಯೇಕ ।
ಸಫಲತೆಯ ಹೊಂಡವನು ಮಾಡಿಯೆ – ಶುಚಿಗಳಿಂದ ॥ ೧ ॥

ಸುತ್ತ ಕ್ರಮುಕವು ನಾರಿಕೇಳವು । ಅತ್ತಿ ಅರಳಿಯು ಬಿಲ್ವಪತ್ರೆಯು ।
ಮತ್ತೆ ಪರಿಮಳ ದಿನಸು ಪೂಗಿಡ – ಅರ್ಥಿಯಿಂದ ॥ ೨ ॥

ನಿಂಬೆ ಹೇರಿಳೆ ಪಲಸು ಕಿತ್ತಿಳೆ । ಜಂಬೀರವು ದಾಳಿಂಬ ಕದಳಿಯು ।
ಸಂಭ್ರಮದಿ ಸೊಂಪಡರಿ ಇರ್ಪುದು – ಶಂಭು ತಾ ಬಲ್ಲ ॥ ೩ ॥

ಇಂತಿದರ ಮಧ್ಯದಲಿ ಮೇಲ್ತರ । ವಾಂತ ಅರಮನೆ ಚಿತ್ರ ಬಣ್ಣದಿ ।
ಕಂತುಹರಸುತ ವೀರ ಮಡಿವಾಳಿ – ದೇವನಿರುತಿರ್ದ ॥ ೪ ॥

ಮತ್ತೆ ಪರವಾದಿಗಳ ಜಯಿಸುವ । ಎತ್ತಿ ಮೆರೆಯುವ ವೀರ ಘಂಟೆಯ ।
ವಿಸ್ತರದಿ ಪಾದದಲಿ ಕಟ್ಟಿಹ – ವೀರ ಮಾಚಯ್ಯ ॥ ೫ ॥

ಹಸ್ತದಲಿ ಜವದಾಡೆ ಚಿಮ್ಮುರಿ । ಸಿಸ್ತಿನಲಿ ನವ ಸ್ಮರನ ತೆರದಲಿ ।
ಮರ್ತ್ಯದೊಳು ನರ ರೂಪ ಧರಿಸಿಯೆ – ನಿತ್ಯ ತಾನಿರ್ಪ ॥ ೬ ॥

ನಿತ್ಯ ನೇಮವು ಜಪ ಸಮಾಧಿಯು | ಸತ್ಯ ಸಮ್ಯಜ್ಞಾನ ಮಾರ್ಗದಿ |
ಕಂತುಹರ ಸುತನಿರ್ಪ ಮಹಿಮೆಯ—ವಿಸ್ತರಿಪರಾರು || ೭ ||

ವಚನ|| ಇಂತೀ ಪರಿಯಲ್ಲಿರುವ ಅರಮನೆಯಲ್ಲಿ ದಾಸೋಹವಂ ಗೈದನ ದೆಂತೆನೆ.

**ಏಕತಾಳ.**

ಶರಣರ್ ವಸ್ತ್ರಗಳನ್ನು | ಬೇಡಿ ಉಲ್ಲಸದಿಂದ |
ನಿರುತ ಬೆನ್ನೊಳು ಪೊತ್ತು | ಕೆರೆಗರಿದು ಪೋಗಿ || ೧ ||

ಲಿಂಗ ಮುದ್ರಾಂಕಿತ | ವಂಗವಾಗಿರುತಿರ್ಪ |
ಮಂಗಳ ಶಿಲೆಯೊಳು | ಅಂಗವಸ್ತ್ರಗಳ || ೨ ||

ಅ ಉ ಮಾಕ್ಷರದಿಂದ | ಸೋಹಂ ಭಾವದಿಯೆತ್ತಿ |
ಓಂ ಉ ಮಾಪತಿಯೆಂದು | ತೊಳೆವನರ್ಥಿಯಲಿ || ೩ ||

ರಜತದಂದದಿ ತೊಳೆದ | ಮಡಿವಸ್ತ್ರಗಳನೆಲ್ಲ |
ಭುಜಗಾಭರಣನಸುತನು | ಒಣಗಿಸೆಲ್ಲವನು || ೪ ||

ಮಡಿ ಹೊತ್ತು ಬೆನ್ನಿನಲಿ | ನುಡಿಸುತ್ತ ಘಂಟೆಯ |
ಮೃಡನ ನೆನೆಯುತ್ತ ಮನದಿ | ಸಡಗರದಿ ಬರುವ || ೫ ||

ಭರ್ಗ ಶರಣರ ನೇಮ | ಮಡಿ ಬರುತಿದೆ ದಾರಿ |
ಭರದಿ ಬಿಡಿರಿ ಶಿವ | ಭಕ್ತರಲ್ಲದರು || ೬ ||

ಎಂದು ಸಾರುತ ಬಂದು | ಮಂದಿರದಿ ಮೂಟೆಯನಿಟ್ಟು |
ಇಂದು ಧರ ಜಂಗಮರ | ಅಂದು ಪೂಜಿಸುವ || ೭ ||

ಚರಕೆ ತೃಪ್ತಿಯ ಗೈದು | ವರ ಶೇಷಪ್ರಸಾದವ |
ಕರದ ಲಿಂಗಕೆ ಕೊಟ್ಟು | ಹರುಷದಿಂ ಸವಿವ || ೮ ||

ಮೃದು ಮನೋಹರಮಾದ | ತಳಿಪ ವಸ್ತ್ರಗಳನ್ನು |
ಮದ ಹರ ಜಂಗಮರ್ಗೆ | ಕೊಡುವ ಬೇಡಿದುದ || ೯ ||

ಕಪ್ಪಡ ಕೊಟ್ಟವರು | ನಿಟ್ಟಿಸಿ ತಮ್ಮದೆಂದು |
ಅಪ್ಪ ಮಡಿವಾಳ ಕೊಟ್ಟ | ಬಟ್ಟೆಯ ಕೊಡೆನಲು || ೧೦ ||

ಅವರಿತ್ತ ಚಿನ್ನದ ಬಟ್ಟೆ | ಅವರ್ಗಿತ್ತು ಶರಣೆನಲು |
ತವಕದಿಂ ನೋಡುತೆಲ್ಲ | ಶಿವ ಮಹಾತ್ಮನೆಂದು || ೧೧ ||

ಸ್ತುತಿಸುತ್ತ ಶರಣ ಜನ | ಹಿತ ಬಯಸುತಿರಲತ್ತ |
ಪ್ರತಿನಿತ್ಯ ಇತ್ತಗಣ | ತೃಪ್ತಿ ಗೈಯ್ಯುವನು || ೧೨ ||

ಕ್ರಿಯೆಯ ಕಾಯಕ ಮಾಚಿ । ದೇವನ ಸೂಚನೆಯು ।
ನಿಯಮ ವ್ರತರ ಮಹಾತ್ಮೆ । ಇನ್ನು ಸೂಚಿಪೆನು ॥ ೧೩ ॥

## ಮೇದಾರ ಕೇತಯ್ಯಗಳ ಕಾಯಕ.

**ದ್ವಿಪದಿ.**

ಪರ ಶಿವನ ವರ ಭಕ್ತ ಪುಣ್ಯ ಗುಣ ಯುಕ್ತ ।
ಹರ ಲೋಕದಿಂದೈದಿ ಧರೆಗಿಳಿದು ಬಂದು ॥ ೧ ॥

ಕಲ್ಯಾಣ ಪಟ್ಟಣದಿ ಕಡು ಭಕ್ತಿವೆರಸಿ ।
ಅಲ್ಲಮ ಪ್ರಭುವಿನ ಆಚರಣೆ ಸತತಂ ॥ ೨ ॥

ಸತ್ಯ ಶರಣನು ಘನ ಶಾಂತಿ ಗುಣ ರನ್ನ ।
ಪೃಥ್ವಿ ಶರಣರೊಳ್ಕೂಡಿ ಬ್ರಹ್ಮ ಲೀಲೆಯೊಳು ॥ ೩ ॥

ಮೇದಾರ ಕೇತಯ್ಯ ಮಹಿಮಾತ್ಮನವನು ।
ಸಾದರದಿ ಕಾಯಕವ ಮಾಡಲನುಗೈದ ॥ ೪ ॥

ಕಮಲ ಮುಖಿ ಶಾಂತಮ್ಮ ಸತಿಯು ಇರುತಿಹಳು ।
ವಿಮಲ ಜಂಗಮ ಭಕ್ತಿ ಕ್ರಮದ ನೈಷ್ಠಿಗಳು ॥ ೫ ॥

ಶರಣ ನಿತ್ಯವು ವನಕೆ ಪ್ರೀತಿಯಿಂ ಪೋಗಿ ।
ಅರಣ್ಯ ದೇವಿಯೊಳ್ಭಿಕ್ಷ ಬೇಡದನೆ ತಂದು ॥ ೬ ॥

ಪುಷ್ಪ ಕರಡಿಗೆ ಮೊರನು ಶಿವ ಪೂಜೆ ಪೆಟ್ಟಿಗೆಯ ।
ತಪ್ಪದೆ ತಾ ಮಾಡಿ ತ್ವರಿತ ಕ್ರಯಗೈದು ॥ ೭ ॥

ನಿತ್ಯವೈನೂರ್ಗಣಕೆ ನೀಡಿ ಮಾಡುವರು ।
ಅತ್ಯಂತ ಭಕ್ತಿಯಲಿ ಸತಿ ಪತಿಗಳ್ಸತತ ॥ ೮ ॥

ಒಂದು ದಿನ ವಿಪಿನಕ್ಕೆ ಹೊರಟ ಕೇತಯ್ಯ ।
ಚಂದದಿಂ ಬಿದಿರನುಂ ಸೋಸಿ ತರುವುದಕೆ ॥ ೯ ॥

ಹೋಗಿ ದಟ್ಟಿಯ ತರಿದು ಪೊಳವೆ ಸೀಳುತಿರೆ ।
ನಾಗಭೂಷಣ ಗಿರಿಜೆ ನಂದಿಯನ್ನೇರಿ ॥ ೧೦ ॥

ಲೋಕಮಂ ಚರಿಸುತ್ತ ಲೀಲೆಯಿಂ ಬರಲು ।
ಕೇತಯ್ಯನಿರ್ಪುದಂ ಕಂಡಳಾ ಗಿರಿಜೆ ॥ ೧೧ ॥

ಭೂತೇಶನೊಡನೆಂದಳ್ಪ್ರೀತಿಯಿಂದಾಗ ।
ಪ್ರೀತನೆ ಮೇದಾರ ಕೇತಯ್ಯಗಳಿಗೆ ॥ ೧೨ ॥

ಈ ವಿಧದ ಕಷ್ಟಮಂ ಏಕೆ ನೀ ಕೊಟ್ಟಿ ।
ನೋಡುವರಿ ಮನವೆಂತು ನಿಮಗೆ ಚುರುಕೆನದೆ ॥ ೧೩ ॥
ಮಡದಿ ಪುರುಷರು ಮಹಾ ಮಹಿಮರಲೆ ಎಂದು ।
ಮರುಗಿ ಕೇಳಲು ಗಿರಿಜೆಗೆಂದನಾ ಶಿವನು ॥ ೧೪ ॥
ಸುಖ ಸಂಪದಂಗಳಂ ಸೌಖ್ಯಕರವೀಯೆ ।
ಒಪ್ಪರಲೆ ಮುಟ್ಟರಲೆ ಪರದ್ರವ್ಯವೆಂದು ॥ ೧೫ ॥
ತೋರ್ಪೆ ಶರಣನ ಮಹಿಮೆ ಗಿರಿಜೆ ನೋಡೆಂದು ।
ತರಿವ ದಟ್ಟಿಯೊಳ್ರನ್ನ ಮುತ್ತು ಮಾಣಿಕವ ॥ ೧೬ ॥
ಸುರಿಯಿಸಿದನವನೆದುರು ಸೊಗಯಿಸಲಿ ಎಂದು ।
ನೋಡಿದನು ಕೇತಯ್ಯ ಆ ದಟ್ಟಿಯಿರವಂ ॥ ೧೭ ॥
ವೈಢೂರ್ಯವಿವು ಎಲ್ಲ ಪರದ್ರವ್ಯವೆಂದು ।
ಆಡುತ್ತ ತೊಲಗಿದನು ಹತ್ತು ಮಾರಿನಲಿ ॥ ೧೮ ॥

**ಜಂಪೆ.**

ನೋಡಿದೆಯ ಎಲೆ ಗಿರಿಜೆ । ಗಾಡಿ ಶರಣನ ಮಹಿಮೆ ।
ಇಡಬೊಲ್ಲ ಪರಧನ ದ್ರ । ವ್ಯದಪೇಕ್ಷೆಯನ್ನು ॥ ೧ ॥
ಕಾಯಕದ ಮಹಿಮೆಯಲಿ । ಕಷ್ಟ ತನು ಬಳಲಿಕೆಯ ।
ಲಾಯತದಿ ಶಿವಗಣ ದಾ । ಸೋಹ ಮಾಡುವನು ॥ ೨ ॥
ಎಂದು ಪೇಳುತಲಿ ಕೈ । ಲಾಸ ಮಂದಿರಕೈದಿ ।
ಅಂದಿರ್ದ ಶಂಕರನು । ಅತಿ ಹರುಷದಲ್ಲಿ ॥ ೩ ॥
ಇತ್ತಲಾ ಮೇದಾರ । ಕೇತಯ್ಯ ಬೇರೊಂದು ।
ಮತ್ತೆ ದಟ್ಟಿಯ ನೋಡಿ । ತರಿದು ಒಡೆಯುತಿರೆ ॥ ೪ ॥
ಕೂರಲಗು ಪೊಳವೆಯುರ । ಕೇರಿ ಕೇತಯ್ಯನ ।
ಮಾರ ಹರ ಸನ್ನಿಧಿಗೆ ಪೋಯಿತದು ಪ್ರಾಣ ॥ ೫ ॥

ವಚನ ॥ ಇಂತಿ ಮೇದಾರ ಕೇತಯ್ಯನ ಪ್ರಾಣಂ ಶಿವ ಸನ್ನಿಧಿಗೈದಲು, ಆಗ ಬಸವಣ್ಣ ತಿಳಿದು ಪ್ರಮಥರ್ಗೂಡಿ ಬಂದು, ಈ ಶಿವೈಕ್ಯನ ಶರೀರವಂ ಸಮಾಧಿ ಮಾಡುವ ನಿಮಿತ್ತಂ ಪಡಿಹಾರಿ ಉತ್ತಣ್ಣನಂ ಕರೆದು, ನೀನು ಮಡಿವಾಳ ಮಾಚಿದೇವರಂ ಕರೆತಾರೆಂದು ಕಳುಹಲು, ಮಾಚಿದೇವನೆಡೆಗೆ ಉತ್ತಣ್ಣಂ ಬಂದನದೆಂತೆನೆ.

**ಏಕತಾಳ.**

ಬಂದು ಉತ್ತಣ್ಣನು । ಅಂದು ನಮಿಸುತ ಪೇಳ್ದ ।
ಇಂದು ಧರ ಬಸವೇಶ । ಎಲ್ಲ ಗಣರೊಳಗೆ ॥ ೧ ॥

ಶರಣ ಕೇತಯ್ಯ ಸಂ । ದನು ಸ್ವಾಮಿ ಬಸವಯ್ಯ ।
ತ್ವರಿತ ನಿಮ್ಮನು ಕರ । ತಹುದೆಂದ ದೇವ ॥ ೨ ॥
ಹರ ಶರಣರಾ ಅಳಿವು । ಈಗ ಕೇಳಿದೆ ದೇವ ।
ಬಾರೆ ಬಸವನ ಮುಖವ । ನುರೆ ನೋಡ ಸಲ್ಲ ॥ ೩ ॥
ನಾವು ಬಸವನ ಮುಖವ । ನೋಡ ಸಲ್ಲದು ಕೇಳು ।
ಶಿವಶರಣ ಕೇತಯ್ಯ । ಸಂದ ಸುದ್ದಿಯನು ॥ ೪ ॥
ನನಗೆ ಕಳುಹಿದ ತನ್ನ । ನಡತೆ ಶರಣರ ಅಳಿವು ।
ತನ್ನ ಪ್ರಾಣವಿದೆಂಬ । ತುರ್ಯ ಬಿರುದೇಕೆ ॥ ೫ ॥
ತನ್ನ ಮರೆತನು ಬಸವ । ಇನ್ನೇನು ಭುವಿಯೊಳಗೆ ।
ಸನ್ನುತದಿ ನನ್ನ ಗಸ ।ಣೆಗಳೇಕೆ ಅವಗೆ ॥ ೬ ॥
ಬಿರುದ ಮರತನು ಬಸವ । ಬರುವದೇನಲ್ಲೆಮಗೆ ।
ಬರೆ ಹೋಗು ನೀನೆಯ್ದಿ । ಪೇಳು ಬಸವನಿಗೆ ॥ ೭ ॥
ಎಂದ ಮಾಚಯ್ಯಗಳ । ಬಂಧುರದ ವಾಕ್ಯವನು ।
ಬಂದು ಪಡಿಹಾರಿ ಬಸ । ವಯ್ಯಂಗೆ ಪೇಳ್ದ ॥ ೮ ॥
ತಂದೆ ಮಾಚಯ್ಯಗಳ । ನಮಿಸುತ್ತ ನಾ ಕರೆಯೆ ।
ಇಂದು ಕೋಪದಿ ತಾನು । ನೊಂದ ನಿಮ್ಮ ಮೇಲೆ ॥ ೯ ॥
ಆಡುವುದು ವೆಗ್ಗಳವು । ಓಡುವದು ಚೋರಗಂಡಿ ।
ನಾಡಾಡಿ ಜಾಣ್ನುಡಿಯ । ನಾಡಿದನು ಬಸವ ॥ ೧೦ ॥
ಬಸವನ ಮುಖ ನಾನು । ಬಂದು ನೋಡುವುದಿಲ್ಲ ।
ಗಸಣೆಯೇನಮಗವಗೆ । ಖತಿಯಿಂ ಪೋಗೆಂದ ॥ ೧೧ ॥
ಕೇಳಿದನು ಬಸವಯ್ಯ । ತಾಳಿದನು ಮನ ನೋವ ।
ಪೇಳಿದನು ಮನಕೆ ನಲಿ । ದಾಡಿದನು ಬಸವ ॥ ೧೨ ॥
ಎಚ್ಚರಿಕೆ ಕೊಟ್ಟನೆನ್ನ । ಸಚ್ಚಿದಾನಂದ ಗುರುವು ।
ಮೆಚ್ಚಿ ಉತ್ಸಹಬಟ್ಟು । ಬಸವನಾಕ್ಷಣದಿ ॥ ೧೩ ॥
ಪ್ರಾಣ ಲಿಂಗವೆ ನೀನು । ಸೇರು ಶಿವನೊಳಗೆಂದು ।
ಜಾಣ ಆಜ್ಞೆಯನಿತ್ತು । ನೇತ್ರ ಮುಚ್ಚಿದನು ॥ ೧೪ ॥
ಇಂತು ಬಸವನ ಪ್ರಾಣ । ಕಂತುಹರನೆಡೆಗೈದೆ ।
ನಿಂತು ನೋಡಿದರ್ಶರಣ । ತಿಂಥಿಣಿಯರಾಗ ॥ ೧೫ ॥
ಇನ್ನು ಸೈರಿಪರಾರು । ಇನ್ನಾರ ಕಾಡುವೆವು ।
ಇನ್ನಾರ ಬೇಡುವೆವು । ಚಿನುಮಯನು ಬಸವ ॥ ೧೬ ॥
ಬಸವ ಮಹೇಶ ಪರ । ಬಸವ ಗಣ ಸಂಜೀವ ।
ಬಸವ ಶಿವನೇ ಎಂದು । ಬಳಲಿ ಅಳಲಿದರು ॥ ೧೭ ॥

ವಚನ || ಇಂತೀ ಪರಿಯಲ್ಲಿ ಗಣಂಗಳು ಚಿಂತಿಸಿ, ಮಡಿವಾಳ ಮಾಚಯ್ಯಂ ಬಸವನೆಂಬ ಕಲ್ಪವೃಕ್ಷವಂ ಕಿತ್ತನಲ್ಲ ! ಭಕ್ತಿ ಸಾಮ್ರಾಜ್ಯ ಲಕ್ಷ್ಮಿಯಂ ಸೂರೆ ಮಾಡಿದನಲ್ಲಾ ! ಈ ಸೌಭಾಗ್ಯ ಸಂಪತ್ತನ್ನೆಲ್ಲಾ ಮಡಿವಳನೇ ಅನುಭವಿಸಲೆಂದು, ಪೋಗಪ್ಪಾ !! ಉತ್ತಣ್ಣ ಈ ವಾರ್ತೆಯಂ ಮಾಚಯ್ಯಗೆ ಪೇಳೆಂದು ಕಳುಹಲು, ಉತ್ತಣ್ಣ ಬಂದು ಮಾಚಿದೇವರಿಗೆ ಪೇಳಲು, ಬಹು ಸಂತಸಬಟ್ಟು ಮಾಚಿದೇವರು ಶೀಘ್ರವಾಗಿ ಬಂದು ನೋಡಿ ಏನೆನ್ನುತಿರ್ದರು.

**ಆಟತಾಳ.**

ಭಾಪು ಭಕ್ತರ ಬಂಧು ಶಿಖಾಮಣಿ | ಭಾಪು ಪರುಷದ ಖಣಿ ಕುಲಾಗ್ರಣಿ |
ಭಾಪು ಶರಣ ಸಂಜೀವಿ ಭಕ್ತಿಗೆ – ಭಾಪು ದಯ ಸಿಂಧು || ೧ ||
ಇಂತಿ ಪರಿಯಲಿ ಪೊಗಳಿ ಮಾಚಯ್ಯ | ಪಂಥ ಗೆಲಿದೆಯೆ ಬಸವರಾಜನೆ |
ಅಂತರಂಗದ ಮಹಿಮೆ ಕೀರ್ತಿಯ – ನೆತ್ತಿ ಮೆರೆದೆ || ೨ ||
ದೇವ ಭಕ್ತರ ಸೇವೆಯೊಳು ಸಂ | ಜೀವ ಕೇತಯ್ಯಗಳ ಬಸವನ |
ದೇವ ಲೋಕಕೆ ಶಿವನು ಈರ್ವರ – ಒಯ್ದ ಪರಿಯೇನು || ೩ ||
ಹರನು ಶರಣರ ಪ್ರಾಣವೆಂಬನು | ಬರಿದೆ ಅಳಿವೇ ಶರಣರ್ಗೆ |
ಹರನು ನಮಗೇನವನ ಗಸಣೆಯು – ಎಂದ ಮಾಚಯ್ಯ || ೪ ||
ತೂರಿ ಶಿವ ಕೈಲಾಸಕ್ಕೊರಗೆಂದು | ವೀರ ಹಲಗೆಯ ಪಿಡಿದು ಘಂಟೆಯ |
ಸಾರಿ ಹೊಯ್ದನು ಡಂಗುರವನಾಗ – ಮೂಜಗವು ಕೇಳೇ || ೫ ||

**ಕಂದಪದ್ಯ.**

ಭೂಕಾಂತೆ ನಾದ ಹೆಚ್ಚುತ |
ಲೋಕಾಧಿ ಲೋಕಗಳೆಲ್ಲ ತತ್ತಳಗೊಳ್ಳಲ್ |
ತಾ ಕೇಳಿ ಶಿವನು ಭಯದಿಂ |
ನೂಕಿಯೆ ಬಂದಪುದಪವಾದ ತನಗೆನುತಂ || ೧ ||
ಶರಣರ ಪಗೆ ಬಂದಿತೆಂದು |
ಹರ ತಾಂ ಬೆರಗಾಗಿ ಬಸವ ಕೇತಯ್ಯಗಳಂ ||
ತಿರುಗಿ ಕಳುಹಿಸಿದನಿಲ್ಲಿಗೆ |
ತ್ವರಿತದಿ ಕಂತೆಯೊಳು ಚೇತನ ತಾಳುತಿದ್ದರ್ | || ೨ ||
ಮರಣ ವಿರಹಿತ ಬಸವನುಂ |
ಶರಣಕೇತಯ್ಯಗಳೆದ್ದು ಶರಣರಿಗೆಲ್ಲಾ ||
ಶರಣೆನುತಲಿ ಮಣಿದರಾಗ |
ಧರೆಯೊಳಗಾಶ್ಚರ್ಯಮಾಗಿ ಮೆರೆದ ಪವಾಡಂ || ೩ ||

ವಚನ|| ಇಂತೀ ಬಸವೇಶ ಕೇತಯ್ಯಗಳು ಎಂದಿನಂತೆ ಜಂಗಮದಾಸೋಹ ದಲ್ಲಿರೆ, ಮತ್ತು ಶರಣರ ಕಾಯಕಮೆಂತೆನೆ.

# ಕನ್ನದ ಬ್ರಹ್ಮಯ್ಯನ ಕಾಯಕ.

**ದ್ವಿಪದಿ.**

ಹರ ಶರಣ ವರ ಭಕ್ತ ನಿರುಪಮಾಸಕ್ತ ।
ಧರೆ ನಭವ ತಾಳವಾಗಿ ಹಿಡಿವ ವಿರಕ್ತ ॥ ೧ ॥

ಗುರು ಲಿಂಗ ಜಂಗಮರ ವರ ಸೇವೆ ನಿಷ್ಠ ।
ಕರ ಪ್ರೀತಿ ಭಯ ಭಕ್ತಿ ಹರನ ಶರಣರೊಳು ॥ ೨ ॥

ಶಿವ ಧ್ಯಾನವೆಂದೆಂಬ ಐಶ್ವರ್ಯಯುತನು ।
ಅವಿರತಂ ಕ್ರಿಯದಲ್ಲಿ ಆಚರಿಪ ನಿಷ್ಠ ॥ ೩ ॥

ಬಹಿರಂತರದ ಪೂಜೆ ತಿಳಿದು ಆಚರಿಪ ।
ಐಹಿಕಾ ವರ್ತನದಿ ಅವಿರತಂ ನಡೆವ ॥ ೪ ॥

ಕನ್ನದ ಬ್ರಹ್ಮಯ್ಯ ಸಲೆ ನಾಮವಾಂತು ।
ಕನ್ನವಂ ಹಾಕುವನು ಪೇಳಲಿನ್ನೇನು ॥ ೫ ॥

ಗಾಳಿ ಬಟ್ಟೆಯು ಮರುಳು ಕನ್ನಗತ್ತರಿಯು ।
ಮುಳ್ಳು ಇಕ್ಕುಳ ಚಂಡು ಅಳತೆ ನೂಲುಗಳು ॥ ೬ ॥

ಅಂಕುಶ ಅಕ್ಷತೆ ಅದೃಶ್ಯ ಕಪ್ಪು ।
ಸೋಂಕಿಸಲು ಒರಗುವ ಸುಡುಗಾಡು ಬೂದಿ ॥ ೭ ॥

ಇಂತು ಸಂಗ್ರಹಗೂಡಿ ನಡೆದು ಧನಿಕರ ಮನೆಗೆ ।
ನಿಂತು ಮೂಲೆಯೊಳಾಗ ಗೃಹಮೊಳಗೆ ನೋಡಿ ॥ ೮ ॥

ಒಬ್ಬರೂ ಇಲ್ಲದಿರೆ ಸದ್ದಾಗಗೊಡದೆ ।
ಮೊಬ್ಬಿನಲಿ ಕುಳ್ಳಿರುತ ಬಾಗಿಲುಗನ್ನ ನೆಲಗನ್ನ ॥ ೯ ॥

ಅಗುಳಿಯಾಗನ್ನ ಗೋಡೆ ಹಂಜರಗನ್ನ ।
ಬೇಗ ಹಾಕುತಲಲ್ಲಿ ಒಳಪೊಕ್ಕು ನೋಡಿ ॥ ೧೦ ॥

ದೀಪ ಹಚ್ಚಿಯೆ ಆಗ ನೋಡಿ ಅವರುಗಳ ।
ಲೇಪ ಭೂತಿ ರುದ್ರಾಕ್ಷಿ ಶಿವ ಲಿಂಗವಿರಲು ॥ ೧೧ ॥

ಉಪಚರಿಸಿ ಪೂಜಿಪನು ಅವರಂಘ್ರಿಗಳನು ।
ಸಫಲವಾಯಿತು ಎಂದು ತೀರ್ಥವಂ ಕೊಂಬ ॥ ೧೨ ॥

ಅಲ್ಲಿಂದ ಬೀಳ್ಕೊಟ್ಟು ಬೇರೆ ಮನೆಗಳಿಗೆ ।
ಅಲ್ಲಿ ಹಾಕುತ ಕನ್ನ ಒಳಪೊಕ್ಕು ನೋಡಿ ॥ ೧೩ ॥

ಬೇಕಾದ ವಸ್ತುಗಳ ಮಿತಿಯಲ್ಲಿ ಒಯ್ದು ।
ಜೋಕೆಯಲಿ ಮಾರುವನು ಹಾಗಕ್ಕೆ ಅದನು ॥ ೧೪ ॥
ಭಕ್ತಗಳ ತಂದದಕೆ ಸತಿಯಳಿಗೆ ಕೊಡುವ ।
ಭಕ್ತಿಯಿಂ ಭಕ್ಷ್ಯಗಳ ಮಾಡಿ ಎಲ್ಲವನು ॥ ೧೫ ॥
ಜಂಗಮನ್ವೈನೂರ ಕರೆತಂದರ್ಚಿಸುತ್ತ ।
ಪಿಂಗದಲೆ ನೀಡುವರು ಅತಿಭಕ್ತಿಯಿಂದ ॥ ೧೬ ॥
ಇತ್ತ ಕನ್ನವ ಕೊರೆದ ಆ ತಾಣದೊಳಗೆ ।
ಎತ್ತಿ ನೋಡಲು ಪುಡಿಯು ಅಷ್ಟು ರನ್ನಗಳು ॥ ೧೭ ॥
ಆವ ಗೃಹದೊಳು ಪೋದ ದ್ರವ್ಯಕ್ಕೆ ಮಿಗಿಲು ।
ಸಾವಿರಕೆ ಹೆಚ್ಚಾಗಿ ಆದಪುದು ಪುಡಿಯು ॥ ೧೮ ॥
ನೋಡುವರ್ಕನೆಜನರು ಕೊಂಡಾಡುವರು ಶಿವನ ।
ಮಾಡುವರ್ಜಪವನು ಮನೆಗೆಯ್ಯಲೆಂದು ॥ ೧೯ ॥
ಶಿವನೀತನಲ್ಲದಲೆ ನರನಲ್ಲವೆಂದು ।
ಕವಿದು ಕವಾಟಗಳ ನೆನೆದು ಒಳಗಿಹರು ॥ ೨೦ ॥
ದೇವ ಬ್ರಹ್ಮನೆ ಬಾರೈ ಎಂದು ಜಪಿಸುತಲಿ ।
ಯಾವ ಕಾಲದಿ ಬಹನೊ ಎಂದು ಮಲಗುತಲಿ ॥ ೨೧ ॥
ಅಲ್ಲಿ ಕಲ್ಯಾಣದ ಜನ ಸ್ತೋಮವೆಲ್ಲ ।
ಉಲ್ಲಸದಿ ಹರಕೆಯನು ಮಾಡುತ್ತಲಿರಲು ॥ ೨೨ ॥
ಒಂದು ದಿನ ಬ್ರಹ್ಮಯ್ಯ ಬಿಜ್ಜಳನ ಗೃಹಕೆ ।
ಬಂದು ಹಾಕಿದ ಕನ್ನ ಗಜಶಾಲೆಗಾಗ ॥ ೨೩ ॥
ಪೊಕ್ಕು ನೋಡಲು ಆನೆ ಸೊಗಸಾಗಿ ಇರಲು ।
ನೂಕಿ ಹೊಡೆದನು ಆನೆ ಪೇಟೆ ಮಾರ್ಗದಲಿ ॥ ೨೪ ॥
ಹಾಗ ಕೊಟ್ಟವರಿಂಗೆ ಆನೆ ಕೊಡುವೆನು ಎಂದು ।
ಕೂಗುತ್ತ ಬರಲಾಗ ಜನರದನು ಕಂಡು ॥ ೨೫ ॥
ನೋಡಿದರು ಚೋದ್ಯವನು ಆಡಿದರು ತಮ ತಮಗೆ ।
ಓಡಿದರು ಬಿಜ್ಜಳಗೆ ಕೂಡೆ ಪೇಳುವರೆ ॥ ೨೬ ॥
ಪೇಳ್ದರಾ ಜನರೆಲ್ಲ ರೂಢೀಶನೊಡನೆ ।
ಕದ್ದು ಒಯ್ದನು ನಿಮ್ಮ ಪಟ್ಟದಾನೆಯನು ॥ ೨೭ ॥
ಎಂದು ಪೇಳಲು ರಾಜ ಕರುಣದಿಂದಾಗ ।
ಬಂದು ಕುಳಿತಿರಲಾಗ ಬ್ರಹ್ಮಯ್ಯನವರ ॥ ೨೮ ॥

ಪಟ್ಟದಾನೆಯ ನೀನು ದುಷ್ಟ ತನದಿಂ ಕದ್ದು ।
ಅಟ್ಟಿ ಮಾರುವರೆ ನೀ ಸರಕುಗೊಳ್ಳದಲೆ ॥ ೨೯ ॥

ವಚನ ॥ ಎಂದು ಬಿಜ್ಜಳರಾಯ ಕೇಳಲು, ಆ ಮಾತಿಗೆ ಕನ್ನದ ಬ್ರಹ್ಮಯ್ಯ ಏನೆನ್ನುತಿರ್ದನು.

## ಮಲ್ಲಿಕಮಾಲಾ ವೃತ್ತ.

ಕೇಳು ಬಿಜ್ಜಳರಾಯ ನನಗಿದು ಭಾಳಲೋಚನನಪ್ಪಣೆ ।
ಬಾಳುವರ ಬದುಕನ್ನು ಬಿಡದಲೆ ಕಳವಿನಿಂ ಕೊಂಡೊಯ್ಯುತಲಿ ॥
ಊಳಿಗವ ಮಾಡು ಶರಣರ್ಗೆ ಕಾಯಕವಿದೆಂದು ನೇಮಿಸಿಹ ।
ದಾಳಿ ನುಡಿಗಳದೇಕೆ ಬೇಡವೆನ್ನೊಳು ಕದನ ಸಾಕು ಸಾಕೈ ॥ ೧ ॥

ಫಾಲನಯನನು ಸಕಲ ಲೋಕಕೆ ಕೊಟ್ಟಹನಖಿಳ ಸಾಧನವ ।
ಕಾಲಕಂಠನ ಒಡವೆ ನಮ್ಮದು ನೀನು ಪರಸ್ವೆ ನೋಡು ನೋಡೆಂದ ॥
ಕಾಲ ಹರನಾ ಒಡವೆಯಲ್ಲದೆ ಇಳೆಯ ನರ ಪರ ದ್ರವ್ಯವಂ ।
ಆಲಿಯೊಳು ನೋಡೆ ನಾಂ ಕರದಿ ಮುಟ್ಟೆನೆನುತಲಿ ಪೇಳ್ದ ಬ್ರಹ್ಮಯ್ಯ ॥ ೨ ॥

ಶಯದ ಹುಣ್ಣಿಗೆ ಕನ್ನಡಿಯದೇಕೈ ನಮ್ಮ ಪಟ್ಟದಾನೆಯನು ಒಯ್ದು ।
ಕ್ರಯಗೈದೆ ಬಹಳ ಸತ್ಯವ ನುಡಿದೆ ಎನುತಲಿ ನೃಪನು ಗಜರಿದನು ॥
ಬೀಯ ಮಾತುಗಳೇಕೆ ಬಿಜ್ಜಳ ಪೋಗಿ ನೋಡು ನೀನು ಹುಸಿಯದಲ್ಲೈ ।
ಸ್ವೈಯೆನಿಸಿ ತೋರುವುದು ಕಣ್ಣಿಗೆ ಕರಿಯು ಎಂದನಾಬ್ರಹ್ಮಯ್ಯಂ ॥ ೩ ॥

ಆಗ ಬಿಜ್ಜಳರಾಯನಾನೆಯ ಶಾಲೆಗೈದಿಯೆ ನೋಡಲು ।
ತಾಗಿ ಝುಂಕಿಸಿಯಿರಲು ಕಾಣುತ ಚೋದ್ಯಗೊಂಡನು ಮನದೊಳು ॥
ನಾಗ ಭೂಷಣ ನಾಟಕವು ಇದು ಘನ ಮಹಿಮನಿವನೆನ್ನುತ ।
ಬೇಗ ತಲೆಬಾಗಿ ಮಣಿದು ಕಳುಹಿದನಾಗ ಬಿಜ್ಜಳರಾಯನು ॥ ೪ ॥

ವಚನ ॥ ಇಂತೀ ಕನ್ನದ ಬ್ರಹ್ಮಯ್ಯ ಎಂದಿನಂತೆ ಜಂಗಮ ದಾಸೋಹ ದಲ್ಲಿರೆ, ಮತ್ತೋರ್ವ ಶರಣನ ಕಾಯಕಮದೆಂತೆನೆ.

## ಹಾದರದ ಬ್ರಹ್ಮಯ್ಯನ ಕಾಯಕ.

### ಜಂಪೆ.

ಹಾದರದ ಬ್ರಹ್ಮಯ್ಯ । ಹರ ಶರಣ ಸೂವ್ರತನು ।
ಮೇದಿನಿಯ ನರಜನಕೆ । ಮದನ ರೂಪಿನವ ॥ ೧ ॥

ಒಪ್ಪಿತ್ರಿದಶ ವರುಷ । ದ ಪ್ರಾಯನತಿ ಚೆಲ್ವ ।
ಸರ್ಪಭೂಷಣ ಮಹ । ನೇರ್ಪುಳ್ಳ ಶರಣ ॥ ೨ ॥

ಪ್ರಾತಃಕಾಲದಿ ತನ್ನ | ಪರಮ ಶಿವಲಿಂಗಮಂ |
ನೂತನದಿ ಪೂಜಿಸಿಯೆ ಅ | ಷ್ಟೋಪಚಾರದಲಿ || ೩ ||

ನುಲಿದು ಕಾವಿಯ ಪೇಟ | ಲದನು ಕೋರೆಯ ತಿದ್ದಿ |
ನಲಿದು ಮೂರೇಖೆಯಲಿ | ಅತಿ ರಮ್ಯವಾಗಿ || ೪ ||

ಎಳೆಯ ಚಂದ್ರನ ಪೋಲ್ವ | ಥಳ ಥಳಿತ ಭಸಿತವನು |
ಚೆಲುವಿಂದ ಧರಿಸಿ ಮೇಲ್ | ಸೊಗಸು ವಸ್ತ್ರಗಳ || ೫ ||

ರನ್ನಸರಿಗೆಯ ಅಂಗಿ | ಉನ್ನತದಮೇಲೊಲ್ಲಿ |
ತನ್ನ ಕಾಲೊಳಗೆ ಸರ | ಪಣಿ ಘಂಟೆಯಿಟ್ಟು || ೬ ||

ಪಟ್ಟೆಯೆಳೆ ಧೋತ್ರವನು | ಉಟ್ಟು ವೈಯ್ಯಾರದಲಿ |
ದಿಟ್ಟ ಮದನನಿಗಿಮ್ಮಡಿ | ತೊಟ್ಟು ರಾಜಿಸಿದ || ೭ ||

ಕೆಂದಳಿರ ಹಸ್ತದಲಿ | ಅಂದದತಿ ಸಾರಂಗಿ |
ಚಂದದಿಂ ಪಿಡಿದು ಬ್ರ | ಹ್ಮಯ್ಯ ಪಟ್ಟಣದಿ || ೮ ||

ಮೂವತ್ತು ಎರಡು ರಾ | ಗವ ನುಡಿಸಿ ಬರಲಲ್ಲಿ |
ಯೌವನೆ ಪ್ರೌಢೆಯರು | ಇವನ ಕಾಣುತಲಿ || ೯ ||

ರೂಪು ರಾಗವು ಗೀತ | ಲಾಪ ಬೆಡಗನು ಕಂಡು |
ಚಾಪಲಾಕ್ಷಿಯರಾಗ | ತಾಪಗೊಳುತಿಹರು || ೧೦ ||

ವಚನ || ಇಂತೀ ಪರಿಯಲ್ಲಿ ತಾಪಹತಿಯಿಂದ ಈ ಬ್ರಹ್ಮಯ್ಯನಂ ದೈನ್ಯತೆಯಿಂ ರತಿ ಬೇಡುವ ಸ್ತ್ರೀಯರಲ್ಲಿ ಆ ಬ್ರಹ್ಮಯ್ಯ ಹಣ ಹಾಗದ ಕಾಯಕಮಂ ತೆಗೆದುಕೊಂಡು, ಅವರ ಮದನ ತಾಪಮಂ ನಾನಾ ಹದುರು ಚದುರು ಗೀತಗಾನದಿ ಅವರ ಇಂದ್ರಿಯಗಳಂ ಚಲಿಸಿ, ಅವರಿಗೆ ಹೇಯಮಂ ಪುಟ್ಟಿಸಿ ಲಜ್ಜೆಯಂ ಕಾಣಿಸಿ ವಿಟರು ನೆರೆದುದಕ್ಕಿಂತ ಇಮ್ಮಡಿಯಾಗೆ ತೆರಳಿ ಎಂದು ಕಳುಹಿಸಿಕೊಂಡು, ಹಾದರದ ಮೂಲದಿಂ ವಿತ್ತಗಳಂ ತಂದು ನಿತ್ಯವೈನೂರು ಜಂಗಮ ದಾಸೋಹಮಂ ಗೆಯ್ಯುತ್ತಿಹನು. ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿ ಸೋಂಕಿ ಸೋಂಕದ ತೋರಿ ತೋರದ ಮಹತ್ತಂ ಮೆರೆವುತ್ತಿರೆ, ಮತ್ತೊಂದು ದಿನದ ಮಹತ್ತಂ ವಿಸ್ತರಿಸೆಂ.

**ಅಟತಾಳ.**

ಅತಿಚೆಲುವ ಸುಂದರ ವಿಲಾಸದಿ | ಅರ್ಥಿಯಿಂದಾ ಬ್ರಹ್ಮಯ್ಯ |
ಗೀತ ಗತಿ ತಾಳದಲಿ ಬೀದಿಯೊ – ಳಾಂತು ಬರಲು || ೧ ||
ಇಕ್ಕೆಲದ ವೇದಿಕೆಯ ಶ್ರೇಣಿಯೊ | ಳ್ಸೊಕ್ಕು ಜವ್ವನೆಯರು ವಿಲಾಸದಿ |
ಮಿಕ್ಕು ಮಿಗಿಲುತೆ ನೋಡುತಿರ್ದುದು ಕಿ – ಷ್ಕಿಂಧಮಾಗಿ || ೨ ||

ಇಂದು ವದನೆಯರ್ಕಮಲ ನೇತ್ರೆಯರ್ । ಮಂದಗಾಮಿನಿಯರ್ಕಳು ।
ಕಂದರ್ಪರತಿ ಕಳೆಯಬೊಪ್ಪುವ – ಕಾಂತೆಯರು ಎಲ್ಲ ॥ ೩ ॥
ನೀಲಕುಂತಳೆ ನಿರಿಗುರುಳಿನ । ಬಾಲೆಯರುಗಳ್ ಸ್ತ್ರೋಮದಿ ।
ಲೋಲೆಯರು ಚಂಪಕದ ನಾಸಿಕ – ಪೋಳೆವ ನಾರಿಯರು ॥ ೪ ॥
ತೊಂಡೆವಣ್ದುಟಿ ಬಟ್ಟಕುಚೆಯರು । ಶುಂಡದಂದದ ತೋಳಿನ ।
ದಿಂಡೆಯರು ಬಡನಡುವು ಬಾಳೆಯ – ತೊಡೆಯ ನೀರೆಯರು ॥ ೫ ॥
ಕೆಂದಳಿರ ಪದಪಾಣಿ ಸ್ತ್ರೀಯರು । ಕಂಡು ಇವನಾ ಸೊಬಗನು ।
ಕಂದರ್ಪನ ರತಿಗೆಳಸಿ ಮನ ಮಂ – ಕಾಗಿ ನೀರೆಯರು ॥ ೬ ॥
ಮಿಾಟುತಿಹ ಸಾರಂಗಿ ನಾದಕೆ । ನೀಟುಗಾತಿವೆಣ್ಗಳು ।
ನಾಟಿ ಮನವನು ನಿಲಿಸಿ ನೋಡುತ – ಕೂಟದಿಂದಿಹರು ॥ ೭ ॥
ಅಮ್ಮ ನೋಡಿರ ಈತ ಮಹಿಯೊಳು । ಬ್ರಹ್ಮ ನಿರ್ಮಿತನಲ್ಲ ಪುರುಷನು ।
ಕಮ್ಮಗೋಲನು ಸದ್ಯ ಈತನ – ಕಂಡೆವಮ್ಮಮ್ಮ ॥ ೮ ॥
ಅಂಗನೆಯರಾರಾದಡೀತನ । ಸಂಗ ಸುಖವ ಕೂಡದ ।
ಅಂಗವೇತಕೆ ಎಂದು ಪೇಳ್ದರು – ಅಂಗನೆಯರು ॥ ೯ ॥

ವಚನ ॥ ಇಂತು ಸ್ತ್ರೀಯರು ಆಶ್ಚರ್ಯಕರಮಾಗಿ ನೋಡುತ್ತ ಮನ್ಮಥನ ಬಾಧೆಯಿಂ ಪಲವು ವಿದಂಗಳಾಡಿ ಬಯಸುತ್ತಿರಲು, ಅನಿತರೊಳು ಗೋಪಾಲಭಟ್ಟನೆಂಬ ಪಾರ್ವನಹೆಂಡತಿ ಅತಿಸುಂದರಿ ಕಡುಜವ್ವನೆ ಶಶಿಯೆಂಬವಳು ಈ ಬ್ರಹ್ಮಯ್ಯನಂ ತನ್ನ ಉಪ್ಪರಿಗೆ ಗೃಹಕ್ಕೆ ಕರೆಸಿಕೊಂಡು ಸಂಗೀತವಂ ಕೇಳುತ್ತಿರಲು, ಕಲ್ಲು ಕರಗುವ ಪೊಲು ಎಪ್ಪತ್ತೈದು ರಾಗವಂ ಹಾಡಿ ತೋರಿಸಲು, ಆಕೆಯು ಕೇಳಿ ಮದನ ತಾಪವೆಗ್ಗಳಿಸಿ ಏನೆನ್ನುತಿರ್ದಳು.

**ಜಂಪೆ.**

ಕೇಳ ಕೇಳಲು ಗೀತ । ಬಹಳ ತಾಪಮದಾಗಿ ।
ಲೋಲಾಕ್ಷಿ ಬ್ರಹ್ಮಯ್ಯನ । ಲೀಲೆಯಿಂ ಕೇಳ್ದಳ್ ॥ ೧ ॥
ಬಾರೊ ಭಾವಜ ರೂಪ । ಬಾರೊ ಮೋಹಕಲಾಪ ।
ಬಾರೊ ತೋಳ್ಪಿಡಿತಕ್ಕೆ । ಸೇರೊ ಶೃಂಗಾರ ॥ ೨ ॥
ಯಾವ ದೇಶವು ನೀನು । ಈ ವಿಧದ ರೂಪಾಂತು ।
ಕೋಮಲಾಂಗನೆ ಬಂದೆ । ಕಂತು ಸಮರೂಪ ॥ ೩ ॥
ಮದನ ಬಾಣದಿ ನೊಂದೆ । ವದನ ಚೆಲುವನೆ ಕಂಡು ।
ಚೆದುರ ಎನ್ನನು ರಮಿಸಿ । ಸದೆಯೊ ತಾಪವನು ॥ ೪ ॥
ನಿಂಬೆಯಾ ಹಣ್ಣಿನಂತೆ । ತುಂಬಿದ ಯೌವನವು ।
ಇಂಬಾಗಿ ಅಮರ್ದಪ್ಪಿ । ನೆರೆದುಳುಹೊ ಸಾರ ॥ ೫ ॥

ಕುಂಭಸ್ತನ ಹಸ್ತದಲಿ । ಪಿಡಿದು ಓಷ್ಠಾಮೃತವ ।
ಚುಂಬಿಸಿಯೆ ಸ್ಮರಕಲೆಯ । ಹಿತಗೂಡು ನೀರ ॥ ೬ ॥
ತಾಳಲಾರೆನು ನೀರ । ಜಾಲಗೆಯ್ಯದೆ ಅಪ್ಪಿ ।
ಆಳು ನೀನಿದು ಜಿಲ್ವ । ವೇಳೆಯ್ಯ ನೀರ ॥ ೭ ॥
ಇಂತು ಸ್ಮರ ವಿಕಳದಿಂ । ದಂತಿಗಮನೆಯು ಮೋಹ ।
ಭ್ರಾಂತಿಯಾಗಿಯೆ ಬೇಡೆ । ಬ್ರಹ್ಮಯ್ಯನೆಂದ ॥ ೮ ॥
ಮಾನಿನಿಯೆ ಕೇಳ್ನಿನ್ನ । ಮಾತ ಮನ್ನಿಪೆನೆನಗೆ ।
ಜಾಹ್ನವಿಯ ಪ್ರೀಯಂಗೆ । ಸೊಗಸು ಕಾಯಕವು ॥ ೯ ॥

ವಚನ ॥ ಇಂತು ಮೋಹ ಭ್ರಾಂತಿಯಿಂದ ದೈನ್ಯಪಡುವಳಿಗೆ ಎಲೆ! ನಾರೀ ಮಣಿಯೇ! ಎನಗೆ ಕಾಯಕಮಂ ಮುನ್ನ ನೀ ಕೊಟ್ಟರೆ ನಿನ್ನಭಿಲಾಷೆಯಂ ಸೊಗಯಿಪೆನೆನಲು, ಹೇ! ಪ್ರೀಯ ಕಾಯಕವು ಸಾವಿರವೊ? ಐನೂರೋ? ಎನ್ನ ದೇಹವೊ? ಪೇಳು ಇತ್ತಪೆನೆನಲು, ಅಷ್ಟು ಮಾತ್ರವಲ್ಲ ಹಣ ಹಾಗವೇ ಕಾಯಕ ವೆಂದು ಪೇಳಲು, ಅವಳು ಆ ಕ್ಷಣವೇ ಈಯಲು ಅದಂ ಬಂಧಿಸಿ ಅವಳ ಮೋಹವಂ ಹಿಂಗಿಸುವ ಸಮಯದಲ್ಲಿ ಅವಳ ಪತಿಯು ಕಂಡು, ರೌದ್ರದಿಂದ ಈರ್ವರಂ ಬಡಿಗೆಯೊಳ್ ಸವೆದು ಕೊಂದು ಒಂದು ಗೃಹದಲ್ಲಿಟ್ಟು, ರಾತ್ರಿಗೆ ಈರ್ವರಂ ಎಳೆದು ಬಿಸಾಡುವ ಎಂದು ಗೋಪಾಲಭಟ್ಟ ಖತಿಯುಂದಿರೆ ಇತ್ತ ಬ್ರಹ್ಮಯ್ಯನ ಮನೆಯ ಕಾಯಕವೆಂತೆನೆ.

**ಸಾಂಗತ್ಯ.**

ಇತ್ತ ಬ್ರಹ್ಮಯ್ಯನ ಸತಿ ರೇಚಮ್ಮನು । ಮತ್ತೆ ತನ್ನೆಯ ಗೃಹ ಶುಚಿಯ ॥
ಅರ್ಥಿಯಿಂಗೈದು ಪತಿ ಬರುವುದ ನೋಡುತ್ತ । ಮತ್ತಿರೆ ಮಧ್ಯಾಹ್ನ ವಾಗೆ ॥ ೧ ॥
ನಿತ್ಯ ಕಟ್ಟಳೆ ಸಲಿಸುವ ಜಂಗಮರೆಲ್ಲ । ವೊತ್ತದಿಂ ಬಂದರು ಮನೆಗೆ ॥
ಸತ್ಯ ಶರಣೆ ರೇಚಮ್ಮ ತಿಳಿದು ಇದ । ನಿತ್ಯ ಕ್ರಿಯಕೆ ಕುಂದೆಂದೆಣಿಸಿ ॥ ೨ ॥
ಕಡುತ್ವರಿತದಿ ಬಂದಳು ಅಂಗಡಿಗಾಗಿ । ಮೃಡನ ವ್ರತವ ನಡೆಸಲ್ಕೆ ॥
ಒಡಲೆರಡು ಪ್ರಾಣವೊಂದೆಂಬ ನಂಬಿಗೆ ತಾಳಿ । ಕಡು ಚರ ಭಕ್ತೆ ರೇಚಮ್ಮ ॥
ಬಂದು ಅಲ್ಲೋರ್ವ ವೈಶ್ಯಗೆ ಬಹು ಹಿತದಿಂದ । ಚಂದದಿಂ ಮಾತುಗಳಾಡಿ ॥
ಇಂದಿನಿರುಳು ನಿನಗೆನ್ನಂಗವೊತ್ತೆಯ । ಸಂದೇಹವಿಲ್ಲದೆ ಈವೆ ॥ ೪ ॥
ವ್ರತವುಂಟು ಎನಗಿಂದಿಗೆ ಕುಂದು ಬಂದಿದೆ । ಹಿತದಿ ನೀ ನೀಯೊ ಹಣಹಾಗ ॥
ಅತಿ ಚಮತ್ಕಾರವಲ್ಲವು ರಾತ್ರಿ ಬಂದಪೆ । ಶತ ಸಿದ್ಧವೆಂದಳ್ತಾನಾಗ ॥ ೫ ॥

ನೋಡಿದ ವೈಶ್ಯನು ಇವಳತಿ ಚೆಲ್ವವ । ಮಾಡಿದ ಮನ ಹರುಷವನು ॥
ಗಾಡಿಕಾತಿಯರ ಮಾತಿಗೆ ನಂಬಿದವರುಂಟೆ । ನಾಡಾಡಿ ಜಾಣ್ಮೆಯ ಮಾತು ॥
ನೀನೆತ್ತ ನಾನೆತ್ತ ಮಾತ ನಂಬುವದೆತ್ತ । ಮಾನಿನಿಯರ ನಂಬಬಹುದೆ ॥
ಕಾಣಿಸುವುದು ನಿಜ ಹರಿಯುವ ನೀರಿನೊಳ್ । ಜಾಣ ಲೇಖನ ಬರೆದಂತೆ ॥೬॥
ಬಿರುಗಾಳಿಯೊಳು ತರಗೆಲೆ ಹಾರುವಂದದಿ । ತರುಣಿಯರ ಮಾತು ಸ್ಥಿರವೆಂ ॥
ದೊರೆಯೆ ರೇಚಮ್ಮನು ಪ್ರತಿಯಾಗಿ ವೈಶ್ಯೆಗೆ । ಒರೆದಭಯದೊಳು ನೀತಿಗಳ ॥
ಧರೆಯೊಳಗಣ ಶ್ವೇತ ಶಿಲೆ ಪುಷ್ಯರಾಗಕ್ಕೆ । ಸರಿಯಾಗಿಪ್ಪುದೆ ವೈಶ್ಯ ಶೆಟ್ಟಿ ॥
ಕರಿದಾಗಿರಲು ರೂಪು ಕಸ್ತೂರಿ ಇದ್ದಲಿಗೆ । ಸರಿಯಗಟ್ಟುವರೆ ಹಿರಿಯರು ॥೯॥
ಇಂತೀ ತರ್ಕಗಳೇಕೆ ಹಿಡಿ ಬಲಗೈಯೆಂದು । ನಿಂತು ಕೊಟ್ಟಳು ನಿಶ್ಚಯವ ॥
ಕಂತು ವಿಷಯಕೊಳಗಾಗಿ ಇತ್ತನು ಶೆಟ್ಟಿ । ದಂತಿಗಮನೆ ರೇಚಮ್ಮನಿಗೆ ॥೧೦॥

ವಚನ ॥ ಇಂತಿ ನಂಬುಗೆಯಿಂದ ಹಣ ಹಾಗದ ಭತ್ಯವಂ ತಂದು ಭಕ್ತಿಯಿಂದಾಕ್ಷಣದಲ್ಲಿ ಪಾಕವಂಗೈದು, ಶಿವಶರಣರನ್ನೆಲ್ಲ ತೃಪ್ತಿಗೈಸಿ ಅವರನ್ನು ಬೀಳ್ಕೊಟ್ಟು ಇತ್ತ ರೇಚಮ್ಮ ತನ್ನ ಪತಿಯಂ ಅರಸುತ್ತ ಬರುತಿರ್ದಳದೆಂತೆನೆ.

**ಏಕತಾಳ.**

ಬಂದಳು ರೇಚಮ್ಮ । ಅಂದು ಕೇಳುತ ಜನರ ।
ಬಂದು ಹೊಕ್ಕಳು ಜನರು । ತೋರ್ದ ಮಂದಿರವ ॥ ೧ ॥
ಪೊಕ್ಕಳು ತನ್ನಯ । ಪತಿ ಹೋದ ಗೃಹವನ್ನು ।
ಬೆಕ್ಕಸದಿಂದ ಮರು । ಮರುಗುತ್ತಲಿರಲು ॥ ೨ ॥
ಅಣ್ಣಯ್ಯ ಇಲ್ಲೆನ್ನ । ಅಧಿಪತಿ ಬಂದನಂತೆ ।
ಇನ್ನು ನೀ ಕಂಡಿಹಡೆ । ಇರವ ತೋರೆನಗೆ ॥ ೩ ॥
ಕೇಳಿದಾ ತರುಣಿಗೆ । ಕಠಿಣ ವಾಕ್ಯವ ತಾಳಿ ।
ಖೂಳ ಜಂಗಮ ಜಾರ । ಮೂಳ ಬಂದಿಂದು ॥ ೪ ॥
ನಮ್ಮ ಅಂತಃಪುರದಿ । ನಮ್ಮ ಘನತೆಯ ಸತಿ ।
ಗಮ್ಮನೆ ಇರುತಿಹ । ಗೃಹವ ತಾ ಪೊಕ್ಕು ॥ ೫ ॥
ಸತಿಯೊಳು ಮಾತು ಗೀತ । ಪಾಡುತಿರೆ ನಾ ಕಂಡು ।
ಹತಗೈದು ಎಳೆದಿಹೆನು । ಸತಿಯೆ ನೋಡೆಂದ ॥ ೬ ॥

ವಚನ ॥ ಇಂತೆಂದು ಆ ಮನೆಯ ಬೀಗವಂ ತೆಗೆದು ತೋರಲು, ರೇಚಮ್ಮ ನೋಡಿ ಭಯಂಗೊಂಡು! ಮುಗುಳೋಡಿಬಂದು ತನ್ನ ಗೃಹದೊಳ್ ವ್ರತದಿಂ ಬಚ್ಚಿಟ್ಟಿರುವ ಜಂಗಮದ ಧೂಳಪಾದೋದಕಮಂ ತಂದು, ಭಾಳಲೋಚನನ

ಆರಕ್ಷರವಂ ಪಠಿಸುತ್ತ ಬಿದ್ದಿರ್ದ ತನ್ನ ಪತಿಗೆ ತಳಿಯಲು, ನಿದ್ರೆಗೈದೆದ್ದವನಂತೆ! ಕಣ್ದೆರೆದು ಎಲೈ ನಾರೀಮಣಿಯೆ! ಈ ಭವಿಗಳ ಗೃಹವಂ ಪೊಕ್ಕೆಯ? ಎಂದು ಕೇಳಲು, ಅದಂ ಕಂಡು ಗೋಪಾಲಭಟ್ಟನು ಆಶ್ಚರ್ಯವಂಪಟ್ಟು!! ಸಾಕ್ಷಾತ್ ಪಾರ್ವತಾದೇವಿ ಇವಳೆಂದು ನುತಿಸುತಿರ್ದ ಪನದೆಂತೆನೆ.

**ತ್ರಿವುಡೆ.**

ಶರಣು ಶರಣು ಶ್ರೀ ಮಹಿಮೋದ್ಧಾರೆಯೆ । ಶರಣು ಗಿರಿಜಾ ದೇವಿಯೆ ।
ಶರಣು ನಿನ್ನಯ ದರುಶನಂಗೈದು – ದುರಿತ ಹಿಂಗಿದವು ॥ ೧ ॥
ಆವ ತಪಸಿನ ಫಲವೊ ಮುನ್ನಿನ । ಆವ ಸುಕೃತದ ಪುಣ್ಯವೆನಗಿತ್ತೊ ।
ಪಾವನಾತ್ಮಕಿ ಎನ್ನ ಮನೆ ನಿನ್ನ – ಪಾದ ಸೋಂಕಿದುದು ॥ ೨ ॥
ಪಾವನನು ನಾನಾದೆ ಪಾರ್ವತಿ । ದೇವಿ ಸರ್ವಾಪರಾಧಿ ನನ್ನನು ।
ಭಾವಿಸದೆ ದಯೆಯಿಂದ ಮನ್ನಿಸು – ಸಾಮಜಾಗಮನೆ ॥ ೩ ॥
ಮರುಳ ಮತ್ತನು ದೀನ ಮಾನನು । ಪರಮ ಪಾತಕ ಪಿಸುಣ ಹೀನನು ।
ದುರುಳ ಗರ್ವನ ಗುಣವ ನೋಡದೆ – ಶರಣು ದಯವಾಗು ॥ ೪ ॥
ಮರ್ಕಟವು ಮಾಣಿಕ್ಯ ಮಾಲೆಯ । ಮಹಿಮೆ ಘನತೆಯನರಿಯದಂದದಿ ।
ಅರ್ಕ ಘನತೆಯ ಗೂಗೆ ಬಲ್ಲುದೆ – ಅಂತೆ ನಾನೆಂದ ॥ ೫ ॥
ನಿಮ್ಮ ಮಹಿಮೆಯನರಿಯದಾದೆನು । ಅಮ್ಮ ನೀ ಕ್ಷಮಿಸೆನ್ನ ದಯದಲಿ ।
ನಿಮ್ಮ ಪಾದದ ಸೇವಕಳ ಚೈ – ತನ್ಯ ಪಾಲಿಪುದು ॥ ೬ ॥
ಎಂದು ದೈನ್ಯತೆಯಿಂದ ನುತಿಸುತ । ಮಂದಗಮನೆಯ ಪಾದಕೆರಗಲು ।
ಅಂದು ಕರುಣದಿ ಪತಿಗೆ ಪೇಳ್ದಳು – ಇಂದುವದನೆ ॥ ೭ ॥
ದೇವ ನಿಮ್ಮಯ ರತಿಗೆ ಎಳಸಿದ । ಭಾಮಿನಿಯ ಪಾವನವಗೆಯ್ಯುತ ।
ಭಾವಜಾರಿಯ ಬಿರುದ ಮೆರೆಸೈ – ಭವ್ಯತೇಜ ॥ ೮ ॥
ಪರುಷ ಸೋಂಕಲು ಲೋಹ ಚಿನ್ನವು । ತ್ವರಿತಮಾದಂದದಲಿ ಆಕೆಯ ।
ಭರದಿಯೆಬ್ಬಿಸಿ ಬಿರುದು ಮೆರೆಸೈ – ಪರುಷ ನಿಧಿಯೆ ॥ ೯ ॥

ವಚನ ॥ ಇಂತೆಂದ ಸತಿ ರೇಚಮ್ಮನ ಮಾತಿಗೆ ಮಡಿದಿರ್ದ ಶಶಿಯಳಿಗೆ ಬ್ರಹ್ಮಯ್ಯಂ ಜಂಗಮದ ಧೂಳಪಾದೋದಕವಂ ತಳಿದು ಎಬ್ಬಿಸಲು, ಆ ಗೋಪಾಲ ಭಟ್ಟನು ಅನೇಕವಿಧದಿಂ ನುತಿಸುತ್ತಿರೆ ಪುರ ಜನ ಪರಿಜನರು ಕಂಡು, ಆಶ್ಚರ್ಯವಂ ಬಟ್ಟು! ಪೊಗಳುತ್ತಿರೆ ಇತ್ತ ಸತಿ ಪತಿಗಳು ಗೃಹಕ್ಕೆ ಬಂದು, ಎಲೈ ನಾರೀ ಮಣಿಯೆ! ಈ ಹೊತ್ತು ಸೂರ್ಯಗತ ಸಮಯವಾಯಿತು ಶಿವ ಗಣಾರಾಧನೆಗೆ ವ್ರತವಂ ಎಂತು ಗೈದೆ? ಎನಲು, ಆಕೆ ನಿಜಭಾವವಂ ಪತಿಗೆ ಬಿನ್ನೈಸುತಿರ್ಪಪಳ ದೆಂತೆನೆ.

**ಕಂದಪದ್ಯ.**

ಕೇಳೆಲೆ ಕಾಂತ ಶಿಖಾಮಣಿ ।
ಭಾಳಾಕ್ಷನ ವ್ರತದ ದಾಸೋಹವ ಗೈಯಲ್ ॥
ತಾಳಿದೆನು ಲೀಲೆಯೊಂದನು ।
ಲೋಲನೆ ಕೇಳ್ವೆದಿ ವೈಶ್ಯನೆಡೆಯೊಳ್ನಾನುಂ ॥ ೧ ॥

ಕೇಳ್ದೆನವನ ನಾ ರನ್ನನೆ ।
ಕೇಳೆಲೆ ವರ್ತಕನೆ ನಿನ್ನ ಬಳಿಗಾನಿರುಳುಂ ॥
ಕೇಳಿಗೆ ಕಾಮ ರತಿಗೆ ನಾಂ ।
ತಾಳುತ ಬಂದಪೆ ಹಣ ಹಾಗ ಭತ್ಯವೀಯ್ಯೆ ॥ ೨ ॥

ಎಂದಾತಗೆ ನಂಬುಗೆಯಿಂ ।
ಚಂದದಿಂ ಒಡಂಬಡಿಸಲವ ಹಣ ಹಾಗಕ್ಕಂ ॥
ಇಂದಿತ್ತನು ಭತ್ಯಗಳಂ ।
ಮಂದಿರಕೆ ತಂದು ಪಾಕಂಗೆಯ್ದೆನು ಮುದದಿಂ ॥ ೩ ॥

ಶಿವನ ಗಣಾರಾಧನೆ ವ್ರತವ ।
ತವಕದಿ ನಡೆಸಿದೆನು ಕೇಳಿ ಎನ್ನಲು ಸತಿಯಳ್ ॥
ಯುವತಿಯ ನುಡಿ ಕೇಳಿ ಶರಣ ।
ಭವ ಹರನ ಕರುಣದ ಸಾಧ್ವಿಯೇ ನೀನೆಂದಂ ॥ ೪ ॥

ವಚನ ॥ ಇಂತು ಸತಿಯ ಭಕ್ತಿಗಂ ಮೆಚ್ಚಿ ಮತ್ತು ಏನೆನ್ನುತಿರ್ದಪನು.

**ಅಟತಾಳ.**

ಭಲರೆ ಭಾಮಿನಿ ಪ್ರಾಣನಾಯಕಿ । ಭಲರೆ ಎನ್ನಯ ನೇಮ ನಡೆಸಿದೆ ।
ಮಲಹರನ ಸಾಯುಜ್ಯವದು ನಿನ – ಗೆಲೆಲೆ ತರುಣಿ ॥ ೧ ॥

ಮಾನ ವಾಂಛಲ ಕುಂದು ಕೊರತೆಯ । ನೀನು ನೋಡದೆ ವ್ರತವ ನಡೆಸಿದೆ ।
ಮಾನನಿಧಿ ನೀನಹುದು ಮತ್ಪ್ರಾಣ – ಮುಂದಗಮನೆ ॥ ೨ ॥

ಎಂದು ಈರ್ವರು ಶಿವನ ಪೂಜೆಯ । ಚಂದದಿಂದಲಿ ನಡೆಸುತ ।
ಅಂದು ಅರ್ಪಣಗೈದು ವೀಳ್ಯವ – ಚಂದದಿಂ ಸಲಿಸಿ ॥ ೩ ॥

ಕೊಟ್ಟ ಭಾಷೆಗೆ ತಪ್ಪಬಾರದು । ಕಾಂತೆ ರನ್ನಳೆ ಕೇಳು ಶೀಘ್ರದಿ ।
ತೊಟ್ಟು ಭರಣವ ಪೋಗಿಯಾತನ – ಭಾಷೆ ಸಲಿಸು ॥ ೪ ॥

ಪತಿಯ ವಾಕ್ಯದಿ ಬೇಗ ಶೃಂಗರ । ಪೊಸತಮಾಗಿ ರತಿಯವೋಲ್ ।
ಅತಿ ಚೆಲ್ವಿಕರಮಾಗಿ ನಿಂದಳು – ಅನಿತರೊಳು ಮಳೆಯು * ॥ ೫ ॥

ಸುರಿಯುತತಿ ಕಾವಳವು ಮುಸುಕಲು । ಭರದಿ ಪಂಜನು ಕಟ್ಟಿ ಹತ್ತಿಸಿ ।
ಹೊರಟರತಿ ವೇಗದಲಿ ಕೊಡೆವಿಡಿ – ದೀರ್ವ್ವರ್ಸಹವಾಗಿ * ॥ ೬ ॥

ವಚನ ॥ ಇಂತೀ ಬ್ರಹ್ಮಯ್ಯ ಸತಿಯಂ ವೈಶ್ಯನ ಅಂಗಡಿ ಬಳಿಗೆ ಬಿಟ್ಟು ಪೋಗಲು, ಇತ್ತ ರೇಚಮ್ಮನು ಆ ವೈಶ್ಯನ ಎದುರಿಗೆ ಪೋಗಿ ನಿಲ್ಲಲು ವೈಶ್ಯಂಗೆ ಎಂತಾಯಿತೆಂತೆನೆ.

**ಕೊಂಚೆ ಜಂಪೆ.**

ಕಾರು ಮೇಘದ ಮಿಂಚಿನಂತೆ – ಹೊಳಪು । ಉರ್ವಿವಿಡಿದೀಚೆಗೈದಂತೆ ॥
ಮಹಿಷಾಸುರ ಮರ್ಧಿನಿಯಳಂತೆ – ರೌದ್ರ । ವಹಿಸಿ ತಾ ಜ್ವಾಲೆ ನಿಂತಂತೆ ॥
ನೋಡಲೆದೆಗಳು ಬಿರಿಯುವಂತೆ – ಆಗ । ರೂಢಿಗಾಶ್ಚರ್ಯವಾದಂತೆ ॥

ಸಾವಧಾನದಿ ನೋಡಲಂಜಿ – ಸೊಬಗು । ಭಾವಜಾರಿಯ ರೂಪಿಗಿಂಬು ॥ ೨ ॥
ನಿಂದಳಾ ಕಮಲದಳ ನೇತ್ರೆ – ಅರವಿಂದ । ಗಂಧಿ ಸುಖ ಚಾರು ಚಾರಿತ್ರೆ ॥

ವಚನ ॥ ಇಂತೀ ರೂಪಿನಿಂದ ನಿಂದು ರೇಚಮ್ಮ ಎಲೆ ಶೆಟ್ಟಿಗಾರನೆ ನಿನ್ನ ಅಭೀಷ್ಟೆಯಂತೆ ಋಣವಂ ತೀರಿಸಿಕೊ ! ತಡ ಮಾಡಬೇಡವೆನ್ನಲು, ಅವಂ ಕಂಡು ಗಡ ಗಡನೆ ನಡುಗಿ ವಿಸ್ಮಯಂಬಟ್ಟು !! ಬೆರಗಾಗಿ ಭಯದಿಂ ಮಣಿದು ಮುಕುಳಿತ ಹಸ್ತನಾಗಿ, ಸಾಕ್ಷಾತ್ ಪಾರ್ವ್ವತಿಯಂತೆ ತೋರ್ಪಳಂ ದೈನ್ಯದಿಂ ನುತಿಸಿದನದೆಂತೆನೆ.

**ಜಂಪೆ.**

ಶರಣು ಶಾಂಭವಿ ತಾಯೆ । ಶರಣು ಶಂಕರ ಪ್ರಿಯೆ ।
ಶರಣು ಲೋಕಾರಾಧ್ಯೆ । ಶರಣು ಮಹಾ ಮಾಯೆ ॥ ೧ ॥

ಎನ್ನ ಪೂರ್ವ್ವದ ಸುಕೃತ । ಪುಣ್ಯದಿಂ ನಿಮ್ಮಡಿಯ ।
ಸನ್ನುತದ ದರುಶನದಿ । ಇನ್ನು ಸುಖಿಯಾದೆ ॥ ೨ ॥

ಎನ್ನ ಮುಸುಕಿದ ದುರಿತ । ಇನ್ನು ಬಿಟ್ಟೋಡಿದುದು ।
ಪನ್ನಗಧರ ರಾಣಿ । ಪಾವನನು ಆದೆ ॥ ೩ ॥

ತಾಯೆ ನಿಮ್ಮಯ ಮಹಿಮೆ । ಆಯತವ ಬಲ್ಲವರಾರ್ ।
ಕಾಯಜ ದುರಾತ್ಮಕನು । ಕಾಣಿಸದೆ ಹೋದ ॥ ೪ ॥

---

* ಈ ಪದ್ಯಗಳು (ಒ.) ಪ್ರತಿಯಲ್ಲಿ ಮಾತ್ರ ಇವೆ.

ನಿಮ್ಮ ನೆನಸಲಿಲ್ಲ ತಾ । ಯ್ನಿಮ್ಮ ಪಾದದ ಭೃತ್ಯ ।
ನನ್ನು ಕ್ಷಮಿಪುದು ಎಂದು । ನುತಿಗೈದ ವೈಶ್ಯ ॥ ೫ ॥

ವಚನ ॥ ಇಂತು ಸ್ತುತಿಸಿ ಭೃತ್ಯನಾಗಲು, ರೇಚಮ್ಮನು ಅಯ್ಯ ಶೆಟ್ಟಿಯೆ ನಿನ್ನ ಋಣವಂ ತೀರಿಸಿಕೋ ಎನ್ನಲು, ತಾಯೆ ! ನಾನಿತ್ತ ಹಣ ಹಾಗಕ್ಕೆ ಕೋಟ್ಯಾಂತರ ಪುಣ್ಯ ಲಭಿಸಿದುದು. ಈ ಋಣಕ್ಕೆ ಭವ ಭವಾಂತರದಲ್ಲಿಯೂ ನಿನ್ನ ಚರಣ ಸೇವೆಗೆ ಯೋಗ್ಯನಹೆನೆಂದು ಎರಗಿ ನಿಲ್ಲಲು, ಆದಡೆಲವೊ ಶೆಟ್ಟಿಯೆ ಋಣ ತೀರಿದ ಚೀಟಂ ತಾರೆನಲು, ತತ್‌ಕ್ಷಣವೇ ಬರೆದು ಕೊಟ್ಟು ಮಣಿಯಲು, ತೆಗೆದುಕೊಂಡು ತನ್ನ ಗೃಹಕೆ ಬಂದು ಕಾಂತನೊಳು ವಿಸ್ತರಿಸಿದಳೆಂತೆನೆ.

**ಏಕತಾಳ–ಅರ್ಧರೇಕು.**

ಬಂದಳಾಕ್ಷಣ ಶರಣೆ – ಪತಿಯೊಡನೆ ನುಡಿಯ ।
ಸಂದೇಹವಿಲ್ಲದೆ – ಸೊಗಸಿನಿಂ ಪೇಳ್ದಳ್ ॥ ೧ ॥

ಪೋದ ಕಾರ್ಯವ ಅವನು – ಭೃತ್ಯನಾದುದನು ।
ಋಣ ಸಂಬಂಧಗಳೆಲ್ಲ – ತೀರಿ ಬಂದುದನು ॥ ೨ ॥

ನೋಡಿಕೊ ಚೀಟನೆಂದು – ನಾರಿ ತೋರಿದಳು ।
ಎಂದು ಪೇಳಲು ಕೇಳಿ – ಅಂದು ಬ್ರಹ್ಮಯ್ಯ ॥ ೩ ॥

ಇರುತಿರ್ದ ಶಿವಲೀಲೆಯೊಳು – ದಂಪತಿ ಸಹಿತ ।
ಶರಣರಿರೀತಿಯೊಳು – ವರ ಕಾಯಕಗೈದು ॥ ೪ ॥

ಹರ ಭಕ್ತಿಗೆಯ್ಯುತ – ಹರುಷದಿಂದಿರಲು ।
ಧರೆಯೊಳು ಕಲ್ಯಾಣ – ಶಿವಪುರಿಯಂತೆ ॥ ೫ ॥

ಇರುತಿರೆ ಸೊಂಪಡರಿ – ಆವ ವರ್ಣಿಪನು ॥

**ಕಂದಪದ್ಯ.**

ಇದು ಶರಣರ ಕಾಯಕ ಘನ ।
ವಿದನು ಸದು ಬಕುತಿಯಿಂ ಸತ್ಪುರುಷರ್ಕೇಳಲ್ ॥
ಒದಗುವುದಾಯುಂ ಶ್ರೀಯುಂ ।
ಮದನ ಹರ ಕೊಡುವ ಮೋಕ್ಷವನಿದು ಸಿದ್ಧಾಂತಂ ॥ ೧ ॥

ಇಂತಿ ಪದ್ಯಗಳು ೩೦೮

**ಅಂತು ಸಂಧಿ ೭ ಕ್ಕಂ ಸಂಪೂರ್ಣ ಗಣನೆ – ೨೧೯೮ ಕ್ಕಂ ಮಂಗಳಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ**



# ಎಂಟನೆಯ ಸಂಧಿ

# ಮಾಂಡವ್ಯಪುರದ ಮಹದೇವರಾಯನಲ್ಲಿ ಬಸವನು ಗಣಂಗಳ ತಂದ ಕಥೆ

**ಕಂದಪದ್ಯ.**

ಶ್ರೀ ಗುರು ನಿನ್ನಯ ಸೇವೆಗೆ |
ರಾಗದಿ ನಾನೊಲಿದು ಪೇಳ್ವೆ ರೂಢಿಯೊಳಿದನುಂ ||
ಬೇಗದಿ ಮತಿಯಿತ್ತು ನಡೆಸು |
ನಾಗ ಭೂಷಣನ ಶರಣರ ಲೀಲೆಯನಿದನುಂ || ೧ ||

ಸೂ|| ಮುಂದಣ ಕಥೆಯಿದು ಬಸವಂ |
ಚಂದದಿ ಮಹದೇವ ರಾಯನ ಭಕ್ತಿಯೊಳಿರುವಾ ||
ನಂದದಿ ಗಣರಾರು ಸಹಸ್ರ |
ತಂದನು ಹಸುಬೆಯಲಿ ಕೇಳಿ ಭಕ್ತಿಯೊಳೊಲಿದುಂ || ೨ ||

**ದ್ವಿಪದಿ.**

ಶ್ರೀ ಗುರು ವರ ಭಕ್ತ ಸರಸ ಗುಣಯುಕ್ತ |
ಭೋಗ ಮೋಕ್ಷಾರ್ಥಗಳ ಬಗೆಗೊಂಬ ಯುಕ್ತ || ೧ ||

ಭಕ್ತಿ ಬಸವನು ಲಕ್ಷ ತೊಂಬತ್ತು ಸಾವಿರಕೆ |
ನಿತ್ಯ ಗಣ ದಾಸೋಹ ಇಚ್ಛೆ ನಡೆಸುವನು || ೨ ||

ಎಷ್ಟು ಮಾಡಲು ಮನಕೆ ಅಷ್ಟು ದಣಿಯದಿರೆ |
ಸೃಷ್ಟಿಗೀಶನು ಇತ್ತ ವ್ರತ ನೆನೆದು ಮನದಿ || ೩ ||

ಬಸವಣ್ಣ ನನುದಿನವು ಬಯಸುತಿಹನೊಂದ |
ಅಸಮಗಣ ಲಕ್ಷ ತೊಂಬತ್ತಾರು ಸಾವಿರಕೆ * || ೪ ||

---

* ಈ ಪದ್ಯದಿಂದ ಮುಂದೆ ಬಸವೇಶ್ವರನ ಅರಮನೆಯಲ್ಲಿ ಹನ್ನೆರಡುಸಾವಿರ ರುದ್ರ ಕನ್ನಿಕೆಯರಿದ್ದರೆಂತಲೂ, ಅವರಿಗೆ ವಿವಾಹ ಸಂಬಂಧವಂ ಬೆಳೆಸುವ ಯೋಚನೆಯಿಂ, ಬಸವನು ಗಣಂಗಳಂ ಬಯಸುತ್ತಿರ್ದನೆಂದು (ಉ, ಎ, ಒ, ಖ, ಗ, ಚ, ಡ, ತ.) ಪ್ರತಿಗಳಲ್ಲಿ ಹೇಳಿದೆ.

ಸಂಭ್ರಮದಿ ನೀಡು ಮಾಡುವ ಸೊಗಸನೆಣಿಸಿ ।
ಆರು ಸಾಸಿರ ಗಣರ ಭರದಿ ಅರಸುವನು ॥ ೫ ॥

ತೋರವರಾವಕಡೆ ತಾರತಮ್ಯದಲಿ ।
ಕಲ್ಯಾಣಪಟ್ಟಣದಿ ಕುರುಹು ಕಾಣಲಿಕೆ ॥ ೬ ॥

ಎಲ್ಲ ಭಕ್ತರ ಭಕ್ತಿಯಲ್ಲಿ ಇರುತಿಹರು ।
ಮತ್ತೋರ್ವರಿಡೆಗವರ ಒದಗಿ ಬರಗೊಡರು ॥ ೭ ॥

ಕಂತು ಹರ ಗಣ ಬರವನಿಂತು ಹಾರೈಸಿ ।
ಮುಂತಿರಲು ಬಸವಯ್ಯ ಯೋಚನೆಯತಾಳಿ ॥ ೮ ॥

ಗಂಗ ಧರನಂ ಕುರಿತು ಕಡು ತಪಂ ಗೈಯೆ ।
ಸಂಗಮೇಶ್ವರ ಬಂದು ಶರಣ ಬಸವಂಗೆ ॥ ೯ ॥

ಮಂಗಳಕರನಾಗಿ ಒರೆದು ಮುದ್ದಿಸುತ ।
ಕೇಳಿನ್ನ ವರ ಪ್ರೀಯ ಕೇಳು ಬಸವಯ್ಯ ॥ ೧೦ ॥

ಭಾಳಾಕ್ಷ ಗಣರಿಚ್ಛೆ ಬಯಕೆ ಪೇಳುವೆನು ।
ಕಾಶ್ಮೀರದೇಶದಲಿ ಕಾಂತಿವೆತ್ತಿರುವ ॥ ೧೧ ॥

ಲೇಸೆನಿಪ ಮಾಂಡವ್ಯ ತಳಿತ ಪುರಮಿಹುದು ।
ಅಮರೇಂದ್ರ ನಗರಿಯನು ಅತಿಗಳೆವ ತೆರದಿ ॥ ೧೨ ॥

ಸುಮನಸದಿ ಇರುತಿಹುದು ಸೊಗಸನೇ ಕೇಳು ।
ಘಂಟಕರ್ಣನ ಸೂತ್ರ ಗಮ್ಯ ಆವರಿಸಿ ॥ ೧೩ ॥

ಜಂಟಿಯಿಂ ಬಂಧಿಪನು ಜಗದಿ ಆ ಶರಣ ।
ಮಹದೇವರಾಯನೆಂಬ ಮಹಿಮ ನಾಮದಲಿ ॥ ೧೪ ॥

ಸಹಜ ಸತ್ಕ್ರಿಯ ಸದಾಚಾರ ನಿಷ್ಠೆಯಲಿ ।
ಪಾರವರ್‍ಯನು ಪರಮ ವೀರವ್ರತಶೀಲ ॥ ೧೫ ॥

ಶಿವ ಭಕ್ತಿ ಶಿವಧ್ಯಾನ ಶಿವನೊಳೊಡವೆರಸಿ ।
ಭುವಿಯೊಳಿರುತಿಹನಯ್ಯ ಭೂಪತ್ವವಾಂತು ॥ ೧೬ ॥

ಸತಿ ಮಹಾದೇವಿ ಎಂಬ ಸರಸಿಜ ಮುಖಿಯು ।
ಪತಿಭಕ್ತಿ ವ್ರತ ನಿಷ್ಠೆ ಪಾರ್ವತಿಯೊಲಿಹಳು ॥ ೧೭ ॥

ರತಿಗಿಂತ ಲಾವಣ್ಯ ರಮ್ಯ ಪಡೆದಿಹಳು ।
ಸುತನ ಪಡೆದಿಹಳಾಕೆ ಸ್ಮರನಿಗಿಮ್ಮಡಿಯ ॥ ೧೮ ॥

ವರ ಲಿಂಗಾರತಿಯೆಂದು ಮಗನ ಅಭಿಧಾನ |
ಪರಮ ವೈಭವದಿಂದ ಪೃಥ್ವಿ ಪಾಲಿಪರು || ೧೯ ||

ವಚನ || ಇಂತಿ ಮಹಾದೇವರಾಯಂ ವೀರ ವ್ರತವನ್ನಾಚರಿಸುತ್ತ ಆರುಸಾವಿರ ವೀರ ಮಾಹೇಶ್ವರರ ತನ್ನ ಭಕ್ತಿಯಲ್ಲಿ ಅವರವರ ಮನದಿಚ್ಛೆಯನ್ನೀವುತ್ತ ತೃಪ್ತಿಗೈಸಿ ಸುಖಮಿಹನು. ಆ ಗಣಂಗಳಂ ಬಹು ಬಂಧುರಮಾಗಿ ಅತ್ತಿತ್ತ ಪೋಗಲೀಸದೆ, ನಾಲ್ಕು ಬಾಗಿಲುಗಳಲ್ಲಿ ಜಾಗ್ರಗಾವಲಿನಿಂದ ಅಲ್ಲಿಗೆ ಬಹ ಮನುಷ್ಯರಂ ತೂಕಂಗೈದು ಕೋಟೆಯೊಳಯಿಂಕೆ ಶೋಧನೆಯಿಂದ ಬಿಡುತ್ತಿಹರು. ಕೇಳ್ವೈ ಬಸವಕುಮಾರ ನಿನಗೊಂದು ಪಾಯಮಂ ಪೇಳ್ವೆನೆಂದು ಸಂಗಮೇಶ್ವರ ನಿಂತೆಂದಂ.

**ಜಂಪೆ.**

ಹಿರಿಯ ಹಸುಬೆಯ ಶೆಟ್ಟಿ | ತೆರದಂತೆ ಗಂದಿಗೆಯ |
ವರ ದಿನಸು ಮಾರುತಲಿ | ಮಾಂಡವ್ಯ ಪುರಿಗೆ || ೧ ||
ಪೋಗಿ ಜಾಣ್ಮೆಯೊಳ್ನೀನು | ಸಾಗಿಸಿಯೆ ಹಸುಬೆಯೊಳು |
ನಾಗಭೂಷಣ ಗಣರ | ನೀ ತಾರೊ ಬಸವ || ೨ ||
ಎಂದು ಸಂಗಮು ಪೇಳಿ | ಅದೃಶ್ಯ ತಾನಾದ |
ನಂದಿ ಬಸವನು ತಾನು | ಚಂದದಿಂದಾಗ || ೩ ||
ಗುರು ನಿರೂಪಣೆಯನ್ನು | ಭರದಿಂದ ಕೈಗೊಂಡು |
ಶರಣ ಶ್ರೀ ಬಸವಯ್ಯ | ಸನ್ನಾಹಗೈದ || ೪ ||
ಮುನ್ನಾದ ಶಾಸ್ತ್ರ ವಿಧಿ | ಮೂಲದಿಂ ತಟ್ಟಗಳ |
ಬಿನ್ನಣದಿ ರವಿ ಶಶಿಯ | ಎರಡು ತಟ್ಟೆಗಳ || ೫ ||
ಅಷ್ಟದಿಕ್ಪಾಲಕರ | ಅಷ್ಟದಾರಗಳ್ಮಾಡಿ |
ದುಷ್ಟ ಮಲ್ಲಾಸುರನ ಬೆನ್ನೆಲು | ದಂಡಿಗೆಯ ಮಾಡಿ || ೬ ||
ಬಿರುದವನ ಕುಕ್ಷಿ ಹಸು | ಬೆಯ ಮಾಡಿ ಕೋರಿಯನು |
ವರ ಶ್ರೇಷ್ಠ ಗದ್ದುಗೆಯ | ಮಾಡಿ ಮುದದಿಂದ || ೭ ||
ಮೆಣಸು ಯಾಲಕ್ಕಿ ಲ | ವಂಗ ಶುಂಠಿಯು ಅಡಕೆ |
ದಿನಸುಗಳ ಹಸುಬೆಯೊಳು | ಇಟ್ಟಣಿಸಿ ತುಂಬಿ || ೮ ||
ಸಂಗಮೇಶನ ಪೂಜೆ | ಸೊಗಸಿಂದ ತಾ ಮಾಡಿ |
ಮಂಗಳೋತ್ಸವದಲ್ಲಿ | ಗಣಪರ್ವಮಾಡಿ || ೯ ||

ವಚನ || ಇಂತೆಂದು ಸಂಗಮೇಶ್ವರನ ಅಪ್ಪಣೆಯಿಂದ ಹಸುಬೆಯಲ್ಲಿ ಗಂದಿಗೆ ದ್ರವ್ಯ ತ್ರಾಸು ಕರಿಯಕಂಬಳಿ ಗದ್ದುಗೆಯಂ ಹಾಸಿ ಪೂಜಿಸಿ ಆರಾಧನೆಯಂ ಗೈದು, ಬಳಿಕ ನೀಲಾಂಬೆಯೊಳು ಬಸವರಾಜಂ ಪೋಪ ಕಾರ್ಯವಂ ಸೂಚಿಸಿದನದೆಂತೆಂನೆ.

**ಸಾಂಗತ್ಯ.**

ಶುಕ ನುಡಿ ಸುಗುಣೆ ಸುಂದರಿ ಸೊಬಗಿನ ಮೇ | ಲ್ಪಿಕ ಗಾನೆ ಪದ್ಮದಳಾಕ್ಷಿ ||
ಮುಕುರ ಪ್ರಭೆಯ ಮೋಹನ ರನ್ನೆ ಕಲ್ಯಾಣಿ | ಯುಕುತಿಯ ಕಾರ್ಯವಂ ಕೇಳು||

ಆರು ಸಾವಿರ ಗಣಂಗಳಿಗೆ ಚಿಂತಿಸುತಿರ್ದ | ಮಾರಾರಿ ಸಂಗಮನೆನಗೆ ||
ಓರಂತೆಯಿರುವ ಠಾಣವನು ಪೇಳಿರುವನು | ನಾರಿಮಣಿಯೆ ಪೋಗಿ ತರುವೆ ||

ಜ್ಞಾನ ಸಂಧಾನದಿ ಶಿವನನ್ನು ಧ್ಯಾನಿಸಿ | ಆನಂದ ಷಡು ರುಚಿ ಭಕ್ಷ್ಯ ||
ತಾನಾಗುವಂತೆ ಶಿವ ಗಣರಿಂಗೆ ಬುತ್ತಿಯ | ಮಾನಿನಿ ಮಣಿಯೆ ಬಂಧಿಸು ನೀ ||

ಎಂದ ನಲ್ಲನ ಮಾತ ಕೇಳಿ ನೀಲಾಂಬೆಯು | ಇಂದು ವದನೆ ಪಾರ್ವತಿಯ ||
ಚಂದದಿಂ ಧ್ಯಾನಿಸಿ ಶಾಲ್ಯನ್ನ ಕೆನೆಮೊಸರು | ತಂದು ಯಾಲಕ್ಕಿ ಪರಿಮಳದಿ ||

ಉಪ್ಪಿನಕಾಯಿ ನಾನಾವಿಧ ಬಂಧಿಸಿ | ಸರ್ಪವೇಣಿಯು ಇಟ್ಟು ಮುದದಿ ||
ಮುಪ್ಪುರಹರನ ಗಣರಿಗೆಲ್ಲ ಮನದಿಚ್ಛೆ | ತಪ್ಪದಾಗಲೀ ಬುತ್ತಿಯಲ್ಲಿ || ೫ ||

ಎಂದು ಹರಸಿ ಕರ್ಪೂರ ವೀಳ್ಯವನಾಗ | ಇಂದು ಮುಖಿ ನೀಲಾಂಬೆ ಬೇಗ ||
ನಂದೀಶ ಬಸವನ ಹಸುಬೆಯೊಳಗೆ ಇಟ್ಟು | ವಂದಿಸಿದಳು ಭಕ್ತಿಯಲ್ಲಿ || ೬ ||

ಗುರು ಸಂಗಮೇಶನ ಧ್ಯಾನದಿಂ ಹಸುಬೆಯ | ಭರದಿ ಬಲದ ಬಾಹುವಲ್ಲಿ ||
ತ್ವರಿತದಿಂ ತಾ ಪೊತ್ತು ಸಂದಣಿ ಜೋಡೆಂದು | ತೆರಳಿದನು ಬಸವ ಲೀಲೆಯಲಿ ||
ಹರುಕಂಗಿ ಚಿಂದಿಯ ಪಾಗು ಶಿರದಿ ಸುತ್ತಿ | ಹರುಕು ಸಾವಿರ ತೂತ ಹಸುಬೆ ||
ಭರದಿ ವಿಭೂತಿಯ ಗಂಟಿನೊಳ್ಪುಷ್ಪವ | ವರ ಕದಳಿಯ ಪರ್ಣ ತುಂಬಿ || ೮ ||

ವಚನ || ಇಂತೀ ಪರಿಯಲ್ಲಿ ಲೀಲಾ ವಿನೋದದಿಂದ ಬಸವರಾಜಂ ಹಿರಿಯ ಹಸುಬೆಯಂ ರಚಿಸಿ, ಗಂದಿಗೆ ದ್ರವ್ಯಂಗಳಂ ಹೆಗಲೊಳ್ಪೊತ್ತು ದೇಶಂಗಳಂ ಚರಿಸುತ್ತ ಕಂಡ ಕಂಡವರಂ ಕೇಳಿಕೊಳ್ಳುತ್ತ ಮಾಂಡವ್ಯಪುರಿಗೆ ಬರಲು ಆ ಪುರವೆಂತಿರ್ದುದು.

**ಏಕತಾಳ.**

ಕೋಟೆ ಕೊತ್ತಳ ಅಗಳು | ತೋಟ ಕೆರೆ ವನ ಭಾವಿ |
ಮಾಟಾದ ಸೌಧವು | ಮೆರೆದವಾ ಪುರದಿ || ೧ ||

ಸೋಮಸೂರ್ಯರ ವೀದಿ | ರುಕ್ಮ ರತ್ನದಂಗಡಿ |
ಸಾಮಜ ಹಯ ರಥ | ಹಮ್ಮೀರ ಭಟರು || ೨ ||

ಕಾವಲು ಕಟ್ಟಳೆಯು | ಕ್ರಮದ ಬಂಧುರಗಳು |
ವಿದ ಬಲ್ಪಿತದಾಜ್ಞೆ | ಕರಮಾಗಿ ಇಹುದು || ೩ ||

ನರರು ಆರಾದರೂ | ಪುರವ ಹೊಗುವಡೆ ತೂಕ |
ವರ ಭಯಂಕರಮಾಗಿ | ಪುರವ ಕಾದಿಹರು || ೪ ||

ಹರಿಯಜ ಸುರರಾಗೆ । ಭರದಿ ಮುನಿಗಳಾಗೆ ।
ದೊರೆಯಾಜ್ಞೆ ಇಲ್ಲದೆ । ಪುರವ ಪೊಗಲಿಸರು ॥ ೫ ॥

ಇಂತಪ್ಪ ಪುರವನಾ । ಳುವ ಮಹದೇವರಾಯ ।
ಸಂತತ ಸಕಲ ವೈ । ಭವದಿ ಒಪ್ಪಿಹನು ॥ ೬ ॥

ಶಿವಭಕ್ತಿ ಶಿವಪೂಜೆ । ಶಿವಧ್ಯಾನ ಮೂರ್ವೇಳೆ ।
ಶಿವ ಜಂಗಮದ ಪಾದ । ಸೇವೆಯೊಳಿಹನು ॥ ೭ ॥

ಇಚ್ಛೆ ಪದಾರ್ಥಗಳ । ಇತ್ತು ಸತತ ಅವರ್ಗೆ ।
ಮೆಚ್ಚುವಂತೆಸದಿಹ । ಮಹದೇವರಾಯ ॥ ೮ ॥

ವಚನ ॥ ಈ ಪ್ರಕಾರದಲ್ಲಿ ಮಹದೇವರಾಯಂ ಆರು ಸಾವಿರ ಗಣಂಗಳಂ ಸೇವೆಗೈಯ್ಯುತ ರಾಜ್ಯವಂ ಪರಿಪಾಲಿಸುತ್ತ ಗಣಂಗಳನ್ನು ಅತ್ತಿತ್ತ ಪೋಗಲೀಸದೆ, ಅತಿ ಜಾಗ್ರತೆಯಿಂದ ಇಟ್ಟುಕೊಂಡು ಅವರಿಗೆ ಜಳಕ ಶಿವ ಪೂಜೆಯನುಷ್ಠಾನ ತತ್ವ ಪಠನ ಮಡಿವರ್ಗಂಗಳಿಗೆ ಅತಿ ನೂತನದ ಕಲ್ಯಾಣಿಯಂ ಕಟ್ಟಿಸಿ, ನಾನಾವಿಧ ಪತ್ರೆ ಪುಷ್ಪಂಗಳ ತೋಟವಂ ಮಾಡಿಸಿ, ಅತಿ ಸಂಭ್ರಮದಿಂದ ಗಣಂಗಳಂ ಸುಖದಿಂಟ್ಟುಕೊಂಡಿರುತ್ತಿರಲು, ಇತ್ತಲಾ ಬಸವಶೆಟ್ಟಿ ಆ ಪುರದ ಬಾಗಿಲಿಗೆ ಬರಲು ಆ ಬಾಗಿಲವರು ತಡೆದು ಏನೆನ್ನುತಿರ್ದಪರು

**ಕೊಂಚೆ ಜಂಪೆ.**

ಅತ್ತಲೇ ನಿಲ್ಲು ಬಾಗಿಲನು – ಹೊಗಬೇಡ । ಮತ್ತೆ ನೀ ಪೇಳು ಎಲ್ಲವನು ।
ಯಾವ ದೇಶವು ಇರುವ ಊರು – ಠಾವ । ಪೇಳಯ್ಯ ಎಲ್ಲ ವಿವರವನು ॥ ೧ ॥

ಹೊಸ ಮನುಜರನು ಒಳಗೆ ಈಗ – ಬಿಡಲು । ವಸುಧೀಶನಪ್ಪಣೆಯ ಠಾರೆನುತ।

ಝುಂಕಿಸುತ ನುಡಿಯೆ ಕಾವಲಿಗರು – ಅದಕೆ । ಬಿಂಕದಿಂ ಶೆಟ್ಟಿ ಇಂತೆಂದ॥ ೨ ॥
ವ್ಯಾಪಾರ ವರ್ತಕರಿಂ ನಗರ – ಲೇಸು । ಕಾಪು ಇದು ತರವಲ್ಲ ಪುರಕೆ ।

ಎಲ್ಲಿ ದೊರೆಯಲು ಅಲ್ಲಿ ಸ್ಥಲವು – ನಮಗೆ । ಸಲ್ಲ ನಿಲ್ಲಲು ಬಲ್ಲೆ ತಿಳಿರಿ ॥ ೩ ॥
ಪರರಾಯರಾಗೆ ಪತ್ರಗಳ – ನೋಡಿ । ಒಗೆದು ತಡೆವುದು ನಿಮ್ಮ ಧರ್ಮ॥

ವಚನ ॥ ಇಂತೆಂದು ಬಾಗಿಲವರೊಳು ಮಿತದಿಂ ಜಾಣ್ಮೆಯಲ್ಲಿ ಮೃದುತರ ವಾಕ್ಯದಿಂ ಮನವಂ ಮರುಗಿಸಿ, ಹಸುಬೆಯ ಶೋಧನೆಯಂ ಕೊಟ್ಟು ಐದು ಪಂಚೇರು ತೂಕವಂ ಒಪ್ಪಿಸಿ, ಒಳಯಿಂಕೆ ಬಿಡಿಸಿಕೊಂಡು ಬಂದು ಕೇರಿ ಕೇರಿಯೊಳು ಗಂದಿಗೆ ಮಸಾಲೆ ದ್ರವ್ಯಗಳಂ ಮಾರುತಿರ್ದಪನದೆಂತೆನೆ.

**ರಾಗ – ಶಂಕರಾಭರಣ – ಆದಿತಾಳ.**

ಜನನಿಯಕ್ಕ ಭ್ರಾತೃಗಳೆ । ಮೆಣಸು ಜೀರಿಗೆ ಕೊಳ್ಳಿ ।
ಬನಶುಂಠಿ ಯಾಲಕ್ಕಿ । ಘನ ಗಂಧ ದಿನಸ ॥
ಅನಲ ನಯನ ಕೊಟ್ಟ । ಜನ ಗಣರೊಲಿವುದಕೆ ।
ಮನ ಮರುಕದಿ ನೀವು । ಅನುವಿನಿಂಬೆಲೆಮಾಡಿ ॥ ಪ ॥

ಸರಿಗೆ ಹಿತ್ತಾಳೆ ಲೋಹ । ಮುರಿದ ಕಂಚು ಚೆಂಬನ್ನು ।
ಇರದೆ ಮಿಗೆ ಕೈಕೊಳ್ವೆ । ಅರಸಿ ತನ್ನಿರಿ ಅಮ್ಮ ।
ಅರಸಿ ತಂದವರಿಗೆ । ಚಿರ ಭೋಗ ವಸ್ತುವ ।
ಭರದೀವೆ ಕೈಕೊಳ್ಳಿ । ವರವರ್ಣಿನಿಯಕ್ಕಗಳಿರಾ ॥ ೧ ॥

ಕೋರಿಶೆಟ್ಟಿಯು ಸಾರೆ । ನಾರಿಯರಾ ದನಿಕೇಳಿ ।
ಚೂರು ಹಿತ್ತಾಳೆ ಲೋಹ । ಆರಿಸಿ ತರಲದನು ॥
ಸೇರು ತ್ರಾಸನು ಪಿಡಿದು । ಭಾರಗೈದದಕೆಲ್ಲ ।
ಮಾರಿ ಕೊಡುತ ದಿನಸ । ಸಾರಿ ವ್ಯಾಪಾರ ಗೈದನು ॥ ೨ ॥

ಸಾವಧಾನದ ಮನಸು । ಯಾವ ದೇಶವೊ ಶೆಟ್ಟಿ ।
ಭಾವವರಿಯೆವು ನಾವು । ಈವುತಿಲ್ಲಿರು ಎನಲು ॥
ಜಾವ ಮಾರಿತು ತಾಯಿ । ಸಾವಧಾನವು ಇಲ್ಲ ।
ಸಾವುವಂತಿಪೆ ದಾಹ । ದೇವ ಗಣ ವ್ರತವೆನಗೆ ॥ ೩ ॥

ಜಂಗಮರವರಿಷ್ಟ । ಲಿಂಗವೆನಗೆ ತೋರಿ
ಸಂಗ ಸಮರಸಗೂಡಿ । ಹಿಂಗಿಪೆನಸು ತೃಷೆಯ ॥
ಭಂಗ ಪಡುವ ಭವದ । ಹಿಂಗಿ ಬೇರನೆ ಕೇಳ್ವ ।
ಮಂಗಳಕರ ಮೂರ್ತಿ । ಜಂಗಮರನು ತೋರಿರಿ ॥ ೪ ॥

ಗಣರೀ ಪುರದೊಳುಂಟೆ । ಗಣನೆಯಿಂ ಪೇಳ್ನೀವು ।
ಅಣುಮಾತೆಂದರಿಯದಲೆ । ಗುಣದಿಂ ನೀವ್‌ತೋರಿರಕ್ಕ ॥
ಗುಣ ಗ್ರಾಹಿ ಮಣಿಯರು । ಗುಣ ಭೂಷಣನು ಈತ ।
ಅಣಿಕುಲ ಪತಿ ನಮ್ಮ । ಸೆಣಸೇನ ಮಾಡುವನೊ ॥ ೫ ॥

ಇಂತು ಯೋಚನೆಗೈವ । ರಂತರವನೆ ನೋಡಿ ।
ನಿಂತು ಜಾಣ್ಮೆಯೊಳ್ಕೇಳೆ । ಅಂತರವ ಪೇಳಿದರು ॥
ಎಂತುಪೇಳಲಸಾಧ್ಯ । ಅಂತರದ ಒಳ ಕೋಟೆ ।
ಎಂತೆಣಿಸಲು ಅಲ್ಪ । ದಂತದರಮನೆಯು ॥ ೬ ॥

ಹರಗಣರಿಗೆ ಬೇರೆ । ಅರಮನೆ ಇಹುದಲ್ಲಿ ।
ಕರ ಚೆಲ್ವಸ್ಫಟಿಕದ । ವರ ಕೊಳವಿಹುದು ॥
ಹರ ಗಣರನುಷ್ಠಾನ । ವರ ಜಪ ತಪ ನೇಮ ।
ಅರಸು ನಿಷ್ಠೆಯಿಂ ನಡೆಪ । ವರ ಮಹದೇವರಾಯ ॥ ೭ ॥

ಲಿಂಗ ಸಕೀಲರಿಯದರ । ಅಂಗಳವ ಪೊಗಲಿಸರು ।
ಪಿಂಗದೊಳಕೋಟಿಯ । ಅಂಗೈಸಿ ಕಾದಿಹರು ॥
ಗಂಗೆಪತಿಯ ಶರಣ । ಜಂಗಮರಲ್ಲಿಹರು ।
ಭಂಗ ಬೇಡವು ಶೆಟ್ಟಿ । ಜಂಗೆಯಿಡು ಪೋಗೆಂದರವರು ॥ ೮ ॥

ವಚನ ॥ ಇಂತೆಂದ ಪುರ ಜನರ ಮಾತಂ ಕೇಳಿ ಬಸವಯ್ಯ ಒಳಸುತ್ತಿನ ಕೋಟೆ ಕಾವಲಿಗರಿಗೆ ಲಿಂಗಸಕೀಲಂ ಪೇಳಿ ಬಿಡಿಸಿಕೊಂಡು, ಆ ಕಲ್ಯಾಣ ಸಮೀಪಕಂ ಬಂದು ಗಣಂಗಳಂ ಕಂಡನದೆಂತೆನೆ.

**ಜಂಪೆ.**

ಜಳಕ ಶಿವಪೂಜೆಗೈವ । ಕಳೆಧರನ ಜಂಗಮರ ।
ಬಳಿಯಲೋರ್ವಯ್ಯನಿಗೆ । ಭಕ್ತಿಯಿಂ ನಮಿಸಿ ॥ ೧ ॥

ನಿಂದು ಪೇಳ್ದನು ಬಸವ । ನಂದು ದೈನ್ಯತೆವೆರಸಿ ।
ತಂದೆ ನೀವೆನಗಿತ್ತ । ದೊಂದು ವ್ರತವುಂಟು ॥ ೨ ॥

ವ್ರತವ ನಡಸಿಯೆ ಕೊಟ್ಟು । ತೀರ್ಥ ಪ್ರಸಾದವನು ।
ಇತ್ತು ಕರುಣದಿ ಎನ್ನ । ಕ್ಷುಧೆಯ ತೃಪ್ತಿಪುದು ॥ ೩ ॥

ಶರಣು ಶ್ರೀ ಗುರುವರನೆ । ಶರಣು ಭಕ್ತೋದ್ಧಾರ ।
ಶರಣು ಶ್ರೀ ಶಿವರೂಪ । ಶರಣು ಶರಣಯ್ಯ ॥ ೪ ॥

ಒಪ್ಪೆನ್ನ ಬಿನ್ನಪವ । ಸರ್ಪಭೂಷಣ ರೂಪ ।
ಇಪ್ಪೆ ಬಡತನದೊಳಗೆ । ಎಣಿಸ ಬೇಡೆನ್ನ ॥ ೫ ॥

ಪ್ರಾಣವಾಗಿಯೆ ಗುರುವಿ । ನಾಣತಿಯೊಳ್ನಡದಪೆನು ।
ಕ್ಷೀಣ ಮಲಿನದ ವಸ್ತ್ರ । ನೀ ನೋಡ ಬೇಡ ॥ ೬ ॥

ಏನೆಲವೊ ಬಡಶೆಟ್ಟಿ । ಏನ ನೀಡುವೆ ನಮಗೆ ।
ಪ್ರಾಣ ಮನದಿಚ್ಛೆಯನು । ನೀ ನೀಡಲಾರ್ಪೆಯ ॥ ೭ ॥

ನಿನ್ನ ಹಸುಬೆಯು ನೂರು । ಛಿನ್ನ ಭಿನ್ನದ ದ್ವಾರ ।
ನಿನ್ನಂಗಿ ಪಾಗುಗಳು । ಚುನ್ನ ಚಿಂದಿಗಳು ॥ ೮ ॥

ಇಂತೆಂದು ಜರಿಯುತಿರ್ಪೆ। ಕಂತುಹರ ಬಸವೇಶ ।
ಮುಂತೆಸೇಳ್ದನು ಮಣಿದು । ಮನನೋಯದಂತೆ ॥ ೯ ॥

ನಿನ್ನ ಕರುಣದ [1] ಭಕ್ತಿ [1] । ಎನ್ನಲ್ಲಿ ರೇಣುವಿರೆ ।
ನಿನ್ನ ಇಚ್ಛೆಯ ತೃಪ್ತಿ । ಚೆನ್ನಹುದು ಗುರುವೆ ॥ ೧೦ ॥

ಭಕ್ತವತ್ಸಲನೆಂಬ । ಬಿರುದ ನೀ ತಾಳ್ದುದಕೆ ।
ಪೃಥ್ವಿಪನ ರುಚಿ ಭಕ್ತಿ । ಹಿಂಗದೊಪ್ಪಿಹಿರಿ ॥ ೧೧ ॥

ಬಡವರಾ ಭಕ್ತಿಯನು । ಜೀಡವೆಂಬುವ ಶಾಸ್ತ್ರ ।
ಒಡೆಯ ನೀ ತಿಳುಪೆನ್ನ । ಕಡುಕೋಪ ಬೇಡ ॥ ೧೨ ॥

ನೀಸಿತ್ತ ವ್ರತಗಳನು । ನೀ ಬೇಡವೆಂತೆನಲು ।
ಹಾನಿ ವಾಕ್ಯಕೆ ಎನ್ನ । ದೇನು ಗುರುರಾಯ ॥ ೧೩ ॥

ವ್ಯರ್ಥ ಹಾಸ್ಯದಿ ಎನ್ನ । ಮಿಥ್ಯ ಮಾಡಲು ಬೇಡಿ ।
ಸತ್ಯ ಮೂರುತಿ ಒಪ್ಪಿ । ವ್ರತವ ನಡೆಸೆನಗೆ ॥ ೧೪ ॥

ವಚನ ॥ ಇಂತೆಂದು ತರ್ಕವಾಡಲು ಮತ್ತಾ ಸ್ತೋಮಗೂಡಿ ಗಣಂಗಳು ಈತ ಭಕ್ತ ಈತ ದೇವನೆಂಬುಭಯವಳಿದು, ದೇವನೇಭಕ್ತ ಭಕ್ತನೇದೇವನೆಂಬುದಂ ನಂಬಿ, ಈತ ಜ್ಞಾನಭಕ್ತನೆಂದು ಒಪ್ಪಿ ಬಳಿಕ ಎಲೈ ಭಕ್ತನೆ! ಇಷ್ಟು ಗಣಂಗಳಂ ಬಿಟ್ಟು ನಾನೋರ್ವನೇ ಎಂತೊಪ್ಪಲಿ? ಎನ್ನಲು, ಅಲ್ಲಿರ್ದ ಆರುಸಾವಿರ ಗಣಂಗಳಿಗೂ ಬಿನ್ನಹವಂ ಗೈಯ್ಯಲು, ಎಲ್ಲಾ ಗಣಸ್ತೋಮ ಆಶ್ಚರ್ಯಂಬಟ್ಟು ಈತನ ಹಸುಬೆಯೊಳು ಏನಿರುವುದೋ ಎಂದು ನೋಡಲು, ಒಂದೇ ಬುತ್ತಿಯಿರಲು ಇವನು ನಮಗೆಂತು ನೀಡುವನೊ ನೋಡಬೇಕೆಂದು ಇರುತ್ತಿರಲು ಮತ್ತು ಮೆಂತೆನೆ.

**ಏಕತಾಳ.**

ತ್ವರಿತ ತನ್ನಯ ನೇಮ । ಭರದಿ ಜಳಕಗೈದು ।
ಹರಪೂಜೆಗೈದನು । ಅಂದು ಬಸವೇಶ ॥ ೧ ॥

ಓರ್ವ ಮೂರ್ತಿಯೊಳ್ತನ್ನ । ವ್ರತವ ತೀರಿಸಿಕೊಂಡು ।
ಆರುಸಾವಿರ ಗಣಕೆ । ಚರಣ ಪೂಜಿಸುತ ॥ ೨ ॥

ಎಲ್ಲರ್ಗೆ ನಾನಾವಿಧ । ಹೆಚ್ಚು ಪುಷ್ಪಗಳನ್ನು ।
ಚೆಲ್ವ ಸಾಂಬ್ರಾಣಿ ಕ । ರ್ಪೂರದಾರತಿಬೆಳಗೆ ॥ ೩ ॥

ನೋಡಿದರ್ಗಣಂಗಳು । ಮಾಡಿದಚೋರ್ದ್ಯವ ।
ರೂಢಿಯೊಳಾಶ್ಚರ್ಯ । ಈಡಿಲ್ಲ ಇವಗೆ ॥ ೪ ॥

---

1-1 ಮಹಿಮೆ (ಇ, ದ.)

ಇಷ್ಟು ಗಣರಿಗೆ ಪುಷ್ಪ । ಶೋಭನದಾರತಿಯ ।
ಇಟ್ಟರ್ದ ಬಗೆಯೆಂತು । ಹಸುಬೆಯೊಳ್ ಶಿವನೆ ॥ ೫ ॥

ಬಳಿಕ ಮೇಲ್ಕದಳಿಯ । ಪರ್ಣವಂ ಹಾಸಿದ ।
ಛಲದಂಕ ಬಸವಯ್ಯ । ಶಿವಗಣರ್ಗೆಲ್ಲ ॥ ೬ ॥

ಬುತ್ತಿಯಂ ಬಿಚ್ಚಿ ಬೇಗ । ಬಸವಯ್ಯನೆಲ್ಲರ್ಗೆ ।
ಮತ್ತೆ ಜಂಬೀರಗಾತ್ರ । ನೀಡಿ ಎಲ್ಲರಿಗೆ ॥ ೭ ॥
ಬೇಡಿ ಸದ್ಭಕ್ತಿಯಿಂ । ಗಾಢ ಸಂಗಮಧ್ಯಾನ ।
ಮಾಡಿ ಇವರೆಲ್ಲರಿಚ್ಛೆ । ಮತ್ತಾಗಲೆಂದ ॥ ೮ ॥

ಶರಣಯ್ಯ ಲಿಂಗದ । ರ್ಪಣಕೆಂದು ಸೈಗೆಡೆದ ।
ಕರುಣಾಂಬುಧಿ ಬಸವೇಶ । ಕರ್ಮವಿನಾಶ ॥ ೯ ॥

ವಚನ ॥ ಇಂತು ಬಸವರಾಜ ಶರಣಾರ್ಥಿಯೆಂದು ದಂಡಪ್ರಣಾಮವಂಗೆಯ್ಯಲು, ಆ ಶಿವಗಣಂಗಳು ಲಿಂಗಾರ್ಪಿತಂಗೈದು ಸಲಿಸುತ್ತಿರಲು, ಆ ಮಹಾನೀಲಾಂಬೆಯ ಭಕ್ತಿಯಿಂದಲೂ, ಬಸವರಾಜನ ಮನೋಭಾವ ಪರುಷದಿಂದಲೂ, ರಸ ರಸಾಯನ ಪಂಚಭಕ್ಷ್ಯ ಪರಮಾನ್ನ ಷೋಡಶ ಭಕ್ಷ್ಯಗಳು, ಹದಿನೆಂಟುಬಗೆ ಪಲ್ಯ ಪಳಿದ್ಯಗಳೂ ಸಲಿಸಿದಂತೆ ರುಚಿಯಾಗಲು, ನಾಸಿಕದ ಮೇಲೆ ತರ್ಜನೀ ಬೆರಳನಿಟ್ಟು ಆಶ್ಚರ್ಯವಂಪಟ್ಟು ಗಣಂಗಳು ಸಲಿಸಿ ತೃಪ್ತರಾಗಿ ಭಕ್ತನಂ ಕೊಂಡಾಡಿದರದೆಂತೆನೆ.

**ಜಂಪೆ.**

ಮಾಡಿದರು ಜೋದ್ಯವನು । ರೂಢಿಗೀಶನ ಗಣರು ।
ಗಾಢತರದತಿ ಭಕ್ತಿ । ಘನತೆಯೇನೆಂಬೆ ॥ ೧ ॥
ಸಾಕ್ಷಾತು ಪರಶಿವನು । ಶಂಭುಲೋಕದಿಂದೈದಿ ।
ಮೋಕ್ಷಕುವರನರೂಪ । ಮಾಡಿ ನಮ್ಮೆಡೆಗೆ ॥ ೨ ॥
ಕಳುಹಿದುದು ಸಿದ್ಧವಿದು । ಚೆಲುವಾಯಿತೀ ಭಕ್ತಿ ।
ಮಲಹರನೆ ತಾ ಬಲ್ಲ । ಈ ಮಹಿಮನಿರವ ॥ ೩ ॥
ಉರೆ ಬಡವನತಿ ಭಕ್ತಿ । ಪರಮ ಸಂತಸವಾಯ್ತು ।
ಶಿರದಡವಿ ಗಣರೆಲ್ಲ । ಹರಸಿ ಬಸವನನು ॥ ೪ ॥
ಯಾವ ದೇಶವು ಭಕ್ತ । ಯಾವ ಭಕ್ತನ ಮಗನು ।
ಯಾವ ನಾಮವು ನಿನಗೆ ।ಕೋವಿದನೆ ಪೇಳು ॥ ೫ ॥

ನಿನ್ನ ಭಕ್ತಿಯು ಚೆಲ್ವ । ಪನ್ನಗ ಧರಗಾಯ್ತು ।
ಎನ್ನುತಲಿ ಗಣರೆಲ್ಲ । ನನ್ನಿಯಿಂ ಪೊಗಳೆ ॥ ೬ ॥

ಕಣ್ಗೆ ತೆಂಗಿನಕಾಯಿ । ಕಾಣಿಸಿದೆ ಬುತ್ತಿಯನು ।
ಅಂಗಜ ಹರಗಣರು । ಆರುಸಾವಿರಕೆ ॥ ೭ ॥

ನೀಡಿದೆಯ್ಯೆ ಮನದಿಚ್ಛೆ । ಆಡಲೇನಾಶ್ಚರ್ಯ ।
ಮಾಡಿದೆಯ್ಯೆ ಮಹಿಮಾಬ್ಧಿ । ಮತ್ಪ್ರಾಣಭಕ್ತ ॥ ೮ ॥

ಭಕ್ತ ಚಿಂತಾಮಣಿಯೆ । ಸದ್ಭಕ್ತ ಸಂಪನ್ನ ।
ನಿತ್ಯ ಸತ್ಯ ವ್ರತನು । ನೀನಹುದು ಭಕ್ತ ॥ ೯ ॥

ನಮ್ಮ ಭಕ್ತನು ಅರಸು । ಈ ಮಹಿಯ ಪಾಲಿಪನು ।
ನಮ್ಮ ಸಂತೈಸಿಹುದು । ಗಮ್ಯವೇ ನಮಗೆ ॥ ೧೦ ॥

**ವಚನ** ॥ ಇಂತು ಮೆಚ್ಚಿ ವಿಸ್ತರಿಸಿ ಕೇಳಿದ ಗಣಂಗಳಿಗೆ ಭಕ್ತಚಿಂತಾಮಣಿಯಾದ ಬಸವರಾಜಂ ಅತಿ ಕಿಂಕರತ್ವದಿಂ, ಸ್ವಾಮಿಗಳಿರಾ ! ನಿಮ್ಮ ಪಾದದ ಕಿಂಕರನ ಇಂತು ಘನತೆಗೈವರೆ ನಿಮ್ಮ ದರುಶನದಿಂದ ನಾನು ಕೃತಾರ್ಥನಾದೆನು. ನನ್ನಂ ಕಲ್ಯಾಣದ ಬಸವನೆಂಬರು ನನ್ನ ತಂದೆ ತಾಯಿಗಳು ರುದ್ರಪ್ರಮಥರು ಸಂಗಮೇಶ್ವರನೇ ಎನ್ನ ತಂದೆ ಎನ್ನಲು, ಆ ಮೂರ್ತಿಗಳು ಜಗತ್ಪ್ರಸಿದ್ಧಿಯಾಗಿರುವುದಂ ತಿಳಿದು, ಇವಂ ಪೇಳಿದ ಮಾತಂ ಆಲೋಚಿಸಿ, ತಮ್ಮೊಳು ತಾವೇ ಏನನ್ನುತಿರ್ದಪರು.

**ತ್ರಿವುಡೆ.**

ಬಸವರಾಜನೆ ಭವವಿದೂರನೆ । ಅಸಮಲೋಚನ ಆತ್ಮ ಬಂಧುವೆ ।
ಕುಶಲ ಕೇಳ್ವೆ ನಮ್ಮ ಭಕ್ತನು – ಅಸಮಾನದಿಂದ ॥ ೧ ॥

ಅತ್ತಲಿತ್ತಲು ಪೋಗಲೀಸದೆ । ಪೃಥ್ವಿಪತಿ ಅಂಕೆಯೊಳು ನಮ್ಮನು ।
ಭಕ್ತಿಯಿಂದಿಟ್ಟಿಹನು ಬೇಸರ – ಪೊತ್ತು ಇಹೆವು ॥ ೨ ॥

ನಿನ್ನ ಕಲ್ಯಾಣಕ್ಕೆ ಬರುವೆವು । ನಿನ್ನ ಭಕ್ತಿಯೊಳಿಹೆವು ಬಸವನೆ ।
ಚೆನ್ನಿಗನೆ ಅತಿ ಬಂಧುರವು । ಪುರ – ಕೆಂತು ಮಾಳ್ಪೆ ॥ ೩ ॥

ಬಡವ ಭಾಗ್ಯವ ಕಾಲಿನಲ್ಲಿಯೆ । ಎಡಹಿ ಕಂಡಂದದಲಿ ಹರುಷವ ।
ಪಡುತ ಬಸವನು ಗಣಕೆ ಬಂದಿಹ – ಪರಿಯು ಚೆನ್ನಾಯ್ತು ॥ ೪ ॥

ಗುರುವೆ ದಯಮಾಡಿ ಪರಮ ಹರುಷದಿ । ಕರೆದು ಒಯ್ವೆನು ನಿಮ್ಮನೆಲ್ಲರ ।
ಭರದಿ ಕಲ್ಯಾಣ ಪುರಕೆ ಈಕ್ಷಣ – ತ್ವರಿತಮಾಗಿ ॥ ೫ ॥

ಎಂತು ಕರೆದೊಯ್ವೆ ಭಕ್ತ ಬಸವನೆ । ಇಂತು ಪುರದಾ ಬಂಧುರದೊಳಗೆನೆ ।
ಕಂತುಹರ ನಿಮ್ಮ ಕೃಪೆಯು ಇರ್ದಡೆ – ಕರೆದು ಒಯ್ವೆ ॥ ೬ ॥

ಸಂಗಮೇಶನ ಹಸುಬೆ ಬಾಯನು । ಸೊಗಸಿನಿಂ ತೆಗೆದಪೆನು ಎಲ್ಲರು ।
ಅಂಗೈಸಿ ಹರಸುತ ಸೇರಿರಿದರೋ – ಳ್ಸಾಂಗಮಾಗಿ ॥ ೭ ॥

ಎಂದು ಪೇಳಲು ಎಲ್ಲರೊಡಂಬಟ್ಟು । ಇಂದು ಧರನನು ಪಠಿಸುತೆಲ್ಲರು ।
ಅಂದು ಪೊಕ್ಕರು ಹಸುಬೆ ಬಾಯೊಳು – ಹರನ ಗಣರುಗಳು ॥ ೮ ॥

ಆರುಸಾವಿರ ಗಣರನೆಲ್ಲರ । ವೀರ ಬಸವೇಶ್ವರನು ಹಸುಬೆಯೊಳ್ ।
ಸೇರಿಸಿಯೆ ಪೆಗಲೊಳಗೆ ಪೊತ್ತಾ – ದ್ವಾರಕೈತಂದ * ॥ ೯ ॥

ವಚನ ॥ ಈ ರೀತಿ ಹಸುಬೆಯಲ್ಲಿ ಶಿವಗಣಂಗಳನೆಲ್ಲ ಪುಷ್ಪವಂಗೈದು ಹೊರ ಕೋಟೆ ದ್ವಾರಕಂ ಬಂದು ತೂಕವಂ ಒಪ್ಪಿಸಲು, ಒಂದು ಪಂಜೇರು ಕಡಿಮೆ ಯಾಗಿರಲು ಕಾವಲಿಗರು ಕೇಳಲು, ಮತಿಯನರಿಯದ ಕಾವಲಿಗರೆ ವ್ಯಾಪಾರ ಸ್ವಲ್ಪ ವಿಕ್ರಯಮಾದುದು ಬಳಿಕ ಬುತ್ತಿಯನುಂಡೆನು ಅದರಿಂದ ಕಡಿಮೆಯಾಯಿತೆನಲು, ಅಹುದೆಂದು ಚರರು ಒಪ್ಪಿ ಜಾಯಿಕಾಯಿ ಪತ್ರೆ ಲವಂಗ ಅಡಕೆಗಳಂ ತೆಗೆದು ಕೊಂಡು, ಬಿಡಲು ಆ ಬಳಿಕ ಬಸವಯ್ಯ ಬರುತ್ತಿರಲು, ಹಸುಬೆಯಲ್ಲಿರ್ದ ಗಣಂಗಳು ಬೆವರಿ ಬಾಯಾರಿ ಬಸವಯ್ಯನೊಳಿಂತೆಂದರು.

**ದ್ವಿಪದಿ.**

ಹೇ ಭಕ್ತವರ್ಯನೆ ಎಮ್ಮ ರಕ್ಷಕನೆ ।
ಸಾಂಬಶಿವ ಮನಪ್ರೀಯ ಶರಣ ನಮ್ಮಯ್ಯ ॥ ೧ ॥

ಬೆವತು ಆಯಾಸಗೊಂಡೊ ಬಿಡು ನಮ್ಮ ಕ್ಷಣವು ।
ತವಕದಿಂದಗ್ಗಣಿಯ ದಾಹ ನಮಗಯ್ಯ ॥ ೨ ॥

ಎಂದು ಪೇಳ್ವಷ್ಟರೊಳೀರಾರು ಯೋಜನವ ।
ಬಂದನಾ ಬಸವಣ್ಣ ಭಾಗ್ಯ ಸಂಪನ್ನ ॥ ೩ ॥

ಹೆಗಲ ಹಸುಬೆಯನಿಳುಹಿ ಎಲ್ಲ ಗಣರನ್ನು ।
ಮಿಗೆ ವಿಶ್ರಮಿಸಲೆಂದು ಮಡುಗಿ ಬಾಯ್ಬಿಚ್ಚಿ ॥ ೪ ॥

ಗಿರಿಜೆರಮಣನ ಮನೋಭಾವದಿಂ ನೆನೆಯೆ ।
ತ್ವರಿತದಿಂದಲ್ಲೊಂದು ಕಲ್ಯಾಣಿ ತೋರಿದುದು ॥ ೫ ॥

---

ಬಸವೇಶನು ಹನ್ನೆರಡು ಸಾವಿರ ಗಣಂಗಳಂ ಪೊತ್ತೈದಿದನೆಂದು (ಅ, ಎ, ಬ, ಖ, ಗ, ಚ, ಜ, ಡ, ತ.) ಪ್ರತಿಗಳಲ್ಲಿ ಹೇಳಲ್ಪಟ್ಟಿದೆ.

ಸ್ವಾದುಜಲ ಪುಷ್ಪತೋಟಗಳು ಮಿಗಿಲಾಗೆ ।
ಆದುದಚ್ಚರಿಯಾಗಿ ಹರನ ಕರುಣದಲಿ ॥ ೬ ॥
ಹಸುಬೆಯೊಳಗಿರ್ದಂಥ ಆರುಸಾವಿರದ ।
ಅಸಮಾಕ್ಷನಾ ಗಣರು ಆ ಕಲ್ಯಾಣಿಯೊಳು ॥ ೭ ॥
ಹಸ್ತ ಪಾದವು ಜಿಹ್ವೆ ಮತ್ತೆ ತೊಳೆದೆಲ್ಲ ।
ಸ್ವಸ್ಥಿರದಿ ಲಿಂಗದಭಿಷೇಕವಂಗೈದು ॥ ೮ ॥
ಪತ್ರೆ ಪುಷ್ಪವು ಭಸಿತ ಧರಿಸಿ ಪೂಜಿಸಿಯೆ ।
ಮತ್ತೆಲ್ಲರಗ್ಗಣಿಯ ಮನದಣಿಯಕೊಂಡು ॥ ೯ ॥
ವಿಶ್ರಮಿಸಿ ಬಸವಯ್ಯನ ಮುದದಿ ಪೊಗಳಿದರು ।
ಬಳಿಕ ಕೊಟ್ಟನು ಸುದ್ದಿ ಕಲ್ಯಾಣಕಾಗ ॥ ೧೦ ॥
ಘಳಿಲನೇ ಅಲ್ಲಿರ್ದ ಘನ ಶರಣರೆಲ್ಲ ।
ಇದಿರುಗೊಂಡರು ಸಕಲ ವಾದ್ಯ ಸಂಭ್ರಮದಿ ॥ ೧೧ ॥
ಚದುರೆವೆಣ್ಗಳು ಕೂಡಿ ಶರಣ ಯುವತಿಯರು ।
ಗಂಗಾಂಬೆ ನೀಲಾಂಬೆ ಘನ ಹರುಷದಿಂದ ॥ ೧೨ ॥
ಮಂಗಳಾರತಿ ತಂದು ಮಂದಗಮನೆಯರು ।
ಬಂದ ಶರಣರಿಗೆ ಪಾದಾರ್ಚನೆಯಗೈದು ॥ ೧೩ ॥
ಕುಂದಣದ ಪಾವುಗೆಯ ಕೊಟ್ಟು ಎಲ್ಲರಿಗೆ ।
ಬೆಳಗಿ ಆರತಿಯೆತ್ತಿ ಭಕ್ತಿಯಿಂದವರು ॥ ೧೪ ॥
ಥಳಥಳಿಪ ಶಿವಗಣರ ಆರುಸಾವಿರವ ।
ಇದಿರುಗೊಳ್ಳುತ ಕರೆದು ಮುದವನೈದಿದರು ॥ ೧೫ ॥

ವಚನ ॥ ಇಂತೀ ಪ್ರಕಾರದಲ್ಲಿ ಬಸವಣ್ಣ ತಂದ ಗಣಂಗಳೂ ಮುನ್ನಿರ್ದ ಗಣಂಗಳೂ ಸಹ ಎಲ್ಲವೂ ಲಕ್ಷದ ತೊಂಬತ್ತಾರುಸಾವಿರ ಪೂರಾಯವಾಗಲು, ಬಸವೇಶನುಲ್ಲಾಸದಿಂ ಅತರ್ಕ್ಯ ಭಕ್ತಿಯಂಗೈಯುತ್ತಿರಲು * ಇತ್ತ ಮಹದೇವರಾಯಂ ತನ್ನ ನಿತ್ಯನೇಮವಂ ತೀರ್ಚಿ ಹನ್ನೆರಡು ತಾಸಿಗೆ ಜಾಗಟೆಯಂ ಕುಟ್ಟಿಸಲು, ಗಣಂಗಳು ಬಾರದಿರಲು ರಾಯಂ ಚರರಂ ಕರೆದು ಪೋಗಿ ಅರಮನೆ, ಉಪ್ಪರಿಕೆ, ಕಲ್ಯಾಣಿ ಮಂಟಪ ಸಂದು ಸಂದುಗಳ್ನೋಡಲು, ಕುರುಹು ಶಬ್ದಗಳಿಲ್ಲದಿರಲು, ಪುರದೊಳು ಹುಡುಕಿಸಿ ಕಾವಲಿಗರಂ ಕರೆಸಿ ಗರ್ಜಿಸಿ ಕೇಳುತಿರ್ದಪನವೆಂತೆನೆ.

---

* ಬಸವೇಶನು ಹನ್ನೆರಡುಸಾವಿರ ಗಣಂಗಳಂ ತಂದು, ಅವರಿಗೆ ತನ್ನರಮನೆಯಲ್ಲಿದ್ದ ಹನ್ನೆರಡುಸಾವಿರ ರುದ್ರಕನ್ನಿಕೆಯರನ್ನು ವಿವಾಹ ಮಾಡಿ, ತನ್ನ ಪಟ್ಟಣವಲ್ಲಿಟ್ಟುಕೊಂಡಿದ್ದ ನೆಂದು (ಉ, ಎ, ಒ, ಖ, ಗ, ಚ, ಡ, ತ.) ಪ್ರತಿಗಳು ಹೇಳುತ್ತವೆ.

**ಕೊಂಚೆ ಜಂಪೆ.**

ಕರೆಸಿದನು ಬಾಗಿಲವರನ್ನು – ರಾಯ | ಭರದಿ ಗರ್ಜಿಸುತ ಕೇಳಿದನು |
ಎಂತು ಕಾಯ್ದಿರಿ ಬಾಗಲನ್ನು – ನಮ್ಮ | ಕಂತುಹರ ಗಣರೆಲ್ಲ ಇನ್ನು || ೧ ||
ಪುರದೊಳಗೆ ಇಲ್ಲ ಮತ್ತೆಲ್ಲಿ – ಪೋದ | ರರಿಯದಲೆ ಎಂತಿರ್ದಿರೆಲ್ಲ |
ಮಧ್ಯಾಹ್ನವಾಯ್ತು ವ್ರತ ಕುಂದು – ನಮಗೆ | ಸದ್ಯ ಒದಗಿತು ಪೇಳಿರೆಂದ ||
ಶಿರವರಿವೆನಿಮ್ಮ ನಮ್ಮಗಣರು – ಪೋದ | ಪರಿಯರಿತು ನೀವೆಮ್ಮೊಳುಸುರಿ ||

ವಚನ || ಇಂತೆಂದು ಗರ್ಜಿಸಿ ಕೇಳಿದ ರಾಯಂಗೆ ಬಾಗಿಲ ಚರರು ಭಯ ಗ್ರಸ್ತರಾಗಿ, ಸ್ವಾಮಿ! ನಾವು ಅರಿಯೆವು ಅತಿ ಜಾಗ್ರತೆಯಲ್ಲಿದ್ದೆವು. ಇಂದು ಯಾರೂ ನಮ್ಮ ಪುರಕ್ಕೆ ಬರಲಿಲ್ಲ, ಓರ್ವ ಬಡಶೆಟ್ಟಿ ವ್ಯಾಪಾರಂಗಳಂ ತಂದನು ತೂಕಂಗೈದು ಬಿಟ್ಟೆವು, ಮರಳಿ ಬರಲು ತೂಕಂಗೈದು ಹೆಸರಂ ಕೇಳಲು, ಕಲ್ಯಾಣದ ಬಸವಶೆಟ್ಟಿ ಯೆಂದು ಪೇಳಿ ಹೋದನು. ಅವನಲ್ಲದೆ ಮತ್ತಾರು ಬರಲಿಲ್ಲ ಸ್ವಾಮಿ ಎನಲು, ಆ ಮಾತಂ ಕೇಳಿ ರಾಯ ತಿಳಿದು ಏನೆನ್ನುತಿರ್ದಪನು.

**ಸಾಂಗತ್ಯ.**

ಕಲ್ಯಾಣದೊಳು ಮಹಿಮೆಯ ಬಸವನೆಂದು | ಎಲ್ಲರು ಪೇಳ್ವುದು ಸತ್ಯ ||
ಬಲ್ಲಿದನವನೋರ್ವನಲ್ಲದೆ ಮತ್ತೋರ್ವ | ಖುಲ್ಲನನುಂಕಾಣೆ ನಾನೆಂದ || ೧ ||
ಕದ್ದು ಒಯ್ದನು ನಮ್ಮ ಗಣರನ್ನು ಮೋಸದಿ | ಸದ್ಯ ನನ್ನಯ ವ್ರತವನ್ನು ||
ನಿರ್ಧರದಿಂದಲಿ ಕೆಡಿಸಿದನವನನ್ನು | ಸದ್ದು ಮಾಡದೆ ಕೊಲಲೇಸು || ೨ ||
ಶಿವವ್ರತ ಕುಂದುಗೈದವನ ಶಿರವ ಈಗ | ತವಕ ತೆಗೆಯೆ ದೋಷವಿಲ್ಲ ||
ಶಿವಶರಣರ ಪಾದ ಪಾಲಿಪ ಮೂರ್ತಿಗಳ | ಸುಮನಸದಿಂದಲಿ ಒಯ್ದ || ೩ ||
ಕರಸಿದನಾಗ ತಸ್ಕರ ಭಂಟರೀರ್ವರ | ಭರದಿ ಬಂದರು ಮಣಿದೊಡನೆ ||
ಧರಣೀಶ ಕಾರ್ಯವಾವುದು ಅಪ್ಪಣೆಯೇನು | ತ್ವರಿತದಿ ನಮಗೆಂದರಾಗ || ೪ ||
ಕಲ್ಯಾಣದಿಂದ ಬಸವಶೆಟ್ಟಿ ತಾ ಬಂದು | ಖುಲ್ಲತನದಿ ನಮ್ಮಗಣರ ||
ಮೆಲ್ಲನೆ ಮೋಸ ತಸ್ಕರದಿಂದ ಒಯ್ದನು | ಬಲ್ಲಿದ ವ್ರತ ಕುಂದುಗೈದ || ೫ ||
ನಿಮ್ಮ ಚಾತುರ್ಯ ತಸ್ಕರ ವಿದ್ಯೆಯಿಂದವನ | ಗಮ್ಮನೆ ತಲೆಯ ತಂದಡೆ ನೀವ್ |
ನೆಮ್ಮದಿಯಿಂದ್ಯೆದು ಗ್ರಾಮ ಉಂಬಳಿಯೀವೆ | ಗಮ್ಮನೆ ಪೋಗಿಯೆಂತೆಂದ |
ಉಡುಗೊರೆ ವೀಳ್ಯವ ಕೊಟ್ಟು ಬೀಳ್ಕೊಟ್ಟನು | ದೃಢ ಭಕ್ತ ಮಹದೇವರಾಯ ||
ಪೊಡವಿ ಬಗೆದು ಪೊಕ್ಕರು ಬಿಡೆವೆಂತೆಂದು | ನುಡಿದು ತೊಡೆತಟ್ಟಿ ಮಿಾಸೆಯ
ಸೆಳೆದು || ೬ ||

ಮೂರುದಿನದೊಳಾತನ ತಲೆ ನಿಮಗೀಗ । ತೋರುವೆ ಧರಣೀಶ ಕೇಳು ॥
ದೂರದಿಂ ಬೀಳ್ಕೊಂಡು ಹೊರಟರು ಪಯಣದಿ । ಚೋರನಾಯಕರತಿ ಬೇಗ ॥
ಗಡಿ ನಾಡ ದಾಂಟುತ್ತ ರಾತ್ರಿ ಹಗಲೆನ್ನದೆ । ಬಿಡದೆ ಬಂದರು ಕೇಳಿಕೊಳುತ ॥
ಪೊಡವಿಗೆ ದರ್ಪಣದಂತೆಸೆವ ಕಲ್ಯಾಣ । ದೆಡೆಗೆ ಬಂದು ಮೆಲ್ಲನವರು ॥ ೯ ॥
ಪುರವ ಪೊಕ್ಕರು ಬಸವೇಶ್ವರನರಮನೆ । ಇರವ ಕಂಡರು ಚೋದ್ಯಗೊಂಡು ॥
ಹರಶರಣರ ಸ್ತೋಮ ಕಂಡಲ್ಲಿ ಭವಿಗಳನು । ಜರಿದು ನೂಂಕುವ ಬಗೆ ಕಂಡು ॥
ಇಂತಿರೆ ಬಿಡರಯ್ಯ ವೀರ ಜಂಗಮರೂಪ । ನಾಂತಳೆದರೆ ಪೋಗಬಹುದು ॥
ಮುಂತೆಯೋಚಿಸಿ ಅಂಗಡಿಯಲ್ಲಿ ಮಾರುವ । ಸಂತತ ಕರಿ ಬದನೆಯಕಾಯ ॥
ಕಾವಿ ಕಪ್ಪಟ ಉಟ್ಟು ಕೊರಳೊಳ್ವಸ್ತ್ರವ ಧರಿಸಿ । ಸಾನಧಾನದಿ ಲಿಂಗವೆಂದು ॥
ಆವರಿಸಿಯೆ ಕಟ್ಟಿ ಭಸ್ಮವ ಧರಿಸಿಯೆ । ಕಾವಿಪೊಲ್ಲಿಯು ಅಂಗದಟ್ಟಿ ॥ ೧೨ ॥
ಕೈಯೊಳು ಬೆತ್ತವು ಚೆಂಬುಗಳ್ಪಿಡಿದವರು । ಅಯ್ಯಗಳೆಂದೊಳ ಪೊಗಲು ॥
ಒಯ್ಯನೆ ಎಲ್ಲರಂತಗ್ಗಣಿ ತೆಕ್ಕೊಂಡು । ಸ್ವಯೆಂಬ ರೀತಿಯೊಳವರು ॥ ೧೩ ॥
ರನ್ನದ ಅರಮನೆಯೊಳು ಮಡಿ ಗದ್ದುಗೆ । ಇನ್ನಿಕ್ಕಿರೆ ಎಲ್ಲರು ಕುಳಿತು ॥
ಸನ್ನುತದಿಂದಲಿ ಎಲ್ಲ ಗಣಂಗಳ್ಗೆ । ತನ್ನ ಸತಿಯು ಕೂಡಿ ಬಸವ ॥ ೧೪ ॥
ಅಗ್ಗಣಿ ಪತ್ರೆ ಶೋಭನ ಭಸಿತವು ಧೂಪ । ವೆಗ್ಗಳದಿಂ ತಂದು ಗಣಕೆ ।
ತಗ್ಗಿ ಕಿಂಕರ ಭಕ್ತಿಯೊಳ್ಶಿವಪೂಜೆಯ । ಒಗ್ಗಾಗಿ ಮಾಡಿಸಿ ಬರಲು ॥ ೧೫ ॥

ವಚನ ॥ ಇಂತೀ ಬಸವಯ್ಯಂ ಸತಿ ಗಂಗಾಂಬೆ ನೀಲಾಂಬೆಯರು ಲಕ್ಷದ ಮೇಲೆ ತೊಂಬತ್ತಾರು ಸಾವಿರ ಗಣಂಗಳಿಗೆ ಶಿವಾರ್ಚನೆಯಂಗೈಸಿ ಬರಲು, ಈ ಕಪಟ ಗಣಂಗಳು ಮನಂ ಜರಿವುತ್ತ ಗಡಗಡನೆ ನಡುಗುತ್ತ ಏಂಗೈವೆನೋ ಎಂದು ಭಯಂಗೊಂಡು, ಹಸ್ತವಂ ಮುಚ್ಚಿಕೊಂಡು ಲಿಂಗವಂ ತೋರದೆ, ಇರುವವರಂ ಕಂಡು ಬಸವರಾಜ ಎಂತುಗೈದನದೆಂತೆನೆ.

**ಜಂಪೆ.**

ಪರುಷಸೋಂಕಿದ ಸೀಸ । ನೆರೆ ಕನಕವಾದಂತೆ ।
ಹರರೂಪ ಧರಿಸಿದಗೆ । ಹರ ಛಾಯೆದಂತೆ ॥ ೧ ॥
ಕಮಲ ಸೋಂಕಿದ ಭೃಂಗ । ಶಿವನಮುಡಿ ಕಂಡಂತೆ ।
ಭುವಿ ಹಳ್ಳ ಪುರ ಜಲವು । ಕವಿದಬ್ಧಿಯಂತೆ ॥ ೨ ॥
ರವಿಯುದಿಸಲಾ ತಮವು । ಜವದಲ್ಲಿಪಾರ್ವಂತೆ ।
ಭುವಿಯೊಳಗೆ ಪೊಳಪು ಪೆ । ರ್ಚುವಂದದಲ್ಲಿ ॥ ೩ ॥

ಶಿವಗಣ'ಸ್ತೋಮದಲಿ । ಭವಿಮನುಜ ಬಂದಿರಲು ।
ಭವದ ಜನ್ಮವು ತೊಲಗಿ । ಸುವರ್ಣ ಕಾಯವನು ॥ ೪ ॥

ಮಾಡಿದನು ಬಸವಯ್ಯ । ಮೃಡನ ಪರುಷದ ದೃಷ್ಟಿ ।
ರೂಢಿಸಿದನಾಕ್ಷಣದಿ । ರಮ್ಯತರವಾಗಿ ॥ ೫ ॥

ಜಂಗಮವೆ ನಿಜವಾಗಿ । ಲಿಂಗವಾದುದು ಕಾಯ ।
ಸಂಗಮೇಶನ ಮಹಿಮೆ । ಸೊಗಸು ತೋರಿದುದು ॥ ೬ ॥

ಏಕಯ್ಯ ಶಿವರೂಪ । ನೀ ಕರವ ನೀಡೆನಲು ।
ಜೋಕೆಯಿಂ ನಿರ್ಭಯದಿ । ಜಂಗಮವು ಆಗ ॥ ೭ ॥

ವಚನ ॥ ಬಸವೇಶನು ಪರುಷ ದೃಷ್ಟಿಯಿಂ ನೋಡಿ ಕೂಡಿರ್ದ ಗಣ ಸಮೂಹದಲ್ಲಿ ಕುಂದುಬರದಂತೆ ನಿಜ ಜಂಗಮ ರೂಪಂಗೈದು, ಶಿವಾರ್ಚನೆ ಶಿವಾರ್ಪಣಂಗೈಸಿ ಆ ಮೂರ್ತಿಗಳ ಕೂಡೆ ಬಸವೇಶನೇನೆನ್ನುತಿರ್ದಪನು.

**ತ್ರಿವುಡೆ.**

ಶಿವನ ಕರುಣದಲಾದ ನೂತನ ।ಅವಿರಳದ ಮೂರ್ತಿಗಳೆ ನಿಮ್ಮಯ ।
ಸುಮನಸದ ಶಿರ ಮನದಭೀಷ್ಟವ – ಸಲಿಸಿಕೊಳ್ಳೆನಲು ॥ ೧ ॥

ಐದು ಗ್ರಾಮದ ಉಂಬಳಿಯನು । ಅವನಿಪನ ಪ್ರೀತಿಯನು ಪಡೆಯಿರಿ ।
ಒಯ್ದು ಎನ್ನಯ ಶಿರವ ತೋರಿಸಿ – ಯವನ ಮೆಚ್ಚಿಸಿರಿ ॥ ೨ ॥

ಇಂತೆನಲು ಬಸವಣ್ಣನವರಿಗೆ । ನಿಂತು ಪಲವಿಧ ಭಕ್ತಿ ಸ್ತೋತ್ರವ ।
ಕಂತು ಹರ ಬಸವಂಗೆಗೈದರು – ಪ್ರೊಸತು ಗಣರು ॥ ೩ ॥

ಧರ್ಮರೂಪನೆ ದಾನಶೀಲನೆ । ನಿರ್ಮಲಾತ್ಮಕ ನಿತ್ಯವಸ್ತುವೆ ।
ಕರ್ಮದೂರನೆ ಕಾಮಸಂಹರ – ಕರುಣನಿಧಿಯೆ ॥ ೪ ॥

ನಿಮ್ಮ ಕರುಣದ ದೃಷ್ಟಿಯಿಂದಲಿ । ಎಮ್ಮ ಭವಿ ಜನ್ಮವೇ ತೊಲಗಿತು ।
ನೆಮ್ಮಿ ಇನ್ನು ಪಾದ ಸೇವೆಗೆ – ಯೋಗ್ಯರಾಗಿಹೆವು ॥ ೫ ॥

ಅವನ ಉಮ್ಮಳಿ ಅವನ ಉಡುಗೊರೆ । ಅವನ ಪ್ರೀತಿಯು ನಮಗೆಯಿನ್ನೇನು ।
ಸಮನಿಸದು ಕೇಳ್ ಗುರುವೆ ಬಸವ – ಸತ್ಯ ಶೀಲಾ ॥ ೬ ॥

ಆದಡೆಯು ಕೇಳಿ ಮೂರ್ತಿರೂಪರೆ । ಮೇದಿನೀಪತಿ ನಿಮ್ಮ ರಾಯಗೆ ।
ಆದಕಾರ್ಯವ ಪೇಳಿ ದರುಶನ – ಕೊಟ್ಟು ನೀವ್‌ಬನ್ನಿ ॥ ೭ ॥

ವಚನ ॥ ಇಂತೀ ಬಸವೇಶನಪ್ಪಣೆಯಂತೆ ಆ ತಸ್ಕರ ಚರಮೂರ್ತಿಗಳೀರ್ವರೂ ಮಾಂಡವ್ಯ ನಗರಿಗೆ ಬರಲು, ಕಾವಲಿಗರು ಬಾಗಿಲಲ್ಲಿ ತಡೆದು ನಿಲ್ಲಿಸಿ ರಾಯಂಗೆ ಅರುಹಲು, ಬರಬೇಂದಪ್ಪಣೆಯಂಕೊಡೆ, ಈ ತಸ್ಕರಮೂರ್ತಿಗಳು ರಾಯನ ಬಳಿಗೆ ಪೋಗಿ ನಿಲ್ಲಲು, 'ಅಗಲಿದ ಪತಿಯಂ ಅರಸುವ ಸತಿಯಂತೆ' ನೃಪನತ್ಯಂತ ಭಕ್ತಿಯಿಂದೆರಗಿ ಏನೆಂದು ನುತಿಸುತಿರ್ದಪನು.

**ಏಕತಾಳ.**

ಎತ್ತಣಿಂದ್ಯೈದಿದಿರಿ । ಇಂದುಧರನ ಮೂರ್ತಿ ।
ಸತ್ಯ ಸದ್ಗುರುವೆ ನೀವ್ । ವಿಸ್ತರಿಸಿ ಎನಗೆ ॥ ೧ ॥

ನಿಮ್ಮ ದರುಶನದಿಂದ । ನನ್ನ ಮುಸುಕಿದ ವ್ಯಸನ ।
ಗಮ್ಮನೆ ಪೋದುದು । ಗುರುವೆ ಉಸುರೆಂದ ॥ ೨ ॥

ಕೇಳಯ್ಯ ಮಹದೇವ । ಭಾಳಲೋಚನ ಗಣರ ।
ಲೀಲೆಯಿಂ ಕರೆದೊಯ್ದು । ಲೋಲ ಬಸವಣ್ಣ ॥ ೩ ॥

ಎಂದು ನಮ್ಮನು ಕರೆದು । ಬಂಧುರದಿ ಶಿರ ತರಲು ।
ಅಂದು ನೀ ಕಳುಹೆ ಪೋಗಿ । ನಿಂದು ಬಸವನನು ॥ ೪ ॥

ಕಾಣಲೀರೂಪನ್ನು । ಖಂಡ ಪರಶುವನಿತ್ತ ।
ಕ್ಷೋಣಿಗೆ ಬ್ರಹ್ಮಪಟ್ಟ । ಮಾಣದ್ಯೈತಂದ ॥ ೫ ॥

ಕಪಟಜಂಗಮರಂತೆ । ಉಪಮೆಯ ತಾಳಿ ಪೋಗೆ ।
ಕಪಟವ ಹರಿಸಿದ । ಕಾರುಣ್ಯ ಬಸವ ॥ ೬ ॥

ಶಿರವನಿತ್ತಪೆನೆಂದ । ಕರುಣನಿಧಿ ಬಸವನು ।
ಚರಣ ನುತಿಸಿ ಬಂದೆವು । ಮರು ಜನ್ಮ ನಮಗೆ ॥ ೭ ॥

ವಚನ ॥ ಇಂತೀ ಪಾವನರೂಪಂ ಮಾಡಿದ ಬಸವೇಶನಲ್ಲಿಯೇ ಇರುತ್ತೇವೆನ್ನಲು, ನಿಮ್ಮ ಬಂಧುರದಭೀಷ್ಟೆಯಂ ನಿಮ್ಮ ರಾಯಂಗೆ ತೋರಿ ಬನ್ನಿಯೆಂದಪ್ಪಣೆಯಿತ್ತು ಕಳುಹಿದನೆನಲು, ಆ ಮಹದೇವರಾಯಂ ಕೇಳ್ದು ಅತಿ ಆಶ್ಚರ್ಯವಂ ಬಟ್ಟು ಅಹಂಕೃತಿಯಂಬಿಟ್ಟು ಅಂಥಾ ಶರಣನ ದರುಶನಂಗ್ಯೈದು, ನಾನೂ ದೋಷವಂ ನಿವೃತ್ತಿಗ್ಯೈವೆನೆಂದೆಣಿಸಿ ಸತಿಯೊಳಿಂತೆಂದಂ.

**ತ್ಯಾಗಮಾನ– ಅಟತಾಳ.**

ಭ್ರಮರ ಕುಂತಳೆ ಭಾಮಾಮಣಿಯೆ ಎಲೆ ನಾ – ರಿ – ನೀನು –
ಕಮಲ ಮುಖಿಯೆ ಮಾತ ಕೇಳು ಎಲೆ ನಾ – ರಿ ॥ ೧ ॥

ಶರಣರುಗಳ ಅರಿಯದೆ ನಾನು ಎಲೆ ನಾ – ರಿ – ಅವರ –
ಶಿರವ ತರಿಸಲೆತನಗೈದೆ ಎಲೆ ನಾ – ರಿ ॥ ೨ ॥
ದೋಷವಡರಿತೆನಗೆ ಇಂದು ಎಲೆ ನಾ – ರಿ – ಇನ್ನು –
ದ್ವೇಷಮಾಡಿ ಕಳೆವುದೆಲ್ಲಿ ಎಲೆ ನಾ – ರಿ ॥ ೩ ॥
ಘನ ಮಹಿಮನಂಗಳದ ರಜವ ಎಲೆ ನಾ – ರಿ – ನಾನು –
ಅನುವಿನಿಂದ ಉಡುಗಿ ಕಳೆವೆ ಎಲೆ ನಾ – ರಿ ॥ ೪ ॥
ನಿನ್ನ ಮನದ ಭಾವವೇನು ಎಲೆ ನಾ – ರಿ – ತ್ವರಿತ –
ಎನ್ನ ಒಡನೆ ಉಸುರು ನೀನು ಎಲೆ ನಾ – ರಿ ॥ ೫ ॥
ನೆಳಲು ತನುವಿನ ಬಳಿಯೊಳಲ್ಲದೆ ಎಲೆ ದೇ – ವ – ಇರುವ –
ದಲ್ಲದೆ ಎನ್ನ ಕೇಳಲೇನು ಎಲೆ ದೇ – ವ ॥ ೬ ॥
ಪಾದವಿರ್ದ ಬಳಿಯೊಳ್ನಾನು ಎಲೆ ದೇ – ವ – ಸೇವಕ –
ಳಾಗಿ ನಾನು ಮಾಳ್ಪೆನಿರುತ ಎಲೆ ದೇ – ವ ॥ ೭ ॥
ಧರೆಯ ಭೋಗವನ್ನು ಬಿಟ್ಟು ಎಲೆ ನಾ – ರಿ – ಪೋಗಿ –
ಪರರ ಸೇವೆ ಕಷ್ಟವಹುದು ಎಲೆ ನಾ – ರಿ ॥ ೮ ॥
ಸುತನು ನೀನು ರಾಜ್ಯ ಪದವ ಎಲೆ ನಾ – ರಿ – ಮತ್ತೆ –
ಹಿತದಿ ಆಳಿ ಸುಖಮಿರೆಂದ ಆ ರಾ – ಯ ॥ ೯ ॥

ವಚನ ॥ ಇಂತೆಂದು ಪತಿಭಕ್ತಿ ಭಾವವಂ ಬಲಿದ ಸತಿಯಂ ನೋಡಿ, ಸುತನಿಗೆ ಪಟ್ಟವಂ ಕಟ್ಟಿ ಭಕ್ತಿಯಂ ಬೋಧಿಸಿ, ಸುಖಮಿರೆಂದು ಸತಿಪತಿಗಳು ಉಟ್ಟ ವಸ್ತ್ರದಲ್ಲಿ ಮಾಂಡ್ಯವ್ಯ ಪುರಿಯಂ ಬಿಟ್ಟು, ಕಲ್ಯಾಣಕ್ಕೆ ಬರುತ್ತಿದ್ದರದೆಂತೆನೆ.

**ಕೊಂಚೆ ಜಂಪೆ.**

ಸತಿಪತಿಗಳೀರ್ವರೊಮ್ಮುಖದಿ – ಬಂದು । ಅತಿ ಭಕ್ತಿವೆರಸಿಸಮ್ಮತದಿ ।
ಹವೆಯನರಿಯರು ಗರ್ಭ ಸುಖಿಗಳ್ – ನಡೆದು । ಅವಧಿಪಟ್ಟರಾಸತಿಪತಿಗಳು ॥ ೧ ॥
ತಳಿರಂತಡಿಯು ಗುಳ್ಳೆ ಬಳಲಿಕೆಯು – ಅಲ್ಲಿ । ನೆಳಲ ಸಾರುತ ಬಂದರಿಳೆಯೊಳ್
ಪರಶಿವನ ಧ್ಯಾನ ಪರರಾಗಿ – ದಂಪತಿಗಳ್ । ಬಂದರಾ ಕಲ್ಯಾಣಕಾಗಿ ॥ ೨ ॥
ಬಸವಯ್ಯ ಧ್ಯಾನ ಪರರಾಗಿ – ಸತಿಪತಿಗಳ್ । ಎಸಗಿ ಬಂದರು ವಿವರವಾಗಿ ।

ವಚನ ॥ ಇಂತೀ ಶರಣರು ದಂಪತಿಯುಕ್ತರಾಗಿ ಬರುವುದಂ ತಿಳಿದು, ಸಂಗಮೇಶ್ವರದೇವರು ಬಸವಣ್ಣಂಗೆ ಅರುಹುದೋರಲು, ಬಳಿಕ ಬಸವಯ್ಯಂ ಸಕಲ ವಾದ್ಯ ಸಂಭ್ರಮದಿಂದ ಅರಮನೆಯಿಂ ಪೊರಟು ಇದಿರುಗೊಂಡು ಶರಣೆಂದು

ಕರೆಯಲು, ಶರಣೆಗಿಮ್ಮಡಿ ಶರಣೆಂದು, ಬಸವಣ್ಣನರಮನೆಗೆ ಬಂದು, ಬಸವನ ಸತ್ಕಾರವಂ ಕೈಗೊಂಡು ಜಂಗಮದಾಸೋಹಂಗೈವ, ಇಚ್ಛೆಯಿಂ ಬಸವಣ್ಣನಾಶ್ರಯದ ಗೃಹದಲ್ಲಿರ್ದರದೆಂತೆನೆ.

**ಜಂಪೆ.**

ನಂದೀಶ ಬಸವರಾ | ಜೇಂದ್ರನ ಆಶ್ರೈಸಿ |
ಅಂದು ದಂಪತಿಗಳು | ಇರುತಿರ್ದರಲ್ಲಿ || ೧ ||

ಶಿವಗಣಂಗಳ ವಾಕ್ಯ | ಅಮಿತದಿಂ ಕಟ್ಟಿಗೆಯು |
ತವೆ ಕಾಯಕದಿ ನಿಂದ | ತೋರ್ಪ ಚರನಂತೆ || ೨ ||

ತಮ್ಮ ಕ್ರಿಯಾಚಾರ | ತಮ್ಮ ದೃಢ ಜಪ ನೇಮ |
ಕಮ್ಮಗೋಲನರಿಪುಗೆ | ಕಾಣಿಸುತ ಭಕ್ತಿ || ೩ ||

ಇರುತಿರ್ದರತಿ ಭಕ್ತಿ | ಶರಣತ್ವವಂ ತಾಳಿ |
ಪುರಹರನ ಮನ ಮೆಚ್ಚು | ಪುಣ್ಯಯುತರಾಗಿ || ೪ ||

ಅಂವ ಚಂದದ ಗಣರ | ತಂದ ಹಸುಬೆಯೊಳ್ ಬಸವ |
ನೆಂದು ಬಂದನುರಾಯ | ಸಂಧಿ ಸಂಪೂರ್ಣಂ || ೫ ||

ಇಂತಿ ಪದ್ಯಗಳು ೧೮೬

**ಅಂತು ಸಂಧಿ ೮ ಕ್ಕಂ ಸಂಪೂರ್ಣ ಗಣನೆ – ೨೩೮೪ ಕ್ಕಂ ಮಂಗಳಮಹಾ**

**ಶ್ರೀ ಶ್ರೀ ಶ್ರೀ ಶ್ರೀ ಶ್ರೀ**

ಒಂಬತ್ತನೆಯ ಸಂಧಿ

# ಮೋಳಿಗೆ ಮಾರಯ್ಯನವರಕಥೆ

---

**ವೃತ್ತ.**

ಸೂ ॥ ನೀಲ ಕಂಠನ ನಿಜ ಭಕ್ತ ದೃಢ ಮಹಿಮಂ ।
ಲೀಲೆಮೋಳಿಗೆಮಾರ ಸುನಾಮದ ಶರಣಂ ॥
ಡಾಳಿಪಾ ಚರತನ ಭಕ್ತಿಯನೆಸಪುದಂ ।
ಕೇಳಿರೈ ಬಕುತರ ಸಂಪದ ಮುಕುತಿಯಂ ॥ ೧ ॥

**ದ್ವಿಪದಿ.**

ಶ್ರೀ ಗುರು ವರಭಕ್ತ ಸ್ಥಿರತರದ ಮುಕ್ತ ।
ನಾಗಭೂಷಣ ಪ್ರೀಯ ನಮಿತ ಜಗದಯ್ಯ ॥ ೧ ॥

ಪಾರವರಿಯದ ಮಹಿಮ ಪರಮಾತ್ಮ ದೇವ ।
ಲಿಂಗಸಂಧಾನ ನವಲಿಂಗ ಮಯಯುಕ್ತ ॥ ೨ ॥

ಸತ್ಯ ಸದಾಚಾರ ಸರಸ ಕೀರ್ತಿವಿಚಾರ ।
ಕಟ್ಟಿಗೆಯ ಕಾಯಕದಿ ಕಂತು ಹರ ಗಣಕೆ ॥ ೩ ॥

ಮಡದಿ ಸಹ ತಾನು ಅಂಬಲಿ ಹುರುಳಿಕಾಳು ।
ಅಮೃತ ರುಚಿ ಕಾಣಿಸುವ ಅಷ್ಟು ಗಣರಿಂಗೆ ॥ ೪ ॥

ಶಿವಶರಣರಿಂಗೆ ಅನುದಿನವು ದಿನಚರಿಯ ।
ಸತ್ಯಕ್ರಿಯದಿ ನಿತ್ಯ ನೇಮವನು ತೀರ್ಚಿ ॥ ೫ ॥

ಮತ್ತೆ ವನಕೈದುವನು ಮಹಿಮ ತಾ ಮುದದಿ ।
ನಿಂತು ನೋಡುವನು ವನದೇವತೆಯ ಸೊಬಗ ॥ ೬ ॥

ಅಂತು ದ್ವಿಹಸ್ತವನು ಎತ್ತಿ ಸ್ತೋತ್ರವನು ।
ಹೇ ವನದೇವಿ ಯಾವ ಜನ್ಮದ ಸುಕೃತ ॥ ೭ ॥

ಆವರಿಸಿತೋ ನಿನಗೆ ಅದರ ಕಾರಣದಿ ।
ವನದೇವಿ ನೀನಾಗಿ ಉದಿಸಿ ಧರಣಿಯೊಳು ॥ ೮ ॥

ಸಕಲ ಮೃಗತತಿ ಪಕ್ಷಿ ಸರ್ವ ಜೀವರಿಗೆ ।
ಸುಖಿಯಾಗಿ ಹಿತಕರಂ ಸಲೆ ತೋರ್ಪೆ ದೇವಿ ॥ ೯ ॥
ಶಿವನಿಮಿತ್ತಾರ್ಥದ ಸಲೆ ವೃತ್ತಿ ಎನಗೆ ।
ಅಮಿತದಿಂ ಕಟ್ಟಿಗೆಯ ನಾನೊಯ್ವೆನೆಂದು ॥ ೧೦ ॥
ಅಂಗರಕ್ಷಣೆಗಲ್ಲ ಹರಗಣರ ತೃಪ್ತಿಗೆ ।
ಮಂಗಲಾಕರ ನಿನಗೆ ಮುಂದೆ ದೊರಕುವದು ॥ ೧೧ ॥
ಎಂದು ಒಡಂಬಡಿಸಿ ಆ ಇಂದುಧರ ಶರಣ ।
ಚಂದದಿಂ ಕಟ್ಟಿಗೆಯ ಸಲೆ ಹೊರೆಯ ಕಟ್ಟಿ ॥ ೧೨ ॥
ನೆತ್ತಿಯೊಳು ಹೊತ್ತೊಯ್ದು ನಗರದೊಳು ಮಾರಿ ।
ಸತ್ಯಕಾಯಕ ಹಾಗ ನಿತ್ಯ ವೃತ್ತಿಯಲಿ ॥ ೧೩ ॥
ಭೃತ್ಯಗಳ ತಂದದಕೆ ಭರ್ಗಗಣರಿಂಗೆ ।
ತೃಪ್ತಿಯಂಗೈಸುತ್ತ ತಾನೊಪ್ಪುತಿರ್ದ ॥ ೧೪ ॥

ವಚನ ॥ ಈ ರೀತಿಯಲ್ಲಿ ಮೋಳಿಗೆಮಾರಯ್ಯನು ಕಟ್ಟಿಗೆ ಕಾಯಕದಲ್ಲಿ ಅಂಬಲಿ ಹುರುಳಿ ಬೆಂಗಾಳಂ ಬಂದಷ್ಟು ಗಣಂಗಳಿಗೆ ಮೇಲ್ತರದತಿ ಸ್ವಾದುವಾದ ಜಿಲುಪಾಲು ಸಕ್ಕರೆಯಂ ಸವಿದ ರುಚಿಯಂ ಕಾಣಿಸಿ, ತೃಪ್ತಿಪಡಿಸುತ್ತ ನಿತ್ಯ ತರುವ ಕಟ್ಟಿಗೆ ಹೊರೆಯೊಳು ಘನಮುಖಿಯೆಂಬ ಒಂದೊಂದು ಕಟ್ಟಿಗೆಯಂ ಅಂಗಳದೊಳ್ ಗುಡ್ಡೆಯಂಗೈದಿರ್ಪಂ. ಇತ್ತ ಗಣಂಗಳು ಮಾರಯ್ಯನ ಗೃಹದಲ್ಲಿ ಉಂಡಂತಹ ರುಚಿಯಂ ಕೊಂಡಾಡುತ್ತ ಬಸವಣ್ಣನವರ ಮನೆಗೆ ಬಂದು ಆತನೊಳೀನೆನ್ನುತಿರ್ದಪರು.

**ಭಾಮಿನೀಷಟ್ಪದಿ.**

ಇಂದುಧರ ಶಿವಗಣರು ಬಸವನ ।
ಚಂದ್ರ ಶಾಲೆಯ ತಳದೊಳೆಲ್ಲರ ।
ಸಂದಣಿಯ ವೈಭವದಿ ಬಸವ ದಿನೇಂದ್ರನೊಪ್ಪಿರಲು ॥
ಒಂದು ಲಕ್ಷದ ಮೇಲೆ ಎಸೆಯುತ ।
ಸಂದು ತೊಂಬತ್ತಾರುಸಾವಿರ ।
ದಿಂದ ಸಹಿತದಿ ತೋರ್ಪ ಚಂದ್ರನ ಕಳೆಯೊಲೊಪ್ಪಿರಲು ॥ ೧ ॥

ಇಂತು ವೈಭವದಿಂದಲಿರುತಿಹ ।
ಕಂತುಮರ್ದನ ಬಸವ ರಾಜನೊಳ್ ।
ಪಂಥದಿಂ ಪೊಗಳಿದರು ಮೋಳಿಗೆಮಾರದೇವನನು ॥
ಮುಂತಣದೊಳಾಶ್ಚರ್ಯ ಕರನಿಹ ।
ದಂತಿ ಸುರ ಮರ್ದನನ ಸುವ್ರತ ।
ವಂತ ಸತ್ಯಾತ್ಮನಹ ಕಟಗೆಯಮಾರದೇವಯ್ಯ ॥ ೨ ॥

ಉರೆ ಬಡವನತಿ ಕಟಿಗೆ ಕಾಯಕ ।
ವರ ಕ್ರಿಯದೊಳು ನಿತ್ಯ ಗಣನೆಯ ।
ಪರಿಯನರಿಯದ ಗಣರಿಗಾರೋಗಣೆಯಗೈಸುವನು ॥
ಹುರಳಿ ಬೆಂಗಳು ಅಂಬಲಿಯು ರುಚಿ ।
ಕರವದಮೃತಕೆ ಮಿಗಿಲು ಏನೆಂ ।
ದೊರೆಯಬಹುದೈ ಬಸವರಾಜನೆ ಹರನೆ ತಾ ಬಲ್ಲ ॥ ೩ ॥

ನೀನು ಶಿವನಲಿ ಪಂಚ ಪರುಷವ ।
ಜ್ಞಾನದಿಂ ಪಡೆದೈದೆ ಇಳೆಯೊಳು ।
ಕ್ಷೋಣಿಯಾಳುವೆ ಸಕಲ ವೈಭವದಿಂದ ಬಸವೇಶ ॥
ಏನನೆಂಬೆವು ನಿನ್ನ ಮನೆಯಲಿ ।
ಘನದಿ ಸಲಿಸುವ ಭಕ್ಷ್ಯಮುಂ ಪರ ।
ಮಾನ್ನಗಳು ಮಾರನಾ ಮನೆಯಂಬಲಿಗೆ ಸಮನಿಲ್ಲ ॥ ೪ ॥

ಕಂಗಳಿಗಂಬಲಿ ಕಾಳು ಬೆಂಗಳು ।
ಮಂಗಳಾಕರ ರುಚಿಯು ಸ್ವಾದವು ।
ಗಂಗಧರ ತಾ ಬಲ್ಲ ಮಹಿಮೆಯನೆಂದು ಗಣ ಪೊಗಳೆ ॥
ಅಂಗಜಾರಿಯು ಅವರ್ಗೆ ಬಡತನ ।
ಹಿಂಗದಿತ್ತಿಹ ಕರುಣ ಸಾಗರ ।
ಲಿಂಗಮೂರ್ತಿಗೆ ಮನವು ಕರಗದೆ ಎಂದು ಮರುಗಿದರು ॥ ೫ ॥

ಕೇಳುತಲಿ ಬಸವೇಶ ಶಿವಗಣ ।
ಲೀಲೆಯರಿವಡಸಾಧ್ಯ ಮೃಡನಿಗೆ ।
ತಾಳಿ ಮನದಲಿ ಕರುಣವನು ದಯದೋರಿ ಬೇಗದಲಿ ॥
ಭಾಳಲೋಚನ ಶರಣರೊಳಗಂ ।
ತಾಳಿ ಕಷ್ಟವ ಕಟಿಗೆ ಕಾಯಕ ।
ಖೂಳ ಬಡತನವವರಿಗೇತಕೆ ನನ್ನ ಸಂಘದೊಳು ॥ ೬ ॥

ಶರಣ ಕಷ್ಟವ ಕೇಳ್ದಿನಕಟಾ ।
ತ್ವರಿತ ಪರಿಹರಿಸುವೆನು ಎನ್ನುತ ।
ಕರುಣನಿಧಿ ಬಸವೇಶ ಸಾಸಿರ ಪೊನ್ನ ಜಾಳಿಗೆಯ ॥
ಭರದಿ ತುಂಬಿಯೆ ಮಾರದೇವನ ।
ವರ ಗೃಹಕೆ ಕಕ್ಷೆಯೊಳಿರುಕುತಲಿ ।
ಭರದಿ ಪಯಣದಿ ಬಂದು ಪೊಕ್ಕನು ನಿಂದು ಅಂಗಳದಿ ॥ ೭ ॥

ತಾಯಿ ಮನೆಯೊಳಗಾರು ಅಗ್ಗಣಿ ।
ಆಯಸಂ ತೃಷೆಯಧಿಕ ಬಳಲಿದೆ ।
ಒಯ್ಯನೆ ತಾರಮ್ಮ ಸದ್ಗುಣಶೀಲೆ ಶುಭಚರಿತೆ ॥
ಕಾಯಜಾರಿಯ ಸತಿಯ ಸದೃಶಳೆ ।
ಸಾಯಲಾಗಿದೆ ಎನಲು ಕೇಳ್ದಳು ।
ಆಯತಾಕ್ಷಿಯು ತಂದಳಗ್ಗಣಿ ತ್ವರಿತದಿಂದವಳು ॥ ೮ ॥

ಸತ್ಯ ಶರಣೆಯು ಬಸವ ಹಸ್ತಕೆ ।
ಇತ್ತಳಗ್ಗಣಿ ಬಳಿಕ ಗೃಹದೊಳು ।
ಮತ್ತೆ ಭಸಿತವು ಪತ್ರೆ ಪಾಸಾಲೆಯೊಳು ತುಂಬಿರಿಸಿ ॥
ನಿಸ್ತ್ರೆ ತನ್ನಯ ಕೆಲಸ ಕೋಣೆಯೊ ।
ಳತ್ತ ನೋಡುತ್ತಿರಲು ಬಸವನು ।
ಇತ್ತಕರ ಚರಣಾದಿ ಜಿಹ್ವೆಯ ತೊಳೆದು ಒಳಪೊಕ್ಕು ॥ ೯ ॥

ಕುಳಿತು ಹಸೆಯೊಳು ಲಿಂಗದರ್ಚನೆ ।
ಘಳಿಲುಗೆಯ್ಯುತ ಬಸವನಾಕ್ಷಣ ।
ಬಳಿಕ ಕೊಂಡನು ಲಿಂಗ ಮುಖದಿಂದಗ್ಗಣಿಯನಾಗ ॥
ಸೆಳೆದು ಪಾಸಾಲೆಯಲ್ಲಿ ದ್ರವ್ಯಗ ।
ಳಳವಡಿಸಿ ತುಂಬಿದನು ಪತ್ರೆಯ ।
ಎಳೆದು ಮುಚ್ಚಿಯೆ ಬಸವರಾಜನು ಒಂದು ಕಡೆಗಿಟ್ಟ ॥ ೧೦ ॥

ಜನನಿ ನಾ ಪೋದಪೆನು ಎನುತಲಿ ।
ಘನತೆಯಿಂದಲಿ ಪೇಳಿ ಪೋದನು ।
ವನಿತೆ ರನ್ನಳು ಅರಿಯಳಿತ್ತಲು ಬಸವನುಪಮೆಯನು ॥
ಅನುವಿನಿಂ ಕಳೆಯುತಲಿ ಕಷ್ಟವ ।
ಧನದಿ ಸುಖಿಸಲಿ ಎಂದು ಬಸವನು ।
ವಿನತನಾಗಿಯೆ ಪೋದ ತನ್ನಯ ಮಂದಿರಕ್ಕಾಗ ॥ ೧೧ ॥

ಇತ್ತಲೀ ಮಾರಯ್ಯ ಕಟಿಗೆಯ ।
ಹೊತ್ತು ಬರುತಿರೆ ಗೃಹಸಮೀಪದಿ ।
ಸುತ್ತ ಬೀರುವ ಹೊಲಸು ಕಂಪಿದು ಎನುತ ಹೇಯದಲಿ ॥
ಸತ್ಯಶರಣನು ತಂದುಕಟಿಗೆಯ ।
ನೆತ್ತಿ ಒಂದೆಸೆಯಲ್ಲಿ ಒರಗಿಸಿ ।
ಮತ್ತೆ ನೋಡಲು ಗೃಹವ ವನಿತೆಯು ತಂದಳಗ್ಗಣಿಯ ॥ ೧೨ ॥

ತಂದೆಯಾ ಜಲ ತರುಣಿರನ್ನಳೆ ।
ಎಂದು ಇಲ್ಲದೆ ನಮ್ಮ ಗೃಹದೊಳು ।
ಇಂದು ದುರ್ಗಂಪೇಕೆ ಎನುತಲಿ ಕೊಂಡನಗ್ಗಣಿಯ ॥
ಚಂದದಿಂ ಕರ ಚರಣ ಮುಖವನು ।
ನಿಂದು ತೊಳೆದಾಗೃಹದಿ ಮಂಡಿಸಿ ।
ಚಂದ್ರಧರ ಲಿಂಗಕ್ಕೆಯಭಿಷೇಕವನುಗೆಯ್ದಲ್ಲಿ ॥ ೧೩ ॥

ತಾನು ಭಸ್ಮವಧರಿಸಿ ಪಾಸಾಲೆ ।
ಮೌನದಿಂ ಸೆಳೆಯಲ್ಕೆ ತೂಕದಿ ।
ತಾಣವಲುಗದೆ ಇರಲು ನೋಡಿದ ನೆರೆಯ ಹೊನ್ನುಗಳ ॥
ಮಾನಿನೀಮಣಿ ಮುಂದಗಮನೆಯೆ ।
ಏನು ಚಿತ್ರವು ಇದುವೆ ಎನಗೆಯು ।
ಪ್ರಾಣನಾಯಕಿ ಪೇಳು ಮಾಜದೆ ಸಹಜದಿಂದೆನೆಗೆ ॥ ೧೪ ॥

ಮಾರವೈರಿಯ ಪ್ರಿಯನೆ ರಮಣನೆ ।
ಸಾರ ಹೃದಯನಪಾರವರ‍್ಯನೆ ।
ಚಾರುತರ ಸತ್ಯಾತ್ಮ ಮತ್ಪ್ರಾಣೇಶ ನಿಜ ಕೇಳು ॥
ಯಾರೊ ಓರ್ವನು ಈಗ ಮುಂಜೆಯೆ ।
ಸಾರಿ ತೃಷೆಯಿಂದಡಸಿ ಬಂದನು ।
ವಾರಿ ಕೇಳಲು ಇತ್ತೆ ಭಕ್ತಗೆ ಬಂದು ಮುಖದೊಳೆದ ॥ ೧೫ ॥

ವಚನ ॥ ಇಂತೀಪರಿಯಲ್ಲಿ ಕರ ಚರಣ ಶುಚಿಗೈದು, ಲಿಂಗಾಭಿಷೇಕಂಗೈದು ಅಗ್ಗಣಿಯಂ ಕೊಂಡನು. ನಾನು ಗರ್ಭ ಗೃಹದೊಳಿರ್ದೆನು. ತೃಷೆಯಂ ತೃಪ್ತಿಗೈದು ಪೇಳಿ ಪೋದನು. ಈ ತಂತ್ರವಂ ನಾನು ಅರಿತವಳಲ್ಲ ಸ್ವಾಮಿ! ಎಂದು ನಮಸ್ಕರಿಸಿ ಭಯ ಭಕ್ತಿಯಿಂ ನಿಂದಿರಲು, ಬಳಿಕಲಾತಂ ತಿಳಿದು ಕರುಣಾಸಮುದ್ರನಾದ ಬಸವರಾಜಂ ನಮ್ಮ ಬಡತನವಂ ನೋಡಿ, ಸಂತುಷ್ಟಿಪಡಲೆಂದು, ಇರಿಸಿ ಪೋದನೆಂದು ನಿಶ್ಚೈಸಿ, ಸತಿಯಳಮನವಂ ಕಾಣುವುದಕ್ಕೆ ಏನೆನ್ನುತಿರ್ದಪನು.

**ಜಂಪೆ.**

ಕಮಲಾಕ್ಷಿ ನೀ ಕೇಳು | ವಿಮಲತರವ್ಯತ್ಪನ್ನೆ |
ಯುವತಿ ಒಯ್ಯಾರಿರನ್ನೆ | ಇಂದುಮುಖಿ ಕನ್ನೆ || ೧ ||

ಎಮ್ಮ ಕಷ್ಟವ ನೋಡಿ | ತಮ್ಮ ಕರುಣದಿ ಬಸವ |
ಸುಮ್ಮನದಿ ಪೊನ್ನಿಟ್ಟು | ಶರಣ ಪೋಗಿಹನು || ೨ ||

ಕಷ್ಟ ಪರಿಹರವಾಯ್ತು | ಪತ್ನಿ ನಮಗಿನ್ನೆಂದು |
ಪಟ್ಟದರಸಿಯೆ ಮೇಲಾ | ಭರಣಗೈಸುವೆನು || ೩ ||

ರಾಜ ಶೀವಿಯೊಳಿರ್ದ | ರಾಜೀವಮುಖಿ ನೀನು |
ತೇಜವಾಗಿಯೆ ಜಿಹ್ವೆ | ರುಚಿಯ ಮಾಡಿಸುವೆ || ೪ ||

ನವೀನತರ ಭಕ್ಷ್ಯ | ಭೋಜನವ ರುಚಿಸೆಂದು |
ಯುವತಿ ಮನವರಿಯಲಿಕೆ | ಎಂದನಾ ಶರಣ || ೫ ||

ಪುರುಷನಿಂತೆಸೆ ಕೇಳ್ದು | ತರುಣಿಮಣಿ ಇಂತೆಂದಳ್ |
ತರವೆ ರಮಣನೆ ನಮಗೆ | ಪರದ್ರವ್ಯ ಸೋಂಕು || ೬ ||

ಸಕಲ ಸಂಪದವೆಲ್ಲ | ಸೌಖ್ಯಗಳ ತ್ಯಜಿಸಿದೆವು |
ಮುಕುತಿದಾಯಕ ಬಸವ | ಮುಖ ದರುಶನದಲಿ || ೭ ||

ದೋಷಗಳ ನೀಗಿ ಘನ | ಶೇಷ ಭರಣನ ಪೊಂದ |
ಲೋಸುಗವು ನಾವ್ಬಂದು | ಆಸೆ ಸಲ್ಲದೆಮಗೆ || ೮ ||

ಎಂದ ವನಿತೆಯ ದೃಢವ | ನಂದರಿತು ಮಾರಯ್ಯ |
ಇಂದುವದನೆಯ ಮೆಚ್ಚಿ | ಕೊಂಡ ಹರುಷದಲಿ || ೯ ||

ವಚನ || ಇಂತೆಂದು ಸತಿಪತಿಗಳು ಒಂದಾಗಿ ಆ ದ್ರವ್ಯದ ಪಾಸಾಲೆಯಂ ಸೋಂಕದೆ, ಈರ್ವರೂ ಕಟಿಗೆಯಲ್ಲಿ ಸಿಕ್ಕಿಸಿಕೊಂಡುಬಂದು, ಬಸವರಾಜನ ಗರ್ವವಂ ಪರಿಹರಿಸಲೋಸುಗ ಆತನರಮನೆಯ ಮುಂದೆ ಬಿಸಾಟು, ತಮ್ಮ ಗೃಹವಂ ಶುಚಿಗೈದು ತಂದ ಕಟಿಗೆಯಂ ಮಾರಿ ಭತ್ಯವಂ ತಂದುಕೊಡಲು, ಪಾಕಂಗೈವ ಸತಿಯೊಳು ಮಾರಯ್ಯನೇನೆನ್ನುತಿರ್ದನು.

**ಕಂದಪದ್ಯ.**

ಲಾಲಿಸು ನೀಲಾಹಿ ವೇಣಿ |
ಶೀಲೆಯೆ ಮಾಡು ರುಚಿಕರ ವಿವಿಧ ಭಕ್ಷ್ಯಗಳಂ ||
ಲೀಲೆಯಲಿ ಬಸವ ಪ್ರಮಥರ |
ಜಾಲವನು ಕರೆತರುವೆ ಬೇಗನೆ ನಾನೀಗಂ || ೧ ||

ಬಡವರು ನಾಂ ಧನಿಕನು ತಾಂ ।
ಪೊಡವಿಯ ಪಾಲಿಪ ಬಸವನಹಂಕೃತಿಯಿಂ ಮೇಣ್ ॥
ತಡೆಯದೆ ಪೊನ್ನಿತ್ತುದ ನಾಂ ।
ಬಿಡಿಸುವೆ ನೋಡೆಲೆ ನಾರಿಯೆ ನೀಲಕುಂತಳೆ ನೀಂ ॥ ೨ ॥

ವಚನ ॥ ಇಂತೆಂದು ಮಾರಯ್ಯಂ ಸತಿಗೆ ಪೇಳಿ, ಬಸವಣ್ಣನರಮನೆಗತ್ತ ಪ್ರಮಥರಿಗೆ ಬಿನ್ನಹಂಗೈಯ್ಯಲ್ಕೆ ಪೋಗಲು, ಇತ್ತಲಾ ಶರಣೆ ತನ್ನ ಶಿವಮುಹಸ್ತದಿಂ ಹಸ್ತಸ್ಪರುಷದಿಂ ಭತ್ಯಂಗಳಂ ಮುಟ್ಟಿ, ಶಿವಧ್ಯಾನ ಪರಳಾಗಲು, ಆ ಕ್ಷಣದಲ್ಲಿಯೇ ಭತ್ಯವೆಲ್ಲ ಷೋಡಶ ಭಕ್ಷ್ಯ ಶಾಲ್ಯನ್ನ ಸುಭೋಜನವಾಗಲು, ಇತ್ತಲಾ ಶರಣನ ಬರವಂ ಬಸವಯ್ಯಂ ತಿಳಿದು ಇದಿರ್ಬಂದು, ಕರಿದೊಯ್ದು ಸತ್ಕರಿಸಿ ಕುಳ್ಳಿರಿಸಿ, ಬಂದ ಕಾರ್ಯವೇನೆಂದು ಬೆಸಗೊಳ್ಳಲು, ಬಸವಯ್ಯಗಿಂತೆಂದಂ.

**ಏಕತಾಳ.**

ದೀನ ರಕ್ಷಕ ಕೇಳು । ಧಾರಿಣಿಗೆ ದರ್ಪಣನೆ ।
ಜ್ಞಾನ ಸಂಧಾನ ಸು । ಜ್ಞಾನಮೂರುತಿಯೆ ॥ ೧ ॥

ಆನಂದ ಮಹಿಮನೆ । ಕರುಣಸಾಗರ ಮೂರ್ತಿ ।
ನಾನೊಂದು ಶಿವಪ್ರಸ್ತ । ತೊಡಗಿಹೆನಿಂದು ॥ ೨ ॥

ಬಡವನ ಭಕ್ತಿಯ । ಬಿನ್ನಹಒಪ್ಪೆಂದು ।
ಮೃಡ ಶರಣರು ಎಲ್ಲ । ಮತ್ತೈದಬೇಕು ॥ ೩ ॥

ತ್ವರಿತದಿ ದಯಮಾಡಿ । ತಾಮಸವಿಲ್ಲದೆ ।
ಶರಣರೆಲ್ಲರು ಕೇಳಿ । ಒರೆದರೀ ಮಾತ ॥ ೪ ॥

ಬಸವಾದಿ ಪ್ರಮಥರ್ಗೆ । ಒಸೆದು ಬಿನ್ನಹಗೈದೆ ।
ವಶವೆ ನೀನೆಲ್ಲರಿಗೌ । ತಣವ ನೀಡುವರೆ ॥ ೫ ॥

ಮೂರ್ತವ ಗೈಯುವರೆ । ಮತ್ತೆಲ್ಲಿಹುದು ಸ್ಥಲ ।
ಇಂತೆಂದು ಹಾಸ್ಯವ । ಬಿಡದೆಗೈದಿದರು ॥ ೬ ॥

ಕೆಲರು ಇಂತೆಂಬರು । ಕಟಿಗೆ ಕಾಯಕನೀತ ।
ಮಲಹರನ ಶರಣರಿಗೆ । ಮನೆಯೆಂತು ಮಾಳ್ಪ ॥ ೭ ॥

ನೋಡ ಬೇಕೆನುತಲಿ । ಆಡುತ್ತ ಹಾಸ್ಯವ ।
ಮಾಡುತ್ತಲಾಶ್ಚರ್ಯ । ಮಾತನಾಡಿದರು ॥ ೮ ॥

ಕೆಲರು ಇಂತೆಂಬರು । ಕಂಡವರಾರು ಮಹಿಮೆ ।
ಛಲ ದೃಢ ಮನವೆಂತೋ । ಸರ್ವೇಶ ಬಲ್ಲ ॥ ೯ ॥

ಅಣು ರೇಣು ತೃಣ ಕಾಷ್ಠ । ದೊಳಗೆ ವ್ಯಾಪಿಸಿದ ದೇವ ।
ತ್ರಿಣಯನ ಮಹಿಮೆಯ । ತಿಳಿಯಲಳವಲ್ಲ ॥ ೧೦ ॥
ಬಂದಪೆವು ಮುಂಚೆ ತೆರಳಿ । ಎಂದು ಕಳುಹಿದರವನ ।
ಚಂದದಿಂ ನೇಮ ನಿತ್ಯ । ಶಿವಪೂಜೆಗೈದು ॥ ೧೧ ॥

ವಚನ ॥ ಇಂತೆಂದು ಬಸವರಾಜನ ಅರಮನೆಯೊಳಿರ್ದ ಲಕ್ಷದಮೇಲೆ ತೊಂಬತ್ತಾರುಸಾವಿರ ಗಣಂಗಳು, ಬಸವರಾಜ ಮುಂತಾಗಿ, ಮೋಳಿಗೆಮಾರಯ್ಯನ ಭಕ್ತಿ ಬಿನ್ನಹದರ್ಪಣಕ್ಕೆ ಬರುವಲ್ಲಿ, ಇತ್ತಲಾ ಮಾರಿದೇವಂ ಮುದವೆತ್ತಿ ಬಂದು, ತನ್ನ ನಿತ್ಯ ನೇಮವಂ ತೀರ್ಚಿ, ಶರಣ ಗಣಂಗಳು ಮೂರ್ತಗೊಳ್ಳುವುದಕ್ಕೆ ಜಾಗ ವಾಗಲು ಶಿವನಂ ಕುರಿತು ತಪಂಗೈದನದೆಂತೆನೆ.

**ತ್ರಿವುಡೆ.**

ಪದ್ಮದಾಸನ ಬಲಿದು ಸಾಕ್ಷಾತು । ರುದ್ರನೇ ತಾನೆಂಬಬಗೆಯಲಿ ।
ಹೊದ್ದು ಮನ ದೃಢವೆರಸಿಗೈದನು – ಬದ್ಧ ಮಾರ್ಗದಲಿ ॥ ೧ ॥
ಕುಮುದ ಸಖನನು ಸೂಡಿದಭವನೆ । ಕುಮುದ ಸಖ ಸುತೆ ವರನನುರುಹಿದ
ಕಮಲನೇತ್ರನ ಪೂಜೆಗೊಲಿದನೆ – ಕರ್ತೃ ಜಗಧೀಶ ॥ ೨ ॥
ತ್ರಾಹಿ ಗಿರಿಜಾನಾಥ ಶಂಭುವೆ । ತ್ರಾಹಿ ತ್ರಿಪುರಾರಿ ಕಾಲ ಭಂಜನ ।
ತ್ರಾಹಿ ಭಕ್ತರಬಂಧು ಕರುಣಾ – ಸಿಂಧು ದಯವಾಗು ॥ ೩ ॥
ನೀಲಗರಳನೆ ನಿಗಮಗೋಚರ । ಲೀಲೆಯಜಶಿರ ಪಾತ್ರ ಸುಚರಿತ ।
ಭಾಳಲೋಚನ ಭರ್ಗ ಪರಶಿವ – ಕರುಣಿಸೊಂದನುವ ॥ ೪ ॥
ನಿನ್ನ ಪ್ರಮಥರ ಪೂಜೆಯರ್ಪಣ । ಕಿನ್ನು ನೀಡುವೆನೆಂದು ಪ್ರೀತಿಸಿ ।
ನನ್ನಿಯಿಂ ಕರತಂದೆಯವರಿಗೆ – ಇನ್ನು ಸ್ಥಲ ತೋರು ॥ ೫ ॥
ಕುಂದು ಕೊರತೆಯು ಘನತೆ ಕೀರ್ತಿಯು । ತಂದೆ ನಿನ್ನದು ಸ್ಥಲವ ಕಾಣಿಸು
ಎಂದು ಶರಣನು ಬೇಡಿಕೊಳ್ಳಲು – ಇಂದುಧರನಾಗ ॥ ೬ ॥
ಕ್ಷಣದಿ ತೋರ್ದನು ಹೇಮ ರತುನದ । ಘನತರದ ಕಂಬಗಳು ತೊಲೆ ಲೋವೆ ।
ಮಣಿಮಯದ ಯೋಜನದ ಅಗಲದ – ಅರಮನೆಯನಾಗ ॥ ೭ ॥
ಪಟ್ಟೆಪಟ್ಟಾವಳಿಯ ಗದ್ದುಗೆ । ಅಟ್ಟಹಾಸದಿ ಆಯ್ತು ಕ್ಷಣದೊಳು ।
ನಿಷ್ಠೆ ಶರಣನು ನೋಡಿ ಸಂತಸ – ಪಟ್ಟನಾಗವನು ॥ ೮ ॥
ಬಳಿಕ ಹರಗಣರಿಂಗೆ ಅಗ್ಗಣಿ । ತೊಳೆಯಕೊಡುವರೆ ಪಾತ್ರೆಯಿಲ್ಲಿವು ।
ಜಲವು ಮಿಗೆ ಇಲ್ಲದೊಂದು ಹಸ್ತ ಕ – ಮಂಡಲವಿಹುದು ॥ ೯ ॥

ವಚನ ॥ ಇಂತೀಪರಿಯಲ್ಲಿ ಬಂದ ಶಿವಗಣಂಗಳಿಗೆ ಹಸ್ತ ಪಾದಕ್ಕೆ ಅಗ್ಗಣಿಯ ಕೊಡಲಿಕೆ ಹಿರಿಯ ನದಿಗಳಂ ತಂದು ಅಡ್ಡಗಟ್ಟಲು, ಸಾಲದಿರುವಂತಹ ಅಗ್ಗಣಿಗೆ ಕ್ರಿಯಾಶಕ್ತಿಯಾದ ಮಹಾ ಗಂಗೆಯಂ ಸ್ತುತಿಸಿದನದೆಂತೆನೆ.

**ವೃತ್ತ.**

ಆದಿಶಕ್ತಿಯೆ ಮೂಲಾಧಾರೆ ಗಂಗೆ ಅಂಬಿಕೆ ಮಾತೆಯೆ ।
ನಾದ ಬಿಂದು ಕಳಾ ಚೈತನ್ಯೆ ಸರ್ವ ಜೀವ ಸುಧಾರೆಯೆ ॥
ಮೋದದಿಂ ಸಲಹೆನ್ನಂ ಧೀರೆ ದೇವಿ ಚಿನ್ಮಯ ಶಕ್ತಿಯೆ ।
ನಾದದ ಪ್ರಣವ ಸಂತಾನೆ ಪಾದ ಪದ್ಮಕೆ ವಂದಿಪೆಂ ॥ ೧ ॥

**ತ್ರಿವುಡೆ.**

ಶರಣು ರವಿ ಶಶಿ ಬಿಂಬಮಂಡಲೆ । ಶರಣು ತ್ರೈಜಗ ಪರಮ ಚೇತನೆ ।
ಶರಣು ತಣ್ಪಿನ ಗುಣ ದಯಾಕರೆ – ಸೊಬಗಿನ ಸೋನೇ ॥ ೧ ॥
ಉರಗವೇಣಿಯೆ ಉಮೆಯ ಅನುಜಳೆ । ಕರುಣಸಾಗರ ಧವಲಕನ್ನೆಯೆ ।
ಧರೆಗೆ ಗಗನಕೆ ಉಭಯ ಮಾತೃಕೆ – ಹರನ ವರ ರಾಣಿ ॥ ೨ ॥
ಶರಣ ಗಣರಿಗೆ ಬಿನ್ನಹವಗೈದಿಹೆ । ಉರೆಬಡವನಾ ನೋಡು ಬೇಗದಿ ।
ಪರಮಪಾವನೆ ಇಷ್ಟು ಗಣರಿಗೆ – ವಾರಿ ತುಂಬಿಸಮ್ಮ ॥ ೩ ॥
ಕರ ಕಮಂಡಲವೊಂದರೊಳು ನೀ । ನೆರೆ ನೆಲಸು ಗಂಗೆಬೇಗದಿ ।
ತರಳ ನಾ ನಿನ್ನ ಶಿಶುವು ತಾಯಿಯೆ – ಕರುಣವಿಡು ಶರಣು ॥ ೪ ॥

ವಚನ ॥ ಇಂತೀ ಸ್ತೋತ್ರದಿಂದ ಗಂಗಾದೇವಿಯಂ ಮೆಚ್ಚಿಸಿ, ಕರಕಮಂಡಲ ಮೊಳಗೆ ಗಂಗೆಯಂ ನೆಲೆಗೊಳಿಸಿ, ಅದಂ ಗದ್ದುಗೆಯ ಮೇಲಿಟ್ಟು, ಧೂಪ ದೀಪದಿಂದ ಅರ್ಚಿಸುವನಿತರೊಳು, ಬಸವಾದಿ ಪ್ರಥಮರು ಬಂದರದೆಂತೆನೆ.

**ಕಂದಪದ್ಯ.**

ಸತಿ ಪತಿಯು ಕೂಡಿ ಬೇಗದಿ ।
ಹಿತದಿಂ ಶರಣರಿಗೆ ಕರದಿ ಪಾತ್ರೆಯ ಪಿಡಿದು ॥
ಸತತಂ ಮೊಗೆ ಮೊಗದಿತ್ತರು ।
ಅತಿಶಯ ಸಂತಸದಿ ಶರಣು ಶರಣೆನುತಾಗಂ ॥ ೧ ॥

**ಜಂಪೆ.**

ಹಸ್ತ ಚೆಂಬಿನೊಳಾಗ । ಅಗ್ಗಣಿಯ ಕೊಡೆ ಗಣರು ।
ಮೊತ್ತದಿಂ ಕೊಂಡರುರೆ । ಅಗ್ಗಣಿಯನಾಗ ॥ ೧ ॥

ತೊಳೆದು ಕರ ಚರಣಗಳ । ಒಳ ಪೊಗಲು ಗಣರಾಗ ।
ತೊಳೆದ ವಾರಿಯು ಹರಿಯೆ । ಹಿರಿಯ ನದಿಯಾಗಿ ॥ ೨ ॥

ಬಸವಾದಿ ಪ್ರಮಥರುಗ । ಳಸಮರೆಲ್ಲರುಕೊಂಡು ।
ಎಸೆವುತಿಹ ಕಮಂಡಲದೊ । ಳಂದು ತುಂಬಿರಲು ॥ ೩ ॥

ಹೊರಗೆ ಸೊಪ್ಪಿನ ಗುಡಿಸ । ಲೊಳಗೆ ಹೇಮದ ಗೃಹವು ।
ಶರಣರೆಲ್ಲರು ಪೊಕ್ಕು । ಸೊಗಸು ತಾಳಿದರು ॥ ೪ ॥

ಪಟ್ಟೆ ಮಡಿ ಗದ್ದುಗೆಯೊ । ಳಷ್ಟು ಮೂರ್ತವಮಾಡಿ ।
ಅಷ್ಟದೆಸೆ ನೋಡುತಲಿ । ಅಷ್ಟು ಪೊಗಳಿದರು ॥ ೫ ॥

ಇಷ್ಟು ಗಣರಿಂಗೆ ದಂ । ಪತಿಗಳತಿ ಭಕ್ತಿಯಲಿ ।
ನಿಷ್ಠೆಯಿಂದಲಿ ಲಿಂಗ ಪಾ । ದಾರ್ಚನೆಯಗೈದು ॥ ೬ ॥

ಬಳಿಕಲೆಲ್ಲರಿಗಿತ್ತ । ತಟ್ಟೆಗಳ ತಕ್ಷಣದಿ ।
ಚೆಲುವಿಂದ ನಮಸ್ಕರಿಸಿ । ಸಲೆಯಾಜ್ಞೆಯಿಂದ ॥ ೭ ॥

ನೀಡಿದರು ಮೇಲ್ತರದ । ಶಾಕ ಪಾಕಾದಿಗಳ ।
ರೂಢಿಗಚ್ಚರಿಯಾದ । ನೂತನದ ರಸವ ॥ ೮ ॥

ನೋಳಿಗೆಯಮಾರಯ್ಯ । ಮುದದಿಂದಲೆರಗಿದನು ।
ಭಾಳಲೋಚನ ಗಣರೆ । ಭಕ್ಷ್ಯ ಭೋಜ್ಯಗಳ ॥ ೯ ॥

ಲಿಂಗಕರ್ಪಿಸಿ ತೃಪ್ತಿ । ಸಂಗ ಸುಖಿಯಾಗೆಂದು ।
ಅಂಗ ಪುಳಕದಿ ಶರಣ । ಅಂಗೈಸಿ ಬಿದ್ದ ॥ ೧೦ ॥

ವಚನ ॥ ಇಂತೆಂದು ಮಣಿಯಲಿಕೆ ಶಿವಗಣಂಗಳು ಲಿಂಗಾರ್ಪಿತಂಗೈದು, ಅವರವರ ಮನದಿಚ್ಛೆಯಂ ಸವಿದು ತೃಪ್ತರಾಗಿ, ಈ ಮಾರಯ್ಯನಂ ಪಲವಿಧದಿಂದ ನುತಿಸಿ ಕೊಂಡಾಡುತ್ತಿರುವ ಗಣಂಗಳಿಗೆ ಈ ಮೋಳಿಗಯ್ಯನಿಂತೆಂದಂ.

**ಏಕತಾಳ –ಅರ್ಧರೇಕು-**

ಇಂದುಧರನ ಶರಣ – ಮಹಿಮರೆ ಕೇಳಿ ।
ತಂದೆ ಬಸವಯ್ಯ ಕರುಣ – ತಾಳಿ ನಮ್ಮೊಳಗೆ ॥ ೧ ॥

ನಮ್ಮ ಬಡತನ ಕಂಡು – ತಮ್ಮ ಮನೆ ಹೊನ್ನ ।
ತಂದಿತ್ತ ನಾವು ಬದುಕ – ಲೆಂದು ಕರುಣದಲಿ ॥ ೨ ॥

ಅದರ ಮೂಲದಿ ಶಿವಾ – ರಾಧನೆಗೈದೆ ।
ಕಟಿಗೆ ಮಾರುವನಿಗಿಂಥ – ಅಟ್ಟಹಾಸವುಂಟೆ ॥ ೩ ॥

ಎಂದು ಎದೆಗೀಟೆಯ – ಬಲಿಯೆ ಮಾರಯ್ಯ ।
ಕೇಳುತ್ತ ನೊಂದನು – ಕಡು ದೈನ್ಯತೆಯೊಳು ॥ ೪ ॥

ವಚನ ॥ ಇಂತೆಂದು ಮಾರಯ್ಯಜರಿಯಲು, ಬಸವಯ್ಯ ನೊಂದು ಗರ್ವಭಂಗನಾಗಿ, ಶರಣರ ಸಭಾಸ್ಥಾನದಲ್ಲಿ ದೈನ್ಯದಿಂ ಕಿಂಕುರ್ವಾಣ ಯುಕ್ತನಾಗಿ, ಬಸವಯ್ಯಂ ಮೋಳಿಗಯ್ಯಂಗೆ ಮಣಿದು ಇಂತೆಂದಂ.

**ತ್ಯಾಗಮಾನ – ಅಟತಾಳ.**

ಹರನ ಮೋಹದ ಶರಣ ಮಹಿಮ ಎಲೆ ದೇ – ವ – ನಿಮ್ಮ–
ತರಳ ನಾನು ತಪ್ಪ ಕ್ಷಮಿಸು ಎಲೆ ದೇ – ವ ॥ ೧ ॥

ಮರುಳ ಮತ್ತ ಜ್ಞಾನಶೂನ್ಯ ಎಲೆ ದೇ – ವ – ನಿಮ್ಮ–
ಚರಣ ಮಹಿಮೆ ಅರಿಯೆ ನಾನು ಎಲೆ ದೇ – ವ ॥ ೨ ॥

ಕಲುಷ ಕತ್ತಲೆ ಮುಸುಕಿತೆನ್ನ ಎಲೆ ದೇ – ವ – ನಿಮ್ಮ–
ಬಲುಮೆ ಮಹಿಮೆ ಅರಿಯೆ ನಾನು ಎಲೆ ದೇ – ವ ॥ ೩ ॥

ಸೋಹಂ ಭ್ರಮೆ ನನ್ನ ಗರ್ವ ಎಲೆ ದೇ – ವ – ನಾನು –
ಈಗ ನೀಗಿ ಶುಚಿಯಾಸಾದೆ ಎಲೆ ದೇ – ವ ॥ ೪ ॥

ಹಿರಿಯರುಗಳು ನೀವು ನನ್ನ ಎಲೆ ದೇ – ವ – ಇಂತು –
ಜರಿದು ಬುದ್ಧಿ ಕಲಿಸಿರೆನಗೆ ಎಲೆ ದೇ – ವ ॥ ೫ ॥

ನಾಡಾಡಿ ಎಂದೆಣಿಸಿದೆ ನಾನು ಎಲೆ ದೇ – ವ – ಈಗ –
ರೂಢಿಗಚ್ಚರಿ ಮಾಡಿದೆ ನೀನು ಎಲೆ ದೇ – ವ ॥ ೬ ॥

ಪರುಷ ಸೀಸವ ಸೋಂಕಿದಂತೆ ಎಲೆ ದೇ – ವ – ಅದು –
ಭರದಿ ಕನಕವಾದ ತೆರದಿ ಎಲೆ ದೇ – ವ ॥ ೭ ॥

ಎನ್ನ ಮನದ ಅಹಂಕೃತಿ ಕಳೆದೆ ಎಲೆ ದೇ – ವ – ನೀನು –
ಎನ್ನ ತಪ್ಪ ಕ್ಷಮಿಸೆಂದೆರಗೆ ಬಸವ – ಯ್ಯ ॥ ೮ ॥

ವಚನ ॥ ಇಂತೆಂದು ಬಸವಯ್ಯ ದೈನ್ಯತೆಯಿಂದೆರಗಲು, ಮನ್ನಿಸಿ ಆ ಶರಣರ ಸಭಾ ಮಧ್ಯದಲ್ಲಿ ಎತ್ತಿ ಬಸವರಾಜನೆ! ಏರಿ ನೀರಂ ಕುಡಿಯುತಿರೆ ಬಿಡಿಸುವವರಾರು? ಮಹಾ ಮೇರು ನಡೆದು ಬರೆ ಪಥವಿಂಬುಗೊಡುವವರಾರು? ಅರಿವುಳ್ಳವ ಮರೆದೊಡೆ ಅರಿವ ತಿಳಿಸುವವರಿನ್ನುಂಟೆ? ಭಕ್ತಿಯಂಗೈದು, ಭರ್ಗದೇವನ ಒಲಿಸುವ ಘನತೆ ಮಹಾ ಹೆಚ್ಚಿಗೆಯಾದ್ದರಿಂದ, ನಿನ್ನ ಗುರು ಸಂಗಮೇಶ್ವರನ ಅಪ್ಪಣೆಯಿಂ ತಿಳಿದುಕೊ, ಸೋಹಂ ಭ್ರಮೆ ಭಕ್ತಿಗೆ ಕುಂದು ಅತಿ ಕಿಂಕರತ್ವಮಿರಲೆಂದು ಬೋಧಿಸಿ, ಬಳಿಕ ಶಿವಶರಣ ಗಣಂಗಳಿಗೆ ದಕ್ಷಿಣೆ ತಾಂಬೂಲಗಳಂ ಕೊಡುತಿರ್ದನದೆಂತೆನೆ.

**ಏಕತಾಳ.**

ದಿನಚರಿ ಕಟಿಗೆಯ । ತರುವಂಥ ಹೊರೆಯೊಳು ।
ಘನಮುಖಿ ಕಟಿಗೆಯ । ಗುಡ್ಡೆಗೈದಿರುವ ॥ ೧ ॥
ಕಟಿಗೆ ಎಲ್ಲಕೆ ಶಿವ । ಗಣ ಚರಣದುದಕವ ।
ಪರಿಸುತ್ತ ಹರಮಂತ್ರ । ಬಿಟ್ಟನೆಲ್ಲಕ್ಕೆ ॥ ೨ ॥
ಕಡೆಯಾಗಿ ಅಪರಂಜಿ । ಕಟ್ಟಿಗೆಯಾದವು ।
ಮೃಡನಶರಣರಿಗೆಲ್ಲ । ವೀಳ್ಯವಂ ಕೊಟ್ಟು ॥ ೩ ॥
ಕಟಿಗೆ ದಕ್ಷಣೆಯಿತ್ತು । ಕಂತುಹರ ಶರಣರ್ಗೆ ।
ಮಠದಿಂದ ಶರಣೆಂದ । ಮಹಿಮಾತ್ಮರ್ಗೆಲ್ಲ ॥ ೪ ॥
ಐದುಪಂಚೇರು ತೂಕ । ಒಂದೊಂದು ಕಟಿಗೆಯ ।
ಐದುಮುಖನ ಶರಣ । ರ್ಗಿತ್ತ ಮಾರಯ್ಯ ॥ ೫ ॥
ನೋಡಿದ ಪ್ರಮಥರು । ಆಡಿದರ್ಶಿರವನ ।
ಲ್ಲಾಡಿದರ್ಕೊಂಡಾಡಿ ಮಾ । ರಯ್ಯನ ಪೊಗಳಿದರು ॥ ೬ ॥
ಬಸವಣ್ಣ ಭಕ್ತಿಯಿಂ । ಶಶಿಧರನಿವನೆಂದು ।
ಪೊಸತು ಕೊಂಡಾಡುತ್ತ । ಪೋದನರಮನೆಗೆ ॥ ೭ ॥

**ಕಂದಪದ್ಯ.**

ಇದು ಮೋಳಿಗಯ್ಯಗಳ ಪದು ।
ಳದ ಭಕ್ತಿ ಮಹತ್ತಂ ಪಠಿಸುವ ಸುಜನರ್ಗಂ ॥
ಮದನಹರ ಕರುಣದಿಂ ಶಿವ ।
ಪದವಿಯನಿತ್ತು ಪೊರೆವನಿದು ನಿಜ ಸಿದ್ಧಾಂತಂ ॥ ೧ ॥

ಇಂತೀ ಪದ್ಯಗಳು ೧೦೭

**ಅಂತು ಸಂಧಿ ೯ ಕ್ಕಂ ಸಂಪೂರ್ಣ ಗಣನೆ – ೨೪೯೧ ಕ್ಕಂ ಮಂಗಳಮಹಾ**

**ಶ್ರೀ ಶ್ರೀ ಶ್ರೀ ಶ್ರೀ ಶ್ರೀ**



## ಹತ್ತನೆಯ ಸಂಧಿ

# ನುಲಿಯ ಚಂದಯ್ಯನ ಕಥೆ



**ಕಂದಪದ್ಯ.**

ಗಗನಾಂಗಣದೊಳ್ಚರಿಪನ ।
ಮಗನಿಗೆ ತಾನೊಲಿದು ತನ್ನ ರೌದ್ರದ ರೂಪಂ ॥
ಮಿಗೆ ಬೇಡಲಿತ್ತ ಶ್ರೀ ಕೈಲಾಸ ।
ದಗಜೇಶನ ಪದನುತಿಸುತಲೀ ಕೃತಿ ಪೇಳ್ವೆಂ ॥ ೧ ॥

ಸೂ ॥ ಶರಣ ನುಲಿಯ ಚಂದಯ್ಯನ ।
ಕರದಿಷ್ಟಲಿಂಗ ಸರಸದಿ ನೀರೊಳು ಬೀಳಲ್ ॥
ಭರದಲಿ ತಾನೇ ಬೆದರುತ ।
ಲರಸಿ ನುಲಿಯ ಬೆಲೆಗೆಯ್ಯೆ ಗಣರನುಗೆಯ್ದರ್ ॥ ೨ ॥

**ದ್ವಿಪದಿ.**

ಪರಶಿವನು ಕೈಲಾಸ ಪುರಿಯೊಳಿರ್ದಂತೆ ।
ಧರೆಯೊಳಗೆ ಕಲ್ಯಾಣ ದರ್ಪಣದಂತೆ ॥ ೧ ॥
ಶರಣರಾ ಮಧ್ಯದಲಿ ಶರಣ ಬಸವಯ್ಯ ।
ಪರಮ ವೈಭವದಿಂದ ಪರುಠವಿಸಿ ಇರಲು ॥ ೨ ॥
ಪಾರವರಿಯದ ಪರಮ ವೀರ ಸೂವ್ರತನು ।
ಮಾರಾರಿ ಮನಮೆಚ್ಚು ಮಹಿಮಾತ್ಮ ಶರಣ ॥ ೩ ॥
ನುಲಿಯ ಚಂದಯ್ಯಗಳು ನವೀನ ತರವಾಗಿ ।
ಕಳೆಧರನ ಶರಣರಿಗೆ ಕಡುಭಕ್ತಿಗೈವ ॥ ೪ ॥
ಲಿಂಗನಿಷ್ಠಾಪರನು ನೀತಿಕೋವಿದನು ।
ಸಂಗಸುಖ ಸತಿಯು ಸುಗ್ಗವ್ವೆಯೆಂದಿರಲು ॥ ೫ ॥
ತನುಬೆಮರ ಕಾಯಕವ ತಾನುಗೈಯ್ಯುವನು ।
ವಿನಯದಿಂ ಸದ್ಭಕ್ತ ತೃಪ್ತಿಪಡಿಸುವನು ॥ ೬ ॥

ದಿನಚರಿಯ ತನ್ನ ಕ್ರಿಯ ನೇಮುವನು ನಡೆಸಿ ।
ತ್ರಿನಯನ ಧ್ಯಾನದೊಳು ತಾ ಪಿಡಿದು ಶಸ್ತ್ರ || ೭ ||

ಬಂದು ವಿಪಿನಕೆ ಶರಣ ಬೇಗ ವನಸತಿಯು
ನಿಂದು ರಮಣೀಯತೆಯನುರೆ ನೋಡುತಲ್ಲಿ || ೮ ||

ಈಶ್ವರಾಜ್ಞೆಯೊಳಿರ್ಪ ಹೇ ವನ ಸುಮಾತೆ ।
ಆಶ್ಚರ್ಯಕಾಧಾರ ಉಲ್ಲಾಸ ಕೊಡುವ || ೯ ||

ಸರ್ವ ಜೀವಕುಪಕಾರಿ ಸರಸಿಜ ಮುಖಿಯೆ ।
ಉರ್ವಿಯಾರಣ್ಯ ಗೋಪ್ಯ ಘನ ಶೃಂಗಾರಿ || ೧೦ ||

ತಳಿರಿಂದ ಮೊಗರಿಂದ ಕಾಯಿ ಪಣ್ಣಿಂದ ।
ಚೆಲುವೆಸೆವ ಪುಷ್ಪ ಗಂಧದ ಪರಿಮಳಗಳಿಂದ || ೧೧ ||

ಪುಷ್ಪದಿಂದಲಿ ಶಿವನ ಪೂಜಿಸುವ ನಾರಿ ।
ಸರ್ಪಭೂಷಣಗೆ ಸುಧೆಯರ್ಪಿಸುವ ನಾರಿ || ೧೨ ||

ಕಾಯಿ ಫಲವರ್ಪಿಸುವ ಕಾಯಜ ರಿಪುವಿಗೆ ।
ಆಯತಾಕ್ಷಿಯೆ ಕೇಳು ಎನ್ನ ವ್ರತವನ್ನು || ೧೩ ||

ಶಿವನಿಗರ್ಪಣ ನಿಮಿತ್ತ ಸಾರ್ದೆ ನಿನ್ನೆಡೆಗೆ ।
ಕಮಲಮುಖಿ ನಾರಿ ನಾ ತೊಗಟೆಯನು ಕೊಳ್ವೆ || ೧೪ ||

ಅಂಗ ನಿಮಿತ್ತದಿ ನಿನ್ನ ಭಂಗದಿಂ ತರಿಯೆ ।
ಸಂಘಟಿಪುದೆನಗೆ ಅದು ಸಲೆ ದೋಷವೆಂದು || ೧೫ ||

ಎಂದು ಪೇಳುತಲಿ ಆ ವನ ದೇವಿಗವನು ।
ಚಂದದಿಂ ನಾರುಳ್ಳ ಗಿಡಗಳಂ ತರಿದು || ೧೬ ||

ನಾರನೆತ್ತಿ ಶಿಂಬಿ ಹಗ್ಗವ ಮಾಡುತವನು ।
ಭೋರನೆ ತಂದದನು ಬೇಗ ಹುರಿಗೂಡಿ || ೧೭ ||

ಕಲ್ಯಾಣ ಪಟ್ಟಣದ ಕೇರಿ ಪೇಟೆಯೊಳು ।
ನಿಲ್ಲದೆಲ್ಲವನಾಗ ವಿಕ್ರಯಂಗೈದು || ೧೮ ||

ಭತ್ಯವಂ ತಂದದನು ಸತಿಯಳಿಗೆ ಇತ್ತು ।
ತವೆ ಪಾಕವಂಗೈದು ಶಿವನ ಗಣರಿಂಗೆ || ೧೯ ||

ಸಲಿಸುತಲಿ ನೂರಕ್ಕೆ ಚಂದಯ್ಯ ಮಹಿಮ ।
ಇಂತು ಕಾಯಕಗೈವ ಕಂತುಹರ ಮೆಚ್ಚೆ || ೨೦ ||

ವಚನ ॥ ಈ ರೀತಿಯಲ್ಲಿ ನುಲಿಯ ಚಂದಯ್ಯಗಳು ಕಾಯಕಂಗೈದು ಇರುವಲ್ಲಿ, ಒಂದಾನೊಂದುದಿನ ವನಾಂತರದಲ್ಲಿ ನಾರೆತ್ತಿ ಶಿಂಬಿಯಂ ಸುತ್ತಿಕೊಂಡು ಬರುತ್ತಿರಲು, ತೃಷೆಯಡಸಿ ನಡೆದು ಬರೆ, ಮುಂದೆ ಮಾರ್ಗದಲ್ಲಿ ಅತಿ ನೂತನದ ಕಲ್ಯಾಣಿಯಿರಲು, ಅಲ್ಲಿಗೆ ಇಳಿದು ಮುಖ ಮಜ್ಜನಗೈದು ವಿಭೂತಿ ಧಾರಣನಾಗಿ, ಲಿಂಗಾಭಿಷೇಕವಂಗೈದು ಲಿಂಗಕ್ಕೆ ಅಗ್ಗಣಿಯನರ್ಪಿಸಿ, ಬಳಿಕ ತಾನು ತೆಗೆದುಕೊಳ್ಳುತ್ತಿರಲಿಕೆ ಲಿಂಗಯ್ಯ ಲೀಲಾ ವಿನೋದವಾಗಿ ಎಂತುಗೈದನದೆಂತೆನೆ.

**ಕೊಂಚ ಜಂಪೆ.**

ನುಲಿಯ ಚಂದಯ್ಯ ಶಿವಶರಣ – ಅವನ । ಸೆಜ್ಜೆಯೊಳಗಿರ್ಪ ಪ್ರಾಣಲಿಂಗಯ್ಯ।
ಅಂಗದೊಳು ಸರಸವಾಡಲಿಕೆ – ಬೇಗ । ಲಿಂಗವಿಳಿದನು ಕೊಳದ ಒಳಗೆ ॥ ೧ ॥

ನೋಡಲೀತನ ಭಕ್ತಿ ರತಿಯ – ನೆಂದು । ಆಡಿ ಮುಳುಗಿದ ಕೊಳದೊಳಂದು ।
ನೋಡಿದನು ಶರಣ ಚಂದಯ್ಯ– ಲಿಂಗ । ಓಡಿ ಕೊಳದೊಳು ನಿಂದ ಬಗೆಯ ॥

ಏಕಯ್ಯ ಮತ್ಪ್ರಾಣನಾಥ – ಇಳಿದೆ । ಪ್ರೀತಿಸದೆ ಇರಲಿಕೆನ್ನಲ್ಲಿ ॥
ನೀತಿ ಏನಯ್ಯ ಗುರುವಾಜ್ಞೆ – ತೊರೆದು । ಸೂತ್ರವಗಲಿದೆ ನಿನ್ನ ನೀನೆ ॥ ೩ ॥

ಎನ್ನೊಳೇನವಗುಣವ ಕಂಡೆ – ಈಗ । ಎನ್ನೊಳುಸುರದೆ ನಿಂತೆ ಕೊಳದಿ ॥

ವಚನ ॥ ಇಂತೆಂದು ಚಂದಯ್ಯಂ ಆ ಕೊಳದ ಗಂಗೆಯಂ ಸಾಕ್ಷಿಯಂ ಮಾಡಿ ಗಂಗೆಗಿಂತೆಂದಂ.

**ಜಂಪೆ.**

ಎನ್ನ ಪ್ರಾಣಾಧಾರಿ । ಎನ್ನಾಪ್ತ ಪತಿಯೆನ್ನ
ಎನ್ನೊಡನೆ ತಾ ಮುನಿದು । ತಪ್ಪಿಲ್ಲದೆ ಬರಿದೆ ॥ ೧ ॥

ಬಂದ ನಿನ್ನೆಡೆಯಲ್ಲಿ । ಭ್ರಮರ ಕುಂತಳೆ ಗಂಗೆ ॥
ಇಂದುಮುಖಿ ನೀನವಗೆ । ಎಲ್ಲವಂತಿಳುಹು ॥ ೨ ॥

ನೀತಿ ಜ್ಞಾನವ ಶೀಲ । ವ್ರತದ ವರ್ಗದ ನಡೆಯು ।
ನೀತಿಳುಹಿ ಕ್ಷಣದೊಳಗೆ । ನನಗೊಲಿಸು ತರುಣಿ । ೩ ॥

ಇಂದೆನ್ನ ಪತಿ ಸೆಜ್ಜೆ । ಯನ್ನುಳಿದಗಲಿದನಲ್ಲ ।
ಇಂದೇಕೆ ಈ ಗುಣವು । ಇವಗೆ ಲಭಿಸಿತ್ತು ॥ ೪ ॥

ಕ್ಷಣ ಮಾತ್ರಲಿವನ ನೆನೆ । ದಲ್ಲದಿಲ್ಲವಿನ್ನೊಂದ ।
ನೆನೆವ ಮನವೆನಗಿಲ್ಲ । ವನಜಾಕ್ಷಿ ಕೇಳು ॥ ೫ ॥

ನನ್ನ ತಪ್ಪನು ನನಗೆ । ನಿನ್ನ ನ್ಯಾಯದಿ ತೋರು ।
ಇನ್ನಗಲುವದು ನೀತಿ । ಇದು ತರವೆ ಇವಗೆ ॥ ೬ ॥

ನಮ್ಮ ಶರಣರು ಕೇಳಿ । ನಳಿನಾಕ್ಷಿ ಇನ್ನಿವನ ।
ಸುಮ್ಮನೇ ಬಿಡುವರೆ । ಸೂತ್ರವಳಿಯಲೆನಗೆ ॥ ೭ ॥

ಮುನ್ನ ಲಿಂಗಕೆ ಇತ್ತು । ನನ್ನ ನೇಮದಿ ತೃಷೆಯ ।
ಇನ್ನು ತೃಪ್ತಿಯಗೈದೆ । ತಾನೇಕೆ ಪೋದ ॥ ೮ ॥

ಬಾರೊ ಅಂಗಜಹರನೆ । ಬಾರೆನ್ನ ಮನಪ್ರೀಯ ।
ಏರುತಿದೆ ಹೊತ್ತುನುಲಿ । ಮಾರಬೇಕಿನ್ನು ॥ ೯ ॥

ಮಾರಾರಿಗಣರಿಂಗೆ । ಮತ್ತೆ ವ್ರತ ದಾಸೋಹ ।
ವೀರವ್ರತ ನಡೆಸಲ್ಕೆ । ಹೋರಾಟ ಬೇಡ ॥ ೧೦ ॥

ವಚನ ॥ ಇಂತೆಂದು ನಾನಾವಿಧ ಭಕ್ತಿಯಿಂ ಗಂಗೆಯಮುಂದೆ ಕರೆಯಲು, ಲಿಂಗಯ್ಯ ಬಾರದಿರಲು ಗಂಗೆಗೆ ಸಾಕ್ಷಿಯನ್ನಿಟ್ಟು ವೈರವಂ ಬಲಿದು, ಇನ್ನು ಎನ್ನ ಅಂಗಳದ ಎಲ್ಲೆಯಂ ಮೆಟ್ಟಲೀಸೆನೆಂದು, ಲಿಂಗಮಂ ಬಿಟ್ಟು ಚಂದಯ್ಯ ಜಂಗಮ ದಾಸೋಹದಲ್ಲೇ ಲಿಂಗವುಂಟೆಂದು ಪೋಗುತಿರ್ದಪನದೆಂತನೆ.

**ತ್ರಿವುಡೆ.**

ಲಿಂಗವನು ತೊರೆದೈದಿ ಚಂದಯ್ಯ । ಅಂಗಳಕೆ ತಾ ಬಂದು ನಾರನು ।
ಹಿಂಗಡೆಯ ಜಗುಲಿಯೊಳು ಇಟ್ಟಿರೆ–ವಿಶ್ರಮಿಸಿಕೊಳಲು ॥ ೧ ॥

ಇತ್ತಲೀ ಕೊಳದಿಂದ ಲಿಂಗಯ್ಯ । ಮತ್ತೆ ಎದ್ದನು ಜಂಗಮನೆಯಾಗಿ ।
ಎತ್ತ ನೋಡಲು ಕಾಣದಿರೆ ಚಂ – ದಯ್ಯಗಳನು ॥ ೨ ॥

ಹಾಸ್ಯವಾಡಿದೆ ನಾನು ಮಹಘನ । ದ್ವೇಷವಾಯಿತು ಇನ್ನು ಎನುತಲಿ ।
ಘಾಸಿಯಾಗಿಯೆ ಬಂದನಂಜುತ – ಲೇಲೆ ಲಿಂಗಯ್ಯ ॥ ೩ ॥

ಬಂದು ಅಂಗಳ ಪೊಗುವಡಳುಕುತ । ಕೊಂದಪನೊ ಎಂದೆನುತ ಮರೆ ಮರೆ ।
ಗೊಂಡು ಹಿಮ್ಮುಖ ಜಗುಲಿ ಏರಿದ – ನಂದು ಲಿಂಗಯ್ಯ ॥ ೪ ॥

ನಾರ ಹೊಸೆದದ ಹಗ್ಗ ಹೂಡಿದ । ಸಾರ ಹೃದಯನ ಕರುಣ ಪಡೆವರೆ ।
ಸಾರಿದನು ಪೇಟೆಯೊಳು ಹಗ್ಗವ – ಮಾರುತೈದಿದನು ॥ ೫ ॥

ನೋಡಿದರು ಜನರುಗಳು ಹಗ್ಗವ । ಆಡಿದರು ಹಸನಲ್ಲವೆನ್ನುತ ।
ಬೇಡವೆಂದರು ಎಲ್ಲಿ ತೋರ್ದಡೆ – ಆಡಲೇನು ॥ ೬ ॥

ತಿರುಗಿ ಬಳಲಿದ ಲಿಂಗದೇವನು । ಭರದಿ ಬಸವನ ಅರಮನೆಯಗಾಗಿ ।
ತರುತ ಸಾರಿದ ಹಗ್ಗ ಕೊಳ್ವರ – ಕಾಣೆ ನಾನೆನುತ ॥ ೭ ॥

ಅನಿತರೊಳು ಬಸವೇಶ ತನ್ನಯ । ಅನುಭವದ ಮಂಟಪದಲಿರ್ದತಿ ।
ವಿನಯದಿಂ ಕೇಳಿದನು ಹಗ್ಗವ – ಸಾರ್ವಶಬ್ದವಮ ॥ ೮ ॥

ತ್ವರಿತ ತನ್ನಯ ಬಳಿಯಲೋರ್ವಗೆ | ವರಹವನು ನೂರಿತ್ತು ಹಗ್ಗವ |
ಭರದಿ ತಾರೆಂದು ಕಳುಹಲಾಕ್ಷಣ – ಬಂದು ಅವನು || ೯ ||

ಹಗ್ಗವನು ಮಾರುತಿಹ ಅಯ್ಯಗೆ | ನುಗ್ಗಿ ಶತ ಹೊನ್ನಿತ್ತು ರಜ್ಜುವ |
ಅಗ್ಗಳಿಯ ಬಸವನಿಗೆ ತೋರಲು – ಇಟ್ಟ ಭದ್ರದಲಿ || ೧೦ ||

ಅಂಗ ಲಿಂಗದ ನ್ಯಾಯಬಹುದೆಂದು | ಅಂಗೈಸಿ ಬಸವಣ್ಣ ನಿರುತಿರೆ |
ಲಿಂಗದೇವನು ತಂದನಾಕ್ಷಣ – ಅಂಗಪೂರಿತದಿ || ೧೧ ||

ವಚನ || ಇತೆಂದು ಲಿಂಗೈಯ್ಯನು ಮನ ಉಬ್ಬಿ ಹಾಗದ ಬದುಕಿಗೆ ನೂರುವರಹ ಬಂತೆಂದು ಚಂದಯ್ಯಗಳಿಗೆಕೊಟ್ಟು ಹರುಷವಂ ಪುಟ್ಟಿಸಿ, ಒಡವೆರೆದು ಮುನಿಸಂ ಸಂತವಿಪೆನೆಂದು, ಪೊನ್ನಂ ತೆಗೆದುಕೊಂಡು, ಅಂಗಳಕ್ಕೆ ಬರುವ ಸಮಯದಲ್ಲಿ, ಚಂದಯ್ಯಂ ವಿಶ್ರಮಿಸಿಕೊಂಡು, ನಾರ ಹೊಸೆವುದಕ್ಕೆಪೋಗಿ ನೋಡಲು ನಾರು ಇಲ್ಲದೆಯಿರಲು, ಆ ಲಿಂಗಯ್ಯನ ಲೀಲೆಯಂದರಿತು, ಕೋಪದಿಂದಿರಲು ಇತ್ತ ಲಿಂಗಯ್ಯನು ಈ ಹೊನ್ನಂ ಚಂದಯ್ಯನ ಮುಂದೆ ಸುರಿದು ಏನೆನ್ನುತಿರ್ದಪನು.

**ತ್ಯಾಗಮಾನ – ಅಟತಾಳ.**

ಹಾಸ್ಯಗೈಯಲ್ಕಿಂತಾಡಿದೆನು ಚಂದ – ಯ್ಯ – ನೀನು –
ದ್ವೇಷಗೈದು ತೋರೆವರೇನೈ ಚಂದ – ಯ್ಯ || ೧ ||

ಇಂದು ಎನ್ನ ತಪ್ಪ ಕ್ಷಮಿಸು ಚಂದ – ಯ್ಯ – ಇನ್ನು–
ಎಂದಿಗಿಂತು ಕಾರ್ಯವಗೈಯೆ ಚಂದ – ಯ್ಯ || ೨ ||

ನಾರು ನುಲಿಯ ಮಾರಿತಂದೆ – ಚಂದ – ಯ್ಯ – ತಕ್ಕೊ–
ನೂರುವರಹವೆಂದು ಸುರಿದ ಲಿಂಗ – ಯ್ಯ || ೩ ||

ಪತಿಯತಪ್ಪನೆಣಿಸುವಳೇ ಚಂದ – ಯ್ಯ – ಪರಮ–
ಪತಿವ್ರತೆಯು ತಿಳಿದು ನೋಡು ಚಂದ – ಯ್ಯ || ೪ ||

ನನ್ನತಪ್ಪ ನೋಡಸಲ್ಲ ಚಂದ – ಯ್ಯ – ಇನ್ನು–
ನಿನ್ನ ಮನದ ಕರುಣವಿರಲಿ ಚಂದ – ಯ್ಯ || ೫ ||

ಇಂತು ದೈನ್ಯತೆಯನ್ನುಪಡಲು ಲಿಂಗ – ಯ್ಯ – ತಾನು –
ನಿಂತುನೋಡಿ ಕೋಪತಾಳಿ ಚಂದ – ಯ್ಯ || ೬ ||

ಅಂಗಳಮೆಟ್ಟದಾಜೆನಿಂದು ಲಿಂಗ – ಯ್ಯ – ಎನ್ನ –
ಸಂಗ ಮಾತನಾಡು ನೀನು ಲಿಂಗ – ಯ್ಯ || ೭ ||

ವಚನ || ಇಂತೆಂಡು ಲಿಂಗಯ್ಯಗೆ ಶರಣ ಮತ್ತು ಇ [illegible]ಂದಂ.

**ಏಕತಾಳ.**

ಎನ್ನೊಳ್ತಪ್ಪಿಲ್ಲದೆ । ಎನ್ನ ಸೂತ್ರವನಗಲಿ ।
ಇನ್ನು ಪೋದವ ನಿನ್ನ । ಗಸಣೆಯೇನೆಂದ ॥ ೧ ॥

ಮೂರು ನಯನ ಉಳ್ಳ । ಮಾರಹರನಾದರು ।
ಸಾರಿ ಕೂಡೆನು ಸಿದ್ಧ । ದೂರ ಹೋಗೆಂದ ॥ ೨ ॥

ಹಾಗದ ಬದುಕಿಗೆ । ಶತ ಹೊನ್ನ ಹೊತ್ತುತಂದೆ ।
ಈಗ ಸಲ್ಲದು ನಮ । ಗೆಂತು ತಸ್ಕರವು ॥ ೩ ॥

ಪರದ್ರವ್ಯವನು ತಂದು । ಕರಸೋಂಕು ಎಂಬುವ ।
ಕರ ಚೋರ ನಡೆಯನ್ನು । ಕಾಣಿಸಲು ಬಂದೆ ॥ ೪ ॥

ಬೇಡ ನಿನ್ನಯಹೊನ್ನು । ಗಾಢದಿಂದೆನ್ನ ನಾರ ।
ಕೂಡಲೆ ತಾರೆಂದು । ಹೊಯ್ದೋಡಿಸಿದನು ॥ ೫ ॥

ವಚನ ॥ ಇಂತೆಂದು ಚಿತ್ತದಲ್ಲಿ ಬೀರಿ, ತನ್ನ ನಾರಂ ತಾರೆಂದಟ್ಟಲು, ಈ ಲಿಂಗಯ್ಯಂ ಪೆಟ್ಟ ತಾಳಲಾರದೆ ಓಡಿಬಂದು ಬಸವಣ್ಣನವರ ಮನೆಯಲ್ಲಿ ನಿಂದು, ಬಸವಾದಿ ಪ್ರಮಥರ ಮುಂದೆ ಕಣ್ಣಿನಲ್ಲಿ ಜಲವನೊರಸಿಕೊಳ್ಳುತ್ತ ಅವರೊಳೀನೆನ್ನು ತಿರ್ದಪನು.

**ಯಾಲಪದ.**

ಮಾರಹರನ ರೂಪ ನೀನು । ಪರಮ ಭಕ್ತ ಬಸವಣ್ಣ ।
ಮೊರೆಯ ಕೇಳು ಎನ್ನ ಆಯಸ – ವ – ಹೇ ಬಸವ – ಯ್ಯ –
ಕಾರುಣ್ಯಾಬ್ಧಿನೀ ಚಿಂತಾಮಣಿಯೆ ॥ ೧ ॥

ಶಶಿಧರನ ವಾಹನ ನಾಮ । ವಸುಧೆ ಬ್ರಹ್ಮಾಂಡಗಳೊಡೆಯ ।
ಜಸದಿ ಕೇಳು ಎನ್ನ ಅಪರಾ – ಧ – ಹೇ ಬಸವರಾ – ಜ –
ಕುಶಲ ನೀನಲ್ಲವೇ ಲೋಕದಿ ॥ ೨ ॥

ಚಂದಯ್ಯನ ಲಿಂಗ ನಾನು । ಸರಸಕ್ಕಾಗಿ ಕೊಳದೊಳಿಳಿದೆ ।
ಮುಂದೆ ಮುನಿದು ತೊರೆದನೆನ್ನ – ನು – ಹೇ ಬಸವರಾ – ಜ –
ಚಂದದಿಂದ ರಕ್ಷಿಸೆನ್ನಯ್ಯ ॥ ೩ ॥

ಇಷ್ಟಕೇನೆ ತೊರೆದು ನನ್ನ । ಅಟ್ಟುತಿಹನು ಸೇರಗೊಡದೆ ।
ದುಷ್ಟ ಚಿತ್ತ ಚಿತ್ತದಿಂ ಹೊ – ಯ್ದು – ಹೇ ಬಸವ – ಯ್ಯ –
ಪೆಟ್ಟ ನೋಡೆಂದೆಲ್ಲರ್ಗೆ ತೋರಿದ ॥ ೪ ॥

ನಾರ ನಾನು ಹುರಿಯಗೂಡಿ । ಮಾರಿದೆ ನಿನಗೇ ನಾನು ।
ನೂರು ವರಹ ಒಯ್ದು ಸುರಿದೆ – ನು – ಈ ಪರದ್ರ – ವ್ಯ—
ದೂರಕ್ಕೆ ಬೀಸಾಡು ಎಂದನು || ೫ ||

ಹಾಗದ ಸೊಮ್ಮಿಗೆ ನೀನು । ನೂರು ವರಹ ಎಲ್ಲಿ ಕದ್ದೆ ।
ಹೋಗುಯೆನ್ನಯ ಅಂಗಳ ಹೊಗಬೇ – ಡ – ಎಂದ ಬಸವ – ಯ್ಯ—
ಲಾಗು ವೇಗದಿ ಹೊಡೆದು ಆಟ್ಟಿದ || ೬ ||

ನನ್ನ ನಾರ ತಾರೆಂದೀಗ । ಎನ್ನ ನೂಕಿದ ನೀವು ಇದನು ।
ಚೆನ್ನಾಗಿ ಆರೈದು ನೀವೆ – ಲ್ಲ – ಹೇ ಬಸವ – ಯ್ಯ—
ಎನ್ನ ಅವನಕೂಡ ಹೊಂದಿಸೈ || ೭ ||

ವಚನ || ಇಂತೀ ಪರಿಯಲ್ಲಿ ಲಿಂಗಯ್ಯಂ ದೈನ್ಯವಂ ಪಡಲು, ಕರುಣಾ ಸಮುದ್ರನಾದ ಬಸವಯ್ಯ, ಕಿನ್ನರಿಯ ಬ್ರಹ್ಮಯ್ಯ, ಮಡಿವಾಳ ಮಾಚಯ್ಯ, ಕಕ್ಕಯ್ಯ, ಕೇತಯ್ಯ, ದಾಸಿಮಯ್ಯ ಮೊದಲಾದ ಅಸಂಖ್ಯಾತ ಸಮೂಹವೆಲ್ಲ ಲಿಂಗಯ್ಯನಂ ಮನ್ನಿಸಿ, ಮುಂದಿಟ್ಟುಕೊಂಡು, ಒಂದುಗೂಡಿಸಲ್ಕೆ, ಚಂದಯ್ಯನ ಗೃಹಕ್ಕೆ ಬಂದರ ದೆಂತೆನೆ.

**ಏಕತಾಳ–ಅರ್ಧರೇಕು.**

ಬಂದರು ಬಸವಾದಿ – ಪ್ರಮಥ ಗಣರೆಲ್ಲ ।
ಚಂದಯ್ಯ ಕಾಣುತ್ತ – ಶರಣ ಸತ್ಕರಿಸಿ || ೧ ||
ಉಚಿತಾಸನಗಳಿತ್ತು – ವಂದಿಸಿ ಬಳಿಕ ।
ಎನ್ನ ಭವ ದುರಿತಂಗ – ಳಿತ್ತ ಓಡಿದವೊ || ೨ ||

ಪೂರ್ವಪುಣ್ಯದ ಸುಕೃತ – ಫಲದಿ ನಿಮ್ಮ ಪಾದ ।
ದರುಶನ ದೊರಕಿತು – ಧರ್ಮ ಸಂಸ್ಕಾರ || ೩ ||

ಎಂದು ದಂಪತಿಗಳು – ಎಲ್ಲರ್ಗೆ ನಮಿಸಿ ।
ಮುಕುಳಿತ ಹಸ್ತನಾಗಿ – ಮುಂದೆ ಕೇಳಿದನು || ೪ ||

ದೀನನೋಳ್ ಕರುಣವಿಟ್ಟು – ಬಂದ ಬಗೆ ಏನು ।
ಎಂದು ಚಂದಯ್ಯ ಕೇಳೆ – ಅಂದು ನುಡಿದರು || ೫ ||

ವಚನ || ಇಂತೆಂದು ಕಿಂಕರತೆಯಿಂದ ಬೆಸಗೊಂಡ ಚಂದಯ್ಯನಿಗೆ ಬಸವಾದಿ ಪ್ರಮಥರು ಪೇಳಲುಜ್ಜುಗಿಸಲು, ಈ ಲಿಂಗಯ್ಯ ಬಾಗಿಲಲ್ಲಿ ನಿಂದು, ಭಯದಿಂದಿರೆ, ಒಳಯಿಂಕೆ ಲಿಂಗಯ್ಯನಂ ಕರೆದು, ಬಳಿಕ ಚಂದಯ್ಯನೊಳಿಂತೆಂದರು.

**ಜಂಪೆ.**

ಏಕೆ ಚಂದಯ್ಯಗಳೆ। ಈ ಲಿಂಗನೊಳು ಕೋಪ।
ಜೋಕೆಯಿಂದೆಮ್ಮೊಡನೆ। ಶರಣ ನೀನುಸುರು ॥ ೧ ॥

ಎಂದು ಕೇಳಲು ಶರಣ। ನಂದು ಉಸುರಿದನವರ್ಗೆ।
ಬಂದಪರಿ ವೈರಗಳ। ಬಸವಣ್ಣ ಕೇಳು ॥ ೨ ॥

ಮಾರ್ಗವಿಡಿದೈದುತಿರೆ। ಮತ್ತೆ ನೀರಡಸಿ ನಾ।
ನುರ್ವಿಯೊಳು ಬರಲಲ್ಲಿ। ಒಂದು ಕೊಳನಿರಲು ॥ ೩ ॥

ದಿವ್ಯತರ ಜಲವಿರಲು। ಅಮಿತದಿಂದದ ಕಂಡು।
ತವಕದಲಿ ಕೊಳಕಿಳಿದೆ। ಶರಣರಿದ ಕೇಳಿ ॥ ೪ ॥

ಮುಖ ಮಜ್ಜನವಗೈದು। ಮತ್ತೆ ಲಿಂಗಾಭಿಷೇಕ।
ಮುಖದಿಭಸ್ಮವ ಪೂಸಿ। ಲಿಂಗ ಮುಖವಾಗಿ ॥ ೫ ॥

ಅಗ್ಗಣಿಯ ನಾ ಕೊಂಡೆ। ಅರ್ಪಿಸಿಯೆ ಲಿಂಗಕ್ಕೆ।
ಅಗ್ಗಳೆಯ ಶಿವಶರಣ। ರೆಲ್ಲರಾಲಿಪುದು ॥ ೬ ॥

ಪ್ರಾಣವೊಡಗೊಂಡಿರುವ। ತಾನು ಈ ಲಿಂಗಯ್ಯ।
ಕಾಣಲಿಕೆ ಸೆಜ್ಜೆಯಿಂ। ದಿಳಿದ ಕೊಳನೊಳಗೆ ॥ ೭ ॥

ತಪ್ಪಿಲ್ಲದೆನ್ನ ಸೂತ್ರ। ತಾನಗಲಿ ಪೋದವನ।
ಒಪ್ಪಲರಿಯೆನು ಅವನ। ಒಡಗೂಡೆನೆಂದ ॥ ೮ ॥

ಮೂರು ನಯನ ತಾನಾಗೆ। ಮೀರಿ ಸೂತ್ರವಬಿಡಲು।
ವೀರಶೈವದ ನಡತೆ। ಮೀರಲಳವಲ್ಲ ॥ ೯ ॥

ವಚನ ॥ ಇಂತೆಂದು ತ್ರಿನೇತ್ರನಾದರೂ ಸೂತ್ರವಂ ಬಿಟ್ಟು ಪೋದವನ ಕೂಟ ಸಲ್ಲದು, ಎಂಬ ಪ್ರಮಥರ ವಾಕ್ಯ ಪ್ರಸಿದ್ಧವಾದಕಾರಣ, ಕೂಡಲೊಲ್ಲೆ. ಇದಾವ ಘನ ನಡತೆಯೆಂದು ತಾವೈದಿ ಪೇಳಬಂದಿರಿ? ನಿಮಗೊಪ್ಪಿತವೆ? ಬಸವಯ್ಯ! ಎನಲು, ಇವನ ಕ್ರಿಯಾಚಾರ ದಾಸೋಹ ನಿಷ್ಠೆಯಂ ನೋಡಿ, ಬಸವಣ್ಣ ಶರಣೆಂದು ಅಸಂಖ್ಯಾತಗಣರಮುಂದೆ ಚಂದಯ್ಯಂಗೆ ಲಿಂಗಭಂಗವಾದಂಗ ವ್ಯರ್ಥವೆಂದು ತಿಳುಹಿ ಇತ್ತ ಅಂಗವಂ ಬಿಟ್ಟ ಲಿಂಗಯ್ಯಂಗೆ ಗತಿಯಿಲ್ಲವೆಂದು ಪಂಚಾಯತರಿಂದ ಲಿಂಗಯ್ಯನಿಗೆ ತಪ್ಪಂ ಹೊರಿಸಲು, ಆಗ ಚಂದಯ್ಯ ಕೆಲರ ಸಂಶಯ ನಿವೃತ್ತಿಗೆ ಗಂಗೆಯಂ ಧ್ಯಾನಿಸಿ ಕರೆದು, ಎನ್ನ ತಪ್ಪನ್ನು ಈ ಶರಣರಿಗೆ ಪೇಳಮ್ಮ ಎನಲು, ಆ ಮಹಾ ಗಂಗೆ ಏನೆನ್ನು ತಿರ್ದಪಳು.

**ಸಾಂಗತ್ಯ.**

ಕೇಳಿರೈ ಬಸವಾದಿ ಪ್ರಮಥಗಣಂಗಳು । ಕೇಳಿರಿ ಹಾಸ್ಯ ವೈರಗಳ ॥
ಭಾಳಕ್ಷ ಶರಣ ಚಂದಯ್ಯನೊಳ್ತಪ್ಪಿಲ್ಲ । ಶೀಲ ವ್ರತವ ಮೀರಲಿಲ್ಲ ॥ ೧ ॥

ಅಂಗ ಹಿಂದಾಗಿ ಕ್ರಿಯದಿ ಕೊಂಡನಗ್ಗಣಿ । ಲಿಂಗಯ್ಯ ಧುಮುಕೆನ್ನೊಳಿಳಿದ ॥
ಅಂಗ ಸೂತ್ರವ ಬಿಟ್ಟು ತೊಲಗಿದನೆನುತಲಿ । ಲಿಂಗವನು ಕರೆದು ಕೀರ್ತಿಸಿದ ॥ ೨ ॥

ಬರದಿರಲೆನಗೆ ಸಾಕ್ಷಿಯನಿಟ್ಟು ಪೋದನು । ಶರಣನೊಳ್ತಪ್ಪಿಲ್ಲ ಕೇಳಿ ॥
ಒರೆದಲ್ಲಿ ಸಾಕ್ಷಿಯ ನುಡಿಯಲು ಗಂಗೆಯು । ಶರಣರು ಕರಚೋದ್ಯವಾಗಿ ॥ ೩ ॥

ಲಿಂಗದೇವನ ಮೇಲೆ ತಪ್ಪನ್ನು ಹೊರಿಸಿಯೆ । ಅಂಗಳಕ್ಕೈದಿಸಿ ಹರಸಿ ॥
ಮಂಗಳಾತ್ಮಕ ಚಂದಯ್ಯನೆ ನೀವಿನ್ನು । ಲಿಂಗಯ್ಯನ ತಪ್ಪ ಮನ್ನಿಪುದು ॥ ೪ ॥

ಕುರಿ ನರ ಮಾನವರು ನಗುವರು ಚಂದಯ್ಯ । ಧರೆಯೊಳು ತುಚ್ಛಕವಹುದು ॥
ಪರಿ ಪರಿ ವಿಧದ ಸಾರಾಮೃತ ವಾಕ್ಯದಿ । ಶರಣ ಚಂದಯ್ಯನೊಡಂಬಡಿಸಿ ॥ ೫ ॥

ಒಪ್ಪಿಕೊಂಡಾಕ್ಷಣ ಹಗ್ಗವ ಹೂಡಿಯೆ । ಸರ್ಪಭೂಷಣ ಶಿವಶರಣ ॥
ತಪ್ಪದೆ ಪೇಟೆಯೊಳ್ ಕ್ರಯಗೈದು ಹಾಗಕ್ಕೆ । ಭತ್ಯವೆಲ್ಲವನಾಗ ತಂದು ॥ ॥ ೬ ॥

ಪಾಕಗೈದು ಪ್ರಮಥರಂಘ್ರಿ ತೀರ್ಥವ । ಜೋಕೆಯಿಂದೀರ್ವರು ಸಲಿಸಿ ॥
ಏಕಮಾಗಿಯೆ ಗುರು ಶೇಷಪ್ರಸಾದವ । ಲಾಕಿನಿಂ ಸಲಿಸಿದರಾಗ ॥ ೭ ॥

ಅಂಗ ಲಿಂಗದ ನ್ಯಾಯ ಗೋಷ್ಠಿಯೊಳ್ತೀರಿಸಿ । ಸಂಗ ಸಂದಣಿಗೂಡಿ ಬಸವ ।
ಲಿಂಗ ಬಂದನು ತನ್ನರಮನೆಯಲ್ಲಿಗೆ । ಹಿಂಗಿತಿಲ್ಲಿಗೆ ಸಂಧಿ ಹತ್ತು ॥ ೮ ॥

**ಕಂದಪದ್ಯ.**

ಇದು ನುಲಿ ಚಂದಯ್ಯನ ಕಥೆ ।
ಪದುಳದಿ ಶಿವಭಕ್ತರೆಲ್ಲ ಲಾಲಿಸೆ ಮುದದಿಂ ॥
ಒದಗುವುದಭವನ ಕರುಣದ ।
ಪದವಿಯು ನಿಮಗೀಗಲಿದು ಸಹಜ ಸಿದ್ಧಾಂತಂ ॥ ೧ ॥

ಇಂತಿ ಪದ್ಯಗಳು ೯೭

**ಅಂತು ಸಂಧಿ ೧೦ ಕ್ಕಂ ಸಂಪೂರ್ಣ ಗಣನೆ – ೨೫೧೭ ಕ್ಕಂ ಮಂಗಳಮಹಾ**
**ಶ್ರೀ ಶ್ರೀ ಶ್ರೀ ಶ್ರೀ ಶ್ರೀ**



## ಹನ್ನೊಂದನೆಯ ಸಂಧಿ

# ಶ್ರೀ ಬಸವೇಶ್ವರನ ಮಹಿಮೆಗಳು ಮತ್ತು ಕಕ್ಕಯ್ಯನ ಪ್ರಸಾದ

**ವೃತ್ತ.**

ಸುರರಾಜಂಗೆ ವಿಭೂತಿಯಂ ದಶಶಿರಂ ಬೇಡಲ್ಕೆ ಚಂದ್ರಾಸಮಂ ।
ಕರವಂ ಬಾಣಗೆ ಕಾಂತನಂ ಶಾಮಲೆಗಂ ಶ್ರೀ ಗೌರಿಗರ್ಧಾಂಗಮಂ ॥
ಹರಿಗಂ ಕ್ಷೀರ ಸಮುದ್ರಮಂ ವಲಯಮಂ ಬ್ರಹ್ಮಂಗೆ ವಾಗ್ದೇವಿಯಂ ।
ಪರಮಾನಂದದೊಳಿತ್ತ ರುದ್ರನೆಮಗೀಗಾ ನಿತ್ಯ ಸಂತೋಷಮಂ ॥ ೧ ॥

**ತ್ರಿವುಡೆ.**

ಪನ್ನಗೇಂದ್ರನ ಭಜಿಸಿ ಪಡೆದನು । ಹನ್ನೊಂದು ಹಣ ಹಾಗ ಕಾಯಕ ।
ಕಿನ್ನರಿಯಬ್ರಹ್ಮಯ್ಯ ಮಾಡಿದ – ಜಂಗಮಾರ್ಚನೆಯ ॥ ೧ ॥

ಇಳೆಗೊಡೆಯ ಕಾಶ್ಮೀರರಾಯನು । ತಳೆದು ಭಕ್ತಿ ಕಲ್ಯಾಣ ಪುರದೊಳು ।
ಕಳೆಧರನ ಶರಣರಿಗೆ ನೀಡಿದ – ನಿಳೆಗೆ ಪೊಸತೆನಿಸಿ ॥ ೨ ॥

ಬಿನುಗು ದೈವದ ಗಂಡ ಕೀರ್ತಿ ಪ್ರ । ಚಂಡ ಶಂಕರದಾಸಿಮಯ್ಯನು ।
ಘನತರದ ಭಕ್ತಿಯನು ಮಾಡಿದ – ಸೂಜಿ ಕಾಯಕದಿ ॥ ೩ ॥

ಕಾಯ ಕಳವಳದಿಚ್ಛೆಯನು ಕಡೆ । ಗೊತ್ತಿ ಜ್ಞಾನವನೆತ್ತಿ ಭಕ್ತಿಯ ।
ದಾಯವನು ಶಿವಮೆಚ್ಚು ಮಾಡಿದ ಆ – ದಕ್ಕಿ ಮಾರಯ್ಯ ॥ ೪ ॥

ಹಿಡಿದ ಸುರಗಿಯು ಮುರಿಗೆ ಕರ್ಣದಿ । ನುಡಿವ ಘಂಟೆಯು ಪಾದ ತೊಡರಿನ ।
ಜಡಿವ ಬಾಹುಲಿ ಬೊಬ್ಬೆ ಬಿರುದಿನ – ಮಡಿವಳಯ್ಯಗಳು ॥ ೫ ॥

ಮೃಡನ ನಿಂದಕ ದ್ರೋಹಿಗಳ ಶಿರ । ಗಡಿದು [1] ಪರಶಿವ ಶರಣ ನಿಕರಕೆ [1] ।
ಮಡಿಯನೀವುತ ಜಂಗಮಾರ್ಚನೆ – ನಡೆಸುವನು ನಿರುತ ॥ ೬ ॥

ಹಲವು ನಾರನು ಹೊಸೆದು ಮಾರು [2] ವ [2] । ನುಲಿಯ ಕಾಯಕದಲ್ಲಿ ಜಂಗಮ ।
ಕೊಲಿದು ನೀಡುವ ಭಕ್ತಿ ಚಂದಯ್ಯ – ಶರಣನನವರತ ॥ ೭ ॥

---

1-1 ಭಕ್ತರ ಮನದ ಮೈಲಿಗೆ । (ಜ, ಟ, ತ.) 2-2 ತ (ಜ, ತ.)

ಸುರಗಿ ಚೌಡಯ್ಯಗಳು ಶೂಲದ । ಬೊಮ್ಮಿ ತಂದೆಯ್ಯು ತೆಲುಗ ಜೊಮ್ಮನು ।
ಶರಣ ಬಿರುದಿನ ಮೊಲ್ಲೆ ಬೊಮ್ಮ – ಯ್ಯಗಳು ಜಗದೇವ ॥ ೮ ॥

ಹರಭಕ್ತ ಹರಳಯ್ಯ ಸೊಡ್ಡಳ । ನೊಳ್ಳಿದನು ಅಪ್ಪಣ್ಣ ಶರಣನು ।
ಚೋರತನವನು ತಳೆದ ಆ ಚಿ – ಕ್ಕಯ್ಯ ಕಕ್ಕಯ್ಯ ॥ ೯ ॥

ವರ ಭಕ್ತ ಹೊನ್ನಯ್ಯ ಮೋಳಿಗೆ । ಮಾರ ಗಾಣದ ಶರಣ ಎಚೇ ।
ಶ್ವರದ ಕೇತಯ್ಯಗಳು ಜಂಗಮಾ – ರ್ಚಕರು ಅನುಗಾಲ ॥ ೧೦ ॥

ಧರೆಯೊಳಧಿಕ ಕಲ್ಯಾಣ ಪಟ್ಟಣ । ಇರುವ ಶರಣರ ಎಣಿಕೆಗೊಂಬರೆ ।
ಉರಗರಾಜಂಗಳವೆ ನಾ ಸಂ – ಕ್ಷೇಪ ಉಸುರಿದೆನು ॥ ೧೧ ॥

ಪರಿ ಪರಿಯ ಕಾಯಕವ ಪಿಡಿದತಿ । ಹರುಷದಿಂದಲಿ ಜಂಗಮಾರ್ಚನೆ ।
ನಿರುತ ನಡೆಸುತಲಿರ್ದರತಿ ಹರು – ಷದಲಿ ಶಿವಗಣರು ॥ ೧೨ ॥

ವಚನ ॥ ಈ ರೀತಿಯಲ್ಲಿ ಏಳ್ನೂರೆಪ್ಪತ್ತಮರಗಣಂಗಳು, ಅರವತ್ತು ಮೂರು ಪುರಾತನರು, ಅಸಂಖ್ಯಾತ ಮಹಾ ಗಣಂಗಳು, ಸಂಭ್ರಮದ ಭಕ್ತಿಯಂ ನೋಡಿ, ಬಸವಣ್ಣನವರ ಹರುಷ ರಸದಾನಂದವಂ ಪೇಳ್ವೆನದೆಂತೆನೆ.

**ಜಂಪೆ.**

ಗಾಢತರದತಿ ಭಕ್ತಿ । ಮಾಡುತಿಹ ಭಕ್ತರನು ।
ನೋಡುವನು ಮನದಿ ಕೊಂ । ಡಾಡುವನು ಬಸವ ॥ ೧ ॥

ನೋಡುವನು ಮನ ಹರುಷ । ಮಾಡುವನು ಇಷ್ಟವನು ।
ಬೇಡುವನು ಮನದಿ ನಲಿ । ದಾಡುವನು ಬಸವ ॥ ೨ ॥

ಶರಣರನು ಸ್ತುತಿಸುವನು । ಶರಣರನು ನುತಿಸುವನು ।
ಶರಣರನು ಪಾಡಿ ನಲಿ । ದಾಡುವನು ಬಸವ ॥ ೩ ॥

ಶರಣರೊಳಗಣ ಆಟ । ಶರಣರೊಳಗಣ ಮಾಟ ।
ಶರಣರೊಳಗಣ ಕೂಟ । ಶರಣ ಬಸವಯ್ಯ ॥ ೪ ॥

ಇಂತು ಶರಣರ ಒಡನೆ । ಸಂತತವು ಇರುತಿಹನು ।
ಮುಂತೆ ಬಿಜ್ಜಳನ ಬದು । ಕಂತು ನಡೆಸುವನು ॥ ೫ ॥

ವೀರ ಜಂಗಮವು ವಿಟ । ಗಾರ ಜಂಗಮ ನೀಟು ।
ಗಾರ ಜಂಗಮದಿಚ್ಛೆ । ಬೇರೆ ನಡೆಸುವನು ॥ ೬ ॥

ಅನ್ನ ವಾಲತಿ ರಸವು । ಸಣ್ಣಕ್ಕಿ ಪಾಯಸವು ।
ಹಣ್ಣು ಸಕ್ಕರೆಯವರಿ । ಗುಣ್ಣಿಸುವ ನಿರುತ ॥ ೭ ॥

ಇಚ್ಛೈಸಿದ ವಸ್ತುವನು । ನಿತ್ಯ ನಡೆಸುವನವರ್ಗೆ ।
ಅಚ್ಚರಿಯನೇನೆಂಬೆ । ಹರತಾನೆ ಬಲ್ಲ * ॥ ೮ ॥

ಕಕ್ಕಯ್ಯನವರೆಂಬ । ಕಂತುಹರ ಶಿವಶರಣ ।
ಚೊಕ್ಕ ಮಹಿಮರು ಇಹರು । ಸುಶ್ಶೀಲ ವ್ರತದಿ * ॥ ೯ ॥

ಒಂದು ದಿನ ಬಸವಯ್ಯ । ಬಿಜ್ಜಳನ ಓಲಗಕೆ ।
ಸಂದಣಿಯಿಂ ಹೋಗುತಿರೆ । ಕಕ್ಕಯ್ಯ ಕಂಡು * ॥ ೧೦ ॥

ಬಸವ ಶರಣೈ ನಿಮಗೆ । ಪ್ರಸಾದ ಸವಿಯಿರಿ ಎನಲು ।
ಬಸವ ಕೇಳುತ ಹರುಷ । ವೆಸಗಿ ಊಳಿಗರಂ * ॥ ೧೧ ॥

ಕಳುಹಿ ಬರುವರೆ ಪಾದ । ವೆಳೆದು ನಾಲ್ಕಿಡೆ ಕಂಡು ।
ಒಳಪೊಕ್ಕು ಮಠದ್ವಾರ । ಬಲಿದ ಕಕ್ಕಯ್ಯ * ॥ ೧೨ ॥

ಕಕ್ಕಯ್ಯಗಳ ಶೇಷ । ಕಾರಣದಿ ಬಸವಯ್ಯ ।
ಅಕ್ಕರಿಂದಲಿ ಕಾಯ್ದು । ಆರರಿಯದಂತೆ ॥ ೧೩ ॥

ಹನ್ನೆರಡು ವತ್ಸರವು । ಅರಸುವನು ಅಣು ಮಾತ್ರ ।
ಇನ್ನು ದೊರೆಯದು ಎಂದು । ಮುನ್ನ ನೋಡುವನು * ॥ ೧೪ ॥

ಒಂದಿರುವೆ ತರಲದಕೆ । ಮುಂದೆ ಸಕ್ಕರೆಯಿತ್ತು ।
ತಂದು ಕಟ್ಟಿದ ಶೇಷ । ಒಂದು ಚಿಂದಿಯಲಿ ॥ ೧೫ ॥

ಅಕ್ಕನಾಗಲೆ ಬಸವ । ನಭ್ಯಂಗನದಿ ಗಂಟ ।
ನಿಕ್ಕಿದಾ ಶೇಷವನು । ಗಕ್ಕನೆಯೆ ಕಂಡು ॥ ೧೬ ॥

ಅಮಲ ಹಸ್ತದಿ ಪಿಡಿದು । ಅಣುಮಾತ್ರ ಗಂಟೆಂದು ।
ಸುಮನಸದಿ ಇಕ್ಕರಿಸಿ । ಶೋಧಿಸುತಲಾಗ * ॥ ೧೭ ॥

ನೋಡಿದಳು ಹರುಷವನು । ಮಾಡಿದಳು ಜಿಹ್ವೆಯೊಳು ।
ನೀಡಿದಳು ಸ್ಕಂದವನು । ಕೂಡಿದಳು ಅದರ ॥ ೧೮ ॥

**ಕಂದಪದ್ಯ.**

ಕಕ್ಕಯ್ಯನವರ: ಶೇಷವ ।
ಭಕ್ಷಿಸೆ ತೋರಿದುದು ಗರ್ಭ ಸೂಚನೆ ಮತ್ತಂ ॥
ಅಕ್ಕನಾಗಲೆಯು ಕಾಣುತ ।
ಬೆಕ್ಕಸ ಬೆರಗಾಗಿ ಶಿವನ ಕಾರಣವೆಂದಳ್ ॥ ೧ ॥

* ಈ ಪದ್ಯಗಳು (ಅ, ಉ, ಎ, ಗ, ಚ, ಜ, ಟ, ಬ.) ಪ್ರತಿಗಳಲ್ಲಿಲ್ಲ.

ಮಾರಹರನಪ್ಪಣೆಯಿಂದ ।
ತಾರಕ ಮರ್ಧನನಾಗಲೆ ಗರ್ಭಾಂಬುಧಿಯೊಳ್ ॥
ತೋರುತ ಶಿಶುವಾಕಾರದಿ ।
ಧಾರಿಣಿಗಾಶ್ಚರ್ಯಮಾಗೆ ಧೀರನು ಬಲಿದಂ* ॥ ೨ ॥

ವಚನ ॥ ಆ ವೇಳೆಯಲ್ಲಿ ಕೊಂಡೆಯ ಮಂಚಣ್ಣನ ಪ್ರಸಂಗಮಂ ಪೇಳ್ವೆನದೆಂತೆನೆ.

## ಕೊಂಡೆ ಮಂಚಣ್ಣನ ಜನನ

**ಏಕತಾಳ.**

ಹರನ ಓಲಗದೊಳು । ಇರುವನು ನಾರದನು ।
ಧರೆ ಹದಿನಾಲ್ಕರೊ । ಳಿರುವ ಸುದ್ದಿಯನು ॥ ೧ ॥
ಹರಿಯಜ ಸುರ ದೈತ್ಯ । ನರರ ನಡತೆಯನು ।
ಇರದೆ ತಂದೀಶಂಗೆ । ಒರೆವನೆಲ್ಲವನು ॥ ೨ ॥
ನಾರದಮುನಿ ಕರೆದು । ಮಾರಾರಿ ಇಂತೆಂದ ।
ಧಾರಿಣಿಗೆ ನೀ ಹೋಗು । ಕಾರಣವು ಉಂಟು ॥ ೩ ॥
ಬಸವನ ಮಹಿಮೆಯನು । ವಸುಧೆಗೆ ಅರುಹಲು ।
ಕುಶಲ ನೀನಲ್ಲದೆ । ವಶವೇ ಒಬ್ಬರಿಗೆ ॥ ೪ ॥
ಎಂದು ಪೇಳಲು ಶಿವ । ಬಂದ ಹಸಾದವೆಂದು ।
ಅಂದು ಪುಟ್ಟಿದ ಮಂಚಿ । ಎಂಬ ನಾಮದಲಿ ॥ ೫ ॥

ವಚನ ॥ ಆಗ ಮಂಚಣ್ಣ ಪುಟ್ಟಿ ಬಿಜ್ಜಳಗೆ ಪ್ರಿಯದ ನಿಯೋಗಿಯಾಗಿ, ಗುಪ್ತ ಭಕ್ತಿಯಲ್ಲಿ ಅಂತರಂಗದಲ್ಲಿ ಸಲಿಸುವ ಜಂಗಮ ಹನ್ನೆರಡುಸಾವಿರ ಬಹಿರಂಗಕ್ಕೆ ಶಿವಾಚಾರ ವಾದಿಯೆಂಬಂತೆ, ಬಸವ ಮೊದಲಾದ ಶರಣರ ಮಹಾತ್ಮೆಯಂ ಪ್ರಕಟನಂ ಮಾಡುತಿರ್ದನದೆಂತೆನೆ.

**ತ್ರಿವುಡೆ.**

ತರಣಿ ಉದಯಕೆ ಬಸವರಾಜನು । ಹರನ ಪೂಜೆಯ ಕ್ರಮುವ ತೀರಿಸಿ ।
ಅರಸನೆಡೆ ಪೋಪುದಕೆ ವಸ್ತ್ರ – ಭೂಷಿತನು ಆದ ॥ ೧ ॥
ಉಟ್ಟ ಎಳೆಗಾವಿಯ ಸುಧೋತ್ರವ । ತೊಟ್ಟಗೆಲಸದ ಪೈಟನಂಗಿಯ ।
ಕಟ್ಟಿದನು ಮಣಿ ತಾತಿಯಂಗುಲ – ಕಿಟ್ಟ ಮುದ್ರಿಕೆಯ ॥ ೨ ॥

---

* ಈ ಕಂದಪದ್ಯ (ಅ, ಉ, ಎ, ಗ, ಚ, ಜ, ಟ, ಬ.) ಪ್ರತಿಗಳಲ್ಲಿಲ್ಲ.

ಕೊರಳ ಚಿನ್ನ ಶಿವಾಕ್ಷಿ ಮಾಲೆಯ । ಮೆರೆವ ಮುತ್ತಿನಹಾರ ಮಣಿಸರ ।
ಉರುತರದ ಕಟಿಡಾಬು ಧರಿಸಿದ– ಹರುಷದಿಂದ ॥ ೩ ॥

ಎಸೆವ ಮೂರೇಖೆಯಲಿ ಭಸಿತವ । ನೊಸಲ ಮಧ್ಯದಿ ಧರಿಸಿ ಕರ್ಣದಿ ।
ಕುಶಲದಲಿ ಮೌಕ್ತಿಕದ ಮಣಿ ಭೂ– ಷಣವನಲಂಕರಿಸಿ ॥ ೪ ॥

ಕುಂದಣದ ಸೆರಗಿಂದಲೊಪ್ಪುವ । ಚೆಂದವೆಸೆವತಿ ಪಾಗು ಸುತ್ತಿದ ।
ಕುಂ [1] ದುವಿನ ಹರಳಂತೆ ಪೊಳೆ [1] ವ ದಿ– ವ್ಯಾಂಬರವ ಪೊ [2] ದ್ದ [2] ॥ ೫ ॥

ಹರುಷದಲಿ ಶೃಂಗರಿಸಿಯಂದಳ । ತರಿಸಿಯೇರಿದ ಬಸವರಾಜನು ।
ಪೊರೆಯೆ ಕರುಣದಿ ಬಿಜ್ಜಳನ ಆ– ನಂದದೋಲಗಕೆ ॥ ೬ ॥

ವಚನ ॥ ಆ ಬಿಜ್ಜಳನ ಓಲಗದ ಸಂಭ್ರಮವೆಂತೆನೆ.

**ಸೀಸಪದ್ಯ.**

ಮಂತ್ರಿಗಳು ಮಂಡಲೇಶ್ವರ ಮನ್ನೆಯ ನಾಯಕ ।
ರಂತು ಮೈಗಾವಲಿನ ಅಧಿಕ ಭಟರು ॥ ೧ ॥

ಕರಣಿಕರು ಕಾರ್ಯ ಸಾಧಕ ನಿಯೋಗಿಗಳು ।
ಧರೆಯ ಉದ್ಯೋಗದ ಧಾ [3] ತ್ರ [3] ಜನರು ॥ ೨ ॥

ಛತ್ರಿ ಚಾಮರ ಢಾಳು ಎತ್ತಿ ಪಿಡಿದಿರುವವರು ।
ಹತ್ರ ಚಿಮ್ಮುವ ಹಾಕು ಪಾವಡಿಗರು ॥ ೩ ॥

ಕಡೆಯಿಲ್ಲದಾ ಕುಂಚ ಕಾಳಂಚಿ ಗಿಂಡಿಯು ಪಿಡಿದು ।
ಎಡೆಯಾಡುವರು ಲೆಕ್ಕವಿಲ್ಲ ಸಂದಣಿಯು ॥ ೪ ॥

ಭಟ್ಟರೂಳಿಗ ನಿಚಯ ಕಟ್ಟಿಗೆಯಕಾರರೂ ।
ನಟ್ಟುವರು ನಾನಾ ವಿದ್ಯದಾ ಪ್ರೌಢರೂ ॥ ೫ ॥

ವೀಣೆ ತಂಬೂರಿ ಗಾನ ವಿದ್ಯಾ ವಿನೋದರು ।
ಜಾಣ ಜಾತಿ ಕರ್ತರು ಹಾಸ್ಯಯುತರು ॥ ೬ ॥

ಕೊಂಡೆಯರ್ದಿಂಡೆಯರ್ಕಂಡದ್ದ ನುಡಿವವರು ।
ತಂಡ ತಂಡದಲಿ ಉದ್ದಂಡವೊಪ್ಪೆ ॥ ೭ ॥

ಇಂತಪ್ಪ ಸಕಲ ವಿನಿಯೋಗದೋಲಗ ಮಧ್ಯೆ ।
ಸಂತಸದಿ ಬಿಜ್ಜಳನು ಸಂಭ್ರಮದಿ ॥ ೮ ॥

---

1-1 ದದರಳನು ಜರಿ (ಗ, ಚ, ತ, ಡ.) 2-2 ದೆದ (ಜ, ಟ, ದ.)
3-3 ತ (ಒ, ಜ, ಡ.)

ಕಂದರ್ಪ ಲಾವಣ್ಯ[1] ಅಧಿಕ ಶೀವಿಯಲಿ[1] ।
ಅಂದುವೊಪ್ಪಿದ ಬಿಜ್ಜಳ ದೇವೇಂದ್ರನಂತೆ ॥ ೯ ॥

ವಚನ ॥ ಇಂತಪ್ಪ ಓಲಗಕ್ಕೆ ಬಸವರಾಜದೇವರು ಬರಲು, ಬಿಜ್ಜಳರಾಯ ನೆದ್ದು ಕರವಿಡಿದು ಕುಳ್ಳಿರಿಸಿಕೊಂಡು, ಸಕಲ ರಾಜ್ಯದ ನಿರ್ಣಯವಂ ಪೇಳಿ ಕೇಳುವ ಸಮಯದಲ್ಲಿ, ಬಸವಣ್ಣನವರು ಕೈಯೆತ್ತಲು ಕೊಂಡೆಯ ಮಂಚಣ್ಣ ಏನೆನ್ನುತಿರ್ದನು.

## ಗೊಲ್ಲತಿಯ ಮಜ್ಜಿಗೆ ಕೊಡವ ಪಿಡಿದ ಪವಾಡ.

**ಅಟತಾಳ.**

ಮಂಡಲೇಶ್ವರ ಮಕುಟವರ್ಧನೋ । ದ್ದಂಡ ಜನ[2] ರಾ[2]ಮಧ್ಯದಿ ।
ದಂಡನಾಯಕ ಎತ್ತಿದನು ಕೈಯ್ಯ – ಕಂಡಿರೇನ್ಯೆ ॥ ೧ ॥

ಮುಂದುಗಾಣದೆ ಬಿಜ್ಜಳನ ತಾ । ಕೊಂದೆನೆಂದು ಎತ್ತಿದ ।
ಇಂದು ತನಗುದ್ದಂಡತೆಯ ನೃಪ – ಮುಂದೆ ಕೊಡಲು ॥ ೨ ॥

ಎಂದ ಕೊಂಡೆಯ ಮಾತ ಕೇಳುತ । ಎಂದನಾಗ ಬಿಜ್ಜಳ ।
ಇಂದು ಬಸವ ನೀ ಕೈಯ್ಯನೆತ್ತಿದ – ಚಂದವೇನು ॥ ೩ ॥

ಬಿಜ್ಜಳನೆ ಕೇಳೊಬ್ಬಗೊಲ್ಲತಿ । ಮಜ್ಜಿಗೆಯನು ತರುತ ಬೀದಿಯೊಳ್ ।
ಹೆಜ್ಜೆಜಾರಲು ಬಸವ[3] ಎನ್ನಲು[3] – ಪಿಡಿದೆನಾ ಕೊಡನ ॥ ೪ ॥

ನಾರಿ ಹೊತ್ತಿಹ ಕೊಡನು ಭೂಮಿಗೆ । ಜಾರಿ ಬೀಳದಂದದಿ ।
ಸೇರಿ ಪಿಡಿವರೆ ಕರವನೆತ್ತಿದೆ – ಧೀರ ಕೇ[4]ಳು[4] ॥ ೫ ॥

ಇಲ್ಲಿ ಕೈಯೆತ್ತಿದಡೆ ಬೀಳುವ । ಗೊಲ್ಲತಿಯ ಮಜ್ಜಿಗೆಯ ಕೊಡನನು ।
ಅಲ್ಲಿ ಪಿಡಿದೆನೆಂಬ ಗಾಢದ – ಲಾವ ಮಾತುಗಳು * ॥ ೬ ॥

ಆದಡಾಗಲಿ ಪುಸಿಯು ದಿಟವನು । ಶೋಧಿಸೀಗಲೆ ನೋಡುವ ।
ಮೇದಿನಿಯೊಳಿದು ಚೋದ್ಯವೆಂದು – ಆಡಿದನು ಮಂಚಿ * ॥ ೭ ॥

ಆಡಿದಂಥಾ ಬಸವ ವಾಕ್ಯಕೆ । ಕೂಡೆ ಮಂಚಿಯು ನುಡಿದನು ।
ಗಾಢ ಕಳುಹಿಸು ನೃಪತಿ ದೃಷ್ಟವ – ನೋಡಬೇಕು ॥ ೮ ॥

---

1–1 ಕಾಂತಿವೂಳಿಗದಿ (ಅ, ಜ, ಬ. ) 2-2 ದಾ (ಒ, ಟ,ಬ,) 3–3 ಯಂದಳು (ಉ, ಗ, ಚ. ) 4-4 ಳೋ (ಒ, ಟ, ತ, ಬ.) * ಈ ಪದ್ಯಗಳು (ಎ, ಗ, ಚ.) ಪ್ರತಿಗಳಲ್ಲಿ ಮಾತ್ರವಿವೆ.

ಎಂದಮಾತಿಗೆ ಚರರ ಕಳುಹಲು । ಸಂದುಗೊಂದನು ಹುಡುಕುತ ।
ಅಂದು ಗೊಲ್ಲತಿಯ ನೃಪನೆಡೆಗೆ ಕರ– ತಂದು ಕೇಳೆ ॥ ೯ ॥
ಏನೆ ಗೊಲ್ಲತಿ ನೀನು ಬೀಳ್ವಾಗ । ನಿನ್ನನಾರೌ ಪಿಡಿದರು ।
ಮಾನವೇಶ್ವರ ಕೇಳು ಬಸವಯ್ಯ – ತಾನು ಪಿಡಿದ ॥ ೧೦ ॥
ಎಂತು ಪಿಡಿದ ನೀನೆಂತು ಬಿದ್ದೆ ಮು । ನ್ನಿಂತು ತಿಳುಹೆ ಎಲ್ಲವ ।
ಇಂತು ಸಂಶಯ ಬೇಡ ಅಂಜದೆ– ಪೇಳು ನೀನೆನಲು * ॥ ೧೧ ॥
ಮಜ್ಜಿಗೆಯ ಕೊಡ ನೆತ್ತಿಯೊಳಗಿಟ್ಟು । ಸಜ್ಜನಿಂದಲಿ ಮಾರುತೈದಿದೆ ।
ಹೆಜ್ಜೆಯೆಡಹಿ ನಾ ಬೀಳ್ವಸಮಯದ– ತತ್ಕ್ಷಣಕ್ಕೆ * ॥ ೧೨ ॥
ಚಿತ್ತದಲಿ ನಾ ಬಸವ ಎಂದೆನು । ಪೃಥ್ವಿಯಲಿ ಬೀಳ್ಗೊಡದೆ ನಿಂತಿತು ।
ಚಿತ್ತಜನಸಮರೂಪ ಬಿಜ್ಜಳ – ಸೊಲ್ಲ ಕೇಳು * ॥ ೧೩ ॥
ಆಡಿದನು ಬಿಜ್ಜಳನು ಸರ್ವರ । ಕೂಡೆ ತಾನು ನುಡಿದನು ।
ನಾಡೊಳಗೆ ಬಸವೇಶ ಮಹಿಮೆಗೆ – ಈಡೆ ಎಂದ ॥ ೧೪ ॥
ಅರಸು ವಿಸ್ಮಿತನಾಗಿ ಮೆಚ್ಚುತ । ತರಿಸಿ ಸಕಲಾಭರಣವ ।
ಧರಿಸಿದನು ದಂಡೇಶ ಬಸವಗೆ – ಹರುಷದಿಂದ ॥ ೧೫ ॥

ವಚನ ॥ ಇಂತಪ್ಪ ಬಸವರಾಜನ ಮಹಾತ್ಮೆಗೆ ಸಕಲರೂ ಸಂತೋಷಪಟ್ಟು, ಕರ ಕಮಲಮಂ ಮುಗಿದು ಕೊಂಡಾಡುತ್ತಿರಲು, ಬಸವರಾಜನು ಭೋಜನ ಸಮಯವೆಂದು, ಬಿಜ್ಜಳನ ಕೈಯಿಂ ಕಳುಹಿಸಿಕೊಂಡು, ತನ್ನ ಅರಮನೆಗೆ ಪೋಗಿ ಸುಖದಲ್ಲಿರೆ, ಇತ್ತ ಮಂಚಣಂ ಎಂತುಗೈದನದೆಂತೆನೆ.

## ಸಾವಿರ ಕೊಡನ ಪವಾಡ ಮತ್ತು ಸೂರ್ಯನ ಹನ್ನೊಂದು ದಿನ ನಿಲ್ಲಿಸಿದ ಪವಾಡ.

**ಭಾಮಿನೀಷಟ್ಪದಿ. †**

ವಸುಧೆಪತಿ ನೀ ಬಸವ ಕುಟಿಲಕೆ ।
ವಶವ ಪೊಂದಿದೆ ವಿವರವರಿಯದೆ ।
ಪೊಸತು ಮಾಡಿದನೊಂದು ಕುಹಕವ ಕೇಳು ಬಿಜ್ಜಳನೆ ॥
ಮೊಸರು ಮಾರುವ ಗೊಲ್ಲತಿಯು ತಾ ।
ಬಸವನರಮನೆ ನಿತ್ಯ ಕಟ್ಟಳೆ ।
ಎಸಗಿ ಹೊರುವಳದರಿಂ ಕೌತುಕ ಮಾಯೆ ವಿದ್ಯೆಗಳು ॥ ೧ ॥

---

* ಈ ಪದ್ಯಗಳು (ಎ, ಗ, ಚ.) ಪ್ರತಿಗಳಲ್ಲಿ ಮಾತ್ರವಿವೆ. † ಈ ಭಾಮಿನೀಷಟ್ಪದಿಯ ಸಾರಾಂಶ (ಎ, ಒ, ಗ, ಚ, ಜ, ಟ, ಡ, ತ.) ಪ್ರತಿಗಳಲ್ಲಿ ಸಾಂಗತ್ಯರೂಪವಲ್ಲಿವೆ.

ನಾರಿ ನಿನ್ನಿದಿರಿನಲಿ ಬಸವನು |
ಸಾರಿ ಪಿಡಿದನು ಎಂದು ಪೊಗಳ್ದಳು |
ತೂರಿ ಹಳಚುವೆ ಬಸವ ಕುಟಿಲವ ಠಕ್ಕು ಹೊರಗಿಡುವೆ ||
ಧೀರ ನೀನದ ನೋಡುಸೈತಿರು |
ಗಾರು ಮಾಡುವೆ ಬಸವ ಮಹಿಮೆಯ |
ಮೀರಿ ಬಿಟ್ಟರೆ ನಮ್ಮ ಗೆದ್ದಪನೆಂದ ಮಂಚಣ್ಣ || ೨ ||

ಅರಿಯದಂದದಿ ಬಸವರಾಜನ |
ಕರೆಸು ಚರರನು ಕೆರೆಯ ಜಲವನು |
ತರುವ ಸಾಸಿರ ತರುಣಿಯರ ಕೊಡವೆಲ್ಲ ತಡೆಸೆಂದ ||
ಭರದಿ ಕೊಡಗಳ ಜಳುಕಿ ಧರೆಯಲಿ |
ಕರೆದು ಬಸವನ ಎಲ್ಲ ಬಿಸುಡಲಿ |
ಧರೆಗೆ ಬೀಳದೆ ಒಡೆಯದಿರ್ದಡೆ ನೋಡು ಪರಿಕಿಸುತ || ೩ ||

ಕುಂಭಿನೀಪತಿ ಕರೆಸಿ ನುಡಿಯಲು |
ಸಂಭ್ರಮದಿ ಚರರೆಯ್ದಿ ದಡದಲಿ |
ತುಂಬಿತಹ ಕೊಡ ಸಾಸಿರಂಗಳ ತಡೆದು ನಿಲ್ಲಿಸುತ ||
ಕಂಬು ಕಂಠಿರೆ ಕಮಲಮುಖಿಯರೆ |
ಕುಂಭಕುಚೆಯರೆ ಎಲ್ಲ ಬಸವಣ್ಣ |
ಎಂಬ ಪದದಲಿ ಕೊಡವ ಬಿಸುಡಿರಿ ಎಂದರಾಚರರು || ೪ ||

ವಸುಧೆಪತಿ ಚರರಾಜ್ಞೆಯಿಂದಲಿ |
ಶಶಿಯಮುಖಿಯರು ಪೊತ್ತ ಕೊಡಗಳ |
ಬಸವ ಎನುತಲಿ ಬಿಸುಟರೆಲ್ಲರು ಕೊಡವ ಸಾಸಿರವ ||
ವಿಶ್ವತೋಮುಖನಾಗಿ ಕೊಡಗಳ |
ಬಸವ ನಿಲಿಸಿದನಂತರದೊಳಾ |
ಬಿಸಜ ಮುಖಿಯರ ಕರೆದು ತಂದರು ಬಿಜ್ಜಳನ ಬಳಿಗೆ || ೫ ||

ನೆತ್ತಿ ಮೇಲಂತರದಿ ಕೊಡಗಳು |
ವೃತ್ತಕುಚೆಯರಿಗೆಲ್ಲ ನಿಂತಿರೆ |
ಪೃಥ್ವಿಪತಿಗಳು ಸಕಲ ಪ್ರಜೆಗಳು ಕಂಡು ಬೆರಗಾಗೆ ||
ವಿಸ್ತರಿಸಿ ಪೊಗಳುತ್ತ ಬಸವ ಮ |
ಹತ್ತನೆಲ್ಲರು ನುತಿಸಿ ಕೈಗಳ |
ಎತ್ತಿ ಮುಗಿಯುತ ದೇವ ಬಲ್ಲವರುಂಟೆ ಮಹಿಮೆಯನು || ೬ ||

ಎಲ್ಲರಾಸ್ಥಾನದಲಿ ಕಂಪನ |
ಮೆಲ್ಲ ಮೆಲ್ಲನೆಗೆಯ್ದು ಭಯದಿಂ |
ಲೀಲೆಯಾ ತ್ರೈ ಜಗದ ಕರ್ತನು ಈತನಹುದೆಂದು ||
ಉಲ್ಲಸದಿ ಧರೆ ನೋಡಲಾ ಶಿವ |
ನಿಲ್ಲದೈದಿದನಲ್ಲದಿವ ನರ |
ನಲ್ಲವೆನ್ನುತ ಹಲವು ಪರಿಯಲಿ ಪೊಗಳಿತಾ ಸ್ಥಾನ || ೭ ||

ಕಮಲಮುಖಿಯರು ಬಸವ ನಾಮವ |
ವಿಮಲತರದಿಂ ಸ್ತುತಿಸುತೆಲ್ಲರು |
ಅಮಿತದಿಂ ಮನೆಗೆಯ್ದಲಪ್ಪಣೆ ಈವುದೆಂದೆನಲು ||
ಸುಮನಸದಿ ಅವರವರ ಕೊಡಗಳು |
ಕ್ರಮದೊಳಂದವರುತ್ತಮಾಂಗದಿ |
ಅವಿರಳದಿ ಬಂದಿಳಿಯೆ ಪೊತ್ತೈದಿದರು ಮಂದಿರಕೆ || ೮ ||

ನೋಡಿದರು ಪುರಜನರು ವಂದನೆ |
ಮಾಡಿದರು ಮಂತ್ರೀಶ ಬಸವನ |
ಹಾಡಿದರು ಅದೃಶ್ಯ ಕೊಡನ ಪವಾಡವೆಂದೆನುತ ||
ರೂಢಿಗಚರಿಯಾಗಿ ತೋರಿದ |
ಖೋಡಿ ಜೈನರ ಮುಂದೆ ಮಹಿಮೆಯ |
ಮಾಡಿ ಮೆರೆದನದೇನನೆಂಬೆನು ಶಿವನೆ ತಾ ಬಲ್ಲ || ೯ ||

ಕೃತಕನೊಂದಿನ ಮಂಚಿ ರಾಯಗೆ |
ಹಿತವನೊರೆದನು ಕುಹಕ ಮಂತ್ರಿಗೆ |
ಕ್ಷಿತಿಯ ಭಾರವನಾತಗೊಪ್ಪಿಸಿದೆಲ್ಲ ಸೈನಿಕರ ||
ಮತಿಯನರಿಯದೆ ಬಸವ ತಂತ್ರಕೆ |
ಪತಿತವಾಗಿಯೆ ನೀನು ನಿನ್ನಯ |
ಸ್ಥಿತಿಗತಿಯನುರೆ ತಿಳಿದು ರಾಜ್ಯವ ವಶವಗೊಂಡಿಹನು || ೧೦ ||

ತನ್ನ ಮತ ವಂಶಿಕರು ಗಣರಿಂಗೆ |
ನಿನ್ನ ಬೊಕ್ಕಸದಖಿಳ ದ್ರವ್ಯವ |
ರನ್ನ ಮುತ್ತುಂ ರತ್ನ ಮಾಣಿಕ ಹಾರ ಪದಕಗಳ |
ಉನ್ನತದಿ ತಾನಿತ್ತು ಸರ್ವರೊ |
ಳ್ತನ್ನ ಘನತೆಯ ಮೆರೆವ ಪುರದಲಿ |
ಇನ್ನು ನಾನೇನೆಂಬೆನವರಗ್ಗಳಿಕೆ ಶಿವಬಲ್ಲ || ೧೧ ||

ಸೀಮೆಯಾದಾಯವನು ವೆಚ್ಚವ ।
ಭೂಮಿಪರ ಕಪ್ಪಗಳ ಹುಟ್ಟನು ।
ಕಾಮಿತವ ನೀ ಕೇಳ್ವುದಿಲ್ಲವು ತಾನೆ ತನ್ಮಯವು ॥
ನೇಮದಲಿ ಪುಸ್ತಕದಿ ಲಿಖಿಸಿಹ ।
ಕಾಮಹರ ಓಂ ನಮಃ ಶಿವಾಯ ।
ಸಾಮ್ಯ ಭಾವವು ಆತಗಲ್ಲದದಾರ್ಗೆ ಗೋಚರವು ॥ ೧೨ ॥

ಕೇಳ್ಕೆ ಹೇಳ್ಕೆಯ ನಿನ್ನಲೆಕ್ಕಿಸ ।
ತಾಳ್ಕೆಯಿಂತಿರ ಸಲ್ಲ ಸಾರಿದೆ ।
ಕೇಳು ರಾಜ್ಯದ ಲೆಕ್ಕ ವಿವರವ ಬಹಳ ಬಗೆಯಲ್ಲಿ ॥
ಪೇಳಿದಂಥಾ ಮಂಚಿ ವಾಕ್ಯಕೆ ।
ಕೇಳಿ ಬಿಜ್ಜಳನಹುದು ನಿಜವೆನೆ ।
ಜಾಳುಮಾತಿಂ ಬಸವ ಮಂತ್ರಿಯ ಕೇಳ್ದ ಬಿಜ್ಜಳನು ॥ ೧೩ ॥

ಬಸವ ಮಂತ್ರಿಯೆ ರಾಜ್ಯ ವಿವರಣೆ ।
ಎಸಗಿ ನಿಂದಾದಾಯವೆಚ್ಚವ ।
ಒಸೆದು ಲೆಕ್ಕವನಿಂದು ಒಪ್ಪಿಸು ಎನಲು ಬಿಜ್ಜಳನು ॥
ಬಿಸಜ ಸಖನುದಿಸೆರಡು ಜಾವವು ।
ಎಸಗಿ ಇರುವದ ನೋಡಿ ಬಸವನು ।
ಉಸುರಿಯರ್ಕಗೆ ನಿಲಿಸಿ ಲೆಕ್ಕವ ತೋರಿ ಕೊಡುತಿರ್ದ ॥ ೧೪ ॥

ಇತ್ತಲೀ ಜಗದೊಳಗೆ ಬಡವರು ।
ನಿತ್ಯ ಕೂಲಿಯ ಮಾಳ್ಪ ಮನುಜರು ।
ಮತ್ತೆ ಕಷ್ಟವ ಮಾಡಿ ಮಾಡಲು ರವಿಯು ಸಾಗದಿರೆ ॥
ತತ್ತಳದಿ ಬೇಸತ್ತು ಸೂರ್‍ಯನ ।
ಎತ್ತಿ ಬೈವರು ಕಷ್ಟಚಿತ್ತರು ।
ಅತ್ತಲಿತ್ತಲು ಅಲುಕದಿಹ ಹನ್ನೊಂದುದಿನಪರಿಯು ॥ ೧೫ ॥

ನಿತ್ಯ ಮಾಡಲು ಸೂರ್‍ಯ ಪೋಗನು ।
ಒತ್ತಿಯಡರುತ ಕೇತು ತಡೆದನೊ ।
ಸತ್ತಿತೋ ರಥ ಕುದುರೆ ಸೂರ್‍ಯನ ಸಾರಥಿಯು ಮೃತನೊ ॥
ಚಿತ್ತಜಾರಿಯ ಧ್ಯಾನ ಮರವೆಯೊ ।
ಳತ್ತ ನಿಂದನೊ ಕ್ಷಿತಿಯ ಮನುಜರ ।
ಸುತ್ತ ಗೋಳಿಡಿಸುತ್ತಲೈದನೆ ಎಂದು ಮರುಗಿದರು ॥ ೧೬ ॥

ಇಂತು ಕಠಿನದ ಮನದೊಳಿರುವರಿ ।
ನಿಂತ ನಿಲುಗಡೆಯಲ್ಲಿ ಕಾಣುವ ।
ನಂತು ನಿಂದಿಹ ಕಾಣೊ ಎಂದೀ ಪರಿಯಲಾಡಿದರು ॥
ನಿಂತ ಘಳಿಗೆಯ ಲೆಕ್ಕ ನೋಡಲು ।
ಮುಂತೆಯಾರ್‍ನೂರರುವತಾಯಿತು ।
ಮಂತಣೇಶಗೆ ಘಳಿಗೆ ಲೆಕ್ಕವ ಬಂದು ಪೇಳಿದರು ॥ ೧೭ ॥

ಬೆಳಕು ಹಿಂಗದು ಸೂರ್‍ಯ ಜರಿಯನು ।
ತಿಳಿ ಇದಾರ್‍ನೂರು ಮೇಲೆ ಅರವತ್ತು ।
ಚೆಲುವದಾಯಿತು ಘಳಿಗೆ ಲೆಕ್ಕವು ಕೇಳು ನೃಪವರನೆ ॥
ಬಳಿಕ ಬಿಜ್ಜಳ ಕೇಳಿ ತಿಳಿದನು ।
ಇಳೆಯೊಳಚ್ಚರಿ ಜನರ ಶೋಕವು ।
ನಳಿನ ಸಖ ನಿಂತಿರುವ ಬಗೆಯನು ಕಂಡು ಬೆರಗಾದ ॥ ೧೮ ॥

ಬಸವರಾಜನ ಮಹಿಮೆ ತಂತ್ರವು ।
ಪೊಸತು ಮತ್ತೊಂದಿಲ್ಲವೆನ್ನುತ ।
ವಸುಧೆಪತಿ ತಾ ದೈನ್ಯದಿಂದಲಿ ನೆರೆದ ಸಭೆಯೊಳಗೆ ॥
ಕುಶಲ ಕೋವಿದ ಬಸವ ಮೂರ್ತಿಯೆ ।
ಬಿಸಜಸಖನಂ ಬಿಟ್ಟು ನನ್ನಯ ।
ನಸುಮತಿಯ ತಪ್ಪನ್ನು ಕ್ಷಮಿಪುದು ನಿನ್ನ ಲೆಕ್ಕವನು ॥ ೧೯ ॥

ಕೇಳಿದುದು ತಪ್ಪೆನ್ನ ಮನ್ನಿಸು ।
ಕಾಲಹರ ಶಿವಪೂಜೆಗೈದು ನೀ ।
ಲೀಲೆ ಶ್ರೀ ಗುರು ಬಸವಗೆನ್ನಲು ಸೂರ್‍ಯ ತಡೆದುದನು ॥
ಭಾಳಲೋಚನಗರುಹಲೀಪರಿ ।
ಮೇಲೆ ದಿನಕರಗೆನ್ನಲಾಕ್ಷಣ ।
ಪೇಳಿದಪ್ಪಣೆಯಿಂದ ಪೋದನು ಬಿಸಜಸಖನಾಗ ॥ ೨೦ ॥

ಅಂದು ಶ್ರೀ ಕಲ್ಯಾಣ ಪಟ್ಟಣ ।
ಸಂದ ವಿಸ್ಮಿತದಿಂದ ಬಸವ ದಿ ।
ನೇಂದ್ರನನು ಕೊಂಡಾಡಿ ನುತಿಸುತಲಿರ್ದರವರಂದು ॥
ಅಂದು ಬಿಜ್ಜಳ ಸಭೆಯ ತಾರೆಯೊ ।
ಳ್ಚಂದದಲಿ ಥಳ ಥಳಿಸಿ ರಂಜಿಪ ।
ಚಂದ್ರನಂದದಿ ಮೆರೆದ ಮಹಿಮನು ಬಸವರಾಜೇಂದ್ರ ॥ ೨೧ ॥

ವಚನ ‖ ಇಂತೀ ಪವಾಡವಂ ಮೆರೆದು, ಬಸವೇಶ ಜಂಗಮ ದಾಸೋಹದಲ್ಲಿರೆ, ಮತ್ತೊಂದು ದಿನದ ಪವಾಡವೆಂತೆನೆ.

## ಚಿತ್ರದ ರೂಹು ಜಂಗಮವಾದ ಪವಾಡ

**ಸಾಂಗತ್ಯ.**

ಧರಣೀಶ ಬಿಜ್ಜಳ ಬಸವ ಮಂತ್ರೀಶಗೆ । ಬರೆದಿಹ ಚಿತ್ರಮಾಳಿಗೆಯ ‖
ಕಿರಿದು ಕುಗ್ರಾಮವು ಕೆಡಹಿ ಬಲ್ನೂತನ । ಹಿರಿದಾಗಿ ಕಟ್ಟಿಸು ಚೆಲ್ವಿಂ ‖ ೧ ‖
ಎಂದ ಅಪ್ಪಣೆಯ ಪ್ರಕಾರ ಕಾಮಾಟಿಗರ । ಅಂದು ಬಸವ ಕರೆಸಿದನು ‖
ಬಂದರು ತಮ್ಮ ಆಯುಧ ಸಂಗ್ರಹದಿಂದ । ನಿಂದರು ಮಾಳಿಗೆಯೆದುರು ‖ ೨ ‖
ಕೆಡಹುತ್ತಲಿರೆ ಗೋಡೆಯೊಳಗೊಂದು ಚಿತ್ರದ । ಮೃಡನಂತೆ ಜಂಗಮರೂಪು ‖
ಜಡೆಮುಡಿ ಗಡ್ಡ ಹಿಡಿದು ಜಪಸರ ಕೈಯ್ಯ । ಒಡಲು ಬೆಚ್ಚಂತೆ ಮೂರ್ತಿಗನು ‖ ೩ ‖
ಇರೆ ಕಂಡು ಕಾಮಾಟಿಗರು ಹಾಸ್ಯಗೈಯ್ಯುತ್ತ । ಪರಿ ಪರಿ ಭಕ್ಷ್ಯ ಭೋಜ್ಯವನುಂಡು ‖
ಪಿರಿದಾದ ಬೊಜ್ಜುಗನವನ ನೋಡಿ ತಿವಿಯೆಂದು । ಭರದಿ ಹಾರೆಯೊಳ್ತಿವಿಯುತಿರೆ ‖
ಜಡೆಯ ನೋಡಯ್ಯನ ಗಡ್ಡ ನೋಡೀತನ । ಅಡರಿದ ಸೆಜ್ಜೆ ಗಾತ್ರದಲಿ ‖
ಉಡಿದಾರ ನೋಡೆಂದು ಒಡೆದರು ಚಿತ್ರವ । ಮೃಡ ಜಂಗಮನನ್ನು ಆಗ ‖ ೫ ‖
ಹೀಗೆಂದು ಅಗೆವ ಶಬ್ದವ ಕೇಳಿ ತಾ ಬಂದ । ಜಾಗಿನಿಂ ಜಂಗಮನೋರ್ವ ‖
ಜಾಗುಮಾಡದೆ ಜಂಗಮ ದ್ರೋಹಗೈವರ । ಆಗ ಬೇಡಿರೊ ದುಷ್ಟ ವಾಕ್ಯವೆನೆ ‖ ೬ ‖
ನಡೆಯಯ್ಯ ನಿನ್ನಾರು ಕರೆದರು ಪೋಗೆಂದು । ಜಡಿದು ಝುಂಕಿಸಿ ನುಡಿಯಲಿಕೆ ‖
ಕಡು ಕೋಪವಾಗುತ್ತ ಹಾರೆಯ ತಾ ಕಿತ್ತು । ಪೊಡೆದು ಮಡುಹಿದ ನಾಲ್ವರನು ‖ ೭ ‖
ಕಾಮಾಟಿಗರು ಪೋಗಿ ಬಿಜ್ಜಳ ನೃಪನಿಗೆ । ತಾವ್ಮಾಡಿದಂದಗಳೊರೆಯೆ ‖
ಸ್ವಾಮಿ ಕೇಳಯ್ಯನೋರ್ವನು ಬಂದು ನಮ್ಮಯ । ದೇವ ಜಂಗಮನ ಹಿಡಿಯುವರೆ ‖
ಎಂದು ಹಾರೆಯ ಕಿತ್ತುಕೊಂಡು ಹೊಡೆಯೆ ನಮ್ಮ । ವೃಂದ ಜನ ನಾಲ್ವರ ಕೊಂದ ‖
ಒಂದು ಕ್ಷಣದಿ ಪ್ರಾಣ ಯಮಪುರಿಗೈಸುತ । ಬಂದ ಬಸವನರಮನೆಗೆ ‖ ೯ ‖
ಕೇಳುತಾಕ್ಷಣ ರಾಯ ಕೋಪದಿ ಮಂತ್ರಿಯ । ಧಾಳ ಧೂಳಿಯೊಳ್ಕರಸಿದನು ।
ಪೇಳುವದಿನ್ನೇನು ನಿಮ್ಮ ಉದ್ದಂಡತೆ । ಕೋಳುಗೊಂಡರು ಪುರವನ್ನು ‖ ೧೦ ‖
ಅರಮನೆಗೆಲಸವಗೈವ ಕಾಮಾಟರ । ಭರದಿ ನಿಮ್ಮೊಡೆಯರು ಬಂದು ।
ತರುಬಿ ತಿವಿದು ಹಾರೆಯಿಂದ ಪ್ರಾಣ ತೆಗೆದು । ಬರಬಹುದೇನಯ್ಯ ಮಂತ್ರಿ ‖ ೧೧ ‖
ದುಡುಕು ಮಾಡರು ನಮ್ಮ ಶಿವಗಣಂಗಳು ಕೇಳು । ಮೃಡನಂಥ ಜಂಗಮ ರೂಹ ‖
ಬಡಿದು ಬೈಯುವ ವಾಕ್ಯ ಬೇಡವೆಂದೆನಲಾಗ । ಜಡಿದು ನುಡಿಯೆ ಕೊಂದರವರು ‖

ವಚನ ‖ ಆ ಮಾತಿಗೆ ರಾಯನೇನೆನ್ನುತಿರ್ದಪನು.

**ತ್ರಿವುಡೆ.**

ರೂಢಿಯೊಳಗೆನ್ನ ಗಣನೆಯಿಲ್ಲವೆ । ಗೋಡೆ ಚಿತ್ರವ ಹೊಡೆದರೇ ಇಂತು ।
ಗಾಢ ವೋಡಿಯೋಳ್ ಹೊಡೆದು ಕೆಡೆಪುದು – ಮಂತ್ರಿ ನಿನಗೊಪ್ಪೆ ॥ ೧ ॥

ಚಿತ್ರ ಜಂಗಮ ರೂಪು ಶಿವಕಳೆ । ಧಾತ್ರಿ ಪತಿಯೆ ಅರಿತು ಅರಿಯೆ ನೀ ।
ಚಿತ್ರದೊಳು ಕಳೆಯೆದ್ದು ಬರುವದು – ಪೃಥ್ವಿ ಪತಿಯೆ ॥ ೨ ॥

ನೋಡಬೇಕಿನ್ನಾ ಮಹತ್ತನು । ಗಾಢ ಬಂದನು ಸಹಿತಲೆಲ್ಲರ ।
ಗೋಡೆ ಚಿತ್ರವು ಜೀವಮಾಗಿಯೆ – ನಡೆವ ಅಚ್ಚರಿಯ ॥ ೩ ॥

ಕೂಡಿಯಾಕ್ಷಣ ನೋಡಿ ಜನಗಳು । ಆಡುತಲಿ ಪರಿ ಪರಿಯ ಮಾತನು ।
ನೋಡಿದನು ಬಸವಯ್ಯ ಪರುಷದ – ನೋಟದಿಂದಾಗ ॥ ೪ ॥

**ಏಕತಾಳ.**

ಶರಣು ಶ್ರೀ ಗುರು ಬನ್ನಿ । ದುರುಳ ಮಾನವರೊಳು ।
ಇರಸಲ್ಲ ಎದ್ದು ಬನ್ನಿ । ಎನ್ನಲಾಕ್ಷಣದಿ ॥ ೧ ॥

ಬಂದ ಜಂಗಮ ಗಾಯ । ದಿಂದಿರಲೆಲ್ಲರ್ಕಂಡು ।
ಅಂದು ಚೋದ್ಯವಗೊಂಡ । ರಾಗ ಜೈನಿಗರು ॥ ೨ ॥

ನುತಿಸಿ ಕೀರ್ತಿಸಿ ಕೊಂ । ಡಾಡುತ್ತ ಎರಗಲ್ಕೆ ।
ಹತಿಸಿದವರ ಪ್ರಾಣ । ಪೋದ ಮಾನವರ ॥ ೩ ॥

ಎಬ್ಬಿಸಿಯವರನ್ನು । ಮಬ್ಬು ಹರಿಸಿ ಕಳುಹಿ ।
ಎಬ್ಬಿಸಿ ಜಂಗಮವ । ಕರದೊಯ್ದು ಬಸವ ॥ ೪ ॥

ಈ ಪರಿ ಪವಾಡವ । ಇಳೆಯೊಳು ಮೆರೆಯುತ್ತ ।
ಕಾಪಾಲಿ ಬಸವಯ್ಯ । ಪೃಥ್ವಿ ಪಾಲಿಪನು ॥ ೫ ॥

ವಚನ ॥ ಇಂತೀ ಚಿತ್ರದ ಜಂಗಮವಂ ಕರೆದೊಯ್ದು ಚಿತ್ರದ ಸಂಗಯ್ಯನೆಂದು ಪೆಸರಿಟ್ಟು, ಗಣಸ್ತೋಮದಲ್ಲಿ ಸೇರಿಸಿ ಭಕ್ತಿಯಂ ನಡೆಸುತ್ತಿರೆ, ಮತ್ತೊಂದು ದಿನದ ಪವಾಡವೆಂತೆನೆ.

## ತೃಣವಂ ಶಿವಭಕ್ತನಮಾಡಿ. ಮರದ ಬೊಂಬೆಯಂ ಜಂಗಮನ ಮಾಡಿದ ಪವಾಡ.

**ಜಂಪೆ.**

ಕಲ್ಯಾಣದರಸು ಬಿ । ಜ್ಜಳ ರಾಯನೊಂದು ದಿನ ।
ಖುಲ್ಲ ತನದಿಂದೊಂದು । ಕುಹಕ ಮಾಡಿದನು ॥ ೧ ॥

ಹುಲ್ಲುಬೊಂಬೆಯ ಮಾಡಿ । ಹರಭಕ್ತನಾ ತೆರದಿ
ನಿಲ್ಲಿಸಿಯೆ ಬಸವಂಗೆ । ನಗುತ ತೋರಿದನು ॥ ೨ ॥

ಹುಸಿಯ ಭಕ್ತನ ಮಾಡಿ । ಬಸವನಿಗೆ ತೋರಿಸಲು ।
ಹಸನಾಗಿ ಕೈ ಮುಗಿದ । ಬಿಸಿಗಣ್ಣ ಬಸವ ॥ ೩ ॥

ಅಸುವಿತ್ತು ಆ ತೃಣಕೆ । ವಸುಧೆಮೇಲ್ತಾ ನಡೆಸಿ ।
ಉಸುರಿ ತನ್ನರಮನೆಗೆ । ಕಳುಹೆ ಜನರೆದುರು ॥ ೪ ॥

ನೆರೆದ ಪುರಜನರೆಲ್ಲ । ಬೆರಗಾಗಿ ಬಸವಯ್ಯನ ।
ಸ್ಮರಿಸಿ ಕೀರ್ತಿಸಿ ನುತಿಸಿ । ಕೊಂಡಾಡುತಿರಲು ॥ ೫ ॥

ಮತ್ತೊಂದು ದಿನ ರಾಯ । ಓಜಗನ ಕೈಯಿಂದ ।
ಕೆತ್ತಿಸಿಯೆ ಮರಬೊಂಬೆ । ಚೆಲುವಿಂದ ಮಾಡಿ ॥ ೬ ॥

ಕಾವಿ ದುಕೂಲವು ಲಿಂಗ । ಧರಿಸಿ ಭಸಿತವನಾಗ ।
ಶಿವಾಕ್ಷಿ ಮಾಲೆಯನು । ಸೊಗಸಿಂದ ಧರಿಸಿ ॥ ೭ ॥

ಜಂಗಮವನದಗೆಯ್ದು । ಜವದಿ ಬಿಜ್ಜಳ ರಾಯ ।
ಸಂಗನಾ ಬಸವಂಗೆ । ಸೊಗಸಿಂದ ಪೇಳ್ದ ॥ ೮ ॥

ನೋಡು ಬಸವಯ್ಯ ನಿಮ್ಮ । ಮೃಡರೂಪ ಜಂಗಮನು ।
ಆಡಿ ನಿಮ್ಮವರೊಳ್ಮನಿ । ದಿಲ್ಲಿಹನೆ ನೋಡು ॥ ೯ ॥

ಎಂದು ತೋರಲು ರಾಯ । ಚಂದದಿಂ ಬಸವಯ್ಯ ।
ನಿಂದು ನೋಡಿದ ಕೃತಕ । ದಂದವನು ಆಗ ॥ ೧೦ ॥

ಇಂದುಧರ ಲಾಂಛನವ । ಕಂಡು ತಾ ಶರಣಾರ್ಥಿ ।
ಎಂದು ಕರವೆತ್ತಿ ಬಸ । ವಯ್ಯ ಮುಗಿಯಲಿಕೆ ॥ ೧೧ ॥

ಸಟೆಯ ಜಂಗಮುವನ್ನು । ನೋಟ ಪರುಷದಿ ನೋಡೆ ।
ಕುಟಿಲತ್ವಗಳು ಪೋಗಿ । ದಿಟದಿ ತೋರುತ್ತ ॥ ೧೨ ॥

ಜಂಗಮುವಾಗೆ ಕಂಡು । ಅಂಗ ಪುಳಕದಿ ರಾಯ ।
ಮಂಗಳ ಮಹಿಮನಿಗೆ । ಮಹಿಯೊಳೆಣೆಯುಂಟೆ ॥ ೧೩ ॥

ಎಂದು ಚೋದ್ಯವ ತಾಳಿ । ಕನಕ ಭೂಷಣವಿತ್ತು ।
ಅಂದು ಕಳುಹಿದ ಮನೆಗೆ । ಕೊಂಡಾಡಿ ರಾಯ ॥ ೧೪ ॥

ವಚನ ॥ ಇಂತಿ ಬಿಜ್ಜಳ ಮಾಡಿಸಿದ ಕಾಷ್ಠ ಜಂಗಮುವಂ ಕರೆತಂದು, ಗಣಸಮೂಹದಲ್ಲಿ ಸೇರಿಸಿ, ದಾಸೋಹವಂಗೆಯ್ಯುತ್ತಿರೆ, ಮತ್ತೊಂದು ದಿನದ **ಪವಾಡವೆಂತೆನೆ.**

## ಬೂದಿಗುಂಬಳಕಾಯಿಗಳು ಜಂಗಮವಾದ ಪವಾಡ.

**ಏಕತಾಳ – ಅರ್ಧರೇಕು.**

ಒಂದು ದಿನದಿ ರಾಯ – ಅರ್ಥಿಯಿಂದೆಸಗಿ |
ಚಂದದಿಂ ಬಸವ ತಾ – ಸ್ವಾರಿಗೈದೈದಿ ‖ ೧ ‖
ಬರುತಿರೆ ಹಾರುವರ – ಬೀದಿಯೊಳ್ಸಿರೆದು |
ತಿರುಕ ವಿಪ್ರನ ಗೃಹದ – ಮೇಲ್ಭಾಗದಲ್ಲಿ ‖ ೨ ‖
ತೋರುವ ಬೂದಿಗುಂ – ಬಳಕಾಯ ನೋಡಿ |
ಭಸಿತದಂತೆಸೆಯಲು – ಬಿಜ್ಜಳನೆಂದ ‖ ೩ ‖
ಬಸವಯ್ಯ ನಿಮ್ಮ ಗಣ – ಮರಿಗಳೊಮ್ಮುಖದಿ |
ತುಂಟತನದೊಳ್ಗೃಹವ – ತುಳಿಯುವದ ನೋಡು ‖ ೪ ‖
ಎಂದು ತೋರಲು ನೋಡಿ – ಆಗ ಬಸವೇಶ |
ನಿಂದು ನೋಡುತ ಗೃಹವ – ಕೂಷ್ಮಾಂಡಗಳಿಗೆ ‖ ೫ ‖
ಶರಣಾರ್ಥಿ ಜಂಗಮರ – ಚಿತ್ತೈಸೆನೆ ಬಸವ |
ಕರವ ಮುಗಿಯಲು ಆ – ಕಾಯಿಗಳೆಲ್ಲ ‖ ೬ ‖
ಗಣರೂಪ ತಾಳಿ ಬಸವ – ನರಮನೆಗೆ ಪೋಗೆ |
ಮೇದಿನಿಪತಿ ನೋಡಿ – ಕಡುಚೋದ್ಯವಾದ ‖ ೭ ‖

ವಚನ ‖ ಇಂತೀ ರಾಯ ಹಾಸ್ಯವಾಗಿ ನುಡಿಯೆ, ಬಸವ ದೃಶ್ಯವಾಗಿ ತೋರಿ ಮುಂದೆ ಬರೆ ಮತ್ತು ಪವಾಡವೆಂತೆನೆ.

## ಕೇತಲೇಶ್ವರ ಲಿಂಗದಲ್ಲಿ ಜಡೆ ಮುಡಿಯಂ ತೋರಿ, ವಿಧವೆಯು ಮುತ್ತೈದೆ ಮಾಡಿದ ಪವಾಡ.

**ಸಾಂಗತ್ಯ.**

ಕೇತಲೇಶ್ವರನೆಂಬ ಲಿಂಗದಾಲಯವೊಂದು | ಭಾಸುರ ತೇಜವಾಂತಿಹುದು ‖
ಓತು ತಾ ಪೂಜಿಪ ಪೂಜಾರಿಯೋರ್ವನು | ವೇಸಿಯರ ಕೂಟದೊಳಿರ್ದು ‖ ೧ ‖
ನಿದ್ದೆಯ ಮೊಬ್ಬಿಲಿ ಆತನು ಜಾಡ್ಯದಿ | ಮಧ್ಯಾಹ್ನ ಪರಿಯಂತ ಪೂಜೆ ‖
ವಿಧಿಯಿಲ್ಲದಲಿರೆ ದೊರೆ ಮಂತ್ರಿ ಸಹವಾಗಿ | ಒದಗಿ ಬಂದರು ಸ್ವಾರಿಯಲ್ಲಿ ‖ ೨ ‖
ದೇವಾಲಯಕ್ಕಾಗಿ ಬರಲು ಆ ಕ್ಷಣ ಸ್ವಾರಿ | ಗಾವಳಿಯಿಂದೋಡಿ ಬಂದು ‖
ಭೂವರ ಮಂತ್ರಿಯು ಪೊಕ್ಕು ನೋಡಿದರೆನ್ನ[1] ಜೀವಹಿಂಸೆಯ ಮಾ[1] ಳ್ಪರೆಂದು[1] ‖

---

1-1 ಡದಿಹರೆ (ಎ.)

ಈವರಿವಿಗು ಪೂಜೆಯ ಮಾಡಲಿಲ್ಲೆಂದು | ನೋವ ಮಾಡುವರೊ ಎಂದಂಜಿ ||
ಆವಾಗ ನಿಂದಿರೆ ಬಂದರು ಅಲ್ಲಿಗೆ | ದೇವಬಸವ ದೊರೆಯಾಗ || ೪ ||

ಬೇಗದಿ ಪೂಜಾರಿ ತನ್ನ ಶಿಖಿಯೊಳಿರ್ದ | ಪೂಗಳನಿರಿಸಿ ತಟ್ಟೆಯಲಿ ||
ಆಗ ತಂದಿತ್ತು ಪ್ರಸಾದ[1] ವೆಂದೆನುತಲಿ[1] | ಜಾಗ್ರತೆಯಿಂ ರಾಯನಾಂತ || ೫ ||

ಕಣ್ಣಿಗೊತ್ತಿಯೆ ಕೈಯೊಳ್ ಪಿಡಿದಿರೆ ಕೇಶವು | ಬಣ್ಣಿಸೆ ಕಂಡನಾ ರಾಯ ||
ಎನ್ನಾಪ್ತ ಬಸವಯ್ಯ ನಿಮ್ಮ ದೇವರಶಿರದಿ | ಇನ್ನುಂಟೆ ಕೇಶವೇನಯ್ಯ || ೬ ||

ಎಂದ ರಾಯನವಮಾತಿಗಂದು ಬಸವ ನೋಡಿ | ಇಂದು ಈ ತಮ್ಮಡಿಯನ್ನು ||
ಕೊಂದಪನಿವನ ರಾಯನು ಕಾಯ ಬೇಕೆಂದು | ಪರುಷದ ಮಾತನಾಡಿದನು || ೭ ||

ಉಂಟು ನಮ್ಮಯ ಲಿಂಗದುತ್ತಮಾಂಗದಿ ಮುಡಿ | ಜಟೆಯುಂಟು ಎನ್ನಲಾಕ್ಷಣದಿ ||
ಜಂಟೆಯಿಂ ಬಿಸವಣ್ಣ ನೋಳ್ಪೆ ತೋರೆಂದನು | ಪಟ್ಟದರಸು ಬಿಜ್ಜಳನು || ೮ ||

ತೋರಿದ ನೃಪತಿಗೆ ಲಿಂಗಮಸ್ತಕದಲ್ಲಿ | ಭಾರಿಯ ಜಡೆ ಮುಡಿಯಾಗ ||
ಧಾರಿಣಿಪತಿ ಕಂಡು ಅಚ್ಚರಿ[2] ಯನು ಪಟ್ಟು[2] | ಮಾರಾ[3] ರಿ ಈತನಹುದೆಂದು[3] || ೯ ||

ಅಲ್ಲಿಂದ ಮುಂದಕ್ಕೆ ಬರುತಿರಲ್ಲಲ್ಲೊರ್ವ | ನಳಿದಿರೆ ವಿಮಾನದೊಳಿರಿಸಿ ||
ಎಲ್ಲರೂ ಹೊತ್ತು ಬರಲು ಮುಂದವನ ಸತಿ | ಕಲ್ಲು ಮರಳು ಹೊಯ್ದುಳುತ || ೧೦ ||

ಏಳುತ್ತ ಬೀಳುತ್ತ ಆ ವಿಮಾನದ ಮುಂದೆ | ಬಹಳ ಶೋಕದಿ ಬರುತಲವಳು ||
ಭಾಳಾಕ್ಷಬಸವಮಂತ್ರೀಶನ ಕಾಣುತ್ತ | ಬಾಲೆಸೈಗೆಡದಳಲಿದಳು || ೧೧ ||

ಬಸವ ಎಂದಡೆ ಮರಣವ ಗೆಲಬಹುದೆಂದು | ಪಸರಿಸಿ ಒರಲುತ ಕೇಳ್ದ ||
ಅಸಮ ಗಣ ರಕ್ಷಕ ಪತಿ ಪಾಲಿಸೈಯೆಂದು | ಬಸವನ ಸೆರಗೊಡ್ಡಿ ಬೇಡೆ || ೧೨ ||

ಮುತ್ತೈದೆಯಾಗೆಂದು ಬಸವ ಹರಸಲಾಗ | ಪೃಥ್ವೀಶ ಹಾಸ್ಯಮಾಡಿದನು ||
ಸತ್ತಹೆಣನಸತಿ ಮುತ್ತೈದೆಯಾಗೆಂದು | ವ್ಯರ್ಥದ ಮಾತನಾಡುವರೆ || ೧೩ ||

ಎನುತ ಬಿಜ್ಜಳರಾಯನಾಡಿದ ಮಾತಿಗೆ | ಘನ ಶರಣನು ಬಸವೇಶ ||
ವನಿತೆಯರನ್ನನ ವಿಮಾನವತರಿಸಲ್ಲಿ | ಜನಪತಿಯ ಮುಂದಿಳುಹಿದ[4] ನು[4] || ೧೪ ||

ಪೃಥ್ವಿಪನೆಂಬೆಣಿಕೆಯು ಇನಿತಿಲ್ಲದೆ | ಅತಿ ಉಲ್ಲಾಸದೊಳು ನೀನೀಗ ||
ರಥವೇರಿ ಬರುತಿಹೆ ಇಂತು ಹಮ್ಮೇನೆಂದು | ಪರುಷ ವಾಕ್ಯದಿ ಪ್ರೇತ ನುಡಿಸೆ || ೧೫ ||

ಬಸವನಾ ಪರುಷವಾಕ್ಯವು ಪ್ರೇತ ಶ್ರವಣಕ್ಕೆ | ಎಸಗಿ ಕೇಳಲು ಮೃತ್ಯುನೀಗಿ ||
ಜ[illegible] ಸಂಜೀವನ ಸೋಂಕಿದ ತೆರದೊಳು | ಕುಶಲದಿಂದೆದ್ದುದಾ ಶವವು ||೧೬||

---

1-1 ಪುಷ್ಪಗಳಿಂದು | (ಎ.) 2-2 ಗೊಂಡನು (ಎ.) 3-3 ಹರನೆಂದು ನಿಶ್ಚೈಸಿ (ಎ.)
4-4 ಳು (ಇ, ದ.)

ವಿಧಿಯಾಜ್ಞೆ ಸಲಿಸಲ್ಕೆ ನಾ ಪೋಗಿ ಇರ್ದೆನು । ಚೆದುರ ಬಸವ ನಿನ್ನವಾಕ್ಯ ॥
ಸದುಹೃದಯಕೆ ತಾಗೆ ಮಾರಿ ವಿಧಿಯಾಜ್ಞೆಯ । ಒದಗಿ ಬಂದೆನು ನಿನ್ನ ಬಳಿಗೆ ॥
ಎಂದು ಸಾಷ್ಟಾಂಗದಿಂ ಮಣಿಯಲು ಜನರೆಲ್ಲ । ಅಂದು ವಿಸ್ಮಿತರಾಗಿ ಹಿಗ್ಗಿ ॥
ಇಂದು ಮೊದಲಾಗಿ ಈ ಪುರದೊಳು ವಿಧಿಯಾಜ್ಞೆ । ಯೊಂದು ಭಯವಿಲ್ಲೆಂದು ಪೊಗಳೆ ॥ ೧೮ ॥

ಗಂಡನಳಿದು ವಿಮಾನದ ಮುಂದೆ ಮೆರೆವಂಥ । ಮುಂಡೆ ಮುತ್ತೈದೆಯ ಮಾಡಿ ॥
ಮಂಡಲೇಶನ ಮುಂದೆ ಮೆರೆದ ಪವಾಡವ । ದಂಡನಾಯಕ ಬಸವೇಶ ॥ ೧೯ ॥

**ವಚನ** ॥ ಇಂತೀ ವೈಹಾಳಿಯಂ ತೀರಿಸಿ ಸೈನಿಕರಂ ಯಥಾಸ್ಥಾನಕ್ಕೆ ಬೀಳ್ಕೊಟ್ಟು, ಬಸವೇಶ ತನ್ನರಮನಗೆ ಬಂದು ನಿತ್ಯ ಕ್ರಿಯೆಯಂ ತೀರ್ಚಿ, ದಾಸೋಹದಲ್ಲಿರೆ ಮತ್ತೊಂದು ದಿನದ ಪವಾಡವೆಂತೆನೆ.

## ಚಂದ್ರಮತಿಗೆ ಜಂಬೀರಫಲ ಲಿಂಗವಾದ ಪವಾಡ.

**ತ್ರಿವುಡೆ.**

ಒಂದುದಿನ ಬಿಜ್ಜಳನ ಸದರಿಲಿ । ಬಂದಿರಲು ಬಸವೇಶ ಸಂಭ್ರಮ ।
ದಿಂದಲಿರುತಿರೆ ನೃಪನ ಮೋಹದ – ಮಂದಗಮನೆ ॥ ೧ ॥

ರಂಭೆ ರತಿಯರಿಗಿಂತ ಇಮ್ಮಡಿ । ಕಂಬು ಕಂಠಿಯು ಭರತನಾಟ್ಯದಿ ।
ಕುಂಭಿನಿಗೆ ಆಶ್ಚರ್ಯಮಾದಂತ – ನಿಂದು ನೃತ್ಯವನು ॥ ೨ ॥

ಆಡುತಿರೆ ರಾಗಾದಿ ರಚನೆಯೊಳ್ । ಪಾಡಲಿಕೆ ಶಿಲೆ ಕರಗುವಂದದಿ ।
ನೋಡಲಿಕೆ ಪ್ರತ್ಯಕ್ಷ ರಂಭೆಯ – ನಾರಿಯಂತಿಹಳು ॥ ೩ ॥

ಜವದಿ ಬ್ರಾಹ್ಮಣನೋರ್ವ ಜಂಬೀರ । ದವಿರಳದ ಫಲತಂದು ಹರಸುತ ।
ಅವನಿಪತಿ ಬಿಜ್ಜಳಗೆ ಕೊಟ್ಟನು – ಅಮಿತದಿಂದ ॥ ೪ ॥

ಯುವತಿ ನಾಮವು ಚಂದ್ರಮತಿಯೆಂದು । ಶಿವನ ಪೂಜಾಪೇಕ್ಷೆಯಿಂದಿಹಳ್ ।
ಶಿವನಭಕ್ತರ ಕೇಳುತಿರ್ಪಳು – ಶಿವಲಿಂಗವನ್ನು ॥ ೫ ॥

ಗುರುವಹಸ್ತದಿ ಲಿಂಗಪಡೆವರೆ । ತರುಣಿ ಬಯಸುತಲಿರ್ದಳನುಗಾಲ ।
ಮೊರೆಯ ಸಮುಖದಿ ನಾಟ್ಯವೆಸಗುತ – ಇರಲು ಅವಳಾಗ ॥ ೬ ॥

ನೋಡಿ ಜಂಬೀರ ಫಲವ ರಾಯನು । ಪಿಡಿದು ಮಂತ್ರಿಯ ಹಸ್ತಕೀಯಲು ।
ಗಾಢದಿಂ ವಿಟಜಂಗಮನು ಅದ – ಬೇಡಿ ತೆಕ್ಕೊಂಡ ॥ ೭ ॥

ಮತ್ತಗಜಗಮನೆಯಳ ನೋಡಿ । ವೃತ್ತ ಕುಚ ಮಧ್ಯದಲಿ ಇಟ್ಟನು ।
ನಿಸ್ತ್ರೈಯಾಣ ಆತುಕೊಂಡಳು – ನೋಡಿ ಜಂಗಮನ ॥ ೮ ॥

ಇಂದು ದೊರಕಿತು ಗುರುವಕರುಣವು । ಎಂದು ಭಾವಿಸಿ ಲಿಂಗಮಾಗಿಯೆ ।
ಚಂದ್ರಮತಿ ಮನಪುಳುಕಿ ತಾನಾ– ನಂದ ಪಟ್ಟಳ್ ॥ ೯ ॥

ವಚನ ॥ ಇಂತೀ ಚಂದ್ರಮತಿ ಲಿಂಗದೊರಕಿತೆಂದು ಹರುಷದಿಂದಿರಲು, ಬಿಜ್ಜಳರಾಯಂ ನೋಡಿ ಬಹು ರೌದ್ರದಿಂದ ಬಸವೇಶನಕೂಡೆ ಏನೆನ್ನುತಿರ್ದಪನು.

**ಏಕತಾಳ.**

ಇಷ್ಟು ಉದ್ದಂಡತೆ । ನಿಮುಗುಂಟೆ ಸಭೆಯಲ್ಲಿ ।
ಪಟ್ಟದರಸಿನಾ ಭೀತಿ । ಇನಿತಾದರಿಲ್ಲ ॥ ೧ ॥

ಪುಂಡ ಜಂಗಮರನ್ನು । ಮಂಡಲೇಶನ ಸಭೆಗೆ ।
ದಂಡನಾಯಕ ಕರ । ತರಲಿನ್ನುಬಹುದೆ ॥ ೨ ॥

ಕನಲಿ ಗರ್ಜಿಸಿ ರಾಯ । ಘನ ಕೋಪದಿಂದಲಿ ।
ಚಿನಿಖಂಡ ಮಾಡುವೆ । ಚಿಕ್ಕ ಹಮ್ಮಳಿವೆ ॥ ೩ ॥

ನೀತಿಯೇ ಬಸವಯ್ಯ । ನಿನಗೊಪ್ಪೆ ಸಭೆಯೊಳು ।
ಈತನ ತರಿಸುವೆ । ನೆಂದನಾ ನೃಪತಿ ॥ ೪ ॥

ಕೋಪವೇತಕೆ ನಿನಗೆ । ಭೂಪ ಅವಳ ಕೇಳು
ಈ ಪರಿ ವಿವರವಾ । ಳಾಪ ಪೇಳುವಳು ॥ ೫ ॥

ಎಂಬ ಸಮಯಕ್ಕೆ ಅವ । ಳೆಂದಳು ರಾಜೇಂದ್ರ ।
ಶಂಭು ಶರಣರ ನಿತ್ಯ । ಸದ್ಭಕ್ತಿಯಿಂದ ॥ ೬ ॥

ಲಿಂಗವ ಬೇಡುತಿರ್ದೆ । ಭಂಗಿಸಿ ಕೊಡರವರು ।
ಅಂಗಜರಿಪು ಕೃಪೆ । ಆದುದಿಂದೆನಗೆ ॥ ೭ ॥

ಗುರುವಿತ್ತ ಲಿಂಗವು । ಉರಕಮರಿತು ನೀವು ।
ಬರಿದೆ ಕೋಪಗೊಳಲೇಕೆ । ಭೂಪ ಕ್ಷಮಿಸೆಂದ ॥ ೮ ॥

ಲಿಂಗವಾದುದು ಅವ । ಳಂಗ ಸಫಲವಾಯ್ತು ।
ಭಂಗಾರ ಸಜ್ಜೆಯಾಗಿ । ಲಿಂಗವಾಸಿಸಿದ ॥ ೯ ॥

ವಚನ ॥ ಇಂದು ಆಂತೆಕ್ಷಣವೇ ಬಿಜ್ಜಳರಾಯಂ ಅವಳಂ ಹತ್ತಿರ ಬರಿಸಿ, ಆ ಜಂಬೀರಫಲಮಂ ನೋಡಲು, ಭಂಗಾರದಂತೆ ಸಿಪ್ಪೆಯೆಲ್ಲ ಸಜ್ಜೆಯಾಗಿರಲು, ತೆರೆದು ನೋಡೆ ಲಿಂಗಮೂರ್ತಿ ನೆಲೆಸಿರಲು, ಸರ್ವರೂ ಆಶ್ಚರ್ಯವಂಪಟ್ಟು ಶಿವ ಶರಣರ್ಗೆಣೆಯಿಲ್ಲವೆಂದು ಕೊಂಡಾಡುತ್ತಿರ, ಇತ್ತ ಬಸವೇಶ ಬಿಜ್ಜಳನಿಂ ಕಳುಹಿಸಿ ಕೊಂಡುಬಂದು ತನ್ನರಮನೆಯಲ್ಲಿ ಜಂಗಮ ದಾಸೋಹದಲ್ಲಿರೆ ಮತ್ತೊಂದು ದಿನದ **ಪವಾಡವೆಂತೆನೆ.**

# ವಿಟಗಾರಪದ್ಮಯ್ಯ ಸರ್ವಾಂಗ ಲಿಂಗಿಯಾದ ಪವಾಡ.

**ಜಂಪೆ.**

ಧರಣಿಪತಿ ಬಿಜ್ಜಳನ । ವರ ಮೈದುನನೋರ್ವ ।
ಸ್ಮರರೂಪ ವಿಟಪುರುಷ । ಮೆರೆವ ಪದ್ಮಯ್ಯ ॥ ೧ ॥

ಒಂದುದಿನ ಶರಣೆಯರ । ಮಂದಿರಕೆ ವಿಟತನಕೆ ।
ಮಂದಗರ್ವದಿ ಪೋಗೆ । ಇಂದುಮುಖಿ ಕಂಡು ॥ ೨ ॥

ರಂಭೆರೂಪನು ಪಳಿವ । ಸೂಳೆಬೊಮ್ಮಲದೇವಿ ।
ಗಂಭೀರ ನುಡಿಯಿಂದ । ಗಜರಿದಳು ಅವನ ॥ ೩ ॥

ಎಲವೊ ಭವಿಮಾನವನೆ । ಎಮ್ಮ ಅಂಗಳ ನೀನು ।
ಸಲುಗೆಯಿಂ ಮೆಟ್ಟುವರೆ । ಸ್ಮರನ ಮದಬಲಿದು ॥ ೪ ॥

ನಾರಿಮಣಿ ನಿನ್ನೆಳಸಿ । ನಾ ಬಂದೆ ನಿನ್ನೆಡೆಗೆ ।
ಮಾರನಂಬಿಲಿ ನೊಂದೆ । ಮದನ ಮೋಹನೆಯೆ ॥ ೫ ॥

ಕೊಡುವೆ ನೀ ಬೇಡುದುದ । ಕಂತು ಕೇಳಿಯೊಳೆನ್ನ ।
ಒಡಗೂಡೆ ವೈಯ್ಯಾರಿ । ಮಡವಿ ಮಾಣಿಕವೆ ॥ ೬ ॥

ಹೆಳವ ತುದಿಮರ ಜೇನ । ನೆಳಸಿ ಬಾಯ್ಬಿಟ್ಟಂತೆ ।
ಮಲಹರನ ಪೂಜಕರ । ಮನವಿಡಲುಬಹುದೆ ॥ ೭ ॥

ಲಿಂಗವಿಲ್ಲದ ಭವಿಯ । ಅಂಗಸೋಂಕೆವು ನಾವು ।
ಲಿಂಗವಂತರಿಗೆಮ್ಮ । ಅಂಗಸುಖವೀವೊ ॥ ೮ ॥

ಇದಕೆ ತೆರನಂ ಪೇಳು । ಪದುಮಮುಖಿ ನಾ ಕೇಳ್ವೆ ।
ಸದರವಲ್ಲವು ಸುಕೃತಿ । ಸೊಗಸು ವಿಟರಾಯ ॥ ೯ ॥

ಸದಮಲಾತ್ಮಕ ಶಿವನ । ಸದ್ಭಕ್ತರ್ಪದಸೇವೆ ।
ಒದಗಿ ಮಾಡುತಲವ । ರುಂಡು ಮಿಕ್ಕುದನು ॥ ೧೦ ॥

ಕಾದಿರ್ದು ಭುಂಜಿಸಲು । ಆದಪೆ ನೀ ಲಿಂಗಾಂಗಿ ।
ಸಾಧಿಸಲುಬಹುದೆಮ್ಮ । ಸರಸ ಕೋವಿದನೆ ॥ ೧೧ ॥

ನಮ್ಮ ಅಂಗಳ ಪೊಗಲ್ಕೆ । ಯೋಗ್ಯ ಸಮರಸ ಭಾವ ।
ನೆಮ್ಮಿಯಿಂದಾದಪುದು । ನೀ ಕೇಳು ನೀರ ॥ ೧೨ ॥

ಶಿವ ಎನಲು ಭವದುರಿತ । ಕವಿದಿರಲು ತೊಲಗುವದು ।
ಶಿವ ಎನಲು ಬ್ರಹ್ಮಹತ್ಯ । ಸವೆದು ಪೋಗುವದು ॥ ೧೩ ॥

ಶರಣೆ ಬೋಧೆಯಕೇಳಿ | ಶಿವಭಕ್ತರ್ಸೇವೆಯನು |
ವರುಷಪರಿಯಂತಗೈದ | ಅರಸಿ ಶೇಷವನು ॥ ೧೪ ॥

ಒಂದುದಿನ ಬಚ್ಚಲೊಳು | ಒಂದು ಶೇಷವು ದೊರೆಯೆ |
ಚಂದದಿಂ ಭಕ್ತಿಯಲಿ | ಅಂದು ಸೇವಿಸಿದ ॥ ೧೫ ॥

ವಚನ ॥ ಅರಸುವ ಬಯಕೆ ಕೈಸಾರಿ ಬಂದಂತೆ ಈ ಪದ್ಮಯ್ಯನಂ ಪುನರ್ಜನ್ಮ ಮಾಡುವ ಮಹಾಪ್ರಸಾದ ಬಯಕೆ ಕೈಸೇರಲು, ಸವಿದ ಕೂಡಲೇ ಶರೀರ ಸ್ಫೀಚ್ಚಿತ ನಿರ್ಮಲ ಸ್ವರ್ಣ ಬಣ್ಣವಾಗಲು, ಆ ಭವಿಕಾಯಂ ಪೋಗಿ, ಶಿವಲಿಂಗ ದೇಹವಾಂತು ವಿಭೂತಿ ರುದ್ರಾಕ್ಷಿ ಭರಿತನಾಗಲು, ತನ್ನತಾನೇ ನೋಡಿ ಆಶ್ಚರ್ಯ ಯುಕ್ತನಾಗಿ ! ನಿಂದ ಪದ್ಮಯ್ಯನ ಮಹಿಮೆಯಂ ಪ್ರಕಟಿಸಲ್ಕೆ ಕೊಂಡೆಮಂಚಣ್ಣ ರಾಯನೊಳಿಂತೆಂದನದೆಂತೆನೆ.

**ಏಕತಾಳ.**

ಲಾಲಿಸು ರಾಜೇಂದ್ರ | ಲೋಲ ನಿನ್ನ ಮೈದುನನು |
ಸೂಳೆಯೆಂಜಲತಿಂದು | ಸುಕೃತಿಯಾದನಂತೆ ॥ ೧ ॥

ನಿನ್ನ ಕುಲಕೆ ಕುಂದು | ಇನ್ನುತಂದನು ರಾಯ |
ಮುನ್ನ ಪೇಳಿದೆನೆನಲು | ಜಿನ್ನ ನೃಪನಾಗ ॥ ೨ ॥

ಕಡುಕೋಪದಿಂದಾಗ | ಹಿಡಿತರಿಸೆ ಪದ್ಮಯ್ಯನ |
ಮೃಡಭಕ್ತನಂತೆ ಬಂದ | ಪೊಡವಿಪನ ಸಭೆಗೆ ॥ ೩ ॥

ಎಲವೊ ನೀಚಾತ್ಮನೆ | ಕುಲಗೆಟ್ಟು ಪರರ ಎಂ |
ಜಲ ತಿಂದು ನಮಗೆ ನೀ | ತರುವರೇ ಕುಂದ ॥ ೪ ॥

ಹೊಡೆದು ಬಡಿದು ನೃಪ | ಹಿಂಸೆಯ ಪಡಿಸಲು |
ಮೃಡಭಕ್ತರಾ ಮೃದು | ಅಡಿಗಾದೆ ನಾನು ॥ ೫ ॥

ಲಿಂಗಾತ್ಮನಾದೆನೈ | ಹಿಂಗಿತು ಭವಿಕಾಯ |
ಅಂಗಜರಿಪು ಶಿವ | ನಂಗ ನಾನಾದೆ ॥ ೬ ॥

ಕೆಟ್ಟರೇ ಕೆಟ್ಟೆ ನಾನು | ಇಷ್ಟೇಕೆ ಕೋಪವು |
ಕುಟ್ಟುವೆ ತೂರುವೆ | ಕಲ್ಯಾಣಪುರವ ॥ ೭ ॥

ಬಸವಯ್ಯ ತನ್ನೆಯ | ಪರುಷ ದೃಷ್ಟಿಯಿಂ ನೋಡಿ |
ಮಸಗಬೇಡೈ ಅವನ | ಮಹತ್ತ ನೀ ನೋಡು ॥ ೮ ॥

ಲಿಂಗದೇಹಿಗನವ | ನಂಗವೇ ಲಿಂಗವೆನಲು |
ಅಂಗ ಕೊರೆದೀಕ್ಷಿಸೆಂದ | ಮಂಚಿ ರಾಯನಿಗೆ ॥ ೯ ॥

ಆದಡೆ ಪರೀಕ್ಷೆಯನು | ಶೋಧಿಸಿ ಕಾಂಬೆನೆಂದು |
ಮೇದಿನಿಪತಿ ಚರರ್ಗೆ | ಕೊರೆಯೆ ಪೇಳಿದನು || ೧೦ ||

ಉದರ ಕೊರೆಯಲಾಗ | ಸದು ನಿಜವ ಕಾಂಬೆವೆಂದು |
ಒದಗಿ ಸರ್ವರೂ ನೋಡೆ | ವಿಮಲತರದಂಗ || ೧೧ ||

ಸರ್ವಾಂಗ ಲಿಂಗಮಯ | ಶರೀರವೆ ಮಯವಾಗಿ |
ವರ್ಣಿಸಿಯಿರೆ ಕಂಡು | ಸರ್ವ ಜನರಾಗ || ೧೨ ||

ಕಂಡು ಅಚ್ಚರಿಗೊಂಡು | ಮಂಡಲಪತಿ ಮೆಚ್ಚಿ |
ಕೊಂಡಾಡಿ ಶಿವಭಕ್ತ | ರ್ಗೆಣೆಯೆ ಮೂಲೋಕ || ೧೩ ||

ಶಿವನೇಕೋದ್ದೈವವೆಂದು | ನುತಿಪ ಶೃತಿಯೆ ಸಿದ್ಧ |
ವಿವರಿಸೆ ವಸುಧೆಯೋಳ್ | ದೈವವಿಲ್ಲೆಂದು || ೧೪ ||

ಬಸವನ ಮುಖ ನೋಡಿ | ವಸುಧೀಶ ಕೊಂಡಾಡಿ |
ಅಸುವ ಪಾಲಿಸು ಇವಗೆ | ಎಂದು ಬೇಡಿದನು || ೧೫ ||

ಎಂದಿನಂದದಿ ಅವನ | ಉದರವ ಮುಚ್ಚಿಸಿ |
ಸಂದೀಶ ಪರುಷ ದೃಷ್ಟಿ | ಯಿಂದ ನೋಡಲಿಕೆ || ೧೬ ||

ಎಂದಿನಂದದಿ ಬಹು | ಚಂದ ಚೆಲುವನಾದ |
ಮುಂದೆ ಪೋದನು ಬಸವ | ಮಂದಿರಕಾಗ || ೧೭ ||

ಕಲ್ಯಾಣಪಟ್ಟಣ | ಕಡು ಚೋದ್ಯದಿಂದಲಿ |
ಎಲ್ಲ ಜನ ನುತಿಸಿದರು | ಬಸವ ಮಹತ್ತ || ೧೮ ||

ವಚನ || ಇಂತೀ ವಿಟಗಾರ ಪದ್ಮಲಿಂಗಯ್ಯನಂ ಕರೆತಂದು, ಬಸವನು ಗಣ ಸಮೂಹದಲ್ಲಿ ಸೇರಿಸಿ, ತಾನು ತೃಪ್ತಿಯಂಗೈದು, ರಾಯಸೊಡ್ಡೋಲಗಕ್ಕೆ ಬಂದು ಕುಳಿತಿರುವೆಡೆಯಲ್ಲಿ ಮತ್ತು ಪವಾಡವೆಂತೆನೆ.

## ನೇತ್ರಹೀನನಾದ ಮೂಗನನ್ನು ಮಾತನಾಡಿಸಿದ ಪವಾಡ.

**ಜಂಪೆ.**

ಬಸವರಾಜನ ಮಹತ್ತು | ವಸುಧೆಯೊಳು ಹರಡಿರಲು |
ಕಾಶ್ಮೀರ ದೇಶದೊಳು | ಶೇಷಂಭಟ್ಟನಾಗ || ೧ ||

ಪುತ್ರ ನಾಮವು ರಂಗ | ನೇತ್ರ ವಿಕಲನು ಮೂಗ |
ಧಾತ್ರಿಯರಿಯಲು ಬಂದ | ಕಲ್ಯಾಣಪುರಕೆ || ೨ ||

ಅವನಿಪತಿಯೋಲಗದಿ | ಅಧಿಕ ಠೀವಿಯೊಳ್ಬಸವ |
ಅವಿರಳದಿ ಮಂಡಿಸಿರೆ | ಅಲ್ಲಿಗಾ ವಿಪ್ರ || ೩ ||

ಬಂದು ಬಸವನ ಕಂಡು । ನಂದನನಸ್ಸೈಗೆಡಹಿ ।
ಇಂದು ನುಡಿಸ್ಸೈ ಸಭೆಯೊಳ್ । ಚಂದ ಮೂಗನನು ॥ ೪ ॥

ಬಸವ ನಿಮ್ಮಯ ಮಹತ್ತು । ವಸುಧೆಯೊಳು ಹರಡಿಹುದು ।
ಬಸವ ಎಂದಡೆ ಬ್ರಹ್ಮ । ಹತ್ಯ ಹರವೆಂದು ॥ ೫ ॥

ಶರಣು ಸದ್ಧರ್ಮರೂಪ । ಶರಣು ಕೀರ್ತಿಕಲಾಪ ।
ಶರಣು ಕರುಣಾಸಿಂಧು । ಶರಣು ಶರಣಯ್ಯ ॥ ೬ ॥

ಬಹಳ ದೂರದಿ ಬಳಲಿ । ಬಂದೆಸ್ಸೈ ದಯಾನಿಧಿಯೆ ।
ಸುಹೃದಯ ಬಸವಯ್ಯ । ಬಾಲನಿಗೆ ಒಲಿದು ॥ ೭ ॥

ನೇತ್ರವಾಕ್ಯ ಪಾಲಿಪುದು । ಸೂತ್ರದಾಯಕ ನೀನು ।
ಪಾತ್ರ ಸತ್ಪಾತ್ರ ಸ । ತ್ಯಾತ್ಮ ರಕ್ಷಿಪುದು ॥ ೮ ॥

ಶರಣಾಗತ ಪರಿಪಾಲ । ಕರುಣವಾರಿಧಿ ಬಿರುದು ।
ಹರಬಸವ ಪಾಲಿಪುದು । ತರುಣನಿಗೆವೊಲಿದು ॥ ೯ ॥

ದಯಸಮುದ್ರಸ್ವರೂಪ । ದೃಷ್ಟಿಯಲಿ ನೋಡಲಿಕೆ ।
ನಯನ ವಾಕ್ಯವು ಬಂದು । ನುತಿಸಲನುವಾದ ॥ ೧೦ ॥

ವಚನ ॥ ಇಂತೀ ರಂಗಾಭಟ್ಟನಿಗೆ ನೇತ್ರ ವಾಕ್ಯ ಬಂದಕೂಡಲೇ ಸಭಾಸ್ಥಾನದಲ್ಲಿ ಬಸವರಾಜಂಗೆ, ದಂಡಪ್ರಣಾಮವಂಗೈದು ನಿಂದು ಏನೆಂದು ಸ್ತುತಿಸುತಿರ್ದಪನು.

**ಏಕತಾಳ.**

ಶರಣು ಶ್ರೀ ಬಸವೇಶ । ಶರಣು ಅಘವಿನಾಶ ।
ಶರಣು ದೀನರಪ್ರೋಷ । ಶರಣು ಸರ್ವೇಶ ॥ ೧ ॥

ಭವದ ಕಲ್ಮಷವಡರಿ । ಇವರೊಳ್ಮಾತಾಡಲಿಲ್ಲ ।
ಈ ವರೆವಿಗಂ ನಾಂ ಗು । ರುವೆ ನಿನ್ನ ದೃಷ್ಟಿ ॥ ೨ ॥

ಎನ್ನ ತನುವಿಗೆ ಬೀಸೆ । ಆ ಜನ್ಮ ಕರ್ಮವಳಿದು ।
ಇನ್ನು ಮಾತಾಡಿದೆ । ನೆನ್ನ ನೇತ್ರಗಳು ॥ ೩ ॥

ಬಂದವು ಮುಕ್ತನಾದೆ । ಇಂದುಧರ ಬಸವೇಶ ।
ಎಂದೆನ್ನಲೆಲ್ಲರು । ಅಂದು ವಿಸ್ಮಿತದಿ ॥ ೪ ॥

ಕುಂದಣವಸ್ತು ಉಡು । ಗೊರೆಯಿತ್ತು ಕೊಂಡಾಡಿ ।
ನಂದೀಶ ಬಸವನ । ನುತಿಸಿದರ್ ಜನರು ॥ ೫ ॥

# ಮೋಟುಮಲ್ಲನಿಗೆ ಕರ ಚರಣಕೊಟ್ಟ ಪವಾಡ.

**ಸಾಂಗತ್ಯ.**

ಲಾಟದೇಶದೊಳೋರ್ವ ಚೋರಮಲ್ಲುಗನೆಂದು । ಗೋಳಿಡಿಸುವ ಧರೆಜನರ ॥
ಕೂಟವಿಲ್ಲದೆಯೋರ್ವ ವಿಪಿನ ದಾರಿಯೊಳಲ್ಲಿ । ಈಟಿಯಿಂ ಜನಸಿರಗಡಿವ ॥ ೧ ॥

ನರಜೀವಿಗಳನ್ನು ಬಲು ಕೊಂದು ತಿಂಬನು। ದುರುಳ ಪಾತಕ ಮಲ್ಲುಗನು ॥
ಧರಣೀಶ ದಿಕ್ಕು ದಿಕ್ಕಿಗೆ ಕಾವಲನ್ನಿಟ್ಟು । ಭರದಿ ಹೊಂಚುತ ಪಿಡಿತರಿಸಿ ॥ ೨ ॥

ಕರ ಚರಣಗಳನ್ನು ಖಂಡಿಸಿಬಿಟ್ಟರು । ಹರಣ ಹೋಗದೆ ಉಳುಕೊಂಡ ॥
ತಿರುಗುತ್ತ ಬಂಡಿಯೊಳ್ ಮೋಟಮಲ್ಲುಗನೆಂದು । ಹರಣ ಸಾಕೆಂದೆನುತಲಾಗ ॥ ೩ ॥

ಅಳಲುತ್ತ ಭಿಕ್ಷಾನ್ನ ಬೇಡುತ್ತ ತಿರಗುತ್ತ । ಕೇಳಿದ ಕಲ್ಯಾಣಪುರದ ॥
ಕಳೆ ಬಸವನ ಬಲು ಮಹಿಮೆಯ ತಿಳಿದಾಗ । ಹೆಳವ ಹೊರಟನು ಗಾಡಿಯಲ್ಲಿ ॥ ೪ ॥

ಅಂತಪ್ಪ ಮಹಿಮನ ಪಾದ ದರುಶನವಾಂತು । ಮುಂತೆ ಸುಖಿಸಿ ಖ್ಯಾತಿ ಪಡೆವೆ ।
ಇಂತೆಂದು ಕಲ್ಯಾಣಪುರಕಾಗಿ ಬಂದನು । ದಂತಿವಾಹನಪುರಿಯಂತೆ ॥ ೫ ॥

ಬಂಡಿಯೊಳ್ಕುಳಿತು ಪಟ್ಟಣದಂದಗಳ ನೋಡಿ । ಮಂಡಲೇಶನ ಓಲಗಕೆ ॥
ಬಂಡಿಯ ಬಿಟ್ಟಲ್ಲಿ ಓರ್ವ ಜೊತೆಗೂಡಿ । ಕಂಡನು ದಂಡೇಶ ನಿರವ ॥ ೬ ॥

ಹೇ ರಾಜರಾಜ ಶಿರೋರತ್ನ ದೇವೇಂದ್ರ । ಹೇ ರಾಜಕೀರ್ತಿಕಲಾಪ ॥
ಧಾರಿಣಿದೇವಿಯ ಮೆಚ್ಚಿನ ನೃಪವರ್ಯ । ಧೀರ ಕೇಳಿನ್ನ ಬಿನ್ನಪವ ॥ ೭ ॥

ಕರ ಚರಣವು ನೇತ್ರ ನಾಸ್ತಿಕರಿಗೆ ನೀವು । ಕರುಣದಿಂದೀವರೆಂತೆಂದು ॥
ಧರೆ ಪೊಗಳಲು ಕೇಳಿ ಬಂದೆನು ನಿನ್ನಯ । ಚರಣಕೆ ನಮೊ ನಮೋಯೆಂಬೆ ॥ ೮ ॥

ಪಾಲಿಸು ಕರುಣವನೆಂದು ಸೈಗೆಡೆದಂಥ । ಮೋಟನ ನೋಡಿ ರಾಜೇಂದ್ರ ॥
ಪಾಲಿಪ ಮಹಿಮಾಬ್ಧಿ ಚಂದ್ರ ಕರುಣಾಸಿಂಧು । ಲೀಲೆಯಿಂದಿವರೆಂದು ತೋರ್ದ ॥ ೯ ॥

ಕಂಡನು ಬಸವರಾಜೇಂದ್ರನ ಪಾದಕ್ಕೆ । ದಂಡಪ್ರಣಾಮ ಮಾಡಿದನು ॥
ಖಂಡೇಂದುಧರನ ಮೆಚ್ಚಿಗೆಯಾದ ಶ್ರೀ ಮಹ । ದಂಡನಾಯಕ ಬಸವೇಶ ॥೧೦ ॥

ವಚನ ॥ ಇಂತು ಮೋಟಮಲ್ಲನು ಬಸವರಾಜನಂ ಸ್ತುತಿಸುತಿರ್ದಪನದೆಂತೆನೆ.

**ಭಾಮಿನೀ ಷಟ್ಪದಿ.**

ಶಿಲೆಯ ಸಂಭವೆ ಚೆಲುವ ಮಗನೊಳು ।
ಕಲಹದಲ್ಲೀ ಪಟ್ಟದಣುಗರ ।
ಛಲಿವ ಮುರಿದಿಕ್ಕವರ ಪುರವನುರುಹಿ ಕೆಡಹುತಲಿ ॥

ನಳಿನಗಂಡನ ಸುರರ ಹಿಂಸೆಯ ।
ಕಳೆದು ಸುರರಂ ರಕ್ಷಿಸಿದವನೆ ।
ಇಳೆಯ ಕಾಯ್ದನ ನಲವಿನಿಂ ಪೊತ್ತವನೆ ಸಲಹೆನ್ನ ॥ ೧ ॥

ಬಸವ ಎನಲವನಘವು ಪರಿಹರ ।
ಬಸವ ಎನಲಾ ಮನುಜ ಧನ್ಯನು ।
ಬಸವ ಎನ್ನಲು ಮುಕ್ತಿಸಾಧನ ಮೋಕ್ಷಫಲಸಿದ್ಧಿ ॥
ಬಸವ ನಿನ್ನಯ ಕರುಣವೆನ್ನೊಳು ।
ಪಸರಿಸಿಡುತೆನ್ನ ನೀ ನೋಡೈ ।
ವಸುಧೆಗಚ್ಚರಿ ಬ್ರಹ್ಮ ನೀನೆಲೆ ಪಾಹಿ ಶರಣಾಗು ॥ ೨ ॥

ಕಣ್ಣು ಕಾಲ್ಗಳ ಪ್ರಾಣ ಹೀನರಿ ।
ಗಿನ್ನು ಕೊಟ್ಟಿಹ ಮಹಿಮ ಪರಶಿವ ।
ನೆನ್ನುತಲಿ ಪಲವಿಧದಿ ನುತಿಸಲು ಬಸವ ತಾಂ ನೋಡಿ ॥
ಇನ್ನು ಕೊಟ್ಟನು ಪಾದ ಕರಂಗಳ ।
ಮುನ್ನ ಬೀಜದಿ ಮೊಳಕೆಬರ್ಪಂತೆ ।
ಮನುಜಪತಿ ನುತಿಸುತಲಿ ಬಸವಗೆ ಕೊಟ್ಟನುಡುಗೊರೆಯ ॥ ೩ ॥

## ಶಿವನಾಗಮಯ್ಯನಮನೆ ಸ್ತ್ರೀಯರ ಅಗ್ರಣಿಯ ಕೊಡದ ಪವಾಡ

**ಜಂಪೆ.**

ಹರಭಕ್ತರುಗಳ್ಕೇಳಿ । ಹರುಷಮಂ ತಾಳಿ ಬಲು ।
ಶರಣ ನಾಗಮ ಮಹಿಮೆ । ಯೊರೆವೆ ಬಲ್ಲನಿತ ॥ ೧ ॥

ಶಿವಶರಣ ಶಿವಪೂಜೆ । ಶಿವಭಕ್ತ ಕಿಂಕರನು ।
ಶಿವಪೂಜೆ ನೈಷ್ಠಿಕ । ಶಿವನ ಮೆಚ್ಚಿಗನು ॥ ೨ ॥

ಒಂದುದಿನದಲಿ ಮನೆಯ । ಇಂದುಮುಖಿಯರಗ್ರಣಿಯ ।
ತಂದುಕೊಂಬರೆ ಕ್ರೀಯ । ದಿಂದ ಕೆರೆಗೈದಿ ॥ ೩ ॥

ಮಿಂದು ಮಡಿಯುಟ್ಟು ಜಲ । ಬಿಂದಿಗೆಯೊಳು ತುಂಬಿ ।
ಚಂದದಿಂ ಶಿವಮಂತ್ರ । ದಿಂದ ಭಸಿತವನು ॥ ೪ ॥

ಧರಿಸಿ ವಸ್ತ್ರವಮುಚ್ಚಿ । ತರುವಲ್ಲಿ ಬಿಜ್ಜಳನ ।
ಅರಮನೆಯ ರಾಣಿಯರು । ಅರಿದು ಶುಭದಿನದಿ ॥ ೫ ॥

ಸ್ನಾನಗೈಯ್ಯಲು ಪೋಗೆ । ಮಾನವತಿಯರವರಿವ ।
ರೀನಾರಿಯರ್ ಛಾಯು । ವವರ್ಗೆ ಬೀಳ್ಗೊಡದೆ ॥ ೬ ॥
ತೊಲತೊಲಗೆ ಇತ್ತತ್ತ । ಲಲನೆಯರು ಸೋಂಕಲಿಕೆ ।
ಬಳಿಕ ಕ್ರೀಯದ ಜಲವ । ನಿಳೆಗೆ ಸುರಿದವರು ॥ ೭ ॥
ಎಲೆ ಭವಿ ನಾರಿಯರೆ । ಏಕೆ ನಮ್ಮಬಳಿ ಬಹಿರಿ ।
ತೊಲಗಿದೂರವು ಎನಲು । ಬಳಿಕ ಕೆರೆಗೈದಿ ॥ ೮ ॥
ಪ್ರತಿಯಗ್ಗಣಿಯ ತುಂಬಿ । ಭಸಿತ ಧಾರಣ ವಸ್ತ್ರ ।
ಯುತ ಮುಚ್ಚಿ ಬರಲವರು । ಕೃತಕದಿಂದಿವರು ॥ ೯ ॥
ಮತ್ತೆ ಕೀಟಲೆಗೊಳುತ । ಹತ್ತಿರಕೆ ಬರಲಾಗ ।
ನಿಸ್ತ್ರೆಯರೆ ನಿಮ್ಮಮಾರ್ಗ । ಅತ್ತ ತೆರಳೆನಲು ॥ ೧೦ ॥
ನರ ಭವಿಗಳೆಂದು ನಮ್ಮ । ಜರಿವರೇ ಹೊಲತಿಯರೆ ।
ಅರಸರ ರಾಣಿಯರೆಂದು । ಪರಿಕಿಸದೆ ನೀವು ॥ ೧೧ ॥

ವಚನ ॥ ಎಲೆ ಹೆಣ್ಣುಗಳೆ ನೀವೆಷ್ಟು ಕ್ರಿಯೆಯಂ ನಡೆಸಿದರೂ ಹೊಲತಿಯರು. ನಾವು ಶ್ರೇಷ್ಠ ಕುಲದರಸಿಯರು. ನಮಗೆ ಸರಿಯೆ ನೀವು? ಎಂದು ನುತ್ತು ಇಂತೆಂದರು.

**ಕಂದಪದ್ಯ.**

ಹೋತನು ಮೇವಿಂಗೋಸುಗ ।
ಶ್ರೀ ತೊಳಸಿಯ ಮೆಲ್ಲುತಿರಲು ಶ್ರೀ ವೈಷ್ಣವನೇಂ ॥
ಪಾತರದ ಸೂಳೆಗೀಯಲು ।
ಭೂತಳದೊಳು ಧಾತನಹನೆ ಎಂಬಂದದೊಳಂ ॥ ೧ ॥

ಕಪ್ಪಿನ ಶುನಕನ ತೊಳೆಯಲು ।
ಒಪ್ಪಿನ ಬಿಳ್ಪಹುವೆ ಬಕನು ಶಶಿಗಂ ಸಮನೇಂ ॥
ಸುಪ್ಪಾಣಿ ಮುತ್ತಿಗೆ ಗಾಜಿನ ।
ಸುಪ್ರಭೆ ಮಣಿ ಸಮನಹುದೇ ಹೊಲೆ ಹೆಣ್ಣುಗಳೇ ॥ ೨ ॥

ಮರುಗದಗಿಡ ಕಿರಿದಾದಡು ।
ಸರಿಬಾರದು ತಾಳೆಮರನು ಎಂಬುದು ಪುಸಿಯೇ ॥
ಪುರಹರನ ಭಕ್ತರಿಗೆ ಭವಿ ।
ನರಗುರಿಗಳು ಸಮನೆ ತೆರಳಿ ಕಲಗಾತಿಯರೇ ॥ ೩ ॥

ವಚನ ॥ ಈ ಪ್ರಕಾರ ವಾದಮಾಡುತ್ತಾ, ಅರಮನೆಯ ರಾಣಿಯರು ಬಂದು ರಾಯಂಗೆ ದೂರಪೇಳಿದರದೆಂತೆನೆ.

**ಏಕತಾಳ.**

ಇಳೆಯಾಧಿಪತಿ ಕೇಳು । ಹೊಲೆ ನಾಗಮನ ಮನೆಯ ।
ಲಲನೆಯರು ನಮ್ಮನು । ಹಳಿದ ಬಗೆ ಕೇಳು ॥ ೧ ॥

ಸಾವು ಸ್ನಾನಕೆ ಪೋಗೆ । ಆ ವನಿತೆಯರ್ನೀರ ।
ತಾವು ತರುತಲೆಮ್ಮ । ತೊಲಗು ತೊಲಗೆಂದು ॥ ೨ ॥

ನರ ಭವಿಗಳು ನಿಮ್ಮ । ಶರೀರಛಾಯ ಕೊಡದಮೇಲೆ ।
ಪರಿ ಬೀಳಲಾಗದೆಂದು । ಜರಿದರ್ಹೊಲತಿಯರು ॥ ೩ ॥

ನೋಡು ನೋಡೈ ನೃಪ । ಆಡಿದಾ ಮೂಳಿಯರ ।
ಗಾಢದಿಂ ಕೊಡ ಸಹ । ಗೂಡಿ ತಂದಿಲ್ಲಿ ॥ ೪ ॥

ಹೊಡೆಸಿ ಬಡಿಸಿಯವರ । ನಡೆಸಲು ಬೇಕೆಂದ ।
ಪೊಡವೀಶನಿಗೆ ಮುಂಚಿ । ನುಡಿದನಿಂತೆಂದು ॥ ೫ ॥

ಕೇಳುತಾಕ್ಷಣ ಕೋಪ । ತಾಳಿ ಬಿಜ್ಜಳ ರಾಯ ।
ಊಳಿಗದವರ ಅಟ್ಟಿ । ಬಾಲೆಯರ ಕರೆಸಿ ॥ ೬ ॥

ಏನೆ ಹೊಲೆ ಮೂಳಿಯರ । ನನ್ನ ರಾಣಿಯರಳಿದು ।
ದೇನೆನೆ ಬಿಜ್ಜಳ । ಮಾನಿನಿಯರಾಗ ॥ ೭ ॥

ನಮ್ಮ ಶೀಲ ವ್ರತವು । ನಮ್ಮ ಗುರು ಅಪ್ಪಣೆಯು ।
ನೆಮ್ಮಿ ನಾವು ನಡೆವೆವು । ನಿಮ್ಮ ವ್ರತ ಶೀಲ ॥ ೮ ॥

ನಿಮಗೆ ಅಧಿಕವಯ್ಯ । ನಮಗೆ ಅಧಿಕವಲ್ಲ ।
ನಿಮಗೇಕೆ ಆಗ್ರಹ । ಅದರಿಂದ ನುಡಿಯ್ಯೆ ॥ ೯ ॥

ಧೀರತೆಯಿಂದಿಹ । ನಾರಿಯರುತ್ತರವರಿದು ।
ನೀರಕೊಡನ ಬಿಡದೆ । ಚೂರುಮಾಡೆಂದ ॥ ೧೦ ॥

ಮೊರೆಯಪ್ಪಣೆಯಿಂದ । ದುರುಳ ಚರರು ಬಡಿಗೆ ।
ಕರದಿ ಹೊಯ್ದರು ಕೊಡನ । ಧುರದ ಭಟರಾಗ ॥ ೧೧ ॥

ಒಡೆಯದದೆಷ್ಟೊಡೆಯೆ । ಬಿಡದೆ ಕರಿಯಡಿಯಿಂದ ।
ಪಿಡಿದು ತುಳಿಸಲು ಕೊಡ । ನೊಡೆಯದೆ ಇರಲು ॥ ೧೨ ॥

ಕೂಡಿದಾಸ್ಥಾನವು । ಕರ ಜೋಡ್ಯವಾಗುತ್ತ ।
ರೂಢೀಶ ಬಿಜ್ಜಳನು । ಆಗ ಮಂತ್ರಿಯೊಳು ॥ ೧೩ ॥

ಏನಯ್ಯ ಮಂತ್ರೀಶ । ಹೀನ ನಾಗಮನ ಮಹತ್ತು ।
ಆನಂದವೆಮ್ಮೊಳು । ನೀನು ತಿಳುಪೆಂದ ॥ ೧೪ ॥

ಶಿವಲಿಂಗಾಂಗಿಗಳವರು । ಶಿವನ ಮೆಚ್ಚಿಗರವರು ।
ಶಿವಮಂತ್ರೋದಕದ ಮಹ । ತ್ತಿಂದನು ಬಸವ ॥ ೧೫ ॥
ಮರುಳತನವದು ಬೇಡ । ತರುಣಿಯರ ಕಳುಪೆನಲು ।
ಅರಸ ಉಡುಗೊರೆಯಿತ್ತು । ಕಳುಹಿಸಿದನವರ ॥ ೧೬ ॥

ವಚನ ॥ ಇಂತೀ ನೃಪನು ಶಿವನಾಗಮಯ್ಯನ ಮನೆಯ ಶರಣೆಯರಂ ಕಳುಹಿಸಿಕೊಡೆ, ಇತ್ತ ಕೊಂಡೆಯಮಂಚಣ್ಣ ಮತ್ತೊಂದು ಕುಹಕವಂಗೈದನವೆಂತೆನೆ.

## ಪಾದೋದಕದಿಂ ಸುರಗಿಯ ಸುವರ್ಣಮಾಡಿದ ಪವಾಡ.

**ಏಕತಾಳ.**

ಇರಲೊಂದು ದಿವಸದಲಿ । ಧರಣೀಶನಿಗೆ ಮಂಚಿ ।
ಒರೆದನೊಂದಾಶ್ಚರ್ಯ । ವಿರಚಿಪೆನು ಕುಹಕ ॥ ೧ ॥
ಕೇಳಯ್ಯ ಬಿಜ್ಜಳ । ಇಳೆಯೊಳೊಂದಾಶ್ಚರ್ಯ ।
ತೂಳಗವಗೈಯ್ಯುವರು । ಬಸವ ಪಂಥಿಗಳು ॥ ೨ ॥
ಅಯ್ಯಗಳ ಪಾದವನು । ಅಮಿತದಿಂ ತೊಳೆದಿರ್ಪ ।
ಆಯತ ಜಲವನ್ನು । ಪಾದೋದಕವೆಂದು ॥ ೩ ॥
ಪರುಷಕಿಮ್ಮಿಗಿಲೆಂದು । ತುರ್ಯ ಗೈಯ್ಯುವರವರು ।
ಧರಣಿಪ ಇವರ ಗಂ । ಭೀರ ನೋಡೆಂದ ॥ ೪ ॥
ಎಂದ ಮಂಚಿಯಮಾತ । ಚಂದದಿಂ ನೃಪಕೇಳಿ ।
ಅಂದು ಬಸವಯ್ಯನ ಏ । ನೆಂದು ಕೇಳಿದನು ॥ ೫ ॥
ಪಾದೋದಕ ಘನವನ್ನು । ಪರುಷವೆಂಬಾಶ್ಚರ್ಯ ।
ಭೇದವೇನಗೆ ತೋರು । ಮೇದಿನಿಯರಿವೊಲು ॥ ೬ ॥
ಧರಣೀಶನ ನುಡಿಗೇಳಿ । ಭರದಿ ಬಸವರಾಜ ।
ಕರೆಸಿದನು ಆಗೋರ್ವ । ಚರಮೂರ್ತಿಯನ್ನು ॥ ೭ ॥
ಹರುಷದಿಂ ಪಾದವ । ನೆರೆ ತೊಳೆದುದಕದಿ ।
ಅರಸನ ಸುರಗಿಯ । ಭರದಿ ಸೋಂಕಿಸಲು ॥ ೮ ॥
ಪರುಷಸೋಂಕಲು ಲೋಹ । ನೆರೆ ಕನಕವಾದಂತೆ ।
ಸುರಗಿ ಸುವರ್ಣಗೈದು । ಅರಸಗೆ ಕೊಟ್ಟ ॥ ೯ ॥
ನೋಡಿದ ನೃಪ ನಲಿ । ದಾಡಿದ ಶಿರವನ್ನು ।
ರೂಢಿಯಲಿ ಶರಣರ್ಗೆ । ಈಡಿಲ್ಲವೆಂದ ॥ ೧೦ ॥
ನೆರೆದಿರ್ದ ರಾಜವರ್ಗ । ಕರ ಚೋದ್ಯಗೈಯ್ಯುತ್ತ ।
ಸ್ಮರಿಸಲೆಲ್ಲರು ಬಸವ । ಮೆರೆದ ಮಹಿಮೆಯನು ॥ ೧೧ ॥

# ಮಣ್ಣೆತ್ತನ್ನು ನಡೆಯಿಸಿ, ಟಗರ ಬಸವನಮಾಡಿ. ಎರಳೆ ಕುದುರೆಮಾಡಿದ ಪವಾಡ.

**ಸಾಂಗತ್ಯ.**

ಕಾರಹುಣಿವೆಯಲ್ಲಿ ಬಿಜ್ಜಳರಾಯನು । ಓರಂತೆ ಉಲ್ಲಾಸವೆಸಗಿ ॥
ಧಾರಿಣಿಪರು ಮಂತ್ರಿವೃಂದ ಪುರೋಹಿತರು । ಧೀರ ಸಮಾಜಿಕರೆಲ್ಲ ॥ ೧ ॥

ಮಂತ್ರೀಶ ಬಸವರಾಜನು ಸಹಿತೆಲ್ಲರು । ಸಂತೋಷ ಸಂಪತ್ತಿನಿಂದ ॥
ಮಂತಣಾಧಿಪನ ಪಟ್ಟದ ಕರಿಯೆನ್ನಾಗ । ಇಂತು ಸಂಭ್ರಮದಿ ಶೃಂಗರಿಸಿ ॥ ೨ ॥

ಹೊರಟರು ರಾಜಾಧಿ ರಾಜರ ಸ್ತೋಮದಿ । ಕರಿಯ ನಡೆಯ ನೋಡುವರೆ ॥
ಹೊರಟರು ಊರಿಂದ ಹೊರಗಡೆ ಸ್ವಾರಿಯ । ಬಿಟ್ಟರು ಅರ್ಥಿಯಿಂದಲ್ಲಿ ॥ ೩ ॥

ಊರೊಳಗುಳ್ಳ ರೈತರ್ಗೆಲ್ಲ ಕಟ್ಟಳೆ । ಸಾರಿಸಿದನು ಮನೆ ಮನೆಗೆ ॥
ಭೋರನೆ ಮನೆಗೊಂದು ಎತ್ತು ಶೃಂಗಾರವಾಗಿ । ಬರಲೆಂದು ರಾಯನಪ್ಪಣೆಯು ॥ ೪ ॥

ಆಗಿದೆಯೆಂದು ಚರರು ಬಂದು ಮನೆ ಮನೆ । ಗಾಗಲಾಜ್ಞೆಯ ಮಾಡಲವರು ॥
ಬೇಗದಲುರವಣಿಸಲು ಎಲ್ಲರೆತ್ತನ್ನು । ಆಗಲೆ ಸಿಂಗರಿಸಿ ತೆರಳೆ ॥ ೫ ॥

ಎತ್ತುಳ್ಳ ಧನಿಕರು ಪರಿ ಪರಿ ಭರಣದಿಂ । ಎತ್ತುಗಳನ್ನು ಸಿಂಗರಿಸಿ ॥
ಎತ್ತಿಲ್ಲದಂಥ ಬಡವರುಗಳ್ಬಾಡಿಗೆ । ಎತ್ತುಗಳನ್ನು ಸಿಂಗರಿಸಿ ॥ ೬ ॥

ಕಲ್ಯಾಣಪೊರಮಟ್ಟು ಬಂದು ನಿಂದರು ಆಗ । ಎಲ್ಲರು ಎತ್ತುಗಳ್ಸಹಿತ ॥
ಅಲ್ಲೋರ್ವ ಬಾಡಿಗೆ ಕೊಡುವರೆ ಗತಿಯಿಲ್ಲ । ಬಲ್ಲಿದ ಬಡವ ನಿತ್ರಾಣಿ ॥ ೭ ॥

ತನ್ನ ಯುಕ್ತಿಯೊಳ್ತಂದ ಕುಂಬಾರ ರಚನೆಯ । ಮಣ್ಣೆತ್ತ ಚೆನ್ನಾಗಿ ಮಾಡಿ ॥
ಉನ್ನತ ಬೀದಿಯೊಳ್ತನ್ನ ಶಿರದೊಳಿಟ್ಟು । ನನ್ನಿಯಿಂ ಬರಲೆಲ್ಲ ನಗಲು ॥ ೮ ॥

ಪಂತಿ ಪಂತಿಯ ಸಾಲು ಎತ್ತಿನವರು ಎಲ್ಲ । ದಂತಿಯೊಳ್ಪರಿವಾರ ಬಿಡಲು ॥
ನಿಂತಿರಲೀ ಮಣ್ಣೆತ್ತಿನವನ ನೋಡಿ । ಮಂತಣೇಶನು ನಗುತಿರ್ದ ॥ ೯ ॥

ಧರೆಯೊಳು ಬಸವಣ್ಣ ಮಣ್ಣೆತ್ತು ಕರಿಯೊಳು । ಹರಿವುದೆ ಮರುಳೇನೊ ಇವಗೆ ॥
ಅರಸು ಹಾಸ್ಯವಮಾಡಿ ನಗಲಾಗ ಬಸವಣ್ಣ । ಒರೆದನು ರಾಯ ಬಿಜ್ಜಳಗೆ ॥ ೧೦ ॥

ಇಂತು ಲಘುತ್ವವ ನುಡಿವರೆ ನೃಪವರ । ಅಂಥ ಮಣ್ಣೆತ್ತು ತಾ ಕರಿಯನ್ನು ॥
ಪಂಥದಿಂ ಪರಿವುದು ಏನು ಘನವು ಇದು । ನಿಂತು ನೋಡೈ ಎತ್ತಿನಿರವ ॥ ೧೧ ॥

ಚಂದ್ರಧರನಭಕ್ತ ಬಸವ ಆ ಮಣ್ಣೆತ್ತ । ತಂದವನನ್ನು ತಾ ಕರೆದು ॥
ಮುಂದಿ ಎತ್ತಿನ ಸಾಲೊಳು ನಿಂದು ಬಾಯೆನೆ । ಎಂದು ಪೇಳಲು ಅವನೆಂದ ॥ ೧೨ ॥

ಬಾರೊ ನೂತನಗೂಳಿ ಬಾರೊ ಬಸವಯೆನೆ । ಊರಿಗೆಲ್ಲಕೆ ಮುಂದೆ ಹೋಗಿ ॥
ಭೋರನೆಯೆ ಕರಿಯೊಳು ಹರಿಯಲು ಹೋರಿಯು । ಧಾರಿಣಿಪತಿ ಬೆರಗಾದ ॥ ೧೩ ॥

ಮಣ್ಣೆತ್ತಾದರು ತನ್ನೆತ್ತು ಗೆಲಲಿಯೆಂದು । ಕಣ್ಣಾರ ತೋರಿ ಭೂಪತಿಗೆ ॥
ಪುಣ್ಯದನಿಧಿಪೂರ ಹರಭಕ್ತ ಬಸವಣ್ಣ । ಗಣ್ಯದಿಂ ಮೆರೆದ ಪವಾಡ ॥ ೧೪ ॥

ಮತ್ತೊಂದುದಿನ ಚಂದ್ರಶಾಲೆಯೊಳಗೆ ನೃಪ । ಅರ್ಥಿಯಿಂದೋಲಗವಿರಲು ॥
ಕರ್ತೃ ಬಸವರಾಜ ಮತ್ತೆ ರಾಜರ ಸ್ತೋಮ । ವೊತ್ತದಿಂ ಕುಳಿತಿರಲಾಗ ॥ ೧೫ ॥

ಪುರದ ವೀದಿಯಳೊಂದು ಶಿವಭಕ್ತರ ಶಿಶು । ಬರುತಿರೆ ಟಗರೇರಿಕೊಂಡು
ಅರಸು ಬಿಜ್ಜಳನಿಗೆ ಮಂಚಿಯಿಂತೆಂದನು । ಪರಿಕಿಸಿ ರಾಯನೋಡೆಂದ ॥ ೧೬ ॥

ಶಿವಭಕ್ತರಿವರಂತೆ ಭವಿಗಳ ಸೋಂಕರಂತೆ । ಅವಿರಳ ವೀರ ವ್ರತರಂತೆ ॥
ಭವಿಗಳು ಭುಂಜಿಪ ಕುರಿಯೇರಿ ಬೀದಿಯೊಳ್ । ಬರಲುಬಹುದೆ ನೋಡು ರಾಯ ॥೧೭॥

ಅರಸುಬಿಜ್ಜಳ ಕಂಡು ಭಕ್ತರು ಬಸವಣ್ಣ । ಕುರಿಯೇರಬಹುದೆ ನೋಡೆಂದ ॥
ಹರನಭಕ್ತರು ಕುರಿಯೇರರು ಎಲೆ ರಾಯ । ಪರಿಕಿಸಿ ನೋಡು ಮತ್ತೊಮ್ಮೆ ॥ ೧೮ ॥

ಹತ್ತಿರ ಕರೆಸಿ ನೋಡಿದ ಪರುಷ ದೃಷ್ಟಿಯಿಂ । ಮತ್ತೆ ಬಸವ ಕುರಿಯನ್ನು ॥
ಪೃಥ್ವಿಗಚ್ಚರಿಯಾಗಿ ತೋರಿತು ಜನರಿಗೆ । ಮತ್ತದು ಬಸವಣ್ಣನಾಗಿ ॥ ೧೯ ॥

ಇಂತು ಕುರಿಯ ಮುದ್ದು ಹೋರಿಯ ತಾಗ್ಯೆದು । ಪವಾಡ ಮೆರೆದ ಮತ್ತೇನೆನಲು ॥
ಕಂತುಹರಗಣರ ಮನದಿಚ್ಛೆಗೆ ರಾಯನ । ಪಟ್ಟದ ತೇಜಿಯಂ ಕೊಡಲು ॥ ೨೦ ॥

ಚರರು ಪೇಳಲು ರಾಯ ಕೋಪಿಸಿ ಮಂತ್ರೀಶ । ಇರದೆ ನಿನ್ನಯ ಜಂಗಮರಿಗೆ ॥
ವರ ಪಟ್ಟದತೇಜಿಯನೀಯಬಹುದೆ ಎಂದು । ಸಿಟ್ಟಾಗಲು ಸಾಕುವಂಥ ॥ ೨೧ ॥

ಎರಳೆಯತರಿಸಿ ಪರುಷದೃಷ್ಟಿಯಿಂ ನೋಡೆ ಅದುವೆ ರಾಜನ ತೇಜಿಯಾಗೆ ॥
ಭರದಿ ಬಿಜ್ಜಳ ನೋಡಿ ವಿಸ್ಮಿತಯುತನಾಗಿ । ಕರಗಳ ಮುಗಿದುಡುಗೊರೆಯಿತ್ತ ॥ ೨೨ ॥

## ಸಿಂಗಯ್ಯನ ಸಂಕೋಲೆಕಳೆದ ಪವಾಡ.

**ತ್ರಿವುಡೆ.**

ರಾಜ ಬಿಜ್ಜಳನೊಬ್ಬ ಶೃಂಗಿಗೆ । ವಾಜಿಪುರದಾ ಪಾರುಪತ್ಯವ ।
ಓಜೆಯಿಂದಿತ್ತಿಹನು ಸಿಂಗಯ್ಯ – ನೆಂಬವನಿಗೆ ॥ ೧ ॥

ಎಂಟುವರುಷದ ಲೆಕ್ಕವಿರುತಿರೆ । ತುಂಟತನದೊಳು ತೋರದಿರುತಿರೆ ।
ಪಂಠಿಸಿಯೆ ಪಿಡಿತಂದು ಸಂಕೋಲೆ – ಅಂಟಿಸಿರುತಿಹನು ॥ ೨ ॥

ಬಸವಯೆನ್ನಲು ಕೊಡಗಳ್ಕೀಘದಿ । ಒಸೆದು ನಿಂತವುಯೆಂಬ ಮಹಿಮೆಯ ।
ಒಸೆಯು ಕೇಳುತ ಹರುಷಮಾಗಿಯೆ – ಒಂದನೆಣಿಸಿ ॥ ೩ ॥

ನಾನು ಬಸವನ ನಾಮ ನೆನೆವೆನು । ತಾನೆನಗೆ ದಯವಾಗಲೆಂತನೆ ।
ಕೇಣಿಯಿಂ ನೃಪನಿಟ್ಟಸಂಕೋಲೆ – ಕಳೆಯಲಿಂತೆಂದು ॥ ೪ ॥

ಮನದಿ ಬಸವನ ನಾಮ ನೆನೆವೆನು । ಘನ ಮಹತ್ತನು ನೋಳ್ಪೆನೆನ್ನುತ ।
ಅನುವಿನಿಂದಲಿ ಸಾಸಿರ್ಬಾರಿಯು – ಆಗ ನೆನೆದ ॥ ೫ ॥

ಕಾಲ್ಗೆ ನೃಪ ಹಾಕಿಸಿದ ಸಂಕೋಲೆ । ಕಳೆದು ಬಿದ್ದುದು ಭುವಿಯೊಳಾಗಲೆ ।
ಮೇಲೆ ಬಸವನ ಮಹಿಮೆಗೆಣೆಯೆ -- ಭುವಿಯೊಳೆಂದ ॥ ೬ ॥

ಕಳೆದ ಸಂಕೋಲೆ ವಿಧವನೆಲ್ಲವ ।ಘಳಿಲನೆಯೆ ಬಂದಾಗ ಬಿಜ್ಜಳ ।
ಗೊಲಿದು ಪೇಳ್ದರು ಬಸವ ನಾಮದ – ಬಗೆಯ ಚರರು ॥ ೭ ॥

ವಚನ ॥ ಇಂತೀ ಚರರು ಪೇಳ್ದ ವಾರ್ತೆಯಂ ಬಿಜ್ಜಳಕೇಳ್ದು ಆಶ್ಚರ್ಯಮಾಗಿ ! ಅವನಂ ಕರೆಸಿ ವಿಚಾರಿಸಿ ಬಸವಮಂತ್ರೀಶನಿಂದ ರಾಜತ್ವವಂ ಕೊಡಿಸಿ, ಸಿಂಹರಾಜನೆಂದು ಪೆಸರಿಟ್ಟು ಅವನ ರಾಜ್ಯದ ಅಧಿಪತ್ಯವಂ ಕೊಟ್ಟು ಕಳುಹಿಸಲು ಮತ್ತು ಪವಾಡವೆಂತೆನೆ.

## ಕಲ್ಲನಂದಿಗೆ ಕಡಲೆ ಮೆಲಿಸಿದ ಪವಾಡ.

**ಏಕತಾಳ.**

ರಾಯನು ಬಸವಯ್ಯ । ರಾಣಿಯು ಸಹವಾಗಿ ।
ಆಯತದಿಂ ಸ್ವಾರಿ । ಗೈದೊಂದುದಿನದಿ ॥ ೧ ॥
ಹೊನ್ನಮ್ಮನ ಪೇಟಿಯೊ । ಳರ್ಥಿಯಿಂ ಬರುತಿರೆ ।
ಸನ್ನುತ ಭಕ್ತಿಯೋಳ್ । ಸಜ್ಜನನೋರ್ವ ॥ ೨ ॥
ನಂದಿಯಾಲಯದಲ್ಲಿ । ಚಂದದಿಂ ಪೂಜೆಗೈದು ।
ಮುಂದಿರಿಸಿ ಕಡಲೆಯ । ಒದಗಿ ನೈವೇದ್ಯ ॥ ೩ ॥
ಮಾಡುತಿರಲು ರಾಯ । ಕಂಡು ಬಸವಯ್ಯಂಗೆ ।
ನೋಡಯ್ಯ ಕಲ್ಲನಂದಿ । ಕಡಲೆ ಮೆಲ್ಲುವದೆ ॥ ೪ ॥
ಕೈಯ್ಯ ತೋರುತಲಹನೆ । ಕಾರಣವೇನಯ್ಯ ।
ಬೀಯ ಮಾತುಗಳಾಡೆ । ಬಿಜ್ಜಳನಾಗ ॥ ೫ ॥
ಕೇಳಿ ಬಸವಯ್ಯನು । ಪೇಳ್ದನು ಬಿಜ್ಜಳಗೆ ।
ಲೀಲೆ ಭಕ್ತಿಪುಂಗವ । ಚೆಲುವ ನಂದೀಶ ॥ ೬ ॥
ಭಕ್ತವತ್ಸಲನೆಂಬ । ಬಿರುದರಿಯ ಎಲೆ ರಾಯ ।
ಭಕ್ತರ ಭಕ್ತಿಯನು । ಪ್ರೀತಿಯಿಂ ಸವಿವ ॥ ೭ ॥
ಆದಡಿದಾಶ್ಚರ್ಯ । ಎನಗೆ ತೋರಿಸು ನೀನು ।
ಸಾದರದಿ ಈ ನಂದಿ । ಕಡಲೆ ಮೆಲ್ಲುವುದ ॥ ೮ ॥
ಮುಕ್ತಿದಾಯಕ ನಂದಿ ।ಮೆಲ್ಲು ಕಡಲೆಯನೆಂದು ।
ಶಕ್ತ ಬಸವ ನುಡಿಯೆ । ಎಲ್ಲ ಭಕ್ಷಿಸಿತು ॥ ೯ ॥

# ಸರ್ಪದಷ್ಟ ಶಿಶುವಿಗೆ ಪ್ರಾಣವಿತ್ತ ಪವಾಡ.

**ವೃತ್ತ.**

ಆ ಪುರದಿಯೋರ್ವ ಶ್ರೀ ಪತಿ ಮತಲಾಪನಾಗಿಹನು ಭೂಸುರರ |
ಗೋಪಂಭಟ್ಟನುಯಿರ್ಪನು ಸತಿಯಳು ಚಾಪಲಾಂಬಿಕೆಯು ಶೇಷಮ್ಮ ||
ಭೂ ಪದವಿಯು ಭೋಗ ಭಾಗ್ಯವನೇಕವಾಗಿರಲೆಲ್ಲವು |
ತಾ ಪುತ್ರವತಿಯಳಲ್ಲವೆ ಚಿಂತೆಯೊಳ್ತಾಪದಿಂದಿರಲು ಬಳಿಕ ||೧||

ಬಸವರಾಜನ ಮಹಿಮೆ ನೋಡಿಯೆ ಪೊಸತು ಸಂಕೋಲೆ ಕಳೆದುದ |
ವಸುಧೆಯೊಳೀರೇಳ್ಲೋಗಳಲೆಲ್ಲವ ಜಸದಿ ಕೇಳುತ [1] ಲೀರ್ವರು [1] ||
ಬಸವ ನಾಮವ ಪಗಲಿರುಳ್ಭಜಿಪೆವಾವು ಶಿಶುವನಿತ್ತರೆ ಬೇಗದಿ |
ಕುಶಲತನ ಮತಹೊಂದಿ ಕುವರಗೆ ಪೆಸರನಿತ್ತಪೆ ನಿನ್ನಯಾ ||೨||

ದಂಪತಿಗಳೀರ್ವರ ದೈನ್ಯಭಕ್ತಿಗೆ ಧರ್ಮರೂಪನು ಬಸವನು |
ಕಂತುರೂಪಿನ ಕಂದನಿತ್ತನು ದಂತಿಗಮನೆಯು ಸಲಹಿದಳ್ ||
ಸಂತೋಷದಿ ಶಿಶುವು ಸೊಗಸಿನಿಂ ನಿಂತು ನಡೆ ನುಡಿಗಲಿಯುತಲಿ |
ಮಂತಣದಿ ಶಿಶುವಾಡುತಿರ್ದುದು ಐದು ವರುಷವುದಾಗಿರೆ ||೩||

ಒಂದುದಿನ ಬೀದಿಯಲಿ ಕಂದನು ಆಡುತಿರೆ ಓಣಿಯಿಂ ಸರ್ಪ |
ಬಂದು ಕಚ್ಚಲು ಶಿಶುವನಾಗಳೆ ವಿಷವೇರಿ ಪ್ರಾಣವ ನೀಗಿತು ||
ತಂದೆ ತಾಯ್ಗಳು ಕಂಡು ಶೋಕದಿ ಕಂದನಂ ತೊಡೆಯೊಳಿಟ್ಟಾಗ |
ಚಂದ್ರಧರನಾಭಕ್ತ ಬಸವನು ಕಂದನಿತ್ತುದು ಪೋಲು ಆಯಿತು ||೪||

ಮಾಣಿಕವೆ ನೀನೆನ್ನ ಕಣ್ಣಿನ ಪುಣ್ಯವೇ ಬಲು ಮುದ್ದುಮುಖನೆ |
ಕ್ಷೋಣಿಯೊಳು ಬಂಜೆಯಾಗಿರ್ದನಾಂ ಭೂಮಿಯರಿಯಲು ಉಗ್ರತಪದಿ ||
ಆನಂದ ಮಹಿಮಾಬ್ಧಿ ಬಸವಗೆ ಹರಕೆಯಂ ಮಾಡುತಲಿಪೆತ್ತೆನು |
ಏನನೆಂಬೆನು ನನ್ನ ಪುಣ್ಯದ ಹಾನಿಯನು ಏಗೈವೆ ಈಶನೇ ||೫||

ಭೂಸುರನಸತಿ ಭುವಿಯೊಳ್ಪೊರಳ್ದು ಆ ಸುತನ ತೊಡೆಯೊಳಿಟ್ಟಾಗ |
ತಾ ಶೋಕದಲಾಳುತೇಳುತಿರೆ ಬಸವೇಶ ಬಿಜ್ಜಳನೈತರಲ್ಕೆ ||
ಈ ಸತಿಯ ಶೋಕವಂ ನೋಡಿ ಕ್ಲೇಶವೇನೆನೆ ಬಸವೇಶನು |
ದೋಷನಾಶನೆ ಧರ್ಮಸಾರನೆಂದು ಸಾಷ್ಟಾಂಗ ಮಣಿದಳವಳು ||೬||

1–1 ಆಮೇಲೆ (ಇ,ಪ.)

ಏನನೆಂಬೆನು ದೀನರಕ್ಷಕ ನಾನು ನಿನ್ನಯ ತಪದೊಳಿರ್ದೆನು ।
ಆನಂದದಿ ನೀನಿತ್ತೆ ಕರುಣದಿ ಸೂನುವನು ಅತಿಶಯದಿ ನನಗೆ ॥
ನಾನು ಪೋಷಿಸುತಿರಲು ಸರ್ಪನು ಮೌನದಿಂ ಕಚ್ಚಿಕೊಂದಿತು ।
ನೀನೆ ಪಾಲಿಸು ಪ್ರಾಣದಾನವ ಜ್ಞಾನನುಊರುತಿಯೆ ಬಸವೇಶ ॥ ೭ ॥

ವಚನ ॥ ಇಂತಪ್ಪ ಸತಿಯಳ ದೈನ್ಯವಂ ಕಂಡು ಬಸವೇಶಂ ಕರುಣಾರಸದಿಂ ಸತ್ತಿಹ ಶಿಶುವಂ ತರಿಸಿ, ಪರುಷವಾಕ್ಯದಿಂ ಏಳಯ್ಯ !. ಶಿವನ ನಾಮದ ಕಂದ; ಯಾಕೆ ಇವರ ಶೋಕಿಸುವೆ? ಎದ್ದು ಬಾರೆನಲು, ಆ ಕ್ಷಣವೇ ಆ ಶಿಶು ಎದ್ದುಬಂದು ಬಸವರಾಜಂಗೆ ಸಾಷ್ಟಾಂಗದಿಂದೆರಗಿ ನಿಲ್ಲಲು, ಬಸವೇಶನು ಆ ದಂಪತಿಗಳ ಶೋಕಮಂ ಮನ್ನಿಸಿ, ಈ ಶಿಶುವಂ ಅವರ ವಶವಿತ್ತು ಕಳುಹಲು, ಪುರಜನ ಪರಿ ಜನರೆಲ್ಲ ನೋಡಿ ಆಶ್ಚರ್ಯವಂಪಟ್ಟು ಪೊಗಳುತ್ತಿರೆ ಇತ್ತ ಬಿಜ್ಜಳನು ಬಸವೇಶನು ಸ್ವಾರಿಯಂ ತೀರಿಸಿ ಅರಮನೆಗೆ ಬರಲು, ರಾಯ ಬಸವಂಗೆ ಸಪ್ತಾಂಗಮಂ ಕೊಟ್ಟು ಮಣಿದು ಬೀಳ್ಕೊಡೆ ಬಸವೇಶ ತನ್ನರಮನೆಗೆ ಬಂದು, ಜಂಗಮಾರ್ಚನ ದಾಸೋಹದಲ್ಲಿರೆ ಮತ್ತೊಂದು ದಿನದ ಪವಾಡವೆಂತೆನೆ.

## ಅಪ್ಪಣ್ಣನ ಶಿರಸ್ಸಿನ ಕರ್ತರಿ ಪವಾಡ ಮತ್ತು ಬಿಜ್ಜಳನ ಗುರುಭಂಗ.

**ಜಂಪೆ.**

ಶಶಿಧರನ ಅಪ್ಪಣ್ಣ । ಬಸವೇಶನಿಗೆ ಸತತ ।
ಕುಶಲದಿಂ ಚೆಲುವಾದ । ಸೊಗಸು ತಾಂಬೂಲವ ॥ ೧ ॥

ತನ್ನ ಜಿಹ್ವೆಯೊಳಿಟ್ಟು । ತಾನು ಮಿಶ್ರವಗೈದು ।
ಚಿನುಮಯ ಬಸವಂಗೆ । ಸೊಗಸಿಂದಲೀವ ॥ ೨ ॥

ಅದುವೆವ್ರತ ಬಸವಂಗೆ । ಆಚರಿಪನನುದಿನವು ।
ಅಧಿಪನೊಂದಿನ ಬೇಗ । ಕರೆಸೆ ಬರೆ ಬಸವ ॥ ೩ ॥

ತಡೆದ ಅಪ್ಪಣ್ಣ ಸಂ । ಗಡ ಬರವೆ ಬಸವಯ್ಯನ ।
ಮೃಡನ ಜಂಗಮ ಗೋಷ್ಠಿ । ವಿಡಿದೊಂದು ಘಳಿಗೆ ॥ ೪ ॥

ಸದರಿನೊಳು ಮಂಚಣ್ಣ । ಸೂಚಿಸಿದ ಬಸವನಿಗೆ ।
ಮುದದಿ ವೀಳ್ಯದರಚನೆ । ಏಕಿಲ್ಲ ನಿಮಗೆ ॥ ೫ ॥

ಎನಲು ಬಸವಯ್ಯಂಗೆ । ಇಚ್ಛೆಯಾದುದು ವೀಳ್ಯ ।
ಘನ ಶರಣನಪ್ಪಣ್ಣ । ಗಳ ಕಾಣದಿರಲು ॥ ೬ ॥

ನೇಮಿಸಿದ ಬಸವಯ್ಯ । ಲಿಂಗಾಂಗಿ ಊಳಿಗರ್ಗೆ ।
ನೀವೈದಿಯಪ್ಪಣ್ಣ । ನಡಿಗೆ ನಮಿಸೀಗ ॥ ೭ ॥

ಅಡಕೆ ಕತ್ರಿಯನೀಗ । ಅತಿ ಬೇಗ ಬಸವಯ್ಯ ।
ಒಡನೆ ತರುವರೆ ಎಮ್ಮ । ಕಳುಹಿದನು ಎನ್ನಿ ॥ ೮ ॥

ಬಸವನಪ್ಪಣೆಯಂತೆ । ಜಸದಿ ಊಳಿಗರ್ಬಂದು ।
ಹಸನಾಗಿ ನಮಿಸಿದರು । ಅಪ್ಪಣ್ಣನಡಿಗೆ ॥ ೯ ॥

ಬಸವಯ್ಯ ನಿಮ್ಮೆಡೆಗೆ । ಪೋಗಿ ಅಡಕೆ ಕತ್ರಿಯನು ।
ಜಸದಿ ತರಹೇಳಿದರು । ಶರಣ ಪಾಲಿಪುದು । ॥ ೧೦ ॥

ಎನಲವರ ಮಾತನ್ನು । ವಿನಯದಿಂ ಕೇಳುತಲಿ ।
ಘನ ಶರಣ ಶಿರವರಿದು । ಕೊಟ್ಟನವರಿಂಗೆ ॥ ೧೧ ॥

ತಂದರಾ ಊಳಿಗರು । ಬಂದು ಬಸವಯ್ಯನ ।
ಮುಂದೆ ಇರಿಸಿದರಾಗ । ತಂದ ಶಿರವನ್ನು ॥ ೧೨ ॥

ಪಟ್ಟೆವಸ್ತ್ರವ ಮುಸು । ಕಿಟ್ಟು ಹಿಮ್ಮುಖವಿರಿಸಿ ।
ಸೃಷ್ಟೀಶ ಬಸವಯ್ಯ । ಶಿರಕೆ ನಮಿಸಾಗ ॥ ೧೩ ॥

ಆ ಕ್ಷಣವೆ ಶ್ವೇತಪರ್ಣ । ಅಡಕೆ ಕಾಯ್ಪತ್ರೆಗಳ ।
ತತ್ಕ್ಷಣದಿ ಜಿಹ್ವೆಯೊಳು । ತಾನಿಟ್ಟು ಬಸವ ॥ ೧೪ ॥

ಮಿಶ್ರವಂಗೈಸಿತೆಗೆದು । ವ್ರತವಿಡಿದು ತನ್ನ ಜಿಹ್ವೆ ।
ಸೂತ್ರವಿಡಿದಾ ಪ್ರಸಾದ । ಸೇವನೆಯಗೊಂಡ ॥ ೧೫ ॥

ಈ ರೀತಿ ವೀಳ್ಯವನು । ಇಚ್ಛೆಯಿಂದಲಿ ಸವಿಯೆ ।
ಧಾರಿಣೀಪತಿ ನೋಡಿ । ಬೆರಗಾದನಾಗ ॥ ೧೬ ॥

ವಚನ ॥ ಈ ಪ್ರಕಾರ ಬಸವಯ್ಯನ ತಾಂಬೂಲ ಸೇವನೆಯಂ ನೋಡಿ, ಬಿಜ್ಜಳರಾಯಂ ಆಶ್ಚರ್ಯಂಬಟ್ಟು ; ಮುಗ್ಧನಾಗಿರೆ, ಸದರಿನ ಸಮಸ್ತಮಾನ್ಯರೂ ವಿಸ್ಮಯಂಬಟ್ಟು ಶರಣರ ಮಹಿಮೆ ತಿಳಿಯಲಳವೇ ಎಂದು ನಿಶ್ಚೈಸಿರಲು, ಆ ಕ್ಷಣವೇ ಬಸವಯ್ಯಂ ತನ್ನ ವ್ರತ ನಡೆಸಿಕೊಂಡು ಶಿರಮಂ ಕಳುಹಲು, ಆ ಅಪ್ಪಣ್ಣ ಶರಣಂ ಶಿರಮಂ ಧರಿಸಿಕೊಳ್ಳಲು ಆ ಬಳಿಕಲೆಂತೆನೆ.

**ತ್ರಿವುಡೆ.**

ಬಿಜ್ಜಳನು ಆ ಕತ್ರಿ ಮಹಿಮೆಯ । ಸಜ್ಜನಿಂದಲಿ ನೋಡಿ ಬಸವಗೆ ।
ಅಚ್ಚರಿಯ ಕತ್ರಿಯನು ತರಿಸಿಕೊ – ಡೆಂದ ತನಗೆ ॥ ೧ ॥
ಏತಕ್ಕೆ ನಿನಗದರ ತಳ್ಳಿಯು । ಧಾತ್ರಿಪತಿಗಳವಲ್ಲ ಕತ್ರಿಯು ।
ನೀತಿಯಲ್ಲೈ ಬೇಡವದು ನೃಪ – ನಿಖ್ಯವೆಂತೆಂದ ॥ ೨ ॥
ತಾಂಬೂಲವ ನೀ ಸವಿದ ತೆರದಲಿ । ನಾನು ಸವಿವೆನು ಪ್ರೀಯವಾಗಿದೆ ।
ಸಾಂಬ ಶೇಷವ ಸವಿಯೆ ಕುಂದಹು – ದೇನು ಪೇಳಯ್ಯ ॥ ೩ ॥
ಅಹುದು ಕ್ಷಿತಿಯೊಳು ಕೊರತೆಯಲ್ಲವೆ । ಕುಹಕಿ ಜೈನರು ಒಪ್ಪಲರಿಯರು ।
ಮಹಿಮ ಶರಣನು ಒಪ್ಪುವನೆ ಕೇಳ್ – ಸಟೆಯ ಮಾತಲ್ಲ ॥ ೪ ॥
ಜ್ಯೋತಿ ಭುವಿಯೊಳಾವಾವ ತಾವಿಲಿ । ಜಾತಿ ಮನೆಯೊಳು ಪೊಳೆವುದಿಲ್ಲವೆ ।
ಜ್ಯೋತಿಯಂಥಾ ಶರಣ ಮಹಿಮಗೆ – ಸೋತೆ ಮನವ ॥ ೫ ॥
ಕುಂದುನುಡಿಬೇಡ ಶರಣ ಅಪ್ಪಣ್ಣ । ಇಂದು ನಿನಗೆ ತಾಂಬೂಲವೀವನೆ ।
ಎಂದು ನುಡಿಯಲು ಬಸವನೊಡನಿಂ – ತೆಂದ ರಾಯ ॥ ೬ ॥
ಕೊಡದೊಡ್ಡೋಗಲಿ ಮೆಲುವ ಸೊಬಗನು । ಬಿಡದೆ ನೋಡಿ ಹರುಷಗೊಂಬೆನು ।
ಒಡನೆ ಇತ್ತಪೆ ನೂತ್ನ ವೀಳ್ಯದ – ವಸ್ತುಗಳನು ॥ ೭ ॥

ವಚನ ॥ ಇಂತೆನಲು ಬಿಜ್ಜಳರಾಯಂ ಆ ಮಾತಿಗೆ ಬಸವಯ್ಯಂ ರಾಯ ಕೇಳು! ನೀನೇನಿತ್ತಪೆ ಆ ಕತ್ರಿ ಭುವನ ಬ್ರಹ್ಮಾಂಡಗಳಂ ನುಂಗುವುದು, ನಿನ್ನ ನವರತ್ನಾದಿಗಳಂ ಚೂರ್ಣಂಗೈವುದು, ಖಿನ್ನನಾಗುವೆ ಬೇಡವೆನಲು ಕೇಳದೆ ರಾಯ ನಾನೀವೆ ಬೇಡಿದ ವಸ್ತುಗಳಂ ಎನಲು, ಈತನ ಗರ್ವವಂ ಪರಿಹರಿಪೆನೆಂದು, ಬಸವಯ್ಯಂ ಶರಣನ ಶಿರಮಂ ತರಿಸಿದನದೆಂತೆನೆ:

**ಸಾಂಗತ್ಯ.**

ಅಡಕೆ ಕತ್ರಿಯ ತರಿಸಿಡಲು ಸದರಿನೊಳು । ಪೊಡವಿಪ ಬಿಜ್ಜಳನದಕೆ ॥
ಕಡು ಭಕ್ತಿಯಿಂದಲಿ ಗದ್ದುಗೆಯಿರಿಸಿದ । ಮೃಡ ಶರಣನ ಶಿರಸ್ಸಿಂಗೆ ॥ ೧ ॥
ಸುತ್ತಲು ಧೂಮ್ರ ದುಕೂಲವ ಕಟ್ಟಿಸಿ । ರತ್ನ ಗದ್ದುಗೆಯ ಮೇಲಿರಿಸಿ ॥
ಆಸ್ಥಾನಿಕರು ಎಲ್ಲ ವಿಸ್ಮಿತದಿಂದಲಿ । ನಿಂತರು ಭೀತಿಯೊಳಲ್ಲಿ ॥ ೨ ॥
ತರಿಸಿದ ರಾಯನು ಅರಮನೆಯಿಂದಲಿ । ಪರಿ ಪರಿ ನೂತ್ನ ವಸ್ತುಗಳ ॥
ಮಿರುಗುವ ಶ್ವೇತ ಪರ್ಣವು ಚೊಕ್ಕ ಕ್ರಮುಕವ । ಜಯಕಾಯಿ ಪತ್ರೆ ದ್ರವ್ಯಗಳ ॥ ೩ ॥
ಮಿಗಿಲಾಗಿ ತರಿಸಿಯಿಟ್ಟನು ಶಿರ ಕತ್ರಿಗೆ । ಸೊಗಸಿಂದ ಬಿಜ್ಜಳರಾಯ ॥
ಅಘಹರ ಶಿರವೆ ಭಕ್ಷಿಸೆಂದು ಪೇಳಲು । ಜಗವೇಳು ಜರ್ಝರಿಪಂತೆ ॥ ೪ ॥

ನಗುತನಗುತಲೊಂದು ಹಲ್ಲಿಗದು ಸಾಲದೆ । ಸೊಗಸ ಮುರಿಯಿತು ಬಿಜ್ಜಳನ ॥
ತಗದು ತಗದೀಯೆನಲು ತರಿಸಿದ ಕಣಜದ । ಜಗದೊಳಗುಳ್ಳಡಕೆಲೆಯ ॥ ೫ ॥
ಲಕ್ಷಮಣವು ಅಡಕೆ ತಕ್ಕ ಪರ್ಣವು ಸುಣ್ಣ । ಆಕ್ಷಣ ಸೊಗಸು ದ್ರವ್ಯಗಳ ॥
ಆ ಕ್ಷಿತೀಶನ ನೋಡಿ ಜಿಹ್ವೆ ತೆರೆಯಲಾಗ । ಕುಕ್ಷಿಯೊಳ್ಸಪ್ತಾಬ್ಧಿ ಕಂಡ ॥ ೬ ॥
ಮೂಲೋಕ ಕಾಣಲು ಮಂಕಾಗಿ ರಾಯನು । ಮೇಲ್ಕಣಜಗಳೊಡೆಸಿದನು ॥
ಜೋಳ ಅವರೆ ಭತ್ತ ಹೆಸರು ಕಡಲೆ ಧಾನ್ಯ । ಘಳಿಲನೆ ತರಿಸಿ ಒಟ್ಟಿದನು ॥ ೭ ॥
ಮುತ್ತು ಮಾಣಿಕ ವಜ್ರ ವೈಡೂರ್ಯ ರತ್ನದ । ವಸ್ತು ಕನಕ ದುಕೂಲಗಳ ॥
ವೊತ್ತ ಮೊತ್ತದಿ ಪೆಂಡೆ ದಿಂಡುಗಳೊಟ್ಟಸೆ । ಮತ್ತೆ ಬಯಲನ್ಯೈದಿಸಿತು ॥ ೮ ॥
ಬಿಜ್ಜಳನರಮನೆಯೊಳಗಿರ್ದ ವಸ್ತುವ । ಸಜ್ಜಿನಿಂದೆಲ್ಲವನಾಗ ॥
ಲಜ್ಜೆಗೊಳ್ಳುತ ತರಿಸಿಡಲು ಸಾಲದೆಹೋಗೆ । ತುಚ್ಛಕನಾದ ಬಿಜ್ಜಳನು ॥ ೯ ॥
ಕಲ್ಯಾಣಪಟ್ಟಣ ಕೋಳ್ಹೊಡಲ್ಸಾಲದೆ । ಖುಲ್ಲನಾದೆನೆ ಶಿವಯೆಂದು ॥
ಬಲ್ಲಿದ ಬಸವಯ್ಯನಡಿಗೆ ನಮಿಸೆ ನೃಪ । ಖುಲ್ಲತನದ ಬುದ್ಧಿಯಲ್ಲಿ ॥ ೧೦ ॥
ಕೆಟ್ಟೆನು ಬಸವಯ್ಯ ಎನ್ನ ಹೀರುತಲಿದೆ । ಸೃಷ್ಟಿಯೊಳೆನ್ನ ಕೆಲದಿನವು ॥
ಇಟ್ಟುಕೊ ಮರೆಹೊಕ್ಕೆ ಭ್ರಷ್ಟನಾದೆನು ಎನ್ನ । ದೃಷ್ಟಮೂರುತಿ ಕಾಯೊ ದೇವ ॥೧೧॥
ಗರ್ವಪರಿಹರನಾದೆ ಬಸವಯ್ಯ ಮುಂದಕ್ಕೆ । ಸರ್ವಥಾ ಬುದ್ಧಿಯ ಕಲಿತೆ ॥
ಉರ್ವಿಗೊಡೆಯ ನೀನೆನ್ನ ರಕ್ಷಿಪುದೆಂದು । ಮರೆಹೊಕ್ಕ ನಡುಗುತ್ತ ರಾಯ ॥ ೧೨ ॥
ಅಂಜದಿರೆಂದು ಧೈರ್ಯವ ಕೊಟ್ಟು ಬಸವಯ್ಯ । ಬಿಜ್ಜಳನಿಗೆ ಇಂತೆಂದ ॥
ನಂಜುಕಂಧರ ಶರಣರತಳ್ಳಿಬೇಡೆಂದೆ । ನೆಚ್ಚಲಿಲ್ಲವು ಎನ್ನ ಮಾತ ॥ ೧೩ ॥
ಇನ್ನಾದರು ತಿಳಿದಿರು ಶರಣರ ಘನ । ವನ್ನು ನೋಡುತ ಬದುಕೆಂದು ॥
ಮನ್ನಿಸಿ ನೃಪಗೆ ಧೈರ್ಯವಕೊಟ್ಟು ಬಸವಯ್ಯ । ಚೆನ್ನಾಗಿ ಶಿರಕೆ ನಮಿಸುತ ॥ ೧೪ ॥
ಕಳುಹಿಸಿ ಕೊಟ್ಟನು ಅಪ್ಪಣ್ಣನಿಗೆ ಬೇಗ । ಚೆಲುವಿಂದ ಧರಿಸಿದ ಶಿರವ ॥
ಮಲಹರನಪ್ಪಣ್ಣ ಶರಣ ಬಂದನು ಸಭೆಗೆ । ಗೆಲುವಿನ್ದ ಮುನ್ನಿನ ತೆರದಿ ॥ ೧೫ ॥

ವಚನ ॥ ಇಂತೀ ಶರಣ ಅಪಣ್ಣ ಬಿಜ್ಜಳನೊಡ್ಡೋಲಗಕ್ಕೆ ಬಂದು ನಿಲ್ಲಲು, ಆಶ್ಚರ್ಯಮಾಗಿ ಸಭೆ ಜನರೆಲ್ಲ ಕೊಂಡಾಡುತ್ತಿರಲು, ಬಿಜ್ಜಳ ಬಸವೇಶ್ವರನ ಪಾದಪದ್ಮಕ್ಕೆ ಸುವರ್ಣ ರಜತದ ಪುಷ್ಪಗಳಿಂದಲಂಕರಿಸಿ, ಷೋಡಶ ಪೂಜೆಯಂಮಾಡಿ ; ಕರಗಳಂ ಮುಗಿದು ಸಂಪ್ರಾಂಗಮಂ ಕೊಟ್ಟು, ಮನೆಗೆ ಕಳುಹಿಸಲು ಸಕಲ ಗಣಂಗಳು ನೋಡಿ ತಿಳಿದು, ಈ ಬಸವಂಗೆ ದ್ವಿತೀಯ ಶಂಭು ಎಂಬ ನಾಮು ಸಲ್ಲುವುದೆಂದು ಮೆಚ್ಚಲು ಧರೆಯೊಳು ಈ ಮಹಿಮೆ ಪ್ರಸಿದ್ಧಿಯಾಗಲು, ಬಿಜ್ಜಳ ರಾಯನ ಗುರುಗಳು ನನ್ನ ಶಿಷ್ಯನಂ ಮರುಳುಗೈವ ಬಸವನಂ ಕಿತ್ತೊಗೆವೆನೆಂದು ಬರಲು, ಗುರುವಿನಬರವಂ ಬಿಜ್ಜಳ ಕೇಳಿ, ಸಕಲ ಸಂಭ್ರಮದಿಂದ ತನ್ನ ಗುರುಗಳಂ ಇದಿರ್ಗೊಂಡನದೆಂತೆನೆ.

**ಜಂಪೆ.**

ಆನೆ ಕುದುರೆಯು ಮಂದಿ । ಸೇನೆ ಸಚಿವಾಪ್ತಕರು ।
ನಾನಾವಿಧ ಭಜಂತ್ರಿ । ಸಂಭ್ರಮಗಳಿಂದ ॥ ೧ ॥
ಕರೆತಂದು ತನ್ನಯ । ಹರಿಪೀಠದೊಳು ರಾಯ ।
ಗುರುವರನ ಮೂರ್ತಿಸಿ ಪ । ರಿ ಪರಿ ಸತ್ಕಾರದಿಂ ॥ ೨ ॥

ಅರ್ಘ್ಯ ಪಾದ್ಯಾಚಮನ । ಆಗ ಭಕ್ತಿಯೊಳ್ಮಾಡಿ ।
ಅಗ್ಗಳಿಯ ಬಿಜ್ಜಳನು । ಅವನಂಘ್ರಿಗೆರಗೆ ॥ ೩ ॥
ಎರಗಿದಂಥವಗಿತ್ತ । ಹರಕೆ ಸ್ಥಿರಬಾಳೆಂದು ।
ನೆರೆದ ಸಭೆಗಳ ಸೊಂಪ । ಇರವ ನೋಡುತಲಿ ॥ ೪ ॥

ನೆರೆದ ಈ ಸದರಿನೊಳು । ಪರಮ ಶಿಷ್ಯನೆ ನಿನ್ನ ।
ವರ ಮಂತ್ರಿ [1] ಇ [1] ಹನಂತೆ । ಧರೆಗೆ ಪ್ರಸಿದ್ಧ ॥ ೫ ॥
ಧರಣಿಗಚ್ಚರಿಯಾದ । ವರ ಮಹತ್ತನು ನಿನಗೆ ।
ಅರುಹಿ ಮೆರೆಯುವನಂತೆ । ಭರದಿ ನೋಡುವೆವು ॥ ೬ ॥
ತೋರು ಅವನಾರಿಲ್ಲಿ । ಕಾರಣಿಕ ತಾನೆನಲು ।
ಮಾರಹರ ವರ ಭಕ್ತ । ಅರಸರಿಗೆ ಕರ್ತ ॥ ೭ ॥
ಎನ್ನ ಬಲಬಾಹು ಈ । ತನೆನ್ನ ಕೈಮುಕುರ ।
ವೆನ್ನರಾಜ್ಯವ ಪೊರೆವ । ಎನ್ನ [2] ಸುರತರುವು [2] ॥ ೮ ॥
ಇವನೀಗ ಮಹಿಮಾತ್ರ । ಇವನು ಸಾಕ್ಷಾತ್ಶಿವನು ।
ಇವನೆ ಎನ್ನೆಯ ಮಂತ್ರಿ । ಗುರುವೆ ನೋಡೆಂದ ॥ ೯ ॥
ತೋರಲಿಕೆ ಬಸವನಿಹ । ಭಾರಿ ಮೋಡಿಯ ನೋಡಿ ।
ಕ್ರೂರ ಮನದಾ ಜಿನ್ನ । ಕುಹಕನಿಂತೆಂದ ॥ ೧೦ ॥
ಯಾವದೇಶಿಕನಯ್ಯ । ಯಾರು ಪಿತ ತಾಯಾರು ।
ಯಾವ ಕುಲವಾಚಾರ । ಯಾವ ವಂಶಿಕನು ॥ ೧೧ ॥

ವಚನ ॥ ಇಂತೆಂದು ಕೇಳ್ದ ಜಿನ್ನಗೆ ಬಸವರಾಜನು ಅವನ ಗರ್ವವಂ ಪರಿಹರಿಪೆನೆಂದು ಏನೆನ್ನುತಿರ್ದಪನು.

**ತ್ರಿವುಡೆ.**

ಕೋಡಿ [3] ನೊಳು [3] ರಥವೆತ್ತಿ ನಿಲಿಸಿದ । ಗಾಡಿಕಾರನ ನಾಭಿ ಕಮಲದಿ ।
ಮೂಡಿಬಂದನ ಶಿರವನರಿದನ – ನಾಡು ನಮ್ಮದೇಶ ॥ ೧ ॥

---

1-1 ಬ (ಗ, ಚ.) 2-2 ಮೈದುನನು (ಎ.) 3-3 ನಲಿ (ಎ.)

ಹರಿವಿರಂಚಿಗಳರಸಿ ಕಾಣದ । ಪರಮ ಪರತರ ನಿತ್ಯ ನಿರುಪಮ ।
ಧರಣಿ ಈರೇಳಕ್ಕೆ ಒಡೆಯನು – ನಮ್ಮ ಪಿತನೆಂದ ॥ ೨ ॥

ಮರುತ ಪುತ್ರನ ಅನುಜನೊಳು ತಾ । ಪರಿವ ಸತ್ವದಿ ಕಾದಿಯಾತಗೆ ।
ಶರವನಿತ್ತನ ಮೋಹನಾರ್ಥೆಯು – ತಾಯಿ ಸಲಹಿದಳು ॥ ೩ ॥

ಪ್ರವರ ವೀರಶೈವ ಸೂತ್ರದ । ಶಿವನ ವಂಶದನ್ವಯ ನಂದಿಯ ।
ಅವಿರಳದ ಗೋತ್ರಾದಿ ವ್ರತಸ್ಥರು – ಎಮ್ಮ ಅಭಿಧಾನ ॥ ೪ ॥

ಗುರುವು ಸಂಗಮದೇವನಿಟ್ಟಿಹ । ಪರಮ ನಾಮವು ಬಸವರಾಜನು ।
ಭರದಿ ಕೇಳ್ಕಿರ ವೋಟನರ್ಚಕ – ದುರುಳ ಜಿನ್ನ ॥ ೫ ॥

ಬಸವನಾದರೆ ನಿಮ್ಮ ವರ್ತನೆ । ಎಸೆವ ವಾದಗಳಿಲ್ಲ ಪುಲ್ಗಳ ।
ಸುಸರದಿಂ ಮೇಯ್ವಂಥ ಪದ್ಧತಿ – ಸರಿಯು ನಿಮಗೆಂದ ॥ ೬ ॥

ಅಹುದು ಠಕ್ಕರ ಸುತೆಯ ರಮಿಪರ । ಅಹಿಧರನ ನಿಂದಕನ ದ್ರೋಹಿಯ ।
ಮಹಿಯೊಳಿಂತವರಂ ತೃಣವ ಮಾಡಿ – ಮೇಯ್ವೆ ನಿಜವಯ್ಯ ॥ ೭ ॥

ಮಂದಮತಿ ಗುರು ಬೊಜ್ಜ ಜಿನ್ನನು । ಒಂದು ಶಬ್ದವ ಕೊಡಸೆ ತಲೆಯನು ।
ಅಂದು ಬಗ್ಗಿಸಿ ನೆಲನ ಕಾಲಲಿ – ಕುಂದಿ ಕೆರೆಯುವನು ॥ ೮ ॥

ಸಭೆಯೊಳ್ಜಿನ್ನನ ಘನತೆ ಪಾರಿತು । ಶುಭದಿ ಬಸವನ ಮಹಿಮೆ ಪೆರ್ಚಿತು ।
ವಿಬುಧ ಶ್ರೇಣಿಯ ಬಿಟ್ಟು ಜಿನ್ನನು – ನಡೆದುವೊಪ್ರೊಳಕ್ಕ ॥ ೯ ॥

ವಚನ ॥ ಇಂತೀ ಸಭಾ ಮಧ್ಯದಲ್ಲಿ ಜಿನ್ನಂ ಖಿನ್ನನಾಗಿ ಮಾತು ಮಾತಿಗೆ ಉತ್ತರವಿಲ್ಲದೆ ಏಕಾಂತ ಸ್ಥಾನವಂ ಪೊಕ್ಕು, ಬಸವನ ಮಹತ್ತ್ವಂ ಎಂತಾದರೂ ಕಳೆವೆನೆಂದು, ಆ ಜಿನ್ನನು ಕೋಪದಿಂದ ತನ್ನ ಕೈಲಾಕುಳವಂ ಮಂತ್ರಿಸಿ ಅಂಬರಕ್ಕಿಡುವನದೆಂತೆನೆ.

**ಏಕತಾಳ.**

ಎಲವೊ ಬಸವರಾಜ । ಈ ಸಭೆಯೊಳು ನಿನ್ನ ।
ಬಲು ಮಾತುಗಳಿಗಂಜಿ । ಬಿಡೆನೀಗ ನಾನು ॥ ೧ ॥

ನನ್ನ ಕೈ ಲಾಕುಳ । ಗಮ್ಮನಂಬರಕೊಗೆವೆ ।
ನಿನ್ನ ಮಹತ್ತ್ವನಿಂ ತರಿಸಿ । ನೀ ನೀಯಬೇಕು ॥ ೨ ॥

ಎಂದ ಜಿನ್ನನ ಮಾತಿ । ಗೆದ್ದು ಬಸವರಾಜ ।
ಮಂದ ಮಾನವ ನೋಡು । ಮುಂದೆ ಯೋಚನೆಯ ॥ ೩ ॥

ಧರಣೀಶನ ಗುರುವರ । ನೆಂದು ಉನ್ನತಿಯಿತ್ತೆ ।
ಪರಿವುದು ಘನವೆ ನಿನ್ನ। ವಿರಚಿಪೆ ನೋಡೈ ॥ ೪ ॥

ಹರಿ ಬ್ರಹ್ಮರಾ ಶಿವನ । ಶಿರಪಾದ ಕಾಂಬೆವೆಂದು ।
ಭರದಿ ಪಂಥವ ತೊಟ್ಟು । ಅವರು ಕಾಣಲಿಲ್ಲ ॥ ೫ ॥

ಶರಣರ ಮಹಿಮೆಯನು । ಪರಿಕಿಸಲು ನೀ ಶಕ್ತನೆ ।
ಒರೆದು ತೋರುವೆ ನೋಡು । ಶರಣ ಮಹಿಮೆಯನು ॥ ೬ ॥

ಅಪ್ಪಣ್ಣ ಶರಣರ್ಗೆ । ಆಗ ಬಸವರಾಜ ।
ಒಪ್ಪದಿಂ ಪೇಳಿದನು । ಮುನಿಯಹಂಕೃತಿಯ ॥ ೭ ॥

ಈತನ ಲಾಕುಳ । ಅಂಬರಕ್ಕೈದಿವೆಯ್ಯೆ ।
ಖ್ಯಾತಿಯಿಂ ತರಿಸಿಯೆ । ಕೊಡು ಈತಗೆಂದ ॥ ೮ ॥

ಶರಣನಾಕ್ಷಣ ತನ್ನ । ಚರಣರಕ್ಷೆಯ ಮೇಲ ।
ಕಿರದಿಟ್ಟು ಲಾಕುಳವ । ಭರದಿ ತಾರೆಂದ ॥ ೯ ॥

ಪೋಗಿ ರಕ್ಷೆಯು ಬೇಗ । ಅಂಬರದೊಳಗಾಗ ।
ಲಾಗಿನಿಂ ನಿಂದಿರುವ । ಲಾಕುಳವನ್ನು । ॥ ೧೦ ॥

ಹೊಡದು ಹೊಡೆದುಕೊಂಡು । ಪೊಡವಿಗಾಳುದ್ದದಿ ।
ಹಿಡಿದು ನಿಲ್ಲಸಿ ಮೇಲೆ । ಅರ್ಥಿಯಿಂ ಕುಳಿತು ॥ ೧೧ ॥

ನಿಲ್ಲಲಾ ಸಭೆಯಲ್ಲಿ । ಖುಲ್ಲ ನಿನ್ನ ಲಾಕುಳವ ।
ಬಲ್ಲತನದಿ ಕರೆಯೊ । ಭೂಪನ ಮುಂದೆ ॥ ೧೨ ॥

ಬರೆದು ಮಂತ್ರದಿ ತನ್ನ । ಶಿರಬಗ್ಗಿ ನಾಚಿದ ।
ಮರಿಯಾದೆ ನೀಗಿದ । ಮುನಿ ಜಿನ್ನನಾಗ ॥ ೧೩ ॥

ಬಳಿಕ ಹೊಡೆದು ರಕ್ಷೆ । ಇಳೆಯೊಳ್ಕೆಡಹಿತಾಗ ।
ಸಲೆ ಪೊಗಳಿದರೆಲ್ಲ । ಒಲಿದು ಬಸವನನು ॥ ೧೪ ॥

ಮಣಿದಪ್ಪಣ್ಣಗೆ ರಾಯ । ಪೊಗಳಿ ಮಂತ್ರೀಶನ ।
ಮಣಿ ಮಯದುಡುಗೊರೆ । ಕೊಟ್ಟು ಮನ್ನಿಸಿದ ॥ ೧೫ ॥

ವಚನ ॥ ಇಂತೀ ಪರಿಯಲ್ಲಿ ಪರವಾದಿಯಾದ ಮುನಿಜಿನ್ನನ ಮುಖವಂ ಬಗ್ಗಿಸಿ, ಭಂಗಿತನಂಮಾಡಿ ಪರವಾದಿ ಗಜಾಂಕುಶನೆಂಬ ಬಿರುದಂ ಪೊತ್ತು, ವೀರಶೈವ ಮಹತ್ವಮಂ ತಿಳುಪಿ ಮೆರೆಯುತ್ತಿರೆ, ಆಗ ಬಿಜ್ಜಳನು ಅತಿಭಕ್ತಿಯಿಂದ ಬಸವೇಶಂಗೆ ನಮಸ್ಕರಿಸಿ, ಜಯಘೋಷವಂ ಮಾಡಿ, ಅತ್ಯುತ್ಸಾಹದೊಡನೆ ಕಳುಹಿಸಿಕೊಡಲು, ಬಸವೇಶ ತನ್ನರಮನೆಗೆ ಬಂದು ಶಿವಾನುಭವಗೋಷ್ಠಿಯಲ್ಲಿರುತ್ತಿರೆ ಮತ್ತೊಂದು ದಿನದ ಪವಾಡವೆಂತೆನೆ.

# ಶಿವನಾಗಮಯ್ಯನ ಕರದಲ್ಲಿ ಕ್ಷೀರವಂ ಕರೆದ ಪವಾಡ.

**ತ್ರಿವುಡೆ.**

ಒಂದುದಿನ ಬಸವಯ್ಯ ಹರುಷದಿ । ಚಂದದಿಂ ಕಡೆ ಬೀದಿ ನೋಡುತ ।
ಮುಂದೆ ಬರುತಿರೆ ನಾಗಮಯ್ಯಗ – ಳಂದು ಹರುಷದಲಿ ॥ ೧ ॥

ಅಷ್ಟವಿಧದರ್ಚನೆಯ ಮಾಡುತ । ನಿಷ್ಠೆಯಿಂದಲಿ ಪೂಜೆ ಸ್ತುತಿಯೊಳು ।
ಅಟ್ಟಹಾಸದಿ ಘಂಟೆ ಜಾಗಟೆ – ನಾದವೆಸೆಯೆ ॥ ೨ ॥

ಕೇಳಿ ಶಿವಶರಣರುಗಳ್ಸಂಭ್ರಮ । ತಾಳಿ ಮನದಲಿ ಭಕ್ತಿಯಿಂದಲಿ ।
ಊಳಿಗರ ತಾ ನಿಲಿಸಿಯಂದಣ – ವಿಳಿದು ಬಸವಣ್ಣ ॥ ೩ ॥

ಬೀದಿಯಲಿ ಎಲ್ಲರನು ನಿಲ್ಲಿಸಿ । ಸಾದರದಿ ತಾನಾಗ ಭಕ್ತಿ ವಿ ।
ನೋದವಾಗಿಯೆ ನಾಗಮಯ್ಯನ – ಗೃಹವನೊಳಪೊಕ್ಕು ॥ ೪ ॥

ವಂದಿಸಲು ಶಿವಪೂಜೆಗೆಯ್ಯುವ । ತಂದೆ ನಾಗಮದೇವನಾಗಲೆ ।
ಮಂದಹಾಸದಿ ಬಸವರಾಜಗೆ – ವಂದಿಸಿದನಾಗ ॥ ೫ ॥

ಪಾದಪೂಜೆಯ ತೀರ್ಚಿ ತೀರ್ಥವ । ಸ್ವಾದಗ್ರೆಯ್ಯುವ್ದ ಕಂಡು ಬಸವನು ।
ಮೋದಗೊಳ್ಳುತ ಭಕ್ತಿಯಿಂದಲಿ – ಕೊಂಡ ತೀರ್ಥವನು ॥ ೬ ॥

ಆಗಲಾ ಪ್ರಸಾದ ಶೇಷವ । ಭೋಗಿಸುತಲತಿ ವೇಗದಿ ।
ನಾಗಿ ಹೊರಟನು ಬಸವರಾಜನು – ರಾಯನೋಲಗಕೆ ॥ ೭ ॥

ವಚನ ॥ ಈ ಪ್ರಕಾರವಾಗಿ ಬಂದ ಬಸವಣ್ಣನಂ ರಾಯ ಕರವಿಡಿದು ಕುಳ್ಳಿರಿಸಿಕೊಂಡು, ರಾಜ್ಯ ವಿಚಾರಂಗೆಯ್ಯುತ್ತಿರುವಲ್ಲಿ ಕೊಂಡೆಯಮಂಚಣ್ಣನು, ಶಿವನಾಗಮಯ್ಯನ ಮಹಿಮೆಯಂ ಪ್ರಕಟಿಸಲೋಸುಗ ಬಿಜ್ಜಳನೊಳಿಂತೆಂದನು.

**ಏಕತಾಳ.**

ಕೇಳು ಬಿಜ್ಜಳರಾಯ । ಕೇಳು ಹೊಲೆಯನ ಗೃಹಕೆ ।
ಲೀಲೆಯಿಂ ಬಸವಣ್ಣ । ಪ್ರೇಮದಿಂ ಪೋಗಿ ॥ ೧ ॥

ಸಮುಗದ್ದುಗೆಯೊಳವನ । ಅಮಿತದಿಂ ಸೋಂಕಿ ತಾನು ।
ಭೂಮಿಪ ಕೇಳ್ಬಂದ । ಆ ಸ್ಥಾನದೊಳಗೆ ॥ ೨ ॥

ಬಂದು ನಿನ್ನನು ಮುಟ್ಟಿ । ಇಂದು ಹೊಲೆಗಲಸಿದ ।
ಚಂದವೇ ಈ ನಡತೆ । ಎಂದ ಮಂಚಣ್ಣ ॥ ೩ ॥

ಕೇಳುತ ಬಿಜ್ಜಳನಾಗ । ತಾಳುತ್ತ ಮನಹೇಯ ।
ಕೇಳಿದ ಬಸವನ । ಕೀಳ್ನಡೆಯ ಹೊಲಸ ॥ ೪ ॥

ಏನಯ್ಯ ಮಂತ್ರೀಶ । ಹೀನ ಹೊಲೆಯರ ಮನೆಯ ।
ನೀ ಹೋಗಿ ಬಂದೆನ್ನ । ಹೊಲಿಗಲಸುವರೆ ॥ ೫ ॥

ಕೇಳಿದ ರಾಯಗೆ । ಪೇಳಿದ ಉತ್ತರವ ।
ಕೇಳು ಹೊಲೆಯರಪರಿಯ । ಲಾಲಿಸು ಪೇಳ್ವೆ ॥ ೬ ॥

ಹಸುವ ಕೊಲುವಾತ ಹೊಲೆಯ । ಹೊಲಸುತಿನ್ನುವ ಹೊಲೆಯ ।
ಹುಸಿಯನಾಡುವ ಹೊಲೆಯ । ವಸುಧೀಶ ಕೇಳು ॥ ೭ ॥

ತನ್ನನೇಮವ ನೀಗಿ । ಅನ್ಯನೇಮಕೆ ಮನ ।
ವಿನ್ನಿಟ್ಟ ಹೊಲೆಯರ । ಮನೆ ಹೊಕ್ಕೆನೇನ್ಯೆ ॥ ೮ ॥

ಸತ್ತು ಭವಕೀಡಾಗಿ । ಮೃತ್ಯುವಾಜ್ಞೆಗೆ ಶಿಲ್ಕಿ ।
ವ್ಯರ್ಥಜೀವರ ಮನೆಯ । ಮತ್ತೆ ಹೊಗಲಿಲ್ಲ ॥ ೯ ॥

ಶಿವನೇಕೋ ದೈವವೆಂದು । ಅರಿತು ಅರಿಯದಂಥ ।
ಭವಕರ್ಮಿ ಜೀವರ । ಮುಟ್ಟಿ ಬರಲಿಲ್ಲ ॥ ೧೦ ॥

ಕುಲಗುರು ದೈವವ । ನೆಲೆಯರಿಯದ ಪಾಪಿ ।
ಹೊಲೆಯರ ಮನೆ ಹೊಕ್ಕು । ಅರಸೆ ಬರಲಿಲ್ಲ ॥ ೧೧ ॥

ಸತ್ತು ಹುಟ್ಟುತ ಪರರ । ಸ್ವತ್ತನೆಳಸಿ ಪುಸಿವ ।
ಮತ್ತೆ ಹೊಲೆ ನೀಚರ । ಮನೆಯ ಹೊಗಲಿಲ್ಲ ॥ ೧೨ ॥

ಪರಸತಿಗಳುಪುತ । ಪಾಪದನ್ನವತಿಂಬ ।
ನರಕಿ ಹೊಲೆಯರ ಮನೆಯ । ನಾನು ಹೊಗಲಿಲ್ಲ ॥ ೧೩ ॥

ವಚನ ॥ ಇಂತು ಪೇಳಿ ಮತ್ತು ಇಂತೆಂದಂ.

**ತ್ಯಾಗಮಾನ – ಅಟತಾಳ.**

ಕೇಳು ಮನುಜನೇಕ ಜನ್ಮದಿ ಎಲೆ ರಾ – ಯ – ತೊಳಲಿ–
ನಾಳ ಮೂತ್ರದ ಕುಳಿಯೊಳ್ಬರುವ ಎಲೆ ರಾ – ಯ ॥ ೧ ॥

ಏಸುಮಾತು ಸುಳ್ಳನಾಡಿ ಎಲೆ ರಾ – ಯ – ಮನಸು–
ಪಸರಿಸಿದಂತೆ ನಡೆದು ನುಡಿದು ಎಲೆ ರಾ – ಯ ॥ ೨ ॥

ಕಾಲನಿಗೆ ತುತ್ತಾಗಿರುವರೆಲೆ ರಾ – ಯ – ಅಧಮ–
ಖೂಳ ಹೊಲೆಯರಂಥವರಲ್ಲ ಎಲೆ ರಾ – ಯ ॥ ೩ ॥

ಜನನ ಮರಣ ವಿರಹಿತರವರು ಎಲೆ ರಾ – ಯ – ಕೇಳು–
ಘನ ಮಹಿಮರಾ ಮನೆಯ ಹೊಕ್ಕೆ ಎಲೆ ರಾ – ಯ ॥ ೪ ॥

ತ್ರಿಣಯನ ಮೆಚ್ಚಿಗೆ ಮಹಿಮರವರು ಎಲೆ ರಾ – ಯ – ಮತ್ತೆ–
ಬಣಗು ದೂಷಕರಿಮಿಂಡರವರು ಎಲೆ ರಾ – ಯ ॥ ೫ ॥
ಅವರ ಖ್ಯಾತಿ ಶಿವನ ಖ್ಯಾತಿ ಎಲೆ ರಾ – ಯ – ಕೇಳ–
ಅವರ ಮನೆಯೇ ಶಿವನ ನಿಳಯ ಎಲೆ ರಾ – ಯ ॥ ೬ ॥
ಅವರು ಮೆಟ್ಟಿದ ಭೂಮಿ ಕ್ಷೇತ್ರ ಎಲೆ ರಾ – ಯ – ನೀನು–
ಅವರ ನಿಂದಿಸಿ ನುಡಿಯಬೇಡ ಎಲೆ ರಾ – ಯ ॥ ೭ ॥
ಅಮೃತಹಸ್ತ ಅಮೃತವಾಕ್ಯ ಎಲೆ ರಾ – ಯ – ಮತ್ತೆ–
ಅಮೃತ ಸರಸಿಯವರಂಗದೊಳು ಎಲೆ ರಾ – ಯ ॥ ೮ ॥
ಅಮೃತಶರಧಿ ಹರಿಗಿತ್ತವರು ಎಲೆ ರಾ – ಯ – ಅವರು –
ಅಮೃತಕ್ಕೆ ಸರಿಯಾದ ಮಹಿಮರೆಲೆ ರಾ – ಯ ॥ ೯ ॥
ಪ್ರತ್ಯಕ್ಷವನು ಪ್ರಮಾಣಿಸದೆ ಎಲೆ ರಾ – ಯ – ನೀನು–
ವ್ಯರ್ಥದ ಮಾತನಾಡಬಹುದೆ ಎಲೆ ರಾ – ಯ ॥ ೧೦ ॥
ಪೃಥ್ವಿಪತಿಗಹಂಕೃತಿ ಸಲ್ಲದು ಎಲೆ ರಾ – ಯ – ನಿರಿಯ–
ಮತ್ತೆಯಾಳ್ವರುಂಟೆ ಕೇಳು ಎಲೆ ರಾ – ಯ ॥ ೧೧ ॥
ಸತ್ಯಶರಣರ ಮಹಿಮೆಯರಿಯದೆ ಎಲೆ ರಾ – ಯ – ನಿರ್ನಿ–
ಮಿತ್ತದಿಂದ ಕೆಡಲುಬಹುದೆ ಎಲೆ ರಾ – ಯ ॥ ೧೨ ॥

ವಚನ ॥ ಇಂತೆಂದು ಬಸವೇಶಂ ರಾಯಂಗೆ ಸತ್ಯನೀತಿಯಂ ಪೇಳುತ್ತಿರೆ, ಮಂಚಣ್ಣನು ರಾಯನ ಕೂಡೆ ಆದರೇನಾಯ್ತು ? ಅಮೃತವಂ ಹಸ್ತದೊಳು ಕರೆದು ತೋರಲಿ! ಶಿವನಾಗಮಯ್ಯನಂ ಬರಮಾಡಿ ಪರೀಕ್ಷಿಸೆನಲು, ಇತರೇತರ ಜ್ಞಾನವಿಲ್ಲದ ಬಿಜ್ಜಳನು ಆಗ ಬಸವಣ್ಣನ ಕೂಡೆ ಅಮೃತ ಶರೀರದ ಬಗೆಯಂ ನೋಡುವೆನು!! ಶಿವನಾಗಮಯ್ಯನಂ ಬರಮಾಡೆನಲು, ಬಸವಣ್ಣನು ಶಿವನಾಗಮಯ್ಯನವರಂ ಅತ್ಯುತ್ಸಾಹದೊಡನೆ ಬಿಜ್ಜಳನೊಡ್ಡೋಲಗಕ್ಕೆ ಕರೆತರುತಿರ್ದಪನದೆಂತೆನೆ.

**ಕಂದಪದ್ಯ.**

ಶಿವನಾಗಮಯ್ಯನ ಗೃಹಕೆ ।
ಸವಿನಯದಿಂ ಬಸವನೆಯ್ದಿ ಪೇಳಿ ನಮಿಸುತಂ ॥
ತವಕದಿ ಕನಕದ ಶಿಬಿಕೆಯೊ ।
ಳವರಂ ಪತ್ತಿಸುತುತ್ಸಹದಿಂ ಕರೆತರುತಿರಲ್ ॥ ೧ ॥

ಸುತ್ತಲು ಗಣತಿಂಥಿಣಿ ಮುಂ ।
ದೆತ್ತಿದ ನಂದಿಧ್ವಜ ನಡೆಯಲು ಸಂಭ್ರಮದಿಂ ॥
ಪೃಥ್ವಿಪನ ಸಭೆಗೆಯಾಗಳೆ ।
ಅರ್ಥಿಯೊಳೈದಿಸಿ ತಂದರು ಮಹಿಮೆಯ ತೋರಲ್ ॥ ೨ ॥

ಬಸವೇಶನಾಗ ತನ್ನೆಯ |
ಮಿಸುನಿಯ ಪೀಠದಿ ಮೂರ್ತವ ಸಲೆಮಾಡಿಸುತಂ ||
ಬಸವನುಸುರಿದನು ಭೂಪತಿ |
ಒಸೆದಮೃತ ಶರೀರವ ನೋಡಿ ಸಂಶಯವ ಬಿಡೈ || ೩ ||

**ಮಲ್ಲಿಕಮಾಲಾ ವೃತ್ತ.**

ಬಸವರಾಜನು ಭವ್ಯಚರಿತನು ಒಸೆದು ನಾಗಮಯ್ಯ ಶರಣನಾ |
ಜಸದಿ ಬೆರಳನು ಪಿಡಿದು ಅಮೃತವ ವಸುಧೆಪತಿಯಾ ಮುಂದುಗಡೆಯೋಳ್ ||
ಮಿಸುನಿ ಪಾತ್ರೆಯೊಳ್ತುಂಬಲ್ಲೆಲ್ಲರು ಪೊಸತು ಚೋದ್ಯವಗೊಂಡರಾಗ |
ಅಸಮಲೋಚನ ಶರಣಗಣರಿಗೆ ಅಧಿಕರಿಲ್ಲವು ಮೂಜಗದೊಳು || ೧ ||

ವಿಪ್ರಸ್ರಾಸಿರ ಸುಪ್ರೌಢರು ಸರ್ಪಭೂಷಣ ಶಿವನಶರಣರಿ |
ಗೊಪ್ಪಿ ಈಡಹಲರಿಯರಿಳೆಯೊಳು ನಿಃಫಲ ವ್ರತದವರಿವರು ನಿಜವು ||
ಪೃಥ್ವಿಪತಿ ತಾನಧಿಕ ಸ್ತುತಿಯಿಂ ಕರ್ತೃ ದಂಡಾಧೀಶ ಬಸವಗೆ |
ಅರ್ಥಿಯಿಂ ಮಣಿದು ವೈಭವದಿ ಕಳುಹಿದಲ್ಲಿಗೆ ಸಂಧಿ ಸಂಪೂರ್ಣಂ || ೨ ||

**ಕಂದಪದ್ಯ.**

ಇದು ಬಸವೇಶನ ಮಹಿಮೆಯು |
ಇದನು ಸಲೆ ಕೇಳಿ ಪೇಳ್ದೋದಿದವರ್ಗಳಿಗಂ ||
ಪದುಳದಿ ಸುರಪನ ಸಂಪದ |
ಒದಗುವದು ತೋಷದಿ ಶಂಭು ರಕ್ಷಿಪಸತ್ಯಂ || ೧ ||

ಇಂತಿ ಪದ್ಯಗಳು ೪೫೭

**ಅಂತು ಸಂಧಿ ೧೧ ಕ್ಕಂ ಸಂಪೂರ್ಣಗಣನೆ – ೩೦೪೫ ಕ್ಕಂ ಮಂಗಳಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ**



## ಹನ್ನೆರಡನೆಯ ಸಂಧಿ

# ಲೀಲೆಯಿಂ ಬಂದ ಜಂಗಮರ ಮನದಿಚ್ಛೆಯಂ ಸಲಿಸಿದ ಪವಾಡಗಳು

**ಛಂದೋವೃತ್ತ.**

ಈಶನಂ ಪರಮ ಗಿರಿಜೇಶನಂ ಪರಮ ಪರಿತೋಷನಂ ಪರಮ ಪ್ರಕಾಶನಂ ।
ಕರುಣಿ ಭೂತೇಶನಂ ಅಖಿಳ ಜಗಧೀಶನಂ ಆಕಾಶಕೇಶ ಸರ್ವೇಶನಂ ॥
ಶೇಷನಂ ಧರಿಸಿದ ವಿಲಾಸನಂ ಸಕಲ ತಾರೇಶನಂ ಮುಡಿದ ಗೌರೀಶನಂ ।
ನುತಿಸುವೆ ಮಹೇಶನಂ ಕೈಲಾಸವಾಸನಂ ಪ್ರಮಥೇಶನಂ ಸಲಹೆನ್ನನುಂ ॥ ೧ ॥

## ಬರಡಾಕಳಂ ಕರೆದು, ಒಣಬಿಲ್ವವಂ ಚಿಗುರಿಸಿ, ಜೋಳವ ಮುತ್ತುಮಾಡಿ, ಮಲ್ಲಣ್ಣಶೆಟ್ಟಿಯ ಮನೆ ಸತಿಸುತರಂ, ಜಂಗಮಕ್ಕೆಕೊಟ್ಟ ಪವಾಡ.

**ಭಾಮಿನೀ ಷಟ್ಪದಿ.**

ಒಂದುದಿನ ಬಸವೇಶನರಮನೆ ।
ಗಂದು ಜಂಗಮಮೂರ್ತಿ ಈರ್ವರು ।
ಬಂದರಲ್ಲಿಗೆ ಕಂಡು ಬಸವದಿನೇಂದ್ರ ನಮಿಸಿದನು ॥
ಚಂದ್ರಧರ ವರ ರೂಪ ಯತಿಗಳೆ ।
ಬಂದು ನೀವೆನಗಿತ್ತ ದರುಶನ ।
ದಿಂದ ದುರಿತದ ತಮವ ಕಳೆದೆನು ಎಂದು ಬಿತ್ತರಿಸೆ ॥ ೧ ॥

ಗುರುವೆ ಪರತರ ಪುಣ್ಯಪುಂಜದ ।
ಇರವೆ ನೀವೆಯ್ದಿದುದ ಸೇವಕ ।
ತರಳನಿಗೆ ಆಪ್ಪಣೆಯ ಪಾಲಿಪುದೆಂದ ಬಸವಯ್ಯ ॥
ಪರಮಪದವಿಯು ಶಿವನ ಸಮರಸ ।
ದೊರೆಯಬೈ ನಿನಗೆನುತ ಹರಕೆಯ ।
ಭರದಿ ಈವುತ ಬಂದ ಬಗೆಯನು ಒರೆದರಾತನಿಗೆ ॥ ೨ ॥

ಕೇಳುಭಕ್ತನೆ ನಿನ್ನ ಕೀರ್ತಿಯು ।
ಏಳುಲೋಕದಿ ಪೇಳಲಸದಳ ।
ಬಾಳ ಹೊಗಳಿಕೆ ಕೇಳಿಬಂದೆವು ಲಾಲಿಸೆಮ್ಮನುವ ॥
ಭಾಳಲೋಚನ ಗಣರ ಮನದ ।
ಭಿಲಾಷೆಯನು ಸಲಿಸುವನು ನೀನೆನುತ ।
ಲೀಲೆಯಿಂ ನಮ್ಮಿಚ್ಛೆಯನು ಬೇಡಲೀಗೆಯ್ದಿಹೆವು ॥ ೩ ॥

ಪಾದ ಸೇವೆಯಗೆಯ್ಯಲೆನ್ನನು ।
ಮೂದೇವರಪತಿಯು ಕಳುಹಿದ ।
ಭೇದವಿಲ್ಲದೆ ಉಸುರಿ ಸೇವೆಯ ಮಾಳ್ಪುದೇನೆನಲು ॥
ಆದಡೆಯು ಕೇಳ್ಭಕ್ತ ನಮ್ಮೆಯ ।
ಆದಿಲಿಂಗಕೆ ಬರಡಿನಾಕಳೊ ।
ಳಾದ ಕ್ಷೀರದಭಿಷೇಕವನೊಣ ಬಿಲ್ವತರುವನ್ನು ॥ ೪ ॥

ಚಿಗುರಿಸಿದ ಪತ್ರೆಯನು ಪೂಜೆಗೆ ।
ಸೊಗಸಿನಿಂ ತಹುದೆನಲು ಮೂರ್ತಿಯು ।
ಅಘಹರನ ಧ್ಯಾನದಲಿ ಬರಡಾಕಳನು ಬಸವಣ್ಣ ॥
ಒಗುಮಿಗೆಯ ತೋಷದಲಿ ತರಿಸುತ ।
ಮಿಗಿಲು ಪರುಷದ ದೃಷ್ಟಿಬೀರಲು ।
ಬಗೆಯವೇನೆನಬಹುದು ಕೆಚ್ಚಲು ಉದಿಸಿ ಕ್ಷೀರವನು ॥ ೫ ॥

ಕರೆಸಿ ರನ್ನದ ತಂಬಿಗೆಯೊಳಂ ।
ತ್ವರಿತ ಬಿಲ್ವದ ಒಣಗಿನಿಂದಿಹ ।
ತರುವ ನೋಡಲು ಶಿವನಧ್ಯಾನದಿ ಚಿಗುರಿಪಲ್ಲವಿಸುತೆಸೆಯೆ ॥
ತರಿಸಿ ಪತ್ರೆಯಮೃತವ ಮೂರ್ತಿಗೆ ।
ಚರಣಕಾನತನಾಗಿ ಒಪ್ಪಿಸಿ ।
ಮೆರೆದ ಮಹಿಮೆಯ ಬಸವರಾಜನು ಕೇಳಿ ಸಜ್ಜನರು ॥ ೬ ॥

ಅನಿತರೊಳಗಿನ್ನೋರ್ವ ಮೂರ್ತಿಯು
ನನಗೆ ಇಚ್ಛೆಯು ಶಿವನಪೂಜೆಗೆ ।
ಘನತರದ ರಂಗೋಲೆ ತುಂಬಲು ಮುತ್ತು ರತ್ನಗಳ ॥
ಕ್ಷಣದಿ ನಮಗೀಯೆನಲು ಕೂಡಲೆ ।
ತ್ರಿಣಯನರ್ಚನೆಗೆಯ್ಯೆ ಪೋಪೆವು ।
ಎನಲು ಕೆಂಬಿಳಿಜೋಳ ತರಿಸಿಯೆ ಪರುಷ ಹಸ್ತದಲಿ ॥ ೭ ॥

ಮುಟ್ಟಿ ಧ್ಯಾನಿಸೆ ಬಸವರಾಜನು ।
ನೆಟ್ಟನಾದವು ಮುತ್ತುರತ್ನವು ।
ಅಟ್ಟಹಾಸದಿ ಬೇಗನವರಿಗೆ ಕೊಟ್ಟು ನಮಿಸಿದನು ॥
ಸೃಷ್ಟಿಗಚ್ಚರಿಮಾಡಿ ತೋರಿದ ।
ಕೆಟ್ಟಜೈನರ ಮುಂದೆ ಹರುಷದಿ ।
ದಿಟ್ಟಮಹತ್ತ ಮೆರೆದನಾ ಕಲ್ಯಾಣಪಟ್ಟಣದಿ ॥ ೮ ॥

ಆ ಮಹಾ ಕಲ್ಯಾಣಪುರದೊಳು ।
ಕೋಮಲನು ಘನ ವೈಶ್ಯ ವರ್ತಕ ।
ಕಾಮ ಸಮರೂಪ ಚೆಲ್ವಿನ ಮಲ್ಲಶೆಟ್ಟಿಯೆಂಬವನು
ಭಾಮಿನಿಯು ಸುತರೀರ್ವರಿರ್ಪರು ।
ಹೇಮದರಮನೆ ಸೌಧ ಕಲಶವು ।
ಸ್ತೋಮ ಲಕ್ಷವು ಕೋಟಿ ಸಂಖ್ಯೆಯ ದ್ರವ್ಯದಧಿಪತಿಯು ॥ ೯ ॥

ಮುತ್ತುರತ್ನವು ವಜ್ರಮಾಣಿಕ ।
ಕೆತ್ತನೆಯ ವಸ್ತುಗಳ ಬೇಹರ ।
ಒತ್ತಮಿರುಗುವ ದುಕೂಲ ಜವಳಿಯ ದಿನಸು ವರ್ತಕನು ॥
ಸುತ್ತಮುತ್ತಲಿ ಸೀಮೆಯೊಳು ತಾ ।
ನೆತ್ತನೋಡಲೀ ವೈಶ್ಯನಂಗಡಿ ।
ಪೃಥ್ವಿಯೊಳು ಪೆಸರ್ವಡೆದು ರಾಜಿಪ ವೈಶ್ಯಮಲ್ಲಣ್ಣ ॥ ೧೦ ॥

ಬಸವರಾಜನೊಳೋರ್ವ ಜಂಗಮ ।
ಜಸದಿ ಬಂದಿಚ್ಛೆಯನು ಬೇಡಿದ ।
ಕುಶಲಕೋವಿದ ಭಕ್ತಜಂಗಮ ಪ್ರೇಮಿ ಬಸವಣ್ಣ ॥
ವಸುಧೆ ರಕ್ಷಕ ವೈಭವೇಂದ್ರನೆ ।
ಪಶುಪ ಸಾಕ್ಷಾತ್ಕರನು ನೀನೆನೆ ।
ಒಸೆದು ನಿನ್ನನು ಬಯಸಿಬಂದೆನು ಬಹಳ ದೂರದಲಿ ॥ ೧೧ ॥

ಶರಣು ಶರಣ್ಯೆ ಜಂಗಮಾರ್ಯನೆ ।
ಚರಣ ಸೇವಕ ನಾನು ಶರಣ್ಯೆ ।
ವಿರಚಿಪುದು ನೀವೆಂತೆಂದಿಷ್ಟವನು ತರಿಸಿ ನಿಮಗೀವೆ ॥
ಭರದಿ ಇಂತೆನೆ ಬಸವರಾಜನು ।
ತ್ವರಿತ ನುಡಿದನು ಜಂಗಮಾರ್ಯನು ।
ಧರೆಯು ಪಾತಾಳಾದಿ ಸ್ವರ್ಗದಿ ಪೆಸರ ಪಡೆವಪೆಯು ॥ ೧೨ ॥

ಕೋಟಿಸಂಖ್ಯೆಯ ದ್ರವ್ಯದರಮನೆ ।
ಮಾಟು ಜವ್ವನೆ ಸತಿಯು ಸುತಸಹ ।
ನೀಟಾದ ವ್ಯಾಪಾರ ವರ್ತಕವಾಂತ ಸುರಪದದ ॥
ಸಾಟಿಯಿಂತಿಹುದಿಚ್ಛೆಯೆಮಗ್ಯೆ ।
ಬೇಟಮಾಟದಿ ಕೊಟ್ಟು ಸಲಿಸ್ಯೆ ।
ಶ್ರೇಷ್ಠಪಂಥವ ಗೆಲಿಸು ಶರಣರೊಳೆಂದನಾ ಮೂರ್ತಿ ॥ ೧೩ ॥

ಭಾವಜಾರಿಯ ನೆನೆದು ಮನದಲಿ ।
ಕೋವಿದನು ಬಸವಣ್ಣನಯ್ಯಗೆ ।
ದೇವ ಹಸಾದವೆನುತಲೊಳಿಗರ್ಗಿಂದ ಪುರದೊಳಗೆ ॥
ಆವ ಕಡೆಯಲ್ಲಿಂತು ವೈಭವ ।
ತೀವಿಹುದು ನೀವೆಯ್ದಿ ನೋಡಿಯೆ ।
ತಾವ ಬಂದೆಮಗರುಹಿ ಎನ್ನಲು ಪೋಗಿಯೊಳಿಗರು ॥ ೧೪ ॥

ನೋಡಿಬಂದರು ಬಸವರಾಜನೊ ।
ಆಡಿದರು ಮಲ್ಲಶೆಟ್ಟಿಯಿರವನು ।
ಗಾಢ ಕೇಳುತ ಬಸವ ಬಂದನು ವೈಶ್ಯನರಮನೆಗೆ ॥
ರೂಢಿಯೊಳು ತಾ ಬಸವರಾಜನು ।
ಗಾಢದಿಂ ಬರೆ ಮಲ್ಲಶೆಟ್ಟಿಯ
ಪ್ರೌಢೆ ನಾಯಕಿ ಸುತರು ಈರ್ವರು ಬಂದು ಮಣಿಯಲಿಕೆ ॥ ೧೫ ॥

ಶಿವನ ವರಸಾಯೂಜ್ಯ ಪದವಿಯು ।
ಅವಿರಳದಿ ನಿಮಗಾಗಲೆನುತಲಿ ।
ತವಕದಿಂ ಹರಸಿದನು ಬಸವದಿನೇಂದ್ರ ಸಂತಸದಿ ॥
ಅಮಿತದಿಂ ವರ್ತಕನ ಯುವತಿಗೆ ।
ಹರಕೆಯೀಯಲು ಬಸವರಾಜನು ।
ಶಿವನ ಕಾರುಣ್ಯದಿಂದ ಲಿಂಗಸುದೇಹವವರಿಂಗೆ ॥ ೧೬ ॥

ನಿತ್ಯ ನೇಮಾಚಾರ ಲಿಂಗದ ।
ಸತ್ಯ ಶರಣರ ನಡೆ ಶಿವಪೂಜೆ ।
ಅತ್ಯಧಿಕದಾಚಾರ ಸತ್ಕ್ರಿಯೆ ಯುಕ್ತರವರಾಗೆ ॥
ಅತ್ತಲಾ ಮಲ್ಲಶೆಟ್ಟಿ ಶೌಚಕೆ ।
ಮತ್ತೆ ಪೋಗಿರೆ ಬಸವರಾಜನು ।
ಇತ್ತಲಾ ಜಂಗಮನ ಬರಿಸಿದ ಶೆಟ್ಟಿಯಾ ಗೃಹಕೆ ॥ ೧೭ ॥

ಗೃಹದನಾರಿಯ ತರಳರೀರ್ವರ ।
ಬಾಹುಸನ್ನೆಯಲಿ ಕರೆದು ಕೇಳಿದ ।
ಮಹಿಮರಿವರೇನಹರು ನಿಮಗೆ ಪೇಳಿಯೆಂತೆನಲು ॥
ಮಹಿಮ ಬಸವನು ಕೇಳಲಾಕ್ಷಣ ।
ಸಹಜ ನುಡಿದರು ನಮ್ಮ ಪಿತನ್ನೆ ।
ಸಹಿಯು ಸಹಿಯಿಂತೆನಲು ತರುಣಿಯನಾಗ ಕೇಳಿದನು ॥ ೧೮ ॥

ನಾರಿ ರನ್ನಳೆ ಯಾರು ಇವರೆನೆ ।
ಚಾರು ಪ್ರಿಯನ್ನೆ ಎನ್ನನಲ್ಲನು ।
ಧಾರಿಣೀಪತಿ ಪ್ರಿಯನೆ ಮಂತ್ರಿಯೆ ಕೇಳಿರಿಂತೆನಲು ॥
ಸಾರಗಣಿತರ ಸೇವ್ಯಚರರನು ।
ಯಾರು ಇವರೆನೆ ನಮ್ಮವೊಡೆಯನು ।
ಮೇರೆಯಳಿಮ್ಮಕಾವ ವರ್ತಕನೆಂದು ಪೇಳಿದರು ॥ ೧೯ ॥

ಆಗಳಾ ಮೂರ್ತಿಯನು ಬಸವನು ।
ಈಗ ನಿಮ್ಮಯ ಬಯಕೆ ಸಂದಿತೆ ।
ನಾಗಭೂಷಣರೂಪ ಎನ್ನುತ ನಮಿಸಿ ಬಸವಣ್ಣ ॥
ಸೊಗಸಿನಿಂದಾದರಿಸಿ ಬಂದನು ।
ಸುಗುಣಮಣಿ ಬಸವಣ್ಣನಾಕ್ಷಣ ।
ಅಘಹರನ ಗಣರಿಚ್ಛೆ ಸಲಿಸುತ ಭಕ್ತಿಗೆಯ್ಯುತಿರೆ ॥ ೨೦ ॥

ವಚನ ॥ ಇಂತು ಬಸವಣ್ಣ ಆ ಶಿವಜಂಗಮದಿಚ್ಛೆಯಂ ಸಲಿಸಿ, ಮಲ್ಲಣ್ಣ ಶೆಟ್ಟಿಯ ಗೃಹ , ಸತಿ, ಸುತರು, ದ್ರವ್ಯಭಂಡಾರ, ಗಣಿತಜ್ಞರು, ಸೇವಕರು ಸಹ, ಎಲ್ಲರಂ ಒಪ್ಪಿಸಿ ಬರಲು, ಇತ್ತಲಾ ಮಲ್ಲಶೆಟ್ಟಿ ಶೌಚವಿಧಿಯಂತೀರ್ಚಿ, ಮನೆಗೈಯ್ಯಲು ಆ ಗೃಹದವರು ಮನೆಯಂ ಪೊಗಲೀಸದೆ, ಭವಿಯು ಭಕ್ತರ ಅಂಗಳಕ್ಕೆಂತು ಬರುವೆ? ಹೊರಗೆ ನಿಲ್ಲೆಂದು ಝಂಕಿಸಿ ನುಡಿಯಲು, ಆತಂ ಎಲ್ಲರಂಕಂಡು ಲಿಂಗಶರೀರರಾಗಿ ವಿಭೂತಿ ರುದ್ರಾಕ್ಷಿ ಲಿಂಗಧಾರಕರಾಗಿರಲು ! ಈ ಮಲ್ಲಶೆಟ್ಟಿ ಆ ಪಟ್ಟಣದ ತನ್ನ ಮತ ವೈಶ್ಯರೋಳ್ ಮೊರೆಯಿಡಲು, ಅವರು ಎಲ್ಲರೊಂದಾಗಿ ಜೈನ ಬ್ರಾಹ್ಮಣರ ಸಮೂಹ ದಿಂದ ಅರಸನಿಗೆ ಪೇಳಲಿಕೆ ಬಂದು ಮಣಿದು ಪೇಳುತಿರ್ದನದೆಂತೆನೆ

**ಏಕತಾಳ.**

ಇಳೆಯಾಧಿಪತಿ ಕೇಳು । ಈ ಪುರದೊಳು ಪ್ರಜೆ ।
ಉಳುವಿಲ್ಲ ಲೂಟಿಯ । ಬಲುಹನೇನೆಂಬೆ ॥ ೧ ॥

ಬಸವಮಂತ್ರಿಯು ತನ್ನ । ಅಸಮ ಜಂಗಮರಿಗೆ ।
ವಸುಧೆಯೊಳುಳ್ಳ ವಸ್ತು । ವೆಲ್ಲ ಸೂರೆಗೊಡುವ ॥ ೨ ॥

ಘನ ವರ್ತಕನು ಮಲ್ಲ । ಶೆಟ್ಟಿಯ ಗೃಹ ದ್ರವ್ಯ ।
ವನಿತೆ ಸುತರ ತನ್ನ । ಗಣರಿಂಗೆಯಿತ್ತ ॥ ೩ ॥

ಮೊರೆಯಿಟ್ಟರೀಪರಿ । ವರ್ತಕ ವೈಶ್ಯರೆಲ್ಲ ।
ಧರಣೀಶ ನೀ ಪೊರಯ್ಯೆ । ಕಾಯ್ವರಿನ್ನಿಲ್ಲ ॥ ೪ ॥

ಕೇಳುತ್ತ ಬಿಜ್ಜಳ । ಕಾಳೋರಗನ ತೆರದಿ ।
ತಾಳುತ್ತ ರೋಷವ । ಮಂತ್ರಿಯೊಳ್ ನುಡಿದ ॥ ೫ ॥

ಇಂತುಂಟೆ ದುರ್ನೀತಿ । ಇಳೆಯೊಳು ಬಸವಣ್ಣ ।
ಶಾಂತಿ ಸದ್ಗುಣ ಧರ್ಮ । ನೀತಿ ನಿಪುಣನೆ ॥ ೬ ॥

ಪರಧನ ಪರಸತಿ । ಪರಧರಣಿ ತ್ರಿವಿಧಕ್ಕೆ ।
ಹರಿಯಬಿಟ್ಟರೆ ಮನವ । ನಿರಯಾಳ್ವರೆಂಬೆ ॥ ೭ ॥

ನುಡಿಯು ಪುರಾತನವು । ನಡೆಯು ಕಿರಾತನವು ।
ಪೊಡವಿಯೊಳೀನಡೆ । ನಡೆವರೆ ಮಂತ್ರಿ ॥ ೮ ॥

ವೈಶ್ಯರ ಮಲ್ಲಶೆಟ್ಟಿ । ಮನೆ ಮಕ್ಕಳ್ಸತಿ ದ್ರವ್ಯ ।
ಹೇಸದೆ ನೀ ಜಂಗಮಕೆ । ಪೊಸತೀಯಬಹುದೆ ॥ ೯ ॥

ವಚನ ॥ ಇಂತೆಂದು ಖತಿಯಿಂನುಡಿದು ಈ ವರ್ತಕನ ಸಮುದಾಯಿಸಿ ಆತನ ಗೃಹ ದ್ರವ್ಯ ಸತಿಸುತರಂ ಈಕ್ಷಣದಲ್ಲಿತ್ತು ಸುರಕ್ಷಿತಮಿರಿಸೆನಲು, ಆಕ್ಷಣವೇ ಬಸವರಾಜಂ ಅರಸೇ! ವಿವರಿಸಿನೋಡದೆ ನುಡಿಯಬಹುದೆ? ಈಗ ನಾ ನೋಡಿ ಬಹೆನೆಂದು ಬಸವಂ ಬಂದು, ಆ ಗೃಹದ ಸಮೀಪದಲ್ಲಿ ಮತ್ತೊಂದು ಗೃಹಮಂ ಕೊಂಡು, ಪರುಷದೃಷ್ಟಿಯಿಂ ನೋಡಿ ಮನೋಪರುಷದಿಂದ ಧ್ಯಾನಿಸಲು, ಮಲ್ಲಣ್ಣ ಶೆಟ್ಟಿ ಮನೆ ಮಕ್ಕಳು ಸತಿ ದ್ರವ್ಯ ಎಂದಿನಂತಾಗಲು, ಶೆಟ್ಟಿಯಂ ಕರೆದು ಬಸವಯ್ಯನೇನೆನ್ನುತಿರ್ದನು.

**ಜಂಪೆ.**

ಕರೆದು ಮಲ್ಲಶೆಟ್ಟಿಯನು । ಕರುಣದಿಂ ಬಸವಯ್ಯ ।
ಹೊರಳುವದೇಕೆ ಮನೆಯೊ । ಳಿರವೆ ನೀನೆಂದ ॥ ೧ ॥

ಯಾರು ಕಿತ್ತರು ನಿನ್ನ । ನಾರಿ ಗೃಹ ಸುತರನ್ನ ।
ಹೇರಳದ ದ್ರವ್ಯಗಳ । ಸಾರಿ ನೋಡೆಂದ ॥ ೨ ॥

ಎಲ್ಲ ಜನಸ್ತೋಮದಲಿ । ಮಲ್ಲಶೆಟ್ಟಿಯೊಳಪೊಗಲು ।
ನಲ್ಲೆ ಸುತರುಗಳ್ಬಂದು । ನಲಿದು ಪುರುಷನನು ॥ ೩ ॥
ಪಿತ್ತವಡರಿತೆ ತಲೆಗೆ । ಎತ್ತ ಹೋಗೊರಲಿದಿರಿ ।
ಸತ್ಯನಿಧಿ ಬಸವನನು । ಎತ್ತಿ ದೂರುವರೆ ॥ ೪ ॥
ಅನಿತರೊಳು ಬಸವಯ್ಯ । ಅಂಗನೆಯ ತಾ ಕರೆದು ।
ವನಿತೆ ನಿನಗೇನೀತ । ನಹನು ಪೇಳೆನಲು ॥ ೫ ॥
ವರನೆನಗೆ ಮಂತ್ರೀಶ । ಮಲಿಪುರದ ಮಂಕಾದ ।
ಶರಣ ನಿನ್ನ ದರುಶನದಿ । ದುರಿತ ನೀಗಿದೆವು ॥ ೬ ॥
ಸುತರ ಕರೆದಿವ ನಿಮಗೆ ।ಸೌಜ್ಞೆಯೇನಹನೆನಲು ।
ಪಿತನು ನಮಗೈಯಿವನು । ಬಸವರಾಜೇಂದ್ರ ॥ ೭ ॥
ಎಂದು ನುತಿಸಲು ನೋಡಿ । ನಿಂದಿರ್ದ ಜನರೆಲ್ಲ ।
ಚಂದದಿಂ ನುತಿಸಿ ಕೊಂ । ಡಾಡೆ ಬಸವನನು ॥ ೮ ॥
ಅನಿತರೊಳು ಬಿಜ್ಜಳನು । ಅರ್ರಿದು ಈ ವಿವರ ।
ಘನ ಹರುಷದಲಿ ಬಂದ । ಗೃಹದ ಬಳಿಗಾಗ ॥ ೯ ॥

ವಚನ ॥ ಇಂತೀ ಪ್ರತಿಸೃಷ್ಟಿಯಾದ ವಿವರವಂಕೇಳಿ, ಬಿಜ್ಜಳರಾಯ ಬಂದು ಮಲ್ಲಶೆಟ್ಟಿಯ ಮನೆಮಕ್ಕಳು ಐಶ್ವರ್ಯಮಂ ನೋಡಿ, ಜೋಡಿಸಮನಾದ! ನೋಟಕಾಶ್ಚರ್ಯಮಾದ! ಗೃಹವೆರಡು ಇರುತ್ತಿರಲು, ನೋಡಿ, ಆಶ್ಚರ್ಯಮುಂಬಟ್ಟು !! ಆ ಮಲ್ಲಶೆಟ್ಟಿಯಂ ಕರೆದು ಎಲೊ! ಯಾಕೊ ಅರಮನೆ ಮುಂದೆ ಬಳಲಿ ಒರಲಿದೆ? ಎನ್ನಲು, ಸ್ವಾಮಿ ನನಗೆ ಪೈತ್ಯಮೆದ್ದಾವರಿಸಿ ಬಂದು ಒರಲಿದೆನು ಎಂದು ಮತ್ತಿಂತೆಂದನು.

**ತ್ರಿವುಡೆ.**

ತನ್ನ ಭಕ್ತಿಯಿಂ ನೃಪಗೆ ಮಂತ್ರಿಗೆ । ರನ್ನ ಮಾಣಿಕ ದಿವ್ಯಹಾರವ ।
ಉನ್ನತದ ಚೀನಾಂಬ್ರದುಡುಗೊರೆ – ಉಚಿತ ವೈಭವದಿ ॥ ೧ ॥

ತಂದು ಪೊಂದಟ್ಟೆಯೊಳು ಇಟ್ಟತಿ । ವಂದಿಸಿದನಾ ಮಲ್ಲಶೆಟ್ಟಿಯು ।
ಚಂದದಿಂ ಬಿಜ್ಜಳನು ಮಂತ್ರಿಯು – ಅಂದು ಮನ್ನಿಸುತ ॥ ೨ ॥

ಸತ್ಯಲೋಕವ ಬಿಟ್ಟು ಬ್ರಹ್ಮನು । ಪೃಥ್ವಿ ಕಲ್ಯಾಣಕ್ಕೆ ಬಂದಿಹ ।
ಸತ್ಯಸಿದ್ಧವು ಬಸವಮಂತ್ರಿಯು – ಮತ್ತೆ ನರನಲ್ಲ ॥ ೩ ॥

ಎಂದು ಕೊಂಡಾಡುತ್ತಲಿರೆ ಜನ । ಅಂದು ಬಸವದಿನೇಂದ್ರ ಮಹತ್ತನು ।
ಚಂದದಿಂ ಮೆರೆದಾಗ ಬಂದನು – ಅಂದು ಅರಮನೆಗೆ ॥ ೪ ॥

ಬಂದು ಶ್ರೀ ಬಸವೇಶ ಶರಣರ । ಸಂದಣಿಯ ವಿನಿಯೋಗ ಸೌಖ್ಯದಿ ।
ಚಂದದಿಂದಿರುತಿರ್ಪ ಬಳಿಕಿ – ನ್ನೊಂದ ಪೇಳುವೆನು ॥ ೫ ॥

# ಲಿಂಗಾಭಿಷೇಕಕ್ಕೆ ದೇವಲೋಕದ ವಸ್ತುಗಳನ್ನೊದಗಿಸಿಕೊಟ್ಟ ಪವಾಡ.

**ಏಕತಾಳ.**

ಮರುಳೊಂದು ದಿನದಲ್ಲಿ । ಶರಣ ಜಂಗಮನೋರ್ವ ।
ಭರದಿ ಬಂದನು ಬಸವ । ನಿರುವ ಅರಮನೆಗೆ ॥ ೧ ॥
ಪರಮ ಭಕ್ತಿಯೊಳವರ । ಚರಣವನು ಪೂಜಿಸಿ ।
ಹರುಷಬಡಿಸಿ ತನ್ನ । ಹರಿಪೀಠವಿತ್ತು ॥ ೨ ॥
ಕರವ ಮುಗಿದು ಬಸವ । ಅರಸಿ ಬೇಡುತಲವರ ।
ಗುರುವೆ ನೀ ಬರೆ ನಾನು । ವರಮುಕ್ತನೆಂದ ॥ ೩ ॥
ಜಂಗಮಪ್ರೇಮಿ ನೀನು । ಸಂಗನಬಸವಯ್ಯ ।
ಜಂಗಮದಿಚ್ಛೆಯಿತ್ತ । ಲಿಂಗ ನಿನ್ನ ಖ್ಯಾತಿ ॥ ೪ ॥
ಧರೆಯೊಳಗೆಲ್ಲೆಲ್ಲೂ । ಹರಿಯಲು ಕೇಳಿಬಂದೆ ।
ಪರಮವ್ರತ ಶಿವಪೂಜೆ । ಪರರು ನಾವಯ್ಯ ॥ ೫ ॥
ನಮ್ಮ ಲಿಂಗದ ಇಚ್ಛೆ । ಭುವಿಯೊಳಿಲ್ಲದ ವಸ್ತು ।
ಗಮ್ಮನೆಯಿತ್ತಪೆಯ । ಗುಣಗಣ ಸಾಂದ್ರ ॥ ೬ ॥
ಅರಿಕೆ ಮಾಡುವೆನೆನ್ನ । ಗುರು ಸಂಗಮೇಶನನು ।
ಚರಮೂರ್ತಿ ನಿಮ್ಮ ಬಯಕೆ । ಯೊಸ್ತುಗಳನೀವ ॥ ೭ ॥
ದೇವ ನೀವ್ಬೇಡುವ । ದಾವುದು ಅಪ್ಪಣೆಯ ।
ತೀವಿ ಪಾಲಿಪುದೆನೆ । ಆ ಮೂರ್ತಿಯೆಂದ ॥ ೮ ॥

ವಚನ ॥ ಎಲೆ! ಭಕ್ತಚಿಂತಾಮಣಿ ನಮ್ಮ ಶಿವಪೂಜೆಗೆ ದೇವಲೋಕದ ಕರಿಮಲ್ಲಿಗೆ, ಪಾರಿಜಾತದ ಪುಷ್ಪ, ಕಾಮಧೇನುವಿನ ಕ್ಷೀರ, ಗಜಮಸ್ತಕದ ಮುತ್ತು, ನಾಗರತ್ನದ ಬೆಳಕೇ ದೀವಿಗೆ, ಏಕಮುಖ ರುದ್ರಾಕ್ಷಿ, ಸ್ಮರಭಸ್ಮ, ಜಲಚರಗಳು ಮುಟ್ಟದುದಕ ಇಂತಿವೆಲ್ಲವಂ ಒದಗಿಸಿ ಕೊಡಬಲ್ಲಾತನಾದಡೆ, ಆನಂದದಿಂದ ಶಿವಪೂಜೆಗೈದು ನಿನಗೂ ಫಲಗಾಣಿಸುವೆವು, ಎಂದ ಮೂರ್ತಿಗೆ ಬಸವರಾಜಂ ಒದಗಿಸಿ ಕೊಡುವನದೆಂತೆನೆ.

**ದ್ವಿಪದಿ.**

ಶ್ರೀ ಗುರು ವರಮೂರ್ತಿ ಶಿವಗಣ ಚಕ್ರವರ್ತಿ ।
ನಾಗಭೂಷಣ ಮೂರ್ತಿ ನಮಿತ ಸತ್ಕೀರ್ತಿ ॥ ೧ ॥
ಗುರುವೆ ನಿಮ್ಮಯ ಚರಣ ಸೇವಕಾನೆನ್ನ ।
ಚರಮೂರ್ತಿ ಬೇಡಿಹನು ಧರೆಯೊಳಿಲ್ಲದುದ ॥ ೨ ॥

ಭಕ್ತಪ್ರಾಣವೆ ಎನ್ನ ಮಮಪ್ರಾಣವೆಂಬ ।
ಶಕ್ತಿವಚನವ ವಹಿಸಿ ಈಗ ಕರುಣಿಪುದು ॥ ೩ ॥

ಇಂದು ಕೊಡದಿರೆ ನಿನ್ನ ವಾಕ್ಯ ಕುಂದಹುದು ।
ಎಂದು ಮನದಲಿ ಶಿವಗೆ ನೊಂದು ವಂದಿಸಲು ॥ ೪ ॥

ಕಂದರ್ಪಹರನಾಗ ಕರುಣದಿಂದರಿತು ।
ನಾರದಗೆ ತಾನೆಂದ ನಾಗಭೂಷಣನು ॥ ೫ ॥

ಭೋರನೇ ನೀನೈದಿ ಜಂಭಾರಿ ಬಳಿಗೆ ।
ಪಾರಿಜಾತಕ ಕರಿಮಲ್ಲಿಗೆಯ ಕುಸುಮ ॥ ೬ ॥

ಸುರಧೇನು ಸಹತನ್ನ ಚರರಿಂದ ಕಳುಹಿ ।
ಧರೆಗಧಿಕ ಕಲ್ಯಾಣ ಪುರದ ಬಸವನಿಗೆ ॥ ೭ ॥

ಭರದಿ ಇವುಗಳನಿತ್ತು ಪರಮವ್ರತ ನಡೆಸಿ ।
ಸುರಧೇನು ಬಳಿಕ ನೀ ತರಿಸಿಕೊಳ್ಳೆಂದು ॥ ೮ ॥

ಅರುಹು ಪೋಗೆನಲಾಗ ದೇವನಾರದನು ।
ಬಂದು ಆಖಂಡಲಗೆ ಶಿವನಿರೂಪವನು ॥ ೯ ॥

ಹರುಷದಿಂದೊರೆಯಲ್ಕೆ ಶಿರವಹಿಸಿ ಶಕ್ರ ।
ತರಿಸಿದನು ಪಾರಿಜಾತ ಕರಿಮಲ್ಲಿಗೆ ಗಿಡವ ॥ ೧೦ ॥

ಸುರಧೇನುವಂ ಬರಿಸಿ ಧರಣಿಗಿಳುಹಲಿಕೆ ।
ಹರುಷಗೊಳ್ಳುತಲಾಗ ನೋಡಿ ಬಸವಯ್ಯ ॥ ೧೧ ॥

ಸುಲಲಿತದಿ ಹರಗೆ ಸದ್ಭೂಷಣವು ಆದ ।
ಉರುಗೇಂದ್ರನಂ ನೆನೆಯೆ ಉಚಿತಕರವಾಗಿ ॥ ೧೨ ॥

ನೊರೆವುತಾರ್ಭಟದಿಂದ ಬಂದು ಫಣಿರಾಜ ।
ತರಣಿಶತ ಹಳಿವ ತೇಜಾಂತ ರತ್ನವನು ॥ ೧೩ ॥

ಶರಣ ಬಸವಂಗಿತ್ತು ಸಾಷ್ಟಾಂಗ ಮಣಿದು ।
ಭರದಿ ಅದೃಶ್ಯವಾಗೆ ಶರಣರದ ಕಂಡು ॥ ೧೪ ॥

ಅಚ್ಚರಿಯುವಂಪಟ್ಟು ಹೆಚ್ಚು ಕೊಂಡಾಡೆ ।
ಸಂಗಮೇಶ್ವರ ಚೆಲ್ವ ಜಂಗಮನೋಲ್ಪೆಂದು ॥ ೧೫ ॥

ಜಡೆಮುಡಿಯ ಮೃಡತಾನು ಝುಂಕಿಸುತ ನಿಲಲು ।
ಅಡಿಗೆರಗಿ ಬಸವಯ್ಯನಾಗ ಮೂರ್ತಿಸಿಯೆ ॥ ೧೬ ॥

ಕೊಡು ಮಾಸಲಾ ಜಲವ ಪ್ರೊಡವಿ ಸೋಂಕದುದ ।
ಹೊಡಕರಿಪ ಏಕಮುಖ ರುದ್ರಾಕ್ಷಿಯನ್ನು ॥ ೧೭ ॥
ಸ್ಮರಭಸ್ಮ ಇವನೆಲ್ಲ ಕೊಡುಯೆನಲು ಶಿವನು ।
ಹರುಷದಿಂ ಹರಸಿತ್ತು ಹೋದ ನಿಜಸ್ಥಲಕೆ ॥ ೧೮ ॥

ವಚನ ॥ ಇಂತೀ ಶಿವಮೂರ್ತಿ ಇಚ್ಛೆವಸ್ತುವಿತ್ತದೃಶ್ಯವಾಗೆ, ಕರಿಮಲ್ಲಿಗೆ ಪಾರಿಜಾತದ ಗಂಧ ಪುರವನ್ನೆಲ್ಲಾ ಆವರಿಸಿ ಸುಗಂಧವೆಸೆಯಲು, ಜನರಾಶ್ಚರ್ಯಮಾಗಿ ಕಾಮಧೇನುವಂ ನೋಡಿ ಪೊಗಳುತ್ತಿರೆ ಇತ್ತ ಬಸವನೆಂತುಗೈದನದೆಂತೆನೆ.

**ಜಂಪೆ.**

ಕಾಮಧೇನುವ ನೋಡಿ । ಕಂತುಹರ ಬಸವೇಶ ।
ಪ್ರೇಮಿ ಕರೆಸಿದ ಪಾಲ । ತಂಬಿಗೆಯೊಳಾಗ ॥ ೧ ॥
ಪಚ್ಚೆ ಕರ್ಪೂರ ಹೇಮ । ದಕ್ಷತೆಯ ತಾಗೈಸಿ ।
ಇಚ್ಛೆ ಬೇಡಿದ ಮೂರ್ತಿ । ಗಿತ್ತ ವಸ್ತುಗಳ ॥ ೨ ॥
ವಸುಧೀಶ ಬಿಜ್ಜಳಗೆ । ಒರೆಯೆ ಈ ಮಹಿಮೆಯನು ।
ವಿಸ್ಮಯವ ತಾಬಟ್ಟು । ಮುದದಿಂದಲಾಗ ॥ ೩ ॥
ಬಂದು ಬಸವನು ಮೆರೆವ । ಚಂದದ ಹಜಾರದೊಳು ।
ನಿಂದಿರಲು ಸುರಧೇನು । ನೋಡಿ ತಾ ಮಣಿದ ॥ ೪ ॥
ಪಾರಿಜಾತದ ಗಂಧ । ಬೀರುತಿರೆ ಪುರವೆಲ್ಲ ।
ಮಾರಾರಿ ಶರಣರಿಗೆ । ಧರೆಯ ನರರೆಣೆಯೆ ॥ ೫ ॥
ದೊರೆಯಿಂತು ಕೊಂಡಾಡಿ । ಅರಮನೆಗೆ ತಾ ಪೋದ ।
ಶರಣಜನರು ದ್ವಿತೀಯ । ಶಂಭು ಇವನಹುದು ॥ ೬ ॥
ಎಂದು ವಿಸ್ಮಿತರಾಗಿ । ಚಂದದಿಂ ಮೆಚ್ಚುತಿರೆ ।
ಬಂದ ಚರವರನೆಲ್ಲ । ಕೊಂಡು ತೆರಳಿದನು ॥ ೭ ॥

## ಮಹಾದೇವಶೆಟ್ಟಿಯ ಮೂವತ್ತು ಹೇರುಗಳಿಗೆ ಮುತ್ತು, ರತ್ನ, ಚಿನ್ನವಂ ಹೇರಿ ಕಳುಹಿದ ಪವಾಡ.

**ದ್ವಿಪದಿ.**

ಕಾಳಿಂಗದೇಶದ ಕಟಿಗೆಪುರದಲ್ಲಿ ।
ಭಾಳಾಕ್ಷ ಪ್ರೀಯ್ಯಭಕ್ತ ಸಕಲ ಗುಣಯುಕ್ತ ॥ ೧ ॥
ಸತ್ಯನು ಸದಾಚಾರ ಶಿವಪೂಜೆಧೀರ ।
ಮರ್ತ್ಯದೊಳು ತಾ ಬಂದು ಮನುಜತ್ವದಿಂಪ ॥ ೨ ॥

ಮಹದೇವಶೆಟ್ಟಿಯೆಂಬಭಿಧಾನವಾಂತು ।
ಸಹಜ ವೃತ್ತಿಯೊಳ್ಗಣಕೆ ದಾಸೋಹವನ್ನು || ೩ ||
ಮಾಡುತ್ತ ಸಂತತವು ಮಾಟಕೂಟದಲಿ ।
ರೂಢಿಯೊಳು ಗಣತೃಪ್ತಿ ರಮ್ಯಗೆಯ್ಯುತ್ತ || ೪ ||
ಇರುತ ಶ್ರೀ ಗುರು ಬಸವ ಧರೆಗಿಳಿದು ಮಹಿಮೆ ।
ಮೆರೆದು ಖ್ಯಾತಿಯಲಿರ್ಪ ಮಹಿಮೆಯಂ ಕೇಳ್ದು || ೫ ||
ತಾ ನೋಡೆ ಬಸವನಾ ತಾರತಮ್ಯವನು ।
ಜ್ಞಾನ ನಿಜದೃಢವನ್ನು ಹಾನಿವೃದ್ಧಿಯನು || ೬ ||
ಮೂವತ್ತು ಎತ್ತಿಗೆ ಮುತ್ತು ರತ್ನಗಳ ।
ಸಂಜ್ಞೆಯಿಂದಿತ್ತಡೆಯು ಸಹಜಾ ಮಾಹತ್ತು || ೭ ||
ಎಂದು ಯತ್ನೀಕರಿಸಿ ಇಂದುಧರಶರಣ ।
ಚಂದದಿಂದೆತ್ತುಗಳು ಸಹವಾಗಿ ಬಂದು || ೮ ||
ಕಲ್ಯಾಣಪಟ್ಟಣದ ಕಡೆಯ ಬೀದಿಯಲಿ ।
ಅಲ್ಲೊಂದು ತಾಣದಲಿ ಎಲ್ಲವಂ ಕಟ್ಟಿ || ೯ ||
ದ್ವಿತೀಯಶಂಭು ನಂದೀಶ ಬಸವನರಮನೆಗೆ ।
ಮತ್ತೆಯಭಿಮುಖವಾಗೆ ಮನದಿ ಬಸವನಿಗೆ || ೧೦ ||
ಒಳಸೂಚನೆಯಕೊಟ್ಟನು ಸಂಗಮಯ್ಯ ।
ಶರಣ ಬರ್ಪನು ಎದುರು ಸೊಗಸಿಂದಪೋಗಿ || ೧೧ ||
ಕರೆದು ತಾರೆಂದೆನಲು ಸಕಲ ಸಂಭ್ರಮದಿ ।
ಇದಿರ್ಗೊಂಡು ಕರೆತಂದು ಸದ್ಭಕ್ತಿಯಿಂದ || ೧೨ ||
ಒದಗಿ ತನ್ನರಮನೆಯೊಳ್ಸೈಭವದೊಳಂದು ।
ಶಿವಪೂಜೆಯರ್ಪಣವ ಸೊಗಸಿಂದಗೈಸಿ || ೧೩ ||
ಅವಿರಳದ ಕನಕಪೀಠದಲಿ ಕುಳ್ಳಿರಿಸಿ ।
ಶಿವಶರಣ ನೀವ್ಯೈದೆ ಭವಪಾಶ ಹರಿದು || ೧೪ ||
ತವೆ ಸುಜ್ಞಾನ ಸುಚಿತ್ತ ನಾನಾದೆನಯ್ಯ ।
ನೀವೆನ್ನೊಳ್ದಯವಿಟ್ಟು ಭಾವದಿಂ ಬಂದ || ೧೫ ||
ಬಗೆಯ ತಿಳುಹೆನಗೆ ಹೇ ಶರಣ ಮಹದೇವ ।
ಎಂದು ಕೇಳಲು ಬಸವ ಮಹದೇವನೆಂದ || ೧೬ ||

ವಚನ || ಇಂತೆಂದು ಕೇಳ್ದ ಬಸವರಾಜಂಗೆ ಮಹದೇವಶೆಟ್ಟಿ ಏನೆನ್ನುತಿರ್ದನು.

**ತ್ಯಾಗಮಾನ - ಅಟತಾಳ.**

ಪರಮಪುರುಷ ಪಾವನಾಂಗ ಬಸವ – ಯ್ಯ – ನೀನು–
ಧರೆಯ ಸಲಹುವ ಜಗದ್ಭರಿತ ಬಸವ – ಯ್ಯ || ೧ ||

ಸ್ವರ್ಗ ಮರ್ತ್ಯ ಪಾತಾಳದಲಿ ಬಸವ – ಯ್ಯ – ನಿನ್ನ–
ಅಗ್ಗಳಿಕೆಯ ಮಹತ್ತಿನ ಖ್ಯಾತಿ ಬಸವ – ಯ್ಯ || ೨ ||

ದೀನರಕ್ಷಕ ದಯಾಸಮುದ್ರ ಬಸವ – ಯ್ಯ – ನೆಂದು–
ಆನಂದ ಮಿಗೆಪೆರ್ಚಿ ಬಂದೆ ಬಸವ – ಯ್ಯ || ೩ ||

ಕೇಳು ಬಂದುದ ಕರುಣಾನಿಧಿಯೆ ಬಸವ – ಯ್ಯ – ನಾನು–
ಬಹಳ ಋಣದಿ ನೊಂದು ಇಹೆನು ಬಸವ – ಯ್ಯ || ೪ ||

ಶಿವಪೂಜಾರ್ಪಣೆಗೈಯ್ಯಲೀಸರ್ ಬಸವ – ಯ್ಯ – ಜಗದ–
ಜೀವಿ ಮನುಜರೆನ್ನ ನೋಡು ಬಸವ – ಯ್ಯ || ೫ ||

ಋಣದ ಬಾಧೆ ನೀಗುವೆನೆಂದು ಬಸವ – ಯ್ಯ – ನಾನು–
ದಣಿದು ಬಂದೆ ನಿನ್ನ ಬಳಿಗೆ ಬಸವ – ಯ್ಯ || ೬ ||

ಮನುಜರ ಋಣವ ತೀರೀಶಿಶುವ ಬಸವ – ಯ್ಯ – ನಿನ್ನ–
ಋಣದೊಳಿರಿಸಿ ಬದುಕಿಸಯ್ಯ ಬಸವ – ಯ್ಯ || ೭ ||

ಪತ್ತು ಎತ್ತಿನಾ ವಜೆಯರತ್ನ ಬಸವ – ಯ್ಯ – ಮುತ್ತು–
ಪತ್ತು ಎತ್ತಿನ ವಜೆಯು ಬಳಿಕ ಬಸವ – ಯ್ಯ || ೮ ||

ಪತ್ತು ಎತ್ತಿನ ಚಿನ್ನದಗಟ್ಟಿ ಬಸವ – ಯ್ಯ – ನೀನು–
ಇತ್ತಡೀಗ ಧನ್ಯನಹೆನು ಬಸವ – ಯ್ಯ || ೯ ||

ಮೂರುಜಗದ ಕರ್ತನೆಂದು ಬಸವ – ಯ್ಯ – ನಿನ್ನ–
ಸಾರುತಿವೆಕೊ ಶ್ರುತಿ ಪೌರಾಣ ಬಸವ– ಯ್ಯ || ೧೦ ||

ನನ್ನ ಇಚ್ಛೆಯನ್ನು ಸಲಿಸು ಬಸವ– ಯ್ಯ – ನೀನು–
ಉನ್ನತದ ದ್ವಿತೀಯಶಂಭು ಬಸವ– ಯ್ಯ || ೧೧ ||

ವಚನ || ಇಂತೆಂದು ಮಹದೇವಶೆಟ್ಟಿ ಬೇಡಲು, ಬಡವರಾಧಾರಿ ಭಕ್ತವತ್ಸಲ ಕರುಣವಾರಿಧಿಯಾದ ಬಸವರಾಜಂ, ಶ್ರೀ ಸಾಂಬನಂ ಕುರಿತು ಈ ಇಚ್ಛೆ ನಿನ್ನದೆನಿಸಿ ಸಲಿಸು, ಈ ಬಿರುದು ನಿನ್ನದೆಂದು ಧ್ಯಾನಿಸೆ, ಆ ಪರಶಿವಂ ಮನೋಭಾವದಲ್ಲಿ ನಿಂದು ಬಸವಣ್ಣಗಿಂತೆಂದಂ.

**ಕಂದಪದ್ಯ.**

ಏತಕೆ ಚಿಂತಿಪೆ ತನಯನೆ ।
ನೀ ತೆಗೆಸೈ ಮೂರು ಹೊಂಡವನರಮನೆ ಮುಂದೆ ॥
ನೂತನ ಮೂದೆರವೃಷ್ಟಿಯ ।
ಭೂತಳದೊಳಾಂ ಸುರಿಸುವೆ ನೀನಾತನಿಗೀಯೈ ॥ ೧ ॥

ಸಲಿಸಾತನಿಚ್ಚೆಯವ ನೀ ।
ನಿಳೆಯೊಳು ಪ್ರಖ್ಯಾತನಾಗಂಜದಿರು ಎಂದುಂ ॥
ಘಳಿಲನೆ ಸೂಚನೆಯಾಗಲು ।
ತಳುವದೆ ತ್ರೈ ಹೊಂಡಗಳ ತನ್ನರಮನೆಯ ಮುಂದೆ ॥ ೨ ॥

ತೆಗೆಸಿಯೆ ಶುಚಿಗೊಳಿಸುತ್ತಲು ।
ಅಘಹರನಂ ಧ್ಯಾನಿಸಲಾಕ್ಷಣ ವೃಷ್ಟಿಯೂ ॥
ಮುಗಿಲಿಂದಾರ್ಭಟಿಸುತಲಿ ।
ತೆಗೆಸಿದ ಹೊಂಡಗಳು ತುಂಬಿ ಭರಿತಮಾಗಲ್ ॥ ೩ ॥

ವಚನ ॥ ಇಂತಿ ಮುತ್ತು, ರತ್ನ, ಚಿನ್ನವು ಮೂರುತೆರದ ಮಳೆ ಮೂರು ಹೊಂಡಕ್ಕೆ ಸುರಿಯಲು, ತುಂಬಿದ ಬಳಿಕ ಬಸವಣ್ಣ ಅದಂ ಪೂಜಿಸಿ, ಈ ಮಹದೇವ ಶೆಟ್ಟಿಗೆ ಮೂವತ್ತು ಎತ್ತುಗಳಿಗೂ ಮುತ್ತು, ರತ್ನ, ಚಿನ್ನವಂ ಕೊಟ್ಟು ಕಳುಹಲು, ಅವನು ಮಹಾಸಂತೋಷದಿಂದ ದ್ವಿತೀಯಶಂಭುವೆಂಬ ನಾಮ ನೂರ್ಮಡಿ ಸಲ್ಲುವದೆಂದು ಸ್ತುತಿಸಿ, ಕೊಂಡಾಡಿ ಪೊಗಳುತ್ತಾ ಹೋಗಲು, ಇತ್ತ ಶರಣಗಣಂಗಳು ಆಶ್ಚರ್ಯಂ ಬಟ್ಟು, ಅನೇಕ ವಿಧದಿಂ ಸ್ತುತಿಸುತ್ತಿರೆ ಮಿಕ್ಕ ಮುತ್ತು, ರತ್ನ, ಚಿನ್ನಗಳೆಂತುಗೈದನದೆಂತನೆ.

**ಜಂಪೆ.**

ಹೊಂಡದೊಳು ಮಿಕ್ಕಿರ್ದ । ಹೊನ್ನು ರತ್ನವು ಮುತ್ತು ।
ದಂಡೇಶ ಬಸವಣ್ಣ । ಹರುಷದಿಂದಾಗ ॥ ೧ ॥

ಮತ್ತೆ ತೆಗೆಸೆಲ್ಲವನು । ರಮ್ಯಶರಣರ ಗೃಹಕೆ ।
ಉತ್ತಮದ ಕಲಶಗಳ । ಇಡಿಸಿದನು ಮುದದಿಂ ॥ ೨ ॥

ಮುತ್ತು ರತ್ನದಹಾರ । ಪದಕಗಳನನುಗೆಯ್ದು ।
ಸತ್ಯ ಶಿವಶರಣರಿಂಗೆ । ಇತ್ತು ಮೆರೆಸಿದನು ॥ ೩ ॥

ತ್ರಿಪುರಾಂತಕೇಶ್ವರಗೆ । ಅಪರಿಮಿತದಾಭರಣ ।
ಗೋಪುರಕೆ ಭಂಗಾರ । ಕಲಶವಿಡಿಸಿದನು ॥ ೪ ॥

ಇಂತಿ ಸಂಭ್ರಮವಾಂತು । ಕಂತುಹರ ಬಸವೇಶ ।
ಸಂತಸದಿ ಶಿವಭಕ್ತಿ । ಸೇವೆಗೆಯ್ಯುವನು ॥ ೫ ॥

ವಚನ ॥ ಇಂತೀ ಬಸವರಾಜಂ ಶಿವಶರಣ ಗಣಂಗಳಿಗೆಲ್ಲ ಪದಕ, ಚೌಕುಳಿ, ಕಂಠಮಾಲೆ, ಹಾರ, ಹೀರಾವಳಿ, ಮುತ್ತಿನ ಮೋಹನಮಾಲೆಗಳಂ ಶೃಂಗರಿಸಲು, ಇದಂ ನೋಡಿ ಕೊಂಡೆಮಂಚಣ್ಣ ರಾಯನೊಳೇನೆನ್ನುತಿರ್ದನು.

## ಅಹಿರಾಜನಿಂದ ಪದಕ ತೆಗೆದುಕೊಂಡ ಪವಾಡ.

**ಏಕತಾಳ.**

ಕೇಳು ಬಿಜ್ಜಳರಾಯ । ಭಾಳಾಕ್ಷ ಬಸವಣ್ಣ ।
ಮೇಲೆ ನಿನ್ನ ಬೊಕ್ಕಸವ । ಸೂರೆಗೈದದನು ॥ ೧ ॥

ತನ್ನ ಶರಣರಿಗೆಲ್ಲ । ಉನ್ನತ ಮುತ್ತು ರತ್ನ ।
ರನ್ನ ಪದಕಹಾರ ಹೀ । ರಾವಳಿಯಿತ್ತ ॥ ೨ ॥

ನೋಡೆಂದು ತೋರಿದ । ಮಾಡಮೇಲ್ನಿಂದು ನೃಪಗೆ ।
ರೂಢಿಸಿ ರಂಜಿಸಿ । ಬರ ಪೋಪ ಗಣರ ॥ ೩ ॥

ಮನಕೆ ಈತನ ಮಾತು । ಘನವಾಗಿ ನಿಜವೆಂದು ।
ಜನಪತಿ ಮಂತ್ರಿಯ । ಬೇಗ ಕರೆಸಿದನು ॥ ೪ ॥

ವಚನ ॥ ಇಂತು ಚಾರರಿಂ ಬಸವನಂ ಕರೆಸಲು, ಬಂದಕೂಡಲೆ ರಾಯ ಬಸವನೊಳೇನೆನ್ನುತಿರ್ದನು.

**ಕೊಂಚೆ ಜಂಪೆ.**

ಏನಯ್ಯ ಬಸವಮಂತ್ರೀಶ – ನಿನಗೆ । ನಾನು ಸರ್ವಾಧಿಕ್ಯವೀಯೆ ।
ಎನ್ನ ಬೊಕ್ಕಸ ಭಂಡಾರವನ್ನು – ನಿನ್ನ ।ಗಣಕೆ ಭಯವಿಲ್ಲದಲೆ ಇತ್ತೆ ॥ ೧ ॥
ಸಾಕು ನಿನ್ನಯ ಮಂತ್ರಿತನವು – ಈಗ । ಬೇಕಿಡು ಮುದ್ರೆಯುಂಗುರವ ।
ಸಾಗು ನೀನಿರ್ದ ಠಾವಿಂಗೆ – ನಿನ್ನವರ । ಬೇಗ ಕರೆದೊಯ್ಯೆಂದ ನುಡಿಗೆ ॥ ೨ ॥
ಆಗ ಬಸವನು ತನ್ನ ಕರದ – ಮುದ್ರೆ । ಉಂಗುರವನಿತ್ತ ದೊರೆಕೈಗೆ ॥

ವಚನ ॥ ಇಂತೀ ಸರ್ವವಸ್ತುಗಳಂ ಬಿಜ್ಜಳಂಗಿತ್ತು, ಬಸವರಾಜಂ ತನ್ನ ಭಕ್ತಿಯೊಳಿರ್ದ ಗಣಂಗಳಂ, ತನ್ನಸತಿ ನೀಲಾಂಬೆ, ಗಂಗಾಂಬೆ, ಅಕ್ಕನಾಗಮ್ಮ ಸಹ ನಾರಾಂಬರರಾಗಿ ಸಂಗಮಕ್ಷೇತ್ರಕ್ಕೆ ಪೋಪಲ್ಲಿ, ಆ ಅರಣ್ಯದ ತಪ್ಪಲಲ್ಲಿ ಮಧ್ಯಾಹ್ನವಾಗಲು, ಶಿವಗಣಂಗಳ ಆರೋಗಣೆಗೆ ಬಸವ ಚಿಂತಿಸಿದನದೆಂತೆನೆ.

**ಜಂಪೆ.**

ಶರಣು ದುರಿತವಿದೂರ । ಶರಣು ಭಕ್ತೋದ್ಧಾರ
ಶರಣು ಸದ್ಗುಣಹಾರ ।ಶರಣು ದಯಪೂರ ॥ ೧ ॥

ಶಿವಗಣರಿಗರ್ಪಣವ । ಸುಮನಸದಿ ಮಾಡಲ್ಕೆ
ಭವಹರನೆ ಆಸ್ಪದವ । ನೀನಿಂದು ತೋರು ॥ ೨ ॥

ಎಂದು ಧ್ಯಾನಿಸಿದಂಥ । ನಂದೀಶ ಬಸವನಿಗೆ ।
ಎಂದನಂತರ ಸುಹೃದ । ಯಾಂಗಣದೊಳಾಗ ॥ ೩ ॥

ಎಲೆ ಮಗನೆ ನೀ ಮನದಿ । ಏಕೆ ಚಿಂತಿಪೆಯೊ ಈ ।
ಬಳಿಯ ಸರೋವರದ ಪು । ತ್ತದಲಿ ವಾಸಿಸುವ ॥ ೪ ॥

ಅಹಿರಾಜನಲಿ ನಿತ್ಯ । ಅಹಿಮಾಣಿಕದ ಪದಕ ।
ವಿಹಿತದಿಂ ಕೊಟ್ಟಪೆನು । ಮಗನೆ ನೀನದನು ॥ ೫ ॥

ಕ್ರಯಗೈದು ಶಿವಗಣಕೆ । ಷಡುರುಚಿಯ ಪಾಕವನು ।
ಪ್ರಿಯದೊಳೆಡೆಬಡಿಸಿ ತೃ । ಪ್ತಿಯನುಗೈಸೆಂದ ॥ ೬ ॥

ಸಂಗಮೇಶ್ವರ ತಂದೆ । ಯಪ್ಪಣೆಯ ತಾ ಕೊಂಡು ।
ಲಿಂಗ ಬಸವನು ಅಹಿಯ । ಲೀಲೆಯಿಂ ಬೇಡಿ ॥ ೭ ॥

ಶಿವಗಣಕೆ ಆನಂದ । ಸೊಗಸು ಆಪ್ಯಾಯನಕೆ ।
ಅಹಿಯೊಳ್ಮಾಣಿಕೆಗೊಂಡು । ಅದನು ಕ್ರಯಗೊಳಿಸಿ ॥ ೮ ॥

ನಿತ್ಯ ನಿತ್ಯವು ಬಸವ । ನತ್ಯಂತ ಉಲ್ಲಸದಿ ।
ಚಿತ್ತಜಾರಿಯ ಗಣಕೆ । ತೃಪ್ತಿಗೊಳಿಸುತಲಿ ॥ ೯ ॥

ಸರ್ವಾಧಿಕಾರವನು । ಸರ್ವಸ್ವವೆಲ್ಲವನು ।
ಉರ್ವಿಪಗೆ ಬಿಟ್ಟುಬಂದೆ । ನೆಂಬ ಚಂಚಲವು ॥ ೧೦ ॥

ಎಳ್ಳನಿತು ಮನದಲ್ಲಿ । ಚಿಂತೆಯಿಲ್ಲದೆ ಬಸವ ।
ಉಲ್ಲಸದಿ ಮೊದಲಂತೆ । ಮಿಗಿಲು ಸುಖಮಾಗಿ ॥ ೧೧ ॥

ಗುರು ಸಂಗಮೇಶ್ವರನ । ಕರುಣದಲಿ ದಾಸೋಹ ।
ಪರನಾಗಿವರ್ತಿಸುತ । ಲಿರ್ದ ಬಸವಯ್ಯ ॥ ೧೨ ॥

ವಚನ ॥ ಈ ಪ್ರಕಾರ ಫಟಸರ್ಪನಿಂದ ಕಾಣಿಕೆಯಂ ತೆಗೆದುಕೊಂಡು, ಕಲ್ಯಾಣಪಟ್ಟಣದ ಗಟ್ಟಿ ವರ್ತಕರಲ್ಲಿ ಈ ರತ್ನ ಪದಕಮಂ ಕ್ರಯಗೊಳಿಸಿ ಭತ್ಯವಂ ತಂದು ಶಿವಗಣಂಗಳಿಗ ಆರಾಧನೆಯಂಗಯ್ಯುತ್ತ ಇರುವ ಮಹತ್ತಂ ಪ್ರಕಟಿಸಿ, ಪರವಾದಿ ಜೈನರಿಗೆ ತೋರಲೋಸುಗ ಕೊಂಡೆಮಂಚಣ್ಣ ರಾಯನೊಳೇನೆನ್ನುತಿರ್ದನು.

**ಏಕತಾಳ.**

ಕೇಳು ಬಿಜ್ಜಳರಾಯ । ಭಾಳಾಕ್ಷ ಬಸವಯ್ಯ ।
ಮೇಲೆ ಅರಣ್ಯವಾಸ । ತಾಳಿ ಸಂಗಮದೋಳ್ ॥ ೧ ॥
ಇದ್ದು ಕೊಂಡಿರುತ ಇ । ಲ್ಲಿದ್ದುದಕೆ ಮಿಗಿಲಾಗಿ ।
ಮುದ್ದಾಗಿ ತೃಪ್ತಿಯ । ಮಾಡುವ ಗಣಕೆ ॥ ೨ ॥
ನಿನ್ನ ಬೊಕ್ಕಸದೊಳಿದ್ದ । ಉನ್ನತ ಮಣಿಪದಕ ।
ಹೊನ್ನೆಲ್ಲವನುಕೊಂಡು । ಪೋಗಿ ತಾ ವನದಿ ॥ ೩ ॥
ಇಲ್ಲಿಯೆ ಕ್ರಯಗೈಸಿ । ಎಲ್ಲ ಸಂಗ್ರಹಿಸಿ ತಾ ।
ಅಲ್ಲಿ ಆರಾಧನೆ । ಗೈವ ನೋಡಯ್ಯ ॥ ೪ ॥
ಎಂದ ಕೊಂಡೆಯ ಮಾತ । ನಂದು ಕೇಳುತ ರಾಯ ।
ನಂದಿಬಸವನ ಮೇಲೆ । ಮಾಡಿ ತಾ ಖತಿಯ ॥ ೫ ॥
ಕರೆಸಿಯೆ ಬಸವನ । ಒರೆದೊರೆದು ಕೇಳಿದ ।
ಅರಮನೆ ಪದಕವ । ಅಪಹರಿಸಿ ಒಯ್ದು ॥ ೬ ॥
ಅರಣ್ಯದೊಳು ನಿಂದು । ಅಲ್ಲಿಂದ ಊರೊಳು ।
ಮಾರಿ ಮಾರಿದ ಗಣಾ । ರಾಧನೆಗೈವೆ ॥ ೭ ॥
ಪರದ್ರವ್ಯ ಪಾಷಾಣ । ಕರಸೋಂಕೆವೆಂಬಿರಿ ।
ಅರಮನೆಯ ದ್ರವ್ಯವ । ಅಪಹರಿಸುವರೆ ॥ ೮ ॥
ಕೇಳಬೇಡಯ್ಯ ನೀನು । ಕೊಂಡೆಯರ ಮಾತನ್ನು ।
ವ್ಯಾಳನೊಳ್ನಿತ್ಯವೊಂದು । ಮಾಣಿಕ್ಯಕೊಂಬೆ ॥ ೯ ॥
ಆ ಮೂಲದಿಂದಲಿ । ಆರಾಧನೆಯಗೈವೆ ।
ಭೂಮಿಶ ಕೇಳೆಂದು । ಪೇಳೆ ತಾ ಬಸವ ॥ ೧೦ ॥
ಎಲ್ಲಾದರುಂಟೇನಯ್ಯ । ಇಳೆಯೊಳು ಘಟಸರ್ಪ ।
ಮೆಲ್ಲನೆ ಮಾಣಿಕ್ಯ । ವೀವುದು ಚೋದ್ಯ ॥ ೧೧ ॥
ಆದಡಾಗಲಿ ಮಂತ್ರಿ । ಅಹಿ ಪದಕವೀವುದ ।
ಭೇದಿಸಿ ತೋರೆಂದ । ಮೇದಿನೀಪತಿಯು ॥ ೧೨ ॥
ನೋಡುವ ಶಕ್ತಿಯಿರೆ । ನೀ ನೋಡು ಬಾರಯ್ಯ ।
ರೂಢಿ ತರು ಗಗನದ । ತುದಿಯ ತಾ ಕಾಣೊ ॥ ೧೩ ॥
ಕರೆದು ರಾಯನನು ತಾ । ನಿರುತಿರ್ದ ಬಳಿಗಾಗ ।
ಕರೆತರೆ ಬಂದರು । ಸರ್ವರೊಮ್ಮುಖದಿ ॥ ೧೪ ॥
ಅಲ್ಲಿಹ ಹುತ್ತ ಸುತ್ತ । ಬಂದು ನಿಂದರು ಜನ ।
ರೆಲ್ಲ ನೋಟಕರಿರೆ । ಸೊಲ್ಲುಳಿದ ಬಸವ ॥ ೧೫ ॥

ವಚನ ॥ ಬಸವರಾಜಂ ಆ ಹುತ್ತದ ಬಳಿಯಲ್ಲಿ ಗುರು ಸಂಗಮಧ್ಯಾನಪರನಾಗಿ ನಿಲ್ಲಲು, ಆ ಹುತ್ತದಿಂದ ಘಟಸರ್ಪ ಬರುವ ಅದ್ಭುತವಂ ಪೇಳ್ವೆನದೆಂತೆನೆ.

**ಕೊಂಚೆ ಜಂಪೆ.**

ಮೊರೆವ ರಭಸಕ್ಕೆ ಧರೆ ನಡುಗಿ – ಶ್ವಾಸ | ದುರಿ ನೀಲವರ್ಣದಿಂದೇಳೆ |
ಅವನಿಯಂಬರ ಮುಸುಕೆ ಜ್ವಾಲೆ – ಆಗ | ಅವನಿಪತಿ ಸರ್ವ ಜನಜಾಲ || ೧ ||

ತತ್ತರದಿ ತಲ್ಲಣಿಸುತಾಗ – ಎದೆಗೆಟ್ಟು | ಪೃಥ್ವಿಯಲಿ ಮೂರ್ಛೆಯಿಂದೊರಗಿ |
ಗಳಿಗೆಯೊಳು ಚೇತನವ ತಾಳಿ – ಎದ್ದು | ಕಳವಳದಿ ನಿಲ್ಲಲನಿತರೊಳು || ೨ ||

ಮಾಣಿಕ್ಯಪದಕ ತಂದೀಯೆ – ಬಸವಂಗೆ | ಕಾಣಿಕೆಯದಾಯ್ತು ಭಕ್ತಿಯಲಿ |
ಕೋಟಿ ಸೂರ್ಯರ ಕಾಂತಿಯಂತೆ – ರಂಜಿಸುವ | ನೀಟಾದ ಪದಕವನು ನೋಡಿ || ೩ ||

ಮೊರೆ ಮಂತ್ರಿ ಮಾನ್ಯರುಗಳೆಲ್ಲ – ಅಚ್ಚರಿಯ | ಪರರಾಗಿ ಸ್ತುತಿಸುತಿರಲೆಲ್ಲ |
ದೇವದುಂದುಭಿ ಮೊಳಗುತಾಗ – ಪೂಮಳೆ | ತೀವಿ ತುಂಬಲು ಬಳಿಯೊಳ್ಬೇಗ || ೪ ||

ಸಾಕ್ಷಾತು ಪರಮಶಿವಮೂರ್ತಿ – ನೀನು | ಮೋಕ್ಷದಾಯಕನು ಸತ್ಕೀರ್ತಿ |
ಕ್ಷಮಿಸು ಎನ್ನಪರಾಧವನ್ನು – ಬಸವಣ್ಣ | ಸುಮನಸದಿ ಪಾಲಿಸಿಂದಿನ್ನು || ೫ ||

ಮಂತ್ರಿ ಪಟ್ಟದ ಉಂಗುರವನು – ಮಣಿದು | ಮಂತಣಾಧಿಪ ಕೊಟ್ಟನಂದು |
ಆಗ ಕೈಕೊಂಡು ಮುದ್ರಿಕೆಯನು – ಬಸವಯ್ಯ | ಸಂಗಮಧ್ಯಾನಪರನಾದ || ೬ ||

ವಚನ || ಇಂತು ಸಂಭ್ರಮದಿಂದ ರಾಜಾಧಿರಾಜರು, ಮಂತ್ರಿ ಪುರೋಹಿತ ಸಮಸ್ತ ಸಚಿವಾಪ್ತಸೇನಾನಿಕರ ಸಕಲ ಸಮೂಹದೊಡನೆ, ಬಿಜ್ಜಳರಾಯಂ ಬಸವೇಶ್ವರನ ಕಲ್ಯಾಣನಗರಕ್ಕೆ ಅತ್ಯುತ್ಸಾಹದಿಂ ಕರೆತಂದು, ಎಂದಿನಂತೆ ಸುಖಮಿರುತ್ತಿರಲು ನುತ್ತುಮೆಂತೆನೆ.

## ಅಗ್ಗಣಿಹೊನ್ನಯ್ಯನ ಕುಷ್ಠ ಬಿಜ್ಜಳನಿಗಡರಲು ಬಸವ ನಿವಾರಣೆಮಾಡಿದ ಪವಾಡ

**ದ್ವಿಪದಿ.**

ಶರಣಗಣಂಗಳುಂ ಶಿವನನುಜ್ಞೆಯಲಿ |
ಸರಸಿಜಾಸನ ಲಿಖಿತ ಸಲೆಮೀರಿ ಇಹರು || ೧ ||

ತಮ್ಮ ನಿತ್ಯಕ್ರೀಯ ತಮ್ಮ ಮಹಿಮೆಯಲಿ |
ತಮ್ಮ ಶಿವಲೀಲೆಯಲಿ ತಾವಾಡುತಿಹರು || ೨ ||

ಮುನ್ನೂರು ಅರವತ್ತು ರೋಗಗಳು ತಾವು |
ಇನ್ನು ಶರಣರ ಸೋಂಕಲಮ್ಮದೆ ಎಲ್ಲ || ೩ ||

ಒಮ್ಮೆಯೊಳಿರೆ ಬಳಿಕ ಮೋಳಿಗೆಯಮಾರಂ |
ನೆಮ್ಮದ ಭಕ್ತರ ಮನೆಗವರು ಪೋಗರು || ೪ ||

ಬರುತಿರಲು ಪಥದಲ್ಲಿ ಬಂದು ರೋಗಗಳು ।
ಶರಣೆಂದು ಸೈಗೆಡೆದು ಕರಮುಗಿದು ನಿಂದು ॥ ೫ ॥

ನಮ್ಮ ನಿರ್ಮಿಸಿ ನೀವು ನಮಗೆ ಆಪ್ತರನು ।
ನಿಮ್ಮ ದಯದಿಂದೀಯದಿರೆ ನಾವು ಬಳಲಿದೆವು ॥ ೬ ॥

ಶರಣಾಗತ ರಕ್ಷಕರೆ ಸಲಹಿ ನಮ್ಮನೆಂದು ।
ಮರೆಬಿದ್ದ ರೋಗಗಳ ಮನ್ನಿಸುತ ಶರಣ ॥ ೭ ॥

ತಮ್ಮ ಆಜ್ಞೆಯೊಳಿರಿಸಿ ಕರೆಕೊಂಡರೊಂದ ।
ದುಮ್ಮನದಿ ಕುಷ್ಠವಂ ದಾಟಿಸಿದರತ್ತ ॥ ೮ ॥

ಮುನ್ನೂರು ಐವತ್ತು ಮತ್ತೆ ಒಂಬತ್ತಂ ।
ಮನ್ನಿಸೆಯೆ ಶರಣರು ಕರೆಕೊಂಡರಾಗ ॥ ೯ ॥

ತೊನ್ನರೋಗವನೊಂದ ದೂರ ತಗುಳುತಲಿ ।
ಚಂಡಾಳ ಹೋಗೆಂದು ಎಲ್ಲ ವರ್ಜಿಸಲು ॥ ೧೦ ॥

ವಚನ ॥ ಆ ವೇಳೆಯಲ್ಲಿ ಅಗ್ಗಣಿ[1] ಹೊನ್ನ[1]ಯ್ಯಗಳು ನೀರ ತರುತಿರ್ದ್ದರ ದೆಂತೆನೆ.

**ಜಂಪೆ.**

ಬಸವೇಶನರಮನೆಯ । ಅಸಮ ಜಂಗಮರೊಂದು ।
ಕುಶಲದಿಂ ಲಕ್ಷ ತೊಂಬ । ತ್ತಾರು ಸಾವಿರಕೆ ॥ ೧ ॥

ಲಿಂಗಗಳ ಅಭಿಷೇಕ । ಹಿಂಗದೇಗ್ಗೈಯ್ಯುವರೆ ।
ಭಂಗಾರದ ಬಿಂದಿಗೆಗ । ಳೆರಡು ಕಾವಡಿಯು ॥ ೨ ॥

ಶರಣ ಹೊನ್ನಯ್ಯ ತನ್ನ । ಶರೀರ ಜಳಕಂಗೈದು ।
ಭರದಿ ಮಡಿಯುಟ್ಟೊಡನೆ । ಭಸಿತ ಧಾರಣದಿ ॥ ೩ ॥

ಗಂಗೆ ಯಮುನೆಚ್ಚೈವ । ಗೋದಾವರಿ ಸರಸ್ವತಿ ।
ಪೊಂಗು ನರ್ಮದೆ ಸಿಂಧು । ಭಾವೆ ಕಾವೇರಿ ॥ ೪ ॥

ಮಂದಾಕಿನಿಯೆ ಶರಣು । ಮಾತೆ ಜಾನ್ಹವಿ ಶರಣು ।
ಚಂದ್ರಧರನಿಗೆ ಮಿಾಸಲ್ । ಸುರಕನ್ನೆ ಶರಣು ॥ ೫ ॥

ಎರಡು ಬಿಂದಿಗೆ ಜಲವು । ಹರಗಣಂಗಳ ಲಿಂಗ ।
ಕೆರೆಯೆ ಮಜ್ಜನಪೂರ । ಇರುವಂಥ ವರವ ॥ ೬ ॥

1-1 ಹಂಪ (ಎ, ಡ, ತ.)

ಕರುಣಿಪುದು ಎಲೆ ತಾಯೆ । ಕಾರುಣ್ಯನಿಧಿ ಗಂಗೆ ।
ಶರಣೆಂದು ಬಿಂದಿಗೆಯೊಳ್ । ಭರದಿ ತುಂಬುತಲಿ ॥ ೭ ॥

ಪರಮ ಪಂಚಾಕ್ಷರಿಯ । ಬರೆದು ಬಿಂದಿಗೆ ಜಲದಿ ।
ಕರದಿ ಭಸ್ಮವ ಧರಿಸಿ । ವಸ್ತ್ರಗಳ ಮುಚ್ಚಿ ॥ ೮ ॥

ಶಿವಧ್ಯಾನಪರನಾಗಿ । ಶಿವಶರಣ ಬರುತಿರಲು ।
ಜವದಿ ಬೇಡುತ ಕುಷ್ಠ । ಮೊರೆಯಿಟ್ಟುದಾಗ ॥ ೯ ॥

ದೀನರಕ್ಷಕ ಎನ್ನ । ಹೀನ ರೂಪನು ನೋಡಿ ।
ನಿನ್ನ ಶರಣರು ಎಲ್ಲ । ಮುನ್ನ ನೂಕಿದರು ॥ ೧೦ ॥

ಎನ್ನ ಜೊತೆಯರನೆಲ್ಲ । ಮನ್ನಿಸುತ ಕರೆಕೊಳ್ಳಿ ।
ಇನ್ನು ಓರ್ವನೆ ಆದೆ । ಮನ್ನಿಪುದು ದಯದಿ ॥ ೧೧ ॥

ರೂಪನರಸದೆ ಎನ್ನ । ಸೇರಿಸಿಕೊ ಅಂಗದಲಿ ।
ಕಾಪಾಲಿರೂಪನೆ ನೀಂ । ದೂಡಬೇಡಯ್ಯ ॥ ೧೨ ॥

ವಚನ ॥ ಈ ರೀತಿ ಮೊರೆಯಿಟ್ಟ ಕುಷ್ಠಮಂ ಹೊನ್ನಯ್ಯ ಕರೆಕೊಂಡನದೆಂತೆನೆ.

**ತ್ರಿವುಡೆ.**

ಎಲೆ ಕನಿಷ್ಠಿಗ ಕುಷ್ಠ ನನ್ನಯ । ಒಲುಮೆಯಾಜ್ಞೆಯೊಳಿರ್ಪೆಯಾದಡೆ ।
ನೆಲೆಯಗಾಣಿಪೆ ನಿಲುವುದಕೆ ನಾಂ – ನಿನಗೆ ಈಗ ॥ ೧ ॥

ಸ್ವಾಮಿ ನಿನ್ನಾಜ್ಞೆಯೊಳಗಿರ್ಪೆನು । ನೇಮತಪ್ಪೆನು ರಕ್ಷಿಸೆನೆ ಆ ।
ಪ್ರೇಮಿ ಬಾರೆಂದೆನುತ ಚರಣದ – ತಳದಲಿರಿಸಿದನು ॥ ೨ ॥

ಇದರ ಕೇಡನು ಶರಣರ್ಮಹತ್ತನು । ಒದಗಿ ನೃಪನಿಗೆ ತೋರಲೋಸುಗ ।
ಚೆದುರತನದಿಂ ಬಂದು ಮಂಚಿಯು – ಸದರಿನೊಳಗೆ ॥ ೩ ॥

ಕೇಳು ನೃಪವರ ಬಸವರಾಜನ । ಶೀಲವ್ರತ ಶಿವಪೂಜೆಗಗ್ಗಣಿ ।
ಹಾಳು ತೊನ್ನನೊಳ್ತರಿಸುತಿರ್ಪನು – ಶ್ರೇಷ್ಠನೆಂದು ॥ ೪ ॥

ಖೂಳ ಚಂಡಾಲತ್ವ ಕುಷ್ಠವು । ಆಲಿಯಿಂದಲಿ ನೋಡಸಲ್ಲದು ।
ಶೀಲಕದೆ ಮಹಕುಂದು ಎನ್ನುತ – ಜರಿಯಲಾಕ್ಷಣದಿ ॥ ೫ ॥

ಕೇಳುತಾಕ್ಷಣ ರಾಯ ಬಸವನ । ಲೀಲೆಯಿಂ ಕೇಳಿದನು ಕುಷ್ಠನ ।
ಮೇಲೆ ತರಿಸುವೆ ಜಲವ ಯೋಗ್ಯವೆ – ನಿಮ್ಮ ಕ್ರಿಯಗಳಿಗೆ ॥ ೬ ॥

ತರುತಿರಲು ಕಾವಡಿಯೊಳಗ್ಗಣಿ । ಶರಣ ಹೊನ್ನಯ್ಯನನ್ನು ಸದರಿಗೆ ।
ಕರೆಸಿ ಮಾತಾಡಿಸಲು ಬಿಜ್ಜಳ – ನನಿತರೊಳು ಬಸವ ॥ ೭ ॥

ಹಿರಿಯ ಶರಣರು ಮಹಿಮರಿವರ್ಗೆ| ಕರೆಮುಕೊಂಡರು ಕುಷ್ಠ ಮರೆಪ್ರೊಗೆ |
ಧರಿಸಿರಾಜಿಪರ್ ತೊಲಗು ಎಂದಡೆ – ದೂರ ಪೋಪುದೆನೆ || ೮ ||

ಆವಬಿನ್ನಣ ಗಾಢಮಾತುಗಳ್ | ತೀವಿರೀಕ್ಷಣ ನನಗೆ ಕುಷ್ಠವ |
ಭಾವನೋಡಲಿವೆಲ್ಲ ಸಹ ತನ್ನ – ಪೂರ್ವ ಕರ್ಮಫಲ || ೯ ||

ಆವರಿಸಿದವರಿಂಗೆ ಬಪ್ಪುದು | ಈ ವಿಧಗಳಾಡಿದರೆ ಒಪ್ಪೆನು |
ಆವರಿಪವಿಧ ತೋರು ಎನ್ನಲು – ಬಸವರಾಜೇಂದ್ರ || ೧೦ ||

ಧರಣಿಪತಿ ಇಂತೆಂಬನಿವನಿಗೆ | ವರಪರೀಕ್ಷೆಯ ತೋರೆ ಕುಷ್ಠವ |
ತರುಬಿಯೆನೆ ಅವನಂಗಕದನುಂ – ಶರಣ ತೊಲಗೆಂದ || ೧೧ ||

ಭರದಿ ಬಂದಡರಿದುದು ರಾಯನ | ಶರೀರವೆಲ್ಲಕು ಕುಷ್ಠವಾಕ್ಷಣ |
ನೆರೆದ ಆಸ್ಥಾನದಲಿ ಸಿಂಹಾ – ಸನವ ತಾನಿಳಿದು || ೧೨ ||

ಯೋಗ್ಯನಲ್ಲದೆ ಸರಿದನಾಗಲು | ಬೇಗ ಉತ್ಪಾತಗಳು ತೋರ್ದವು |
ಆಗ ಸರ್ವಸಮಾಜ ಮಂತ್ರಿಗ – ಳ್ನೀಗಿ ಹರುಷವನು || ೧೩ ||

ನಾಗಭೂಷಣ ಶರಣಮಹತ್ತಿಗೀ | ಜಗದ ನರರು ಎಶೆಯೆ ಎನ್ನುತ |
ತೂಗಿ ಮಕುಟವ ಎಲ್ಲರ್ಯ್ಯೋಚನೆ – ಗೈದರಿಂತೆಂದು || ೧೪ ||

ಅಳಿಯಬಿಜ್ಜಳನಿಂಗೆ ಪಟ್ಟವ | ನೊಲಿದು ಕಟ್ಟಲು ಯತ್ನಿಸುತಲಿರೆ |
ತಿಳಿದು ರಾಯನ ಪಟ್ಟದರಸಿಯು – ನೊಂದು ಮನಮರುಗಿ || ೧೫ ||

ವಚನ || ಎನ್ನ ಪತಿಗಿಂತಾಯಿತೆಂದು ಬಿಜ್ಜಳನರಸಿ ಬಂದು, ಶ್ರೀ ಬಸವೇಶ್ವರಗೆ ಸಾಷ್ಟಾಂಗವಾಗಿ ನಮಸ್ಕರಿಸಿ ಅನೇಕತೆರದಿಂ ನುತಿಸಿ ಕೀರ್ತಿಸುತಿರ್ದಳು.

**ಜಂಪೆ**

ಶರಣು ಶ್ರೀ ಬಸವೇಶ | ಕರುಣಸಾಗರ ಮೂರ್ತಿ |
ದೊರೆಯ ತಪ್ಪನು ಕ್ಷಮಿಸಿ | ಪರಿಪಾಲಿಸಯ್ಯ || ೧ ||

ಕರಿಯಶ್ವಲಾಯುಗಳು | ಕರುಮಾಡಗಳು ಮುರಿದು |
ಭರದಿ ಕೇಡಡರಿತ್ತೈ | ಬರೆ ಕುಷ್ಠ ಪತಿಗೆ || ೨ ||

ಪರಿಪರಿಯ ಶೋಕದಲಿ | ತರುಣಿಯಳು ಸ್ಮೃಗೆಡದು |
ಸೆರಗೊಡ್ಡಿ ಬೇಡಿದಳು | ಶರಣ ಬಸವನನು || ೩ ||

ಶರಣಾಗತ ಪರಿಪಾಲ | ಕರುಣಸಾಗರ ಬಸವ |
ಪರುಷ ದೃಷ್ಟಿಲಿ ನೃಪನ | ಹರುಷದಲಿ ನೋಡೆ || ೪ ||

ಮುನ್ನಿನಂದದೊಳಾದ | ಮಹಿಪ ಬಿಜ್ಜಳನಾಗ |
ಕನ್ನೆಯಳ ಮನದಿಷ್ಟ | ಕರುಣದಿಂದಿತ್ತು || ೫ ||

ಕುಷ್ಠದಿಂ ಕೇಡಾದ | ಪಟ್ಟದರಸನ ಬದುಕ |
ಅಟ್ಟಹಾಸದಿ ಎಂದಿ | ನಂದಮಂಗೈದು || ೬ ||

ಹರಿಪೀಠವನು ಏರಿ | ವರಯೋಗ್ಯನಂಗೈದು |
ಹರನ ಮಹಿಮೆಯ ಮೆರೆದ | ಕರುಣನಿಧಿ ಬಸವ || ೭ ||

**ಕಂದಪದ್ಯ.**

ಇದು ಬಸವಲೀಲೆ ಹದುಳದ |
ಸದಯಗಣರೊದಗಿ ಮುದದಿಂ ಕೇಳಲು ಬಸವಂ ||
ಚೆದುರತನದಿಂದೊದಗಿಸಿದ |
ಸದುಭಕ್ತಿ ಕೇಳ್ದೋದಿದರ್ಗೆ ಪುಲಸ್ತ್ಯಪದಂ || ೧ ||

ಇಂತಿ ಪದ್ಯಗಳು ೨೧೩

**ಅಂತು ಸಂಧಿ ೧೨ ಕ್ಕಂ ಸಂಪೂರ್ಣಗಣನೆ - ೩೨೫೮ ಕ್ಕಂ ಮಂಗಳ ಮಹಾ**

**ಶ್ರೀ ಶ್ರೀ ಶ್ರೀ ಶ್ರೀ ಶ್ರೀ**



## ಹದಿಮೂರನೆಯ ಸಂಧಿ

# ಶಂಕರದಾಸಯ್ಯನು ಭೂತಗಳಿಂದ ಬಿಜ್ಜಳನ ಅರಮನೆಯನ್ನು ಸೂರೆಗೊಳಿಸಿದ ಪವಾಡ

**ಮತ್ತೇಭವಿಕ್ರೀಡಿತಾ ವೃತ್ತ**

ಬಸವೇಶಂ ಭವನಾಶಕಂ ಭವಿಜನಪ್ರಧ್ವಂಸಕಂ ಶಂಕರಂ ।
ವಸುಧೀಶಂ ವಿಭುಸೇವಿತಂ ವಿಷಹರಂ ವೈರಾಗ್ಯಸಂಪತ್ಪ್ರದಂ ॥
ಅಸಮಾಕ್ಷಂ ಹರಿವಂದಿತಂ ಹರಿತನೂಜಾತಾಭಿ ಸಂದಾಹನಂ ।
ಭಸಿತಾಂಗಂ ಭಜಕಾರ್ಚಿತಾಂಘ್ರಿವನಜಂ ವಂದೇ ಕೃಪಾಸಾಗರಂ ॥ ೧ ॥

**ದ್ವಿಪದಿ.**

ಶಿವಭಕ್ತರುಗಳ್ಕೇಳಿ ಶರಣಚರಿತೆಯನು ।
ವಿವರಿಸುವೆ ಬಲ್ಲನಿತ ವರಮಹತ್ತುಗಳ ॥ ೧ ॥

ಲಿಂಗನಿಷ್ಠಾಪರನು ಸದ್ಭಕ್ತಿಯುತನು ।
ಜಂಗಮರ ಪ್ರಾಣಾಪ್ತನತಿ ಭೃತ್ಯವರನು ॥ ೨ ॥

ಸಂಚಿತ ಪ್ರಾರಬ್ಧ ಕಾಲಕರ್ಮಗಳ ।
ಕಿಂಚಿತ್ತುಳಿಯದೊಲ್ದಹಿಪ ವೀರನಗಣಿತನು ॥ ೩ ॥

ಹರಿ ಬ್ರಹ್ಮ ಸುರರುಗಳ ಗರ್ವ ಪರಿಹರಿಪ ।
ಹರಶರಣರುಗಳಿಷ್ಟ ಕಲ್ಪಭೂರುಹನು ॥ ೪ ॥

ಸೂಜಿಕಾಯಕವಡೆದಾಚರಿಸನನುದಿನವು ।
ತೇಜಗಣ್ಣನು ಹರನೊಳ್ಪಡೆದ ಬಹುನಿಷ್ಠ ॥ ೫ ॥

ಅನ್ಯದೇವತೆಶಬ್ದ ಕೇಳನಾ ಶರಣ ।
ಅಗ್ನಿಗಣ್ಣಲಿ ಕೊಲುವ ಭೂತಮಾರಿಯರ ॥ ೬ ॥

ಬಸ್ತಿಗಳ ಕಂಡೊಡನೆ ಬಿಡಲು ಉರಿಗಣ್ಣ ।
ಸಿಸ್ತುಗೆಡುತಲಿ ಜಿನ್ನ ದೇವರುಗಳಿಲ್ಲ ॥ ೭ ॥

ಚಿತ್ತಲೆಯೊಳ್ನವಿಲಿನಾ ಗರಿಗಳಂಮುಚ್ಚಿ ।
ಕಿಚ್ಚ ತಡೆಯದೆ ತಿರುಗಿ ನೋಡುತಲಿ ಆಗ ॥ ೮ ॥

ಓಡುವವು ದೈವಗಳು ಮನಬಂದ ಕಡೆಗೆ |
ಬೇಡುವವು ಕೆಲವುಗಳು ಮಾಡೆ ಸೇವೆಯನು || ೯ ||

ಹೇಳದೇ ಕೇಳದೇ ಸೇವೆಯೊಳು ನಿರುತ |
ಕಾಳಿಯರು ಒಂದೊಂದು ಸೇವೆಮಾಡುವರು || ೧೦ ||

ನವಿಲೆಯಲಿ ಉದಯಿಸಿಯೆ ಶಂಕರನದಾಸಿ |
ತವಕದಿಂದಲಿ ಬಂದು ಕಲ್ಯಾಣಪುರಕೆ || ೧೧ ||

ಬಸವಮಹಿಮೆಯ ನೋಡಿ ಬಸವನೊಡಗೂಡಿ |
ಬಸವನಲ್ಲಿಯೆ ನಿಂದ ಕೆಲಕಾಲವಲ್ಲಿ || ೧೨ ||

**ಏಕತಾಳ.**

ಇಂತಿರಲೊಂದುದಿನ | ಸಂತೋಷಸೌಖ್ಯದಿ |
ಕಂತುರೂಪಿನ ಬಿ | ಜ್ಜಳನೊಳು ಆಗ || ೧ ||

ಕೊಂಡೆಯರುಗಳೊಂದು ದಿಂಡೆತನದ ಕೃತಕ |
ಮಂಡಲಪತಿಯೊಳು | ಖಂಡಿತ ಉಸುರೆ || ೨ ||

ಬಸವನೀಪರಿಯಲ್ಲಿ | ಪವಾಡ ಮೆರೆಯಲು |
ವಸುಧೆಯೊಳಿರ್ಪ ಮಾರಿ | ಮಸಣಿದೈವರಿಗೆ || ೩ ||

ಪೂಜೆ ಪುಷ್ಪಗಳಿಲ್ಲ | ಓಜೆ ನಿಲಿಸಿದರೆಂದು |
ತೇಜಗೆಡಿಸುತ್ತಲಿವೆ | ತೂರಿ ಪಟ್ಟಣವ || ೪ ||

ಪಟ್ಟಣದೊಳಗೆಲ್ಲ | ದುಷ್ಟ ದೇವತೆಗಳು |
ಕಟ್ಟಳೆಯು ತಪ್ಪಿತೆಂದು | ಅಟ್ಟೆ ಕೊಲುತಿಹವು || ೫ ||

ಪುರವೆಲ್ಲ ಜಾಡ್ಯವು | ಪಶು ತುರಗ ವಾರಣ |
ಭರದಿ ನೋವ್ನುಡಿಯಿಂದ | ಒರಲುತಿವೆ ಭೂಪ || ೬ ||

ಗ್ರಾಮಶಾಂತಿಯಗೈಸು | ಅವರಿವರನ್ನದೆ |
ನೀ ಮಾಡಿಸಕ್ಕಿಯನ್ನು | ನಿಗದಿ ಕೊಟ್ಟಣವ || ೭ ||

ರಾಜನೆಲ್ಲಾಕಿಸು | ರಾಜಗೃಹದಿ ಮುಖ್ಯ |
ತೇಜಮನ್ನಣೆಯನ್ನು | ತೋರಬೇಡೆನಲು || ೮ ||

ಎಂದ ಕೊಂಡೆಯರ ಮಾ | ತಿಂಪಿಂದ ರಾಯ ಕೇಳಿ |
ಅಂದು ಕಣಜದ ನೆಲ್ಲ | ಎಲ್ಲ ಪ್ರಜೆಗಳಿಗೆ || ೯ ||

ಕೊಟ್ಟಣವ ಹಾಕೆಂದು । ಕಟ್ಟಳೆಗೈಯಲ್ಕೆ ।
ನೆಟ್ಟನೆ ಪುರಕೆಲ್ಲ । ನೆಲ್ಲ ಹಾಕಿದರು ॥ ೧೦ ॥

ಹತ್ತುವೊಟ್ಟೆಯು ತುಂಬಿ । ಹರಶರಣನ ಮನೆಗೆ ।
ಮತ್ತೆ ತಂದಿಳುಹಿದ । ರ್‍ಕ್ಕೊತ್ತಮೊತ್ತದಲಿ ॥ ೧೧ ॥

ಶಂಕರದಾಸಿಮಯ್ಯ । ಬಿಂಕದಿಂ ತಂದ ನೆಲ್ಲ ।
ಶಂಕೆಯಿಲ್ಲದೆ ಇಲ್ಲಿ । ಸುರಿದಿರೇಕೆಲವೊ ॥ ೧೨ ॥

ನೆಲ್ಲೇಕೆ ಸುರಿದಿರೊ । ನಮ್ಮೊಳು ಪೇಳೆನೆ ।
ನಿಲ್ಲದೆ ಸೇವಕರು । ನುಡಿದರಾಕ್ಷಣದಿ ॥ ೧೩ ॥

ದೊರೆಬಿಜ್ಜಳೇಂದ್ರನು । ಮಾರಿಮುಸಣಿಗಳಿಗೆ ।
ಭಾರಿ ಔತಣ ಶಾಂತಿ । ಮಾಡಲ್ಕೆ ನೆಲ್ಲಂ ॥ ೧೪ ॥

ಅವರಿವರನ್ನದೆ । ಹಾಕಿ ಕೊಟ್ಟಣದಕ್ಕಿ ।
ತವಕದಿಂ ನಾಳೆ ತಂ । ದಳೆಯಬೇಕೆನಲು ॥ ೧೫ ॥

ನೀವು ಈ ನೆಲ್ಲನೆಲ್ಲ । ಅತಿಬೇಗ ಕುಟ್ಟಿಸಿ ।
ಭೂವರನ ಕಣಜಕ್ಕೆ । ಅಳೆಯಬೇಕೆನಲು ॥ ೧೬ ॥

ಕೊಟ್ಟಣವ ಕುಟ್ಟುವರೆ । ಕಟ್ಟಳೆಮ್ಮಲ್ಲಿ ಇಲ್ಲ ।
ಸೃಷ್ಟಿಗೀಶ್ವರನಾಳು । ನೆಟ್ಟನೆ ನೋಡು ॥ ೧೭ ॥

ಎಂದ ಶರಣನ ಮಾತಿ । ಗಂದು ಇಂತೆಂದರು ।
ಬಂದಪುದು ಅಪರಾಧ । ಕುಟ್ಟದಿರ್ದಡೆಯು ॥ ೧೮ ॥

ಇಂತಿದೆಯೆ ತೆರಳಿರೊ । ಅಕ್ಕಿ ಬರುತಿದೆ ನಾಳೆ ।
ಇಂತೆಂದು ಅರುಹಿರೊ । ನೃಪಗೆ ನೀವೆಂದ ॥ ೧೯ ॥

ವಚನ ॥ ಈ ರೀತಿಯಲ್ಲಿ ಬಿಜ್ಜಳನ ಚರರು ರಾಜಾಜ್ಞೆಯಿಂ ಶಂಕರದಾಸಯ್ಯನವರ ಮಂದಿರಕ್ಕೆ ನೆಲ್ಲಂ ಸುರಿದುಪ್ಪೋಗಲು, ಆ ಶರಣ ಅಂತಾಗಲೆಂದು ಕೊಟ್ಟಣವಂ ಕುಟ್ಟಿಸುವುದಕ್ಕೆ, ರಾಜನ ಭೂತಶಾಂತಿ ಕೈಗೊಂಬ ಮಾರಿ, ಮಸಣಿ, ದುರ್ಗಿ, ಚೌಡಿ, ಚಾಮುಂಡಿ, ಮಾಳವಿ, ಬ್ರಾಹ್ಮಿ, ಭೈರವಿ, ಕಾಳರಾತ್ರಿ, ಚಂಡಿ, ಕುಮಾರಿ ಮಾರಿ, ಏಕನಾಥೆ, ಶಾಕಿನಿ, ಢಾಕಿನಿ, ಬ್ರಹ್ಮರಾಕ್ಷಸ, ಜೆಟ್ಟಿಗ, ಬೊಮ್ಮ, ಮೈಲಾರ, ಭೈರವ, ಇಂತೀ ಭೂತಭೇತಾಳರಂ ಕರೆದು ಕೊಟ್ಟಣವಂ ಕುಟ್ಟಿಸಿ, ಅಕ್ಕಿಯಂ ಅದೇ ಭೂತಗಳಿಂದ ಬಿಜ್ಜಳನರಮನೆಗೆ ಕಳುಹಿಸಿದನದೆಂತೆನೆ.

**ಭಾಮಿನೀ ಷಟ್ಪದಿ.**

ಮೇರೆಯರಿಯದೆ ಭೂಪಬಿಜ್ಜಳ ।
ಧೀರತನದಿಂ ಕುಟ್ಟಿ ಭಕ್ತರ ।
ಮೇರೆಯಿಂ ಸುರಿಸಿಹನು ಅಕ್ಕಿಯ ಮಾಡಲೆನಗರುಹಿ ॥
ಮಾರವೈರಿಯ ಶರಣರುಗಳಾ ।
ಸಾರಮಹಿಮೆಯ ಭಾವವರಿಯದೆ ।
ಹೇರಿ ಸುರಿಸಿದಡೇನು ತಕ್ಷಣ ಮಾಡಿಸುವೆನೀಗ ॥ ೧ ॥

ಕೂಡೆ ಕರೆದನು ಮಾರಿ ಮಸಣಿಯ ।
ರೂಢಿಸಕ್ಕಿಯ ಮಾಡಿ ಈಗಳು ।
ಖೋಡಿನೃಪತಿಗೆ ಕೊಟ್ಟು ಅರಮನೆ ಸೂರೆಗೊಳ್ಳೆಂದು ॥
ಗಾಢ ಅಪ್ಪಣೆ ಶರಣನೀಯಲು ।
ಪಾಡುತಲಿ ಭೂತಾದಿಗಣಗಳು ।
ನೋಡು ನೋಡೆಂದೆನುತ ಅಕ್ಕಿಯಗೆಯ್ದು ಮೊಟ್ಟೆಯೊಳು ॥ ೨ ॥

ಪೊತ್ತು ಇಪ್ಪತ್ತೈದುಸಾಸಿರ ।
ಮತ್ತೆ ಮಿಗೆ ನಿಜರೂಪವಾನುತ ।
ಒತ್ತಿ ಭೂಮಿಯ ನಭಕೆ ಅಡರಿಯೆ ತಾವು ಗರ್ಜಿಸುತ ॥
ಇತ್ತು ಕಣಜಕೆ ನೃಪನ ಅಕ್ಕಿಯ ।
ಪೃಥ್ವಿಪನ ಕಣಜಗಳನೊಡೆಯುತ ।
ಕಿತ್ತು ಬಿಸುಡುತ ಸೂರೆಯಾಡಲು ಪುರವು ತತ್ತರಿಸೆ ॥ ೩ ॥

ಪಟ್ಟಣದಿ ಗೋಳಿಡಿಸಿ ಸರ್ವರ ।
ಹುಟ್ಟುಗೆಡಿಸುತ ಬಿಜ್ಜಳೇಂದ್ರನ ।
ಪಟ್ಟದರಸಿಯ ಸ್ಥಾನವನು ಮಿಗೆ ಬಿಟ್ಟು ಹೊರಡಿಸುತ ॥
ನೆಟ್ಟನೆಯೆ ಬಿಜ್ಜಳನ ಓಲಗ ।
ಕಟ್ಟಲಾಡುತ ಸರ್ವ ಜನರನು ।
ಕುಟ್ಟುತಲಿ ಬಂದಾಗ ನೃಪತಿಯ ಪಿಡಿದುನುಂಗಲಿಕೆ ॥ ೪ ॥

ಬರಲು ಭೂತಗಳ್ ಘೋರರೂಪದಿ ।
ಧರಣಿಪತಿ ಸಭೆಯವರು ನಡುಗಿಯೆ ।
ಪರಮಪುರುಷನ ವೃಷಭಮೂರ್ತಿಯ ಮರೆಯ ತಾವ್ಪೊಗಲು ॥
ಕರುಣಿ ಮಹಿಮೋದ್ಧಾರ ನಿಮ್ಮಯ ।
ಚರಣಕಾನುರೆ ಮರೆಯ ಹೊಕ್ಕೆನು ।
ಮರುಳು ಗಣಗಳು ನುಂಗುತೈದವೆ ಕಾಯಿ ಎನ್ನಸುವ ॥ ೫ ॥

ಶರಣಾಗತ ಪರಿಪಾಲನೆನ್ನುವ |
ಬಿರುದು ನಿನಗೆಲೆ ದೀನರಕ್ಷಕ |
ತ್ವರಿತ ಕಾರ್‍ಯ್ಕೆ ತಡವಮಾಡದೆ ಮೃತ್ಯುಜಯ ಬಸವ ||
ಗಿರಿಯಸಂಭವೆ ಪ್ರಾಣ ಜೀವನ |
ಸುರರ ಹೆಣ್ಗಳ ಮನದ ಜೀವನ |
ಪರಮಲೀಲೆಯು ಮೆರೆವ ದೇವನ ಪ್ರೀಯದ ಅವತಾರ || ೬ ||

ಎಂದು ಪಲಬಗೆ ಸ್ತೋತ್ರವನು ಮಿಗೆ |
ಚಂದದಿಂಗೆಯ್ಯಲ್ಕೆ ಬಿಜ್ಜಳ |
ಅಂದವನ ಮನ್ನಿಸುತ ಭಯಬೇಡೆಂದ ವೃಷಭೇಂದ್ರ ||
ಎಂದುಮಿಾಪರಿ ಕಾಲಮೃತ್ಯುವ |
ಕಂಡುದಿಲ್ಲವು ಪ್ರಳಯಕಾಲವು |
ನಂದಿಬಸವೇಶ್ವರನೆ ರಕ್ಷಿಸು ನಮ್ಮನನವರತ || ೭ ||

ಅಂಜದಿರು ನೀಂ ಧರಣಿಪಾಲಕ |
ನಂಜುಕಂಠನು ಬಂದ ಮೃತ್ಯುವ |
ಮಂಜು ಪರಿವೋಲ್ ನಿಮ್ಮ ಪೊರೆವನು ನಿಮಗೆ ನಿಜವಿರಲಿ ||
ಕುಂಜರವು ಹಯ ವ್ಯಾಘ್ರ ಭಲ್ಲುಕ |
ರಂಜಿಸುವ ಸಿಂಹಾದಿಗಳ ರೂ |
ಪಿಂ ಜಡಿದು ಬಹ ಪಡೆಯ ಪರಿಹರಿಸಯ್ಯ ವೃಷಭೇಂದ್ರ || ೮ ||

ನೋಡಿ ಭೂತಗಳಿರವ ಬಸವ ಮಾ |
ತಾಡಿಸಿದ ನೀವಾರು ಈಪರಿ |
ರೂಢಿಪತಿ ನಿಲಯಾದಿ ಸರ್ವವ ಲೂಟಿಮಾಡುವರೆ ||
ಗಾಢತರದುದ್ದಂಡತೆಯ ನಿಮ |
ಗೀಡು ಬಲವನು ಆರು ಕೊಟ್ಟರು |
ಕೂಡೆ ಪೇಳಿರಿ ಧೀರನವನಾ ಪೆಸರನೆನ್ನೊಡನೆ || ೯ ||

ತಿಳಿದು ಕೇಳುವ ಬಸವ ಮಂತ್ರಿಗೆ |
ಘುಳಿಲನೆಯೆ ಭೂತಗಳು ವಂದಿಸು |
ತಿಳೆಯೊಳಗೆ ಸೈಗೆಡೆದು ಕರಮುಗಿದೆಂದವಾಕ್ಷಣದಿ ||
ಕಳೆಧರನ ನಿಜಭಕ್ತಿ ಭಾವದ |
ಒಲುಮೆ ವಿಕ್ರಮ ತರಣಿ ಭೂ ನಭ |
ಗಳನು ಹಸ್ತದಿ ಪಿಡಿದು ತಾಳವ ತಟ್ಟುವಾ ಮಹಿಮ || ೧೦ ||

ವೀರಶೈವದ ಕುಲಶಿಖಾಮಣಿ ।
ಪಾರವರ್ಯನು ಪರಮದಘ ಕಂ ।
ಠೀರವನು ಪರವಾದಿ ಶಿರಶೂಲ ಶಂಕರನದಾಸಿ ॥
ಧೀರ ನಮ್ಮ ದೊರೆಯವರಂಗಳ ।
ಸಾರ್ವಕಾಲವು ರಜವ ಬೆಳಗುವ ।
ತೋರಲವರ್ಗಳ ತೊತ್ತಿನಾ ಕಿಂಕರರು ನಾವಯ್ಯ ॥ ೧೧ ॥

ಮಂದಮತಿ ಈ ಧರಣಿಪಾಲಕ ।
ಕುಂದು ಹೆಚ್ಚುಗೆ ಮಾನಹೇಯಗ ।
ಳಂದವರಿಯದೆ ಕುಹಕವಾಕ್ಯವ ಕೇಳಿ ನೆಲ್ಲನ್ನು ॥
ತಂದು ಕೊಟ್ಟಣದಕ್ಕಿ ಮಾಡೆನು ।
ತೆಂದು ಶರಣಗಣಂಗಳೆನ್ನದೆ ।
ಮುಂದೆ ಸುರಿಸಲು ನೋಡಿ ನಮ್ಮನು ಕೂಡೆ ನೇಮಿಸಲು ॥ ೧೨ ॥

ಅಕ್ಕಿಯನು ಕೊಂಡೊಯ್ದು ನೃಪಕಣ ।
ಜಕ್ಕೆ ಅಳೆದಿತ್ತೀಗ ಬನ್ನೆನೆ ।
ಯಕ್ಕರದಿ ನಾವ್ತಂದೆವೆನ್ನಲು ಕೇಳಿ ಜನರೆಲ್ಲ ॥
ಮುಕ್ಕಣ್ಣನ ನಿಜಶರಣ ಮಹಿಮೆಗೆ ।
ಮಿಕ್ಕು ಮಿಗಿಲಿನ್ನುಂಟೆ ಲೋಕದಿ ।
ತಕ್ಕುದಲ್ಲವು ನಮಗೆ ಶರಣರ ತಳ್ಳಿ ಸಲದೆಂದು ॥ ೧೩ ॥

ಮಂತ್ರಿಗಳ ಚೆಲುವರಸ ಬಸವದಿ ।
ನೇಂದ್ರ ಕುಹಕವ ಕೇಳಿ ಕೆಟ್ಟೆನು ।
ತಂತ್ರಗಾರನೆ ನಾ ವಿವೇಕವನರಿದೆ ಮುಂದಿನ್ನು ॥
ಮಂತಣದಿ ನೀನೆನ್ನನುಳುಹೈ ।
ಚಿಂತೆ ತಪ್ಪಿಸು ಪ್ರಾಣಬಂಧುವೆ ।
ಇಂತು ದೈನ್ಯದಿ ನೃಪನು ಬೇಡಲು ಬಸವ ಮನ್ನಿಸುತ ॥ ೧೪ ॥

ಅರಿಯದಿರ್ದನು ರಾಯ ತಪ್ಪನು ।
ಭರದಿ ಕ್ಷಮಿಸಲು ನಿಮ್ಮ ಒಡೆಯಗೆ ।
ಅರುಹಿ ಬಸವನು ಮಣಿದನೆನ್ನುತ ನೃಪನ ದೈನ್ಯವನು ॥
ತೆರಳಿಸಿದ ಭೂತಗಳ ಬಸವನು ।
ಕರಿಯ ಹಯ ರಥಶಾಲೆ ಸುಟ್ಟುದ ।
ಕರುಣದೃಷ್ಟಿಲಿ ನೋಡಿಯೆಂದಿನ ತೆರದಿಮಾಡಿದನು ॥ ೧೫ ॥

ದುರುಳ ಜೈನರ ಬಸ್ತಿಭಂಗಿಸಿ |
ಮರುಳತಂಡವು ಪೋದುದಾಗಳೆ |
ಹರನ ಲೀಲೆಯ ಮೆರೆದ ವೃಷಭೇಶ್ವರನುನಲವಿಂದ ||
ಧರೆಯೊಳಿದನಾದರಿಸಿ ಕೇಳ್ವರ |
ದುರಿತಪರಿಹರ ಪಾಪಸಂಹರ |
ಸುರನದೀಧರ ಪರಮಪುರಹರ ಪೊರೆವ ಸಜ್ಜನರ || ೧೬ ||

ವಚನ || ಇಂತೀ ರಾಯನಂ ಮನ್ನಿಸಿ, ಬಸವೇಶ ತನ್ನರಮನೆಗೆ ಬಂದು, ಜಂಗಮಾರ್ಚನ ದಾಸೋಹದಲ್ಲಿರುತಿರ್ದನದೆಂತೆನೆ.

**ಜಂಪೆ.**

ಮಾಡಿಸುತ ಜಂಗಮಾ | ರ್ಚನೆ ಸಕಲ ಸೈಧನವ |
ಕೂಡಿಸುತ ಮನದಿಚ್ಛೆ | ನೀಡಿಸುವನೊಲಿದು || ೧ ||
ಅರಮನೆಯು ಚಾವಡಿಯು | ಅನುಭವ ಮಂಟಪವು |
ಮೆರೆವ ಸೌಧಕೆ ರತ್ನ | ಕಲಶವೆತ್ತಿಸುತ || ೨ ||
ಬಿನ್ನಾಣಗೆಲಸ ಬಿಂ | ಕದ ಮಹಮ್ಮೇರು ಮಠ |
ಹನ್ನೆರಡುಸಾವಿರದ | ಚೆನ್ನಜಂಗಮಕೆ || ೩ ||
ನೂರತೊಂಬತ್ತಾರು | ಸಾವಿರದ ಜಂಗಮಕೆ |
ಬೇರೆ ಕಟ್ಟಿಸಿದ ವಿ | ಚಾರಮಂಟಪವ || ೪ ||
ಲೀಲೆ ಶರಣರು ಗಂಗೆ | ವಾಲುಕರು ಇರುವದಕೆ |
ಮೇಲು ಗೋಪುರದ ವಿ | ಶಾಲ ಮಂಟಪವ || ೫ ||
ಆಚಾರಸಂಪನ್ನ | ರನುಭವದ ಮಂಟಪಕೆ |
ಗೋಚರಿಪ ರನ್ನಗೆಲ | ಸವ ನಿರ್ಮಿಸಿದನು || ೬ ||
ಗವಿಯ ಸಿಂಹಾಸನದ | ಘನವೀರ ಜಂಗಮಕೆ |
ಭುವಿಯೊಳಗೆ ಅಚ್ಚರಿಯ | ಗುಹೆ ನಿರ್ಮಿಸಿದನು || ೭ ||
ಪ್ರಭುದೇವರಿಗೆ ಮೇಲ್ಪ | ಕಾಶ ಮಂಟಪ ಕುಶಲ |
ವಾದುದು ಪಂಚಾಕ್ಷರಿ | ವೇದನುಹಿಮರಿಗೆ || ೮ ||
ಹೇಮಗೆಲಸಗಳಿಂದ | ಭೂಮಿ ನೆಲಮಾಳಿಗೆಯ |
ಕಾಮಿಸಿದನಲ್ಲೊಂದು | ಸೋಮಧರನಿಂಗೆ || ೯ ||
ಜಾಲವಳಿ ರತ್ನದಲಿ | ನೀಲಲೋಚನೆಯರಿಗೆ |
ಕಾಲಹರಪೂಜೆ ನೆಲ | ಮಾಳಿಗೆಯ ರಚಿಸಿ || ೧೦ ||
ಮತ್ತೆ ಸಾವಿರ ಕಳಶ | ವೆತ್ತಿದಾ ಅರಮನೆಯು |
ರತ್ನಗೆಲಸದ ಲೋವೆ | ಯತ್ತ ನೋಡಿದರು || ೧೧ ||

ವಚನ || ಈ ರೀತಿಯಲ್ಲಿ ಶರಣರಿಗೆ ಗೃಹಂಗಳಂ ನಿರ್ಮಿಸುತ್ತ, ಮಾಹೇಶ್ವರಾರಾಧನೆಯಂ ನಡೆಸುತ್ತ ಇತ್ತ ರಾಜ್ಯಭಾರವಂ ಪಾಲಿಸುತ್ತಿರಲು, ಒಂದುದಿನ ಬಿಜ್ಜಳನ ಒಲಗದಲ್ಲಿ ಬಸವಣ್ಣ ಕುಳಿತಿರಲು, ಕೊಂಡೇಮಂಚಣ್ಣ ರಾಯನ ಕೂಡೆ ಸೂಳೆ ನಿಂಬವ್ವೆಯಮೇಲೆ ಏನೆಂದು ಚಾಡಿಯಂ ಪೇಳುತಿರ್ದನು.

## ನಿಂಬವ್ವೆಗೆ ಬೆಸ್ತನು ಜಂಗಮವಾದ ಪವಾಡ.

**ಕೊಂಚೆ ಜಂಪೆ.**

ಊರಸೂಳೆಯರು ತಾವಂತೆ – ಭವಿಜನರ | ಆರನು ಕರಕೊಳ್ಳರಂತೆ |
ಮಾರಹರ ಶರಣರವರಂತೆ – ಅವರ | ಪಾರುಮಾಡಲುಬೇಕು ಮುಂತೆ || ೧ ||

ಅಂದಳದ ಬೆಸ್ತನನು ಕರೆಸಿ – ಅವಗೆ | ಇಂದುಧರ ವೇಷವನು ಧರಿಸಿ |
ಹೊಂದಿ ನಿಂಬವ್ವೆಯನು ಬೆರಸಿ – ನೀ ಬಾ | ರೆಂದು ಕಳುಹಿದರು ಸತ್ಕರಿಸಿ|| ೨ ||

ನೃಪನು ಮಂಚಿಯು ಅಂದು ಇಂಥ – ತಂತ್ರ | ದುಪಮೆಯಿಂ ಕಳುಹಲಾ ಬೆಸ್ತ|
ತಾ ಪೋದ ಶಿವನರೂಪಾಂತು – ಜಂಗಮ | ನೋಪಾದಿ ನಿಂಬೆ ಗೃಹಕಾಗ *||೩||

ಲಾಗುವೇಗದಿ ಪೋಗಿ ಬೆಸ್ತ – ಅವಳ | ಬಾಗಿಲೊಳು ನಿಂತ ತಾನಾಗ |
ನಾಗಭೂಷಣ ಬಂದನೀಗ – ಎಂದು | ಆಗ ನಮಿಸಿದಳ್ನಿಂಬೆ ಬೇಗ || ೪ ||

ಪೋಯಿತಿನ್ನವನ ಹೊಲೆ ರೂಪು – ಅವನಿ | ಗಾಯಿತಂಗಜವೈರಿರೂಪು |
ಕಾಯಜಾರಿಯಪೂಜೆ ಭಾಪು – ಅವನ | ಆಯತವನೇನೆನ್ನಬೇಕು || ೫ ||

ಅರಸು ಮಂಚಿಯು ಮಾತಿಲಂದು – ಗಾಢ | ಕರೆಸಿದನು ಊಳಿಗರನಂದು |
ತ್ವರಿತ ನಿಂಬವ್ವೆ ಮನೆಗಿಂದು – ಪೋಗಿ | ಕರೆತನ್ನಿ ಬೆಸ್ತನನು ಎಂದು || ೬ ||

ಭರದಿಂದ ಊಳಿಗರು ಆಗ – ಪೋಗಿ | ಕರೆದರಾ ಬೆಸ್ತನನು [1] ಬೇ [1] ಗ |
ಬರಲಿಲ್ಲ ಇಲ್ಲಿಗಾವಾತ – ಎನ್ನೆ | ತರಳಾಕ್ಷಿ ನಿಂಬವ್ವೆ ಬೇಗ || ೭ ||

ಇಲ್ಲಿ ಬಂದನು ಬೆಸ್ತನೀಗ – ಬಂದ | ರೆಲ್ಲಿ ಪೋದನು ನೋಡಿ ಬೇಗ |
ಫುಲ್ಲಶರವೈರಿ ರೂಪಂಗ – ನೋಡಿ | ಅಲ್ಲವರು ಬೆರಗಾದರಾಗ || ೮ ||

[2] ಆ [2] ಗ ಬೆಸ್ತರ ಕುಲವು ಹೋಗಿ – ಶರಣ | ನಾದ ಬಸವನ ಕರುಣವಾಗಿ |
ಬೇಗ ಅರಸನ ಬಳಿಗೆ ಹೋಗಿ – ಎಲ್ಲ | ಆಗ ಪೇಳಿದರ್ವಿವರವಾಗಿ || ೯ ||

ವಚನ || ಇಂತು ನೋಡಿಬಂದ ಚರರು ಆ ಮೂರ್ತಿಯಿರವಂ ಪೇಳುತಿರ್ದರದೆಂತೆನೆ.

---

* ಈ ಪದ್ಯ (ಅ, ಎ, ಗ, ಜ, ಟ, ಬ.) ಪ್ರತಿಗಳಲ್ಲಿಲ್ಲ. 1-1 ಈ (ಅ, ಬ.) 2-2 ಈ (ಅ, ಜ, ಟ, ಬ.)

**ಏಕತಾಳೆ.**

ಲಾಲಿಸು ನೃಪವರ್ಯ । ಕಾಳಬಿಸ್ತನು ಅಲ್ಲಿ ।
ಭಾಳಾಕ್ಷ ಜಂಗಮ । ನೋಪಾದಿಯಿಹನು * ॥ ೧ ॥

ಪೋಗಿ ನೋಡಿದೊ ರಾಯ । ನೀಗಿ ಬಿಸ್ತರ ಕುಲವಂ ।
ಆಗಿ ನಿಶ್ಚಲ ಕಾಯ । ನಾಗಭೂಷಣನೋಲ್ * ॥ ೨ ॥

ಕೆಂದಾವರೆಯ ವರ್ಣ । ದಂದ ಕಾಣುತ ದೇಹ ।
ಚಂದದಿಂ ನಿಜಜಂಗ । ಮನಾಗಿ ಮೆರೆವ * ॥ ೩ ॥

ಜಡೆಮುಡಿ ಭಸ್ಮಾಂಗ । ಪಿಡಿದ ಜಪಮಾಲಿಕೆ ।
ಜಡಿವ ದಂಡವು ಪಾತ್ರೆ । ಅಡಿಯೊಳ್ ಹಾವುಗೆಯು * ॥ ೪ ॥

ಬಸವನ ಮಹಿಮೆಯೊ । ಆ ಶರಣೆಯ ಮಹಿಮೆಯೊ ।
ವಸುಧೆಗಚ್ಚರಿಯಾಗಿ । ಎಸೆವುದೆಂದೆನಲು * ॥ ೫ ॥

ಕೇಳಿದ ಬಿಜ್ಜಳ । ತಾಳಿದನಚ್ಚರಿಯ ।
ಭಾಳಾಕ್ಷ ಶರಣರ । ಏಳಿಗೆಯೆಂತೊ ॥ ೬ ॥

ರೂಢಿಯೊಳ್ಶರಣರ । ಗಾಡಿಯ ನೋಡೆಂದು ।
ಆಡಿದ ಶಿರವನ । ಲ್ಲಾಡಿದ ರಾಯ ॥ ೭ ॥

ಪುರವೆಲ್ಲ ವಿಸ್ಮಿತ । ಕರವಾಗಿ ಮೆರೆಯಲು ।
ಭರದಿ ಬಿಸ್ತನಸತಿ । ಯಿರವನು ಪೇಳ್ವೆ * ॥ ೮ ॥

ಗಂಡ ಜಂಗಮನಾದ । ಖಂಡಿತ [1] ಸುದ್ದಿಯ [1] ।
ಹೆಂಡತಿ ಕೇಳಿ ಮುಂ । ಕೊಂಡು ಶೋಕಿಸುತ ॥ ೯ ॥

ಮೊರೆಯಿಡಲು ಬಂದಳು । ಮೆರೆವ ರಾಯನ ಬಳಿಗೆ ।
ತ್ವರಿತದಿಂದಾ ನಾರಿ । ಉರಿಮಾರಿಯಂತೆ * ॥ ೧೦ ॥

ಕರಜೆಲ್ವ ಪತಿಯೆನ್ನ । ತೊರೆದು ಹಿಂಗಿದನೆಂದು ।
ಮೊರೆಗಡ್ಡ ಬೀಳುತ್ತ । ದೂರಿಟ್ಟಳವಳು ॥ ೧೧ ॥

ಎಲ್ಲಿಗೆ ಕಳುಹಿದಿರಿ । ಎಲ್ಲಿಯು ಕಾಣೆನು ।
ನಲ್ಲನ ತೋರೆಂದು । ನಲ್ಲೆ ಮರುಗತಲಿ * ॥ ೧೨ ॥

ಗಂಡನೆ ಗತಿಮತಿ । ಗಂಡನೇ ಗುರುದೈವ ।
ಗಂಡನೆ ಪ್ರಾಣೇಶ । ಗಂಡನಾ ಸತಿಗೆ * ॥ ೧೩ ॥

---

* ಈ ಪದ್ಯಗಳು (ಅ, ಎ, ಒ, ಗ, ಜ, ಟ. ಬ.) ಪ್ರತಿಗಳಲ್ಲಿಲ್ಲ. 1-1 ವಾದಸುದ್ದಿ (ಬ)

ಗಂಡನಗಲಿ ಬಾಳ್ವ । ಭಂಡದೈತ್ಯಳ ಯಮನು ।
ಚಂಡಪಾಶದಿ ಹೊಯ್ದು । ದಂಡಿಪ ಸಿದ್ಧ † ॥ ೧೪ ॥
ಅರವಿಂದವಿಲ್ಲದ । ವರ ಸರೋರುಹವೇಕೆ ।
ಪುರುಷನಿಲ್ಲದ ಚೆಲ್ವ । ತರುಣಿಯಿರಲೇಕೆ † ॥ ೧೫ ॥
ರಾಜನು ಇಲ್ಲದ । ರಾಜ್ಯದಿರವು ಚೆನ್ನೆ ।
ಭೋಜನಕ್ಕೊದಗದ । ಭಕ್ಷ್ಯಗಳೇಕೆ † ॥ ೧೬ ॥
ಜೀವಿತೇಶನನಗಲಿ । ಜೀವ ಹೊರೆವಳಲ್ಲ ।
ಭುವನೇಶ ನಿನ್ನ ಮುಂದೆ । ಬಿಡುವೆ ಪ್ರಾಣವನು † ॥ ೧೭ ॥
ಎನುತ ಶಿಶು ಮೂವರಿಂ । ದೆರಗಿ ಬಲ್ವೋಕಿಸುತ ।
ವನಿತೆ ಒರಲುತಿರು । ವೇಳೆಯೊಳ್ರಾಯ † ॥ ೧೮ ॥
ನಾರಿ ಸುಗುಣೆಯೆಂದು । ಸಾರದೋಲಗದಿ ಮೆಚ್ಚಿ ।
ಕಾರುಣ್ಯಮೂರ್ತಿಯ । ಕಡೆಗೆ ನೋಡುತಲಿ † ॥ ೧೯ ॥
ದುರುಳರುಗ್ರೈದಂಥ । ನೆರಯಪರಾಧವ ।
ಕರುಣದಿಂ ಕ್ಷಮಿಸೆಂದು । ಕರವ ಮುಗಿಯುತಲಿ † ॥ ೨೦ ॥
ಇವಳ ಪತಿಭಿಕ್ಷವ । ನಿವಳ್ಗಿತ್ತು ಕರುಣದಿ ।
ಭುವನಕಚ್ಚರಿ ಮಾಡು । ಬಸವಮಂತ್ರೀಶ † ॥ ೨೧ ॥
ಎಂದ ರಾಯನ ಮಾತಿ । ಗಂದು ಬಸವರಾಜ ।
ನೆಂದನು ಸತಿಯೊಳು । ಒಂದು ವಾಕ್ಯವನು ॥ ೨೨ ॥
ತಾಟಕಿ ನಿನ್ನಗಂಡ । ಬೇಟೆಗೆ ಹೋಗಿರ್ದು ।
ಪೇಟೆಯೊಳ್ಬರುತಾನೆ । ನೀಟಾಗಿ ನೋಡೆ ॥ ೨೩ ॥
ಬಸವನಾ ನುಡಿಗೇ । ಜಸದಿ ಆ ಸತಿ ಪೇಟೆ ।
ದೆಸೆಗೈದಿ ನೋಡಲು । ದಣಿದಾಗ ಅಲ್ಲಿ † ॥ ೨೪ ॥
ಮೊಲ ಬಲೆ ಒಡಿಕೋಲು । ನಲವಿಂದ ನಾಯಿ ಸಹ ।
ಘಳಿಲನೆ ಬಂದನು । ಗಮಕದಿಂ ಬೆಸ್ತ † ॥ ೨೫ ॥
ನೋಡಿದಳ್ಗಂಡನ । ಮಾಡಿದಳ್ಮನಹರುಷ ।
ಕೂಡೆ ಕರೆದು ಮನೆಗೆ । ಗಾಢದಿಂ ಪೋದಳ್ ॥ ೨೬ ॥
ಹೆಚ್ಚಿದ ಬಸವನ । ಮೆಚ್ಚಿದ ರಾಯನು ।
ಉತ್ಸಾಹಮಾಡಿದ ಹೆಚ್ಚಿನೋಲಗದಿ ॥ ೨೭ ॥
ಸಪ್ತಾಂಗವನು ಕೊಟ್ಟು । ಎತ್ತಿ ಮುದ್ದಾಡುತ್ತ ।
ಮತ್ತೆ ಕಳುಹಿದ ಬಸವ । ನರ್ಥಿಯಿಂ ಮನೆಗೆ ॥ ೨೮ ॥

---

† ಈ ಪದ್ಯಗಳು (ಅ, ಉ, ಒ, ಗ, ಚ, ಟ, ಬ.) ಪ್ರತಿಗಳಲ್ಲಿಲ್ಲ.

ಇತ್ತ ಬೆಸ್ತನ ಕರೆಸಿ । ಆ ಸ್ಥಾನದೊಳಗವನ ।
ಎತ್ತ ಪೋಗಿರ್ದೆ ಬೆಸ್ತ । ವಿಸ್ತರಿಸೆಂದ * ॥ ೨೯ ॥

ವಚನ ॥ ಇಂತೀ ರಾಯ ಕೇಳಲು, ಬೆಸ್ತ ಕೇಳಯ್ಯ ! ರಾಯನೆ ನಿನ್ನಪ್ಪಣೆಯಂತೆ ನಾನು ಪೋದೆನು, ಆ ಶರಣೆ ಕಂಡು ಮಣಿಯಲು, ನನ್ನ ಜಂಗಮ ರೂಪು ಶಿವಾಕಾರಮಾಗಿ ಪೋಗಲು ! ನಾನೆಂದಿನಂತೆ ನಿಂತೆನು ! ! ಅನಿತರೊಳು ನಮ್ಮ ಬೇಟೆಗಾರರು ಬರುತ್ತಿರೆ ಅವರಕೂಡಿ ಬೇಟೆಗೈದಿ ಬಂದೆನೆನಲು, ಆ ಸ್ಥಾನ ಬೆರಗಾಗಿ ಬಸವಣ್ಣನಂ ಸಾಕ್ಷಾತ್ಪರಶಿವನೆಂದು ನಿಶ್ಚೈಸಿ ಕೊಂಡಾಡುತಿರ್ದರದೆಂತೆನೆ.

**ಕಂದಪದ್ಯ.**

ಇಂದುಧರ ಬಸವರಾಜನು ।
ಬಂದಸು ಮಿಗೆ ನಕ್ಷತ್ರರೊಡೆಯ ಚಂದ್ರಮನೊಲ್ ॥
ಎಂದು ಧರಣಿಯ ಮನುಜರು ।
ಬಂದೆಲ್ಲರು ನಮಿಸಿ ಬಸವ ಸಲಹೆನುತಿರ್ದರ್ ॥ ೧ ॥

ವಚನ ॥ ಇಂತೀ ದಿನವೊಂದಕ್ಕೆ ನೂರು ಪವಾಡಗಳಂ ಮೆರೆಯುತ್ತಿರಲು, ಕೊಂಡೆಯರು ಹೇಳುವುದಕ್ಕೂ ಕಡೆಯಿಲ್ಲ, ಬಿಜ್ಜಳರಾಯ ಕೇಳುವುಕ್ಕೂ ಕಡೆಯಿಲ್ಲ, ಇದರೊಳಗೆ ಬಸವರಾಜ ಶಂಕೆಯಿಲ್ಲದಿರುತ್ತಿರಲು ಮುಂದೆ ಚೆನ್ನಬಸವಣ್ಣನವರ ಉದಯವೆಂತೆನೆ.

## ಶ್ರೀ ಚೆನ್ನಬಸವೇಶ್ವರನ ಉದಯ.

**ಜಂಪೆ.**

ಅರಮನೆಗೆ ತಾ ಹೋಗಿ । ದೊರೆಯೊಡನೆ ಮಾತಾಡಿ ।
ಬರುತ ಹೋಗುತ ನಿರುತ । ಲಿರುವ ಬಸವಣ್ಣ ॥ ೧ ॥

ಒಂದು ದಿನ ಓಲಗಕೆ । ಬಂದಿರಲು ಬಸವಯ್ಯ ।
ಅಂದು ಅರಸಗೆ ಚಾಡಿ । ಯೆಂದ ಮಂಚಣ್ಣ ॥ ೨ ॥

ಬಸವಂಗೆ ಎಣೆಯಿಲ್ಲ । ವಸುಧೆಯೊಳು ಮಹಕೀರ್ತಿ ।
ಎಸಗಿರ್ಪ ಮಹಿಮೆಯಲಿ । ಇಂದುಧರನಾಗಿ ॥ ೩ ॥

ಇವರಕ್ಕನಾಗಮ್ಮ । ಗಿನ್ನು ವಿವಾಹವದಿಲ್ಲ ।
ಭುವಿಯೊಳಪವಾದಕ್ಕೆ । ಒಳಗಾಗಿ ಇಹಳು ॥ ೪ ॥

* ಈ ಪದ್ಯ (ಅ, ಉ, ಒ, ಗ, ಜ, ಟ, ಬ.) ಪ್ರತಿಗಳಲ್ಲಿಲ್ಲ.

ಪುಂಡಜಂಗಮರೊಳು । ದ್ದಂಡತನದಿಂದಾಡಿ ।
ಬಂಡಸತಿಯರ ತೆರದಿ । ಬಸುರಾಗಿ ಇಹಳು ॥ ೫ ॥

ಪ್ರೊಡವಿಪತಿ ಕೇಳು ಬಸ । ವಯ್ಯನೊಡಹುಟ್ಟ ಹೊಲೆ ।
ತಡೆದು ಗರ್ಭಿಣಿಯಾಗಿ । ಮಡಗಿಕೊಂಡಿಹಳು ॥ ೬ ॥

ಪತಿಯಿಲ್ಲದಿರುತಿರ್ಪ । ಭಕ್ತೆ ಶರಣೆಯರಂತೆ ।
ಕ್ಷಿತಿಯಲೀ ಹೊಲೆನಡತೆ । ಸತಿಯರೊಳಗುಂಟೆ ॥ ೭ ॥

ಪ್ರೊಡವೀಶ ನಾ ಕೊಂಡೆ । ನುಡಿಗೇಳಿ ಬಸವ ನಿ ।
ನ್ನೊಡಹುಟ್ಟಿದಳು ಗರ್ಭ । ತಡೆದು ಇಹಳಂತೆ ॥ ೮ ॥

ಏನಯ್ಯ ನಿಮ್ಮನಡೆ । ಹೀನವಾಗಿದೆ ನೋಡೆ ।
ಜ್ಞಾನಿಗಳು ಶಿವನ ಸಂ । ಧಾನಿಯೆಂಬಿರನೆ * ॥ ೯ ॥

ಅರಸೆ ಕೇಳೀಮಾತು । ಪರಿಕಿಪಡೆ ಅಕ್ಕನನು ।
ಕರೆಸುವೆನು ನುಡಿಯ ಸ । ತ್ಕರಿಸಿ ಕೇ [1] ಳ್ಳೀನು [1] ॥ ೧೦ ॥

ನಿನಗೆ ಬಂದಪವಾದ । ನನಗೆಂದು ಭಾವಿಸಿಹೆ ।
ಅನುಮಾನ ಜೇಡಿಲ್ಲಿ । ಗೈದಿಸಿಯೆ ಕೇಳು * ॥ ೧೧ ॥

ಎಂತೆನಲು ನಾಗಮ್ಮ । ನಂತರಂಗಕೆ ಕರೆಸಿ ।
ಮುಂತೆ ಜನಸಿಕೆ ಮರೆಯೊ । ಳ್ಳಿಂತು ಕೇಳಿದನು ॥ ೧೨ ॥

ಏನಮ್ಮ ಗರ್ಭ ಸೂ । ಚನೆಯಂತೆ ನಿನ್ನಂಥ ।
ಜ್ಞಾನಿಗೆ ಇಂತು ಅ । ಜ್ಞಾನ ಪುಟ್ಟಿಹುದು ॥ ೧೩ ॥

ಮೌನದಾ ಜಪತಪ ಸಂ । ಧಾನಿಯೆ ನಿನಗೀಗ ।
ಮಾನವರಪೇಕ್ಷೆಯೆ । ಏನು ಪೇಳಮ್ಮ ॥ ೧೪ ॥

ಎಂದ ರಾಯನ ಮಾತ । ಚಂದದಿಂದಲಿ ಕೇಳಿ ।
ಸ್ಕಂದನಾ ಗರ್ಭದೊಳು । ಎಂದ ವಾಕ್ಯವನು ॥ ೧೫ ॥

ವಚನ ॥ ಇಂತೀರಾಯನ ಮಾತಿಗೆ, ಗರ್ಭದೊಳಗಣ ಮಹಾ ಶಿಶುವು ಏನನ್ನುತಿರ್ದುದು.

---

* ಈ ಪದ್ಯಗಳು (ಅ, ಎ, ಒ, ಗ, ಚ, ಜ, ಟ, ಬ.) ಪ್ರತಿಗಳಲ್ಲಿಲ್ಲ.

.-1 ಳುವುದು (ಇ, ಒ, ಜ.)

**ಏಕತಾಳ.**

ಪರವಾದಿಗಳ ಗಂಡ । ಧರೆಯ ದೂಷಕರ ಮಿಂಡ ।
ಬರುತೇನೆ ಚೆ[1] ನ್ನನು[1] । ಧುರಧೀರ ಬಸವ ॥ ೧ ॥
ಹಾಸ್ಯದ ಜನರನ್ನು । ಮಿಾಸೆಯ ಕೀಳಲು ।
ರೋಷದಿಂ ಬರುತಿಹೆ । ಈಶಕುಮಾರ ॥ ೨ ॥
ಕಕ್ಕಯ್ಯಗಳ ಶೇಷ । ಮುಕ್ಕಣ್ಣನ ಪ್ರಸಾದ ।
ಅಕ್ಕರಿಂ ಕೊಳ್ಳಲಾದೆ । ಗಕ್ಕನೆ ನಾನು ॥ ೩ ॥
ಪಾರ್ವತಿವರಕಳೆ । ಯುರ್ವಿಯೊಳ್ನಾಗಮ್ಮ
ಊರನಾರಿಯರಂತೆ । ದೂರುಮಾಡುವರೆ ॥ ೪ ॥
ಎಂದಬಾಲನ ನುಡಿಗೆ । ಮಂದೆಲ್ಲ ಬೆರಗಾಗಿ ।
ಇಂದುಧರನೆ ಬಲ್ಲ । ನೆಂದೆನುತಿಹರು ॥ ೫ ॥
ನುಡಿದಾ ಶಿಶುವಾಕ್ಯಕ್ಕೆ । ಪೊಡವೀಶ ಬೆರಗಾಗಿ ।
ಒಡನೆ ವಿಸ್ಮಯಬಟ್ಟು । ನುಡಿದನಿಂತೆಂದು ॥ ೬ ॥
ಕೆಂಡಕ್ಕೆ ನೊಣ ಮುತ್ತು । ವದೆ ಶಿವಸಮಯದ ।
ಪಿಂಡವ ನೋಡೆಂದು । ಮಂಡೆದೂಗುತಲಿ ॥ ೭ ॥
ದಿವ್ಯ ದುಕೂಲ ವಸ್ತು । ದಿವ್ಯಾಭರಣವನಿತ್ತು ।
ದೇವಿ ನೀ ನಡೆಯೆಂದ । ನಾಗಮ್ಮನನ್ನು ॥ ೮ ॥
ನಡೆಯೆ ಮನೆಗೆ ಅಂದು । ಮೃಡನ ಕುಮಾರನು ।
ಕಡುವೇಗ[2] ಅಂಗದಿಂ[2] । ಒಡೆದು ಹುಟ್ಟಿದನು ॥ ೯ ॥
ಹಿಂಗದೆ ಕೂಡಲ । ಸಂಗಮೇಶ್ವರ ಬಂದು ।
ಮಂಗಳಾತ್ಮಕ ಲಿಂಗ । ವಂಗಕ್ಕೆ ಧರಿಸಿ ॥ ೧೦ ॥
ಮೋಕ್ಷದಾಯಕನೆಂದು । ದೀಕ್ಷೆಯ ಪಾಲಿಸಿ ।
ಇಕ್ಕಿ ಚೆನ್ನಬಸವನೆಂ । ಬ[3] ಕ್ಕರದ ಪೆಸರ[3] ॥ ೧೧ ॥
ಉಸುರಿ ಮಂತ್ರದ ಗುಟ್ಟು । ಭಸಿತವ ಪಣೆಗಿಟ್ಟು ।
ಶಶಿಧರ ಪೋದ ತನ್ನ । ಪೆಸರಾದ ಸ್ಥಲಕೆ ॥ ೧೨ ॥

ವಚನ ॥ ಅತ್ತ ಸಂಗಮೇಶ್ವರ ಪೋಗಲು ಇತ್ತ ಚೆನ್ನಬಸವಣ್ಣ ದಿನದಿನಕ್ಕೆ ದೊಡ್ಡವನಾಗಿ ತನ್ನೊಡನೆ ಹನ್ನೆರಡುಸಾವಿರ ವೀರಮಾಹೇಶ್ವರರ ಆರಾಧನೆಯಂ ನಡೆಸುತ್ತ, ಬಸವರಾಜದೇವರು ಮೊದಲಾದ ಅಸಂಖ್ಯಾತ ಮಹಾ ಪುರಾತರ ಸಭಾ ಮಧ್ಯದಲ್ಲೊಪ್ಪುತ್ತಿರಲು, ಇತ್ತ ಬಸವೇಶ್ವರನ ಮಹಿಮೆಯೆಂತೆನೆ,

---

1-1 ನ್ನಣ್ಣ ( ಒ, ಜ, ) 2-2 ಬೆನ್ನೊಳು ( ಇ. )
3-3 ನಾಮವನು । ( ಇ, ಒ, ಗ, ಚ, ತ, )

# ವೃದ್ಧ ಜಂಗಮಕ್ಕೆ ಪಣೆಗಣ್ಣನಿತ್ತ ಪವಾಡ.

**ಜಂಪೆ.**

ಎಳೆವರೆಯನಾ ಪ್ರೀಯ । ಅಳಿಯನಣುಗನ [1]ಮಾವನ್ [1] ।
ಚೆಲುವ ಭಕ್ತಿಗೆ ಒಲಿದು । ತಲೆಬಾಗಿಲ್ಕಾಯ್ದ ॥ ೧ ॥
ಗಿರಿಜೆಯರಸನ ಸುಮ್ಮದು ।ಚರಣಕೆರಗಿ ಬಸವನ ।
ವರಭಕ್ತಿ ಮಹಿಮೆಯನು । ವಿರಚಿಪೆನು ಮುದದಿ ॥ ೨ ॥
ದ್ವಿತಿಯ ಶಂಭುವು ಎಂಬ । ಅತಿಶಯದ ನಾಮವನು ।
ಶಿತಿಕಂಠನನುಗ್ರಹದಿ । ಪಡೆದು ಬಂದಿಹನು ॥ ೩ ॥
ಕಲ್ಯಾಣ ಪುರದೊಡೆಯ । ಕೈಲಾಸಪತಿ ಬಸವ ।
ನುಲ್ಲಸದ ನಿಜಭಕ್ತಿ । ಯೆಲ್ಲ ಶೋಧಿಸಲು ॥ ೪ ॥
ಸೌರಾಷ್ಟ್ರ ಸೋಮೇಶ । ಸನ್ನಿಧಿಯಿಂ ಬಂದಂತೆ ।
ಸಂಜ್ಞೆಯಿಂದಲಿ ವೃದ್ಧ । ಜಂಗಮನಂತೆ ॥ ೫ ॥
ಕೋಲನೂರಿಯೆಕೊಳುತ । ಕಳವಳದಿ ನಡುಗುತ್ತ ।
ಭಾಳಾಕ್ಷ ತಾ ಬಂದ । ಬಸವನರಮನೆಗೆ ॥ ೬ ॥
ವೃದ್ಧಮೂರ್ತಿಯ ಬರವ । ನಿರ್ಧರದಿ ತಾ ತಿಳಿದು
ಶ್ರದ್ಧಾಭಕ್ತಿಯೊಳವರ । ಸತ್ಕಾರಗೈದು ॥ ೭ ॥
ಸತಿಯರೀರ್ವರು ಬಸವ ।ಚೆನ್ನಬಸವನು ಸಹಿತ ।
ಹಿತ ಭಕ್ತಿಯೊಳು ಶಿವ । ಪೂಜೆಯರ್ಪಣದಿ ॥ ೮ ॥
ಮಣಿಮಂಚದೊಳು ಶಿವನ । ಮೂರ್ತಿಸಿಯೆ ಪಾದವೊತ್ತಿ ।
ದಣಿದಿರ್ಕೈ ಗುರುವರನೆ । ಬಂದುದೆಲ್ಲಿಂದ ॥ ೯ ॥

ವಚನ ॥ ಹೇ ಗುರು ಮೂರ್ತಿ ! ಇಲ್ಲಿಗೆ ಕಿಂಕರನ ಮೇಲೆ ದಯವಿಟ್ಟು ಬರೆ ನಾನು ಧನ್ಯನಾದೆನೆಂದು, ಸತ್ಕರಿಸಿದ ಬಸವನಿಗೆ, ಎಲೆ ಭಕ್ತಚಿಂತಾಮಣಿಯೆ ! ಜಂಗಮರ ಪ್ರಾಣಾಪ್ತನೆಂದು, ಜಂಗಮರ ಲಿಂಗದಿಷ್ಟಮಂ ಕೊಡುತ್ತಾನೆಂದು ಜಗತ್ಪ್ರಸಿದ್ಧಿಯಾಗಿದೆ. ಆದ್ದರಿಂದ ನಮ್ಮ ಲಿಂಗದಿಚ್ಛೆಯಂ ಬೇಡಿಕೊಳ್ಳುವಯೆಂದು, ಬಂದೆನಯ್ಯ ಎಂದ ಮೂರ್ತಿಗೆ ಬಸವರಾಜ ನಿಂತೆಂದಂ.

**ಕಂದಪದ್ಯ.**

ಗುರುವೇ ನಿಮ್ಮಯ ಇಚ್ಛೆಯ ।
ಭರದಿಂದೀಯಲ್ ಶಕ್ತನೆ ಗುರು ತಾ ನೀವಂ ॥
ಹರುಷದಿ ನೀಂ ಪೇಳದನೆನೆ ।
ಅರಸಿದಭೀಷ್ಟವ ಬಸವಗೆ ಜಂಗಮನುಸಿರ್ದಂ ॥ ೧ ॥

---

1-1 ಪೂರ್ವ (ಗ, ಜ.)

**ತ್ಯಾಗವೂನ – ಅಟತಾಳ.**

ಮಗನೆ ನೀ ಕೇಳೆನ್ನ ಸ್ಥಿತಿಯ ಬಸವ – ಯ್ಯ – ನಾನು –
ಜಗದಿ ಭಕ್ತರಂಗಳಕ್ಕೈವೆ ಬಸವ – ಯ್ಯ ॥ ೧ ॥

ಕೋಲನೂರಿಯೆ ಮೆಲ್ಲನೆ ಪೋಪೆ ಬಸವ – ಯ್ಯ – ಎನಗೆ –
ಆಲಿದೃಷ್ಟಿ ಮಂದ ಮಗನೆ ಬಸವ – ಯ್ಯ ॥ ೨ ॥

ಭಕ್ತರ ಮನವು ಕರಗಿಯೆನ್ನ ಬಸವ – ಯ್ಯ – ಅನ್ನ–
ವಿತ್ತರೆ ಕ್ಷುಧೆಯ ತಂಪಿಸಿಕೊಂಬೆ ಬಸವ – ಯ್ಯ ॥ ೩ ॥

ರಾತ್ರಿವೇಳೆ ಪೋಗಲಾರೆ ಬಸವ – ಯ್ಯ – ನಾನು –
ಧಾತ್ರಿಯಲ್ಲಿ ಹಸಿದುಬೀಳ್ವೆ ಬಸವ – ಯ್ಯ ॥ ೪ ॥

ನಿನ್ನ ಕರುಣ ಧರ್ಮದಿಂದ ಬಸವ – ಯ್ಯ – ನೊಸಲ –
ಕಣ್ಣನೀಯಾ ಬೆಳಕಿನೊಳು ಬಸವ – ಯ್ಯ ॥ ೫ ॥

ಹಗಲು ರಾತ್ರಿ ಭಕ್ತರಗೃಹದಿ ಬಸವ – ಯ್ಯ – ಪೋಗಿ –
ಸೊಗಸಿನಿಂದ ತೃಪ್ತಿಸಿ ಬರುವೆ ಬಸವ – ಯ್ಯ ॥ ೬ ॥

ಇರುವೆ ಭೋಗ ತೀರುವತನಕ ಬಸವ – ಯ್ಯ – ನಿನಗೆ –
ಬರುವುದು ಬಹುಧರ್ಮದ ಫಲವು ಬಸವ – ಯ್ಯ ॥ ೭ ॥

ದ್ವಿತಿಯಶಂಭು ಅಹುದಾದರೆ ಬಸವ – ಯ್ಯ – ಈ –
ಕ್ಷಿತಿಯೊಳ್ ಖ್ಯಾತಿ ಪಡೆಯೊ ನೀನು ಬಸವ – ಯ್ಯ ॥ ೮ ॥

ಪರಮ ಕರುಣಾಸಿಂಧು ನೀನು ಬಸವ – ಯ್ಯ – ಬೇಗ –
ಶರಣ ಪಾಲಿಸು ನೊಸಲಗಣ್ಣ ಬಸವ – ಯ್ಯ ॥ ೯ ॥

ವಚನ ॥ ಇಂತೆಂದು ಕೇಳ್ದ ವೃದ್ಧ ಜಂಗಮ ಮೂರ್ತಿಗೆ, ಬಸವಯ್ಯ ತನ್ನ ಗುರು ಸಂಗಮನಧ್ಯಾನದಿಂ, ಜ್ಞಾನಪರುಷದ ಜ್ಞಾನಕನ್ನಡಿಯಂ, ತನ್ನ ಹಸ್ತದಿಂದ ಮೂರ್ತಿಗೆ ತೋರುವ ಭಾವಮದೆಂತೆನೆ.

**ತ್ರಿವುಡೆ.**

ಗುರುವೆ ಜಂಗಮಮೂರ್ತಿ ಮೊದಲೆಯ । ಇರುತಿಹುದು ನಿಮಗಿನ್ನು ಸಂಗಮೇ ।
ಶ್ವರನು ಕೊಟ್ಟಹ ನೊಸಲಗಣ್ಣನು – ಸೊಗಸಿನಿಂದ ॥ ೧ ॥
ಪರಮಗುರು ನಿಮ್ಮ ಚರಣರೇಣುಗೆ । ಸರಿಯುಬಹೆನೆ ಪಣೆಗಣ್ಣಂ ।
ಭರದಿ ನಾ ಕೊಡೆ ಶಕ್ತನೆ ಕೇಳ್ – ಪರಮಗುರುವೆ ॥ ೨ ॥

ನೋಡಿ ನಿಮಗಿಹ ಪಸೆಗಸ್ಕ್ಣನುತಲಿ । ನೀಡಿ ತನ್ನೆಯ ಹಸ್ತಕನ್ನಡಿ ।
ಗಾಢಿಕಾರಗೆ ತೋರಲಾಕ್ಷಣ – ಮೂಡಿ ನೊಸಲ್ಗಣ್ಣು ॥ ೩ ॥
ಥಳಥಳಿಪ ಕೆಂಡವನು ಏಳಿಪ । ಅಳಿಕನೇತ್ರವು ರಂಜಿಸಲ್ಕಿಗೆ ।
ಒಲಿದು ಹಿಗ್ಗಿದ ವೃದ್ಧಜಂಗಮ – ಅಹುದು ದ್ವಿತಿಶಂಭು ॥ ೪ ॥
ನಾಮವಾಂತುದು ನಿನಗೆದಕ್ಕಿತು । ನಾಗಭೂಷಣ ಮೆಚ್ಚಿದ ।
ಪ್ರೇಮಿ ಬಸವನನಪ್ಪಿ ಮುಂಡಾ – ಡಿದನು ಮೂರುತಿಯು ॥ ೫ ॥
ಶರಣರೆಲ್ಲರು ಮೆಚ್ಚಿ ಹರುಷದಿ । ವೆರಸಿಕೊಂಡಾಡಿದರು ಬಸವನ ।
ಹರನ ಪಂಥವಗೆಲಿದು ಪ್ರಮಥರ – ಮುಕುರ ತಾನಾದ ॥ ೬ ॥
ಜಯತು ಸದ್ಧರ್ಮರೂಪ ಬಸವನೆ । ಜಯತು ದುರಿತವಿದೂರನೆ ।
ಜಯತು ಪರಮೇಶ್ವರನ ಮೆಚ್ಚಿಗ – ಜಯತು ಮಾಂ ಪಾಹಿ ॥ ೭ ॥
ಬಸವರಾಜನ ಮಹಿಮೆ ವಾರ್ತೆಯ । ವಸುಧೆಪತಿ ಬಿಜ್ಜಳನ ರಾಣಿಯರ್ ।
ಒಸೆದು ಕೇಳುತ ಸಂದರುಶನವ – ಮಾಡೆ ಮನವೊಲಿದು ॥ ೮ ॥
ದಿನಚರಿಯು ಕಾಂತನನು ಬಹಳ ಸು । ವಿನಯದಿಂ ಮಂತ್ರೀಶನ ದರು ।
ಶನವಗಾಣಿಸಿ ಎಂದು ಕೇಳಲು – ಜನಪನಿಂತೆಂದ ॥ ೯ ॥
ಸುಮ್ಮನಿಲ್ಲಿಗೆ ಬಾರನಾತನು । ಗಮ್ಮನೆಯೆ ನಾಂ ಠಕ್ಕಿನಿಂತಹೆ ।
ಒಮ್ಮೆ ದರುಶನ ನೀವು ಮಾಡುವಿ – ರೆಂದನಾ ರಾಯ ॥ ೧೦ ॥

ವಚನ ॥ ಮತ್ತಂತುಗ್ಯೆದನದೆಂತೆನೆ.

## ಬಿಜ್ಜಳನಸತಿಯುರನ್ನು ಜಂಗಮರ ಮಾಡಿದ ಪವಾಡ.

**ಯಾಲಪದ.**

ಒಂದುದಿನ ಬಸವರಾಜ । ಬಂದು ಓಲಗದೊಳಿರಲು ।
ಒಂದು ಕೌತುಕವನೆ ಹಣ್ಣಿ – ದ – ಬಿಜ್ಜಳರಾ – ಯ –
ಇಂದುಧರನು ತಾನೇ ಬಲ್ಲನು ॥ ೧ ॥

ತನ್ನ ಸತಿಯರೇಳ್ನೂರನ್ನು । ಮನ್ನಿಸಿ ಪೇಳ್ದ [1] ನೆಲ್ಲ [1] ರಿಗೆ ।
ಚೆನ್ನಜಂಗಮರೂಪ ಮಾಡಿ – ದ – ಬಿಜ್ಜಳರಾ – ಯ –
ಖುಲ್ಲತನದ ಕುಹಕ ಬುದ್ಧಿಯಲಿ * ॥ ೨ ॥

ಬಸವ ಕರೆಯೆ ಹೋಗಬೇಡಿ । ಗಸಣೆಬೇಡ ತೆರಳೆಂದೆನುತ ।
ಶಶಿಧರನ ಧ್ಯಾನ ಜಪಮಾ – ಲೆ – ಕೈಯಲ್ಲಿ ಪಿಡಿ – ದು –
ಸಸಿನೆ ಪಠಿಸಿ ಮುಖ ನೋಡದಿರಿ ನೀವು * ॥ ೩ ॥

---

1-1 ನವ (ಒ.)* ಈ ಪದ್ಯಗಳು (ಅ, ಉ, ಎ, ಗ, ಚ, ಜ, ಟ, ಬ.) ಪ್ರತಿಗಳಲ್ಲಿಲ್ಲ.

ಇಂತೆಂದೆಲ್ಲವನ್ನು ಪೇಳಿ । ಮುಂತೆ ಬಿಜ್ಜಳರಾಯ ತಾನು ।
ಕಂತುಹರನ ಭಕ್ತ ಬಸವ – ನ – ಶೋಧಿಸಿ ನೋಡ – ಲ್—
ಇಂತು ಕುಟಿಲವನ್ನು ಹಣ್ಣಿಯೆ * ॥ ४ ॥

ಲಾಗು ವೇಗದೊಳಗೆ ತನ್ನ । ಸ್ತ್ರೀಗಣ ಸಮೂಹವನ್ನ ।
ಅಘಹರನರೂಪ ಮಾಡಿ – ಯೆ – ಬಿಜ್ಜಳರಾ – ಯ—
ನಗುತ ಬಂದು ಬಸವಂಗುಸುರಿದ ॥ ೫ ॥

ದಂಡನಾಯಕ ಬಸವ ಕೇಳು । ಪುಂಡಜಂಗಮರೆಲ್ಲ ನಮ್ಮ ।
ಹೆಂಡಿರಿರುವ ಮನೆಯೊಳ್ಳೈದಾ – ರೆ – ಬಸವಯ್ಯ ಕೇ – ಳು—
ದ್ದಂಡರೀತಿ ನಿಮಗೆ ಸರಿಯೇನೈ ॥ ೬ ॥

ಕಂತುಹರನ ಶರಣರು ನಿ । ಮ್ಮಂತಃಪುರಕೆ ಬರುವರೇನೈ ।
ಪಂಥವುಳ್ಳಾ ಪರಮ ಹಿರಿಯ – ರು – ಬಿಜ್ಜಳ ಕೇ – ಳು—
ಇಂಥ ಪುಸಿಯನಾಡುವರೆ ನೀನು ॥ ೭ ॥

ಇಂದೀ ಮಾತು ಹುಸಿಯಲ್ಲವಯ್ಯ । ಬಂದು ನೋಡರಮನೆಯೊಳು ಗಣ ।
ಸಂದುಗೊಡದೆ ತುಂಬಿ ಇಹರೆ – ಲ್ಲ –ಪರಮಾತ್ಮನೆ ಬ – ಲ್ಲ—
ಎಂದು ರಾಯ ಬಸವಗುಸುರಿದ ॥ ೮ ॥

ಆಡಿದಂಥಾ ಅರಸನ ನುಡಿಗೆ । [1] ಕೂಡೆ ನಡೆದ [1] ಬಸವರಾಜ ।
ನೋಡಬೇಕು ಇವನ ಕುಟಿಲ – ವ – ಭುವನಕಚ್ಚರಿ – ಯ—
ಮಾಡಬೇಕು ಎಂದ ಬಸವಯ್ಯ ॥ ೯ ॥

ಬಂದರು ನಿಯೋಗಿಗಳೆಲ್ಲ । ಒಂದಾಗಿ ಬಸವಯ್ಯನೊಡನೆ ।
ನಿಂದರು ಬಂದಂಥ ಸ್ಥಳದ – ಲ್ಲಿ – ಬಸವ ಬಿಜ್ಜ – ಳ—
ರೊಂದಾಗಿ ಪೊಕ್ಕರು ಅರಮನೆಯ ॥ ೧೦ ॥

ಸತಿಯರ ಸಂದೋಹ ಶಿವನ । ಅತಿಶಯ ರೂಪಾಂತಂಥ ।
ಕೃತಕವ ಬಸವಯ್ಯ ನೋಡಿ – ದ – ಪರುಷದೃಷ್ಟಿಯ – ಲಿ—
ಶಿತಿಕಂಠ ಶರಣರನೇ ಮಾಡಿದ ॥ ೧೧ ॥

ಕರವ ಮುಗಿದು ಸ್ವಾಮಿಗಳಿರ । ಬರಬಹುದೆ ಈ ಪ್ರಾಸಾದಕ್ಕೆ ।
ಇರಲುಬೇಡಿ ಬನ್ನಿ ಪೋಗು – ವ – ಎಂದು ಕರೆಯ – ಲು—
ತ್ವರಿತದಿಂದಲೆದ್ದರೇನೆಂಬೆ ॥ ೧೨ ॥

* ಈ ಪದ್ಯ (ಅ, ಉ, ಎ, ಗ, ಚ, ಜ, ಟ, ಬ.) ಪ್ರತಿಗಳಲ್ಲಿಲ್ಲ. 1-1 ಗಾಢಯುದ್ದ (ಖ, ತ.)

ಕುಸುಮಗಂಧಿ ಪೆಣ್ಗಳೆಲ್ಲ । ಶಶಿಧರನ ರೂಪನೆ ತಾಳಿ ।
ಬಸವರಾಜನ ಹಿಂದೆ ನಡೆಯ – ಲು – ರಾಯ ಕಂಗೆ – ಟ್ಟು—
ಬಸವೇಶನಂಘ್ರಿಗೆರಗುತ್ತ ॥ ೧೩ ॥

ಸತಿಯು ಸುತರು ಸಕಲಭಂಡಾರ । ಪತಿಶಯದ ರಾಜ್ಯವಿದೆಲ್ಲ ।
ಶಿತಿಕಂಠ ಶರಣಬಸವ – ಯ್ಯ – ನಿನ್ನದಲ್ಲ – ವೆ—
ಪ್ರತಿ ಪಾಲಿಸೆನ್ನಪ[1] ರಾ[1] ಧವೆನೆ ॥ ೧೪ ॥

ಪೊಡವಿಗೊಡೆಯನ ದೈನ್ಯ[2] ವ ನೋಡಿ[2] । ನುಡಿದ ಸಂಗನಬಸವ ನಿನ್ನ ।
ಮಡದಿಯರು ನಿನ್ನರಮನೆಯೊ – ಳು – ಐದಾರೆ[3] ಕೇ – ಳು[3]—
ಕಡುದುಃಖ[4] ಬೇಡ ನೋಡೇಳು[4] ॥ ೧೫ ॥

ಎಂದ ಬಸವಯ್ಯನ ನುಡಿಗೆ । ಬಂದು ತಾನಾಗರಮನೆಯೊಳು ।
ಮುಂದೆ ಇರ್ದ ಸತಿಯರನು ಕಂ – ಡು – ಬಿಜ್ಜಳರಾ – ಯ—
ಅಂದು ಚೋದ್ಯಗೊಂಡ ಮನದೊಳು ॥ ೧೬ ॥

ಸತ್ಯಲೋಕದೊಳಗೆ ಬ್ರಹ್ಮ । ಉತ್ಪತ್ತಿಯನುಗೈವನೆಂಬರ್ ।
ಪೃಥ್ವಿಯೊಳಗೂ ಬ್ರಹ್ಮ ಬಸವ – ಯ್ಯ – ನಿರ್ಮಿತಗೈ – ದ—
ಅತಿಶಯದೇಳ್ನೂರು ಜಂಗಮರ * ॥ ೧೭ ॥

ಪರಮ ಶಿವನೊಂದು ಕಾರಣದಿಂ । ಧರೆಗಿಳಿದು ಬಂದನಲ್ಲದಲೆ ।
ನರನೆ ಅಲ್ಲ ಪುರುಷಪುಂಗ – ವ – ಈ ಮಹಿಮನಿರ – ವ—
ಪರಿಕಿಪರಾರೆಂದ ರಾಯನು ॥ ೧೮ ॥

ಬಂದಿರ್ದ ನಿಯೋಗಿಗಳೆಲ್ಲ । ಅಂದು ಬಸವಯ್ಯನ ನೋಡಿ ।
ಇಂದುಧರನೇ ಈತ ನರನ – ಲ್ಲ – ಸಿದ್ಧವಿದೆ – ಲ್ಲ—
ಎಂದು ವಿಸ್ಮಿತರಾಗಿ ಮುಂದೆಲ್ಲ ॥ ೧೯ ॥

ಶರಣು ಶರಣು ಬಸವರಾಜ । ಶರಣು ಶರಣು ದಿವಿಜಭೋಜ ।
ಶರಣು ಶರಣು ಭಕ್ತ ಸುರಭೂ – ಜ – ಹೇ ಬಸವರಾ – ಜ—
ಶರಣೆಂದು ನಮಿಸಿದರವರೆಲ್ಲ † ॥ ೨೦ ॥

ವಚನ ॥ ಇಂತೀ ಸಕಲರೂ ಬಸವಯ್ಯನಂ ಸ್ತುತಿಮಾಡುತ್ತಿರಲು, ಬಿಜ್ಜಳರಾಯಂ ಬಂದು ಬಸವೇಶ್ವರದೇವರ ಪಾದದ್ವಯಮಂ ಸುವರ್ಣರಜತ ಮೊದಲಾದ

---

1–1 ವಾ (ಬ,) 2-2 ಕ್ಕೆ (ಇ, ಒ, ಜ, ಡ, ತ.) 3-3 ನೋಡು (ಇ, ಒ, ಟ, ಡ.) 4-4 ವೇತಕೆ ನಡೆಯೆಂವ । (ಒ, ಡ, ತ.) * ಈ ಪದ್ಯ (ಅ, ಉ, ಎ, ಒ, ಗ, ಚ, ಜ, ಬ.) ಪ್ರತಿಗಳಲ್ಲಿಲ್ಲ. † ಈ ಪದ್ಯ (ಇ, ಎ, ಒ, ಗ, ಜ, ಬ.) ಪ್ರತಿಗಳಲ್ಲಿಲ್ಲ.

ದಿವ್ಯಮಾಲ್ಯ ಪುಷ್ಪಂಗಳಿಂದರ್ಚಿಸಿ, ಕರಗಳಂಮುಗಿದು ಮನೆಗೆ ಕಳುಹಲು, ಸಕಲ ಗಣಂಗಳ ಸಭಾಮಧ್ಯದಲ್ಲೊಪ್ಪುತ್ತಿರುವ ಸಮಯದಲ್ಲಿ, ಪ್ರಭುದೇವರು ಸಿದ್ಧರಾಮಯ್ಯದೇವರು ಬಂದರದೆಂತೆನೆ.

## ಪ್ರಭು ಸಿದ್ಧರಾಮಯ್ಯಗಳು ಬಂದ ಠಾವು.

**ತ್ರಿವುಡೆ.**

ಎಸೆವ ರುದ್ರಾಕ್ಷಿಯ ಕಿರೀಟದ । ಭಸಿತ ಚಂದ್ರನ ರೇಖೆ ಪಣೆಯೊಳು ।
ಕುಸುಮಬಾಣನ ವೈರಿರೂಪಿನ – ಕುಶಲ ಕೋವಿದರು ॥ ೧ ॥
ಉರದ ರುದ್ರಾಕ್ಷಿಗಳ ಮಧ್ಯದ । ತರತರದ ಮೌಕ್ತಿಕದ ಹಾರದ ।
ಮೆರೆವ ಚಿಮ್ಮುರಿ ತೋಳಾಧಾರವು – ಪೊಳೆವ ಹಾವುಗೆಯು ॥ ೨ ॥
ಎಳೆಯಗಾವಿಯ[1] ಶಾಲು ತಗಡಿನ[1] । ಪೊಳೆವ ದಿವ್ಯಾಂಬರವ ಧರಿಸಿಯೆ ।
ಕಳೆಯ ಚಂದ್ರನಪೋಲ್ವ ರೂಪಿಲಿ – ಇಳೆಗೆ ಪೊಸತೆನಿಸಿ ॥ ೩ ॥
ತರಣಿಕಿರಣದ ಉರವಣೆಯ ಮೇ । ಲ್ಗರೆಯದಂದದಿ ಪಕ್ಷಿನಿಚಯವು ।
ನೆರಳ ಹಿಡಿದೈದಿದವು ಅಂಬರ – ಸರಿಸ ಮಾರ್ಗದಲಿ ॥ ೪ ॥
ಅಂತು ಮೆಲ್ಲಡಿಯಿಡುತ ನಡೆಯುತ । ನಿಂತು ನೋಡುತ ನಾಲ್ಕುದೆಸೆಯನು ।
ಸಂತತವು ಬಸವಯ್ಯ ಮಾಳ್ಪ ಸೌ – ರಣೆಯ ನೋಡುತಲಿ ॥ ೫ ॥
ಕೆರೆಯು ಕಾಲುವೆ ತೋಟ ವನಗಳು । ಅರವಟಿಗೆ ಅನ್ನ ಛತ್ರ ಮಂಟಪ ।
ತರತರದ ಮಠಮಾನ್ಯ ಕ್ಷೇತ್ರಗ – ಳಿರದೆ ನೋಡುತಲಿ ॥ ೬ ॥
ನೋಡಿದೆಯ ರಾಮಯ್ಯ ಬಸವನ । ಗಾಢತರದತಿ ಭಕ್ತಿಮಹಿಮೆಯ ।
ರೂಢಿಗೀಶ್ವರ ಬಿಟ್ಟು ಕೈಲಾ – ಸವನು ಇಲ್ಲಿಹನು ॥ ೭ ॥
ಮಾಡಬೇಕೀತೆರದ ಭಕ್ತಿಯ । ಕೂಡಬೇಕು ಶಿವನ ಸಂಗಡ ।
ಆಡಬಹುದತಿ ಮಾ[2] ತು[2] ಭಕ್ತಿಯ – ಮಾಡುವದು ಕಷ್ಟ ॥ ೮ ॥
ಎಂದು ಪ್ರಭುವಾಡಿದ ಸುವಾಕ್ಯಕೆ । ಮುಂದೆ ನುಡಿದನು ಸಿದ್ಧರಾಮನು ।
ತಂದೆನೀವೇ ಬಲ್ಲಿರಲ್ಲದೆ – ನನಗೆ ತಿಳಿವಹುದೆ ॥ ೯ ॥
ತಾವು ತಮ್ಮೊಳು ಮಾತನಾಡುತ । ದೇವಬಸವನ ಮಹಿಮೆ ಪೊಗಳುತ ।
ತಾವು[3] ಬೇ[3] ಗದಿ ಪೊಕ್ಕರಾ ಕ – ಲ್ಯಾಣಪಟ್ಟಣವ ॥ ೧೦ ॥
ಚಂದಚಂದದ ಮಳಿಗೆ ಮಂಟಪ । ಇಂದುಧರ ನಿಳಯಗಳು ಗೋಪುರ ।
ಅಂಗಳವ ನೋಡುತ್ತ ಬಂದರು – ಬಸವನರಮನೆಗೆ ॥ ೧೧ ॥

ವಚನ ॥ ಇಂತೆಂದು ಇಂದುಧರ ರೂಪಿನ ಜಂಗಮರಂ ಕಂಡು, ಅಪ್ಪಣ್ಣಗಳು

---

1-1 ಚೆಲುವ ಪೊದಿಕೆಯ । (ಜ.) 2-2 ತೃ (ಅ, ಬ.)
3-3 ವೇ (ಇ, ಒ, ಟ, ಡ, ತ.)

ಬಸವಣ್ಣನ ಕೂಡೆ ಪೇಳಲು, ಬಸವಣ್ಣ ಕರೆತನ್ನಿರೆಂದು ಅಪ್ಪಣ್ಣಂಗೆ ನೇಮಿಸಲು, ಅಪ್ಪಣ್ಣ ಬಂದು ಪ್ರಭುವಿಗೆ ಬಿನ್ನಹವಂ ಮಾಡಿ ಕರೆಯಲು ಪ್ರಭುಸ್ವಾಮಿಗಳು ಏನೆನ್ನುತಿರ್ದರು.

**ಕೊಂಚೆ ಜಂಪೆ.**

ಅರಸುಗಳ ಅರಮನೆಗೆ ಈಗ – ಬರಲು । ತರವಲ್ಲ ಪಯಣವಿದೆ ಬೇಗ ।
ಇರಸಲ್ಲ ಹೋಗುತಿಹೆವೀಗ – ನಿಮ್ಮ । ಅರಸನೊಳು ಪೇಳು ನೀ ಬೇಗ ॥ ೧ ॥
ಎಂದ ಮಾತಪ್ಪಣ್ಣ ಕೇಳಿ – ಮನದಿ । ಸಂದೇಹ ಚಿಂತೆಯನು ತಾಳಿ ।
ಬಂದು ಬಸವಯ್ಯನಿಗೆ ಪೇಳೆ – ಬಸವಯ್ಯ । ನೊಂದು ಪೇಳಿದ ಮಾತ ಕೇಳಿ ॥ ೨ ॥
ಇಂದುಧರ ಕೃಪೆಮಾಳ್ಪೆನೆಂದು – ಮೋಕ್ಷ । ಇಂದೀವೆನೆಂದು ತಾ ಬಂದು ।
ನಿಂದರೆಮ್ಮಯ ದ್ವಾರದಿಂದು – ನನಗೆ । ಮುಂದಮತಿ ಕವಿದುದು ಎಂದು ॥ ೩ ॥
ವರಪ್ರಮಥರುಗಳನೊಡಗೊಂಡು – ಬಸವ । ಕೊರಗಿ ಪ್ರಭುವಿನಬಳಿಗೆ ಅಂದು ।
ತ್ವರಿತದಿಂ ಬಂದಾಗ ಇಂದು – ಧರ ನೇ । ಶರಣೆಂದು ಕೈಮುಗಿದು ನಿಂದು ॥ ೪ ॥
ಪರಮಗುರು ನೀವಿಲ್ಲಿ ಬರಲು – ಎನ್ನ । ದುರಿತ ಹೋಯಿತು ದೂರ ಅಗಲಿ ।
ಇರಲೇನು ಇಲ್ಲಿ ದ್ವಾರದಲಿ – ಬನ್ನಿ । ತರಳನ ಮೇಲೆ ಕರುಣದಲಿ ॥ ೫ ॥

ವಚನ ॥ ಇಂತೆಂದು ದೈನ್ಯಪಡುವ ಬಸವಣ್ಣಂಗೆ ಪ್ರಭುಸ್ವಾಮಿಗಳಿಂತೆಂದರು.

**ತ್ಯಾಗಮಾನ–ಅಟತಾಳ.**

ಅಲ್ಲೇನು ಕಾರಣವು ನಮಗೆ ಬಸವ – ಯ್ಯ – ಬರಲು—
ಇಲ್ಲೇ ಪಯಣದವಸರವು ಬಸವ – ಯ್ಯ ॥ ೧ ॥
ಬಲ್ಲಿದಭಕ್ತರು ನೀವು ಬಸವ – ಯ್ಯ – ಗರ್ವ—
ದಲ್ಲಿ ಉದಾಸೀನ ಭಕ್ತಿ ಬಸವ – ಯ್ಯ ॥ ೨ ॥
ಅಲ್ಲಿ ಬರುವದಾವ ನಡತೆ ಬಸವ – ಯ್ಯ – ನಿಮ್ಮ—
ದೆಲ್ಲವು ದಾಕ್ಷಿಣ್ಯದ ಭಕ್ತಿ ಬಸವ – ಯ್ಯ ॥ ೩ ॥
ನಿಲ್ಲುವುದಕೆ ವೇಳೆಯಿಲ್ಲ ಬಸವ – ಯ್ಯ – ನಮಗೆ—
ಪುಲ್ಲಯ್ಯನ ಗಿರಿಗೆ ಪಯಣ ಬಸವ – ಯ್ಯ ॥ ೪ ॥
ಗುರುವೆ ನೀವು ಹಲವು ಬಗೆಯೊಳೆಲೆ ದೇ – ವ – ಎನ್ನ—
ಜರಿದು ನುಡಿದರೇನು [1] ಉಂಟು [1] ಎಲೆ ದೇ – ವ ॥ ೫ ॥
ಮರುಳ ನಾನು ಮತ್ತ ನಾನು ಎಲೆ ದೇ – ವ – ನಿಮ್ಮ—
ತರಳನೆಂದು ರಕ್ಷಿ [2] ಸೆನ್ನ [2] ಎಲೆ ದೇ – ವ ॥ ೬ ॥
ಕಿನ್ನರಯ್ಯ ಚೆನ್ನಬಸವರವರೆ – ಲ್ಲ – ಸಂ—
ಪನ್ನ ಮಡಿವಾಳಯ್ಯ ಶರಣರಿವರೆ – ಲ್ಲ ॥ ೭ ॥

---

1-1 ಫಲವು (ಒ, ಡ.) 2-2 ಸಯ್ಯ (ಒ, ಡ.)

ಬಿನ್ನಹವ ಮಾಡಲಾಗ ಇದನೆ – ಲ್ಲ – ನೋಡು—
ಚೆನ್ನಾಗಿ ರಾಮಯ್ಯ ಭಕ್ತಿವಿಧವೆ – ಲ್ಲ || ೮ ||
ನಿಮ್ಮ ಭಕ್ತರುಗಳ ಮಹಿಮೆ ಗುರುರಾ – ಯ – ಭಕ್ತಿ—
ಪೇರ್ಮೆಯಲ್ಲ ನಿಮಗೇ ಅರುಹು ಗುರುರಾ – ಯ || ೯ ||
ಧರ್ಮಗುರುವು ಧಾತನೀವು ಗುರುರಾ – ಯ – ಭಕ್ತಿ—
ಮರ್ಮವ ನಾನೇನ ಬಲ್ಲೆ ಗುರುರಾ – ಯ || ೧೦ ||
ಮುಂದುವರಿದು ಶರಣರೆಲ್ಲ ನೆರೆ ಬಂ – ದು – ಪ್ರಭುವಿ—
ಗೊಂದಿಸುತ್ತ ಕರವ ಮುಗಿದು ಶರೆಣೆಂ – ದು || ೧೧ ||
ಚಂದ್ರಮೌಳಿ ಮನೆಗೆ ಚಿತ್ತೈಸುವದೆಂ – ದು – ಶರಣ—
ರೊಂದುಗೂಡಿ ಮನೆಗೆ ನಡೆದ ಪ್ರಭು ಬಂ – ದು || ೧೨ ||
ಬರುತ ಬಸವ ಭಕ್ತಜನಕೆ ದಯವಿ – ತ್ತು – ಮೋಕ್ಷ—
ಮರುಳುಶಂಕರನಿಗೆ ಮುಕ್ತಿ ಪದವಿ – ತ್ತು || ೧೩ ||
ಹರುಷ ಸಕಲ ಭಕ್ತಜನರ ವರಕ – ರ್ತ್ರ – ಬಸವ—
ಶರಣ ಭಕ್ತಾವಳಿಗೆ ಜ್ಞಾನ ವರವಿ – ತ್ತು || ೧೪ ||
ನೀಲಲೋಚನೆ ಶರಣೆಯರೆಲ್ಲ [1] ಶರಣೆಂ – ದು [1] – ಭಕ್ತ—
ಪಾಲ ಪ್ರಭುವೆ ಗುರುವೆ ಎಮ್ಮ ಸಲಹೆಂ – ದು || ೧೫ ||
ಕಾಲಹರನ ಕರುಣ ನಿಮಗೆ ಸ್ಥಿರವೆಂ – ದು – ಹರಸಿ—
ಲೀಲೆಯಲ್ಲಿ ಇರ್ದ ಪ್ರಭು ಶ್ರೀ ಗುರುಬಂ – ದು || ೧೬ ||

ವಚನ || ಈ ರೀತಿಯಲ್ಲಿ ಪ್ರಭುದೇವರು ಗಣಂಗಳ ಮಧ್ಯದಲ್ಲೊಪ್ಪುತ್ತಿರಲು, ಇತ್ತ ಸಿದ್ಧರಾಮಯ್ಯನವರ ಪ್ರಸಂಗಮದೆಂತೆನೆ.

**ದ್ವಿಪದಿ.**

ಸಂಗಮೇಶ್ವರಭಕ್ತ ಸಕಲಗುಣಯುಕ್ತ |
ಮಂಗಳಾತ್ಮಕ ಬಸವಲಿಂಗನರಮನೆಯ || ೧ ||

ಕಂಗಳು ಮೂರುಳ್ಳ ಕಾಮುಹರನಾಗೆ |
ಲಿಂಗವಿಲ್ಲದೆ ಬಸವನಂಗಳಕೆ ಬಿಡರು || ೨ ||

ತುಂಗವಿಕ್ರಮ ವೀರ ಶೂರಯತಿಯಾಗೆ |
ಸಂಗಮೇಶ್ವರ ಬಸವನಂಗಳಕೆ ಬಿಡರು || ೩ ||

ಅಂಬುಜಾಸನ ಅಂಬುಜಾಕ್ಷ ತಾನಾಗೆ |
ಜಂಭಾರಿಯಾದರೆಯು ಜಡಿದು ನಿಲಿಸುವರು || ೪ ||

---

1-1 ನೆರೆಬಂದು (ಜ, ಟ.)

ಗುರು ಮಂತ್ರ ಗುರುಕೊಟ್ಟ ಲಿಂಗಾಂಗರಲ್ಲದೆ ।
ಗುರುಕರುಣವಿಲ್ಲದರ ಅರಮನೆಗೆ ಬಿಡರು ॥ ೫ ॥

ಅಂತಪ್ಪ ಬಸವಯ್ಯನರಮನೆಯ ಮುಂದೆ ।
ಕಂತುಹರ ಪ್ರಭು ಸಿದ್ಧರಾಮ ಯತಿವರರೋಳ್ ॥ ೬ ॥

ಮೃಡಮೂರ್ತಿ ಪ್ರಭು ಮುಂದೆ ನಡೆಯೆ ಒಳಯಿಂಕೆ ।
ತಡೆದರಾ ದೃಢಸಿದ್ಧರಾಮ ಯತಿವರನ ॥ ೭ ॥

ಕಿಡಿಗಣ್ಣು ಮೃಡರೂಪ ಜಡೆಯು ಭಸ್ಮಾಂಗ ।
ದೊಡಲ ಯತಿರಾಮನನು ತಡೆದು ನಿಲ್ಲಿಸಲು ॥ ೮ ॥

ವಚನ ॥ ಆ ವೇಳೆಯಲ್ಲಿ ಸಿದ್ಧರಾಮಯ್ಯ ಏನೆನ್ನುತಿರ್ದನು.

**ಅಟತಾಳ.**

ಪ್ರಾಣಲಿಂಗಿಯು ಪರಮ ಭಕ್ತನು । ಜಾಣ ನಾನು ನೋಡಿರೈ ।
ಕಾಣಿರೆ ನೀವೆನ್ನ ಭಕ್ತಿಯ– ತ್ರಾಣವನ್ನು ॥ ೧ ॥

ಹಿಂಗಿಯೆಲ್ಲರ ರೀತಿ ನಾನೊಂ । ದಂಗಲಿಂ [1] ಗಾ [1] ಬಸವಯ್ಯ ।
ಮಂಗಳಾತ್ಮಕ ನೋಡು ನಾ ಸ– ರ್ವಾಂಗಲಿಂಗಿ ॥ ೨ ॥

ಜಡಿದು ಜಡೆಗಳ ಪಿಡಿದು ಅಂಗವ । ಕೊಡಹಲಲ್ಲಿಯೆ ಲಿಂಗಗ ।
ಳೊಡನೆ ಉದುರಲು ಬಸವರಾಜನು– ನುಡಿದನಾಗ ॥ ೩ ॥

ಇಂದುಧರ ಕರುಣದಲಿ ಲಿಂಗಗ । ಳೊಂದು ಕೋಟಿಯು ಉದುರಲು ।
ಬಂದು ಗುರುಪಾಲಿಸಿದ ಲಿಂಗವ– ನೊಂದ ತೋರು ॥ ೪ ॥

ಎಂದೆನಲು ಮಾರುತ್ರವಿಲ್ಲದೆ । ಎಂದ ಸಿದ್ಧರಾಮಯ್ಯ ।
ತಂದೆ ನೀ ಗುರುವಾಗಿಯೆನ್ನನು– ಮುಂದೆ ಸಲಹು ॥ ೫ ॥

ವಚನ ॥ ಆ ವೇಳೆಯಲ್ಲಿ ಸಮಸ್ತ ಗಣಂಗಳೂ ಸಿದ್ಧರಾಮಯ್ಯನಂ ಹಿಂದಿಟ್ಟು ಕರೆದೊಯ್ದು, ಪ್ರಭುವೇ ಸಾಕ್ಷಿಜಂಗಮವಾಗಿ, ಕಿನ್ನರಯ್ಯನೇ ಸಮಯಾಚಾರದ ಜಂಗಮವಾಗಿ, ಚೆನ್ನಬಸವಣ್ಣನೇ ಗುರುವಾಗಿ, ಬಸವಣ್ಣ ಮುಂತಾದ ಸಮಸ್ತ ಗಣಂಗಳು ಪರಿವಾರ ದೇವತೆಗಳಾಗಿ, ಆಚಾರಸಂಪನ್ನರು ನಾಲ್ವರು ಋತ್ವಿಕ್ಕುಗಳ ಕರ್ತವ್ಯವಂಮಾಡಿ, ಸಿದ್ಧರಾಮಯ್ಯದೇವರಿಗೆ ಉಪದೇಶಮಂಮಾಳ್ಪ ಸಂಭ್ರಮವಂ ಪೇಳ್ವೆನದೆಂತೆನೆ.

---

1-1 ಗೀ (ಒ, ಜ, ಟ, ಡ, ತ.)

# ಸಿದ್ಧರಾಮಯ್ಯನ ದೀಕ್ಷೆ.

**ಜಂಪೆ.**

ಹದಿನಾರು ಕಂಬದ । ಸದನ ಚಪ್ಪರ ನಡುವೆ ।
ಮದನಹರ ಮಂಟಪವ । ಮುದದಿಂದ ರಚಿಸಿ ॥ ೧ ॥

[1] ಸೃ [1] ಷ್ಟಿಗಚ್ಚರಿಯಾದ । ಪಟ್ಟವಳಿ ಚಪ್ಪರಕೆ ।
ಕಟ್ಟಿದರು ಮೇಲ್ಕಟ್ಟ । ಅಷ್ಟದಿಕ್ಕಿನಲಿ ॥ ೨ ॥

ಸಕಲಾತಿಸೂಪು ಝು । ಲ್ಲಿಯು ನಾಣ್ಯ ವಸ್ತ್ರಗಳ ।
ಅಕಳಂಕ ಮಂದಿರಕೆ । ಸಕಲವನು ಕಟ್ಟಿ ॥ ೩ ॥

ಮುತ್ತು ಮಾಣಿಕ ವಜ್ರ । ರತ್ನ ತೋರಣ ಸುತ್ತ ।
ಮತ್ತೆ ಪೂಮಾಲೆಗಳ । ಅರ್ಥಿಯಿಂ ಕಟ್ಟಿ ॥ ೪ ॥

ಸದ್ಯ ಚಪ್ಪರದ ನಡು । ಮಧ್ಯ ಗುರುಗದ್ದುಗೆಗೆ ।
ರುದ್ರಮಂಟಪ ಒಂದ । ನಿರ್ಧರವಮಾಡಿ ॥ ೫ ॥

ಕ್ಷೀರ ಘೃತ ಮಧು ದಧಿ ಗೋ । ರೋಜನ ಗೋಮಯಗಳಿಂ ।
ಸಾರಿಸಿದರಲ್ಲಿ ಮುದ । ನಾರಿ ಮಂಟಪವ ॥ ೬ ॥

ಕಂಗೊಳಿಪ ಪೃಥುವಿ ಗು । ಣಂಗಳನು ಕಳೆವುದಕೆ ।
ಹಿಂಗದೇ ರಚಿಸಿದರು । ರಂಗವಲಿಯನ್ನು ॥ ೭ ॥

[2] ಸು [2] ರಿದೆರಡುಬಳ್ಳ ರಾ । ಜಾನ್ನವದರ ಮೇಲೆ ।
ಕರಿಯಕಂಬಳಿಯ ಗ । ದ್ದುಗೆಯ ಹಾಸಿದರು ॥ ೮ ॥

ಮತ್ತದರ ಮೇಲೆಳ್ಳು । ಅಕ್ಕಿ ಜೀರಿಗೆ ಹರಹಿ ।
ರತ್ನಗಂಬಳಿಯಿಂದ । ಇಕ್ಕಿ ಗದ್ದುಗೆಯ ॥ ೯ ॥

ಶರಣರಿಗೆ ಸಾಷ್ಟಾಂಗ । ವೆರಗಿ ಗುರುಗದ್ದುಗೆಯ ।
ಭರದಿ ಏರಿದ ಚೆನ್ನ । ಗುರುಬಸವರಾಜ ॥ ೧೦ ॥

ಪಾದಪೂಜೆಗೆ ಕರ್ತ । ನಾದ ಕಿನ್ನರಿಬ್ರಹ್ಮ ।
ವೇದಸಾಕ್ಷಿಗೆ ಗುರು । ವಾದ ಪ್ರಭುರಾಯ ॥ ೧೧ ॥

ಶರಣ ಸಂಕುಲದೊ [3] ಳಗೆ [3] । ಪರಮಗುರು ಬಸವಯ್ಯ ।
ಶರಣೆಯರು ಸಹಿತ ಭರ । ವಸದಿ ಕುಳಿತಾಗ ॥ ೧೨ ॥

ಪರಮಋಷಿ ಯತಿವರನು । ದೊರೆಸಿದ್ಧರಾಮನಿಗೆ ।
ಪರತತ್ವದಾರು ಕಳ । ಶಗಳ ನಿರ್ಮಿಸಿದರು ॥ ೧೩ ॥

1-1 ದ್ರಿ (ಬ.) 2-2 ಹಿ (ಇ, ಒ, ಜ, ಟ.) 3-3 ಡನೆ (ಇ, ಒ, ಜ, ಟ, ಡ.)

ನವರತ್ನ ಕನಕ ಪರಿ । ಪರಿಯ ಪುಷ್ಪಗಳಿಂದ ।
ಶಿವತತ್ವಮಯದ ಕಳ । ಶವ ನಿರ್ಮಿಸಿದರು ॥ ೧೪ ॥

**ಏಕತಾಳ – ಅರ್ಧರೇಕು.**

ಅರ್ಥಿಯಿಂ ಕಳಶಕ್ಕೆ – ಸೂತ್ರವನು ಸುತ್ತಿ ।
ಮತ್ತೆ ದರ್ಭೆಯಲಿ ಪ – ವಿತ್ರ ಮುದ್ರಿಕೆಯ ॥ ೧ ॥

ಪತ್ರೆ ಪುಷ್ಪಗಳನ್ನು – ಅರ್ಥಿಯಿಂ ಧರಿಸಿ ।
ಒತ್ತಿಲಿ ಜಾಲದ ವಾ – ಸವ ನಿರ್ಮಿಸುತ್ತ ॥ ೨ ॥

ಕಳೆಯುಳ್ಳ ಷಡುವರ್ಣ – ತಳಿರ ಧರಿಸುತ್ತ ।
ಸತ್ಯ ರಾಮಯ್ಯನ – ಭುಕ್ತವಂ ನಿಲಿಸಿ ॥ ೩ ॥

ಭಕ್ತ ಹೆಣ್ಗಳು ಮುಕ್ತಿ – ಸ್ನಾನಂಗಳ್ವಿರಸಿ ।
ಉತ್ತಮ ಮಡಿವರ್ಗ – ವರ್ಧಿಯಿಂ ಧರಿಸಿ ॥ ೪ ॥

ಮತ್ತೆ ಬಂದನು ರಾಮ – ಭಕ್ತರೊಳ್ಬೆರಸಿ ।
ಬಂದು ಶರಣರಡಿ – ಗೊಂದಿಸುತ್ತಾಗ ॥ ೫ ॥

ಮುಂದೆ ಗುರುವಿಗೆ ಸಾ – ಷ್ಟಾಂಗವನೆರಗಿ ।
ಬಂದು ಕುಳಿತನು ಗುರುವಿ – ಗಂದು ಕೈಮುಗಿದು ॥ ೬ ॥

ಪಂಚಗವ್ಯವನಿತ್ತು – ಸಂಚಲವ ಕಳೆದು ।
ಮುಂದೆ ಕುಮಾರಠಾವಾ – ನಂದದಿಂ ತೆಗೆದು ॥ ೭ ॥

ಪಂಚಾಮೃತದಿ ಪಂಚ – ಅಭಿಷೇಕದಿಂದ ।
ಸಂಚಿತ ಪ್ರಾರಬ್ಧ – ವಂಚನೆಗಳೆದು ॥ ೮ ॥

ಗುರುಚೆನ್ನಬಸವಯ್ಯ – ಹರುಷದಿಂದಾಗ ।
ದೊರೆ ಸಿದ್ಧರಾಮನ – ಕರಗಳ ಹಿಡಿದು ॥ ೯ ॥

ಪರಮಾಮೃತದ ಪಂಚ – ಅಭಿಷೇಕದಿಂದ ।
ಶಿರವ ಪಿಡಿದು ಪೂಜೆ – ಹರುಷದಿಂ ಮಾಡಿ ॥ ೧೦ ॥

ಪರಮ ಪಂಚಾಕ್ಷರಿ – ಕರ್ಣದೊಳರುಹಿ ।
ಗುರುಚೆನ್ನಬಸವಯ್ಯ – ಲಿಂಗವ ಧರಿಸಿ ॥ ೧೧ ॥

ಧರಿಸಿ ವಿಭೂತಿಯ – ಸ್ಥಿರವೆಂದು ಹರಸಿ ।
ದೊರೆ ಸಿದ್ಧರಾಮಯ್ಯ – ಶರಣರಿಗೆ ನಮಿಸಿ ॥ ೧೨ ॥

ಶರಣಜನರು ನಮಿಸಿ – ಹರಿಸಿ ಸತ್ಕರಿಸಿ ।
ಇರುತಿರ್ದ ರಾಮಯ್ಯ –ಶರಣರೊಳ್ಬೆರಸಿ ॥ ೧೩ ॥




ಸಿದ್ಧರಾಮಯ್ಯನಿಗೆ ಲಿಂಗದೀಕ್ಷೆ (ಏ. ಅ. ಪದ್ಯ—೧-೧೧.)

ವಚನ || ಇಂತು ಸಿದ್ಧರಾಮಯ್ಯನವರಿಗೆ ಉಪದೇಶವಂ ಮಾಡಿದ ಬಳಿಕ, ಪ್ರಭುದೇವರು ಬಸವಾದಿ ಪ್ರಮಥರ ಕೈಯಿಂ ಕಳುಹಿಸಿಕೊಂಡು, ಇನ್ನು ಹನ್ನೆರಡು ವರುಷಕ್ಕೆ ಬರುತ್ತೇವೆ ಎಂದು ಶ್ರೀಗಿರಿಗೆ ಪೋಗಲು, ಇತ್ತ ಬಸವಣ್ಣನವರು ಪ್ರಮಥರ ಗೋಷ್ಠಿಯಲ್ಲಿದ್ದು ಬಿಜ್ಜಳರಾಯನ ಓಲಗಕ್ಕೆ ಬಂದರದೆಂತೆನೆ.

## ನಂದಿಯುಂಗುರದ ಪವಾಡ.

**ತ್ರಿವುಡೆ.**

ಒಂದುದಿನ ಬಸವಯ್ಯ ಹರುಷದಿ |ಬಂದು ಬಿಜ್ಜಳನೋಲಗದಿ ಬಹು ||
ಸಂದಣಿಯಲೆಪ್ಪತ್ತು ಏಳ್ವಿನಿ – ಯೋಗವೊಪ್ಪಿರಲು || ೧ ||
ಬಂದು ಕರವನು ಮುಗಿಯೆ ರಾಯಗೆ | ಎಂದ ಕೊಂಡೆಯಮಂಚಿ ಬಸವಯ್ಯ |
ನಂದಿ ಯುಂಗ್ರಕೆ ಕೈಯ್ಯ ಮುಗಿದನು – ನೃಪತಿ ನಿನಗಲ್ಲ || ೨ ||
ಕೇಳಿದನು ಬಿಜ್ಜಳನು ಕಪಟವ | ತಾಳಿದನು ಬಸವಯ್ಯ ಆದರೆ |
ಕೇಳು ಬಸವನೀ ಮುದ್ರೆಯುಂಗುರ – ತೆಗೆದು ಮುಗಿಯೆಂದ || ೩ ||
ಕೇಳು ಬಿಜ್ಜಳ ಎನ್ನ ಕರದೊಳು | ತಾಳಿದುಂಗುರ ತೆಗೆದು ಮುಗಿವೆನು |
ಏಳು ಗದ್ದುಗೆ ಬಿಟ್ಟು ಕೆಳಗಿಳಿ – ಮುಗಿವೆ ಗದ್ದುಗೆಗೆ || ೪ ||
ಏಕೆ ಗದ್ದುಗೆಯಿಳಿದು ಪೋಪುದು | ಏಕೆ ನಿನಗಿಷ್ಟೊಂದು ಬಲುವಿಡಿ |
ಜೋಕೆಯಲಿ ಕೈಮುಗಿ ನೀನೆಂದರೆ – ಲೋಕ ಹಾಸ್ಯಗಳೆ || ೫ ||
ನಿನಗೆ ಮುಗಿದುದು ಬೇರೆಯೆ ನಿನ್ನ | ಘನ ಸಿಂಹಾಸನಕೆರಗೆ ಬೇರೆಯೆ |
ಬಿನುಗು ಬುದ್ಧಿಯ ಬಿಟ್ಟು ನೀನಿಳಿ – ಎಂದ ಬಸವಯ್ಯ || ೬ ||
ಎಂದ ಮಾತಿಗೆ ರಾಯನಿಳಿಯಲು | ಮುಂದೆ ಬಸವನು ಕರವ ಮುಗಿಯಲು |
ಬೆಂದು ಗದ್ದುಗೆ ಧಗಿಲು ಭುಗಿಲೆಂ – ದುರಿದುದಾಕ್ಷಣದಿ || ೭ ||
ಕಂದಿ ಕಂದುತ ನಡುಗಿ ರಾಯನು | ಬಂದು ಬಸವನ ಪಾದಕೆರ [1] ಗುತ [1] |
ಮಂದಮತಿ ದೊರಕೊಂಡಿತೆನ್ನನು – ತಂದೆ ಸಲಹೈ || ೮ ||
ಮಂಡಲದೊಳತಿ ಕುಂದು ಹರಿಪೀಠ | ಬೆಂದುದೆನುತಲಿ ಸರಿನೃಪಾಲರು |
ಕುಂದನಾಡುವರ್ದೇವ ಕರುಣಿಸು – ಎಂದಿನಂತೆ * || ೯ ||
ಚಂದಚಂದದಿ ನುತಿಸಿ ರಾಯನು | ನಿಂದು ಕರಮುಗಿದಿರಲು ಬಸವನು |
ಅಂದು ಎಂದಿನತೆರದಿ ಮಾಡಿದ – ಪರುಷ ದೃಷ್ಟಿಯಲಿ * || ೧೦ ||
ಬೆಂದು ಹೋಗುತಲಿರ್ದ ಒಡಯನೆ | ಇಂದು ಉಳುಹಿದಿರೆನ್ನನೆನುತಲಿ |
ವಂದಿಸುತ ಕರಮುಗಿದು ಜಯ ಸಲ – ಹೆಂದನಾ ರಾಯ || ೧೧ ||

---

11- ಗಲು ( ಒ, ಜ, ಟ, ಡ, ತ, ಬ. )

* ಈ ಪದ್ಯಗಳು (ಅ, ಗ, ಚ, ಜ, ಟ, ಡ, ತ, ಬ.) ಪ್ರತಿಗಳಲ್ಲಿಲ್ಲ.

ಬಸವನೇ ಗುರು ಸಕಲಲೋಕಕೆ | ಬಸವನೇ ಗುರು ಸಕಲದೈವಕೆ |
ಬಸವಗಿಮ್ಮಿಗಿಲೊಂದು ದೈವವು – ಮಹಿಯೊಳಿನ್ನಿಲ್ಲ * || ೧೨ ||
ನುತಿಸಿ ಕೀರ್ತಿಸಿ ಹಲವು ಬಗೆಯಲಿ | ಸ್ತುತಿಸಿ ಕೊಂಡಾಡುತ್ತ ಬಸವಗೆ |
ಅತಿಶಯದ ವಸ್ತುಗಳನೀವುತ – ಕಳುಹಿದನು ಮನೆಗೆ || ೧೩ ||

ವಚನ || ಇತ್ತಲಾ ಬಸವರಾಜದೇವರು ಬಂದು ತಮ್ಮರಮನೆಯೊಳಗೆ ಶರಣರ ಸದ್ಗೋಷ್ಠಿಯಲ್ಲಿ ಇರುತಿರ್ದರದೆಂತೆನೆ.

## ಕಿನ್ನರಿಬ್ರಹ್ಮಯ್ಯನ ಮಹಿಮೆ.

**ಏಕತಾಳ.**

ಧ್ಯಾನವು ಮೌನ ಸಂ | ಧಾನವು ಜಪತಪ |
ಆನಂದ ಚಿತ್ಕಳೆಯ | ತಾನು ತೋರುತಲಿ || ೧ ||
ಶರಣರೆಲ್ಲರು ಕೂಡಿ | ಪರಮ ಜ್ಞಾನದೊಳಾಡಿ |
ಹರನ ಮುಕ್ತಿಯ ಬೇಡಿ | ನಿರುತ ಕೊಂಡಾಡಿ || ೨ ||
ಮರುಳೊಂದು ದಿನದಿ ಬಿ | ಜ್ಜಳನ ಓಲಗದೊಳು |
ಹರುಷದಿಂ ಬಸವಯ್ಯ | ನಿರುವ ಸಮಯದಲಿ || ೩ ||
ದೊರೆಯೆ ಪೊರೆಯೋ ಎಂದು | ಮೊರೆಯಿ [1] ಟ್ಟೊಂದ್ದು [1] ಯ್ಯಲು
ಭರದಿ ಬಂದಿತು ರಾಯು | ನಿರುವ ಓಲಗಕೆ || ೪ ||
ಮೊರೆಯಿಡಲೇನು ಕಾ | ರಣ ಬಂದ ಭಯವೇನು |
ಪರಿಕಿಸಿ ರಾಯನು | ಒರೆದು ಕೇಳಿದನು || ೫ ||
ಕಿನ್ನರಿಬ್ರಹ್ಮಯ್ಯ | ನಿನ್ನ ಊಳಿಗದವನ |
ಛಿನ್ನ ಭಿನ್ನವ ಮಾಡಿ | ಕಡಿದು ಬೀಸಾಟ || ೬ ||
ಏನು ಮಾಡಿದನವ | ಏನು ಕಾರಣ ಕಡಿದ |
ಏ [2] ನು ಸುದ್ದಿಯೊ ಅದು [2] | ನೀನುಸುರೆಂದ || ೭ ||
ಕೇಳು ಬಿಜ್ಜಳರಾಯ | ಸೂಳೆವೆಣ್ಣಿನ ಟಗರ |
ಊಳಿಗದವನು ಪಿಡಿದು | ಪಾಳಯಕೆ ಪೋಗೆ || ೮ ||
ದಾರಿಯೊಳ್ಟಗರದು | ಮಾರಾರಿಗುಡಿಯ ಪೊಗಲು |
ಧೀರ ಕಿನ್ನರಿಬ್ರಹ್ಮ | ಸಾರಲ್ಲಿ ಕಂಡು || ೯ ||
ನೋಡಿದ ಟಗರನ್ನು | ಕೂಡಿದ ಗುಡಿಯೊಳು |
ಕೋಡಪಿಡಿದು [3] ಮುದ್ರೆ [3] | ಮಾಡಿದನಾಗ || ೧೦ ||

---

* ಈ ಪದ್ಯ (ಅ, ಗ, ಚ, ಜ, ಟ, ಡ, ತ, ಬ,) ಪ್ರತಿಗಳಲ್ಲಿಲ್ಲ.

1-1 ಟ್ಟೊಹು (ಇ, ಒ, ಜ, ಡ, ತ,) 2-2 ನೆಂಬ ಸುದ್ದಿಯ (ಒ, ಗ, ಜ, ಟ.)

3-3 ಭದ್ರ (ಅ, ಉ, ಎ, ಗ, ಚ, ಜ, ಡ, ತ, ಬ.)

ವಚನ || ಆ ವೇಳೆಯಲ್ಲಿ ಊಳಿಗದವನು ಬಂದು, ಟಗರಂ ಪಿಡಿಯಲು ಕಿನ್ನರಿಬ್ರಹ್ಮಯ್ಯನೇನೆನ್ನುತಿರ್ದನು.

**ಜಂಪೆ.**

ಜಡಮತಿಯೆ ಕೇಳ್ಳವನ | ಗುಡಿಯ ಹೊಕ್ಕಿಹ ಟಗರ |
ಕೊಡಲ್ಲಿಲ್ಲ ನೀನದನು | ಪಿಡಿಯದಿರು ಎಂದ || ೧ ||
ನನ್ನ ಟಗರನು ಪಿಡಿದು | ನಾನೊಯ್ಯುತಿರಲದನು |
ಎನ್ನೊಯ್ಯಬೇಡೆಂಬ | ಅನ್ಯಾಯವುಂಟೆ || ೨ ||
ಕೊಡಲೊಲ್ಲೆನಾ ಟಗರ | ಕೊಡುವೆನಿಮ್ಮಡಿ ಬೆಲೆಯ |
ಪಿಡಿಯದಿರು ಹೋಗೆಂದು | ನುಡಿದು ಘರ್ಜಿಸಿದ || ೩ ||
ಇಮ್ಮಡಿಯ ನಾನೊಲ್ಲೆ | ಮುಮ್ಮಡಿಯ ನಾನೊಲ್ಲೆ |
ನಮ್ಮ ಟಗರಲ್ಲದೆ | ನಾನೊಲ್ಲೆನೆಂದ || ೪ ||
ಮತ್ತವನ ಮನಹರುಷ | ವೆತ್ತು ಪೋಗುವತೆರದಿ |
ಸತ್ಯದಲಿ ಕೊಟ್ಟ ಸಾ | ಸಿರ ಹೊನ್ನನವಗೆ || ೫ ||
ಬಡವ ಭಾಗ್ಯವ ಕಾಲ | ಲೆಡಹಿ ಕಾಣ್ಬಂದದಲಿ |
ನಡೆದ ವೇಶಿಯ ಮನೆಗೆ | ಸಡಗರದಿ ಬೇಗ || ೬ ||
ಮತ್ತಗಜ ಗಮನೆ ಕೇಳ್ | ಹತ್ತು ಕುರಿವರಹಕ್ಕೆ |
ಮತ್ತೆ ಸಾಸಿರ ಹೊನ್ನಿ | ಗಿತ್ತೆನಾ ಕುರಿಯ || ೭ ||
ಕಡುಜಾಣೆ ನಿನ್ನ ಕುರಿ | ಮೃಡನಗುಡಿಯಂ ಪೊಗಲು |
ಕೊಡದೆ ಕಿನ್ನರಿಬ್ರಹ್ಮ | ಒಡನಿತ್ತ ಹೊನ್ನ || ೮ ||
ಒಂದು ಕುರಿ ಹೋಗೆ ನೂ | ರೊಂದು ಕುರಿಯಿದಕೆಂದು |
ಇಂದು ಹಣವನುಕೊಂಡು | ಬಂದೆ ನಿನ್ನೆಡೆಗೆ || ೯ ||
ಇಂತೆನಲು ಊಳಿಗನು | ದಂತಿಗಮನೆಯು ವೇಶಿ |
ಮುಂತೆ ತೃಣೀಕರಿಸಿ ಹಣ | ತಂದಗಿಂತೆಂದಳ್ * || ೧೦ ||
ನೂರುಸಾಸಿರ ಹೊನ್ನ | ಕೂರಿಗೆಲಿ ಬಿತ್ತಿಸುವೆ |
ಮಾರಹರನಿಹಗುಡಿಯ | ದ್ವಾರಪರಿಯಂತ || ೧೧ ||
ಕೊಡಬೇಡ ನಮ್ಮನೆಯ | ಒಡೆಯನದು ಹರಕೆಕುರಿ |
ಬಿಡಬೇಡ ತಾರೆಂದು | ಒಡನೆ ಅಟ್ಟಿದಳು || ೧೨ ||
ಪೊಡವಿಪತಿ ಕೇಳವನು | ಕಡುವೇಗದಲಿ ಪೋಗಿ |
ಕೊಡುನಮ್ಮ ಕುರಿಯೆನಲು | ಕಡಿದನವ ಶಿರವ || ೧೩ ||

---

* ಈ ಪದ್ಯ (ಅ, ಉ, ಎ, ಗ, ಚ, ಜ, ಟ, ಬ.) ಪ್ರತಿಗಳಲ್ಲಿಲ್ಲ.

ದಿಟ್ಟಿಸಿದ ಕೋಪದಲಿ । ದಟ್ಟಿಸಿದ ಶಿರವರಿದು ।
ಘಟ್ಟಿಸಿದ ಗುಡಿಯ ಹೊರ । ಗಿಟ್ಟನಾ ಶಿರವ ॥ ೧೪ ॥

ವಚನ ॥ ಅದಂ ನೋಡಿ ಕಂಗೆಟ್ಟು ಬಂದು ನಿಮಗೆ ದೂರ ಪೇಳಿದೆವೆನಲು, ಆ ಮಾತಿಗೆ ರಾಯ ಬಸವಯ್ಯನ ಮುಖವಂ ನೋಡಿ ಖತಿಯಿಂದ ಏನೆನ್ನುತಿರ್ದನು.

**ಕಂದಪದ್ಯ.***

ಕಡುಕೋಪದಿ ಬಿಜ್ಜಳತಾಂ ।
ನುಡಿದನು ಬಸವಗೆ ನಿನ್ನಯ ಶರಣರವರ್ಗಳ್ ॥
ಪ್ರೌಢವಿಲಿ ಹಾವಳಿಗೆಯ್ವರು ।
ಒಡವೆಯನಧಿಪತಿಯೊಯ್ಯಲು ಹೊಡೆವರೆ ತಲೆಯಂ ॥ ೧ ॥

ರಾಜನ ಭಯ ಕಿಂಚಿತಿಲ್ಲ ।
ವೀ ಜಗದೊಳು ತಾವೇ ತಾವು ವೆಗ್ಗಳಗೆಯ್ವರ್ ॥
ಓಜೆಯ ಕೆಡಿಪರೆ ನಮ್ಮಯ ।
ರಾಜ್ಯದೊಳಿಂತಪ್ಪ ದುಡುಕಂಗೆಯ್ವುದು ತರವೇ ॥ ೨ ॥

ಶಿವಶರಣನು ತಾನಾಗಲು ।
ಅವಿರಳ ಶಿವನಿಷ್ಠೆಯೊಳಿರಬೇಕಲ್ಲದಿದೇಂ ॥
ಭುವಿಜನರಂ ಕೊಂದು ಶೌರ್ಯ ।
ವಾವರಿಸುವ ಬಗೆಯ ನೋಳ್ಪೆನೆಂದನು ರಾಯಂ ॥ ೩ ॥

**ಕೊಂಚ ಜಂಪೆ.**

ನಮ್ಮ ದೊರೆತನವೇಕೆ ಹೇಳಿ – ರಾಜ್ಯ । ನಿಮ್ಮ ನಿಮ್ಮಿಷ್ಟಕ್ಕೆ ಆಳಿ ।
ನಿಮ್ಮ ಶರಣರದೊಂದು ಧಾಳಿ – ಜಗಕೆ । ಹಮ್ಮಿತದು ದಿಕ್ಕಿಲ್ಲ ಕೇಳಿ ॥ ೧ ॥
ಹೋಗಿ ತುರಗದ ಭಟರು ಈಗ – ಅವನ । ಸಾಗಿಸಿಯೆ ಹಿಡಿತನ್ನಿ ಬೇಗ ।
ಹೇಗೆ ಅವನನು ಕೊಂದ [1] ನಾ [1] ಗ – ಅವನ । ಹಾಗೆ ಕೊಲ್ಲದೆ ಬಿಡೆನು ಈಗ ॥ ೨ ॥
ರಾಯನುರವಣೆಯ ನೋಡಿ – ಬಸವಯ್ಯ । ದಾಯಪೇಳ್ದನು ಮುಂದು ನೋಡಿ ।
ಆಯತದಿ ವಿವರವರಿತೀಗ – ನೋಡಿ । ಪಾಯವಿದ್ದಂತೆ ಮಾಡೀಗ † ॥ ೩ ॥
ದುಡುಕು ಮಾಡರು ನಮ್ಮಗಣರು – ನೀನು । ಕಡುಕೋಪ ಮಾಡಲಿದಿರಾರು ।
ಬಿಡುನನ್ನ ತಳ್ಳಿ ಬರಬೇಡ – ಬಸವಯ್ಯ । ಒಡನೆ ಬಿಜ್ಜಳ ಪೇಳ್ದಗಾಢ † ॥ ೪ ॥
ತೆರಳಿ ಕಲಿವೀರ ಭಟರುಗಳು – ನೀವು । ತ್ವರಿತದಿಂ ತನ್ನಿರವನೆನಲು ।
ಸೆರೆಯ ಹಿಡಿತನ್ನಿ ನೋಯಿಸದೆ – ಶಿರವ । ತರಿದಬಗೆಯನು ನೋಳ್ಪೆನೆಂದ † ॥ ೫ ॥

---

* ಈ ಕಂದಪದ್ಯ (ಇ, ಒ, ಖ, ಡ, ತ, ದ.) ಪ್ರತಿಗಳಲ್ಲಿ ಮಾತ್ರವಿವೆ. 1-1 ನೀ (ಒ, ಗ, ಚ, ಜ, ಡ, ತ.) † ಈ ಪದ್ಯಗಳು (ಅ, ಉ, ಎ, ಗ, ಚ, ಜ, ಟ, ಬ.) ಪ್ರತಿಗಳಲ್ಲಿಲ್ಲ.

ಎಂದ ಮಾತಿಗೆ ಚರರು ಬೇಗ – ಪೋಗಿ | ಅಂದು ಮುತ್ತಿದುದ್ಗುಡಿಯನಾಗ |
ಇಂದುಧರ ಶರಣ ಕಂಡಾಗ – ರೌದ್ರ | ದಿಂದ ನೋಡಿದ ಬಲವನಾಗ | ೬ ||
ಕಿನ್ನರಿಯಬ್ರಹ್ಮಯ್ಯ ನೋಡಿ – ಆಗ | ಪನ್ನಗಧರನ ಸ್ತುತಿಮಾಡಿ |
ತನ್ನ ಮುತ್ತಿಹ ಬಲವ ನೋಡಿ – ಕಡಿದು | ಛಿನ್ನಭಿನ್ನವನವರ ಮಾಡಿ || ೭ ||
ಕಡಿದ ಮುತ್ತಿರ್ದ ಮಾರ್ಬಲವ – ಸದೆ | ಬಡಿದ ಸಕಲಾದಿ ಪಾಯ್ದಳವ |
ಕಡಿಕಡಿದು ವೈರಿಗಳ ಶಿರವ – ಹೊಡೆದು | ಹಿಡಿದು ಬೀಸಂಬರಕೆ ಇಡುವ || ೮ ||
ಹೊಡೆದಂಥ ದೂರು ಅತಿವೇಗ – ಪೋಗಿ | ನೃಪಗೆ ಪೇಳ್ದರು ಚರರುಬೇಗ |
ಘುಡಿಘುಡಿಸಿ ಗಜ ತುರುಗವಾಗ – ರಾಯ | ಒಡನೆ ಕಳುಹಿದ ಕದನಕಾಗ || ೯ ||
ಬಂದಿತಾಬಲ ಬಹಳನೂಕಿ – ಶರಣನ | ನಂದು ಕವಿದುದು ಬಂದು ತಾಕಿ |
ಮುಂದುಭಿಯ ಮೊರವು ಗಜನೂಕಿ – ಗಜವ | ಕೊಂದು ಚಿಗಿದನು ಬಂದು ತಾಕಿ ||೧೦||
ಕುಟ್ಟಿದನು ಗಜದಿ ಗಜಗಳನು – ಹಿಡಿದು | ತಟ್ಟಿದನು ತುರಗ ತುರಗವನು |
ಹೆಟ್ಟಿದನು ರಥದಿ ರಥಗಳನು – ಹಿಡಿದು | ಬಿಟ್ಟನತಿರಥರ ಸೆರೆಗಳನು || ೧೧ ||
ಶರಣು ಶರಣೆಂದು ಕೈಮುಗಿದು – ದುರದಿ | ಅಸಮ ಕಲಿಗಳು ಓಡೆ ಭಯದಿ |
ಹಸಗೆಟ್ಟು ವೈರಿ ಪಾಯ್ದಳದಿ – ಬೇಗ | ದೆಸೆದಿಕ್ಕಿಗೈದಿದರು ಭರದಿ || ೧೨ ||
ಬಂದು ಪೇಳ್ದರು ನೃಪಗೆ ಬೇಗ – ಬಲವ | ನೊಂದುಳಿಯದಲೆ ಕೊಂದ [1] ನೀ [1] ಗ |
ಮುಂದಮತಿ ಬೇಡರಸೆ ಈಗ – ಶರಣು | ಎಂದು ಬದುಕುವದೊಳ್ಳಿತೀಗ || || ೧೩ ||
ಪ್ರಳಯಕಾಲದ ರುದ್ರನಾತ – ಜಗಕೆ | ಅಳವಲ್ಲ ಲೋಕಪ್ರಖ್ಯಾತ |
ತಿಳುಹು ಬಸವಯ್ಯನಿಗೆ ಪ್ರೀತ – ಆತ | ನುಳುಹುವನು ಸಕಲರಿಗೆ ಧಾತ || ೧೪ ||
ಎಂದ ಸಾಮಾಜಿಕರ ಮಾತ – ಕೇಳಿ | ವಂದಿಸುತ ಬಸವಗೀಮಾತ |
ಇಂದು ಎನ್ನಪರಾಧ ಕ್ಷಮಿಸು – ಎನ್ನ | ತಂದೆ ರಕ್ಷಿಸು ಶರಣು ಎಂದ * || ೧೫ ||

**ಕಂದಪದ್ಯ.**

ದಂಡೇಶಬಸವರಾಜಗೆ | ಮಂಡಲಪತಿ ಶರಣುಪೊಕ್ಕು ಬಿನ್ನಹಂಗೆಯ್ಯಲ್ ||
ಖಂಡೇಂದುಧರನ ನಿಳಯಕೆ | ಮಂಡಲಪತಿ ದಂಡನಾಥ ಸಕಲರು ಬಂದರ್ || ೧ ||

**ಏಕತಾಳ.**

ಪನ್ನಗೇಂದ್ರನಭರಣ | ಸನ್ನುತ ಶಿವಶರಣ |
ಕಿನ್ನರಿಬ್ರಹ್ಮನ | ಸನ್ನಿಧಿಗೈದಿ || ೧ ||
ಕಂಡರು ಬ್ರಹ್ಮನ | ಖಂಡಪರ [2] ಶಿವ [2] ನಂತೆ |
ಕೆಂಡಗಣ್ಣಿನ ಉಗ್ರೋ | ದ್ದಂಡ ರೌದ್ರವನು || ೨ ||

---

1-1 ನಾ (ಇ, ಉ, ತ.) * ಈ ಪದ್ಯ (ಅ, ಉ, ಎ, ಗ, ಚ, ಖ, ಟ, ಬ.) ಪ್ರತಿಗಳಲ್ಲಿಲ್ಲ. 2-2 ಶುವಿ (ಇ, ಒ, ಗ, ಚ, ಜ, ಟ, ಡ, ತ.)

ನೋಡಿದ ಬಿಜ್ಜಳ । ಕೂಡೆ ಕರವ ಮುಗಿದು ।
ಆಡಿ ಪ್ರಿಯೋಕ್ತಿಯಿಂ । ನಾಡಾಡಿ ಮಾತ ॥ ೩ ॥
ಒಡೆಯನೀನಿಷ್ಟೊಂದು । ದುಡುಕುಮಾಡುವರೆ ।
ಒಡವೆಯವನೊಯ್ಯೆ । ಕಡಿವರೆ ತಲೆಯ ॥ ೪ ॥
ದುಡುಕು ನಮ್ಮದೊ ಅವ । ನದೊ ಎಂಬ ವಾಕ್ಯಕ್ಕೆ ।
ಮೃಡನನ್ನು ಸಾಕ್ಷಿಯ । ನುಡಿಸುವೆ[1] ನೆಂದ[1] ॥ ೫ ॥
ನುಡಿಸೆಂದು ಸಾಕ್ಷಿಯ । ನುಡಿಯಲು ರಾಯನು ।
ನುಡಿದ ಲಿಂಗಕೆ ಸಾಕ್ಷಿ । ನುಡಿಯೆಂದ ಬ್ರಹ್ಮ ॥ ೬ ॥
ನುಡಿಯೆಂ[2] ದಮಾತಿಗೆ[2] । ನುಡಿದುದು ಮಹಶಬ್ದ ।
ದುಡುಕು ನಿನ್ನವನದು । ದುಡುಕಿಲ್ಲ ಶರಣ ॥ ೭ ॥
ಪೊಡವಿ ಬ್ರಹ್ಮಾಂಡವು । ಒಡೆವಂತೆ ಮಹಾಲಿಂಗ ।
ಬಿಡದೇಳು ದಿನತನಕ । ನುಡಿದುದು ಶಬ್ದ ॥ ೮ ॥
ನುಡಿದ ಧ್ವನಿಗೆ ಲೋಕ । ಹೊಡಗೆಡದೇಳು ದಿನ ।
ಮಡಿದುದು ಕಡೆಯಿಲ್ಲ । ನಡುಗಿದ ರಾಯ ॥ ೯ ॥
ಶರಣು ಬಸವರಾಜ । ಶರಣು ಕಲ್ಪಮಹೀಜ ।
ಶರಣೆಂದು ಎರಗಿದನು । ಕರುಣಿಸೆಂದೆನುತ ॥ ೧೦ ॥
ಶರಣಾಗತರಕ್ಷಕ । ಶತ ಅಪರಾಧ[3] ವನು[3] ।
ಪರಿಕಿಸದೆ ಸಲಹೆಂದು । ಬಿಜ್ಜಳನು ಕೇಳ್ದ * ॥ ೧೧ ॥

ವಚನ ॥ ಕೇಳಯ್ಯ ಬಿಜ್ಜಳ ನಿನ್ನವನಿಗೆ ಒಂದು ಕುರಿಗೆ ಸಾಸಿರ ಹೊನ್ನನ್ನು ಕೊಟ್ಟು, ಜಗದ ಕರ್ತ ತ್ರಿಪುರಾಂತಕದೇವರ ಗುಡಿಯಂ ಪೊಕ್ಕಂಥ ಕುರಿಯ ಕೊಡುವುದಿಲ್ಲ ವೆನಲು ನಿನ್ನಾಳು ಕಠಾರಿಯಂ ಕೀಳಲು, ಅದಂ ನೋಡಿ ಕಿನ್ನರಿಬ್ರಹ್ಮಯ್ಯ ಶಿರವಂ ಕಡಿದು ಬೀಸಾಟನೆಂದು ಬಸವಯ್ಯ ಪೇಳಲು ಬಿಜ್ಜಳ ಶರಣೆಂದು ಪಾದಗಾಣಿಕೆಯ ನ್ನಿಕ್ಕಿ, ತಮ್ಮ ಅರಮನೆಗೆ ಕಳುಹಲು ಇತ್ತ ಬಸವಯ್ಯ ಕಿನ್ನರಿಬ್ರಹ್ಮಯ್ಯಸಹಿತ ಅರ ಮನೆಗೆ ಪೋಗಿ, ಶಿವಶರಣರ ಸದ್ಗೋಷ್ಠಿಯಲ್ಲಿರುವಲ್ಲಿಗೆ ಸಂಧಿ ಸಂಪೂರ್ಣಂ.

**ಕಂದಪದ್ಯ.**

ಇದು ಕಿನ್ನರಯ್ಯನ ಮಹಿಮೆ । ಇದು ಸಿದ್ಧರಾಮಗುಪದೇಶಿಸಿದುದನೊರೆದೆಂ ॥
ಇದು ಶರಣರ ಲೀಲಾಮೃತ । ಮುದದಿಂ ಸವಿದಾನಂದಿಸಲಿ ಮಹಾಭಕ್ತರ್ ॥ ೧ ॥

ಇಂತಿ ಪದ್ಯಗಳು ೩೩೫

**ಅಂತು ಸಂಧಿ ೧೩ಕ್ಕಂ ಸಂಪೂರ್ಣಗಣನೆ – ೩೫೫೩ಕ್ಕಂ ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ**

---

1-1 ಕೇಳ್ವೆ (ಎ.) 2-2 ಬಮಾತಿನೊಳ್ (ಅ, ಗ, ಚ, ಬ.) 3-3 ವೆನ್ನ (ಇ, ಒ.)
* ಈ ಪದ್ಯ (ಅ, ಉ, ಎ, ಗ, ಚ, ಜ, ಟ, ಡ, ತ, ಬ.) ಪ್ರತಿಗಳಲ್ಲಿಲ್ಲ.

# ಹದಿನಾಲ್ಕನೆಯ ಸಂಧಿ

# ಗಾಣದ ಕನ್ನಪ್ಪನ ಕಥೆ ಮತ್ತು ಕಲಕೇತ ಬ್ರಹ್ಮಯ್ಯನ ಪ್ರಸಂಗ

**ಶಾರ್ದೂಲವಿಕ್ರೀಡಿತಾ ವೃತ್ತ.**

ಶ್ರೀಮದ್ದೇವರದೇವ ಶರ್ವ ಶುಭಗಾತ್ರಾ ರುದ್ರನಂದೀಶ್ವರಾ ।
ಕಾಮಧ್ವಂಸಿ ಕುಮಾರತಾತ ಗಿರಿಜಾ ಭರ್ತಾರ ಗಂಗಾಧರಾ ॥
ಸೋಮಾರ್ಧಾಂಕಿತ ಫಾಲನೇತ್ರ ನಿರಘ ತ್ರೈಲೋಕ ಸಂಪೂಜಿತಾ ।
ಸ್ವಾಮಿ ಶ್ರೀ ಶಿವ ಪಾಲಿಸೆನ್ನನೊಲವಿಂ ಶ್ರೀ ಚೆನ್ನಮಲ್ಲೇಶ್ವರಾ ॥ ೧ ॥

**ದ್ವಿಪದಿ.**

ಹರ ಗುರು ವರ ಮೂರ್ತಿ ದೇವತ ಚಕ್ರವರ್ತಿ ।
ನಿರುಪಮಾಸಕ್ತಿ ತಾ ಸಕಲ ಜಗದರ್ಥಿ ॥ ೧ ॥

ಲಿಂಗನಿಷ್ಠಾಪರನು ನೀತಿಕೋವಿದನು ।
ಮಂಗಳಾತ್ಮಕ ಜ್ಞಾನಸದೃಶ್ಯಮೂರುತಿಯು ॥ ೨ ॥

ಹರನ ಸಮುಖದ ಪ್ರಮಥ ವರಭೂಜ ಕರ್ತ ।
ಹರನಿರೂಪದಿ ಬಂದ ಕಲ್ಯಾಣಪುರಕೆ ॥ ೩ ॥

ಧರೆಯ ಭೋಗಕೆ ಶ್ರೇಷ್ಠ ವರ ಭಕ್ತಿಸ್ಥಲವು ।
ಶರಣ ಸೇವೆಯಗೈದು ಸದ್ಭಕ್ತಿಯಿಂದ ॥ ೪ ॥

ನೀಡಿಮಾಡಿಯೆ ಮೃಡನ ಒಲಿಸಿ ಘನಪದವಿ ।
ಗಾಢತರ ಶಿವಗಣಾರಾಧನೆಗೆ ಅನುವ ॥ ೫ ॥

ತಾ ನೆನೆದು ಮಹಿಮಾತ್ಮ ತನ್ನ ತಾನರಿವ ।
ಶಿವಪೂಜೆ ಶಿವಭಕ್ತಿ ಶಿವಧ್ಯಾನಪರನು ॥ ೬ ॥

ಶಿವಮಹಿಮೆಯಂ ಮೆರೆವ ಶಿವನ ಸದ್ಭಾವ ।
ಬಸವಾದಿಪ್ರಮಥರು ಎಸಗಿ ಮಾಡುವದ ॥ ೭ ॥

ಕುಶಲಭಕ್ತಿಯ ನೋಡಿ ಪಸರಿಸಿ ಮನದಿ ।
ಶಿವನ ಸುಜ್ಞಾನದ ಸಂಜ್ಞೆಗಾಳವನು ॥ ೮ ॥

ಅವಿರಳದ ನಿಜನಿಷ್ಠೆಯೆಂಬ ಸೂತ್ರವನು ।
ತಾಗೈಯ್ದು ರೇಚವ್ವೆ ತರುಣಿಸತಿಯಿಹಳು ॥ ೯ ॥

ಯೋಗದಿಂದಿಹರು ದಂಪತಿಗಳೊವ್ಮ್ಮನದಿ ।
ಯೋಗೇಶಲಿಂಗಮಂ ಭಜಿಸಿ ಬೇಡಿದನು ॥ ೧೦ ॥

ತ್ರಾಹಿ ತ್ರೈಜಗಧೀಶ ತ್ರಾಹಿ ಉಮೆಯೀಶ ।
ತ್ರಾಹಿ ಭಕ್ತರ ಪೋಷ ತ್ರಾಹಿ ಸರ್ವೇಶ ॥ ೧೧ ॥

ಹರಿನೇತ್ರ ಕಮಲವನು ಧರಿಸಿದೇ ಪದದಿ ।
ಸರಸಿರುಹಭವಶಿರವ ಕರದಿ ತಾಳ್ದಭವ ॥ ೧೨ ॥

ಸುರಪಾದಿ ದಿಗ್ವರರ ತರಣಿ ಚಂದ್ರಮರ ।
ಭರದಿ ಸೂತ್ರದಿಯಾಡಿಸುವ ಪರಬ್ರಹ್ಮ ॥ ೧೩ ॥

ಸ್ಮರ ಕಾಲ ತ್ರಿಪುರವನು ಉರುಹಿ ಮೆರೆದವನೆ ।
ಶರಣು ನಿನ್ನಡಿಗೆ ನಾ ಶರಣು ಶರಣೆಂಬೆ ॥ ೧೪ ॥

ಧರೆಗೆನ್ನ ಕಳುಹಿದಿರಿ ಚರಣಸೇವಕಗೆ ।
ತೆರನಕಾಣಲಿಕೆ ಮೈದೋರು ಪ್ರಾಣೇಶ ॥ ೧೫ ॥

ಶರಣಗಾಳದಕನ್ನನ ಸ್ತುತಿಗೊಲಿದು ಶಿವನು ।
ಭರದಿಷ್ಟಲಿಂಗದಲಿ ಮೈದೋರಿ ಆಗ ॥ ೧೬ ॥

ತನ್ನ ನಿಜರೂಪದಿಂ ತನ್ನಶರಣನಿಗೆ ।
ನನ್ನಿಯಿಂ ಮೈದೋರಿ ನಲಿದು ಸಂತಸದಿ - ॥ ೧೭ ॥

ಏಕೆ ಪ್ರಾರ್ಥಿಸಿ ಕರೆದೆ ಏನಿಚ್ಛೆ ನಿನಗೆ ।
ನಾ ಕರುಣಿಸುವೆ ಕೇಳು ನೀನು ಉಲ್ಲಸದಿ ॥ ೧೮ ॥

ವಚನ ॥ ಇಂತೆಂದ ಶಿವಂಗೆ ಗಾಣದಕನ್ನಯ್ಯಂ, ಶಿವದರ್ಶನಾನಂದದಿಂ ಮುಕುಳಿತಹಸ್ತನಾಗಿ ಎಲೆ ಸ್ವಾಮಿ! ಈ ಧರೆಯಲ್ಲಿ ನಿತ್ಯಸಾವಿರ ಗಣಾರಾಧನೆಗೈಯಲ್ಕೆ ಮನಸ್ಸಿನಿಚ್ಛೆ, ಇದಕ್ಕೆ ನಿನ್ನ ಜಟಾಶಿರೋರನ್ನೆಯಾದ ಜಾಹ್ನವಿಯಿಂದ; ನಿತ್ಯ ಒಂದು ಸ್ವರ್ಣದ ಮತ್ಸ್ಯವಂ ಈವುದು, ಸಾವಿರಕೆ ಆರಾಧನೆಯಾಗುವಂಥ ವರವಂ ಪಾಲಿಸೆಂದ ಕನ್ನಯ್ಯನಿಗೆ ವರವಿತ್ತು, ಶಿವನು ಅದೃಶ್ಯವಾಗಲು ಬಳಿಕ **ಕನ್ನಯ್ಯನೆಂತುಗೈದನದೆಂತೆನೆ.**

**ಜಂಪೆ.**

ಉದಯಕಾಲದಿ ಎದ್ದು । ಮದನಾರಿ ಪೂಜೆಗೈದು ।
ಸದುಹೃದಯ ಕನ್ನಯ್ಯ । ಸೂತ್ರ ಗಾಳವನು ॥ ೧ ॥

ಅಷ್ಟಾವರಣವ ಧರಿಸಿ । ನಿಷ್ಠೆಯಿಂದಲಿ ಶರಣ ।
ದೃಷ್ಟತ್ರಿಪುರಾಂತಕನ । ಮುಂದಿರ್ಪ ಕೆರೆಯ ॥ ೨ ॥

ತಡಿಯಲ್ಲಿ ತಾ ಕುಳಿತು । ಮೃಡನ ಮೋಹದ ಗಂಗೆ ।
ಅಡಿಗೆರಗಿ ನುತಿಗೈವ । ಅತಿಭಕ್ತಿಯಿಂದ ॥ ೩ ॥

ಶ್ರೀಕುಲಕೆ ಕಲ್ಯಾಣಿ । ಹೆಚ್ಚಿನ ಕೀರವಾಣಿ ।
ಪಂಕಜಪಾಣಿ ಜಾಣೆ । ಜಾಹ್ನವಿ ದೇವಿ ॥ ೪ ॥

ಧರೆಸರ್ವ ಜೀವರನು । ನಿರುತ ಪೋಷಿಪ ತಾಯೆ ।
ಹರನ ಮಕುಟದರನ್ನೆ । ಅಂಬ ಗಂಗಾಂಬೆ ॥ ೫ ॥

ಶರಣು ಕರುಣಾಪಾಂಗೆ । ಶರಣು ನಿತ್ಯೋತ್ತುಂಗೆ ।
ಶರಣು ಮಂದಾಕಿನಿಯೆ । ಶರಣು ಮನ್ಮಾತೆ ॥ ೬ ॥

ನಿನ್ನ ಪ್ರೀಯ್ಯದ ಶಿವನ । ಉನ್ನತದ ಶರಣರಿಗೆ ।
ಇನ್ನು ಆರಾಧನೆಗೆ । ರನ್ನ ಮತ್ಸ್ಯವನು ॥ ೭ ॥

ದೇವಿ ಜಾಹ್ನವಿ ಭಿಕ್ಷ । ದೇಹಿ ನಾ ನೀಡಮ್ಮ ।
ಪಾವನಾತ್ಮಕಿ ಬೇಗ । ಪಾಲಿಪುದು ತಾಯೆ ॥ ೮ ॥

**ತ್ರಿವುಡೆ.**

ಶರಣಕನ್ನಯ್ಯಗಳ ಭಕ್ತಿಯ । ಸ್ಮರಣೆಗೊಲಿದು ಗಂಗಾದೇವಿಯು ।
ಭರದಿ ಗಾಳಕೆ ಹೇಮಮತ್ಸ್ಯವ – ಭಾವೆ ತಗುಲಿಸಿದಳ್ ॥ ೧ ॥

ಶಿವಗಣಂಗಳ ಅರ್ಪಣಕೆ ತಾ । ಸುವರ್ಣ ಮತ್ಸ್ಯವ ಪಿಡಿದು ಭಕ್ತಿಯಿಂ ।
ತವಕದಿಂ ಕ್ರಿಯಗೈದು ಭತ್ಯವ – ತಂದು ಮುಸ್ತೈದ ॥ ೨ ॥

ಅರಸಿ ಭಕ್ತಿಯೊಳ್ತರುಣಿ ಆತನು । ಭರದಿ ಭಕ್ಷ್ಯವಮಾಡಿಯೆಲ್ಲವ ।
ಶರಣರಿಗೆ ವರತೃಪ್ತಿಗೈಸುತ – ಸತತವಿಂತಿರಲು ॥ ೩ ॥

ಒಂದುದಿನ ಬಸವಣ್ಣನರಮನೆ । ಯಿಂದ ಚರಮೂರ್ತಿಗಳ ಸ್ತೋಮವು ।
ಇಂದುಧರ ತ್ರಿಪುರಾರಿ ಮುಂದಿಹ – ಹೊಂಡಕೈತರಲು ॥ ೪ ॥

ಶರಿರಜಳಕಕೆ ಬರಲು ಕಂಡರು । ಭರದಿ ಕನ್ನಯ್ಯನಿರುವ ಭಾವವ ।
ಪರಮ ಭಸಿತ ರುದ್ರಾಕ್ಷಿಲಿಂಗವು – ಉರದಿ ರಂಜಿಸಿರೆ ॥ ೫ ॥

ಗಾಳಸೂತ್ರವ ಪಿಡಿದು ನೀರೊಳು। ಮೇಲೆ ಒಯ್ಯುತ ಮತ್ಸ್ಯಪಿಡಿಯಲು।
ಲೀಲೆಯಿಂದಿಹನನ್ನು ನೋಡಿದ – ರೀಮಹಾಗಣರು ॥ ೬ ॥

ಶಿವಸ್ವರೂಪನು ಇವನ ನೋಡಲು। ಕವಿದು ಅಕೃತ್ಯಕ್ರಿಯ್ಯೆಮಾಳ್ಪನು।
ವಿವರಿಸುತ ಎಲವೆಲವೊ ಶಿವಭಕ್ತ – ಮಾನ್ಯನಾಗಿಹೆಯು ॥ ೭ ॥

ಆರು ನಿನಗೀ ಕೃತ್ಯ ಪೇಳ್ದರು। ಧಾರಿಣಿಯ ಶಿವಭಕ್ತರ್ಕ್ರಿಚ್ಚರು।
ಸಾರು ನಮ್ಮಯ ಪಂಚಮುದ್ರೆಯ – ಸಲಿಸಿ ಇಡು ನಮಗೆ ॥ ೮ ॥

ನೀಚ ತೊತ್ತಿನ ಮಗನೆ ನಮ್ಮತ್ರಿ। ಲೋಚನನ ಮುದ್ರೆಯನು ತಾಳಿಯೆ।
ಕೂಚಭವಿಗಳು ಮಾಳ್ಪಕೃತ್ಯವ – ಹೇಸದೆ ಮಾಳ್ಪೆ ॥ ೯ ॥

ಎಂದು ಬಯ್ಯುವ ಎಲ್ಲ ಜಂಗಮ। ಗಂದು ಕನ್ನಯ್ಯ ನಮಿಸಿಯವರಿಗೆ।
ಇಂದುಧರನ ಭಕ್ತಿ ಶಾಸ್ತ್ರದ – ಲ್ಲುಂಟು ಎಂತೆಂದ ॥ ೧೦ ॥

ವಚನ ॥ ಇಂತೆಂದು ಎಲೆ ಸ್ವಾಮಿಗಳೆ! ಶಿವನಿಮಿತ್ತಾರ್ಥಂ ಯಾವಕೃತ್ಯವನ್ನಾದರೂ ಮಾಡಿ, ಶಿವನಿಗೆ ಅರ್ಪಿಸೆ ಶಿವಸಮ್ಮತಿಯೆಂಬ ನೀತಿಯಿರಲಿಕ್ಕಾಗಿ ಈ ಕೃತ್ಯವಂಮಾಳ್ಪೆ, ನಿಮ್ಮ ಬೈಗಳಿಂದ ಎನ್ನಭವದ ಕಲ್ಮಷ ಪಾರಿಪೋದುದು, ನಿಮ್ಮ ಹಸ್ತಸೋಂಕಿ ಹೊದ್ದುದಕ್ಕೆ ನಾ ಪವಿತ್ರನಾಗಿ ನಿಮ್ಮ ಹಸ್ತಪರುಷವಾದೆನೆನಲು, ಈ ಶರಣನ ಮಹತ್ತರಿಯದೆ ಗಣಂಗಳು ರೌದ್ರದಿಂ ಲಿಂಗವಂ ಕಿತ್ತುಕೊಳ್ಳಲು ಆ ಶರಣನೇನೆನ್ನುತಿರ್ದನು.

**ಏಕತಾಳ.**

ನೀವಿತ್ತ ಲಿಂಗಸೂತ್ರ। ನೀವೆ ತೆಕ್ಕೊಳ್ಳುವುದು।
ದೇವರೆ ನೀತವಲ್ಲ। ಜೀವ ಲಿಂಗಾಂಗಿ ॥ ೧ ॥

ಎನ್ನ ಲಿಂಗವು ನಿಮ್ಮ। ಅಂಗಲಿಂಗವು ಕೂಡಿ।
ಎನ್ನ ಜ್ಞಾನ್ನುವಿಬಳಿ। ಗಲ್ಲಿಗೈದುವವು ॥ ೨ ॥

ಶರಣಕನ್ನಯ್ಯನ। ಸರಕುಮಾಡದೆ ಅವರು।
ಭರದಿ ಪೋದರು ಎಲ್ಲ। ಬಸವನರಮನೆಗೆ ॥ ೩ ॥

ಗಣಸಮೂಹಕ್ಕೆಲ್ಲ। ತ್ರಿಣಯನರ್ಚನೆಗೈಸೆ।
ವನಿತೆರ್ಬಸವಸಹ। ಉಪಚಾರವಾಂತು ॥ ೪ ॥

ಶಿವಲಿಂಗಪೂಜೆಯ। ಅಮಿತದಿಂಗೈಸುತಿರೆ।
ಅವರ ಸಮೂಹದಿ। ಇವರು ಕುಳಿತಿರಲು ॥ ೫ ॥

ಗಾಳದಕನ್ನಯ್ಯನ। ಗುದ್ದಿ ಹೊಡೆದು ಬೈದವರು।
ಮೇಲು ಸೆಜ್ಜೆಯ ತೆಗೆಯ। ಲವರ ಲಿಂಗಗಳು ॥ ೬ ॥

ಎಲ್ಲ ಬಯಲ್ಯೈದಿರಲು । ಚರಗಣ ಮೂವತ್ತಾ ।
ರೆಲ್ಲ ಪವ್ವನೆ ನೋಡಿ । ಗರ್ವವು ಅಳಿದು ॥ ೭ ॥

ಜಗ್ಗನೆ ಜರಿಯುತ । ಜರ್ಜರಿಸಲಾ ಗಣರು ।
ಭಗ್ಗನೆ ಬಸವಣ್ಣಾ । ಭಾವವಮಂ ತಿಳಿದು ॥ ೮ ॥

ಎತ್ತಣ ಕಲಹವು । ಸತ್ಯ ಶರಣನ ನೋಯಿ ।
ಸಿತ್ತ ಬಂದಿಹ ಬಗೆಯ । ನರುಹಿರೆನಲಾಗ ॥ ೯ ॥

ಶಿವಮುದ್ರೆ ಲಾಂಛನನು । ಭವಿಕೃತ್ಯ ನಡೆಯಲಿರೆ ।
ಪವರಿ ಬಂದೆವು ನಿಜ । ಬಸವಣ್ಣ ಕೇಳು ॥ ೧೦ ॥

ಶಿವ ವಿಶ್ವತೋಮುಖ । ಶಿವಗುಂಟೆ ಕುಲ ಛಲ ।
ಶಿವಭಕ್ತಿ ಪ್ರಿಯ್ಯನೆಂಬ । ವಿವರವಂ ನೋಡಿ ॥ ೧೧ ॥

ವಚನ ॥ ಇಂತೆಂದು ಬಸವಣ್ಣ ಆ ಮೂವತ್ತಾರು ಗಣಂಗಳಂ ಬಿಟ್ಟು, ಎಲ್ಲರಿಗರ್ಪಣವಾಗಲೆಂಧು ಈ ಗಣರಂ ಕರೆದುಕೊಂಡು ಗಾಣದ ಕನ್ನಯ್ಯಗಳ ಗೃಹಕಂಬಂದು, ಅವರಂ ಕಂಡು ಮಣಿದು ಬಸವಣ್ಣನಿಂತೆಂದಂ.

**ದ್ವಿಪದಿ.**

ಶ್ರೀಮನ್ಮಹೇಶನೇ ಶರಣಸಂಜೀವ ।
ದೇವ ನಿನ್ನಯ ಮಹಿಮೆ ಇವರು ಕಾಣದಲಿ ॥ ೧ ॥

ಅಪರಾಧಿಗಳಾದರಿವರ ಕರುಣದಲಿ ।
ನಿಪುಣತ್ವದಿಂ ಕ್ಷಮಿಸಿ ನಿಮ್ಮವರೆಂದು ॥ ೨ ॥

ಇವರುಗ್ರ ಕೋಪವಂ ಇವರ್ಗೈದ ತಪ್ಪಂ ।
ಅವಧರಿಸಿ ನೀನಿವರ ಲಿಂಗಭಂಗಗಳ ॥ ೩ ॥

ನೀಗಲಾಡರಿಯದವರಿಗೆ ನಿನ್ನ ಮಹಿಮೆಯಿಂ ।
ಈಗ ಲಿಂಗವನಿವರಿಗಿಪ್ಪಂತೆ ಮಾಡು ॥ ೪ ॥

ಎಂದು ದೈನ್ಯತೆಯಾಗಿ ಎರಗಿ ಬಸವಣ್ಣ ।
ನಿಂದು ಬೇಡಲು ಶರಣನೆಂದ ಬಸವನಿಗೆ ॥ ೫ ॥

ಎನ್ನ ಲಿಂಗವನಿವರು ಆಕ್ರಮಿಸಿ ಒಯ್ದಿದರು ।
ಚೆನ್ನಿದೇ ಬಸವಣ್ಣ ನೀ ಸ್ತುತಿಸಿ ಕೇಳುವುದು ॥ ೬ ॥

ಶರಣಾಗತರಕ್ಷಕನೆಂಬ ಬಿರುದು ನಿಮ್ಮದೆಲ್ಲೈ ।
ಪರಿಪಾಲಿಸೆಂದೆನುತ ಬಸವ ಪೇಳಲಿಕೆ ॥ ೭ ॥

ಕಳೆದಬಳಿಯಲಿ ಹುಡುಕಿಕೊಂಬ ಬನ್ನೆಂದು ।
ನಿಳಯ ಪಾವನವಾಯ್ತು ನಿಮ್ಮ ಅಡಿ ಸೋಂಕಿ ॥ ೮ ॥

ಎಂದವರಿಗೆ ವಂದಿಸೆಲ್ಲರೊಡಗೊಂಡು ।
ಬಂದು ಆ ಕೆರೆಯತಡಿ ನಿಂದುಕನ್ನಯ್ಯ ॥ ೯ ॥

ಶರಣು ಮಂದಾಕಿನಿಯೆ ಶರಣು ಜಾಹ್ನವಿಯೆ ।
ಶರಣು ಶಿವನಮುಡಿಯ ಸಿಂಗರದ ಕಣಿಯೆ ॥ ೧೦ ॥

ಸರ್ವ ಜೀವಾಧಾರಿ ಸದ್ಗುಣಾಹಾರಿ ।
ಶರಣರಪರಾಧ ಕ್ಷಮಿಸವರ ಲಿಂಗಗಳಂ ॥ ೧೧ ॥

ಪಾಲಿಪುದು ದಯದಿಂದ ಪದ್ಮಾಯತಾಕ್ಷಿ ।
ಎಂದು ಶಿವಧ್ಯಾನದಿಂದಿಟ್ಟ ಗಾಳವನು ॥ ೧೨ ॥

ಒಂದುಬಾರಿಗೆ ಲಿಂಗಜೊಂಪೆ ಆರಾರು ।
ಬಂದವು ಗಾಳದಲಿ ಮುಂದಿಡುವನವರ್ಗೆ ॥ ೧೩ ॥

ಗುರುತಿನಿಂದವರವರ ಗುರುವಿತ್ತಲಿಂಗ ।
ವೆರಗಿ ಕೈಗೊಂಬರು ಹರಣಬಂದಂತೆ ॥ ೧೪ ॥

ಆರುಬಾರಿಯು ಗಾಳಮಂ ಇಡುತಲಂದು ।
ವಾರಿಯಲಿ ತೆಗೆದು ಮೂವತ್ತಾರು ಲಿಂಗಗಳಂ ॥ ೧೫ ॥

ಕೊಡಲು ಗಣರ್ನೋಡಿ ಅಚ್ಚರಿಯ ಪಟ್ಟಾಗ ।
ಕೂಡೆ ನುತಿಸುತಲೆಲ್ಲ ಶಿವನೀತನೆಂದು ॥ ೧೬ ॥

ಈತ ಮಾಡಿದನೆಮ್ಮ ಲಿಂಗಪ್ರತಿಷ್ಠೆ ಗುರು ।
ವೀತ ನಮಗೆಂದು ಘನವಾಗಿ ಪೊಗಳಿದರು ॥ ೧೭ ॥

ವಚನ ॥ ಆಗಲೆಲ್ಲರಂ ಕನ್ನಪ್ಪ ಕರೆದೊಯ್ದು, ತನ್ನ ಗೃಹದಲ್ಲಿ ಮೂರ್ತಿಸಿ ಪ್ರತಿ ನಿತ್ಯದಂತೆ ತಂದಿರ್ದ ಮತ್ಸ್ಯವಂ ವಿಕ್ರೈಸಿ, ಭತ್ಯವಂ ತಂದು ಸತಿರೇಚವ್ವೆಗೆ ಕೊಟ್ಟು ಭಕ್ಷ್ಯಗೈಸಿ, ತನ್ನ ನೇಮದ ಸಾಸಿರ ಗಣಂಗಳಿಗೂ, ಲಿಂಗವೈದಿದ್ದ ಮೂವತ್ತಾರು ಜಂಗಮರಿಗೂ ಬಸವೇಶನ ಸಮುಪಜ್ಞಿಯಲ್ಲಿ ಭೋಜನಂಗೈಸಿ, ತಾಂಬೂಲವಿತ್ತು ಮತ್ತು ದಕ್ಷಣೆಗೆಂತುಗೈದನದೆಂತೆನೆ.

**ತ್ರಿವುಡೆ.**

ಬೇಗ ಗಾಳವ ಕೊಂಡು ಶರಣನು । ಪೋಗಿ ಬೀಸಿಯೆ ಕನಕಮತ್ಸ್ಯವ ।
ಆಗ ತಂದೆಲ್ಲ ರಾಶಿಮಾಡಿಯೆ – ಇತ್ತ ದಕ್ಷಣೆಯ ॥ ೧ ॥

ಸೇರುಸೇರಿನ ತೂಕದಿಂದಲಿ । ಮಾರ ಮರ್ದನಗಣರಿಂಗಿತ್ತನು ।
ದಾರ ಗಾಳದಕನ್ನಪ್ಪಯ್ಯನು – ಮೆರೆದನೀ ಮಾಹತ್ತ ॥ ೨ ॥

ಇಂತು ಮಹಾಶರಣರ ಮಹಿಮೆಯು । ನಾಂತು ತಾ ಕಲ್ಯಾಣಪುರವದು ।
ನಿಂತು ಪ್ರಜ್ವಲಿಸುವುದು ಶಿವಪುರಿ – ಯಂತೆ ಬಸವನಿಂ ॥ ೩ ॥

ಶರಣರವರಾಚರಣೆ ಪರಿಪರಿ । ವರಮಹತ್ತುಗಳೊರೆಯೆ ಸಾಧ್ಯವೆ ।
ಶರಣ ಕಲಕೇತ ಬ್ರಹ್ಮನೆಂಬುವ – ವೀರಶೈವನವಂ ॥ ೪ ॥

ಇಷ್ಟಲಿಂಗವೆ ಜಂಗಮವು ಶಿವ । ಶ್ರೇಷ್ಠವೆಂದಾಚರಿಪ ಕ್ರೀಯ್ಯದಿಂ ।
ಮುಟ್ಟಿ ತನು ಮನ ಗುರು ಲಿಂಗ ಜಂಗಮ – ಶಿಷ್ಟನಾಗಿಹನು ॥ ೫ ॥

ಅವಗೆ ಪಾದವ ಪಾಲಿಸುವಂಥ । ಶಿವಗಣೋರ್ವನು ಒಂದುದಿನದಲಿ ।
ತವಕದಿಂ ಕಿನ್ನರಯ್ಯಗಳ ಗೃಹ – ಕೈದಿ ಬರಲು ॥ ೬ ॥

ಕೇಳ್ದ ಕಲಕೇತ ಬ್ರಹ್ಮ ಶರಣನು । ವೇಳೆ ಮೀರಿತೆತ್ತೈದಿ ಬಂದಿರಿ ।
ಕೇಳಲವನಿಗೆ ಮೂರ್ತಿಯೆಂದನು – ಕಿನ್ನರಯ್ಯಗಳು ॥ ೭ ॥

ಕಂಡು ಬಿನ್ನಹಗೈಯೆ ಪೋದೆನು । ಖಂಡ ಪರಶಿವ ಗಣಸಮೂಹದ ।
ತಂಡವಿದಿರೆದ್ದು ವಂದಿಸುತ್ತಲಿ – ಮತ್ತಲಾಗವರು ॥ ೮ ॥

ಸಲಿಸಕರೆಯಲು ಪೋಗಿಯವರೊಳು । ಅಲಸದೆಲ್ಲವ ಲಿಂಗಕಿತ್ತತಿ ।
ಸಲಿಸಿ ಬಂದೆನು ಎನ್ನಲಾಕ್ಷಣ ಕಲ – ಕೇತಬ್ರಹ್ಮಯ್ಯ ॥ ೯ ॥

ಬಳಿಕ ಜಳಕವಗೈಸಿ ಮೂರ್ತಿಯ । ನಲವಿನಂ ಮಡಿಯಿತ್ತು ಪೂಜಿಸಿ ।
ಒಲಿದು ತೀರ್ಥಪ್ರಸಾದ ಕೊಂಡನು – ವೀರಶೈವನವಂ ॥ ೧೦ ॥

ವಚನ ॥ ಇಂತು ತನ್ನ ಕ್ರೀಯ್ಯಕ್ಕೆ ಜಂಗಮವಂ ಶುದ್ಧಗೈದುದನೆಲ್ಲವಂ, ಓರ್ವಯ್ಯಂ ಪೋಗಿ ಕಿನ್ನರಯ್ಯಂಗೆ ನಿನ್ನ ಮನೆಪೊಕ್ಕು ಬಂದ ಜಂಗಮವಂ ಕಲಕೇತಯ್ಯ ತಾನು ಶುದ್ಧಗೈದುಕೊಂಡನೆಂದು ಪೇಳಲು, ಕೇಳಿ ಖತಿಯಿಂದ ಕಿನ್ನರಿ ಬ್ರಹ್ಮಯ್ಯಂ ಕಲಕೇತಬ್ರಹ್ಮಯ್ಯನಲ್ಲಿಗೆ ಬಂದು, ಶರಣ ಸಮುಖದಿಂದ ಕುಳಿತು ಕೇಳುತಿರ್ದನದೆಂತೆನೆ.

**ಜಂಪೆ.**

ಏನಿರೈ ಸ್ವಾಮಿಗಳೆ । ಎನ್ನ ಗೃಹದಿಂ ಬಂದ ।
ಜ್ಞಾನಿ ಜಂಗಮರನ್ನು । ನೀವು ಶುಚಿಗೈದು ॥ ೧ ॥

ಮುಂಡಪಕ್ಕವರ ಕರ । ಕೊಂಡಿರಂತೆಮ್ಮಲ್ಲಿ ।
ಕಂಡ ನಿಷೇಧಗಳೇನು । ಕಾರಣವ ಪೇಳಿ ॥ ೨ ॥

ನಾವು ವೀರಶೈವರ್ | ನೀವು ಶೈವಾಚಾರರ್ |
ನಮ ನಿಮಗೆ ಅಂತರವು | ನಿಗದಿ ಬೇರುಂಟು ‖ ೩ ‖

ನೆಟ್ಟಲಿಂಗದ ಮುಂದೆ | ನಾಟ್ಯವಾಡಿಯೆ ಕೂಲಿ |
ಕಟ್ಟಳೆಯ ಕೊಂಬೆ ನೀ | ಹನ್ನೊಂದು ಹಣವ ‖ ೪ ‖

ಇಷ್ಟಲಿಂಗವ ನಂಬ | ಲಿಷ್ಟವಿಲ್ಲವು ನಿನಗೆ |
ನೆಟ್ಟನೇ ಇಂತೆನಲು | ಸಿಟ್ಟಾದನಾತ ‖ ೫ ‖

ನೆಟ್ಟಲಿಂಗವು ಕೊಡುವ | ಕಟ್ಲೆ ಹನ್ನೊಂದು ಹಣ |
ಕಿಷ್ಟ ಜಂಗಮ ಭಕ್ತಿ | ಗೈವೆ ಅದಕಧಿಕ ‖ ೬ ‖

ಇಷ್ಟಲಿಂಗವ ನಂಬಿ | ಇನ್ನು ನೀ ಪೂಜಿಸೈ |
ನಟಿಸು ಕಿನ್ನರಿವಿಡಿದು | ಕೊಡುವ ಹಾಗವನು ‖ ೭ ‖

ಕೊಡುವುದೈ ಇಷ್ಟಲಿಂಗ | ಮೃಡನ ಜಂಗಮರಿಂಗೆ |
ನಡೆಸು ಇನ್ನೆರಡಷ್ಟು | ನೋಡು ಮಹಿಮೆಯನು ‖ ೮ ‖

ಎಂದ ಬ್ರಹ್ಮಯ್ಯಂಗೆ | ಎರಗಿ ಕಿನ್ನರಿಬ್ರಹ್ಮ |
ನಂದು ಗುರುನಿರೂಪಣೆಯ | ನಾಂತು ಭಕ್ತಿಯಲಿ ‖ ೯ ‖

ಇಷ್ಟಲಿಂಗದ ಪೂಜೆ | ನಿಷ್ಠೆಯಿಂದಲಿ ಮಾಡೆ |
ಕೊಟ್ಟುದಾಲಿಂಗಹಾಗ | ನೆಟ್ಟನೆ ಒಯ್ದು ‖ ೧೦ ‖

ತಂದು ಭತ್ತ್ಯವ ಪಾಕ | ಬಂದುಗೈದನು ಗಣಕೆ |
ಚಂದದಿಂದೆರಡಷ್ಟು | ಗೈದ ದಾಸೋಹ ‖ ೧೧ ‖

## ನಿಜಲಿಂಗಚಿಕ್ಕಯ್ಯನ ಮಹಿಮೆ.

**ತ್ರಿವುಡೆ.**

ಚೋರಚಿಕ್ಕಯ್ಯನೆಂಬ ಶರಣನು | ಮಾರಹರ ಶಿವಪೂಜೆ ಮಹಿಮನು |
ವೀರಬಸವೇಶ್ವರ ನಿರೀಕ್ಷಣ – ಧೀರ ಘನಮಹಿಮ ‖ ೧ ‖

ಷಡುಸ್ಥಲದ ಶ್ರೀ ಬ್ರಹ್ಮಿ ಸದ್ಗುರು | ನಿಟಿಲನಯನನ ಸುದೀಕ್ಷೆಯನು ಮಿಗೆ |
ಪಟುತರದಿ ಪಡೆದಮಳಭಕ್ತ ಸು – ಜ್ಞಾನಿಯಾಗಿಹನು ‖ ೨ ‖

ಹಿರಿಯ ಉದ್ಯೋಗಸ್ಥ ಗಂಗಯ್ಯ | ಹರನ ಭಕ್ತನು ಶಿವಗಣಂಗಳ |
ಚರಣಕಿಂಕರನಾಗಿ ಭಕ್ತಿಯ – ಮಾಡುತಿಹನು ‖ ೩ ‖

ಆತನ ಸತಿ ಚನ್ನಾಜಿಯೆಂಬಳು | ನೂತನದ ನವರತಿಯುತೆರದಲಿ
ಜಾತೆ ಮೋಹಿನಿ ರಂಭೆಯಂದದಿ – ಪರಮ ಸುಂದರಿಂಸು ‖ ೪ ‖

ಶರಣ ಚಿಕ್ಕಯ್ಯ ತನ್ನ ಕ್ರಿಯೆಯನು । ನರರ ಸಂಚಾರವಿಲ್ಲದೆಡೆಯಲಿ ।
ಅರಸಿ ಪೋಗಿಯೆ ಪತ್ರೆತರುತಲಿ – ಹರನ ಪೂಜೆಯನು ॥ ೫ ॥
ದೃಢವೆರಸಿ ಜಪಧ್ಯಾನ ಗೈಯ್ಯುತ । ಒಡನೆ ತಾ ಕಲ್ಯಾಣಪುರದಲಿ ।
ನಡೆದು ಬಂದುರೆ ಭಕ್ತರ ಗೃಹದಿ – ಸವಿವನಿಚ್ಛೆಯನು ॥ ೬ ॥
ಆರ ಅಂಕೆಯು ಇಲ್ಲದಲೆ ತಾ । ಮಾರಹರ ಧ್ಯಾನವನು ಬಲಿದತಿ ।
ಮೇರೆಯಿಂದಿರುತಿಹನು ಶರಣನು – ಮಹಿಮನಲ್ಲಿ ॥ ೭ ॥
ಒಂದುದಿನದಲಿ ನಿತ್ಯನೇಮವ । ಚಂದದಿಂ ತೀರಿಸಿಯೆ ಪಾವುಗೆ ।
ಅಂದು ಪಾದಕೆ ಧರಿಸಿ ತಂಬಿಗೆ – ಹಸ್ತದಲಿ ಪಿಡಿದು ॥ ೮ ॥
ಭಸಿತ ರುದ್ರಾಕ್ಷಿಗಳ ಧರಿಸಿಯೆ । ಎಸೆವ ಕಾವಿಯಪೊದ್ದು ಸಾಕ್ಷಾತ್ ।
ಪಶುಪತಿಯೊ ಎಂಬಂತೆ ವೀದಿಯೋಳ್ – ಸುಸರದಿಂ ಬರಲು ॥ ೯ ॥
ಶರಣ ಈ ಗಂಗಯ್ಯ ಕಾಣುತ । ಚರಣಕೆರಗಿ ಬಿನ್ನಹವನೊಪ್ಪಿಸಿ ।
ಕರೆದುತಂದನು ತನ್ನ ಮಂದಿರ – ಕವರನಾಗ ॥ ೧೦ ॥

ವಚನ ॥ ಇಂತೀ ಗಂಗಯ್ಯ ಜಂಗಮವಂ ಕರೆತಂದು, ತನ್ನ ಸತಿಗೆ ಎಲೆ! ಇವರು ಮಹಾತ್ಮರು ಇವರಿಗೆ ಶೀಘ್ರದಿಂದ ನೂತನ ಭಕ್ಷ್ಯಭೋಜ್ಯದಿಂ ತೃಪ್ತಿಪಡಿಸಿ, ತಾಂಬೂಲವಿತ್ತು ಕಳುಹು, ನನ್ನಂ ದೊರೆಬಿಜ್ಜಳ ಕರೆಯಿಸಿಹಂ, ಪೋಗಿಬರ್ಪನೆಂದು ಪೋಗಲು ಇತ್ತ ಚನ್ನಾಜಿ ಎಂತು ಗೈದಳದೆಂತೆನೆ.

**ಏಕತಾಳ–ಅರ್ಧರೇಕು.**

ಚೆನ್ನಿಗ ಚೆಲುವಮೂರ್ತಿ – ರನ್ನದ ಪೊಳಪಿಂ ।
ದಿನ್ನಿರೆ ನೋಡಿದಳು – ಮನವೇರಿ ಇಳಿವನಕ ॥ ೧ ॥

ಮನವಿಟ್ಟಳೀತನೋಳ್ – ಮದನ ಕೇಳಿಯೊಳು ।
ಇನಯನಂದದಿ ಇವನ – ತಾನಾಳಬೇಕೆಂದು ॥ ೨ ॥

ಬಗೆಬಗೆ ಬಿನ್ನಣ – ಪಲವು ಜಾಣ್ಮೆಯೊಳು ।
ಪನ್ನೀರುಗಳಲವನ – ಚೆನ್ನಡಿಯ ತೊಳೆದು ॥ ೩ ॥

ತನ್ನ ಕೈಲಾಘದಿಂ – ತಂದು ಗದ್ದುಗೆಯೋಳ್ ।
ಇನ್ನಿರಿಸಿ ಶಿವಪೂಜೆ – ಯನ್ನುತಾಗೈಸಿ ॥ ೪ ॥

ಪಟ್ಟೆಮಂಚದಿ ಸ್ವಾಮಿ – ಪವಡಿಸಿರಿ ದೇವ ।
ತಾಂಬೂಲ ಗಂಧದ್ರವ್ಯ – ತಂದು ಮುಂದಿರಿಸಿ ॥ ೫ ॥
ಲೇಪಿಸಿ ಅಂಗಕ್ಕೆ – ಕಾಪಾಲಿರೂಪ ॥

ವಚನ ॥ ಇಂತು ಉಪಚಾರಂಗೈದು, ಆ ಮೂರ್ತಿಯೋಳ್ ಈ ಚನ್ನಾಜಿ ಇಂತೆಂದಳು.

**ಯಾಲಪದ.**

ನಿಮ್ಮ ಮೇಲಣಿಚ್ಛೆಯಾಗಿ । ಕಮ್ಮಗೋಲನಟ್ಟುಳಿಗಾಗಿ ।
ದಮ್ಮಯ್ಯ ನಿಮ್ಮ ಮರೆಹೊ – ಕ್ಕೆ – ಮನ್ನಿಸೈ ಸ್ವಾ – ಮಿ—
ಗಮ್ಮನೆನಗೆ ರತಿಸುಖದೋರಿರಿ ॥ ೧ ॥

ನೋಡಿ ನಿಮ್ಮ ಬೆಂಡಾಯಿತಂಗ । ಹೂಡಿ ಬಾಣದೊಳಿಚ್ಚ ಮಾರ ।
ಗಾಢ ಎನ್ನ ತರ್ಕೈಸಿ ಚುಂಬ – ನ – ಮಾಡಿ ಏ ಸ್ವಾ – ಮಿ—
ಕೂಡೆ ಎನ್ನ ನೆರೆಯೊ ಮೋಹನನೆ ॥ ೨ ॥

ತಾಳಲಾರೆ ತನುತಾಪವ । ಆಳ್ಪೆ ಎನ್ನ ಕಾಂಕ್ಷೆ ಸಲಿಸು ।
ಲೋಲೆಯಿಂತೆಂದು ದೈನ್ಯಪಡುವವ – ಳಂ – ನೋಡಿಯಾ ಶರ – ಣ—
ಹೇಳಿದನು ಪ್ರತಿಯುತ್ತರವವಳ್ಗೆ ॥ ೩ ॥

ಭಕ್ತೆಯರಕ್ಕ ತಂಗಿ ತಾಯಿ । ಯುಕ್ತವಾಗಿ ನಮಗೆ ವ್ರತವು ।
ಮತ್ತೆ ನಿನ್ನ ಮುಟ್ಟಲೊಲ್ಲೆ – ನು – ಕೇಳವ್ವ ತಾ – ಯಿ—
ಯತಿಗಳನ್ನು ಬಯಸೆ ಪಾಪವು ॥ ೪ ॥

ಪತಿಗೆ ಎರಡು ಬಗೆಯೆ ನಿನಗೆ । ಪಾತಕವು ಬೇಡ ತಾಯೆ ।
ಪತಿವ್ರತೆಯಾಗಿರು ಎನ್ನ – ನ್ನು – ಕ್ಷಮಿಸಮ್ಮ ನೀ – ನು—
ರತಿಯನೊಲ್ಲೆನೆಂದನಾ ಶರಣ ॥ ೫ ॥

ವಿರಹದಿಂದ ಬಂದು ನಿನ್ನ ಮರೆಬಿದ್ದವಳ ಕಾಯಲೊಲ್ಲೆ ।
ಸರಸವಲ್ಲ ನೋಡು ನಿನ್ನ – ಯ – ಶಿರವ ಹರಿಸು – ವೆ—
ಸುರತಾನಂದದಿ ಆಳು ನೋಡಿಕೊ ॥ ೬ ॥

ಇವಳ ಮಾತು ಸೊಗಸದೆ ಶರಣ । ಜವದಿ ಹೊರಡಲೆತ್ನಿಸಲ್ಕಾಗ ।
ಯುವತಿ ತನ್ನ ಸೆಜ್ಜೆ ಭರಣ – ವ – ತೆಗೆದು ಬೇ – ಗ—
ಅವರ ಶಿವಪೂಜೆಯಾಧಾರದೊಳಗಿಟ್ಟು ॥ ೭ ॥

ಕಟ್ಟ ಗಟ್ಟ ಘಂಟೆ ದರ್ಪಣವ । ನಿಟ್ಟದರ ಮೇಲೆ ಮರಸುತ ।
ಕೊಟ್ಟಳಾಗ ಶಿವಪೂಜೆಯ ಗಂ – ಟ – ತೆಕ್ಕೊಂಡು ಶರ – ಣ—
ನೆಟ್ಟನಾಗ ನಡೆದ ಸದನಕ್ಕೆ ॥ ೮ ॥

ಅನಿತರೊಳಗೆ ಅರಮನೆಯಿಂದ । ಮನೆಗೆ ಬಂದಾ ಗಂಗಯ್ಯ ತನ್ನ ।
ವನಿತೆಯನ್ನು ಕೇಳ್ದ ಜಂಗ – ಮ – ಮೂರ್ತಿಗೆ ನೀ – ನು—
ಉಣಲಿಕ್ಕಿ ಕಳುಹಿದೆಯೇನೆ ॥ ೯ ॥

ವಚನ ॥ ಇಂತೆಂದು ಕೇಳ್ದ ಗಂಡಂಗೆ ಆ ಸತಿ ಏನೆನ್ನುತಿರ್ದಳು.

**ಜಂಪೆ.**

ಏನ ಪೇಳಲಿ ಕಾಂತ । ಎಂಥ ಜಂಗಮನನ್ನು ।
ನೀನು ಸದನದಿ ಇರಿಸಿ । ಪೋಗಲಾನಿತ್ತ ॥ ೧ ॥

ಭಕ್ತಿಯೊಳು ಶಿವಪೂಜೆ । ಯುಕ್ತದಿಗೈಸವರ್ಗೆ ।
ಮತ್ತೆ ಭಕ್ಷ್ಯಗಳಿಂದ । ತೃಪ್ತಿಪಡಿಸಿದೆನು ॥ ೨ ॥

ನಿಂದು ಎನ್ನನು ನೋಡಿ । ಬಂದು ಮೋಹದಿ ಸೆಳೆದು ।
ಕಂದರ್ಪರತಿಗೆಳಸಿ । ಮುಂದೆ ಪಿಡಿಯುವರೆ ॥ ೩ ॥

ಹೆಣಗಿದನು ನಾನವಗೆ । ಒಳಗಾಗದಿರೆ ಎನ್ನ ।
ಘನಭರಣಗಳ ಸೆಜ್ಜೆ । ಶಿವಲಿಂಗ ಸಹಿತ ॥ ೪ ॥

ಭರದಿ ಸೆಳೆದೊಯ್ದನವ । ಹರಿದ್ಯೈದಿ ದೊರೆಗರುಹಿ ।
ಶಿರವರಿಸಿ ಬರದಿರಲು । ಹರಣವಳಿವೆನೆನೆ ॥ ೫ ॥

ಕೇಳುತಲಿ ಈ ಮಾತ । ತಾಳಿ ಕೋಪವನವನು ।
ಪೇಳಿದನು ಬಿಜ್ಜಳಗೆ । ಹಾಳು ಸುದ್ದಿಯನು ॥ ೬ ॥

ಅಲ್ಲಿರ್ದ ಮಂಚಯ್ಯ । ಅರಸು ಸಿಟ್ಟಿಸುವಂತೆ ।
ಎಲ್ಲುಂಟು ದುರ್ನಡತೆ । ಅವನ ಪಿಡಿತರಿಸು ॥ ೭ ॥

ನಿಜಮಾಗಿ ಶಿರವರಿಸು । ನೀತಿಮಾರ್ಗವು ಕೆಟ್ಟು ।
ಈ ಜಗದಿ ನಗೆಗೆಡೆಯು । ಅರಸೆ ನಿನಗಹುದು ॥ ೮ ॥

ಪ್ರಧಾನತೆ ಬಸವನಿಗೆ । ನೀ ದಯದಿ ಕೊಡಲಿಂತು ।
ಮೇದಿನಿಯೊಳಪವಾದ । ಮಹಿಪ ನಿನಗಾಯ್ತು ॥ ೯ ॥

ಶರಣನಾದರೆ ತಾನು । ಹರಯೋಗವನು ಬಿಟ್ಟು ।
ತರುಣಿಯಳ ಮನವೆಳಸಿ । ಭರದಿ ಪಿಡಿಯುವರ ॥ ೧೦ ॥

ಪತಿವ್ರತವ ಕೆಡಿಸವಳ । ವಸ್ತುಗಳ ಹರಿದೋಯ್ದು ।
ಪತಿಯಿರದ ಪುರದಂತೆ । ಗತಿಯೆಂದ ಮಂಚಿ ॥ ೧೧ ॥

ವಚನ ॥ ಈ ಪ್ರಕಾರವೆಂದ ಮಂಚಿಯ ಮಾತಿಗೆ, ರಾಯಂ ಬಸವಣ್ಣನಂ ಕರೆಸಿ ಏನಯ್ಯ ! ನಿಮ್ಮ ಶರಣರು ಇಷ್ಟು ದುರಾಗತಮಂ ಮಾಡಬಹುದೆ ? ಎಂದು ಕೇಳಲಾ ಬಸವನಿಂತೆಂದಂ.

**ಏಕತಾಳ.**

ಶಿವಶರಣರು ಅವರು । ಭುವಿಯೊಳಿಂತಪವಾದ ।
ಅವರು ಮಾಡರು ನೀನು । ವಿವರಿಸು ಅರಸೆ ॥ ೧ ॥
ಶರಣರಂದಾಡಿದೆ । ವರಭಕ್ತ್ಯನೀಡಲವಳ ।
ನೆರೆಯಲಪೇಕ್ಷಿಸುವನೆ । ಶರಣನೆಂತಹುದು ॥ ೨ ॥
ಅವಳೊಲ್ಲೆನೆಂದರೆ । ಅವಳ ಆಭರಣಗಳ ।
ತವಕದಿಂ ಕಿತ್ತೊಯ್ವ । ನವನೆಂಥ ಶರಣ ॥ ೩ ॥
ಪುರದೊಳಗಿಂತಾಗೆ । ಧರಣಿಪನೆನ್ನುವರೆ ।
ಬರಬೇಡ ಇರು ಹಿತದಿ । ಕರೆತರಿಸುವೆನು ॥ ೪ ॥
ತರುಣಿ ಸೆಜ್ಜೆಯು ಲಿಂಗ । ಪರಿದೊಯ್ದುರುವನಂತೆ ।
ತರುಣಿ ಹರಣವಳಿವೆನೆಂ । ದಿಹಳಂತೆ ಕೇಳು ॥ ೫ ॥
ಇಂತೆಂದ ನೃಪತಿಗೆ । ಕಂತುಹರ ಬಸವೇಶ ।
ಇಂತುಸುರ ಸಲ್ಲದೆಂದು । ಕುಂತಿರ್ದನಾಗ ॥ ೬ ॥
ಚರರಟ್ಟಿ ಹುಡುಕಿಸೆ । ಶರಣ ಏಕಾಂತ ಸ್ಥಲದಿ ।
ಹರಪೂಜೆ ಜಪಧ್ಯಾನ । ಮರವೆಯೊಳಿರಲು ॥ ೭ ॥
ಮೆಲ್ಲನೆ ಶಿವಪೂಜೆ । ಅಲ್ಲಿ ಪೆಟ್ಟಿಗೆಯೊಳು ।
ಎಲ್ಲಾಭರಣ ಸೆಜ್ಜೆ । ಇರೆ ತೆಗೆದದನು ॥ ೮ ॥
ತಂದು ರಾಯಗೆ ತೋರೆ । ಅಂದು ಕೋಪದಿ ನೃಪ ।
ನಿಂದವನ ಪಿಡಿದು ಶಿರ । ವರಿಯೆಂದ ರಾಯ ॥ ೯ ॥
ನೃಪನಾಜ್ಞೆಯಿಂದ ಅಪ । ಹರಿಸಿದ ಚಿಕ್ಕಯ್ಯನ ।
ನೆಪದಿಂದ ತಂದರಾ । ನೃಪನೆಡೆಗಾಗಂ ॥ ೧೦ ॥

ವಚನ ॥ ಏನಯ್ಯ ! ನೀನು ಶಿವಸ್ವರೂಪನಾಗಿರ್ದು ಭಕ್ತಳ ಕೈಯಲ್ಲನ್ನವನ್ನುಂಡು, ಅವಳಂ ರಮಿಸಬೇಕೆ ? ಅವಳೊಲ್ಲೆನೆಂದರೆ ಅವಳ ಪ್ರಾಣಲಿಂಗಸೆಜ್ಜೆ, ಆಭರಣಗಳಂ ಕಿತ್ತುಕೊಂಡು ಬರಬಹುದೆ ? ಶರಣಮಾರ್ಗವೊ ಇದು ? ಎನ್ನಲು ಚಿಕ್ಕಯ್ಯ ಶರಣಂ ಬಿಜ್ಜಳಗಿಂತೆಂದಂ.

**ತ್ರಿವುಡೆ.**

ಧರಣಿಪತಿ ನಾನರಿತನಲ್ಲವು । ತರುಣಿ ಮೋಹಿಸಿ ತಾನೆ ಎನ್ನನು ।
ಕರೆಯೆ ಇದು ಮಹದೋಷವೆನ್ನುತ – ಒರೆದೆ ನೀತಿಗಳ ॥ ೧ ॥
ಸಟೆಯ ಬೊಗಳುವೆ ಕುಟಿಲತನದಲಿ । ಘಟವ ಹರಿಸುವೆ ದಿಟದಿ ನೋಡೆಲೊ ।
ಸಟೆಯ ಬೊಗಳದೆ ದಿಟವ ನುಡಿ ಎಲೊ – ಘಟಹೊರಕ ನೀನು ॥ ೨ ॥

ಪೆಟ್ಟಿಗೆಯೊಳಟಮುಟವ ಮಾಡಿಯೆ । ಇಟ್ಟಳ್ಕೆ ನಾನರಿಯೆ ಶಿವಬಲ್ಲ ।
ದಿಟವದಾದರೆ ನಿನ್ನ ಆಜ್ಞೆಗೆ – ಘಟವೆ ಪೋಗಲೆಂದ ॥ ೩ ॥

ತಿರುಕನಿವ ಕರೆಕರೆಯ ಮಾತನು । ಮರಸಿ ಪೇಳುವನಿವನನೀಗಲೆ ।
ಚರರೆ ಭರದೊಳು ತಿರುಕನಿವನನು – ಶಿರಗಡಿಯಿರೆಂದ ॥ ೪ ॥

ಶರಣದ್ರೋಹವ ನೋಡಲಾಗದು । ಧರಣಿಪತಿ ನಾಂ ಪೋಪೆ ಸಟೆದಿಟ ।
ವರಿತುಕೊಳ್ಳೆಂದೆನುತ ಪೋದನು – ಬಸವನರಮನೆಗೆ ॥ ೫ ॥

ಇತ್ತ ಬಿಜ್ಜಳ ಕುಹಕ ಮಂತ್ರಿಗಳ್ । ಮೊತ್ತದಿಂ ಸರ್ವಜನ ನಿಬಿಡದಿ ।
ಮುತ್ತಿ ಬರುತಿರೆ ಚರರು ತಂದರು – ಸತ್ಯಶರಣನನು ॥ ೬ ॥

ಶಿರವರಿಯೆ ನೃಪ ಕೊಡಲು ಅಪ್ಪಣೆ । ಚರರು ಕರವಾಳಿಂದ ಹೊಡೆಯಲು ।
ತರಿಯೆ ಬಯಲೊಳು ಬೀಸಿದಂದದಿ – ಸರಿಯೆ ಖಡ್ಗವದು ॥ ೭ ॥

ಶಿರವನರಿದರೆ ತಗುಲದಂದದಿ । ಶರೀರದೃಶ್ಯವ ನೋಡಿ ನೃಪತಿಯು ।
ನರರಚ್ಚರಿಪಟ್ಟು ಮೂಗಿನೊಳು ಬೆರ – ಳಿಟ್ಟು ಶಿರದೂಗೆ ॥ ೮ ॥

ಸತ್ಯಸಾಕ್ಷಾತ್ ಶಂಭುವೀತನು । ನಿತ್ಯವಸ್ತುವು ಎಂದು ಎಲ್ಲರು ।
ಮತ್ತೆ ಬಂದೆರಗಿದರು ಶರಣಗೆ – ನೃಪತಿ ಮೊದಲಾಗಿ ॥ ೯ ॥

ಜಯತು ಚರವರ ಪರಮಪಾವನ । ಜಯತು ನಿನ್ನನು ತಿಳಿಯದಧಮನ ।
ದಯದಿ ರಕ್ಷಿಸು ಕೈಯ್ಯ ಬಿಡದಲೆ – ಜಯತು ಮಾಂ ಪಾಹಿ ॥ ೧೦ ॥

ವಚನ ॥ ಇಂತೆಂದು ಬೇಡಿಕೊಂಡ ನೃಪತಿಯಂ ನೋಡಿ, ಎಲೆ ರಾಯ ಪ್ರತ್ಯಕ್ಷವಾದಾಗ್ಯೂ ಪ್ರಮಾಣಿಸದೆ ನೀನಿಂತು ಗೈದುದಕ್ಕೆ, ಶರಣರ ಸುರಗಿಯಿಂದಳಿವು ನಿನಗೆನ್ನಲು, ಬಳಿಕ ಈ ಮಹಿಮೆಯಂ ಪ್ರಮಥರು, ಈಶಂ, ಹರಿವಿರಂಚಿ ಸುರ ಮುನಿಗಳು ಖೇಚರದೋಳ್ನಿಂದು ನೋಡಿ, ಜಯಜಯವೆಂದು ಮಲ್ಲಿಗೆ ವೃಷ್ಟಿಯಂ ಸುರಿದರದೆಂತೆನೆ.

**ಸಾಂಗತ್ಯ.**

ವರಬ್ರಹ್ಮಚಾರಿಯೆ ಜಯಜಯ ಜಯವೆಂದು । ಸುರಿದು ಪೂಮಳೆ ವಾದ್ಯಮೊರೆಯೆ ॥
ಶರಣಗಣಂಗಳು ಪುರಜನ ಧರಣೀಶ । ನೆರೆದ ಸಂದಣಿಯೊಳಗೆಲ್ಲ ॥ ೧ ॥

ಅರರೆ ನಿಜಲಿಂಗಚಿಕ್ಕಯ್ಯ ಮಹಿಮಾತ್ಮ । ಶರಣರ ಕೈಮುಕುರವಾಗಿ ॥
ಮೆರೆದು ಪವಾಡವ ತೋರಿ ಒಪ್ಪಿದನೆಂದು । ಪುರಜನ ಧರಣಿಪ ಪೊಗಳೆ ॥ ೨ ॥

ಗನ್ನಘಾತಕಿ ಪಾಪಿ ಚನ್ನಾಜಿಯನು ತಂದು । ಇನ್ನರಿಯಿರಿ ಕಿವಿಮೂಗ ॥
ಎನ್ನುತ ಭಟರಿಗಾಜ್ಞೆಯನಿತ್ತು ನೃಪವರ ।ನನ್ನಿಯಿಂದರಮನೆಗೈದ ॥ ೩ ॥

ಆನಂದ ನಿಜಲಿಂಗಚಿಕ್ಕಯ್ಯ ಮಹಿಮೆಯ । ಮಾನಿನಿ ಪುರುಷರ್ಭಕ್ತಿಯಲಿ ॥
ಜ್ಞಾನದಿಂ ಲಾಲಿಸೆ ಶ್ರೀ ಪರಮೇಶ್ವರ । ಆನಂದ ಮುಕ್ತಿಯನೀವ ॥ ೪ ॥

# ಶ್ರೀ ಮಡಿವಾಳಮಾಚಿದೇವರ ಮಹಾತ್ಮೆ.

## ದ್ವಿಪದಿ.

ಶ್ರೀ ಗುರು ವರಮೂರ್ತಿ ಸಕಲ ಸತ್ಕೀರ್ತಿ |
ನಾಗಾರಿಗಮನಪ್ರಿಯ್ಯನಖಿಳ ಜಗದಯ್ಯ ॥ ೧ ॥

ಭುವಿಯೊಳಗೆ ಕಲ್ಯಾಣಪುರದಿ ಬಿಜ್ಜಳನು |
ಅವಿರಳದ ಅಷ್ಟಮಹದೈಶ್ವರ್ಯದೊಳಿರಲು ॥ ೨ ॥

ಚಪ್ಪನ್ನದೇಶದ ಚೆಲುವ ನೃಪರುಗಳು |
ತಪ್ಪದೆಲ್ಲರು ಬಂದು ಓಲಗದೊಳಿರಲು ॥ ೩ ॥

ಮಕುಟವರ್ಧನರುಗಳು ಮಂಡಲೇಶ್ವರರು |
ಸಕಲ ಮಂತ್ರಿಗಳು ಸಾಧಕನಿಯೋಗಿಗಳು ॥ ೪ ॥

ವಿದ್ವಾಂಸ ಕವಿಜನರು ವೀಣೆವಾಚಕರು |
ಮುದ್ದು ವೇಶಾಂಗನೆಯರ್ಕುಂದಾಡುತಿರಲು ॥ ೫ ॥

ಭೂಸುರರು ಬಲ್ಲ ಹಿರಿಯ ಪ್ರಾಜ್ಞರುಗಳು |
ಭಾಸುರದ ಕಳೆಯಿಂದ ಬಿಜ್ಜಳನೃಪನು ॥ ೬ ॥

ರತ್ನಸಿಂಹಾಸನದಿ ರಮ್ಯದಿಂದಾಗ |
ಅರ್ಥಿಯೋಲಗಗೊಳಲು ಮಹದೇವಿಯಿಂದ ॥ ೭ ॥

ಎಸೆವಂಥ ಓಲಗಕೆ ಬಸವೇಶ ಬರಲು |
ಸಾಸಿರಚಂದ್ರಮನ ಸಾಟಿಕಳೆಯಂತೆ ॥ ೮ ॥

ಬಂದು ಮಂಡಿಸಿಯಿರಲು ಪೊದ್ದು ದುಕೂಲವನು |
ಚಂದದಿಂದತಿಶುಭ್ರ ಸೊಗಸು ವಲ್ಲಿಯನು ॥ ೯ ॥

ಪೊದ್ದು ಬಸವೇಶ ಮಧ್ಯಸಭೆಯೊಳಿರಲು |
ಚೋದ್ಯಗೊಂಡರು ಕಣ್ಗೆ ಸೊಗಸುಬೀರುತಲಿ ॥ ೧೦ ॥

ಬಿಜ್ಜಳನ ಸಭೆಯವರು ಬೆಚ್ಚಿನೋಡುವರು |
ಅಚ್ಚರಿಯ ಪೊಳಪೆಸೆಯೆ ಅರಸು ತಲೆದೂಗಿ ॥ ೧೧ ॥

ಬಸವೇಶನವರಲ್ಲಿ ಬೆಳ್ಪುಕಳೆ ಮಿರುಗೆ |
ಒಸೆದು ದುಗೂಲವ ತೊಳೆದ ಮಡಿವಳನೆ ಪ್ರೌಢ ॥ ೧೨ ॥

ವಚನ ॥ ಇಂತು ಆಶ್ಚರ್ಯವಂಪಟ್ಟು, ಬಸವೇಶನೊಳು ರಾಯನೇನೆನ್ನುತಿರ್ದನು.

**ಸಾಂಗತ್ಯ.**

ಬಾರೊ ಬಸವಮಂತ್ರಿ ಬಾರೆನ್ನ ಪ್ರೀಯ್ಯನೆ। ಬಾರೊ ಮನ್ಮಥರೂಪ ಬಸವ ॥
ಬಾರೋ ಅನೇಕ ನಕ್ಷತ್ರಮಧ್ಯದೊಳೆಸೆವ । ಬಾರೆನ್ನ ಪೂರ್ಣಚಂದ್ರಮನೆ॥ ೧ ॥

ಇಂತಪ್ಪ ಆಸ್ಥಾನವ ನೋಳ್ಪೆನೆಂತೆಂದು । ಸಂತೋಷದಿಂ ಚಂದ್ರನಿಳಿದು ॥
ಕಂತುಹರನ ಭಕ್ತ ಬಸವ ನಿನ್ನಂಗವ । ನಿಂತು ಮುಸುಕಿಟ್ಟನೊ ನಿನಗೆ ॥ ೨ ॥

ತಪಗೈದಿರ್ದನು ದ್ವಿಹಸ್ತದಿಂ ಶಿವನಿಗೆ । ನಾ ಪಡೆದೆನು ಮಂತ್ರಿ ನಿನ್ನ ॥
ಭೂಪತತ್ವನೆ ಗೋಪುರದ ಶಿಖರದೊಳು । ತೋರ್ಪ ಕಳಶದಂತೆ ನೀನು ॥ ೩ ॥

ಎಣೆಯಾರು ನಿನಗಿನ್ನೆನುತ ಬಸವನನಪ್ಪಿ। ಮಾಣಿಕ್ಯ ಮನ್ಮನೋನಾಥ ॥
ಕಾಣೆನು ಈ ಲೋಕದೊಳಗಿಂಥ ಮಡಿಯನು। ಏಣಾಂಕತೇಜಗಿಮ್ಮಿಗಿಲು ॥ ೪ ॥

ಆವಲ್ಲಿ ತೊಳೆಸಿದೆ ಈ ಲೋಕಮಾನ್ಯರು । ಕೋವಿದರ್‍ಒತ್ತೊಳೆದಂಥಾದ್ದಲ್ಲ ॥
ಭಾವಜಾರಯೆ ಬಲ್ಲ ತೊಳೆದವಗರ್ಧ ರಾ । ಜ್ಯವನೀವೆ ತೋರೆನ್ನ ಮಂತ್ರಿ॥ ೫ ॥

ಮಡಿಯಮಾಡಿದನ ತೋರೆನಗೆಯವನ ನೀನು।ಒಡನೆ ಮುಖವ ನೋಡಿ ನಾನು ॥
ಕೊಡಿಗೆ ಸ್ವಾಸ್ತಿಯನೀವೆ ರವಿ ಶಶಿಯುಳ್ಳನಕ। ನಡೆವಂತೆ ಮಾಳ್ಪೆನಿನ್ನಾಣೆ ॥ ೬ ॥

ನರನಲ್ಲವಿವ ಸದ್ಯ ಹರತೊಳೆದಿಂತೆನ್ನ । ವರಮನ ಕರಗಲೋಸುಗವೇ ॥
ಧರಣಿಯೊಳಗೆ ಅಚ್ಚರಿಯ ಮಡಿಯಮಾಡಿ। ಧರಿಸಿ ನಿನ್ನನು ಕಳುಹಿದನೊ ॥೭॥

ಪರಿಪರಿಯಲಿ ನೃಪ ಪೊಗಳುತ್ತ ಹೆಚ್ಚುತ । ಒರೆದು ಕೇಳಿದ ಬಸವನನು ॥
ಅರಸನ ಪ್ರೀತಿಯ ವಚನಕ್ಕೆ ಬಸವಯ್ಯ । ಕರುಣದಿ ನುಡಿದನಿಂತೆಂದು ॥ ೮ ॥

**ಜಂಪೆ.**

ಪೊಡವೀಶ ಕೇಳು ಈ । ಮಡಿಯ ಮಾಡಿದ ಶರಣ ।
ಮೃಡನ ವರಸುತನು ಮಡಿ । ವಾಳಮಾಚಯ್ಯ ॥ ೧ ॥

ಅವರ ಪಾದದ ಭೃತ್ಯ । ಅವನಿಪನೆ ನಾ ಕೇಳು ।
ಅವಿರಳದ ಪ್ರೀಯದಿಂದ । ಅತಿಶುಭ್ರವಾಗಿ ॥ ೨ ॥

ತೊಳೆದು ಈ ವಲ್ಲಿಯನು । ಗಳಿಗೆಮಾಡಿಯೆ ತಮ್ಮ ।
ಬಳಿಯೊಳಿರಿಸಿರ್ದರೀ । ತಳಿಪ ಮಡಿಯನ್ನು ॥ ೩ ॥

ಅವರ ದರುಶನ ಮಾಳ್ಪೆ । ನೆಂದು ನಾ ಪೋದೆನ್ನೈ ।
ಅಮಿತದಿಂದೆನಗಿತ್ತ । ರವನೀಶ ಕೇಳು ॥ ೪ ॥

ಮಹಿಯ ನರಮಾನ್ಯರ । ವಸ್ತ್ರ ತೊಳೆವವರಲ್ಲ ।
ಮಹಿಮ ಘನಶರಣರು । ಮುದದಿಂದಲವರು ॥ ೫ ॥

ನಿಮ್ಮ ರಾಜ್ಯದ ಭೋಗ । ನಿಮ್ಮ ಸಂಪ್ರೀತಿಗಳು ।
ನಿಮ್ಮ ತ್ಯಾಗವನವರು । ಗಮ್ಮನೆ ಕೊಳರು ॥ ೬ ॥
ಅವರಿಲ್ಲಿ ಬಾರರೈ । ಅವಮ ಭವಿಮುಖಗಳನು ।
ಅವಿರಳದಿ ನೋಡರೈ । ಅರಸೆ ಬಿಜ್ಜಳನೆ ॥ ೭ ॥
ಹಿಂದೆ ದಕ್ಷನನರಿದು । ಕೊಂದು ಕೊಲೆಯಾಡಿದರು ।
ಇಂದು ಅವತರಿಸಿಹರು । ಈ ಪೃಥ್ವಿಯೊಳಗೆ ॥ ೮ ॥

ವಚನ ॥ ಇಂತೆಂದು ಬಸವೇಶಂ ಬಿಜ್ಜಳಗೆ ಪೇಳಲು, ಆ ಸಮಯದಲ್ಲಿ ಕೊಂಡಿಗನುಂಚಣ್ಣ ರಾಯನೊಳೀನೆನ್ನುತಿರ್ದನು.

**ಏಕತಾಳ.**

ಮಡಿಯ ತೊಳೆವವನನ್ನು । ಮಡಿವಾಳನಲ್ಲೆಂದು ।
ಮೃಡಭಕ್ತನೆಂದು ನಿನ್ನ । ಕಡುಕ್ಷೀಣಗೈವ ॥ ೧ ॥
ಭವಿಯಂತೆ ನೀ ಕೇಳು । ಬಂದು ಮುಖ ನೋಡನಂತೆ ।
ಅವನಿಪ ನಿನ್ನ ಪುರದಿ । ಇರಲೇತಕವನು ॥ ೨ ॥
ಬಸವಂಗೆ ರಾಜ್ಯವ । ವಶವ ನೀ ಮಾಡಿದುದಕೆ ।
ವಸುಧೀಶ ನಿನ್ನನೀಗ । ನುಸಿದು ಆಡುವನು ॥ ೩ ॥
ಮಡಿಯ ತೊಳೆಸು ಅವನ । ಬಿಡಲಾಗದರಸನೆ ।
ಪೊಡವಿಪರ್ನಗುವರು । ಬಿಟ್ಟೆಯಾದರೆ ನೀಂ ॥ ೪ ॥
ಧರಣೀಶ ಕೊಂಡೆಮಂ । ಚರಸನ ನುಡಿಗೇಳಿ ।
ಬರಿಸಯ್ಯ ಬಸವಯ್ಯ । ಪೊಸತಗಸನನು ॥ ೫ ॥
ಬೇಡ ಶರಣರ ತಳ್ಳಿ । ಕೇಡಹುದು ಇದರಿಂದ ।
ನೋಡಯ್ಯ ಸಾರಿದೆ । ನಾಡರಿಯೆ ನಿನಗೆ ॥ ೬ ॥
ಬಸವನ ನುಡಿಗೇಳಿ । ವಸುಧೀಶ ಬಿಜ್ಜಳನು ।
ಹಸನಾಗಿ ಮಾತಾಡು । ಸುಸರದಿಂ ಬಸವ ॥ ೭ ॥
ರಾಜನ ಅಭಿಪ್ರಾಯ । ರಾಜಮಂತ್ರಿಯೆ ಬಲ್ಲೆ ।
ತೇಜದಿಂ ತೊಳೆವಂಥ । ರಜಕನ ಹಿರಿದೆಂಬೆ ॥ ೮ ॥
ಎನ್ನ ಪಟ್ಟಣದಲ್ಲಿ । ಅವನಿರ್ದು ಮಲಿನವ ।
ಇನ್ನು ತೊಳೆವುದಿಲ್ಲ । ವೆಂಬ ಹಮ್ಮೇನು ॥ ೯ ॥

ವಚನ ॥ ಇತೆಂದು ಬಿಜ್ಜಳರಾಯಂ ಮಡಿವಳನಂ ಹಿಡಿತರಿಸಲು, ಹಮ್ಮಿಾರ ಚರರಂ ಕಳುಹಿಸುತಿರ್ದನದೆಂತೆನೆ.

**ಕಂದಪದ್ಯ.**

ಸಮುಖದ ಭಟರಂ ಕರೆಯಲು ।
ಧುಮುಕಲವರ್ ನೀವು ಮಡಿವಳಯ್ಯನ ಬೇಗಂ ॥
ಕ್ಷಮಿಸದೆ ಪಿಡಿದು ತನ್ನಿರೆನೆ ।
ಸಮಯಪರಿದೊರೆದನು ನೃಪಗೆ ಮಂಚಣ್ಣನಾಗಂ ॥ ೧ ॥

ರಜಕನ ಪಿಡಿತರಲೀಪರಿ ।
ಭುಜಬಲರೇಕ್ಕೈ ಪುರದೊಳಗಂಧಕರಥಮರ್ ॥
ಕುಜನರ್ ಬಧಿರರ ಕರೆಯಿಸಿ ।
ನಿಜದಿಂಕಳುಹೈ ನೃಪ ನೀ ನೀಕ್ಷಣವೆನ್ನಲ್ ॥ ೨ ॥

ವಚನ ॥ ಇಂತೀ ಮಂಚಣ್ಣ ಪೇಳಿದ ಮಾತಂ ಬಿಜ್ಜಳ ಕೇಳಿ ಚರರ್ಗೆ ನೇಮಿಸಲು ಚರರು ಪುರದೋಳ್ ಹುಡುಕಿ ಅಂಧಕ, ಷಂಡ, ಹೆಳವ, ಕೈಮುರುಕ, ಬಧಿರ, ನರಪೇತಲ, ಗೂನ, ಕಿಸುಗಾಲ, ಕುಳ್ಳ, ಮೆಳ್ಳೆಗಣ್ಣ, ಮೂಗ ಇಂತೀ ಅಂಗ ಹೀನರ ಮುನ್ನೂರು ಮಂದಿಯಂ ! ಕರೆತಂದು ನಿಲ್ಲಿಸಲು ರಾಯ ನೋಡಿ ಏನೆನ್ನುತಿರ್ದನು.

**ಕೊಂಚ ಜಂಪೆ.**

ಕಲಿಭಟ ಮಲ್ಲನಾಯಕರೆ – ನೀವು । ಚೆಲುವರಹುದಹುದು ವಜೀರರ ।
ತ್ವರಿತ ನೀವೈದಿ ಮಡಿವಾಳ – ಮಾಚ । ನಿರುವ ಗೃಹಸೇರಿ ಆತನೊಳು ॥ ೧ ॥
ದೊರೆಗಳ್ನಿಮ್ಮನು ಕರೆದರೆಂದು – ಪೇಳಿ । ಕರೆತನ್ನಿ ಬಲು ಚೂಟಿನಿಂದ ।
ಬಲುಹವಾಕ್ಯದಿ ಬಿಡದೆ ಅವನ – ನೀವು । ಛಲದಿ ಕರೆತನ್ನೆಂದನವರ್ಗೆ ॥ ೨ ॥
ರಾಜನಪ್ಪಣೆಯಿಂದಲವರು – ಬೇಗ । ವಾಜಿಯಿಂ ಪೋಗಿ ಅಂಧಕರು ।
ಮಡಿವಾಳದೇವನ ಗೃಹದ – ಹೊರಗಡೆಯ । ಬಾಗಿಲೊಳು ತಾವೆಲ್ಲ ನಿಂದು ॥ ೩ ॥
ನೋಡಿದರು ಅಧಿಕ ಮಹಸ್ಥಲವ – ಕೈಲಾಸ । ನೋಡಿ ಇಲ್ಲೈತೆ ನಿಜನಿಜವು ।
ಜಾಗಂಟೆಯನಾದ ಶಬ್ದ – ಶೋಭನ । ವಾದ ವಾಸನೆ ಸುಗಂಧಗಳು ॥ ೪ ॥
ಶಿವಶರಣನಿಹ ಸ್ಥಲವನಿವರು – ಮೆಟ್ಟಲ್ । ಅವಿರಳದಿ ಭವಪಾಪ ಹರಿಯೆ ।
ಅನಿತರೊಳು ಮಡಿವಾಳದೇವ – ಶಿವನ । ಘನಪೂಜೆ ತೀರ್ಚಿ ಹೊರಗೈದ ॥ ೫ ॥

ವಚನ ॥ ಈ ಪ್ರಕಾರ ಮಡಿವಾಳಯ್ಯಗಳು ತಮ್ಮ ಶಿವಪೂಜೆ ನೇಮವಂ ನಡೆಸಿ, ಗಣಂಗಳ ವಸ್ತ್ರಂಗಳಂ ಬೆನ್ನಿನಮೇಲೆ ಪೊತ್ತು, ಜಾಗಂಟೆಯಂ ನಾದಿಸುತ್ತ ಭವಿಗಳ ನೋಡದೆ ಶಬ್ದವಂ ಕೇಳದೆ ನದಿಗೆ ಬರುವನಿತರೊಳು, ಈ ಅಂಗಹೀನರು ಬಂದು ಕಡೆಯ ಬಾಗಿಲೊಳ್ನಿಂದು, ಮಡಿವಾಳಯ್ಯಗಳೆ ನಮ್ಮರಸು ನಿಮ್ಮನ್ನು ಕರೆಯಲ್ಕಳುಹಿದರು. ಶೀಘ್ರದಿ ಬನ್ನಿಯೆಂದು ಬಿನ್ನೈಸಲು ಬಳಿಕಲೆಂತೆನೆ.

**ತ್ರಿವುಡೆ.**

ಅರಿಕೆ ಮಾಡಿದ ಅಂಗಹೀನರ । ಸರಕುಗೊಳ್ಳದೆ ಪೊತ್ತು ಬಟ್ಟೆಯ ।
ಹೊರಟನಾಕ್ಷಣ ಮಾಚಿದೇವನು – ಹರನ ಧ್ಯಾನದಲಿ ॥ ೧ ॥
ಹೊರಗೆ ದುರ್ವಚನಗಳ ಕೇಳದೆ । ಪಿರಿಯ ಜಾಗಂಟೆನಾದವೆತ್ತುತ ।
ಬರಲು ತತ್ಕ್ಷಣ ಭವಿಗಳ್ ಶರಣನ – ದರುಶನಂಗೊಳಲು ॥ ೨ ॥
ಅರಸು ನಿಮ್ಮನು ನೋಡೆ ಈ ಕ್ಷಣ । ಕರೆತನ್ನೆನ್ನುತ ನಮ್ಮ ಕಳುಹಿದ ।
ಬರುವದುಚಿತವು ಎಂದು ಭವಿಗಳು – ಮೊರೆಯಲೆದುರ ॥ ೩ ॥
ಶರಣ ಮಡಿವಾಳದೇವನಾ ಮುಖ । ದರುಶನದಿಂದಧಮರಂಧಕರ್ ।
ನರಕಿ ಮೂಗರು ಬಧಿರರೆಲ್ಲರು – ಹರನ ಕರುಣದಲಿ ॥ ೪ ॥
ಮೂಗರ್ಮಾತಾಡಿದರು ಹೆಳವರಿ । ಗಾಗ ಚರಣಗಳ್ಬಂದು ಕೃತಕರು ।
ನಾಗರೀಕತೆ ಪುರುಷರಾದರು – ಯೌವ್ವನವು ತುಂಬಿ ॥ ೫ ॥
ಮಡಿವಳಯ್ಯನ ದರುಶನದಿ ನಮ್ಮ । ಜಡತೆ ಪರಿದುದು ಚೆಲುವರಾದೆವು ।
ಒಡನೆ ಪಲಬಗೆಯಿಂದ ನುತಿಸಿದ – ರವರು ಭಕ್ತಿಯಲಿ ॥ ೬ ॥
ಶರಣು ದುರಿತವಿದೂರ ಕೃಪಾಕರ । ಶರಣು ನಿಮ್ಮಡಿಗಳಿಗೆ ಸತತವು ।
ಶರಣು ನಮ್ಮ ಪುನರ್ಜನ್ಮಗೈದೆ ನೀ – ಧರೆಗೆ ಬ್ರಹ್ಮಾ ॥ ೭ ॥
ತ್ರಾಹಿ ಗುರುವರ ತ್ರಾಹಿ ಪರಶಿವ । ತ್ರಾಹಿ ಪರಮಕೃಪೈಕ ಸಿಂಧುವೆ ।
ತ್ರಾಹಿ ಸರ್ವಜನ ಸೂತ್ರಧಾರನೆ – ತ್ರಾಹಿ ಸಲಹೈ ॥ ೮ ॥

ವಚನ॥ ಇಂತೀ ಬಂದಂಥ ಅರಸಿನ ವಾಕ್ಯಸ್ಥರು ಸ್ತುತಿಸಿ ಕೊಂಡಾಡಿ, ಮುನ್ನೂರುಮಂದಿ ಅಂಧಕ, ಮೂಗ, ಹೆಳವರಾದಂಗಹೀನರು ಹದಿನಾರು ವರ್ಷದ ಯೌವ್ವನಸ್ಥರಾಗಿ ಸಾಷ್ಟಾಂಗದಿಂ ಮಣಿದು ತೆರಳಲು, ಅತ್ತ ಮಡಿವಾಳಯ್ಯಗಳು ಮಡಿಗೈವರೆ ನದಿಗೆ ಪೋಗಲು, ಇತ್ತ ಇವರು ಅರಸಿನೆಡೆಗೆ ಬಂದು ಸಾಲುಸಾಲಾಗಿ ನಿಲ್ಲಲು ಇವರಂ ನೋಡಿ ರಾಯನೇನೆನ್ನುತಿರ್ದನು.

**ಕೊಂಚೆ ಜಂಪೆ.**

ಎತ್ತಣಿಂದೈದಿದಿರಿ ನೀವು – ಹೀಗೆ । ಮೊತ್ತದಿಂ ಬಂದ ಬಗೆಯೇನು ।
ವಿಸ್ತರಿಸಿ ಕಾರ್ಯಗಳನ್ನೆಲ್ಲ – ನೀವು । ಸ್ವಸ್ಥಿರದಿ ಇರುವ ನಾಡೆಲ್ಲಿ ॥ ೧ ॥
ರಾಯಬಿಜ್ಜಳ ಕೇಳಲೊಡನೆ – ಅವರು । ಆಯತದಿ ಮಣಿದು ವೃತ್ತವನು ।
ಜೀಯ್ಯ ಅಪ್ಪಣೆಯಿಂದ ಪೋದ – ನಾವು । ಪಾಯವಾಗಿ ಮುದದಿ ನಿಂದು ॥ ೨ ॥
ದೊರೆಗಳ್ನಿಮ್ಮನು ಕರೆದರೆನಲು – ಆಗ । ಶರಣ ನೋಡದೆ ಹೊರಗೆ ಪೋದ ।
ದರುಶನವ ಕೊಡಲು ನಾವ್ಕಂಡು – ನಮ್ಮ । ಕುರೂಪುಗಳನಳಿದೆವು ಮುಂಕೊಂಡು ॥
ಕರಚೆಲ್ವರೂಪನೆಮಗಿತ್ತ – ಎನಲು । ದೊರೆ ಕೇಳಿ ಶರಣನಾ ಮಾಹತ್ತ ।
ಕರಚೆಲುವರಿವರ ತಾ ನೋಡಿ – ರಾಯ । ಹರುಷಗೊಂಡನು ಚೋದ್ಯಗೂಡಿ ॥ ೪ ॥

ವಚನ || ಆಹಾ ! ನಾವು ಕಳುಹಿದ ಅಂಧಕ, ಮೂಗ, ಹೆಳವರಂಗಹೀನರಂ ಇಂತೀ ಪ್ರಕಾರವಂಗೈದನೆಂದು ವಿಸ್ಮಯಂಬಟ್ಟು, ಶರಣರ ಮಹಿಮೆ ತಿಳಿಯಲಸಾಧ್ಯವೆಂದು ಕೊಂಡಾಡುವನಿತರೊಳು ಕೊಂಡಿಗಮಂಚಣ್ಣ ಬಿಜ್ಜಳಗಿಂತೆಂದಂ.

**ಜಂಪೆ.**

ಭೂಪ ಹಿಡಿದ ಛಲವ | ಬಿಟ್ಟರಿದು ಕೆಡುವುದೈ |
ಅಪರಿಮಿತ ದುಕೂಲಗಳ | ಹೊರಿಸುತ್ತಚರರಿಂದ || ೧ ||
ಮಡಿಗೈಯೆ ಮನ್ನಿಪುದು | ಒಲ್ಲೆನೆಂದರೆ ಅವನ |
ಹಿಡಿತಹುದು ಎಂದಾಜ್ಞೆ | ಇತ್ತೀಗ ಕಳುಹು || ೨ ||
ಎಂದ ಮಂಚಿಯ ಮಾತ | ನಂದು ಕೇಳುತ ರಾಯ |
ಮುಂದೆ ಕೆಡುವರೆ ತನ್ನ | ದುಗೂಲ ಕಳುಹಿದನು || ೩ ||
ತೊಳೆವೆನೆಂದರೆ ಕೊಟ್ಟು | ತೀವ್ರದಲಿ ಬನ್ನಿರೆಲೊ |
ತೊಳೆವುದಿಲ್ಲೆನಲು ಘಳಿ | ಲನೆ ಹಿಡಿದುತನ್ನಿ || ೪ ||
ಎಂದು ಅಪ್ಪಣೆಯಿತ್ತು | ಹೊರಿಸಿ ಮೊಟ್ಟೆಯ ಕಳುಹೆ |
ಬಂದರಾ ಊಳಿಗರು | ತ್ವರಿತದಿಂದಾಗ || ೫ ||
ಇತ್ತ ಮಡಿವಳದೇವ | ಅತ್ಯಂತ ಭಕ್ತಿಯಲಿ |
ಕರ್ತುರ್ಶಿವಶರಣರ | ವಸ್ತ್ರಗಳ ತಂದು || ೬ ||
ಲಿಂಗಮುದ್ರೆಯ ಕಲ್ಲ | ಲಲಿತದಿಂದಲಿ ಸುತ್ತ |
ಮಂಗಳಕರಮಾಗಿ | ಮಡಿಯ ತೊಳೆವುತಲಿ || ೭ ||
ಪ್ರತ್ಯೇಕ ದೂರದಲಿ | ಭವಿಗೋಷ್ಠಿಯಿಲ್ಲದಲಿ |
ಮೃತ್ಯುಂಜಯನ ಕುವರ | ಮಡಿಯ ಮಾಡುತಿರೆ || ೮ ||
ತಂದರಲ್ಲಿಗೆ ಚರರು | ಬಂಧಿಸಿಹ ಬಟ್ಟೆಯನು |
ಇಂದು ನಮ್ಮರಸನ ಮಡಿ | ಮಾಡೆಂದು ಅವರು || ೯ ||
ಮೊಟ್ಟೆಗಳ ಮುಂದಿಡಲು | ಮಡಿವಾಳ ದೇವನು ತಾ |
ಕೆಟ್ಟಭವಿಗಳ ನೋಡಿ | ದೃಷ್ಟತನದಿಂದ || ೧೦ ||
ಭವಿಜನರು ಹೊದಿಯುವ ದು | ಕೂಲಗಳ ಮುಟ್ಟೆವೆಲೊ |
ಜವದಿ ನುಡಿಯಲು ಶರಣ | ತಪಕದಿಂ ಚರರು || ೧೧ ||
ತೊಳೆಯದಿರೆ ನೀ ಬಂದು | ಇಳೆಪತಿಗೆ ಪೇಳೆನಲು |
ಘಳಿಲನೆಯೆ ಕೋಪದಲಿ | ಕಿಡಿಗಣ್ಣಿನಿಂದ || ೧೨ ||
ನೋಡಲಾಕ್ಷಣ ಮೊಟ್ಟೆ | ಗಾಢದಿಂ ಬೆಂದುರಿಯೆ |
ರೂಢಿಯರಿಯಲು ಭಸ್ಮ | ಮಾಡಿದನು ಶರಣ || ೧೩ ||

ಗಡಗಡನೆ ನಡುಗುತ್ತ । ತಡಬಡನೆ ತಾವೈದಿ ।
ಪೊಡವಿಪಗೆ ಪೇಳಿದರು । ಮಡಿವಾಳನಿರವ ॥ ೧೪ ॥

ವಚನ ॥ ಹೇ! ಸ್ವಾಮಿ!! ತಮ್ಮಾಜ್ಞೆಯಂತೆ ಬಟ್ಟೆಗಳಂ ಪೊತ್ತು ಆ ಮಡಿವಳನ ಮುಂದೆ ತೊಳೆಯೆಂದಿಟ್ಟೆವು, ಎಲೋ! ಭವಿಗಳ ಬಟ್ಟೆಯಂ ತೊಳೆವುದಿಲ್ಲೆನ್ನಲು, ತೊಳೆಯದಿರೆ ನಮ್ಮೊಡೆಯಂಗೆ ಬಿನ್ನೈಸು ಬಾರೆನ್ನಲು, ಆ ಮಡಿವಾಳ ದೇವನು ತನ್ನುರಿಗಣ್ಣಿನಿಂ ವಸ್ತ್ರಂಗಳನೆಲ್ಲ ದಗ್ಧಮಾಡಿದನೆನ್ನಲು, ರಾಯಂ ಕೇಳ್ದು ಅತಿಕೋಪದಿಂ ಕರಿ ಹಯ ಪಾಯ್ದಳಭಟರಂ ಕಳುಹಿ ಆ ಮಡಿವಾಳನಂ ಹಿಡಿತನ್ನಿ ಎನ್ನಲು, ಆ ಕ್ಷಣವೇ ಪಾಯ್ದಳ ತೆರಳಿ ಮಡಿವಾಳಯ್ಯಗಳ ಬಳಿಗೆ ಬಂದು ಸುತ್ತ ಮುತ್ತಿದರದೆಂತೆನೆ.

**ಏಕತಾಳ – ಅರ್ಧರೇಕು.**

ಬಂದು ಕವಿದ ಘನ – ಬಲದ ಅಬ್ಬರವ ।
ಇಂದುಧರನ ಸುತ – ನಿಂದು ನೋಡಿದನು ॥ ೧ ॥

ರಾಜನ ಖತಿಯೆಂದು – ರಮ್ಯದಿಂ ನೋಡಿ ।
ಈ ಜಗವರಿಯೆ ಇವರ – ಇಂಪುಗೆಡಿಸುವೆ ॥ ೨ ॥

ಎಂದು ಯೋಚನೆ ಮಾಡಿ – ಆಕ್ಷಣ ಶರಣ ।
ಚಂದದಿಂ ಹವಣಿಸಿ – ನಿಂದು ಝೇಂಕರಿಸಿ ॥ ೩ ॥

ಮೊರೆವ ದಳವ ನೋಡಿ – ಮಡಿವಾಳದೇವ ।
ಕರಮುಂಚಲವರೆಂದು – ಇರುತಿರ್ದನಾಗ ॥ ೪ ॥

ವಚನ ॥ ಇಂತೀ ಮಡಿವಾಳದೇವ ಸ್ಥೈರಣೆಯಿಂದಿರಲು, ರಾಯನ ಬಲದ ಅಬ್ಬರವೆಂತೆನೆ.

**ಭಾಮಿನೀ ಷಟ್ಪದಿ.**

ಬಂದರತಿ ತುರ್ಯದಲಿ ಭಟರುಗ ।
ಳಂದು ಮುತ್ತುತ ಸುತ್ತಮುತ್ತಲು ।
ನಿಂದು ನೋಡಿದರಾಗ ಮಡಿವಾಳದೇವನನು ಬೇಗ ॥
ಇಂದು ನೃಪತಿಯ ಬಳಿಗೆ ರಜಕನ ।
ನಂದಗೆಡಿಸುತಲೊಯ್ವೆವೆನುತಲಿ ।
ಚಂದಚಂದದಿ ಬಂದು ತಾಕುತ ಮಂದಿಮೋಹರಿಸಿ ॥ ೧ ॥

ಹಿಡಿರಿ ಮಡಿವಳಗೇಕೆ ಈ ಬಲು ।
ಪಡೆಯು ನಮ್ಮೊಳು ಸಲ್ಲದೆಲವೊ ।
ಪೊಡವಿಪನ ದುಕೂಲಗಳ ಸುಟ್ಟೆಯ ಎನುತಲಾಡಿದರು ॥
ಗಡಣೆಯೇತಕೆ ನಿನಗೆಯೆಂತೆಂ ।
ದೊಡನೆ ಭಟರುಗಳಬ್ಬರಿಸಿ ಕೈ ।
ದುಡುಕುತಿರಲಾ ವೀರಮಡಿವಾಳದೇವನಾಕ್ಷಣದಿ ॥ ೨ ॥

ಬೇಡವೆಲೊ ಭಟರುಗಳೆ ನನ್ನೊಳ ।
ಗೀಡೆ ಕದನಕೆ ಯಮನಪುರದಾ ।
ಬೀಡೆ ನಿಮಗೆಯು ಬಾಳ್ವಕಾಲದಲೇಕೆ ಸಾಯುವಿರಿ ॥
ಖೋಡಿಮನುಜರೆ ಸಾರಿಪೇಳಿದೆ ।
ನೀಡಿ ತಲೆಗಳ ಕೊಡುವಿರೇತಕೆ ।
ಕೇಡು ನಿಮಗೆಲೆ ಎನುತ ಪೇಳ್ದನು ವೀರಮಾಚಯ್ಯ ॥ ೩ ॥

ರಜಕ ನಿನಗಿಷ್ಟೊಂದು ಮಾತಿನ ।
ಗಜರಿದೇತಕೆ ನಿನ್ನ ಬಿಡೆವೆಲೊ ।
ಬಿಜ್ಜಳನ ಪಟುಭಟರು ನಾಪ್ಗಳು ನೀನು ಕೇಳ್ದರಿಯಾ ॥
ಅಜಿನ ಖಂಡವ ಅಸ್ಥಿನರಗಳ ।
ನುಜುಗಿ ನುರಿಗೊಳಿಸುವೆವು ಎನ್ನುತ ।
ಗಜರಿ ಶರ ಬಿಡೆ ಪುಷ್ಪವಾಗುತಲಂಘ್ರಿ ಸೇರಿದವು ॥ ೪ ॥

ಕೋಪದಲಿ ಮಡಿವಾಳದೇವನು ।
ರಾಪುಮಾಡಿಯೆ ಕವಿದ ಭಟರಿಗೆ ।
ಗೋಪತೀಶನ ಶರಣ ವಸ್ತ್ರವ ನುಲಿದ ಜಲವನ್ನು ॥
ತಾ ಪಿಡಿದು ಹಸ್ತದಲಿ ಚೆಲ್ಲಲು ।
ರೂಪು ಕೆಂಡಗಳಾಗಿ ಸುಟ್ಟವು ।
ತಾಪಗೊಳುತಲಿ ಬಳಲಿ ಬಿದ್ದರು ಸಕಲ ಭಟರಾಗ ॥ ೫ ॥

ಜಲವ ಚೆಲ್ಲುತ ಗಜ ರಥಂಗಳ ।
ತಳಿಪ ಹಯ ಕಾಲಾಳ್ಗಳೆಲ್ಲರ ।
ಘಳಿಗೆಯೊಳು ಪಾವಕದಿ ದಗ್ಧವಮಾಡೆ ಮಾಚಯ್ಯ ॥
ಬಲುಹನಾಡುತ ಬಂದ ಭಟರುಗ ।
ಳಳಲಿ ಮಡಿದರು ನೃಪನ ದಳಸಹ ।
ಜಲದಲುದಿರಿಹ ಪರಿಯ ಪೇಳ್ವತಸಾಧ್ಯ ಶಿವಬಲ್ಲ ॥ ೬ ॥

ಉಳಿದವೊಂದರೆ ಭಟರು ಭೂಪಗೆ ।
ಘಳಿಲನೇ ಕಂಗೆಟ್ಟು ದಿಗುಲಿನ ।
ಚಳಯದಲಿ ನೃಪಗೆಂದರಾಗಲೆ ನಡುಗುತಾಕ್ಷಣದಿ ॥
ಕೇಳು ನೃಪ ನಾವೆಯ್ದಿ ಬಲಸಹ ।
ಬಳಸಿ ಮುತ್ತುತ ಸುರಿಯೆ ಸರಳನು ।
ತಳಿಪ ಪುಷ್ಪಗಳಾಗಿಯಾತನ ಚರಣಕಮರಿದವು ॥ ೭ ॥

ಜೀಡವೆನ್ನೊಳು ಕದನವೆಂದನು ।
ಖೋಡಿಮನುಜರು ನಾವು ತಿಳಿಯದೆ ।
ಕೇಡನರಸುತ ಪಾಡುಪಟ್ಟೆವು ನೃಪತಿ ನಿನ್ನಿಂದ ॥
ಕೇಡು ತಪ್ಪದು ಈಡೆಯವನಿಗೆ ।
ನೋಡೆ ಪ್ರಳಯದ ಕಾಲರುದ್ರನು ।
ಕೂಡೆ ಸರಿದೆವು ಜಲದಿ ಸುಡುವಗೆ ನೃಪತಿ ನೀನಿದಿರ ॥ ೮ ॥

ಮಂಡಲೇಶ್ವರ ನೀನು ಬಸವನು ।
ದ್ದಂಡನಾಯಕಸಹಿತ ಮರೆಹೊಗು ।
ಕೆಂಡಗಣ್ಣನ ಶಾಂತಿಮಾಡದೆ ಪುರವು ಉಳಿದಪುದೆ ॥
ಖಂಡಪೌರುಷ ಬೇಡ ನಿನಗೈ।
ದಂಡನಾಯಕ ಬಸವಮಂತ್ರಿಗೆ ।
ದಿಂಡುಗೆಡೆದರೆ ತಡವುಮಾಡದಲಿಂದು ಸಲಹುವನು ॥ ೯ ॥

ಆಗ ಬಿಜ್ಜಳ ಭೀತಿಯಿಂದಲಿ ।
ಬೇಗ ಬಸವಗೆ ಮೊರೆಯನಿಟ್ಟನು ।
ನಾಗಭೂಷಣಪ್ರೀಯನೆ ಬಸವನೆ ಬೇಗ ರಕ್ಷಿಪುದು ॥
ರಾಗವೈರದಿ ರಜಕನೆನುತಲಿ ।
ಕೂಗಿಯಳಿದೆನು ನಿನ್ನ ಕೇಳದೆ ।
ಸಾಗಿ ಶರಣನ ಕರುಣ ಪೊಂದಿಸು ಈಗ ಬಸವಣ್ಣ ॥ ೧೦ ॥

ವಚನ ॥ ಇಂತೀ ಬೇಡಿಕೊಂಡ ರಾಯಂಗೆ, ಬಸವೇಶ ಭಯಬೇಡವೆಂದು ಮನ್ನಿಸಿ, ಅಭಯವಂ ಕೊಟ್ಟು ಶರಣನ ಕರುಣವಂ ಪಾಲಿಸಲು, ಬಸವೇಶ ಬಿಜ್ಜಳನಂ ಹಿಂದಿಟ್ಟುಕೊಂಡು ಮಡಿವಾಳದೇವನ ಸನ್ನಿಧಿಗೈದಿದನದೆಂತೆನೆ.

**ಏಕತಾಳ.**

ಅತ್ತಲಂಬರದೆಡೆಯೊಳ್ । ಕರ್ತ್ರುಶಿವ ಗಣಸಹಿತ ।
ಮೊತ್ತದಿಂ ನೋಡುತಿರೆ । ಪುತ್ರನ ಶೌರ್ಯ ॥ ೧ ॥



ಮಡಿವಾಳಮಾಚಯ್ಯನ ಮಹತ್ತು (ಭಾ. ೫-೧೦ ಪ. ೪-೬-೮.)

ಮೆಚ್ಚುತ್ತ ಈಶನು । ಮಲ್ಲಿಗೆವೃಷ್ಟಿಯ ।
ಹೆಚ್ಚಾಗಿ ಸುರಿಸಿದ । ನಚ್ಚರಿಯಾಗಿ ॥ ೨ ॥

ಇತ್ತ ಬಸವ ನೃಪ । ರತ್ಯಂತ ಭೀತಿಯೊಳು ।
ಮತ್ತೆ ಬಂದರು ನುತಿಸಿ । ಮಾಚಯ್ಯನೆಡೆಗೆ ॥ ೩ ॥

ಬಂದು ಬಸವನಾಗ । ವಂದನೆಗೈಯುತ್ತ ।
ನಿಂದು ಸ್ತುತಿಸಿದನನ । ನೇಕವಿಧದಿಂದ ॥ ೪ ॥

ಸಾಷ್ಟಾಂಗವಾಗಿ ನೃಪನ । ಸ್ಯೆಗೆಡಹಿ ಬಸವೇಶ ।
ಪುಟ್ಟಿತಜ್ಞಾನ ಇವಗೆ । ಭೂಪನ ಸಲಹಿ ॥ ೫ ॥

ಮರುಳನು ದುರುಳನು । ಮಂಕ ಮತ್ತನು ಇವನ ।
ಪರಿಕಿಸಬೇಡಯ್ಯ । ಅವಗುಣಗಳನು ॥ ೬ ॥

ದೀನರಕ್ಷಕನೆಂಬ । ಆನಂದ ನಿಮ್ಮ ಬಿರುದು ।
ಜ್ಞಾನಮೂರುತಿ ಸಲಹು । ಶರಣು ಮಾಚಯ್ಯ ॥ ೭ ॥

ನೃಪನ ದುಕೂಲಗಳನು । ಅಪರಿಮಿತ ಸೈನ್ಯವನು ।
ಕೃಪೆಯಿಟ್ಟು ನಿನ್ನ ದಯದಿ । ಪ್ರತಿಪಾಲಿಸಯ್ಯ ॥ ೮ ॥

ಬಸವನ ಸ್ತುತಿಗೇಳಿ । ಮಾಚಯ್ಯ ಕರುಣದಿ ।
ಅಸುವ ಸೈನ್ಯಕೆ ಕೊಟ್ಟು । ಒರೆದ ಬುದ್ಧಿಯನು ॥ ೯ ॥

ಭೂಪ ಶರಣರೊಳು । ಪಗೆಬೇಡ ಕೆಲದಿನ ।
ಆಪ್ತನಾಗಿಯೆ ಬಾಳು । ಎಂದ ಮಾಚಯ್ಯ ॥ ೧೦ ॥

ವೀರರೂಪನ ನೋಡಿ । ನಡುಗುತ್ತಲಿರೆ ರಾಯ ।
ಶರಣುಗೆಡಹಿ ನೃಪನ । ಪುರಕೋಯ್ದ ಬಸವ ॥ ೧೧ ॥

**ಕಂದಪದ್ಯ.**

ಇದು ಗಾಳದಕನ್ನಪ್ಪನ ।
ಸದಯದ ಕೇತಯ್ಯ ನಿಜಲಿಂಗಚಿಕ್ಕಯ್ಯಗಳ ॥
ಪದುಳ ಮಾಚಯ್ಯ ಮಹಿಮೆಯ ।
ಮುದದಿ ಕೇಳ್ದೋದಲು ಶಿವ ಸಂಪದವೀವಂ ॥ ೧ ॥

ಇಂತಿ ಪದ್ಯಗಳು ೨೬೨

**ಅಂತು ಸಂಧಿ ೧೪ ಕ್ಕಂ ಸಂಪೂರ್ಣಗಣನೆ - ೩೪೫೫ ಕ್ಕಂ ಮಂಗಳ ಮಹಾ**
**ಶ್ರೀ ಶ್ರೀ ಶ್ರೀ ಶ್ರೀ ಶ್ರೀ**



## ಹದಿನೈದನೆಯ ಸಂಧಿ

# ಪ್ರಭುದೇವರು ಶೂನ್ಯಸಿಂಹಾಸನವನೇರಿದುದು

---

**ಕಂದಪದ್ಯ.**

ಎಸಳೆಂಟರ ನಡುವೆಯೊಳಿಹ |
ಶಶಿ ರವಿ ಶಿಖಿಮಧ್ಯ ಪ್ರಣವಪೀಠದೊಳಗಂ ||
ಪಸರಿಸಿ ಬೆಳಗುವ ಚಿನ್ಮಯ |
ನಸಮಾಕ್ಷನ ಕಂಡೆ ಬಸವಲಿಂಗಪ್ರಭುವೇ || ೧ ||

**ತ್ರಿವುಡೆ.**

ಸಕಲ ಶರಣರಗೋಷ್ಠಿಯಿಂದಲಿ | ಅಖಿಳವಿಧ ಶಾಸ್ತ್ರಾನುಭಾವದಿ |
ಪ್ರಕಟಿಸುವ ಶಿವ [1] ಧ್ಯಾ [1] ನಯೋಗ ಸಂ – ಧಾನಮಾರ್ಗ್ಗದಲಿ || ೧ ||

ಆರು ಮೂವತ್ತಾರು ಬೇರಿ | ನ್ನೂರ ಹದಿನಾರೆಂಬ ತತ್ವವ |
ಮೀರಿ ಶಾಸ್ತ್ರಗಳಿಂದ ರಚಿಸಿದ – ಶೂನ್ಯಪೀಠವನು || ೨ ||

ಆದಿಚಕ್ರವ ಮೆಟ್ಟಿ ಮುಂಗಡೆ | ಸ್ವಾಧಿಷ್ಠಾನವ ನೋಡಿ ಶೋಧಿಸಿ |
ಹಾದಿವಿಡಿದತಿ ಪೋಗಿ ಮಣಿಪೂ – ರಕವನೇರುತಲಿ || ೩ ||

ಸಾಧಿಸುತಲನಾಹತ ವಿಶುದ್ಧಿಯ | ಭೇದವನು ತಿಳಿದಾ ಪ್ರಕಾಶದ |
ನಾದ ಬಿಂದುವನರಿತು ಆಜ್ಞೇಯ – ಚಕ್ರದಲಿ ನಿಂದು || ೪ ||

ವೇದಗೋಚರನಾದ ಮೂರ್ತಿಯ | ಸಾಧಿಸುತ ಬ್ರಹ್ಮಾಂಡ ಬೆಳಗಿನ |
ಲಾದ ಜ್ಯೋತಿಯ ಶೂನ್ಯಪೀಠವ – ರಚಿಸಿದನು ಬಸವ || ೫ ||

ಗಾಢತರದತಿ ಶೂನ್ಯಪೀಠವ | ಕೂಡೆ ಏರುವಡೊಬ್ಬ ಗುರುವನು |
ನೋಡಬೇಕೆಂದೆನುತ ಹೊರಟನು – ಬಸವ ಸ್ವಾಮಿಯನು || ೬ ||

ಎನ್ನ ಗುರುಪ್ರಭು ಬರುವಕಾರಣ | ಹೊನ್ನದಿನವಿದು ಕಾಂಬೆನೆನುತಲಿ |
ಚೆನ್ನಬಸವನು ಪ್ರಮಥಗಣಸಹ – ವಾಗಿ ತೆರಳಿದನು || ೭ ||

ಭೇರಿ ಮದ್ದಳೆ ತಾಳ ಗಿಡಿಬಿಡಿ | ವೀರಣವು ನಿಸ್ಸಾಳ ತಮ್ಮಟೆ |
ಚೀರುತಿಹ ಕಹಳೆಗಳು ಪಂಚಮ – ಭೂರಿವಾದ್ಯಗಳು || ೮ ||

---

1-1 ಜ್ಞಾ (ಇ, ಒ, ಟ.)

ಆಡುತಿಹ[1] ಪಾತ್ರದ ಸು[1] ಮೇಳದ । ಕೂಡೆ ನೋಟಕಜನಕದಂಬದ ।
ಗಾಢತರದತಿ ಭಕ್ತಿಯಲಿ ಪ್ರಭು – ನೋಡೆ ಸಂಭ್ರಮವ ॥ ೯ ॥

ಅಲ್ಲಿಗಲ್ಲಿಗೆ ಆಟ ಸಂಭ್ರಮ । ನಿಲ್ಲನಿಲ್ಲುತ ನಡೆದು ಬರುತಿರೆ ।
ಅಲ್ಲಮಾಪ್ರಭು ರೂಪುಮಾಜುತ – ಅಲ್ಲಿಗೈದಿದರು ॥ ೧೦ ॥

ವಚನ ॥ ಅಂತಪ್ಪ ಬಸವಾದಿ ಪ್ರಮಥರೆಡೆಗೆ ಪ್ರಭು ಬರುತಿರ್ದರದೆಂತೆನೆ.

**ಏಕತಾಳೆ – ಅರ್ಧರೇಕು.**

ತಲೆಯೊಡೆದು ರಕ್ತವು – ನೆಲಕೆ ಜೋರಿಡುತ
ನೆಲತಾಕಿ ಕಾಲ್ದೆಬ್ಬೆ– ಟ್ಟೊಡೆದು ಕುಂಟಿಡುತ ॥ ೧ ॥

ನಡು ಡೊಂಕಿ ನಡೆಯುತ್ತ– ನಡುಗಿ ಕೋಲ್ವಿಡಿದು ।
ಗಿಡತಾಕಿ ವ್ಯೆಯ್ಯ ಬಾ – ಸುಳಗಳು ಒಡೆದು ॥ ೨ ॥

ಅಂಕಡೊಂಕಿನ ಕಾಲು – ಕೊಂಕಿದ ಬೆನ್ನು।
ಮುಂಕೊಂಡು ಜನರ ನೋ – ಡುವ ಮೆಳ್ಳೆಗಣ್ಣು ॥ ೩ ॥

ಅಕ್ಕಳಸಿದ ಹೊಟ್ಟೆ– ಸೊಕ್ಕಿದ ಗಲ್ಲ ।
ನಕ್ಕರೆ ಬಾಯಿಜೊಲ್ಲು ವಿ – ಕಾರದ ಹಲ್ಲು ॥ ೪ ॥

ಕೆಕ್ಕರಿಸಿ ನೋಡುತ್ತ– ಅಕ್ಕರಿಸಿ ನಗುತ ।
ಗಕ್ಕನೆ ಕುಳಿತಲ್ಲಿ – ಸೊಕ್ಕಿ[2] ಸೋಲುತಲಿ[2] ॥ ೫ ॥

ಹಿಡಿದ ಗಡಿಗೆಕೈಯ್ಯ – ಪಿಡಿದ ಸಾಧ್ವಯವು ।
ಮಿಡುಕುತ ಮನದೊಳು – ಹುಡುಕುತ ನೆಲನ ॥ ೬ ॥

ಏಟುಗಾಲ್ಹಾಕುತ – ಸೊಂಟ ಮುರುಕಿಸುತ ।
ಆಟವನಾಡುತ್ತ– ಪಾಟಿಸಿ ನಗುತ ॥ ೭ ॥

ಬಗೆಬಗೆಯಾಟದಿ – ಜಗವ[3] ನಗಿ[3] ಸುತ ।
ತಗಿಬಿಗಿ ಓಡುತ್ತ– ನೆಗೆದು ಕುಪ್ಪಳಿಸಿ ॥ ೮ ॥

ವಚನ ॥ ಈ ಪ್ರಕಾರ ನಾಟ್ಯವನಾಡುತ್ತ ಬಂದರದೆಂತೆನೆ.

**ಜಂಪೆ.**

ಮುಂದಕ್ಕೆ ಓಡುವನು । ಹಿಂದಕ್ಕೆ ನೋಡುವನು ।
ದಿಂಧಿಮಿ ಧಿಮಿಕುತ್ತೈ। ಯೆಂದು ಆಡುವನು ॥ ೧ ॥

---

1-1 ವೈಚಿತ್ರ (ಗ, ಚ.) 2-2 ನೋಡುತಲಿ (ಅ, ಬ.)
3-3 ನಾಡಿ (ಅ, ಇ, ಉ, ಟ, ತ, ಬ.)

ಆಡುವಲಿ ಆಡುವನು । ನೋಡುವಲಿ ನೋಡುವನು ।
ನಾಡಜನರನು ಗುಂಪು । ಮಾಡುವನು ಒಲಿದು ॥ ೨ ॥

ಅಲ್ಲಲ್ಲಿ ಆಡುವನು । ಅಲ್ಲಲ್ಲಿ ನೋಡುವನು ।
ಅಲ್ಲಲ್ಲಿ ಗುಂಪು ಗುಂ । ಪೆಲ್ಲೆಡೆಯು ನೋಡೆ ॥ ೩ ॥

ಜಗದ ಜಂತ್ರದಸೂತ್ರ । ಬಗೆ ಬಗೆಯಲಾಡಿಸುವ ।
ಸುಗುಣನನು ನೋಡೆಂದ । ನಗುತ ಚೆನ್ನಬಸವ ॥ ೪ ॥

ಕಂಡರತಿ ಮೋಕ್ಷಕಾ । ರಂಡನೆನಿಸುವ ಪ್ರಭುವ ।
ಖಂಡಪರಶುವಿನ ಉ । ದ್ದಂಡಪಾದವನು ॥ ೫ ॥

ಬಸವರಾಜನು ಚೆನ್ನ । ಬಸವರಾಜನು ಪ್ರಮಥ ।
ರಸಮಗಣ ಪ್ರಭುವಿಗು । ಲ್ಲಸದಿ ಎರಗಿದರು ॥ ೬ ॥

ಬಿಟ್ಟುಕೃತಕವನು ದಯ । ವಿಟ್ಟು ಶರಣರಿಗೆ ಮನ ।
ಗೊಟ್ಟು ಮಸ್ತಕಕಭಯ । ವಿಟ್ಟ ಪ್ರಭುವೊಲಿದು ॥ ೭ ॥

ತ್ರಿಜಗದೊಡೆಯಗೆ ನಮಿಸಿ । ಗಜವನೇರಿಸಿಕೊಂಡು ।
ಸುಜನಜನಗೂಡಿ ಕೊಂ । ಡಾಡಿ ತಿರುಗಿದರು ॥ ೮ ॥

ಭಕ್ತಾಂಗನೆಯರ್ಕೂಡಿ । ಮುತ್ತಿನಾರತಿಮಾಡಿ ।
ಮುಕ್ತಿಪಾಲಕಗೆ ಮುದ । ವೆತ್ತಿ ಬೆಳಗಿದರು ॥ ೯ ॥

ಆಟಪಾಟವು ವಾದ್ಯ । ನೋಟಜನ ಶರಣರೂಡ ।
[1] ನಾ [1] ಟ ಬಂದರು ಶೂನ್ಯ । ಪೀಠವಿದ್ದೆಡೆಗೆ ॥ ೧೦ ॥

ವಚನ ॥ ಸಕಲ ಸಂಭ್ರಮದಿಂದ ಶೂನ್ಯಪೀಠವಿರುವೆಡೆಗೆ ಬಂದು, ಆ ಬಳಿಯಲ್ಲಿ ನಿಲ್ಲಲು ಪ್ರಭುದೇವರು ಗದ್ದುಗೆಯನ್ನೇರಿದರದೆಂತೆನೆ.

**ದ್ವಿಪದಿ.**

ಶ್ರೀ ಗಿರಿಜವರಮೂರ್ತಿ ಶ್ರೀ ಚಕ್ರವರ್ತಿ ।
ನಾಗಭೂಷಣಮೂರ್ತಿ ನಮಿತ ಸತ್ಕೀರ್ತಿ ॥ ೧ ॥

ಯೋಗಾದಿಯೋಗ ಸಕಲಾಗಮಸ್ಫೂರ್ತಿ ।
ಯೋಗಿಜನ ಹೃತ್ಕಮಲ ರಮ್ಯತರಜ್ಯೋತಿ ॥ ೨ ॥

ಸಲ್ಲೀಲೆಯೊಳು ಸಲೆ ಶರಣರೊಳು ಬಂದು ।
ಅಲ್ಲಮಾಪ್ರಭು ಅಂದು ಅರ್ಥಿಯಲಿ ನಿಂದು ॥ ೩ ॥

---

1-1 ಗೂ (ಇ, ಒ, ಗ, ಚ, ಜ, ಟ.) ; ರಾ (ಬ.)

ಆಡುತಿಹ[1] ಪಾತ್ರದ ಸು[1] ಮೇಳದ । ಕೂಡೆ ನೋಟಕಜನಕದಂಬದ ।
ಗಾಢತರದತಿ ಭಕ್ತಿಯಲಿ ಪ್ರಭು – ನೋಡೆ ಸಂಭ್ರಮವ ॥ ೯ ॥

ಅಲ್ಲಿಗಲ್ಲಿಗೆ ಆಟ ಸಂಭ್ರಮ । ನಿಲ್ಲನಿಲ್ಲುತ ನಡೆದು ಬರುತಿರೆ ।
ಅಲ್ಲಮಾಪ್ರಭು ರೂಪುಮಾಜುತ – ಅಲ್ಲಿಗೈದಿದರು ॥ ೧೦ ॥

ವಚನ ॥ ಅಂತಪ್ಪ ಬಸವಾದಿ ಪ್ರಮಥರೆಡೆಗೆ ಪ್ರಭು ಬರುತಿರ್ದರದೆಂತೆನೆ.

**ಏಕತಾಳ – ಅರ್ಧರೇಕು.**

ತಲೆಯೊಡೆದು ರಕ್ತವು – ನೆಲಕೆ ಜೋರಿಡುತ
ನೆಲತಾಕಿ ಕಾಲ್ಬೆಬ್ಬೆ – ಟ್ಟೊಡೆದು ಕುಂಟಿಡುತ ॥ ೧ ॥

ನಡು ಡೊಂಕಿ ನಡೆಯುತ್ತ – ನಡುಗಿ ಕೋಲ್ವಿಡಿದು ।
ಗಿಡತಾಕಿ ಮೈಯ್ಯ ಬಾ – ಸುಳಗಳು ಒಡೆದು ॥ ೨ ॥

ಅಂಕಡೊಂಕಿನ ಕಾಲು – ಕೊಂಕಿದ ಬೆನ್ನು ।
ಮುಂಕೊಂಡು ಜನರ ನೋ – ಡುವ ಮೆಳ್ಳೆಗಣ್ಣು ॥ ೩ ॥

ಅಕ್ಕಳಸಿದ ಹೊಟ್ಟೆ – ಸೊಕ್ಕಿದ ಗಲ್ಲ ।
ನಕ್ಕರೆ ಬಾಯಿಜೊಲ್ಲು ವಿ – ಕಾರದ ಹಲ್ಲು ॥ ೪ ॥

ಕೆಕ್ಕರಿಸಿ ನೋಡುತ್ತ – ಅಕ್ಕರಿಸಿ ನಗುತ ।
ಗಕ್ಕನೆ ಕುಳಿತಲ್ಲಿ – ಸೊಕ್ಕಿ[2] ಸೋಲುತಲಿ[2] ॥ ೫ ॥

ಹಿಡಿದ ಗಡಿಗೆಕೈಯ್ಯ – ಪಿಡಿದ ಸಾಧ್ವಯುವು ।
ಮಿಡುಕುತ ಮನದೊಳು – ಹುಡುಕುತ ನೆಲನ ॥ ೬ ॥

ಏಟುಗಾಲ್ಹಾಕುತ – ಸೊಂಟ ಮುರುಕಿಸುತ ।
ಆಟವನಾಡುತ್ತ – ಪಾಟಿಸಿ ನಗುತ ॥ ೭ ॥

ಬಗೆಬಗೆಯಾಟದಿ – ಜಗವ[3] ನಗಿ[3] ಸುತ ।
ತಗಿಬಿಗಿ ಓಡುತ್ತ – ನೆಗೆದು ಕುಪ್ಪಳಿಸಿ ॥ ೮ ॥

ವಚನ ॥ ಈ ಪ್ರಕಾರ ನಾಟ್ಯವನಾಡುತ್ತ ಬಂದರದೆಂತೆನೆ.

**ಜಂಪೆ.**

ಮುಂದಕ್ಕೆ ಓಡುವನು । ಹಿಂದಕ್ಕೆ ನೋಡುವನು ।
ದಿಂಧಿಮಿ ಧಿಮಿಕುತ್ಕೈ। ಯೆಂದು ಆಡುವನು ॥ ೧ ॥

1-1 ವೈಚಿತ್ರ (ಗ, ಜ.) 2-2 ನೋಡುತಲಿ (ಅ, ಬ.)
3-3 ನಾಡಿ (ಅ, ಇ, ಉ, ಟ, ತ, ಬ.)

ನೋಡಿದರು ಸಕಲಾದಿ ಭಕ್ತರು । ಮಾಡಿದಂಥಾ [1] ಭ [1] ಕ್ಷ್ಯವ ।
ನೀಡಿದರು ಪ್ರಭುವಿಂಗೆ ಆರೋ– ಗಣೆಯ ನಡೆಸಿದರು ॥ ೯ ॥
ಲೋಕದೊಡೆಯನು ಸಲಿಸುತಿರಲತಿ । ಜೋಕೆಯಿಂದ ಭಕ್ತರು ।
ನಾಲ್ಕುಮುಖದಲಿ ನೀಡೆ ಸಲಿಸಿದ– ನೇಕ [2] ದಿಂದ [2] ॥ ೧೦ ॥
ನೀಡಿದರು ಲಕ್ಷಾದಿ ಸಂಖ್ಯೆಗೆ । ಮಾಡಿದಂಥಾ ಭಕ್ಷ್ಯವ ।
ಕೂಡೆಸಲಿಸಿದ ನಿಮಿಷಮಾತ್ರಕೆ– ನೋಡ ನೋಡುತಿರೆ ॥ ೧೧ ॥
ಕಾಲಹರ ಸಲಿಸುವರೆ ಅಂಬರ । ಮೇಲೆ ತೆರೆಯೆ ಬಾಯನು ।
ಮೇಲೆ ತಿಳಿ ಬಸವಯ್ಯ ನೀನದ – ಮೂಲೆಗಡುಕಿ ॥ ೧೨ ॥

ವಚನ ॥ ಇಂತೀ ಚೆನ್ನಬಸವಣ್ಣ ಎಂದ ಮಾತಿಗೆ, ಬಸವರಾಜದೇವರು ಸಂತೋಷದಿಂದ ಕರಕಮಲವಂ ಮುಗಿದು ಪ್ರಭುವಂ ಧ್ಯಾನಿಸುತ್ತಿರಲು, ಪ್ರಭುದೇವರು ಮೆಚ್ಚಿ ಹರುಷಿತರಾಗಿ ಏನೆನ್ನುತಿರ್ದ್ದರು.

**ಏಕತಾಳ.**

ಒಲಿದು ನಿಮ್ಮಿಚ್ಛೆಯ । ಸಲಿಸುವಡೈದಿದೆ ।
ಅಲಸಿ ಹಸಿವಿಗಾಗಿ । ಸಲಿಸಿದವನಲ್ಲ ॥ ೧ ॥
ಸಲೆ ನಿಮ್ಮ ಭಕ್ತಿಯ । ಕಲಕಿ ನೋಡಲು ಬಂದೆ ।
ಚಲುವಾಯಿತೀ ಭಕ್ತಿ। ಬಲು ಮೆಚ್ಚು ನನಗೆ ॥ ೨ ॥
ಮಲಹರನ ಜಂಗಮ । ಸಲೆ ಹಸಿದೈದಾರೆ।
ಬಲುಬೇಗ ಕರೆತಂದು । ಸಲಿಸ ನೀಡೆಂದ ॥ ೩ ॥
ಷಡುರಸಾನ್ನವನಾಗ । ಅಡಿಗೆಯ ಮಾಡಿಸಿ ।
ಮೃಡನ ಜಂಗಮರೆಡೆಗೆ । ನಡೆದನು ಬಸವ ॥ ೪ ॥
ಹರಶರಣರಂಘ್ರಿಗೆ । ಎರಗಿ ಬಿನ್ನೈಸಿದ ।
ಕರ ಹಸಿದಿರಿ ಸಲಿಸ । ಹರುಷದಿಂ ಬನ್ನಿ ॥ ೫ ॥
ನಿನ್ನ ಮಹಿಮೆಯೊ ನಿ । ನ್ನೊಡೆಯನ ಮಹಿಮೆಯೊ । - -
ಇನ್ನರಿಯೆವು ಈಗ । ಸಲಿಸಿದಂತಿದೆಕೊ ॥ ೬ ॥
ನಿಮ್ಮ ಗುರುವಿನ ಗಂಧ । ನಿಮ್ಮ ಗುರುವಿನಕ್ಷತೆ ।
ನಿಮ್ಮ ಗುರುವಿನ ಪುಷ್ಪ। ವಿನ್ನೆಲ್ಲವಿದೆಕೊ ॥ ೭ ॥
ನೋಡಿದ ಹರುಷವ । ಮಾಡಿದ ಬಸವಯ್ಯ।
ಕೂಡೆ ವಂದಿಸಿ ಮನೆಗೆ । ಗಾಢದಿಂ ಪೋದ ॥ ೮ ॥
ಬಂದು ಪ್ರಭುವಿನಡಿಗೆ । ವಂದಿಸಿ ಸತ್ಕರಿಸಿ ।
ಎಂದಿನಂತೆ ಬಿಜ್ಜಳನ । ಮಂದಿರಕೆ ಪೋದ ॥ ೯ ॥

1-1 ಭಿ (ಒ, ಜ, ಬ.) 2-2 ವಿತದಿ (ಇ, ಒ, ಚ, ಟ.)

ಗುರುಪ್ರಭು ಸಲಿಸಿದ । ವರಮಹತ್ತುಗಳನ್ನು ।
ಪರವಾದಿಗಳಿಗೆ ತೋರಿ । ಪ್ರಕಟವಗೈಯೆ † ॥ ೧೦ ॥
ದಂಡೇಶನನು ನೋಡಿ । ಮಂಡಲಪತಿಯೊಳು ।
ಕೊಂಡೆಯವ ನುಡಿದನು । ಕಂಡಿರೆ ಚೋದ್ಯ ॥ ೧೧ ॥
ಒಬ್ಬಯ್ಯ ಸಲಿಸಲು । ವಸುಧೆಯೊಳಿರುವಂಥ ।
ಸರ್ವಜಂಗಮಕೆ ಸಂ । ತುಷ್ಟ್ಯಾಯಿತಂತೆ ॥ ೧೨ ॥
ಕೇಳು ಬಿಜ್ಜಳರಾಯ । ಭಾಳಾಕ್ಷಬಸವನನು ।
ಲೀಲೆಯಿಂ ಕೇಳಿನಲು । ಲೋಲನಾಗಿರುತ † ॥ ೧೩ ॥
ಅಹುದೆ ಬಸವರಾಜ । ಅಹುದೆ ಈ ವಾಕ್ಯವು ।
ಅಹುದಲ್ಲವೆಂಬುದ । ವಿವರಿಸೆನ್ನೊಡನೆ ॥ ೧೪ ॥
ಅವರಿಗಿಂತಾಯಿತು । ಭುವಿಯ ಸಚರಾಚರ ।
ಅ [1] ವಕೆಲ್ಲ ಆಯಿತು [1] । ಭುವನಾಧಿನಾಥ ॥ ೧೫ ॥
ಎಂದ ಬಸವನ ವಾಕ್ಯ । ವಂದು ಕೇಳುತ ಮಂಚಿ ।
ಚಂದದಿಂ ನೋಡಬೇಕು । ಸಂತುಷ್ಟಿಬಗೆಯ † ॥ ೧೬ ॥
ಅರಸೆ ತರಿಸು ನೀನು । ಈಕ್ಷಣ ಜಲದೊಳ ।
ಗಿರುವ ಕಪ್ಪೆಯ ಕುಕ್ಷಿ । ಕೊರಸಿ ನೋಡೆಂದ † ॥ ೧೭ ॥
ಅರಸ ಕೇಳುತ ಬೇಗ । ತರಿಸಿ ಕಪ್ಪೆಯನಾಗ ।
ಕೊರೆಸುತ್ತ ಹೊಟ್ಟೆಯ । ಪರಿಕಿಸಿ ನೋಡೆ ॥ ೧೮ ॥
ಒಡಲೊಳು ಬೋನವು । ಇಡಿಕಿರಿದಿರಲಾಗಿ ।
ಪೊಡವೀಶ ಕಾಣುತ್ತ । ಕಡುಚೋದ್ಯವಾಗಿ ॥ ೧೯ ॥
ಇಂದು ಈ ಮಂಡುಕಗೆ । ಎಂದಿನಂದದಿ ಪ್ರಾಣ ।
ನಂದಿ ಈಯೆನೆ ರಾಯ । ಅಂದು ನಡೆಸಿದನು * ॥ ೨೦ ॥

**ಕಂದಪದ್ಯ.**

ಮಂಡಲಪತಿ ಕಂಡು ಹರುಷ ।
ಗೊಂಡು ಬಸವಂಗೆರಗಿ ಉಡುಗೊರೆಯಿಾಯುತ್ತಂ ॥
ಕೊಂಡಾಡಿ ಮನೆಗೆ ಕಳುಹಲು ।
ದಂಡೇಶಂ ಪ್ರಭುವಿಗೆರಗಿ ಮಿಗೆ ಮಂಡಿಸಿದಂ ॥ ೧ ॥

ವಚನ ॥ ಆ ವೇಳೆಯಲ್ಲಿ ಪ್ರಭುದೇವರು, ಚೆನ್ನಬಸವಣ್ಣ ಮಡಿವಾಳಯ್ಯ ಮುಂತಾದ ಸಕಲ ಗಣಂಗಳಾಮುಂದೆ ರಸೋಕ್ತಿಯಲ್ಲಿ ಮಾತನಾಡುತ್ತಿರ್ದರದೆಂತೆನೆ.

---

† ಈ ಪದ್ಯಗಳು (ಅ, ಎ, ಟ, ಡ, ಬ.) ಪ್ರತಿಗಳಲ್ಲಿಲ್ಲ. 1-1 ವು ತೃಪ್ತಿಯಾದವು (ಇ, ಗ, ಚ.) *ಈ ಪದ್ಯ (ಒ, ಖ, ಜ.) ಪ್ರತಿಗಳಲ್ಲಿ ಮಾತ್ರವಿದೆ.

**ತ್ರಿವುಡೆ.**

ಬಸವಭಕ್ತಿಯ ಕಡಲಿನಮೃತಕೆ | ಒಸೆದು ರಾಜಮರಾಳ [1] ಪಕ್ಷಿಯು [1] |
ಎಸಗಿ ಬಂದಂದದಲಿ ಬಂದೆವು – ಅಸಮಗಣರೆಲ್ಲ || ೧ ||
ಬಸವನೇ ಗುರು ಬಸವನೇ ಹರ | ಬಸವನೇ ಪರ ತಂದೆ ತಾಯಿಯು |
ಬಸವನಲ್ಲದೆ ಬೇರೆದೈವವ – ನುಸುರಲಿನ್ನುಂಟೆ || ೨ ||
ಆದಿಯಿಂದತ್ತತ್ತ ಶೂನ್ಯದ | ಲಾದ ಬಸವೇಶ್ವರನ ಮಹಿಮೆಯ |
ವೇದವಾದರು ಹಲವು [2] ಬಗೆಯು [2] ಲಿ – ಸ್ತುತಿಸಲರಿಯವಲಾ || ೩ ||
ಮೂದೇವ ಮೂರ್ತಿಗಳು ಬಸವನ | ಆದಿಯಿಂದವರಾದರಲ್ಲದೆ |
ಭೇದಿಸಲು ಉತ್ಪತ್ತಿ ಸ್ಥಿತಿ ಲಯ – ಕವರು ಕಾರಣರೆ || ೪ ||
ನೋಡುವರೆ ನಿಖಿಲಾದಿ ಲೋಕಕೆ | ನೀಡುತಿಹ ಸಕಲಾಮೃತಾನ್ನವ |
ಆಡಲೇನಖಿಳಾದಿಕೊಂಬುದು – ಬಸವನ ಪ್ರಸಾದ || ೫ ||
ನೋಡಬಂದೆನು ಎನಗೆ [3] ಮನೋಹರ [3] | ನೀಡಿ ಸಚರಾಚರಕೆ ತೃಪ್ತಿಯ |
ಮಾಡಿದನು ಅಖಿಳಾದಿವ್ಯಾಪಕ – ನೋಡಿ ಬಸವಯ್ಯ || ೬ ||
ಸಕಲ ಜಗಚ್ಚೈತನ್ಯರೂಪನು ಅಖಿಳ | ಜಗದಾಧಾರದೊಡೆಯನು |
ಸಕಲಕರ್ತನು ಬಸವನಲ್ಲದೆ – ಬೇರೆ ಇಲ್ಲೆಂದ || ೭ ||

ವಚನ || ಇಂತೆಂದು ಪ್ರಭುದೇವರು ಕೊಂಡಾಡುತ್ತಿರಲು, ಆ ಮಾತಿಗೆ ಬಸವರಾಜದೇವರು ಏನೆನ್ನುತಿರ್ದರು.

## ಪಾರ್ವತಿಯು ಪ್ರಮಥರಿಗೆ ತೃಪ್ತಿಪಡಿಸುವ ಇತಿಹಾಸ.

**ದ್ವಿಪದಿ.**

ಶ್ರೀ ಗುರು ಪ್ರಭುಮೂರ್ತಿ ಸಕಲಸತ್ಕೀರ್ತಿ |
ಹೀಗೆ ಎನ್ನನು ನುತಿಸಿ ಹೆಚ್ಚು ಮಾಡುವರೆ || ೧ ||
ನಾಗಭೂಷಣ ಪ್ರಮಥ ನಾಟಕದೊಳಗೆ |
ಹೀಗೆಯಾರನು ಹೋಲ್ವೆ ಪೇಳು ನಮ್ಮಯ್ಯ || ೨ ||
ಹಿಂದೆ ಕೇಳಯ್ಯ ಹೇಮಾದ್ರಿ ಶಿಖರದಲಿ |
ಇಂದುಧರ ಶಿವನ ಇಮ್ಮಯ್ಯ ಓಲಗದಿ || ೩ ||
ನಂದೀಶ ಗುಹ ಗಣಪ ನಾರದನು ವೀರ |
ಕಂದರ್ಪಪಿತ ಕನಕಗರ್ಭ ದಿಕ್ಪಾಲರ್ || ೪ ||
ಇಂದ್ರ ಚಂದ್ರರು ಪ್ರಮಥರೆಲ್ಲರೂ ಕೂಡಿ |
ಅಂದದಿಂದಿರುತಿಹರು ಆರನೋಡಿದರೂ || ೫ ||

---

1-1 ವಗಣಿತ (ಇ, ಜ.) 2-2 ಮುಖದ (ಇ, ಉ, ಎ, ಒ, ಗ, ಚ, ಟ.) 3-3 ಹರುಷವ (ಗ, ಚ.)

ಉರಿಗಣ್ಣು ಶಿರಮಾಲೆ ಉರಗ[1] ಭರಣಗಳು[1] ।
ಶಿರವೈದು ಪೊದೆದ ಶಾರ್ದ್ದೂಲ ಗಜಚರ್ಮ || ೬ ||
ಕೆಂಜೆಡೆಯು ಮಕುಟವೂ ಕಂಜಭವಶಿರವೂ ।
ನಂಜುಕಂಧರವು ನಗೆಮುಖವು ಸುಲಿಪಲ್ಲು || ೭ ||
ಕರದ ತ್ರಿಶೂಲವು ಕ[2] ರ್ಣ[2] ಕುಂಡಲವು ।
ತರಣಿ ಶಶಿನಯನದಿಂ ತಾರಾಪತಿಯ ಧರಿಸಿ || ೮ ||
ಇರುತಿರಲು ಪರಶಿವನ ಇಮ್ಮಯ್ಯದೆಸೆಯ ।
ಅಲ್ಲಿಗೆ ಗಿರಿಜಾತೆ ಅತಿಹರುಷದಿಂದ || ೯ ||
ಸಲ್ಲೀಲೆ[3] ಯೊಳು[3] ದೇವಋಷಿಸತಿಯರ್ಕೂಡಿ ।
ಮಲ್ಲಿಕಾರ್ಜುನಗೆ ಮಾಣಿಕ್ಯದಾರತಿಯ || ೧೦ ||
ಉಲ್ಲಾಸದಿಂ ಪಿಡಿದು ಅಲ್ಲಿಗೈತಂದು ।
ನೋಡಿದಳು ತನ್ನಮನ ನೋಟದಣಿವಂತೆ || ೧೧ ||
ರೂಢಿಗೀಶ್ವರನ ನಿಜರೂಪು ವಿಸ್ತರಿಸಿ ।
ಪರಶಿವನ ನಿಜರೂಪು ಪ್ರಮಥರೂ ಇರಲು || ೧೨ ||
ಕಂಡು ವಿಸ್ಮಿತಳಾಗಿ ತನ್ನ ಮನದೊಳಗೆ * ।
ಹರನರಿಯದಗಜಾತೆ ಬೆರ[4] ಗಾದಳಾಗ[4] || ೧೩ ||

ವಚನ || ಆ ಪ್ರಮಥರು ದೇವಿಯರ ಮನದಿಚ್ಛೆಯನ್ನರಿದು, ತಮ್ಮ ತಮ್ಮ ಶಿವರೂಪವನುಳಿದು ಬದಲು ರೂಪಂಗಳಂ ತಾಳಿದರದೆಂತೆನೆ.

**ಏಕತಾಳ.**

ಕರಿಮುಖ ನರಮುಖ । ಶರಭ ಶಾರ್ದ್ದೂಲ ಮುಖ ।
ಪರಿಪರಿ ಮುಖಗಳ । ಭರದಿ ತಾಳಿದರು || ೧ ||
ಗಜಕರ್ಣ ಘಂಟಾಕರ್ಣ । ಭುಜವ ಮುಟ್ಟುವ ಕರ್ಣ ।
ದ್ವಿಜಕರ್ಣ ವಿಶ್ವಕರ್ಣ । ನಿಜದಿ ತಾಳಿದರು || ೨ ||
ಸ್ಥೂಲಕಾಯವು ಸೂಕ್ಷ್ಮ । ಕಾಯ ಮಹಾಕಾಯ ।
ಬಲಕಾಯವು ಭದ್ರ । ಕಾಯ ತಾಳಿದರು || ೩ ||
ಒಲಿದು ಪ್ರಮಥರೆಲ್ಲ । ಪಲಬಗೆ ರೂಪಾಗೆ ।
ಜಲಜಾಕ್ಷಿ ಕಂಡಳು । ಮಲಹರನಡಿಯ || ೪ ||
ಹರನ ಕಾಣುತ ಬೇಗ । ಹರುಷದಿಂ ಗಿರಿಜಾತೆ ।
ಭರದಿ ಮಾಣಿಕ್ಯದಾ । ರತಿಯನೆತ್ತಿದಳು || ೫ ||

---

1-1 ಭೂಷಣವು (ಒ, ಗ, ಚ, ಟ.) 2-2 ನಕ (ಗ,ಟ.) 3-3 ಯಲಿ (ಒ, ಗ, ಚ, ಟ)
* ಈ ಅರ್ಧಪದ್ಯ (ಅ, ಇ, ಎ, ಒ, ಗ, ಚ, ಜ, ಟ.) ಪ್ರತಿಗಳಲ್ಲಿಲ್ಲ.
4-4 ಗುವಟ್ಟಿರ್ದ (ಒ, ಗ, ಚ, ಟ.)

ಎತ್ತಿ ಈಶಗೆ ಮುದ । ವೆತ್ತಿ ಇಂತೆಂದಳು ।
ಇತ್ತಪೆ ಪ್ರಮಥರಿಗೆ । ಮತ್ತೆ ಊಟವನು ॥ ೬ ॥
ಬೇಡ ಪ್ರಮಥರಿಗೆ । ನೀಡುವರಳವಲ್ಲ ।
ಆಡಬಹುದು ಮಾತ । ನೋಡಿಕೊ ಮುಂದೆ ॥ ೭ ॥
ಏನಾದಡಾಗಲಿ । ನಾನು ಪ್ರಮಥರಿಗೆ ।
ಆನಂದ ಹರುಷದೌ । ತಣವ ಮಾಡಿಸುವೆ ॥ ೮ ॥
ಮನಬಂದ ತೆರದಿ ಮಾ । ಡೆನಲಾಗ ಈಶನು ।
ಘನಹರುಷದಿ ಬಂದು । ಗಿರಿಜಾತೆಯಾಗ ‡ ॥ ೯ ॥
ಅಂದದಿಂ ಪ್ರಮಥರಿಗೆ । ಅಂದು ಭಸಿತವಿತ್ತು ।
ವಂದಿಸಿ ಶರಣೆಂದ । ಸ್ಕಂದಜನನಿಯು ॥ ೧೦ ॥
ಚಂದದಿಂ ಬಿನ್ನಹ । ಚೆಲುವಿಂದ ತಾ ಮಾಡಿ ।
ಬಂದು ಕರಸಿದಳ್ ದೇವ । ವೃಂದ ಸತಿಯರನು *

**ಜಂಪೆ.**

ವನದೇವಿ ಶಾಂಭವಿಯ । ಮನಹರುಷವಪ್ಪಂತೆ ।
ಘನವಾದ ಶಾಕಫಲ । ವನು ಒದಗಿಸುವಳು ॥ ೧ ॥
ಈಗ ಶಾಂಭವಿ ಹರುಷ । ವಾಗುವಂದದಿ ನೀರ ।
ಸಾಗರದೇವಿಯತಿ । ವೇಗ ಒದಗಿಪಳು ॥ ೨ ॥
ಸನುಮತದಿ ಶಾಂಭವಿ[1] ಯ[1] । ಮನಹರುಷವಪ್ಪಂತೆ ।
ಧನಪನರಸಿಯರು ಸೈ । ಧನವನೊದಗಿಪರು ॥ ೩ ॥
ಆಯವರಿತಗ್ನಿಯು । ಪಾಯದಿಂ ಹತ್ತಿಸಲು ।
ವಾಯುದೇವನು ಒಲಿಯ । ಮಾಯದಿಂದುರುಹೆ ॥ ೪ ॥
ಅಷ್ಟದಿಕ್ಪಾಲಕರ । ಅರಸಿಯರು ಅಡಿಗೆಗಳ ।
ನಿಷ್ಠೆಯಿಂದಿಳುಹಿದರು । ನೀಡಲ್ ಪ್ರಮಥರಿಗೆ ॥ ೫ ॥
ಬೆಟ್ಟಬೆಟ್ಟಗಳಂತೆ । ಒಟ್ಟಿದರು ಬೋನವನು ।
ಗುಡ್ಡೆ ಗುಡ್ಡೆ ಗಳಂತೆ । ಶಾಖಫಲವಿಳುಹೆ ॥ ೬ ॥
ಮಿಗೆಬೆಳೆದ ಸಪ್ತಸಾ । ಗರವನಿಳಹುವ ತೆರದಿ ।
ತೆಗೆದು ಸಂಬಾರ ಪಳಿ । ದ್ಯಗಳ ಕಾಸಿದರು ॥ ೭ ॥

ವಚನ ॥ ಆ ವೇಳೆಯಲ್ಲಿ ಪ್ರಮಥರೆಲ್ಲ ಹಸಿದೆವು, ದೇವಿಯರು ಅಡಿಗೆಯ ನಿಳುಹಿದರೊ ಇಲ್ಲವೊ ನೋಡಿಬನ್ನಿ ಎಂದು ಒಬ್ಬ ಬಾಲಕನಂ ಕಳುಹಲು, ಆ ಪ್ರಮಥ ಬಾಲಕ ಬಂದು ಗಿರಿಜಾದೇವಿಯಂ ಏನೆಂದು ಕೇಳುತಿರ್ದನದೆಂತೆನೆ.

---

‡ ಈ ಪದ್ಯ (ಉ, ಎ, ಚ, ಟ, ಡ, ಬ.) ಪ್ರತಿಗಳಲ್ಲಿಲ್ಲ. * ಈ ಪದ್ಯ (ಅ, ಎ, ಗ, ಚ, ಜ, ಡ, ಬ.) ಪ್ರತಿಗಳಲ್ಲಿಲ್ಲ, 1-1 ಗೆ(ಅ, ಎ, ಗ, ಚ, ಟ, ಬ.)

**ಅಟತಾಳ.**

ಅಮ್ಮ ಅಡಿಗೆಯು ಆಯಿತಿಲ್ಲವೊ । ಗಮ್ಮನೆನಗೆ ಪೇಳೆನೆ ।
ನಮ್ಮ ಪ್ರಮಥರು ಕಳುಹೆ ಬಂದೆನು – ನಿಮ್ಮ ಬಳಿಗೆ ॥ ೧ ॥
ಅಡಿಗೆಯೆಂಬುದು ಆಯಿತಾಗಲಿ । ಒಡನೆ ಪೋಗಿ ಪ್ರಮಥರ ।
ಬಿಡದೆ ಕರೆತಾರೆನಲು ಬಾಲಕ – ನುಡಿದ ಮತ್ತೊಂದ ॥ ೨ ॥
ಹಸಿದೆನಾದರೆ ತಾಯೆ ಎನಗಿಷ್ಟು । ಬಿಸಿಯ ಅನ್ನವ ನೀಡಿಸು ।
ಹಸಿವ ತಂಪಿಸಿ ಕರೆದು ತರುವೆನು – ಅಸಮಗಣರ ॥ ೩ ॥
ಅಡಿಗೆಯಾಲಯಕ್ಕೈದಿ[1] ಬೇಗದಿ[1] । ತಡೆಯದುಂಡು ಪ್ರಮಥರ ।
ಬಿಡದೆ ಕರೆತಾರೆನಲು ಪೋದನು – ಅಡಿಗೆಮನೆಗೆ ॥ ೪ ॥
ನೋಡಿದನು ಮೇರುವೆಯ ಸಮನಿಗೆ । ಮಾಡಿದಂಥಾ[2] ಬೋನವ[2] ।
ಕೂಡೆ ಎಲ್ಲವನೊಂದೆ ತುತ್ತನು – ಮಾಡಿನಿಂದ ॥ ೫ ॥
ಕೂಡಿ ಸರ್ವರು ಬೆಟ್ಟದಂದದಿ । ಮಾಡಿದಂಥಾ[3] ಭಕ್ಷ್ಯವ[3] ।
ನೋಡೆ ಬಾಲಕನೊಬ್ಬನುಂಡನು – ಆಡಲೇನು ॥ ೬ ॥
ನಿಂದು ನಾಚುತ ಸುರರಸತಿಯರ । ನಂದು ಕಳುಹಿ ದೇವಿಯು ।
ಮುಂದೆ[4] ಬಂ[4] ದಳು ಶಿವನ ಓಲಗ – ಕಂದು ಗಿರಿಜೆ ॥ ೭ ॥
ಬಂದ ಬರವನು ನೋಡಿ ಈಶ್ವರ । ಚಂದದಿಂದ ನುಡಿದನು ।
ಸಂದು ಸಂಶಯಬೇಡ ದೇವಿಯೆ – ಹರುಷವಿರು ನೀಂ * ॥ ೮ ॥
ಎಂದು ಪೇಳುತ ಬಸವರಾಜನು । ವಂದಿಸುತ್ತಾ ಪ್ರಭುವಿಗೆ ।
ತಂದೆ ನಿಮ್ಮಯ ಎಡೆಗೆ ನಾನವ – ರಿಂದ ಘನವೇ ॥ ೯ ॥
ಬಾಲಕನು ಬಂದಿಷ್ಟು ಮಾಡಿದ । ಮೇಲೆ ಪ್ರಮಥಗಣಸಭೆ ।
ಮೂಲವೈದೆ ಬ್ರಹ್ಮಾಂಡವವರಿಗೆ – ಸಾಲುತಿಹುದೆ ॥ ೧೦ ॥

ವಚನ ॥ ಎಂದು ಹಿಂದಣ ಸಾಕ್ಷಿಯಂ ಪೇಳಿ, ಪ್ರಭುದೇವರು ಬಸವರಾಜದೇವರು ಮೊದಲಾದ ಸಕಲಶರಣರೂ ಶಿವಗೋಷ್ಠಿಯಲ್ಲಿರುತ್ತಿರಲು, ಬಸವರಾಜದೇವರು ವಿಟಗಾರ ಜಂಗಮದ ಮನದಿಚ್ಛೆಯಂ ಸಲಿಸುತಿರ್ದರದೆಂತೆನೆ.

## ವಿಟ ಜಂಗಮಗೆ ಪೆಟ್ಟಿಗೆಯು ಹೊನ್ನನಿತ್ತ ಪವಾಡ.

**ಜಂಪೆ.**

ಒಂದುದಿನ ಬಿಜ್ಜಳನ । ಮಂದಿಗರ್ಥವನೀಯೆ ।
ಬಂದ ಬೊಕ್ಕಸದ ಮನೆ । ಗಂದು ಬಸವಯ್ಯ ॥ ೧ ॥

---

1-1 ಬೋನವ (ಇ, ಉ, ಎ, ಒ, ಗ, ಚ.) 2-2 ರಾಶಿಯ (ಅ, ಎ, ಒ, ಗ, ಚ, ಜ, ಟ, ಡ.) 3-3 ಬೋನವ (ಅ, ಉ, ಎ, ಗ, ಚ, ಜ.) 4-4 ಪೋ (ಅ, ಎ, ಒ, ಚ, ಜ, ಟ, ಡ, ಬ.) * ಈ ಪದ್ಯ (ಟ.) ಪ್ರತಿಯಲ್ಲಿ ಮಾತ್ರವಿದೆ.

ಅರಮನೆಯ ಊಳಿಗರು । ಕರಣಿಕರು ಮಂತ್ರಿಗಳು ।
ಭರದಿ ಬೊಕ್ಕಸವಿರುವ । ಅರಮನೆಯ ಪ್ರೊಕ್ಕರ್ ॥ ೨॥
ಕಡುವೇಗ ಹಿರಿದಾದ । ಕಡವರದ ಪೆಟ್ಟಿಗೆಯ ।
ಹಿಡಿದು ಬಿಚ್ಚಲು ಕಂಡ । ಒಡನೊಬ್ಬ ಅಯ್ಯ ॥ ೩ ॥
ಕಂಡು ಅತಿವೇಗ ಪಿಡಿ । ಕೊಂಡು ಸೂಳಿಗೆ ಬೇಕು ।
ದಂಡೇಶ ಪೆಟ್ಟಿಗೆಯ । ಖಂಡಿತವು ಬಿಡೆನು ॥ ೪ ॥
ಪೆಟ್ಟಿಗೆಯ ಹೊನ್ನ ಸುರಿ । ಕೊಟ್ಟು ಬರಿಪೆಟ್ಟಿಗೆಯ ।
ಮುಟ್ಟಿ ಕೀಲಿಸಿ ಬಿಗಿದ । ಕಟ್ಟೆಂದಿನಂತೆ ॥ ೫ ॥
ನೋಡಿದರು ಯೋಚನೆಯ । ಮಾಡಿದರು ಮಂತ್ರಿಗಳು ।
ರೂಢೀಶಗಿಂತರಿಕೆ । ಮಾಡುವೆವು ಎನುತ ॥ ೬ ॥
ಮಾಜಿದರೆ ಈ ಮಾತ । ರಾಜದ್ರೋಹವು ಎಂದು ।
ಮಾಜದೆ ಪೋಗಿ ರಾ। ಜನಿಗೆ ಪೇಳಿದರು ॥ ೭ ॥
ಇಂದು ಬಸವಯ್ಯ ತಾ । ನೊಂದು ಪೆಟ್ಟಿಗೆ ಹೊನ್ನ ।
ಮುಂದಿಗೀಯದೆ ಕೊಟ್ಟ । ಬಂದ ಜಂಗಮಕೆ ॥ ೮ ॥
ಕೇಳಿ ಬಿಜ್ಜಳರಾಯ । ತಾಳಿ ಕೋಪವ ಬಸವ ।
ಮೂಲದ್ರವ್ಯವ ಹೀಗೆ । ಹಾಳುಮಾಡುವರೆ ॥ ೯ ॥
ಏಕಿಷ್ಟು ದುಡುಕಿನ್ನು । ಸಾಕು ಮಂತ್ರಿಯತನವು ।
ಬೇಕು ನಮ್ಮಯ ಹೊನ್ನು । ನೀ ಕೊಟ್ಟು ತೊಲಗು ॥ ೧೦ ॥
ಪರದ್ರವ್ಯ ಪಾತಕವು । ಕರಸೋಂಕೆವೆಂಬುವಿರಿ ।
ಅರಮನೆಯ ದ್ರವ್ಯವಪ । ಹರಿಸಿ ಕೆಡಿಸುವರೆ ॥ ೧೧ ॥

ವಚನ ॥ ಆ ಮಾತಿಗೆ ಬಸವಯ್ಯನೇನೆನ್ನುತಿರ್ದನು.

**ತ್ಯಾಗಮಾನ – ಆಟತಾಳ.**

ನಿನ್ನ ದ್ರವ್ಯದಾಸೆಯೆಂಬುದಲೆ ರಾ – ಯ – ಅದು—
ಇನ್ನೇಕೆ ಹತ್ತುವದು ನಮಗೆ ಎಲೆ ರಾ – ಯ ॥ ೧ ॥
ಪನ್ನಗೇಂದ್ರಧರನ ಒಡವೆ ಎಲೆ ರಾ – ಯ – ಅದು—
ನಿನ್ನದಲ್ಲ ನಮ್ಮ ಸೊಮ್ಮು ಎಲೆ ರಾ – ಯ ॥ ೨ ॥
ನಾಡಮಾತನಾಡಲೇಕೆ ಎಲೆ ರಾ – ಯ – ನೀನು—
ನೋಡಿಕೊ ಪೆಟ್ಟಿಗೆಯ ಹೊನ್ನ ಎಲೆ ರಾ – ಯ ॥ ೩ ॥
ರೂಢಿಯೊಳು ಪರದ್ರವ್ಯವನು ಎಲೆ ರಾ – ಯ – ಕಣ್ಣಿಂ—
ನೋಡರು ನಮ್ಮ ಶರಣರು ಎಲೆ ರಾ – ಯ ॥ ೪ ॥

ಭಕ್ತಿಯಿಂದ ಒಪ್ಪಿಸಿದರೆ ಎಲೆ ರಾ – ಯ – ಬೇಡ—
ಅತ್ತಲೆ ಇರಲೆಂಬರವರು ಎಲೆ ರಾ – ಯ * || ೫ ||

ಸೂತ್ರ ತಮ್ಮವರಾದರೆಯು ಎಲೆ ರಾ – ಯ – ಅದನು—
ಹಸ್ತದಲ್ಲಿ ಪಿಡಿವರಯ್ಯ ಎಲೆ ರಾ – ಯ || ೬ ||

**ಜಂಪೆ.**

ಅರಸು ಪೆಟ್ಟಿಗೆ ಕೀಲ | ತೆಗೆಸಿ ನೋಡಲು [1] ಹೊನ್ನು [1] |
ಭರದಿ ಪೆಟ್ಟಿಗೆ ತುಂಬಿ | ಹೊರಡುತಿರೆ ಕಂಡ || ೧ ||

ನೋಡಿದನು ತಲೆಯನ | ಲ್ಲಾಡಿದನು ಮನಹರುಷ |
ಮಾಡಿದನು ಸ್ತುತಿಸಿ ಕೊಂ | ಡಾಡಿದನು ರಾಯ || ೨ ||

ಪೊಡವಿಹದಿನಾಲ್ಕಕ್ಕೆ | ಒಡಯನಲ್ಲದೆ ಬಿನುಗು |
ಜಡದೈವ ಬಸವನಿಗೆ | ಪಡಿಯೆನ್ನಬಹುದೆ || ೩ ||

ಧರೆಯ ನರಮಂತ್ರಿಗಳ | ಪರಿಯೆಂದು ಭಾವಿಸಿದೆ |
ಪರಬ್ರಹ್ಮ ಸಾಕ್ಷಾತು | ನರನಲ್ಲವೆಂದು || ೪ ||

ಪೊಡವಿಯೊಳು ಇದು ಮೊದಲು | ಚಡುತ ಚಾಡಿಯನಾಡೆ |
ಬುಡಮುಟ್ಟ ನಾಲಿಗೆಯ | ಕೆಡಹಿ ಕೊಯ್ಸುವೆನು || ೫ ||

ಬಸವರಾಜನ ಮೇಲೆ | ಎಸಗಿ ಚಾಡಿಯ ಹೀಗೆ |
ವಸುಧೆಯೊಳು ಪೇಳ್ದರ | ದೆಸೆಯ ಕೆಡಿಸುವೆನು || ೬ ||

ಭಾಪುರೆ ಬಸವೇಶ | ಭಾಪುರೆ ಘನಮಹಿಮ |
ಭಾಪುರೆ ಶಶಿಕಳೆಯ | ರೂಪ ಕುಲದೀಪ || ೭ ||

ವಚನ || ಇಂತೆಂದು ರಾಯನು ಬಸವರಾಜದೇವರಿಗೆ ಸಪ್ತಾಂಗಮಂಕೊಟ್ಟು ಕನಕಸ್ನಾನವಂ ಮಾಡಿಸಿ ಕರಕಮಲಂಗಳಂ ಮುಗಿದು ಸ್ತೋತ್ರವಂ ಮಾಡಿ ಮನೆಗೆ ಕಳುಹಲು, ಇತ್ತ ಬಸವರಾಜದೇವರು ಶರಣರ ಸದ್ಗೋಷ್ಠಿಯಲ್ಲಿರುತಿರ್ದ ರದೆಂತೆನೆ.

## ವಿಟಜಂಗಮರ ಎಡೆ ಪರೀಕ್ಷೆ.

**ಏಕತಾಳ.**

ಆರಾರ ಮನದಿಚ್ಛೆ | ಹಾರೈಸಿ ಬಂದರೆ |
ಮೀರದೆಲ್ಲರ ಮನ | ಹಾರ ನಡೆಸುವನು || ೧ ||

ತನು ಮನ ಧನದೊಳು | ಇನಿತು ವಂಚನೆಯಿಲ್ಲ |
ದನುದಿನ ಜಂಗಮಕೆ | ಮನವೊಲಿದೀವ || ೨ ||

---

* ಈ ಪದ್ಯ (ಅ, ಉ, ಎ, ಗ, ಚ, ಜ, ಟ, ಬ.) ಪ್ರತಿಗಳಲ್ಲಿಲ್ಲ. 1-1 ಹಣವು (ಬ,ಬ.)

ಅನ್ನವು ವಸ್ತ್ರವು । ಹೊನ್ನು ಬಂಗಾರವು ।
ರನ್ನದ ಭೂಷಣ । ವನ್ನು ನಡೆಸುವನು ॥ ೩ ॥
ಜಂಗಮವೆ ಪ್ರಾಣ । ದಂಗವಾಗಿರುತಲಿ ।
ಸಂಗನಬಸವಯ್ಯ । ಮಿಗೆ ಸಲಹುತಿಹನು ॥ ೪ ॥
ಧರೆಯೊಳು ಮಠಮಾನ್ಯ । ಪುರವರ್ಗ ಕ್ಷೇತ್ರಗಳ ।
ಹರಶರಣರಿಗಿತ್ತು । ಹರುಷದಿಂದಿಹನು ॥ ೫ ॥
ಈಶನ ಮೋಹದ । ವಿಟಗಾರ ಜಂಗಮರು ।
ವೇಶಿಯರ ಮನೆಯಲ್ಲಿ । ಆವಾಗಲಿಹರು ॥ ೬ ॥
ಲಿಂಗವ ಬಸವಣ್ಣ । ಗಂಗೈಸಿ ಜಂಗಮರು ।
ಹಿಂಗದೆ ವೇಶಿಯರ । ಸಂಗದೊಳಿಹರು ॥ ೭ ॥
ಅವರವರ ಲಿಂಗಗಳ । ಅಷ್ಟವಿಧ ಷೋಡಶ ।
ಅವಿರಳ ವಿಧಿಯಿಂದ । ಪೂಜಿಪ ಬಸವ * ॥ ೮ ॥
ಅವರವರ ಲಿಂಗಕ । ರ್ಪಿಸಿದಂಥ ಎಡೆಯನ್ನು ।
ಅವರಿದ್ದ ವೇಶಿಯರ । ಮನೆಗೆ ಕಳುಹುವನು ॥ ೯ ॥
ಲಿಂಗಕರ್ಪಿಸಿಯೆ ವೇ । ಶ್ಯಾಂಗನೆಯರ ಮನೆಗೆ ।
ಹಿಂಗದೆ ಕಳುಹಲು । ನೋಡಿ ಮಂಚಣ್ಣ ॥ ೧೦ ॥
ವಿಟಗಾರಮೂರ್ತಿಗಳ । ಮಹತ್ತನು ಶ್ರವಣರಿಗೆ ।
ದಿಟವ ಕಾಣಿಸಲೋ । ಸುಗ ಪೇಳ್ದ ಕುಹಕ * ॥ ೧೧ ॥
ಅವನಿಪ ಕೇಳ್ಬಸ । ವೇಶನ ಗಣರಿರವ ।
ಕವಿದು ವೇಶ್ಯಾಸಂಗ । ಕನುವಾಗಿ ಇಹರು * ॥ ೧೨ ॥
ಅವರ ಲಿಂಗವ ಪೂಜಿ । ಸವರ್ಲಿಂಗದೆಡೆಗಳ ।
ಅವರಿರ್ಪ ವೇಶಿಯರ । ಮನೆಗೆ ಕಳುಹುವನು ॥ ೧೩ ॥
ಎಂದ ಕೊಂಡೆಯ ಮಾತ । ನಂದು ಬಿಜ್ಜಳ ಕೇಳಿ ।
ನಂದೀಶಬಸವನ । ಆಗ ಕೇಳಿದನು * ॥ ೧೪ ॥
ಏನಯ್ಯ ಮಂತ್ರೀಶ । ನೀನು ನಿನ್ನವರ್ಗ್ಗವ ।
ಹೀನವೃತ್ತಿಯ ಕಾರ್ಯ । ನಾನೆಂತು ಪೇಳ್ವೆ * ॥ ೧೫ ॥
ನಿಮ್ಮ ಆಚಾರ ಕ್ರಿಯೆ । ನಿಮ್ಮ ಸುಜ್ಞಾನ ಭಕ್ತಿ ।
ನಿಮ್ಮ ಘನತೆಯು ಮುಗಿಲ । ನೊದೆಯುತಲೈತೆ * ॥ ೧೬ ॥
ಇಂದುಧರನ ಎಡೆಯ । ಮುಂದೆ ವೇಶಿಯರ ಮನೆಗೆ ।
ತಂದು ಕೊಡಲುಬಹುದೆ । ಎಂದು ಕೇಳಿದನು ॥ ೧೭ ॥

---

* ಈ ಪದ್ಯಗಳು (ಅ, ಉ, ಎ, ಒ, ಗ, ಚ, ಜ, ಟ, ಬ,·) ಪ್ರತಿಗಳಲ್ಲಿಲ್ಲ

ಶರಣರ ಮಹಿಮೆಯ | ಪರಿಕಿಸಿ ನೋಡೆಂದು |
[1] ಧರಣಿಪತಿ [1] ಗೆ ದೃಷ್ಟ | ಒರೆದು ತೋರಿದನು || ೧೮ ||

ವಚನ || ಎಂದ ರಾಯಂಗೆ ಆದಡೆ ಅವರ ಮಹತ್ತ್ವಂ ಪರೀಕ್ಷಿಸೈ ಎಂದು ವೇಶಿಯರ ಮನೆಗೆ ರಾಯನ ಚರರಂ ಬಿಟ್ಟು, ಬಳಿಕ ಬಸವರಾಜದೇವರು ಆ ವಿಟಗಾರ ಜಂಗಮರ ಇಷ್ಟಲಿಂಗಗಳಿಗೆ ಅಷ್ಟವಿಧಾರ್ಚನೆಯಂ ಮಾಡಿ, ಪಂಚಭಕ್ಷ್ಯ ಪರಮಾನ್ನಗಳಂ ನೈವೇದ್ಯಮಾಡಿ, ಒಬ್ಬರ ಲಿಂಗದೆಡೆಯಂ ಒಬ್ಬರಿಗೆ ಕಳುಹಲು ಆ ವಿಟಗಾರಮೂರ್ತಿಗಳು ಏನೆನ್ನುತಿರ್ದರು.

**ಜಂಪೆ.**

ಬಸವರಾಜನ ಭಕ್ತಿ | ಅಸಮಾನವಾಯಿತೆ |
ಹೆಸರಿಡಲು ಕುರುಹಿಲ್ಲ | ಪೊಸತುಮಾಡಿದನು || ೧ ||
ನಮ್ಮ ಲಿಂಗದ ಎಡೆಯ | ನಮಗೆ ಕಳುಹದೆ ಹೀಗೆ |
ಅನ್ಯರ ಲಿಂಗದೆಡೆ | ಯನ್ನು ಕಳುಹುವರೆ || ೨ ||
ಏಕೆ ಲಿಂಗದ ಭಕ್ತಿ | ಸಾಕಾಯಿತೆ ತನಗೆ |
ಬೇಕಾದರೆಮ್ಮೆಡೆಯ | ಜೋಕೆಯಿಂ ಕಳುಹಲಿ || ೩ ||
ಎಂದೆಲ್ಲ ಎಡೆಗಳನು | ಹಿಂದಕ್ಕೆ ಕಳುಹಿದರು |
ಅಂದು ಸಂತಸಗೊಂಡ | ನಂದೀಶ ಬಸವ || ೪ ||
ಎಂದ ಮಾತಿಗೆ ಬಸವ | ನಂದು ಹರುಷವತಾಳಿ |
ಹಿಂದೆಂದ ನೃಪಗೆ ನಿಜ | ವಂದು ತೋರಿದನು || ೫ ||
ಲಿಂಗ ಜಂಗಮಪ್ರಾಣ | ಹೇಗಿರಲು ಅವರ ಮಹ |
ತ್ವಂಗಳನು ಪರಿಕಿಪಡೆ | ತಿಂಗಳಾಂತಗರಿದು * || ೬ ||
ಹರನ ವಿಟಜಂಗಮರು | ತಿರುಗಿ ಕಳುಹಲು ಎಡೆಯ |
ಹರುಷವೇರುತ ಬಸವ | ತಿರುಗಿ ಕಳುಹಿದನು || ೭ ||
ತಮ್ಮ ಲಿಂಗದ ಎಡೆಯ | ತಾವಾಗ ಕೈಕೊಂಡು |
ಸುಮ್ಮಾನದಲಿ ಸಲಿಸಿ | ಸುಖದಿ ಇರುತಿರಲು || ೮ ||
ಇತ್ತ ಬಸವೇಶ್ವರನು | ಅತ್ಯಂತ ಹರುಷದಲಿ |
ಸತ್ಯಶರಣರ ಒಡನೆ | ಅರ್ಥಿಯಿಂದಿರಲು || ೯ ||

ವಚನ || ಇಂತು ವಿಟಜಂಗಮರ ಮನದಿಚ್ಛೆಯಂ ಸಲಿಸಿ ಭಕ್ತಿಗೈಯುತ್ತಾ ಇರಲು, ಇತ್ತ ಪರಶಿವಮೂರ್ತಿ ವಿಟರೂಪಂತಳೆದು ಬಸವನ ಭಕ್ತಿಯ ಕಲಕಿ ನೋಡಲು ಬರುತ್ತಿರೆ, ಬಸವೇಶ ತಿಳಿದು ತನ್ನ ಮಂದಿರಕ್ಕೆ ಬಿಜಯಂಗೈಸಿತಂದು ಸತ್ಕಾರದಿಂ ಪೂಜಿಸಿದನದೆಂತೆನೆ.

---

1-1 ಹರಭಕ್ತರಿ (ಅ, ಉ, ಒ, ಗ, ಚ, ಜ, ಟ.) * ಈ ಪದ್ಯ (ಎ, ಗ, ಚ.) ಪ್ರತಿಗಳಲ್ಲಿ ಮಾತ್ರವಿದೆ.

## ವಿಟಗಾರನಾಗಿ ಬಂದ ಶಿವನು ನೀಲಾಂಬೆಗೆ ಕಂದನಾದುದು.

**ತ್ರಿವುಡೆ.**

ಬಂದ ಸುಂದರಮೂರ್ತಿಗತಿ ಆ। ನಂದದಿಂ ದಂಪತಿಗಳ್ಯುಕ್ತದಿ।
ಒಂದೆ ದೃಢಭಕ್ತಿಯಲಿ ಪೂಜಿಸಿ– ನಿಂದು ವಿನಯದಲಿ ॥ ೧ ॥
ದೇವ ನಿಮ್ಮಯ ಚರಣದರುಶನ। ತೀವಿ ಧನ್ಯ ನಾನಾದೆನೈ ಗುರು।
ಆವಕಡೆಯಿಂದೈದಿರಿಲ್ಲಿಗೆ– ಎನ್ನ ಪುಣ್ಯದಲಿ ॥ ೨ ॥
ಭಕ್ತಚಿಂತಾಮಣಿಯೆ ನಿನ್ನೆಯ। ಖ್ಯಾತಿ ಲೋಕದಿ ಒದರುತಿರೆ ಕಂಡು।
ಚಿತ್ತ ವಿಟ್ಟುದ ಕೇಳಿ ಬಂದೆನು– ಸತ್ಯಬಸವ ॥ ೩ ॥
ದೇವಸಂಗಮನೀವ ನಿಮ್ಮಯ। ಜೀವಬಯಕೆಯ ಪಾಲಿಸಪ್ಪಣೆ।
ದೇವ ಎನೆ ಬಸವಂಗೆ ಪೇಳ್ದನು– ಕಾಮಕೇಳಿಯನು ॥ ೪ ॥
ಎನ್ನಬಯಕೆಯು ಓರ್ವಳಾಗಿಹ। ಛನ್ನ ಶರಣರ ಭಾವವಾಗಿಹ।
ಕನ್ನೆಯಳ ರತಿಸೊಗಸು ಸೊಂಪನು– ಕೊಡಿಸು ಬಸವ ॥ ೫ ॥
ಕಳುಹಿದನು ಬಸವಣ್ಣ ಊಳಿಗರ। ಲಲನೆಯೋರ್ವಳೆ ಇಪ್ಪಶರಣೆಯ।
ಪ್ರೊಳಲೊಳರಸಿಯೆ ಇರುವುದನು ನೀವ್– ನೋಡಿ ಬನ್ನೆಂದು ॥ ೬ ॥
ಬಂದು ಬಸವೇಶ್ವರನ ಅಪ್ಪಣೆ। ಯಿಂದ ಊಳಿಗರ್ ಶರಣೆಯರ್ ಗೃಹಗಳ।
ಒಂದು ಉಳಿಯದೆ ಅರಸೆ ಓರ್ವಳು– ಇಲ್ಲವಾವೆಡೆಯೋಳ್ ॥ ೭ ॥
ಶರಣೆ ವೇಶಿಯರ್ ಗೃಹದೊಳಲ್ಲಲ್ಲಿ। ಶರಣ ವಿಟಮೂರ್ತಿಗಳು ಒಪ್ಪಿಯೆ।
ಇರುತಿಹುದನೆಡವಿಡದೆ ನೋಡಿಯೆ– ಬಂದು ಬಸವನೊಳು ॥ ೮ ॥
ಸ್ವಾಮಿ ನಿಮ್ಮಪ್ಪಣೆಯೊಳೈದಿಯೆ। ನಾವು ಹುಡುಕಿದೆವೆಲ್ಲ ಗೃಹದೊಳು।
ತೀವಿ ವಿಟರೊಳು ಕೂಡಿ ಇರ್ಪರು– ಓರ್ವಳಹಳಿಲ್ಲ ॥ ೯ ॥

ವಚನ ॥ ಇಂತೆಂದ ವಾರ್ತೆಯಂ ಕೇಳಿ, ಬಸವಣ್ಣನು ಭಕ್ತಿಯಂ ಬಲಿದು ತನ್ನ ಸತಿಯಾದ ನೀಲಲೋಚನೆಯಂ ಜಂಗಮಕರ್ಪಿಸಿದನದೆಂತೆನೆ.

**ಸಾಂಗತ್ಯ.**

ಬಸವಯ್ಯ ತನ್ನಯ ಸತಿನೀಲಲೋಚನೆಗೆ। ಕುಶಲದೊಳೊಸೆದು ಪೇಳಿದನು ॥
ಪಶುಪತಿರೂಪಿನ ಜಂಗಮಮೂರ್ತಿಯೋಳ್। ಕುಸುಮಶರನ ಕೇಳಿ ಸಲಿಸು ॥ ೧ ॥
ಎನ್ನೊಳು ಎಂತಿರ್ಪೆಯವರೊಳು ನೀನಂತೆ। ಪನ್ನಗವೇಣಿ ನೀ ಸುಖಿಸು ॥
ಎನ್ನುತ ಸಂತೈಸಿ ಬೇಗದಿ ಮೂರ್ತಿಯ। ಬಿನ್ನೈಸಿ ಬಂದುಪಚರಿಸಿ ॥ ೨ ॥
ಶರಣೆ ಸ್ತ್ರೀ ರತುನವ ಪಾದಕರ್ಪಿಸಿಯಾಗ। ಸ್ಮರಲೀಲೆಯಾಡಿ ಶರಣೆಂದು ॥
ತರುಣಿಯ ಒಪ್ಪಿಸಿ ಬಂದನು ಬಸವಣ್ಣ। ಹರನೋಡಿ ಹರುಷವಗೊಂಡ ॥ ೩ ॥
ತಾಂಬೂಲ ಮಡಿಸಿತ್ತು ಗಂಧ ಕಸ್ತೂರಿಯನ್ನು। ಅಂಬುಜಮುಖಿ ಜಂಗಮಕ್ಕೆ ॥
ಸಂಭ್ರಮದಿಂದ ಲೇಪಿಸಿ ನೋಡಿ ಪಾದವ। ಕಂಬುಕಂಠಿಯು ಒಪ್ಪಿದಳು ॥ ೪ ॥

ವೀಣೆಗೀತಂಗಳ ಪಾಡಿ ಪ್ರೌಢತೆಯಿಂದ । ಜಾಣಮೂರ್ತಿಯ ಮನವೆಳಸಿ ॥
ಆಣಿವೆಣ್ಣುಗಳ ಕಟ್ಟಾಣಿ ನೀಲಾಂಬಿಕೆ । ಜಾಣ್ಮೆಯ ಮತಿವಿಲಾಸದಲಿ ॥ ೫ ॥
ಆಕೆಯ ನಿಜಭಕ್ತಿ ಬಸವನ ದೃಢವನ್ನು । ಲೋಕೇಶ ಕಂಡು ಮೆಚ್ಚಿದನು ॥
ಆ ಕಮಲಾಕ್ಷಿ ಪಕ್ಕವ ಸೇರಲಾಕ್ಷಣ । ಜೋಕೆಯಿಂ ಶಿಶುವಾದ ಶಿವನು ॥ ೬ ॥
ಬಂದು ಕಂಡನು ಬಸವೇಶನು ಶಿಶುವನ್ನು । ಇಂದುಧರನ ತಂತ್ರವೆಂದು ॥
ಕಂದಗೆ ಬಾಲಸಂಗಯ್ಯನೆಂಬುವ ನಾಮ । ಚಂದದಿಂ ಸಂಗಮನಿಂದ ॥ ೭ ॥
ಇಡಿಸಿ ವಿಭೂತಿ ಲಿಂಗವ ಧಾರಣೆಗೈಸಿ । ನಂದೀಶಬಸವಣ್ಣ ಸಲಹೆ ॥
ಚೆನ್ನವೃಷೇಂದ್ರನು ಬಾಲಸಂಗಯ್ಯನು । ಸನ್ನುತದಿಂ ಸುಖಮಿರಲು ॥ ೮ ॥
ಇನ್ನು ಪ್ರಮಥರ ಸಂದೋಹದಿ ಸಂಗಣ್ಣ । ನನ್ನಿಯಿಂದಿರುತ ತಾನಾಗ ॥
ಪನ್ನಗಧರನ ಶಾಸ್ತ್ರಾಗಮ ತತ್ವವ । ಇನ್ನು ನೋಡುತ ಎಸೆದಿರಲು ॥ ೯ ॥

## ಕೊಂಡೆಮಂಚಣ್ಣನ ಲಿಂಗೈಕ್ಯ.

**ದ್ವಿಪದಿ.**

ಹರನಿರೂಪದಿ ಬಂದ ಧರೆಗೆ ನಾರದನು ।
ಧರಣಿಪತಿ ಬಿಜ್ಜಳಗೆ ಪರಮ ಆಪ್ತನವ ॥ ೧ ॥
ಬಸವಾದಿ ಪ್ರಮಥರ ಎಸೆವ ಮಹಿಮೆಯನು ।
ಹಸನಾಗಿ ಬಿಜ್ಜಳಗೆ ಎಲ್ಲ ಕಾಣಿಸಿದ ॥ ೨ ॥
ಗುಪ್ತಭಕ್ತಿಯು ಪ್ರಕಟವಾಗಲಾಕ್ಷಣಕೆ ।
ಮತ್ತೆ ನಮ್ಮೊಳು ಸಾರು ಎಂದು ಶಿವನೇಮ ॥ ೩ ॥
ಇಂತಿರಲು ಒಂದುದಿನದಿರುಳು ಶಿವಪೂಜೆ ।
ಸಂತಸದಿ ಮಾಡುತಿಹ ಸುಳುಹ ಬಸವಯ್ಯ ॥ ೪ ॥
ತಿಳಿದೆಲ್ಲಾ ಶರಣರು ತಾವು ಯೋಚಿಸಲು ।
ಬಳಿಕ ಮಂಚಿಯು ಪ್ರಾಣ ಪ್ರಮಥಪುರಿಗೈಯೆ ॥ ೫ ॥
ಇತ್ತಲಾ ಗೃಹದಲ್ಲಿ ಇರಲು ಶ್ರೀಕಾಂತೆ ।
ಪೃಥ್ವೀಶನಿಗೆ ಚಾಡಿ ಪೇಳಿದರು ಜನರು ॥ ೬ ॥
ಬಸವಯ್ಯ ತನ್ನ ಕುಲ ಜರಿವನೆಂತೆಂದು ।
ಹಿಸಿಕಿದನೈ ರಾತ್ರಿಯಲಿ ಮಂಚಿ ಮಡಿದಿಹನು ॥ ೭ ॥
ಎನಲು ಕೇಳುತಲಾಗ ಎಲ್ಲರೊಡಗೊಂಡು ।
ಕ್ಷಣದಿ ಬಂದುರೆ ಕಂಡು ಕೋಪವಂ ತಾಳಿ ॥ ೮ ॥
ಏನಯ್ಯ ಮಂತ್ರೀಶ ಇಂತು ಮಾಡುವರೆ ।
ನೀನು ಮಂಚಯ್ಯನಂ ಹಾನಿಗೈಯುವರೆ ॥ ೯ ॥

ಶರಣಜನಕೆಲ್ಲ ಗಣ । ಪರುವ ಮಾಡಿಸಿ ಬೇಗ ।
ಹರುಷದಲಿ ಕೈಲಾಸ । ಪುರಕೆ ಪೋಗುವರು ॥ ೧೫ ॥

ವಚನ ॥ ಇಂತೆಂದು ಬಸವಣ್ಣನವರು ಮುಂದಣ ಸೂಚನೆಯಂ ಪೇಳಿ ಮತ್ತೇನೆನ್ನುತಿರ್ದರು.

**ದ್ವಿಪದಿ.**

ಶ್ರೀ ಮಹಾದೇವನ ಶಿಖಿಯ ವಹಿಸಿಹರು ।
ಕಾಮವೈರಿಯ ಭಜಿಸಿ ಕರುಣ ಪಡೆದಿಹ[1] ರು[1] ॥ ೧ ॥

ಬನ್ನಿರೈ ಶರಣರು ಬಹುಪರಾಕ್ರಮರು
ಬನ್ನಿರೈ ಶರಣಾಗತ ರಕ್ಷಬಿರುದಕರು ॥ ೨ ॥

ಬನ್ನಿರೈ ಪರವಾದಿ ವಿಪಿನದಾವಗ್ನಿ ।
ಬನ್ನಿರೈ ಪರವಾದಿ ಗರ್ಭ ನಿರ್ಭೇದ ॥ ೩ ॥

ಕರಿಯ ಕುಂಭವ ಪಿಡಿದು ಇರಿದು ಕೆಡಹುವರು ।
ಗಿರಿಯ ಬೆರಳಿಂದೆತ್ತಿ ನೆರಳ ಪಿಡಿವವರು ॥ ೪ ॥

[2] ಮೊರೆವ ಮಾರಿಯ ಕೈಯ [2] ಕೆಲಸಗೊಂಬುವ[3] ರು[3] ।
ಉರವಣಿಪ ಕಾಲನ ಸರಕುಗೊಳದಿಹರು ॥ ೫ ॥

ಮಿಗೆ ಕಾಲಮೃತ್ಯುವ ಬಗೆಗೊಳ್ಳದಿಹರು ।
ಅಗಹರನ ಬಿರುದಿನ ಅಧಿಕ ಸಾಹಸರು ॥ ೬ ॥

ಬನ್ನಿರೈ ಮಡಿವಾಳಮಾಚಿದೇವಯ್ಯ ।
ಬನ್ನಿರೈ ಭವದೂರ ಕಿನ್ನರಯ್ಯಗಳೆ ॥ ೭ ॥

ಸುರಗಿಚೌಡಯ್ಯ ಶೂಲದಬೊಮ್ಮಿತಂದೆ ।
ಪರವಾದಿಗಳ ಗಂಡ ತಿಮಿರಮಾರ್ತಾಂಡ ॥ ೮ ॥

ಧುರಧೀರ ಜಗದೇವ ಮೊಲ್ಲೆ ಬೊಮ್ಮಯ್ಯ ।
ಇಂತಪ್ಪ ಶರಣರ ಎಲ್ಲರ ಕೈಗೆ ॥ ೯ ॥

ಚಿಂತಾರತ್ನವ ಕೊಳ್ಳಿ ಶಿವನ ಮೋಹನದ ।
ಪನ್ನಗಧರಸುತನ ಪ್ರಮಥನಾಯಕನ ॥ ೧೦ ॥

ಚೆನ್ನಬಸವೇಶ್ವರನ ಚೆಲುವ ಚೆನ್ನಿಗನ ।
ಇನ್ನು ನಿಮ್ಮಯ ಕರಕೆ ಇತ್ತೆನೀಕ್ಷಣ[4] ವೆ[4] ॥ ೧೧ ॥

---

1-1 ರೆ (ಬ, ಗ, ಚ, ಡ.) 2-2 ರಥುಮಾರಿಯ ಕರದು (ಎ, ಗ, ಚ.)
3-3 ರೆ (ಬ, ಗ, ಚ, ಡ.) 4-4 ಕೆ (ಬ, ಡ.)



ಶ್ರೀ ಬಸವೇಶ್ವರನು ಗಂಗಾಂಬಿಕೆಯುಟ್ಟಿರುವ ಸೀರೆಯನ್ನು ವಿಟಜಂಗಮನಿಗೆ ಕೊಡುವಿಕೆ

ದಿಟ್ಟಬಸವರಾಜ । ನರಸಿಗಂಗಾಂಬಿಕೆ ।
ಯುಟ್ಟ ಸೀರೆಯ ದಾದಿ । ಥಟ್ಟನೆಯೆ ಕಂಡು ॥ ೯ ॥

ನೋಡಿದಳ್ ಹರುಷವ । ಮಾಡಿದಳ್ ಮನೆತನಕ ।
ಓಡಿಬಂದೊಡತಿಯ । ಕೂಡೆ ಪೇಳಿದಳು ॥ ೧೦ ॥

ಅಕ್ಕ ಕೇಳ್ಬಸವಯ್ಯ । ನರಸಿ ಪುಟ್ಟಿಹ ಸೀರೆ ।
ದಿಕ್ಕಂ[1] ಟೆರೊಳು ಕಾಣೆ[1] । ತಕ್ಕದ್ದು ನಿನಗೆ ॥ ೧೧ ॥

ಹಣವೆಂಬುದಾಸೆಯೆ । ಎಣಿಕೆಯೆ ನಿನಗದು ।
ಹಣದಾಸೆ ಬೇಡ ರತ್ನ । ಮಣಿಯದ ತರಿಸು ॥ ೧೨ ॥

ಎಂಬ ಸಮಯಕೆ ವಿಟ । ಬಂದನು ಬಸವಯ್ಯ ।
ತುಂಬಿಕೊಟ್ಟನು ಹೊನ್ನ । ತೆಗೆದುಕೊ ಎಂದ । ॥ ೧೩ ॥

ಬೇಡ ನಿನ್ನಯ ಹೊನ್ನು । ಓಡು ಗಂಗಾಂಬಿಕೆ ।
ನೋಡು ಉಟ್ಟಿಹ ಸೀರೆ । ಗಾಢ ತಾರೆಂದಳ್ ॥ ೧೪ ॥

ವಚನ ॥ ಎಂದ ವೇಶಿಯ ಮಾತಿಗೆ, ಆ ಜಂಗಮಂ ತಿರುಗಿ ಆ ಹೊನ್ನಂ, ತೆಗೆದುಕೊಂಡು ಬಂದು ಬಸವಯ್ಯನಂ ಏನೆಂದು ಕೇಳುತಿರ್ದನು.

**ಅಟತಾಳ.**

ಕೇಳು ಬಸವೇಶ್ವರನೆ ಎನ್ನಯ । ಸೂಳೆಗೊಂದು ವಸ್ತ್ರವ ।
ಕೇಳುವೆನು ಕೊಡುತಿಹೆಯೊ ಇಲ್ಲವೊ – ಹೇಳು ಎಂದ ॥ ೧ ॥

ಒಡೆಯ ಬೇಡೆನ್ನೊಡಲನಾದರು । ತಡೆಯ[2] ದೀಗ[2] ಕೊಡುವೆನು ।
ಒಡೆಯಸಂಗಮನೊಡವೆ ನಿಮಗಾಂ – ಕೊಡುವೆನೆಂದ ॥ ೨ ॥

ಎಂದ ಬಸವನ ವಾಕ್ಯ ಕೇಳುತ । ಅಂದು ಆ ಜಂಗಮನು ನುಡಿದನು ।
ಇಂದು ನೀನಿತ್ತ ಹೊನ್ನ ತೆಗೆದುಕೊ– ಎನ್ನ ವೇಶ್ಯಳಿಗೆ ॥ ೩ ॥

ಪಟ್ಟದರಿಸಿ ಗಂಗಾಂಬೆಯಂಗದಿ । ಉಟ್ಟ ಸೀರೆಯನೀಕ್ಷಣ ।
ಕೊಟ್ಟುಬಿಡು ಕೇಳ್ ತೆಕ್ಕೊ ನೀ ಮುನ್ನ– ಕೊಟ್ಟ ಹೊನ್ನ ॥ ೪ ॥

ಕರೆಸಿದನು ಗಂಗಾಂಬೆಯನು ಸಭೆ । ವೆರಸಿದವರಾ ಮಧ್ಯದಿ ।
ಸರಸರನೆ ಬಿಚ್ಚೆಳೆದ ಸೀರೆಯ – ಹರುಷದಿಂದ ॥ ೫ ॥

ಪರಮಪತಿವ್ರತೆ ಉಟ್ಟ ಸೀರೆಯ । ಸೆರಗಪಿಡಿದು ಸೆಳೆಯಲು ।
ಇರುತಿಹುದು ಮೊದಲಂತೆ ಸೀರೆಯು – ಶರೀರದೊಳಗೆ ॥ ೬ ॥

---

1-1 ಟು ಬಾಗೋದು (ಅ, ಎ, ಟ, ಬ.) 2-2 ದಿನ್ನು (ಉ, ಎ, ಗ, ಚ.)

ಏನ ಹೇಳಲುಬಹುದು ಬಸವಭಿ। ಮಾನವಿಲ್ಲದೆ ಅಯ್ಯಗೆ।
ತಾನು ಸೀರೆಯ ಕೊಟ್ಟುದನು ಶಿವ – ತಾನೆ ಬಲ್ಲ ॥ ೭ ॥
ತಾನೆ ತನ್ನೊಳು ತಿಳಿದ ಶಿವ ಸು। ಜ್ಞಾನವುಳ್ಳಾ ಭಕ್ತಗೆ।
ನಾನು ನನ್ನದು ತನ್ನದೆಂಬಭಿ – ಮಾನವುಂಟೆ ॥ ೮ ॥

ವಚನ ॥ ಈ ರೀತಿಯಲ್ಲಿ ಬಸವರಾಜದೇವರು ವಿಟಗಾರ ಜಂಗಮಕ್ಕೆ ಅವರವರ ಮನದಿಚ್ಛೆಯಂ ನಡೆಸುತ್ತಿರಲು, ಆ ವೇಳೆಯಲ್ಲಿ ಮುಗ್ಧಸಂಗಯ್ಯನವರು ಏನೆನ್ನುತಿರ್ದರು.

## ಮುಗ್ಧಸಂಗಯ್ಯನ ಕಥೆ.

**ದ್ವಿಪದಿ.**

ಶೃಂಗಾರಮೂರ್ತಿ ಶಿವಕರುಣ ಪ್ರಸಾದಿ।
ಮಂಗಳಾತ್ಮಕ ಮಹಿಮ ಮುಗ್ಧಸಂಗಯ್ಯ ॥ ೧ ॥
ಲಿಂಗನಿಷ್ಠಾಪರನು ನಿಗಮಗೋಚರನು।
ಸಂಗಸುಖ ಸಕಲ ಭೋಗವನರಿಯದಿಹನು ॥ ೨ ॥
ಕಾಮ ಕ್ರೋಧವು ಲೋಭ ಮದ ಮತ್ಸರಗಳ।
ತಾಮಸವೊಂದಿಷ್ಟು ತಗುಲರಿಯದಿಹನು ॥ ೩ ॥
ಸ್ವಾಮಿಪರಶಿವನ ಸುಜ್ಞಾನಮಂ ಬಿಡದೆ।
ಆ ಮಹಾಪ್ರಣವವಾತ್ಮದಲಿ ಜಪಿಸುವನು ॥ ೪ ॥
ನಡೆ ನುಡಿವ ಉಡುವುಂಬ ಕೊಡುವ ಕೊಂಬೆಡೆಯ।
ಬಿಡದೆಲ್ಲ ಶಿವಗೆ ಬೇಕೆಂದು ಅರ್ಪಿಸುವ ॥ ೫ ॥
ಪ್ರತ್ಯಕ್ಷ ಪರಬ್ರಹ್ಮ ಪರಶಿವಮೂರ್ತಿ।
ಪೃಥ್ವಿ ಶರಣರೊಳೊಂದು ರತ್ನವಿದ್ದಂತೆ ॥ ೬ ॥
ಸತ್ಯಮೂರುತಿ ಮುಗ್ಧಸಂಗಯ್ಯನಾಗ।
ವಿಟಗಾರಜಂಗಮರು ವೇಶಿಯರ ಗೃಹದಿ † ॥ ೭ ॥
ಕೂಟಮಾಗಿಹುದರಿತು ಕಡು ಪ್ರೀತಿಯಿಂದ।
ನಾನು ಪೋಗುವೆನೆಂಬ ಕಡುತವಕಮೊಳಗೆ † ॥ ೮ ॥
ಮತ್ತೆ ಮನದೊಳು ಎಳಸಿ ಮಹಿಮಾತ್ಮನಾಗ।
ಅರ್ಥಿಯಿಂ ಬಸವನನು ಆಗ ಕೇಳಿದನು † ॥ ೯ ॥

† ಈ ಪದ್ಯಗಳು (ಅ, ಒ, ಖ, ಜ, ಢ, ಬ.) ಪ್ರತಿಗಳಲ್ಲಿಲ್ಲ.

**ತ್ಯಾಗಮಾನ - ಅಟತಾಳ.**

ಭಕ್ತಚಿಂತಾಮಣಿಯೆ ಕೇಳು ಬಸವ – ಯ್ಯ – ಎನ್ನ–
ಹತ್ತಿರಿರ್ಪ ಜಂಗಮರೆಲ್ಲ ಬಸವ – ಯ್ಯ ॥ ೧ ॥
ವೃತ್ತಕುಚದ ಸೂಳೆರ ಮನೆಗೆ ಬಸವ – ಯ್ಯ – ಅವರು–
ನಿತ್ಯ ಪ್ರೋಪ ಕಾರಣದಿಂದ ಬಸವ – ಯ್ಯ ॥ ೨ ॥
ನನಗೆ ನನಗೆ ಸೂಳೆಬೇಕು ಬಸವ – ಯ್ಯ – ಸೂಳೆ–
ಮನಗೆ ನಾನು ಹೋಗಬೇಕು ಬಸವ – ಯ್ಯ ॥ ೩ ॥
ನನಗೆ ನನಗೆ ದೊಡ್ಡಸೂಳೆ ಬಸವ – ಯ್ಯ – ತನ್ನ–
ಅನುವನರಿತು ನಡೆಸುವವಳು ಬಸವ – ಯ್ಯ ॥ ೪ ॥
ಈಗ ನೋಡಾ ಜಂಗಮರೆಲ್ಲ ಬಸವ – ಯ್ಯ – ಬೇಗ–
ಹೋಗುತಾರೆ ಸೂಳೆಯ ಮನೆಗೆ ಬಸವ – ಯ್ಯ ॥ ೫ ॥
ಹೋಗಬೇಕು [1] ಸೂಳೆಯ ಮನೆಗೆ [1] ಬಸವ – ಯ್ಯ – ನೀನು–
ಈಗ ಹೇಳು ಒಂದು ಮಾತ ಬಸವ – ಯ್ಯ ॥ ೬ ॥
ಸತ್ಯ ಶರಣ ನುಡಿದ ನುಡಿಗೆ ಬಸವ – ಯ್ಯ – ಕೇಳಿ–
ಒತ್ತರಿಸಿದ ಮುಗುಳು ನಗೆಯೋಳ್ ಬಸವ – ಯ್ಯ ॥ ೭ ॥
ಭಕ್ತಿಯುಳ್ಳ ಭಾಗ್ಯವತಿಯ ಗೃಹಕೀ – ಗ – ನಿಮ್ಮ–
ಚಿತ್ತಹರುಷಕೆ ಕಳುಹಿಕೊಡುವೆ ಎಲೆ ದೇ – ವ ॥ ೮ ॥
ನಗುತ ನಗುತ ಊಳಿಗರನ್ನು ಬಸವ – ಯ್ಯ – ಕರೆದು–
ಸೊಗಸಿನಿಂದ ನೇಮಿಸಿದನು ಬಸವ – ಯ್ಯ * ॥ ೯ ॥
ಭಕ್ತಿಯುಳ್ಳ ಭಾಗ್ಯವತಿಯ ಶರಣಂ – ಗೆ – ತೋರಿ–
ಇತ್ತು ಬನ್ನಿ ಎಂದು ಪೇಳ್ದ ಬಸವ – ಯ್ಯ ॥ ೧೦ ॥

ವಚನ ॥ ಇಂತಿ ಬಸವರಾಜನ ಅಪ್ಪಣೆಯಿಂದ, ಊಳಿಗದವರು ಮುಗ್ಧ ಸಂಗಯ್ಯಗಳ ಕರೆದೊಯ್ವ ಸೂಳೆಗೇರಿಯ ಶೃಂಗಾರವಂ ಪೇಳ್ವೆನದೆಂತೆನೆ.

**ಏಕತಾಳ.**

ಶೃಂಗಾರಮುಖದ ಸಿಂ । ಹದ ಮಧ್ಯ ನಡುವಿನ ।
ಅಂಗನಮಣಿಯರು । ಅರ್ಥಿಯಿಂದಿಹರು ॥ ೧ ॥
ಎಡಬಲ [2] ದುಪ್ಪರಿಕೆ [2] । ನಡುವೆ ನಾಟಕಶಾಲೆ ।
ಕಡುರಮ್ಯವಾಗಿ ಕಂ । ಗಳಿಗೆ ರಂಜಿಸಿತು ॥ ೨ ॥

---

1-1 ಅವರ ಕೂಡೆ (ಎ, ಗ, ಚ.) * ಈ ಪದ್ಯ (ಒ.) ಪ್ರತಿಯಲ್ಲಿ ಮಾತ್ರವಿದೆ.
2-2 ಸೌಧವು ( ಉ, ಗ, ಚ.)

ನೆತ್ತ ಪಗಡೆ ಜೂಜು । ಲೇಸುಗಾರರ ಕೂಡೆ ।
ಅರ್ಥಿಯಿಂ ವೇಶಿಯ । ರಾಡುತ್ತಲಿಹರು || ೩ ||
ಕುಂದಣದೆರಕದ । ಕುಶಲ ಮಂದಿರದೊಳು ।
ಚಂದ್ರಮುಖಿಯರ ಚೆ । ಲ್ಲಾಟ ವಿಟರೊಳು || ೪ ||
ಗಲ್ಲವನಲುಗಿ ಗಂ । ಧವಪೂಸಿ ಮೈಯೊಳು ।
ಮಲ್ಲಿಗೆಯ ಹೂವನ್ನು । ಮುಡಿಗೆ ಸುತ್ತಿಹರು || ೫ ||
ಅಕ್ಕರಿಂದಪ್ಪಿ ಮುಂ । ಡಾಡಿ ಮುದ್ದಿಸಿ ಕರ ।
ವಿಕ್ಕಿ ಕುಚವ ನಲಿ । ದಾಡುವ ವಿಟರು || ೬ ||
ತಾಳ ಮದ್ದಳೆ ವೀಣೆ । ತಂಬೂರಿ ಸಂಗೀತದ ।
ಆಳಾಪದರ್ಥಿಯ । ಆಟದೊಳಿಹರು || ೭ ||

**ಜಂಪೆ.**

ಪಗಡೆಯೊಂದೆಸೆಯು ಪಂ । ಥದ ಜೂಜು ಒಂದೆಸೆಯು ।
ಒಗುಮಿಗೆಯ ಚದುರಂಗ । ಒಂದೆಸೆಯದಾಯು || ೧ ||
ನೀ ಸೋತರೆಯು ಎನಗೆ । ಬೇಡಿದ ವಸ್ತುವನೀಯೆ ।
ನಾ ಸೋತರೆನ್ನಂಗ । ವನು ಸೂರೆಗೊಡುವೆ || ೨ ||
ಸುಸ್ಥಿರದ ಬಿಳಿಯೆಲೆಯು । ಅಡಿಕೆ ಕಡಲೆಯು ಬೆಲ್ಲ ।
ಕಸ್ತೂರಿಯು ಕನಕಭೂ । ಷಣವ ತಂದೀಯೊ || ೩ ||
ಮಲ್ಲಿಗೆಯು ಜಾಜಿ ಮೊ । ಲ್ಲೆಯು ಸುರಗಿ ಸಂಪಿಗೆಯು ।
ಚೆಲ್ವ ಕುಸುಮವ ತಂದು । ಸೇರೆನ್ನ ಬಳಿಗೆ || ೪ ||
ಇಷ್ಟು ತರದಲೆ ಎನ್ನ । ಅಂಗಳವ ಹೋಗಬೇಡ ।
ಶ್ರೇಷ್ಠನಾದರೆ ತಂದು । ಸೇರೆನ್ನ ಮನೆಯ || ೫ ||
ನವನಾಣ್ಯ ಜವಳಿ ನಾ । ಯಕರತ್ನ ಮಣಿಮುತ್ತಂ ।
ತವಕದಿಂ ತಂದು ಕೊ । ಟ್ಟರೆ ಎನ್ನ ವಿನಯು || ೬ ||
ಎಂದವರ ಇಚ್ಛೆಯ ಮಾ । ತುಗಳಾಡಿ ಕಡೆಯಲ್ಲಿ ।
ತಂದುದನು ಸೆಳೆಕೊಂಡು । ತಗುಳುವರು ಕಡೆಗೆ || ೭ ||

ವಚನ || ಮತ್ತುಮೆಂತೆನೆ

**ತ್ರಿವುಡೆ.**

ಮದನಕ್ಕೈ ಮಂದಿರದ ಬಾಗಿಲ । [1] ಹದಿಯ [1] ಕಿರುಜಗುಲಿಗಳ ಮೇಲತಿ ।
ಚದುರವೆಣ್ಗಳು ಕುಳಿತು ವಿಟರನು – ಮುದದಿ ನೋಡುವರು || ೧ ||

---

1-1 ಪುದಿದ (ಅ, ಉ, ಬ.)

ಕಡಗ ಝಣಝಣರೆನುತ ಕರದಲಿ । ಪಿಡಿದು ಬಿಳಿಯೆಲೆಯನ್ನು ಝಾಡಿಸಿ ।
ಮುಡುಪ ಬಾಯೊಳಗಿಟ್ಟು ವಿಟರನು – ಕೆಡಹುವರು ಬಲೆಗೆ || ೨ ||
ಮುಡಿಯಳಿದುವಿಂಗಡಿಸಿ ಬಾಚುತ । ಕೊಡಹಿ ಕಟ್ಟುತ ಕಮಲಮುಖಿಯರು ।
ಬಿಡದೆ ವಿಟರನು ಮದನಬಾಣದಿ – ಕೆಡಹಿ ಕಟ್ಟುವರು || ೩ ||
ಅಂಗಜನಕಳೆಗಧಿಕವೆನಿಸುವ । ಕಂಗಳಿನ ಕಡೆಗಣ್ಣ ನೋಟದಿ ।
ತುಂಗಕುಚ ತೊಡೆತೋರಿ ವಿಟರನು – ಭಂಗಗೊಳಿಸುವರು || ೪ ||
ನಾರಿಯರ ನಯನುಡಿಯ ಸೊಗಸಿಗೆ । ಬೀರುತಿಹ ಬಿಂಕದ ಸಘಾಟಕೆ ।
ಓರೆದುರುಬಿನ ಒಲಪು ಸೊಲಪಿಗೆ – ಯಾರು ಮನವಿಡರು || ೫ ||
ಗಿಳಿಗಳಿಗೆ ಮೃದುನುಡಿಯ ಕಲಿಸುತೆ । ನಳಿನಮುಖಿಯರು ಗೀತಪಾಡುತ ।
ಕಳಶಕುಚೆಯರು ಭರತನಾಟ್ಯವ – ಕಲಿಸುವರು ಕೆಲರು ‡ || ೬ ||
ತಮ್ಮ ಪೆಣ್ತನ ಬಿರುದು ಪೊಗಳುತ । ನಮ್ಮ ಬಲೆಗೊಳಗಾಗದವರಾರ್ ।
ಕಮ್ಮಗೋಲನು ಹರಿಯು ಅಜಸುರ – ರಿಮ್ಮಕಂಕುಳೊಳು ‡ || ೭ ||
ಆಡುತಲಿ ಉಯ್ಯಾಲೆಯೊಳು ಕೆಲ । ಪ್ರೌಢೆಯರು ತಾವಾಗ ಸೊಗಸಿನಿಂ ।
ಪಾಡುತಲಿ ವಿಟರನ್ನು ಒಲಿಸುವರ್ – ಗಾಡಿಕಾತಿಯರು ‡ || ೮ ||
ಈತೆರದ ಸೂಳೆಯರಿಗೆಲ್ಲವು । ನೂತನದ ಬಹುನುರಿತ ಹಿರಿಯಳು ।
ನಾಥೆವೃದ್ಧೆಯ ಸೊಗಸ ಪೇಳುವೆ – ನೀತರ್ ಲಾಲಿಪುದು ‡ || ೯ ||

**ಜಂಪೆ.**

ಎಲ್ಲ ಸೂಳೆಯರೊಳಗೆ । ಅಲ್ಲೊಬ್ಬ ಮುದಿಸೂಳೆ ।
ಉಲ್ಲಾಸದಿಂದೊಂದು । ಒಲಪು ಮಾಡಿದಳು || ೧ ||
ಹಲ್ಲುದುರಿ ಹಣೆಬರತು । ಗಲ್ಲವೆರಡವು ಸೊಕ್ಕಿ ।
ಅಲ್ಲಾಡು[1] ವಾ[1] ಮೊಲೆಗ । ಳವು ನಡುವ ಸೋಂಕೆ || ೨ ||
ತರಟುದಲೆ ಬಿರಿತಮ್ಮೆ । ಸೊರಟುಮೂಗಿನ ಜಾಣೆ ।
ನರತ ಕೂದಲಿಗಿದ್ದ । ಲೆಣ್ಣೆಯನು ಒರಸಿ || ೩ ||
ಅರೆದರಿಸಿನವ ತಂದು । ಒರಸಿ ಮೈ ಮುಖಕೆಲ್ಲ ।
ಬರಿಯ ಬಣ್ಣವ ಮಾಡಿ । ಮೆರೆದು ಮುದಿಸೂಳೆ || ೪ ||
ಎಣ್ಣೆ ಅರಸಿನವರೆದು । ಕಣ್ಣು ಕಪ್ಪನೆ ತಿದ್ದಿ ।
ಬಣ್ಣಿಸುತ ತಲೆಬಾಚಿ । ನುಣ್ಣಿಸಿದಳ್ತುರುಬ || ೫ ||
ಅರಿಸಿನಕೆ ಸುಣ್ಣವನು । ಬೆರಸಿ ಚಂದ್ರವಮಾಡಿ ।
ತರಟುದಲೆ ಬೈತಲೆಗೆ । ಒರಸಿ ಚಂದ್ರವನು || ೬ ||
ಹರಕು ಕುಪ್ಪಸದೊಳಗೆ । ಜೋಲುತಿಹ ಮೊಲೆಬಿಗಿದು ।
ಕರಿಯಮಣಿ ಕಲ್ಲಮಣಿ । ಸರವ ಹಾಕಿದಳು || ೭ ||

---

‡ ಈ ಪದ್ಯಗಳು (ಡ.) ಪ್ರತಿಯಲ್ಲಿ ಮಾತ್ರವಿವೆ. 1-1 ತಿಹ (ಒ, ಖ, ಗ, ಚ, ಟ.)

ಹರಿದು ಮೂಸಿದ ಸೀರೆ । ನೆರಿವಿಡಿದು ಸಿಂಗರಿಸಿ ।
ಭರದಿಂದ ಕನ್ನಡಿಯ । ತೆರೆದು ನೋಡಿದಳು ॥ ೮ ॥
ಧರೆಯ ಸೂಳೆಯರೊಳಗೆ । ಸರಿಯಿಲ್ಲವೆನಗಾರು ।
ಕರೆಕರೆದು ಜಾಣರನು । ನೆರೆಮೆಚ್ಚಿಸುವೆನು ॥ ೯ ॥
ಇರುಳು ಇರುಳಿಗೆ ಹೊನ್ನ । ತರಿಸದಿರ್ದಡೆ ನಾನು ।
ಸರಿಯಸೂಳೆಯರೊಳಗೆ । ಇರತಕ್ಕಳಲ್ಲ ॥ ೧೦ ॥
ನೆರೆಮನೆಯ ಸೂಳೆಯರು । ಹರಿದು ಹಾಕಿದ ಹೂವ ।
ಸರವ [1] ಆರಿಸಿ [1] ತಂದು । ತುರುಬಿಂಗೆ ಸುತ್ತಿ ॥ ೧೧ ॥
ಎಕ್ಕರಿಸಿ ಸೂಳೆಯರ । ಕೆಕ್ಕರಿಸಿ ನೋಡುತಲಿ ।
ಮಿಕ್ಕ ಸೂಳೆಯರೆನಗೆ । ಲೆಕ್ಕವೆ ಎನುತ ॥ ೧೨ ॥
ಎಡದ ಕೈಯಲಿ ಮುದುಡಿ । ಪಿಡಿದು ಜಾಳಿಲೆಯನ್ನು ।
ಕಡಿಯುತ್ತ ಗೋಟಡಕೆ । ನಡೆದು ಮುಸುಕಿಟ್ಟು ॥ ೧೩ ॥
ಒಡಲಕಿಚ್ಚಿಗೆ ತಕ್ಕ । ಅಡಕೆ ಎಲೆಯನು ತಿಂದು ।
ನಡುಪೇಟೆಯೊಳು ನಿಂದು । ಗಡಬಡಿಸು [2] ತಾಗ [2] ॥ ೧೪ ॥
ದಾರಿಯಲಿ ಹೋಗುವರ । ಆರಕರೆಯಲು ಅವರು ।
ಸಾರದೆ ಅತ್ತತ್ತ । ದೂರ ಹೋಗುವರು ॥ ೧೫ ॥
ಇಂತಪ್ಪ ಸೂಳೆಯರ । ಅಂತುವನು ಪೇಳುವರೆ ।
ಎಂತಾದರೆಯುಂಟು । **ಏನು ಅದರಿಂದ** ॥ ೧೬ ॥

ವಚನ ॥ ಇಂತು ಲೋಕದ ವೇಶಿಯರ ನಡವಳಿ ಸಹಜ, ಆದರೆ ಕಲ್ಯಾಣ ಪಟ್ಟಣದ ಶಿವಾಚಾರಸಂಪನ್ನೆಯರಾದಂಥ ಶರಣೆವೇಶ್ಯಾಂಗನೆಯರ ಪ್ರಸಂಗಮಂ ಪೇಳ್ವೆನದೆಂತೆನೆ.

**ಅಟತಾಳ**

ಊರಸೂಳೆಯರಂತೆ ಮಿಂಡರ । ಒಳಗುಮಾಡಿ ಕಡೆಯಲಿ ।
ತೀರ ಒಡವೆಯ ತಿಂದು ನೂಕುವ – ಮೇರೆಯಲ್ಲ ॥ ೧ ॥
ಬಣ್ಣಿಸುತ ಬಗೆಬಗೆಯ ವಿನಯದಿ । ಬದುಕನೆಲ್ಲ ಸೆಳೆವುತ ।
ಹುಣ್ಣುಹತ್ತಿಸಿ ಹೊರಗೆ ನೂಕುವ – ಹೆಣ್ಣಳಲ್ಲ ॥ ೨ ॥
ಬಂಡುಗಲೆ ಬಗುಳಾಟವಾಡುತ । ಮಿಂಡರೊಡನೆ ತಿರುಗುವ ।
ತುಂಡು ವೇಶ್ಯೆಯರ್ದುಡುಕು ಜಗಕತಿ – ಭಂಡೆರಲ್ಲ ॥ ೩ ॥
ಕಾಸುವೀಸದ ಆಸೆಗೋಸುಗ । ಘಾಸಿಮಾಡಿ ವಿಟರನು ।
ವಾಸಿಗೆಡಿಸುವ ಹೇಸಿವೆಣ್ಣಳ – ಲೇಸಿದಲ್ಲ ॥ ೪ ॥

---

1-1 ಬೇಗದಿ (ಅ, ಇ, ಉ, ಒ, ಗ, ಚ, ಜ, ಟ, ಡ, ಬ.)
2-2 ತಿಹಳು (ಇ, ಒ, ಖ, ಗ, ಚ, ಟ.)

ಹರಶರಣರೊಡನಾಟ ಈಶನ । ಸ್ಮರಣೆಯಲ್ಲದನ್ಯವ ।
ಬೆರಸಿ ಭೇದವಮಾಳ್ಪ ಹೆಣ್ಗಳ – ತೆರನದಲ್ಲ || ೫ ||
ಉದಯದಲಿ ಮಧ್ಯಾನ್ಹ ಸಂಜೆಯೊ । ಳ್ಮದನಹರನ ಪೂಜಿಸಿ ।
ಚದುರಜಂಗಮ ಸೇವೆಯೊಳ್ಮನ – ಹುದುಗಿಸಿಹರು || ೬ ||
ಮುದದಿ ಜಂಗಮಭಕ್ತಿಯಲಿ ಮೂ ವೇಳೆಯಲ್ಲಿ ಕೊಂಬರು ।
ಮದನಹರ ಜಂಗಮದ ತೀರ್ಥ ಪ್ರ – ಸಾದವನ್ನು || ೭ ||

**ತ್ರಿವುಡೆ.**

ಏನ ಹೇಳುವೆ ಶಿವನ ಭಕ್ತಿಯ । ಜ್ಞಾನಮಾರ್ಗದ ಸೂಳೆವೆಣ್ಗಳು ।
ಮಾನವರಿಗಳವಲ್ಲ ಭಕ್ತಿಯ – ತಾನೆ ಶಿವ ಬಲ್ಲ || ೧ ||
ಸುರರ ಎರೆಯನ ಹಿರಿಯ ಪಟ್ಟದ । ಕರಿಯ ತನ್ನರಮನೆಗೆ ತರಿಸಿದ
ಹರನ ಮೋಹದ ಭಕ್ತೆ [1] ಮು [1] ಕ್ತೆಯು – ಸೂಳೆ ಪದ್ಮಲೆಯು || ೨ ||
ಭಾಳಲೋಚನಪುರಿಯ ಬಾಗಿಲ । ಏಳುದಿನ ತೆರೆದಿರ್ದು ನಡೆಸಿದ ।
ಸೂಳೆ ನಿರ್ಮಲದೇವಿ ಶಿವನ ಸ – ದ್ಭಾವೆ ಸ್ಥಿರಜೀವಿ || ೩ ||
ಚೆನ್ನಜಂಗಮನೆಂದು ಬಿಜ್ಜಳ । ತನ್ನ ಬೆಸ್ತನ ಮನೆಗೆ ಕಳುಹಲು ।
ಪನ್ನಗಧರನ ರೂಪಮಾಡಿದ – ಸೂಳೆ ನಿಂಬಲೆಯು || ೪ ||
ಹೇಳಲಳವೆ ಹೆಸರಹುಗ್ಗಿಯ । ತಾಳಿಸಲಿಸಿಯೆ ಮಿಕ್ಕ ಶೇಷವ ।
ಭಾಳಲೋಚನಗರ್ಪಿಸಿದ ಚೋ – ಳಕ್ಕಮಹಾದೇವಿ || ೫ ||

**ಕಂದಪದ್ಯ.**

ಇಂತಪ್ಪ ಸೂಳೆಗೇರಿಯ ।
ಅಂತರವ ನೋಡುತ ಮುಗ್ಧಸಂಗಯ್ಯಂ ತಾಂ ||
ಸಂತಸದಿ ವಿಚಾರನಾರಿ ।
ಇಂತಿಹ ಸೂಳೆಯ ಮನೆಗಂ ಪೋದಂ ಬೇಗಂ || ೧ ||

ವಚನ || ಆ ವಿಚಾರನಾರಿಯ ಮನೆಯ ಶೃಂಗಾರಮಂ ಪೇಳ್ವೆನದೆಂತೆನೆ.

**ಜಂಪೆ.**

ಸಿರಿಯ ಅರಮನೆಯೊ ಶೃಂ । ಗಾರಮದನನ ಬೀಡೊ ।
ಸರಸಿಜಾರಿಯ ರುಚಿಯೊ । ಶಚಿಯ ಮಂದಿರವೊ || ೧ ||
ಚಂದನದ ಕಂಬ ಚದು । ರಿನ ತೊಲೆಯು ಬೋದಿಗೆಯು ।
ಕುಂದಣದ ಕೆಲಸದ । ಕುಶಲಮಂದಿರವು || ೨ ||
ಸುತ್ತ ಗಚ್ಚಿನಲೋವೆ । ಮುತ್ತಿನರಳೆಲೆಯದಕೆ ।
ಎತ್ತಿರ್ದ ಮದನಕೈ । ಅರ್ಥಿಯಿಂದಿಹುದು || ೩ ||

1-1 ಯು (ಇ, ಎ, ಒ, ಖ, ಗ, ಚ, ಟ.)

ಹೊಂಗೆಲಸದುಪ್ಪರಿಕೆ । ರಂಗುಬಾಗಿಲವಾಡ ।
ಶೃಂಗರದ ಚಂದ್ರಶಾಲೆ । ಚೆಲ್ವಬೀರುತಿರೆ ॥ ೪ ॥
ಅಂತಪ್ಪ ನಿಳಯದ । ಅಂತಸ್ತವನೆ ಪೊಕ್ಕು ।
ಕಂತುಹರ ಸಂಗಯ್ಯ । ಸಂತೋಷ ತಾಳ್ದ ॥ ೫ ॥

ವಚನ ॥ ಅಂಥಾ ಮನೆಯಲ್ಲಿ ಇರುವಂಥ ವಿಚಾರನಾರಿಯ ಶೃಂಗಾರ ವೆಂತೆನೆ.

**ದ್ವಿಪದಿ.**

ಶೃಂಗಾರ ಗುಣರನ್ನೆ ಶ್ರೀ ರುದ್ರಕನ್ನೆ ।
ಮಂಗಳಾತ್ಮಕಚೆನ್ನೆ ಮದನಮೋಹನ್ನೆ ॥ ೧ ॥
ಹೆಂಗಳ ಶಿರೋರನ್ನೆ ಹೆಚ್ಚು ಸಂಪನ್ನೆ ।
ಅಂಗಜನ ಅರಸಿಗಿಂತಧಿಕ ವಿಪ್ಪನ್ನೆ ॥ ೨ ॥
ತಳಿರಡಿಯದಳದ ತಾವರೆಮೊಗ್ಗುಸ್ತನ[1] ವು[1] ।
ಹೊಳೆವ ಹೊಂಬಣ್ಣ ಕಾಂತಿಯು ಕನಕಲತೆಯು ॥ ೩ ॥
ನಳಿತೋಳು ಸುಲಿಪಲ್ಲು ನಗೆಮುದ್ದುಮುಖದ ।
ಕಳೆಯಚಂದ್ರನ ಪೋಲ್ವ ಕಮಲಲೋಚನೆಯು ॥ ೪ ॥
ಅಳಿಯಕುಂತಳದ ಆರಡಿಪಿಕಸ್ವರದ ।
ಎಳೆಯಪ್ರಾಯದ ಸಿಂಹ ಎಸೆವ ಮಧ್ಯದಳ ॥ ೫ ॥
ಸೌಭಾಗ್ಯಲಕ್ಷ್ಮಿ ಸಂಪದದಿ ಒಪ್ಪುವಳ ।
ಶಿವಶರಣನಿಗೆ ತೋರಿ ಶೃಂಗಾರವತಿಗೆ ॥ ೬ ॥
ಒರೆದು ಎಲ್ಲವ ತೋರೆ ಒಪ್ಪಲಾನಾರಿ ।
ಭರದಿ ಪೋದರು ಬಸವನಿರುವ ಸುಸ್ಥಲಕೆ ॥ ೭ ॥

ವಚನ ॥ ಅತ್ತ ಬಸವೇಶ್ವರದೇವರು ಕಳುಹಿದಂಥ ಊಳಿಗದವರು ಪೋಗಿ ಬಸವಯ್ಯಂಗೆ ಸ್ವಾಮಿ ಬಿಟ್ಟು ಬಂದೆವೆನಲು ಕೇಳ್ದು ಸುಮ್ಮನಿರಲು, ಇತ್ತಲಾ ವೇಶ್ಯಾಂಗನೆ ಮುಗ್ಧಸಂಗಯ್ಯನವರ ಕರೆದೊಯ್ಯುತಿರ್ದಳದೆಂತೆನೆ.

**ಕಂದಪದ್ಯ.**

ಇಂದುಮುಖಿ[2] ಯಾಗ[2] ಹರುಷದಿ ।
ಬಂದು ಸಂಗಯ್ಯನಂಘ್ರಿಗೆ ವಂದಿಸುತಾಗಳ್ ॥
ಕುಂದಣ ಕಲಶೋದಕವಂ ।
ತಂದಂಘ್ರಿಯ ತೊಳೆದು ಪೊಗಿಸಿದಳ್ಕಂದಿರವಂ ॥ ೧ ॥

ವಚನ ॥ ಆ ಶರಣಂ ಒಳಪೊಕ್ಕು ನೋಡಲೆಂತಿರ್ದುದು.

---

1-1 ದ (ಇ, ಒ, ಖ, ಟ.) 2-2 ಯದ್ದು (ಇ, ಗ, ಚ, ಟ, ಡ, ಬ.)

**ಏಕತಾಳ – ಅರ್ಧರೇಕು.**

ಇಂದುಧರನ ದಿವ್ಯ – ಮಂದಿರದಂತೆ ।
ಕುಂದಣದೆರಕದ – ಕುಶಲಗೆಲಸದ ॥ ೧ ॥
ಗಂಧ ಕಸ್ತೂರಿ ಪುನಗಿ – ನಿಂದ ಸಾರಣೆಯು ।
ಚಂದ್ರಮಂಡಲದಂತೆ – ಚೆಲ್ವಿನಿಂದಿಹುದು ॥ ೨ ॥
ಮುಂದೆ ಒಂದಂತಸ್ತಿನ – ಮಂದಿರದೊಳಗೆ ।
ಕುಂದಮಲ್ಲಿಗೆ ಜಾಜಿ – ಗಂಧವಾಸನೆಯು ॥ ೩ ॥
ಚಂದದಿಂ ಮೇಲ್ಕಟ್ಟು – ಚೌಕ ಮಧ್ಯದಲಿ ।
ಸಿಂಧೂರ[1] ವರ್ಣ[1] ದ – ಸಿಂಹಗೆಲಸದ ॥ ೪ ॥
ಹೊಂದಿಸಿದ ನವರತ್ನ – ಹೊಳೆವ ಮಂಚದಲಿ ।
ತಂದು ಸುಲೇಪ ಸು – ಗಂಧಿ ಹಾಸಿದಳು ॥ ೫ ॥
ನಿಂದು ನೋಡಿದ ಮುಗ್ಧ – ಸಂಗಯ್ಯನಾಗ ।
ಬಂದು ಮಂಚದ ಮೇಲೆ – ಅಂದು ಕುಳ್ಳಿರ್ದ ॥ ೬ ॥
ಸಂದೇಹವಿಲ್ಲದೆ – ಸಕಲ ಮೇಲ್ಕಟ್ಟ ।
ಒಂದುಳಿಯದೆ ಎಲ್ಲ – ಅ[2] ಂದು[2] ಕೇಳಿದನು ॥ ೭ ॥
ಸಂದೇಹವಿಲ್ಲದೆ – ವಿಪುಲ ಹರುಷದಲಿ ।
ಚಂದ್ರಮುಖಿ ಪೇಳಿದ – ಳಂದದಕುತ್ತರವ ॥ ೮ ॥

ವಚನ ॥ ಮುಗ್ಧಸಂಗಯ್ಯನು ಮೇಲುಕಟ್ಟಿನ ತೋರಣವಂ ನೋಡಿ ಏನೆನ್ನುತಿರ್ದನು.

**ತ್ಯಾಗಮಾನ – ಅಟತಾಳ.**

ಮೇಲೆ ಮೇಲೆ ಸಾಲುಸಾಲು ಸೂಳ – ಕ್ಕ – ಸುತ್ತ—
ನೀಲ ಹಸುರು ಬಿಳಿದು ಕೆಂಪು ಸೂಳ – ಕ್ಕ ॥ ೧ ॥
ನೂಲು ಆಗಿ ನೂಲು ಅಲ್ಲ ಸೂಳ – ಕ್ಕ – ಇದರ—
ಮೂಲವೆನಗೆ ತಿಳಿಯ ಪೇಳು ಸೂಳ – ಕ್ಕ ॥ ೨ ॥
ಒಡೆಯ ಕೇಳು ದ್ವೀಪಾಂತರದಿ ಎಲೆ ದೇ – ವ – ಅಲ್ಲಿ—
ಹಡಗಿನೊಳಗೆ ಬರುತಲಿಹುದು ಎಲೆ ದೇ – ವ ॥ ೩ ॥
ಮಡದಿರ್ವಿಡಿದು ನೂತದ್ದಲ್ಲ ಎಲೆ ದೇ – ವ – ಅದು—
ಗಡಿನಾಡಿನ ಪಟ್ಟೆಯ ನೂಲು ಎಲೆ ದೇ – ವ ॥ ೪ ॥
ಕಣಕು ಮಿಣುಕು ಸುತ್ತಮುತ್ತ ಸೂಳಕ್ಕ – ನೋಡು—
ಮಿಣುಕು ಮಿಣುಕು ಎನ್ನುತೈತೆ ಸೂಳ – ಕ್ಕ ॥ ೫ ॥

---

1-1 ದಂತ (ಅ, ಜ, ಟ, ಬ.) 2-2ನ್ನು (ಇ, ಒ, ಖ, ಗ, ಚ, ಟ, ಡ.)

ಎಣಿಕೆಯಿಲ್ಲ ಏಸು ನೋಡೆ ಸೂಳ – ಕ್ಕ – ಪೇಳು—
ಅಣಕಬೇಡ ಎನ್ನ ಕೂಡೆ ಸೂಳ – ಕ್ಕ ॥ ೬ ॥
ಸತ್ಯಶರಣ[1] ನುಡಿದ ನುಡಿಗೆ[1] ಎಲೆ ದೇ – ವ – ಧರೆಗೆ—
ಅತ್ಯಧಿಕ ಹೇಮಾದ್ರಿ ಗಿರಿಯು ಎಲೆ ದೇ – ವ ॥ ೭ ॥
ಅತ್ತ ಹೇಮಗಿರಿಯ ಒಳಗೆ ಎಲೆ ದೇ – ವ – ಇರ್ದ—
ರತ್ನ[2] ವೆಂಬ[2] ತೋರಣಂಗಳೆಲೆ ದೇ – ವ ॥ ೮ ॥
ಕೂದಲಿನ ಗೊಂಡೆಯುಂಟು ಎಲೆ ನಾ – ರಿ – ಇದರ—
ಭೇದವೆನಗೆ ತಿಳಿಯಪೇಳು ಎಲೆ ನಾ – ರಿ ॥ ೯ ॥
ಕೂದಲಲ್ಲ ದ್ವೀಪಾಂತರದಿ ಎಲೆ ದೇ – ವ – ಅತ್ತ—
ಲಾದ[3] ಚಮರಿ[3] ಮೃಗದ ಝುಲ್ಲಿ ಎಲೆ ದೇ – ವ ॥ ೧೦ ॥
ವಿವರಿಸುತ್ತ ಸಕಲವನ್ನು ಸಂಗ – ಯ್ಯ – ಅಲ್ಲಿ—
ಶಿವನಪೂಜೆ ಜಗುಲಿಯ ಕಂಡ ಸಂಗ – ಯ್ಯ ॥ ೧೧ ॥
ಶಿವನಪೂಜೆಗೆ ಪತ್ರೆ ಪುಷ್ಪ ಸಂಗ – ಯ್ಯ – ಅಲ್ಲಿ—
ಹವಣಿಸಿರ್ಪುಪಕರಣವ ಕಂಡ ಸಂಗ – ಯ್ಯ ॥ ೧೨ ॥
ಶೃಂಗಾರ ವೇದಿಕೆ ಸಾರಣೆಯು ಸಂಗ – ಯ್ಯ – ಅಲ್ಲಿ—
ರಂಗೋಲೆ ತುಂಬಿರಲು ಕಂಡ ಸಂಗ – ಯ್ಯ ॥ ೧೩ ॥
ಕಂಗಳಿಗೆ ಮಂಗಳ[4] ವು ಬೀರೆ[4] ಸಂಗ – ಯ್ಯ – ಅಲ್ಲಿ—
ಲಿಂಗಪೂಜೆಗೆ ಮನವನಿಟ್ಟ ಸಂಗ – ಯ್ಯ ॥ ೧೪ ॥
ಪಟ್ಟುಪಟ್ಟಾವಳಿಗಳಿರ್ದ ಸಂಗ – ಯ್ಯ – ಮೇಲು—
ಕಟ್ಟುಗಳ ವಿಸ್ತರಿಸಿ ಕೇಳ್ದ ಸಂಗ – ಯ್ಯ ॥ ೧೫ ॥
ಸೃಷ್ಟಿಗೀಶ ಶಿವನ ಪೂಜೆ ಸಂಗ – ಯ್ಯ – ಇಲ್ಲಿ—
ಗಟ್ಯಾಗಿ ಮಾಡಲು ಬೇಕೆಂದ ಸಂಗ – ಯ್ಯ ॥ ೧೬ ॥
ರುದ್ರಾಕ್ಷಿಮಂಟಪವ ಕಂಡ ಸಂಗ – ಯ್ಯ – ಅಲ್ಲಿಂ—
ದೆದ್ದನು ಶಿವಪೂಜೆಯ ಸ್ಥಲಕೆ ಸಂಗ – ಯ್ಯ ॥ ೧೭ ॥
[5] ರುದ್ರನರ್ಚನೆಯನ್ನು ಮಾಡೆ ಸಂಗ – ಯ್ಯ – ಚೆಲ್ವ[5]—
ಗದ್ದುಗೆಯ ಮೇಲ್ಮುಳಿತನಾಗ ಸಂಗ – ಯ್ಯ ॥ ೧೮ ॥

ವಚನ॥ ಇಂತು ಮುಗ್ಧಸಂಗಯ್ಯನವರು ಗದ್ದುಗೆಯ ಮೇಲೆ ಮೂರ್ತಗೊಂಡುದಂ ನೋಡಿ, ಆ ವಿಚಾರನಾರಿಯೆಂಬ ವೇಶ್ಯಾಂಗನೆ ಆ ಮಹಾತ್ಮನ ಶಿವಪೂಜೆಗೆ ಎಡೆಮಾಡುತಿರ್ದಳದೆಂತೆನೆ.

---

1-1 ಕೇಳಿವಾರೆ (ಅ, ಇ, ಒ, ಖ, ಗ, ಚ, ಜ, ಟ, ಡ, ಬ,) 2-2 ಮಯದ (ಉ, ಗ, ಚ.) 3-3 ಂತಾದ್ದು (ಅ, ಜ, ಡ, ಬ.) 4-4 ವಾಗಿರೆ (ಅ, ಉ, ಚ, ಜ, ಡ, ಬ.) 5-5 ಸೃಷ್ಟಿಗಧಿಕ ಶಿವನಸ್ಥಲವು – ಸಂಗಯ್ಯ – ಶಿವಪೂಜೆ— (ಅ, ಬ.)

## ತ್ರಿವುಡೆ.

ಇಂದುಮುಖಿ ಸಂಗಯ್ಯನಿಷ್ಟ | ಲಿಂಗದಭಿಷೇಕಕ್ಕೆ ಹೊನ್ನಿನ |
ಬಿಂದಿಗೆಯಲಿ ತುಂಬಿ ಇಳುಹಿದ – ಳ್ಗಂಧವಾರಿಯನು || ೧ ||
ವೇದಗೋಚರ ಶಿವನ ಮಜ್ಜನ | ಕಾದಿಕಾಲದಿಮಯನ ನಿರ್ಮಿತ |
ವಾದ ಪಾಸಾಲೆ ಇಳುಹಿದಳ್ಪಿಂ – ಬಾಧರೆಯು ಬೇಗ || ೨ ||
ಸರ್ಪಭೂಷಣ ಶಿವನಪೂಜೆಗೆ | ಒಪ್ಪುತಿಹ ಸಕಲಾದಿ ಪುಷ್ಪದ |
ಪುಷ್ಪಕರಡಿಗೆ ತಂದು ಇಳುಹಿದ – ಳ್ಪುಷ್ಪಗಂಧಿ || ೩ ||
ಸತ್ಯಗುರು ಸಂಗಯ್ಯ ಧರಿಸಲು | ತತ್ವಮಯದ ಮಹಪ್ರಕಾಶದ |
ಚಿತ್ತುವೆನಿಸುವ ಭಸಿತವನು ಕಂಜ – ನೇತ್ರೆ ಇರಿಸಿದಳು || ೪ ||
ಚಂದನಗಿಲು ಕಸ್ತೂರಿ ಕುಂಕುಮ | ಇಂದೀವರ ಗೋರೋಚನ ಗೋಮಯ |
ವಷ್ಟಗಂಧದ ಬಟ್ಟಲನು ಮಿಗೆ – ಚಂದ್ರಮುಖಿ ಇಳುಹೆ || ೫ ||
ಅಕ್ಷಯನು ಅಗಣಿತನು ಅಘಹರ | ದಕ್ಷಯಜ್ಞವಿನಾಶನಿಗೆ ನಿಜ |
ಮೋಕ್ಷಕಾಮಿನಿ ಇಳುಹಿದಳು ತಿ – ಲಾಕ್ಷತೆಯನೊಲಿದು || ೬ ||
ಸಜ್ಜರಸ ಸಾಂಬ್ರಾಣಿ ಗುಗ್ಗುಳ | ಅಚ್ಚನಗಿಲು ಸುಗಂಧ ಧೂಪವ |
ಅಬ್ಜಲೋಚನೆಯಧಿಕ ದೀಪಾ – ರತಿಯನಿಳುಹಿದಳು || ೭ ||
ಧಾರಿಣಿಯ ನರ ಸುರರ ಅಸುರರ | ಸಾರಹೃದಯರ ಸಕಲಪಾಪವ |
ಓರೆನೂಕುವ ವಸ್ತು ರತ್ನದಾ – ರತಿಯನಿಳುಹಿದಳು || ೮ ||
ಹಲಸು[1] ಕಿತ್ತಳೆಫಲವು[1] ಪಲಬಗೆ | ಚೆಲುವಕಬ್ಬಿನ ಕಡಲೆಬೇಳೆಯ |
ಲಲಿತ ಶರ್ಕರ ಪೆಸರಬೇಳೆಯ – ನೊಲಿದು ಇಳುಹಿದಳು || ೯ ||
ದೇವದೇವರಿಗ್ಯೋಗ್ಯ ಸಕಲ ರಾ | ಜೀವಮುಖಿ ಸಿರಿರಾಜ ಪೂಜಿತ |
ದೇವರಿಗೆ ತಾಂಬೂಲವಿಳುಹಿದ – ಳ್ಭಾವೆ ಹರುಷದಲಿ || ೧೦ ||
ಘಂಟೆ ದರ್ಪಣ ಘನಮಹಿಮ ಶಿವ | ಘಂಟೆರಡು ಪೂಜೋಪಚಾರವ |
ಉಂಟುಮಾಡುತ ಭಕ್ತಿಯಲಿ ಕಲ – ಕಂಠಿ ಕೈಮುಗಿದು || ೧೧ ||
ಜಾಗಟೆಯು ಪಂಚ ಘಂಟೆ ಸಮ್ಮೇಳ | ತೂಗಿನುಡಿಸುವ ತಾಳಗೀತವು |
ಲಾಗು ಎನಿಸುವ ಛತ್ರಿ ಚಾಮರ – ಲೋಲೆ ಇರಿಸಿದಳು * || ೧೨ ||
ಬಿಂದಿಗೆಯು ಪಾಸಾಲೆ ಭಸಿತವು | ಗಂಧ ಅಕ್ಷತೆ ಧೂಪ ದೀಪವು |
ತಂದುಮಡಗಿವೆ ಚಂದ್ರಮೌಳಿಯು – ಭಜಿಸು ನಮ್ಮಯ್ಯ || ೧೩ ||
ಕರ್ಪುರವು ಕಡ್ಡಿಬತ್ತಿ ಪಂಚಾರತಿ | ತ್ರಿಯಾರ್ತಿ ಏಕಾರ್ತಿ ಸಹಸ್ರಾರ್ತಿ |
ಸರ್ಪಭೂಷಣಗೆ ಕುಂಭಾರ್ತಿ ವಿನಿಯೋಗ – ಸಲಿಸು ನಮ್ಮಯ್ಯ * || ೧೪ ||

---

1-1 ಕದಳಿಯ ಹಣ್ಣು (ಉ, ಖ, ಗ, ಚ.) * ಈ ಪದ್ಯಗಳು (ಜ, ಡ.) ಪ್ರತಿಗಳಲ್ಲಿ ಮಾತ್ರವಿವೆ.

ಮರುಗ ಮಲ್ಲಿಗೆ ಜಾಜಿ ಸಂಪಿಗೆ । ಸುರಗಿ ಸುರಹೊನ್ನೆ ಬಕುಳ ಪಾದರಿ ।
ಇರುವಂತಿಯು ಸೇವಂತಿಪುಷ್ಪವ – ಧರಿಸು ನಮ್ಮಯ್ಯ ॥ ೧೫ ॥

ಎಂದು ಕರಗಳ ಮುಗಿಯೆ ಹರುಷಾ । ನಂದದಲಿ ಸಂಗಯ್ಯ[1] ನಾಗಳು[1] ।
ಇಂದುಧರ[2] ನನು ಭಜಿಸುವೆನು ಹಾ – ಗೆಂದು ಅನುವಾಗಿ[2] ॥ ೧೬ ॥

ನಾರಿ ಬಾ[3] ರೆ[3] ಎನ್ನ ಹತ್ತಿರ । ಸೇರಿ ಶಿವಪೂಜೋಪಕರಣವ ।
ತೋರು ಕುಳಿತುಕೊ ಎನುತ ಕರೆದ – ವಿಚಾರನಾರಿಯನು ॥ ೧೭ ॥

ವಚನ ॥ ಆ ವೇಶ್ಯಾಂಗನೆಯಂ ಹತ್ತಿರ ಕುಳ್ಳಿರಿಸಿಕೊಂಡು, ಸಂಗಯ್ಯನವರು ಶಿವಪೂಜೆಗನುವಾದರದೆಂತೆನೆ.

**ಅಟತಾಳ.**

ಪದ್ಮದಾಸನ ಬಲಿದು ಪರಶಿವ । ರುದ್ರನೇ ತಾನೆಂಬ ಬಗೆಯಲಿ ।
ಮುಗ್ಧಸಂಗಯ್ಯಗಳು ಮೂರ್ತವ – ಮಾಡಿ[4] ಅರ್ಥಿಯ[4] ಲಿ ॥ ೧ ॥

ಮೃಡನರೂಪನು ಮುಗ್ಧಸಂಗಯ್ಯ । ಜಡೆಯ ಬಿಚ್ಚಿ ಸುತ್ತುತ ।
ಮಡದಿ ಏತಕೆ ನಿನ್ನ ಜಡೆಯನು – ಸುತ್ತಲೊಲ್ಲೆ ॥ ೨ ॥

ಒಡೆಯ ನಮಗೀ ಜಡೆಯ ಸುತ್ತುವ । ಗೊಡವೆಯಿಲ್ಲ ಬೆನ್ನಲಿ ।
ಜಡಿಯುತಿದೆ ನೋಡೆಂದು ಹೆಣೆದಿಹ – ಜಡೆಯ ತೋರೆ ॥ ೩ ॥

ಅಸಮಲೋಚನ ಶರಣ ಕೇಳ್ದನು । ಭಸಿತವನ್ನು ಧರಿಸುತ ।
ಭಸಿತವೇತಕೆ ಧರಿಸ[5] ದಿಹೆನೀ[5] – ಕುಸುಮಗಂಧೀ ॥ ೪ ॥

ಹರನಮೋಹದ ನಾರಿ ಧರಿಸುವ । ಪರಮ ಭಸಿತವು ನಮ್ಮದು ।
ಧರಿಸಿರುವೆ ನೋಡೆಂದು ತೋರಿ[6] ದ[6] – ಧರಿಸಿನವನು ॥ ೫ ॥

ಕೊರಳ್ಗೆ ರುದ್ರಾಕ್ಷಿಗಳ ಧರಿಸುತ । ಶರಣನಾಗ ಕೇಳಿದ ।
ತರಳೆ ಏಕೆ ರುದ್ರಾಕ್ಷಿಸರವನು – ಧರಿಸಲೊಲ್ಲೆ ॥ ೬ ॥

ಸತ್ಯಶರಣನೆ ಕೇಳು ಸಾಗರ । ದತ್ತಲಿಹ ರುದ್ರಾಕ್ಷಿಸರವಿವು ।
ಮತ್ತೆ ನೋಡೆಂದೆತ್ತಿ ತೋರಿದ – ಳ್ಮುಕ್ತಹಾರವನು ॥ ೭ ॥

ಕರದಿ ರುದ್ರಾಕ್ಷಿಗಳ ಕಂಕಣ । ಧರಿಸಿಕೊಳುತ ನುಡಿದನು ।
ತರುಣಿ ಏತಕೆ ರುದ್ರಕಂಕಣ – ಧರಿಸಲೊಲ್ಲೆ ॥ ೮ ॥

1-1 ಗೆರಗುತ (ಇ, ಒ, ಖ.) 2-2 ಪೂಜೆಯನು ಗೈವರೆ – ಶರಣೆಂದವಳಾಗ (ಇ, ಒ, ಖ.) 3-3 ಬಾ (ಒ, ಗ, ಚ.) 4-4 ಹರುಷದ (ಇ, ಖ, ಗ, ಚ.) 5-5 ಬೊಲ್ಲೆಯು (ಇ, ಉ, ಖ, ಗ.) 6-6 ಸೆ (ಅ, ಬ.)

ಗಿರಿಜದೇವಿಯು ಹರನ ಅರಸಿಯು । ಧರಿಸಿಕೊಂಡಿಹ ಕರದಕಂಕಣ ।
ಧರಿಸಿರುವೆ ನೋಡೆಂದು ತೋರಿದ – ಳ್ಕರದ ಕೈಮಣಿಯ ॥ ೯ ॥

ಶರಣ ಕಾಷಾಯಾಂಬರವ ತಾ । ಧರಿಸಿಕೊಳುತ ನುಡಿದನು ।
ಕರಚೆಲುವೆ ನೀ ಕಾವಿವಸ್ತ್ರವಂ – ಧರಿಸಲೊಲ್ಲೆ ॥ ೧೦ ॥

ಗಿರಿಜದೇವಿಯು ಧರಿಸಿಕೊಂಡಿಹ । ಪರಮಕಾವೀ ವಸ್ತ್ರವ ।
ಧರಿಸಿಕೊಂಡಿಹೆನೆಂದು ತೋರ್ದಳ್ಪೀ – ತಾಂಬರವನು ॥ ೧೧ ॥

ವಚನ ॥ ಆ ಸಮಯದಲ್ಲಿ ಈಶ್ವರನು ಮುಗ್ಧಸಂಗಯ್ಯನ ನೋಡುವರೆ, ಸಕಲ ಪ್ರಮಥರೊಂದಿಗೆ ವೇಶ್ಯಾಂಗನೆಯಾದಂಥ ವಿಚಾರನಾರಿಯ ಮನೆಗೆ ಬಂದನದೆಂತೆನೆ.

**ದ್ವಿಪದಿ.**

ಶ್ರೀಮನ್ಮಹಾದೇವ ಶಿವಶರಣ ಸಂಜೀವ ।
ಭಾವಭರಿತೋದ್ದೇವ ಭಕ್ತಸಂಜೀವ ॥ ೧ ॥
ಭಕ್ತರ ಮನೋಲ್ಲಾಸ ಭಕ್ತಿವಿಲಾಸ ।
ಭಕ್ತರಾ ಮನಃಪ್ರಾಣ ಭಕ್ತಸುತ್ರಾಣ ॥ ೨ ॥
ಭಕ್ತವತ್ಸಲ ಈಶ ಭಕ್ತ ಮಾಹೇಶ ।
ಮತ್ತೆ ಕೈಲಾಸದಿಂ ಮರ್ತ್ಯಕ್ಕೆ ಇಳಿದು ॥ ೩ ॥
ಸತ್ಯಶರಣಾ ಮುಗ್ಧಸಂಗಯ್ಯನವರಂ ।
ಮತ್ತೆ ವೇಶ್ಯಾಂಗನೆಯ ಅರ್ಥಿಯಿಂ ನೋಡೆ ॥ ೪ ॥
ಅತ್ಯಂತ ಹರುಷದಿಂದತಿವೇಗ ಶಿವನು ।
ಪ್ರತ್ಯಕ್ಷ ಸಕಲ ಪ್ರಮಥರ ಸಂದಣಿಯಲಿ ॥ ೫ ॥
ನಂದೀಶ ನಾರದಾದ್ಯಖಿಳ ಸುರದೇವ ।
ದುಂದುಭಿಧ್ವನಿ ಮೊಳಗೆ ದೃಷ್ಟಮೂರುತಿಯು ॥ ೬ ॥
ಭೃಂಗೀಶ ಭುಜಬಲವೀರ ವಿಘ್ನೇಶ ।
ಸ್ಕಂದ ಕಮಲಾಕ್ಷ ಕಮಲಾಸನರು ಮುಖ್ಯ ॥ ೭ ॥
ಅಷ್ಟದಿಕ್ಪಾಲಕರು ಅಪ್ಸರಾಂಗನೆಯರ್ ।
ಶ್ರೇಷ್ಠ ಮನುಮುನಿಮುಖ್ಯ ಋಷಿಗಳೂ ಸಹಿತ ॥ ೮ ॥
ಸಿದ್ಧಸಾಧ್ಯರು ಯಕ್ಷ ರಕ್ಷ ಖೇಚರರು ।
ಮುಗ್ಧಸಂಗಯ್ಯನಾ ಮುಕ್ತಿಯಾ ಸ್ಥಲಕೆ ॥ ೯ ॥
ಕಿನ್ನರ ಕಿಂಪುರುಷ ಗರುಡ ಗಂಧರ್ವ ।
ರುನ್ನತಾ ದೇವಸಭೆ ಉತ್ಸಾಹದಿಂದ ॥ ೧೦ ॥

ಪನ್ನಗಧರ ಬಂದು ಪರಮಭಕ್ತನೊಳು ।
ಚೆನ್ನಾಗಿ ಲಿಂಗದೊಳು ತ [1] ಲ್ಲೀನವಾ [1] ದ ॥ ೧೧ ॥

ವಚನ ॥ ಆ ವೇಳೆಯಲ್ಲಿ ಮುದ್ಧಸಂಗಯ್ಯನವರು ವೇಶ್ಯೆಯಂ ಕರೆದು ಏನೆನ್ನುತಿರ್ದರು.

**ತ್ಯಾಗಮಾನ – ಅಟತಾಳ.**

ತಾರೆ [2] ವಾರಿ [2] ತಡವು ಬೇಡ ಎಲೆ ನಾ – ರಿ – ನಾನು—
ಮಾರಹರನ ಭಜಿಸಬೇಕು ಎಲೆ ನಾ – ರಿ ॥ ೧ ॥
ಸಾರಹೃದಯ ಸತ್ಯರೂಪ ಸಂಗ – ಯ್ಯ – ನುಡಿಯೆ—
ನಾರಿ ಉತ್ತರ ಕೊಡುತಲಿರ್ದಳ್ ಸಂಗೈ – ಯ್ಗೆ ॥ ೨ ॥
ಹಾಲು ತುಪ್ಪ ಹತ್ತಿರವಿದೆಕೊ ಎಲೆ ದೇ – ವ – ಅದರ–
ಮೇಲೆ ಮೊಸರು ಸಕ್ಕರ ಜೇನು ಎಲೆ ದೇ – ವ ॥ ೩ ॥
ಕಾಲಸಂಹರ ಕರ್ಮದೂರ ಎಲೆ ದೇ – ವ – ಶಿವನ—
ಮೇಲೆ ಪಂಚಾಮೃತವ ನೀಡು ಎಲೆ ದೇ – ವ ॥ ೪ ॥
ಚಂಚಲಾಕ್ಷಿಯ ಮಾತ ಕೇಳಿ ಸಂಗ – ಯ್ಯ – ಶಿವಗೆ—
ಪಂಚಾಭಿಷೇಕವ ಮಾಡಿದನು ಸಂಗ – ಯ್ಯ ॥ ೫ ॥
ಪಂಚಾಭಿಷೇಕವಾಯಿತು ಎಲೆ ನಾ – ರಿ – ನಾನು—
ಮುಂಚೇನು ಪೂಜೆಯಮಾಡಲೆಲೆ ನಾ – ರಿ ॥ ೬ ॥
ಪನ್ನೀರು ಪರಿಮಳೋದಕವ ಎಲೆ ದೇ – ವ – ಲಿಂಗಕೆ—
ಚೆನ್ನಾಗಿ ಮಜ್ಜನವ ನೀಡಿರಲೆ ದೇ – ವ ॥ ೭ ॥
ಉನ್ನತದ ಶ್ರೀ ವಿಭೂತಿಯನು [3] ಎಲೆ ದೇ – ವ [3] – ಮೋಕ್ಷ—
ಕನ್ನೆಯಪತಿನೊಸಲಿಗೆ ಧರಿಸಿ [4] ರಲೆ ದೇ – ವ [4] ॥ ೮ ॥
ಇಂದುಧರನಿಗೆ ಭೂತಿಸ್ನಾನ ಎಲೆ ನಾ – ರಿ – ಬಹಳ—
ಚಂದವಾಯಿತು ಮುಂದಕ್ಕೇನು ಎಲೆ ನಾ – ರಿ ॥ ೯ ॥
ಚಂದನಗಿಲು ಬೆರೆದಚೊಕ್ಕ ಎಲೆ ದೇ – ವ – ಶ್ರೀ—
ಗಂಧವನ್ನು ಲಿಂಗಕ್ಕೆ ಧರಿಸಿರಲೆ ದೇ – ವ ॥ ೧೦ ॥
ಎಂದು ಇಲ್ಲ ಇಂಥವಸ್ತು ಎಲೆ ನಾ – ರಿ – ಗಂಧ—
ಮಂದಿರವ ಹೊತ್ತಿಸುವುತೈತೆ ಎಲೆ ನಾ – ರಿ ॥ ೧೧ ॥
ಇಂದುಧರನಿಗೆ ಯೋಗ್ಯವಾಯಿತೆಲೆ ನಾ – ರಿ – ಇನ್ನು—
ಮುಂದಕ್ಕೇನು ತಂದು ತೋರಿ ಎಲೆ ನಾ – ರಿ ॥ ೧೨ ॥

---

1-1 ನ್ಮಯನಾ (ಇ, ಒ, ಖ, ಗ, ಚ, ಜ.) 2-2 ಬಾರೆ (ಇ, ಎ, ಖ, ಗ, ಚ, ಟ.) 3-3 ಸಂಗಯ್ಯ (ಅ, ಉ, ಜ, ಟ, ಬ.) 4-4 ಸಂಗಯ್ಯ(ಬ.)

**ಜಂಪೆ.**

ಯಕ್ಷ ರಾಕ್ಷಸರಿಗ । ಧ್ಯಕ್ಷ ಪ್ರಮಥರ ಮನದ ।
ಮೋಕ್ಷದೊಡೆಯನಿಗೆ ಗಂ । ಧಾಕ್ಷತೆಯ ಧರಿಸಿ ॥ ೧ ॥
ಅಕ್ಷಯನು ಅಗಣಿತನು । ಅಮರಪತಿ ಹರಿಯಜರ ।
ರಕ್ಷಿಸುವ ಶಿವಗೆ ತಿ । ಲಾಕ್ಷತೆಯ ಧರಿಸಿ ॥ ೨ ॥
ಇಂದುಧರನಿಗೆ ಚೆಲ್ವ । ಗಂಧ ಅಕ್ಷತೆ [1] ಯಾಯ್ತು [1]
ಮುಂದೇನು [2] ಕೊಡು [2] ವೆಯೋ । ನೀ ತಂದುಕೊಡೆ ನಾರಿ ॥ ೩ ॥
ಬೆಳ್ಳಿಯಡ್ಡಣಿಗೆಯನು । ಬೆಳಗಿಯದರ ಮೇಲೆ ।
ಒಳ್ಳೆ ಶುಭ್ರದವಸ್ತ್ರ । ವನ್ನು ಹಾಸಿದಳು ॥ ೪ ॥
ಸಾರಸುಗಂಧ ಸಂ । ಪಿಗೆಯ ಸೇರಿದ ತಟ್ಟೆ ।
ಮಿಾರಿದಡ್ಡಣಿಗೆಯ । ಮೇಲೆ ಇರಿಸಿದಳು ॥ ೫ ॥
ಗುರುವೆ ನಿಮ್ಮಯ ಇಷ್ಟ । ಲಿಂಗಕ್ಕೆ ತಟ್ಟೆಲಿಹ ।
ಪರಿಮಳದ ಪುಷ್ಪಗಳ । ಅರಳ ಧರಿಸಯ್ಯ ॥ ೬ ॥
ಅಂಗನೆಯ ನುಡಿಗೇಳಿ । ಸಂಗಯ್ಯ ತನ್ನಿಷ್ಟ ।
ಲಿಂಗಕ್ಕೆ ಪುಷ್ಪಗಳ । ಶೃಂಗರಿಸುತಿರಲು ॥ ೭ ॥

**ಕಂದಪದ್ಯ.**

ಇಂದುಮುಖಿ ಶಿವನ ಪೂಜೆಗೆ ।
ತಂದಿಹ ಪಲಬಗೆಯ ಪುಷ್ಪವೀಯುತಿರಲಾಗಂ ॥
ಚಂದ್ರನ ಸೂಡಿದನುರೆಯಾ ।
ನಂದದಿ ಪೂಜಿಸುತ ಮುಗ್ಧಸಂಗಯ್ಯ ಮತ್ತಂ ॥ ೧ ॥

**ಲಲಿತರಗಳೆ.**

ಶ್ರೀಗುರು ಶಿವಮುಗ್ಧಸಂಗ ಕರುಣಪ್ರಭಾಂಗ ।
ಆಗಲರ್ಚಿಸುತಿರ್ದ ಭವಹರನೋಳ್ ಮನಹಿಂಗಿ ॥ ಪ ॥

ಕಡುಜಾಣೆ ಕಡಗಕಂಕಣ ಝಣಾಝಣರೆನುತ ।
ಪಿಡಿಪಿಡಿದು ಪುಷ್ಪಗಳೆಡೆಮಾಡಿ ಕೊಡುತಿರ್ದಳ್
ಮೃಡಮೂರ್ತಿ ಮುಗ್ಧಸಂಗಯ್ಯ ಶಿವಲಿಂಗಕ್ಕೆ ।
ಸಡಗರದಿ ಸಕಲ ಪುಷ್ಪಗಳನರ್ಪಿಸುತಿರ್ದಂ ॥ ೧ ॥

ಮರುಗ ಮಲ್ಲಿಗೆ ಜಾಜಿ ಮಂದಾರ ಮೊಲ್ಲೆಯ ।
ಪರಿಮಳದ ಪಾದರಿಯ ಪುಷ್ಪಗಳ ಧರಿಸಯ್ಯ ॥
ಸುರಗಿ ಸುರಹೊನ್ನೆಯಾ ಸುಗಂಧದ ಕೇದಗೆಯ ।
ಇರುವಂತಿ ಪುಷ್ಪವಾ ಲಿಂಗಕ್ಕೆ ಧರಿಸಯ್ಯ ॥ ೨ ॥

---

1-1 ಯಿತ್ತೆ (ಒ, ಖ, ಗ, ಜ.) 2-2 ತರು (ಒ, ಖ, ಗ, ಚ, ಜ.)

ನಾಗಸಂಪಿಗೆ ದವನ ನಂದಿವರ್ತ್ತಗಳನ್ನು ।
ನಾಗಭೂಷಣಗೆ ಅರ್ಪಿಪುದಯ್ಯ ನಮ್ಮಯ್ಯ ॥
ಪಾಲಾಶ ಪಚ್ಚೆ ಪಾರಿಜಾತ ಸೇವಂತಿಗೆ ।
ಜಾಲ ಜಾಲಾತ ಕಮಲಗಳನ್ನು ಧರಿಸಯ್ಯ ॥ ೩ ॥

ಕಂಚಾಲ ಅದ್ರಗಂಚಿ ಕರವೀರ ಕನಕಮಂ ।
ಪಂಚಮುಖದಯ್ಯಂಗೆ ಪ್ರೀತಿಯಿಂಧರಿಸಯ್ಯ ॥
ಕಸ್ತೂರಿ ಕಾಮಕಸ್ತೂರಿ ಪಂಚಪತ್ರೆಯಂ ।
ವಸ್ತು ಬಿಲ್ವಪತ್ರೆಯಂ ಒಡೆಯಂಗೆ ಧರಿಸಯ್ಯ ॥ ೪ ॥

ಮಲ್ಲಿಗೆಯದಂಡೆ ಮೊಲ್ಲೆಯು ಜಾಜಿ ಸಂಪಿಗೆಯು ।
ಚೆಲ್ವ ಚಂಗಣಿಗಿಲಾದಂಡೆಯನು ಧರಿಸಯ್ಯ ॥
ಇಂತಪ್ಪ ಪುಷ್ಪಗಳ ಈಶಂಗೆ ಧರಿಸಿದಾ ।
ಸಂತಸವನಾನೇನ ಪೇಳುವೆನು ಸಂಗಯ್ಯನಾ ॥ ೫ ॥

ಅಂಗಪುಳಕಂಗಳಿಂ ಲಿಂಗವ ನಿರೀಕ್ಷಿಸುತ ।
ಕಂಗಳಿಗೆ ಹಬ್ಬವಾಗಿದೆ ಕಂಡೆನಚ್ಚರಿಯ ॥
ನೋಡನೋಡಲು ಶಿವನ ನೋಟದಣಿಯದುಪೂಜೆ ।
ಮಾಡಮಾಡಲು ಮನಸುದಣಿಯದಿದೆ ಶಿವಬಲ್ಲ ॥ ೬ ॥

ಚಂದಚಂದದ ಪುಷ್ಪ ಚಂದ್ರಧರಗರ್ಪಿಸಿದೆ ।
ಎಂದು ಕಾಣೆನು ಇಂಥ ಇಂದುಧರ ಪೂಜೆಯನು ॥
ಅಂದವಾಯಿತು ಪೂಜೆ ಚಂದವಾಯಿತು ಪೂಜೆ ।
ಮುಂದೇನು ಕೊಡುತಿರುವೆ ತಾರೆ ಸದ್ಗುಣನೀರೆ ॥ ೭ ॥

**ಜಂಪೆ.***

ಇಂದೆಮ್ಮ ಲಿಂಗಕ್ಕೆ । ಗಂಧ ಅಕ್ಷತೆ ಪುಷ್ಪ ।
ಚಂದವಾಯಿತು ನೀರೆ । ಮುಂದೇನು ತಾರೆ ॥ ೧ ॥

ಕಾಪಾಲಿಧರನಿಂಗೆ । ಕರ್ಮವಿನಾಶನಿಗೆ ।
ಧೂಪವರ್ಪಿಸಿ ಸ್ವಾಮಿ । ಶ್ರೀ ಪರಮಶಿವಗೆ ॥ ೨ ॥

ಮಘಮಘಿಪ ಸುಗಂಧ । ಸೊಗಸು ತೋರುವ ಧೂಪ ।
ಅಘಹರನಿಗರ್ಪಿಸಿದೆ । ಮಿಗಿಲೇನು ಮುಂದೆ ॥ ೩ ॥

ಮುಕ್ತಿಗಿದು ಮೊದಲು ನಿಜ । ಚಿತ್ತುವಿನ ಬೆಳಗು ಮಹ ।
ರತ್ನದಾರತಿ ಸ್ವಾಮಿ । ಎತ್ತಿ ಲಿಂಗಕ್ಕೆ ॥ ೪ ॥

---

* ಈ ಜಂಪೆಯ ಪದ್ಯಗಳು (ಜ, ಡ.) ಪ್ರತಿಗಳಲ್ಲಿಲ್ಲ.

ರತ್ನದಾರತಿ ಲಿಂಗ | ಕ್ಕೆತ್ತಿದೆನು ಮಹಬೆಳಗು |
ಅರ್ಥಿಯಾಯಿತು ತಾರೆ | ಮತ್ತೇನು ಮುಂದೆ || ೫ ||

ಸಕ್ಕರೆಯು ಸವಿಕಬ್ಬು | ಚೊಕ್ಕಕಡಲೆಯ ಜೇಳಿ |
ಅಕ್ಕರಿಂದರ್ಪಿಸಿರಿ | ಮುಕ್ಕಣ್ಣ ಶಿವಗೆ || ೬ ||

ಸವಿಯುಳ್ಳ ಕದಳಿ ಸ | ಕ್ಕರೆ ಕಬ್ಬು ಕಡಲೆಯನು |
ಶಿವನಿಗರ್ಪಿಸಿದೆ ಶೀ | ಘ್ರದಿ ತಾರೆ ಮುಂದೆ || ೭ ||

ಹರಿಯಜರೊಡೆಯ ಹದಿ | ನಾಲ್ಕು ಲೋಕದರಸಗೆ |
ತರವಾದ ದಿವ್ಯ ತಾಂಬೂ | ಲವರ್ಪಿಸಯ್ಯ || ೮ ||

ತರಳೆ ಅಹುದಹುದು ತಾಂ | ಬೂಲ ಶಿವಗರ್ಪಿಸಿದೆ |
ಪುರಹರಗೆ ಮುಂದೇನು | ಪುಣ್ಯಗುಣ ಶೀಲೆ || ೯ ||

ಮಾಡಿದೆನು ಅಷ್ಟವಿಧ | ಷೋಡಶೋಪಚಾರಗಳ |
ರೂಢಿಯೊಳಗಚ್ಚರಿಯ | ಮಾಡಿದೆಲೆ ನಾರಿ || ೧೦ ||

ಎಂದು ಕಾಣೆನು ಇಂಥ | ಇಂದುಧರಪೂಜೆಯನು |
ಇಂದು ಕಂಡೆನು ಕಾಣೆ | ಚಂದ್ರಮುಖಿ ಜಾಣೆ || ೧೧ ||

ವಚನ || ಮುಗ್ಧಸಂಗಯ್ಯನವರ ಶಿವಪೂಜೆ ಮುಗಿದುಬರಲು ಕೋಳಿ ಕೂಗುವವೇಳೆಯಾಗಲು ಶಿವನು ಕೈಲಾಸಕ್ಕೆ ಬಿಜಯಂಗೈಯುವಾಗ ಸಕಲ ದೇವತಾ ಸಭೆಯವರೆಲ್ಲರು ಏನೆನ್ನುತಿರ್ದರು.

**ದ್ವಿಪದಿ.**

ಶಿವಶಿವ ಮಹಾದೇವ ಶಿವ ನೀನೆಬಲ್ಲೆ |
ಭುವಿಯೊಳಗೆ ಇಂತಪ್ಪ ಸೂಳೆಗಾರಿಕೆಯ || ೧ ||

ಭುವನಹದಿನಾಲ್ಕರೊಳು ಬಲ್ಲವರುಂಟೆ |
ರೂಢಿಯೊಳಗಿಂತಪ್ಪ ಸೂಳೆಗಾರಿಕೆಯ || ೨ ||

ನಾಡೊಳಗೆ ಇನ್ನೆಲ್ಲಿ ನೋಡಿದಿರಿ ನೀವು |
ಅಡಿಯಂಚಿಗಮನೆಯೂ ಅತಿಚೆಲ್ವ ಚೆದುರೆ || ೩ ||

ಕಡುಜಾಣೆಯನು ಕಂಡು ಕಾಮಿಸದರುಂಟೆ |
ಸ್ಮರಸತಿವಿಲಾಸದ ಗರ್ವಿಕೆಯ ಹೆಣ್ಗಳನು || ೪ ||

ನೆರೆಯ ಸೋಂಕಲು ಜಗದಿ ಹುರುಳುಂಟೆ ಕೇಳಿ |
ಹರಿಯಜಾಸುರರು ಹದಿನಾಲ್ಕು ಲೋಕದೊಳು || ೫ ||

ತರುಣಿಯರ ಮೋಹಕ್ಕೆ ತಗುಲದವರಾರು ।
ಮನದಲ್ಲಿ ಚಂಚಲ ಮನ್ಮಥನ ಕಳೆಯು ॥ ೬ ॥

ಇನಿತಾದರೂ ಉಂಟೆ ಈ ಮಹಾತ್ಮನಿಗೆ ।
ಏನ ಹೇಳಲುಬಹುದು ಈ ಮಹಿಮ ಶಿವನ ॥ ೭ ॥

ಜ್ಞಾನವಲ್ಲದೆ ಅನ್ಯವೇನೊಂದನರಿಯ ।
ಸೂಳೆಹೆಣ್ಣಿನ ಕೈಯಿಂ ಕೆಲಸವನು ಕೊಂಡು ॥ ೮ ॥

ಭಾಳಲೋಚನನ ಭಜಿಸಿದನು ಇರುಳೆಲ್ಲ ।
ಇಂತಪ್ಪ ಮುಗ್ಧಗುರು ಎಲ್ಲಾದರುಂಟೆ ॥ ೯ ॥

ಕಂತುಹರ ಶಿವಬಲ್ಲ ಕಂಡೆವೀ ಚೋದ್ಯ ।
ಎಂದು ಪ್ರಮಥರು ಸುರರು ಎಲ್ಲರೂ ಪೊಗಳೆ ॥ ೧೦ ॥

ದೇವದುಂದುಭಿ ಮೊಳಗಿ ಪೂಮಳೆಯು ಸುರಿಯೆ * ।
ಇಂದುಧರ ಕೈಲಾಸ ಮಂದಿರಕೆ ಪೋದ ॥ ೧೧ ॥

ವಚನ ॥ ಆ ವೇಳೆಯಲ್ಲಿ ಬೆಳಗು ಪಸರಿಸಿತದೆಂತೆನೆ.

**ತ್ರಿವುಡೆ.**

ಶಂಭುವಿನ ಶಿವಪೂಜೆ ಮುಗಿದಾ । ಸಂಭ್ರಮಕೆ ತಾವ್ ಶರಣು ಹಾಕುವೆ ।
ನೆಂಬತೆರದಲಿ ಕೂಗುತಿರ್ದವು – ತಾಂಬ್ರಜೂಟಗಳು ॥ ೧ ॥

ಬಹಳ ಧೂಪದ ದೀಪಸೆಖೆಯಲಿ । ಬಳಲಿ ಬೆಮತನು ಶರಣನೆನುತಲಿ ।
ಬಹಳಮೆಲ್ಲನೆ ಬೀಸಿದುದು ತಂ – ಗಾಳಿಯಾಗ ॥ ೨ ॥

ಕೇಳಮೇಳದ ತಾಳಗತಿಯಲಿ । ಬಹಳ ಖಗಸಂಕುಲವು ವೃಕ್ಷದ ।
ಮೇಲೆ ಪಲಬಗೆ ಕೂಗುತಿರ್ದವು – ಹೇಳಲೇನು ॥ ೩ ॥

ಗುರುವಿನುಪದೇಶಕ್ಕೆ ಕರ್ಮವು । ಹರಿದು ಹೋಗುವರೀತಿಯಲಿ ಮಿಗೆ ।
ತರಣಿಕಿರಣದ ಉರವಣೆಗೆ ನಿಸಿ – ಹರಿದು ಬೆಳಗಾಗೆ ॥ ೪ ॥

ಸಂಭ್ರಮದಿ ಸರಸಿಜವು ತಮ್ಮಯ । ನಂಬುಗೆಯ ಸಖ ಬಂದನೆನುತಲಿ ।
ನಂಬಿನಗುವೊಲು ಅರಳುತಿರ್ದವು – ಅಂಬುಜಗಳು ॥ ೫ ॥

ಮೂರುಲೋಕವ ಮೂರ್ಛೆಗೊಳಿಸುವ । ತೂರ್ಯ ನಿದ್ರೆಯು ತೊಲಗಿಪೋದುದು ।
ಧಾರಿಣಿಯ ಜನಜೀವ ಜಾಲದ – ಜಾಡ್ಯಪರಿದೇಳೆ ॥ ೬ ॥

---

* ಈ ಅರ್ಧಪದ್ಯ (ಇ, ಗ, ಚ, ಜ.) ಪ್ರತಿಗಳಲ್ಲಿಲ್ಲ.

ಇರುಳು ಬೆಳಗಿನತನಕ ಇಂದು । ಧರನ ಪೂಜಿಸಿ ದಣಿದ ಶರಣನ ।
ಭರದಿ ಎಬ್ಬಿಸಬೇಕು ಎಂಬೊಲು– ತರಣಿ ಮೂಡಿದನು ॥ ೭ ॥

ಲಿಂಗದಲಿ ಮನನಟ್ಟು ಬೆಳಗಿನ । ಹಂಗನರಿಯದೆ ಇರಲು ಶರಣನ ।
ಹಿಂಗದೇ ಬಸವಯ್ಯ ಕರೆಸಿದ– ಸಂಗಯ್ಯನನ್ನು ॥ ೮ ॥

ದೊರೆಬಸವರಾಜೇಂದ್ರ ಕಳುಹಿದ । ಚರರು ಪೋಗಿ ವಿಚಾರನಾರಿಗೆ ।
ಅರುಹಿದರು ಸಂಗಯ್ಯನವರನು– ಕರೆಸಿದರು ಎಂದು ॥ ೯ ॥

ವಚನ ॥ ಆ ವೇಳೆಯಲ್ಲಿ ಬಸವೇಶ್ವರನ ಊಳಿಗದವರು ಬಂದು, ವಿಚಾರ ನಾರಿಯಕೂಡೆ ಪೇಳಿ ಮುಗ್ಧಸಂಗಯ್ಯನವರ ಕರೆಸಿದರೆನಲು ಆಕೆ ಮುಗ್ಧಸಂಗಯ್ಯನವರ ಏನೆಂದು ಕರೆವುತಿರ್ದಳು.

**ಕೊಂಚೆ ಜಂಪೆ.**

ಎಂದ ಮಾತನು ಕೇಳುತಾಗ– ಆ ನಾರಿ । ಬಂದು ಸಂಗಯ್ಯನೆಡೆಗಾಗ ।
ತಂದೆ ಕೇಳಿನ್ನು ನೀವೀಗ– ಬಸವಯ್ಯ । ಇಂದು ಕರೆಸಿದ ನಿಮ್ಮ ಬೇಗ ॥ ೧ ॥

ಶಿವನ ಪೂಜೆಯ ಮಾಡುತಿದ್ದೆ – ನಾನು । ಶಿವನೊಳೇಕಾರ್ಥದಿಂದಿದ್ದೆ ।
ಹವಣನರಿಯದೆ [1] ನಾರಿಹೀಗೆ [1] – ಎನ್ನ । ವಿವರಿಸದೆ ಕರೆದೆ ಅವಿಚಾರಿ ॥ ೨ ॥

ಹುಸಿಯಲ್ಲವೇಳಿ ನೋಡಯ್ಯ – ಹೊರಗೆ । ಬಿಸಜಸಖನುದಿಸಿಹನು ಜೀಯ ।
ಶಶಿಧರ ಶಿವಬಲ್ಲನಯ್ಯ – ನಿಮ್ಮ । ಬಸವ ಕರೆಸಿದನು ನಿಜವಯ್ಯ ॥ ೩ ॥

ಧರಿಸಿರ್ದ ರುದ್ರಾಕ್ಷಿ ಬಿಟ್ಟು – ತೊಟ್ಟ । ಸರಗಳನು ಕಟ್ಟಿ ಕಡೆಗಿಟ್ಟು ।
ಪರಶಿವನ ಸಜ್ಜೆಯೊಳಗಿಟ್ಟು – ಸಂಗಯ್ಯ । ಭರದಿ ಎದ್ದನು ಹೊದಿಕೆತೊಟ್ಟು ॥ ೪ ॥

ಸೂಳೆಗಾರಿಕೆಯೆಂಬುದೀಗ – ನಿನ್ನಿಂದ । ಬಹಳ ಚೋದ್ಯವ ಕಂಡೆ ಬೇಗ ।
ಕೇಳು ನಾನಿರುಳಿನುದ್ಯೋಗ– ಬಸವಂಗೆ । ಹೇಳದೆ ಬಿಡೆನು ನಾನೀಗ ॥ ೫ ॥

ಇಂತು ಸೊಂಪಾನಂದವಾಗೆ– ಆ । ಕಂತುಹರಗಣರು ಸಾರ್ವದವು ।
ಸೂಳೆಗಾರಿಕೆ ಮಾಳ್ಪರೊಲಿದು – ಇಂತಪ್ಪ । ಭಾಳಾಕ್ಷಪೂಜೆ ಸೊಗಯಿಸಿತು ॥ ೬ ॥

ವಚನ ॥ ಎಂದು ವಿಚಾರನಾರಿಗೆ ಪೇಳಿ ಕಳುಹಿಸಿಕೊಂಡು, ಬಸವಣ್ಣನೆಡೆಗೆ ಬಂದು ಕರಗಳಂ ಮುಗಿದು ನಿಂದಿರಲು ಬಸವಣ್ಣ ಏನೆನ್ನುತಿರ್ದನು.

**ದ್ವಿಪದಿ.**

ಶರಣು ಭಕ್ತರದೇವ ಶರಣು ಮಜ್ಜೀವ ।
ಶರಣಯ್ಯ ಮುಗ್ಧಸಂಗಯ್ಯ ನಮ್ಮಯ್ಯ ॥ ೧ ॥

1-1 ಹೀಗೆ ನಾರಿ (ಇ, ಒ, ಖ, ಗ, ಚ, ಟ, ಡ.)

ಶರಣಯ್ಯ ನಿಮ್ಮಡಿಗೆ ಶರಣು ಶರಣಾರ್ಥಿ ।
ಹರುಷವಾಯಿತೆ ಹೋದ ಸೂಳೆಗಾರಿಕೆಯು ॥ ೨ ॥

ಪರಿಣಾಮವಾಯಿತೆ ಪಾವನಮೂರ್ತಿ ।
ಚರಮೂರ್ತಿ ಮಹೇಶ್ವರರೊಳಗೆ ಸತ್ಕೀರ್ತಿ ॥ ೩ ॥

ಎಂದು ಕೇಳಲು ಬಸವ ಎಲ್ಲರಾ ಮುಂದೆ ।
ಸಂದೇಹವಿಲ್ಲದೆ ಸಂಗಯ್ಯ ನುಡಿದ ॥ ೪ ॥

ಕೇಳಯ್ಯ ಬಸವಯ್ಯ ಕೇಳೆನ್ನ ಮಾತ ।
ಸೂಳೆಗಾರಿಕೆ ಬಹಳ ಸುಖವಾಯಿತಿರುಳು ॥ ೫ ॥

ಏನ ಹೇಳುವೆ ಸೊಗಸ ಏನಕೇಳುವಿರಿ ।
ತಾನೆ ಬಲ್ಲನು ಶಿವನು ಠೌಳಿಮಾತಲ್ಲ ॥ ೬ ॥

ಎಂದೆಂದು ನಾನಿಂಥ ಸೂಳೆಗಾರಿಕೆಯ ।
ಒಂದುದಿನವಾದರೂ ಒಬ್ಬರನು ಕಾಣೆ ॥ ೭ ॥

ಅಂದ ಚಂದದ ಮನೆಯು ಆವಾವ ಕಡೆಯು ।
ಗಂಧ ಕಸ್ತೂರಿ ಪುನುಗು ಘಮಘಮಿಸುತಿಹುದು ॥ ೮ ॥

ಪಟ್ಟೆಮಂಚವು ಹಾಸು ಪವಡಿಸುವ ತಾವು ।
ಕಟ್ಟಿದ ಮೇಲ್ಕಟ್ಟು ಕನಕ[1] ತೋರ[1] ಣವು ॥ ೯ ॥

ಪಟ್ಟುಪಟ್ಟಾವಳಿಯ ಪರದೆ ಕಟ್ಟಿಹಳು ।
ಎಷ್ಟೆಂದು ಹೇಳಲೈ[2] ಏನೆಂಬೆ ಸುಖವ[2] ॥ ೧೦ ॥

ಮೊಲ್ಲೆ ಮಲ್ಲಿಗೆ ಜಾಜಿ ಮರುಗ ಸೇವಂತಿ ।
ಎಲ್ಲಿ ನೋಡಲು ಗಂಧ ಎಸೆ[3] ವುತ್ತಲಿಹುದು[3] ॥ ೧೧ ॥

ಅಂತಪ್ಪ ಅರಮನೆಗೆ ಅಧಿಕವಾದಂಥ ।
ಕಾಂತೆಯೊಬ್ಬಳು ಕನಕ ಪುತ್ಥಳಿ[4] ಯ ಬೊಂಬೆ[4] ॥ ೧೨ ॥

ಕಂತುಹರನನು ಭಜಿಸಿ ಕರುಣ ಪಡೆದಿಹಳು ।
ಸಂತೋಷದಲಿ ಸಕಲಾಭರಣವಿಟ್ಟಹಳು ॥ ೧೩ ॥

ಸಾರಣೆಯು ರಂಗೋಲೆ ಸಕಲ ಪುಷ್ಪಗಳು ।
ಮಾರಹರಶಿವನ ಭಜಿಸುವ ಮಹಾಸ್ಥಲವು ॥ ೧೪ ॥

---

1-1 ಭೂಷ (ಅ, ಒ, ಜ, ಟ, ಬ.) 2-2 ಯನಗೆ ಪೇಳಲರಿದು (ಎ.)
3-3 ವಸದ್ವಾಸನೆಯು (ಎ.) 4-4 ಯೊಳಿಹಳು (ಇ, ಎ, ಖ.)

ರುದ್ರಾಕ್ಷಿ ಮಂಟಪವು ರಮ್ಯವಾಗಿಹುದು ।
ರತ್ನ ಮುತ್ತು ಪವಳ ರವಿತೇಜದಂತೆ * ॥ ೧೫ ॥

ಕೆಂಪು ಬಿಳ್ಪಸುರು ಕಪ್ಪು ಹಳದಿ ಶಿಲೆಗಳ್ ।
ಗುಂಪಾಗಿ ಗುಡಿಗಟ್ಟಿ[1] ತೂಗಾಡುತಿಹುದು[1] * ॥ ೧೬ ॥

ಸೊಂಪ ನೀ ನೋಡಿದರೆ ಸದ್ಯ ಅಲ್ಲಿಹೆಯು
ತಪ್ಪಲ್ಲ ಈ ಮಾತು ತಂದೆ ಬಸವಯ್ಯ * ॥ ೧೭ ॥

ಅಂತಪ್ಪ ಸ್ಥಳದಲ್ಲಿ ಅಧಿಕವೆನ್ನುತಲಿ *
ಸಂತೋಷದಲಿ ಶಿವನ ಸಲೆಪೂಜಿಸಿದೆನು ॥ ೧೮ ॥

ಒಂದು ಮಜ್ಜನ ಭಸಿತ ಒಂದೊಂದು ಗಂಧ ।
ಒಂದೊಂದು ಅಕ್ಷತೆಯು ಒಂದೊಂದು ಪುಷ್ಪ ॥ ೧೯ ॥

ಒಂದೊಂದು ಧೂಪವು ಒಂದೊಂದು ದೀಪ ।
ಒಂದೊಂದು ಕಬ್ಬು ಕದಳಿಯು ಕಡಲೆಬೇಳೆ ॥ ೨೦ ॥

ಇಂದುಧರಗರ್ಪಿಸಿದೆ ವೀಳ್ಯ ಮುಂತಾಗಿ ।
ತಂದುಕೊಡುವಳು ತರುಣಿ ಕಡುತೀವ್ರವಾಗಿ ॥ ೨೧ ॥

ಬಂದು ನೋಡದೆಹೋದೆ ಬಸವಣ್ಣ ನೀನು ।
ಇಂದುಧರ ಜಂಗಮರು ಅನುದಿನವು ಇದರಿಂ ॥ ೨೨ ॥

ಸೂಳೆಗಾರಿಕೆಮಾಳ್ಪರ್ ಸೊಗಸು ಇಂತಾಗೆ ।
ಶೂಲಧರಪೂಜೆಯು ಸೂಳೆಗಾರಿಕೆಯು * ॥ ೨೩ ॥

ಅಂದಚಂದವು ಬಸವ ಸೊಗಸನೇನೆಂಬೆ ।
ಇಂದುಧರನೊಳ್ಮನವನೆರಕಗೈದಿದ್ದೆ * ॥ ೨೪ ॥

ಇಂದುಮುಖಿಯಪ್ಸರೊಳಗೆಬ್ಬಿಸಿದಳಯ್ಯ * ।
ಎಂದು ಪೇಳಲು ನಕ್ಕರೆಲ್ಲ ಗಣನಿಕರ ॥ ೨೫ ॥
ಹೊಂದಿ ತಾ ಮುಗುಳ್ನಗೆಯ ಹೊಗಳಿದನು ಬಸವ ॥

**ಜಂಪೆ.**

ಭಾಪುರೇ ಸಂಗಯ್ಯ । ಭಾಪೀಶ ಕುಲದೀಪ ।
ಕಾಪಾಲಿಧರ ಶಿವನ । ಕರುಣ ಪ್ರಸಾದಿ ॥ ೧ ॥

---

* ಈ ಪದ್ಯಗಳು (ಅ, ಉ, ಗ, ಚ, ಜ, ಟ, ಡ, ದ.) ಪ್ರತಿಗಳಲ್ಲಿಲ್ಲ.

1-1 ಸೊಂಪಿಂದೊಲೆಯುತಿಹವು (ಇ, ಎ, ಖ)

ಶ್ರೀ ಪರಾಪರಬ್ರಹ್ಮ । ಶೃಂಗಾರಕರಮೂರ್ತಿ ।
ಈ ಪರಿಯೊಳಿಳೆಯೊಳಗೆ । ಆರುಸರಿ ನಿನಗೆ ॥ ೨ ॥

ಬಾ ಮುಗ್ಧಸಂಗಯ್ಯ । ಬಾ ಎನ್ನ ಪ್ರಿಯಕಂದ ।
ಬಾ ಎನ್ನ ಶಿವನ ಸಿಂ । ಗರದ ಗುಣಮಣಿಯೆ ॥ ೩ ॥

ಎಂದು ಬಸವನು ಹರುಷ । ಆನಂದದೊಳು ಮುಳುಗಿ ।
ಒಂದಾರುಭುಜವಾಗಿ । ಒಡನೆ ಹಿಗ್ಗುತಲಿ ॥ ೪ ॥

ತೆಗೆದಪ್ಪಿ ಬಿಗಿದಪ್ಪಿ । ಮುಖನೋಡಿ ಮುಂಡಾಡಿ ।
ಮಿಗೆ ಹೆಚ್ಚಿ ಮನಮೆಚ್ಚಿ । ಮುಗ್ಧಸಂಗನನು ॥ ೫ ॥

ನೆರೆದ ಶಿವಗಣರೆಲ್ಲ । ಪರಿಪರಿಯೊಳ್ಕೊಂಡಾಡಿ ।
ಹರನ ನಿಜಶರಣನಿವ । ಧರೆಯೊಳೆಸೆಯುಂಟೆ † ॥ ೬ ॥

ಒಗುಮಿಗೆಯ ಕೊಂಡಾಡಿ । ಮುಗ್ಧಸಂಗಯ್ಯನನು ।
ಅಘಹರನ ಶರಣರುಗ । ಳರ್ಥಿಯೊಳಗಿರಲು † ॥ ೭ ॥

ವಚನ ॥ ಆ ವೇಳೆಯಲ್ಲಿ ಇಂಥಾ ಮುಗ್ಧಗುರು ಎಲ್ಲಾದರೂ ಉಂಟೇ ಎಂದು ಚೆನ್ನಬಸವಣ್ಣ ಬಸವೇಶ್ವರನಂ ಕೇಳಲು, ನವಮುಗ್ಧರುಂಟು ಎಂಬಲ್ಲಿಗೆ ಮುಗ್ಧಸಂಗಯ್ಯನ ಕಥೆಯು ಮುಗಿದುದು.

ಇಂತಿ ಪದ್ಯಗಳು ೪೯೫

**ಅಂತು ಸಂಧಿ ೧೫ ಕ್ಕಂ ಸಂಪೂರ್ಣಗಣನೆ – ೪೩೫೦ ಕ್ಕಂ ಮಂಗಳಮಹಾ**

**ಶ್ರೀ ಶ್ರೀ ಶ್ರೀ ಶ್ರೀ ಶ್ರೀ**



† ಈ ಪದ್ಯಗಳು (ಇ, ಖ, ಚ, ಜ.) ಪ್ರತಿಗಳಲ್ಲಿಲ್ಲ.

## ಹದಿನಾರನೆಯ ಸಂಧಿ

# ರುದ್ರಪಶುಪತಿಯ ಕಥೆ

---

**ವೃತ್ತ.**

ಶ್ರೀಮದ್ದೇವ ದೇವ ಗಿರಿಜಾಧೀಶಂ ಶುಭಾವಾತ್ಮಕಂ ।
ಕಾಮಾರೀ ಗಣೇಶ ಗುಹರಿಂ ಸಂಪೂಜಿತಾಂಘ್ರಿದ್ವಯಂ ॥
ಸೋಮಾರ್ಧಾಂಕಿತಂ ನಿರುಪಮಂ ವ್ಯಾಘ್ರಾಜಿನಂ ಶುದ್ಧಿದಂ ।
ಸ್ವಾಮಿಾ ಪಾಲಿಸೆನ್ನನೊಲವಿಂ ಶ್ರೀ ಚೆನ್ನಮಲ್ಲೇಶ್ವರಾ ॥ ೧ ॥

**ದ್ವಿಪದಿ.**

ಶ್ರೀ ಗಿರಿಜೆ ವರಮೂರ್ತಿ ದೇವತ ಚಕ್ರವರ್ತಿ ।
ನಿಗಮ ನಿರವಯಸ್ಫೂರ್ತಿ ನಮಿತ ಸತ್ಕೀರ್ತಿ ॥ ೧ ॥
ಶಂಭು ನಂಬಲು ಸುಲಭವಿಂಬಿಲ್ಲದಿಹನು ।
ಕುಂಭಿಣಿಯ ವಸ್ತುಗಳ ನಂಬಿದವರಿಂಗೆ ॥ ೨ ॥
ಕಂಬುಕಂಧರ ಬಂದು ಇಂಬಾದ ಮನದಿ ।
ಡಂಭಕಾರ್ಚನೆಯುಳಿದ ಭುವಿಯ ಭಕ್ತರಿಗೆ ॥ ೩ ॥
ನಿಂದು ಮುಕ್ತಿಯನಿತ್ತಾನಂದಮಂ ಪೇಳ್ವೆ ।
ನೊಂದೆ ಮನದಲಿ ನಿಂದು ಸಂಧಿಸುತ ಕೇಳಿ ॥ ೪ ॥
ನವಮುಗ್ಧ ಚರಿತೆಯಿದು ನವರತ್ನದಂತೆ ।
ನವವಿಧದ ಭಕ್ತಿಯೊಳು ನವರಸದಿ ಪಠಿಸೆ ॥ ೫ ॥
ನವಸುಮುಗ್ಧರಿಗಿತ್ತ ನವಪದವಿಗಳನು ।
ಶಿವನೀವ ಸಿದ್ಧಮಿದು ನೆರೆನಂಬಿ ನೀವು ॥ ೬ ॥

**ಸಾಂಗತ್ಯ.**

ಕೇಳಯ್ಯ ಚೆನ್ನಣ್ಣ ಮುಗ್ಧಭಕ್ತರು ಮುಕ್ತಿ । ಯಾಳಿದ ಪರಿಯ ವಿಸ್ತರಿಪೆಂ ॥
ಚೋಳದೇಶದಿ ಎಲುವೂರೆಂಬ ಪುರದೊಳು । ಭಾಳಲೋಚನ ನಿಜಭಕ್ತ ॥ ೧ ॥
ಲಿಂಗನಿಷ್ಠಾಪರ ಘನದೇಕ ದೃಢವಂತ । ಸಂಗಸುಖ ಸಕಲ ಭೋಗಗಳ ॥
ಇಂಗಿತವರಿತವನಲ್ಲ ಪರಶಿವನೊಳು । ಲಿಂಗದಲಿ ಪ್ರಾಣವಾಗಿಹನು ॥ ೨ ॥

ನಡೆವಲ್ಲಿ ನುಡಿವಲ್ಲಿ ಜಾಗ್ರಸ್ವಪ್ನಗಳಲ್ಲಿ । ಮೃಡನೊಡನಾಡುತ್ತಲಿಹನು ॥
ದೃಢಭಕ್ತ ರುದ್ರಪಶುಪತಿಯು ಎಂಬವ । ಪೊಡವಿಯಲಿ ಮಲವನಳಿದಿಹನು ॥ ೩ ॥

ಶಿವಪೂಜೆಗೆಯ್ಯಲ್ಕೆ ಪುಷ್ಪವ ತರುಪರಿ । ಶಿವಬ್ರಾಹ್ಮಣ ಶ್ರೇಣಿಯೊಳಗೆ ॥
ಅವಿಾತದಿಂ ಬರಲನಿತರೊಳು ಪೌರಾಣಿಕ । ಶಿವಪುರಾಣವನೋದುತಿರಲು ॥ ೪ ॥

ನಿಂದು ಲಾಲಿಸಿದನು ಶಿವಕಥಾಮೃತವನ್ನು । ಇಂದುಧರನು ಗರಳವನ್ನು ॥
ಹಿಂದೆ ನುಂಗಿದನೆಂದು ಉಲಿವ ಶ್ರುತಿಯ ಕೇಳಿ । ಸಂದೇಹ ಚಿಂತೆತಾಳಿದನು ॥ ೫ ॥

ಭಕ್ತಿಯ ದೃಢವೊಂದ ಬಲ್ಲನಲ್ಲದೆ ಬೇರೆ । ಯುಕ್ತಿಯ ಮತಿಯ ತಾನರಿಯ ॥
ಕರ್ತೃ ಎನ್ನಯ್ಯನ ಕಷ್ಟವನು ಕರ್ಣದಿ । ಮತ್ತೆ ಕೇಳಿದೆನಕಟಕಟಾ ॥ ೬ ॥

ಎನ್ನೊಡೆಯಗಿಂತಾಗೆ ಎನ್ನ ತನುವಿನ್ನೇಕೆ । ಎನ್ನುತ ಚಿದಂಬರೇಶ್ವರನ ॥
ಸನ್ನಿಧಿಗೆಯ್ತಂದು ಎದುರಲ್ಲಿ ಮಂಡಿಸಿ । ಪನ್ನಗಧರಸ್ವಾಮಿ ನಿನಗೆ ॥ ೭ ॥

ಅತ್ಯಂತ ಸಖವಿಷ್ಣು ಅಜ ಮನುಮುನಿಗಳು । ಒತ್ತಿನೊಳಿರ್ದು ಬೇಡೆನದೆ ॥
ಯುಕ್ತಿಯ ತಿಳುಪದೆ ಪೋದರೆ ಅಯ್ಯಯ್ಯೋ । ಸತ್ತರೆ ಸಾಯಲೆಂದಿಹರೇ ॥ ೮ ॥

ವಿಷವ ನೀನುಗುಳೆಂದು ದೈನ್ಯದಿಂದೆಂಬನು । ಶಶಿಶೇಖರನನು ತಾ ನೋಡಿ ॥
ನಸುನಗುತೆಲ್ಲರು ಮುಗ್ಧನ ಮಾತಿಗೆ । ಪೊಸಮರುಳೇನಯ್ಯ ನಿನಗೆ ॥ ೯ ॥

ಹರಗುಂಟೆ ಮೃತ್ಯುಮರಣ ಬಿಡು ಶೋಕವ । ಧರೆಸರ್ವ ನರ ಅಸುರರ ಋಷಿ ॥
ವರರನ್ನು ಸಲಹಲ್ಕೆ ಗರಳವ ಧರಿಸಿದ । ಪರಿಯನ್ನನೇಕ ಪೇಳಿದರು ॥ ೧೦ ॥

ಕೇಳನವರ ಮಾತ ಕಂತುಹರ ಉಗುಳೆಂದು । ಬಾಳ ದೈನ್ಯತೆ ಭಕ್ತಿಯಿಂದ ॥
ಕೋಳಾಹಳವಮಾಡಿ ನಾಲಿಗೆಯ ಬುಡಮುಟ್ಟ । ಕೇಳುವಾ ಭಕ್ತಂಗೆ ಮೆಚ್ಚಿ ॥ ೧೧ ॥

ಲಿಂಗದೊಳಗೆ ತನ್ನ ನಿಜರೂಪ ತೋರುತ್ತ । ಅಂಗವಿಪ ಭಕ್ತನನು ಅಪ್ಪಿ ॥
ಲಿಂಗದ ಆಪ್ತಭಕ್ತನು ನೀನಹುದೆಂದು । ಅಂಗಜರಿಪು ಕೊಂಡಾಡಿದನು ॥ ೧೨ ॥

ಮೆಚ್ಚಿದೆನೆಲೆ ಕಂದ ಬೇಡು ನಿನ್ನಯ ಮನ । ದಿಚ್ಛೆಯ ವರಗಳ ಕೊಡುವೆ ॥
ಸಚ್ಚಿದಾನಂದರೂಪನಿಂತೆನಲು ವರ ಭಕ್ತ । ಕಿಚ್ಚುಗಣ್ಣಗೆ ಬಿನ್ನೈಸಿದನು ॥ ೧೩ ॥

ಹರಿಯಜ ಸುರಪನಾ ಪದವಿಯ ನಾನೊಲ್ಲೆ । ಪರಶಿವ ಪಾರ್ವತಿರಮಣ ॥
ಗರಳವನುಗಿ ನಿನ್ನಸುವುಳಿವ ವರವನ್ನು । ಭರದಿ ಪಾಲಿಸು ದೇವ ಎಸಲು ॥ ೧೪ ॥

ಧರೆ ದಗ್ಧವಹುದು ಗರಳವನ್ನು ಉಗಿದಡೆ । ತರಳ ನೀನರಿಯೆ ಕೇಳೆನ್ನಲ್ ॥
ಉಳಿಯಲಿ ಪೋಗಲಿ ನಾನೇನನರಿಯೆನು । ಗರಳವನುಗುಳದಿರಲು ಇನ್ನು ॥ ೧೫ ॥

ಇರಬೇಡ ಎದುರಲ್ಲಿ ಬಿಟ್ಟು ನೀಕಡೆಗಾಗು । ಹರಣವನಿಲ್ಲಿನಾ ಕಳೆವೆ ॥
ಪರಮ ಸದ್ಭಕ್ತನಾ ಮುಗ್ಧಭಕ್ತಿಗೆ ಮೆಚ್ಚಿ । ಕರುಣದಿಂದೊರೆದನೊಂದನುವ ॥ ೧೬ ॥

ಆಯುಧಪಾಣಿಯಾಗಿರು ಎನ್ನ ತೊಡೆಯಲ್ಲಿ । ಕಾಯ್ದುಕೊಂಡಿರು ನೀನು ಎಂದು ॥
ಕಾಯಜರಿಪು ತನ್ನ ಕೈಲಾಸಕೊಯ್ದುವನ । ಸಾಯೂಜ್ಯ ಪದವಿಯನಿತ್ತ ॥ ೧೭ ॥
ಶಿವಪದವನು ಹೊಂದಿದ ರುದ್ರಪಶುಪತಿಯ । ಶಿವಕಥಾಮೃತವ ಲಾಲಿಸುವ ।
ಶಿವಭಕ್ತರನು ಸಲಹುವನು ಸಂಪದವಿತ್ತು । ಶಿವ ಮುಕ್ತಿಪದವನ್ನು ಕೊಡುವ ॥ ೧೮ ॥

ವಚನ ॥ ಇಂತೆಂದು ಬಸವನು ಚೆನ್ನಬಸವಂಗೆಪೇಳಿ ಮತ್ತೋರ್ವ ಮುಗ್ಧನ ಕಥೆಯ ಪೇಳುತಿರ್ದನದೆಂತೆನೆ.

## ನಕ್ಕನ್ನೈನಾರನ ಕಥೆ.

### ದ್ವಿಪದಿ.

ಕೇಳು ನೀ ಚೆನ್ನಣ್ಣ ಕೇಳು ಶಿವಕಥೆಯ ।
ಪೇಳುವೆನು ಬಹುಮುಗ್ಧಶರಣ ಚರಿತೆಯನು ॥ ೧ ॥
ಶಿವಭಕ್ತ ಶಿವನೇಮ ಶಿವಭಕ್ತಿಯುತನು ।
ಶಿವಯೋಗ ಶಿವಶೀಲ ಶಿವನೊಲುಮೆ ಶಕ್ತ ॥ ೨ ॥
ಭರತಖಂಡದೊಳಿರುವ ದ್ರಾವಿಡದೊಳಲ್ಲಿ ।
ತಿರುನೀಲನಕ್ಕನ್ನೈನಾರು ನಾಮದಲಿ ॥ ೩ ॥
ಸತಿಯು ಸುಶೀಲೆಯ ಕೂಡಿಯಿರುತಿಹನು ।
ಹಿತದಿ ಒಂದುದಿನ ಶಿವನ ನಿಲಯಕ್ಕೆ ಹೊರಟ ॥ ೪ ॥
ಪೋಗಿ ಲಿಂಗವ ನೋಡಿ ಪೂಜೆಯತ್ನದಲಿರೆ ।
ಜಾಗಿನಿಂ ಜೇಡರ ಪುಳು ಹರಿಯುತ್ತಲಿರಲು ॥ ೫ ॥
ಸತಿಸುಶೀಲೆಯು ನೋಡಿ ಜಿಹ್ವೆಯೊಳು ಉರುಹೆ ।
ಪತಿ ಕಂಡು ಎಲೆ ದುಷ್ಟೆ ಶುದ್ಧವಳಿದೆಯಲಾ ॥ ೬ ॥
ಪರಿಶುದ್ಧ ಲಿಂಗವನು ಉಗುಳಿ ಕೆಡಿಸಿದೆಯ
ಸರಿಯಾಚೆಗೆನುತವಳ ಕಳುಹಿ ಬಂದಾಗ ॥ ೭ ॥
ಲಿಂಗವನು ನೋಡಲಿಕೆ ಪತ್ನಿ ಉರುಹಿದ್ದ ।
ಅಂಗವುಳಿದಿನ್ನರ್ಧ ಭಾಗಗುಳ್ಳೆಗಳು ॥ ೮ ॥
ಸಣ್ಣ ಗುಳ್ಳೆಗಳೆಲ್ಲ ತುಂಬಿ ಲಿಂಗದಲಿ ।
ಬಣ್ಣಗೊಳ್ಳಲು ನೋಡಿ ಭಯಗೊಂಡನಾಗ ॥ ೯ ॥
ನಿಟ್ಟುಸಿರು ಬಿಟ್ಟಾಗ ಅಯ್ಯಯ್ಯೋ ಎಂದು ।
ದುಷ್ಟನಾನರಿಯದಲೆ ದೂಡಿದೆನು ಸತಿಯ ॥ ೧೦ ॥

ಚಿಂತೆಯೊಳು ತಾ ಬಂದು ತನ್ನ ಸತಿಯೆಡೆಗೆ ।
ಕಂತುಮರ್ದನರೋಗ ಪರಿಹರಿಪ ನಿನ್ನ ॥ ೧೧ ॥

ಚಿಂತಿಸದೆ ನೂಕಿದುದು ಅಪರಾಧವೆಂದು ।
ನಿಂತು ತಾ ಬಿನ್ನಹವ ಮಾಡಿ ಬೇಡಿದನು ॥ ೧೨ ॥

ನನ್ನಂಥ ನೀಚರು ಪರಮಪಾತಕರು ।
ಇನ್ನುಂಟೆ ಲೋಕದೊಳು ಶಿವನ ದೇಹದಲಿ ॥ ೧೩ ॥

ನೀನು ಉರುಹಿದಭಾಗ ಗುಳ್ಳೆಗಳು ಇಲ್ಲ ।
ಭಾನುನಯನಗೆ ಉಳಿದಭಾಗ ಗುಳ್ಳೆಗಳು ॥ ೧೪ ॥

ತೀಪಿತುಂಬಿಹವಲ್ಲಿ ಹೇಳಲಳವಲ್ಲ ।
ಕೋವಿದಳೆ ಬೇಗನಡೆ ಉಳಿದ ಭಾಗಕ್ಕೆ ॥ ೧೫ ॥

ಕರುಣದಿಂದಲಿ ಉರುಹಿ ಶಿವಗೆ ಸುಖವನ್ನು ।
ಪರಿಣಾಮದಿಂದ ಕೊಡು ಎಂದ ನೈನಾರ ॥ ೧೬ ॥

ವಚನ ॥ ಇಂತೆಂದ ಪತಿಯ ಮಾತಂ ಕೇಳಿ ಹೋ ಹೋ ಶಿವನೆ! ಅಯ್ಯೊ !! ಸ್ವಾಮಿಯೆ !!! ನಿನಗೆ ಗುಳ್ಳೆಗಳು ಎದ್ದವೆ, ಎಷ್ಟು ನೋಯುತ್ತಿರುವೆಯೊ ಕೆಟ್ಟೆನಲ್ಲಾ ! ದೇವ !! ಎನ್ನ ಪ್ರಾಣಕಾಂತ ದುಡುಕಿ ನೂಕಿದರೂ ನಾನು ಉರುಹ ಬಾರದಾಗಿತ್ತೆ ! ಎನ್ನ ಪತಿ ಕೋಪದಿಂದ ಬಯ್ದು ಹೊಡೆದರೂ ಸಾಹಸದಿಂದ ತಡೆದು ಕೊಂಡು ಉಗುಳಬಾರದಾಗಿತ್ತೆ !! ಹರನೆ ! ಈ ಬುದ್ಧಿಯಂ ಏಕೆ ಕೊಡದಾವೆಯೊ ಗೊತ್ತಿಲ್ಲವಲ್ಲಾ !! ಎಂದು ಚಿಂತಿಸಿ ಸುಯ್ಗರೆದು ನಿಟ್ಟುಸಿರಂಬಿಟ್ಟು ಕಣ್ಣೀರು ಸುರಿಸುತ್ತ ಶಿವನಿಲಯಕ್ಕೆ ಸತಿಪತಿಗಳೀರ್ವರೂ ಬಂದರದೆಂತೆನೆ.

**ಜಂಪೆ.**

ಸಂಗದಿಂದಲಿ ತಾವು । ಅಂಗಪುಳಕದಿ ನೊಂದು ।
ಪಿಂಗದಲೆ ಶೋಕಿಸುತ । ಲಿಂಗ ನೋಡಿದರು ॥ ೧ ॥

ಭಕ್ತನಾದೆನ್ನಿಂದ । ಮಿಕ್ಕು ಮೀರಿದ ಗುಳ್ಳೆ ।
ಲೆಕ್ಕವಿಲ್ಲದೆ ಬಂತೆಲೆ । ಗಕ್ಕನಪರಾಧ ॥ ೨ ॥

ಎನ್ನ ಅಪರಾಧಕ್ಕೆ । ಎನ್ನ ಶಿರವಿತ್ತಪೆನು ।
ಚೆನ್ನ ಚೆಲುವನನೀಗ । ಮುನ್ನ ಮಾಡುವೆನು ॥ ೩ ॥

ಎಂದು ಕತ್ತಿಯ ಪಿಡಿದು । ನಿಂದು ಕೊರಳಿಗೆ ಹಾಕಿ ।
ಸಂಧಿಸುವ ವೇಳೆಯೊಳು । ಇಂದುಧರ ಮೆಚ್ಚಿ ॥ ೪ ॥

ಶಿವಗಣಂಗಳು ಸಹಿತ । ಶಿವಪ್ರಸನ್ನತೆಯಾಗಿ ।
ಕುವರ ಭಕ್ತನೆ ಕೇಳು । ಈವೆ ಘನವರವ ॥ ೫ ॥

ಸತಿಪತಿಗಳತಿನೋಡಿ । ಹಿತದಿ ಹರಚರಣಕ್ಕೆ ।
ಜೊತೆಯಲ್ಲಿ ಎರಗಿದರು । ನುತಿಸುತ್ತಲಾಗ ॥ ೬ ॥

ನಿಂದು ಕೈಮುಗಿದವರು । ತಂದೆ ನೀ ಸುಖವಿರುವ ।
ದೊಂದು ವರಕೊಡು ನಮಗಿ । ನ್ನೊಂದು ವರಬೇಡ ॥ ೭ ॥

ನಿನ್ನ ತನು ಸುಖವಿರಲು । ನಿನ್ನ ನೋಡುತ ಹಿತದಿ ।
ಚೆನ್ನ ರಪ್ಪೆವು ನಾವು । ಚೆನ್ನಾಗು ನೀನು ॥ ೮ ॥

ಬೇರೆ ವರಪದಗಳನು । ಅರಸಿ ನೆನೆವವರಲ್ಲ ।
ಮಾರಿಯರಸಲು ನಿನ್ನ । ಚರಣಕ್ಕೆ ದೂರ ॥ ೯ ॥

ವರ ಸುಮುಗ್ಧರ ಭಕ್ತಿ । ಹರಿ ಸುರರು ಕೇಳುತಲಿ ।
ಹರಸಿ ನುತಿಸಿದರಲ್ಲ । ಕರೆದು ಪೂಮಳೆಯ ॥ ೧೦ ॥

ಶಂಕರನು ತಾ ಮೆಚ್ಚಿ । ಕಿಂಕರರ ಕರೆದೊಯ್ದು ।
ಶಂಕೆಯಿಲ್ಲದ ಪದವ । ಕಿಂಕರರಿಗಿತ್ತ ॥ ೧೧ ॥

ವಚನ ॥ ಇಂತಿ ಸುಲಭತೆಯಿಂದ ಸಂಗಮೇಶನು ಕಾಪಾಡುವನೆಂದು ಬಸವೇಶನು ಚೆನ್ನಬಸವಗೆ ಪೇಳಿ, ಮತ್ತೋರ್ವ ಬಾಲಮುಗ್ಧಭಕ್ತೆಯ ಕಥೆಯಂ ಪೇಳುತಿರ್ದನದೆಂತೆನೆ.

## ಕೋಳೂರು ಕೊಡಗೂಸಿನ ಕಥೆ.

**ತ್ರಿವುಡೆ.**

ಪೃಥ್ವಿಯೊಳು ಕೋಳೂರು ಎಂದೆಂಬ । ಪುರದೊಳೋರ್ವನು ಈಶಭಕ್ತನು ।
ಸತ್ಯಶರಣನು ಭಕ್ತಿ ಮುಕ್ತಿಯ – ಪಡೆಯುವಂಥವನು ॥ ೧ ॥

ಆತಗೋರ್ವಳು ಪುತ್ರಿಯಿರ್ದಳು । ಜ್ಯೋತಿಪ್ರಭೆಯೆಂತೆಸೆದು ರಂಜಿಸು ।
ತಾ ತರುಣಿ ಏಳ್ವರುಷ ವಯಸ್ಸಿನ – ಲಾತು ತೋರುತಿರೆ ॥ ೨ ॥

ಪುರದ ಮಧ್ಯದಿ ಸಂಗಮೇಶನ । ಮೆರೆವ ದೇವಾಲಯವು ಒಂದಿರೆ ।
ಹರನಭಕ್ತ ಸಂಗಯ್ಯನ ಸತಿ – ಸೋಮಲಾಖ್ಯಳ್ ॥ ೩ ॥

ಪುತ್ರಿಯನು ಕೊಡಗೂಸು ನಾಮದಿ । ಪ್ರೀತಿಯಿಂದಲಿ ಸಲಹುತಿರಲಿಕೆ ।
ವ್ರತವ ನಡೆಸಲು ಲಿಂಗದೇವಗೆ – ಪಶುವು ಒಂದಿಹುದು ॥ ೪ ॥

ಕ್ಷೀರದಭಿಷೇಕ ಸಂಗಮೇಶಗೆ । ಸಾರತರಭಕ್ತಿಯಲಿ ನಿತ್ಯವು ।
ಮೇರೆಯಲಿ ವ್ರತನಡೆದು ಬರುತಿರೆ – ಒಂದು ದಿವಸದಲಿ ॥ ೫ ॥

ಸತಿ ಪತಿಗಳವರೀರ್ವರೊಂದಾ । ಗತಿಶಯದ ಮತ್ತೊಂದು ದೈವಕೆ ।
ಹಿತದಿ ಪೋಗಲು ನೆನೆದು ಪುತ್ರಿಗೆ – ಮತಿಯ ಪೇಳಿದರು ॥ ೬ ॥

ಮಗಳೆ ನಾವು ಮೂರುದಿನಕೆಯು । ಮಿಗಿಲು ಪೂಜೆಯ ಗೆಯ್ದು ಬರುವೆವು ।
ನಿಗದಿ ನಮ್ಮಯ ಸಂಗಮೇಶಗೆ – ಸೊಗಸಿಂದರ್ಚಿಸೆಂದು ॥ ೭ ॥

ನೆರೆಮನೆಯ ಮಕ್ಕಳೊಳು ಆಟಕೆ । ಸರಿದು ಪೋಗದೆ ಮನೆಯನು ।
ನಿರುತ ಕಾಯುತ ವರಸುಧೇನುವ – ಕರೆದು ನೀನು ॥ ೮ ॥

ಲಿಂಗಕರ್ಪಿಸಿ ಪಾಲನೆಲ್ಲವ । ಹಿಂಗದಲೆ ಪಶುವನ್ನು ಸಾಕುತ ।
ತುಂಗಸೌಖ್ಯದಿ ಇರಲು ನಿನಗೆ – ಹೊಂಗಳೊಡವೆಗಳು ॥ ೯ ॥

ವಚನ ॥ ಇಂತೆಂದು ನೇಮವಂ ಪೇಳಿ ಪೋಗಲುಜ್ಜುಗಿಸಿ, ಮಗಳೆ ನಾವು ಬರುವಾಗ ನಿನಗೆ ಕಿರಿಗೆ, ಸಿಕ್ಕಟಿಗೆ, ಬಾಚಣಿಗೆ, ಬೊಂಬೆಯಂ ಅದರ ವಸ್ತುಗಳಂ ನಿನಗಾಡಲಿಕೆ ತಹೆವೆಂದು ಸಮ್ಮತಿಗೈದು ಪೋಗಲು, ಇತ್ತಲಾ ತರಳೆ ಮುಗ್ಧಭಕ್ತಿಭಾವವಂ ಬಲಿದು ಎಂತಿರ್ದಳು.

**ಸಾಂಗತ್ಯ.**

ಇತ್ತಲಾ ಕೊಡಗೂಸು ಮರುದಿವಸದಿ ತಾನು । ಅತ್ಯಂತ ಭಕ್ತಿಯಂ ತಾಳಿ ॥
ಮತ್ತೆ ಸ್ನಾನವಗೈದು ಭಸಿತಧಾರಿತೆಯಾಗಿ । ಎತ್ತಿ ಕಲಶ ತೊಳೆದಿರಿಸಿ ॥ ೧ ॥

ಗೋವಕೆಚ್ಚಲ ತೊಳೆದತಿ ಜೇಗ ಕ್ಷೀರವ । ಕುವರಿ ಕರೆದು ಕಲಶದಲಿ ॥
ಶಿವನಿಗರ್ಪಿಸಬೇಕೆಂದು ಭಕ್ತಿಯೊಳಾಗ । ತವಕದಿಂ ಮಡಿವಸ್ತ್ರ ಮುಚ್ಚಿ ॥ ೨ ॥

ತಂದಳು ಕ್ಷೀರವ ಸಂಗಮದೇವನ । ಮಂದಿರಕಾ ಮುದ್ದು ತರಳೆ ॥
ಚಂದದಿಂ ಮಜ್ಜನಗೈದು ಸಂಗಮನಿಗೆ । ಅಂದು ಪೂಜಿಸುತ ಬಲ್ಲಷ್ಟು ॥ ೩ ॥

ತಂದ ಕ್ಷೀರದ ಕಲಶವ ಮುಂದೆ ಇರಿಸುತ್ತ । ಚಂದ್ರಧರನೆ ಸಲಿಸೆಂದಳ್ ॥
ಒಂದು ಶಬ್ದವು ಇಲ್ಲದಿರುವುದನು ನೋಡಿ । ಎಂದಳಾ ತರಳೆ ಸಂಗಮಗೆ ॥ ೪ ॥

ಸಲಿಸಯ್ಯ ಏಕೆ ಸುಮ್ಮನೆಯಿರ್ಪೆ ನಮ್ಮನೆ । ಯಲ್ಲಿ ಯಾರಿಲ್ಲ ಪೋಗುವೆನು ॥
ಕಳವಳವೇತಕೆ ನನ್ನಲ್ಲೇನಶುಚಿಯು । ಕಾಲಮರ್ದನನೆ ಪೇಳೆಂದು ॥ ೫ ॥

ಎಲೆ ದೇವ ಸಲಿಸಯ್ಯ ಎನ್ನ ಕಾಡಲುಬೇಡ । ಛಲವೇಕೆ ಎನ್ನೊಳು ನಿನಗೆ ॥
ಚೆಲುವುಳ್ಳ ಬೊಂಬೆ ಕಿರಿಗೆ ಕುಪ್ಪಸಾದಿಗಳ । ತಂದೀವನೆನ್ನಯ ಪಿತನು ॥ ೬ ॥

ತಂದ ವಸ್ತುವನೆಲ್ಲ ನಿನಗೀವೆ ಸಂಗಯ್ಯ । ಕಂದಳಿನ್ನಯ ಭಕ್ತಿ ಸಲಿಸು ॥
ಎಂದು ತರಳೆ ಮುಗ್ಧಭಾವದಿಂ ಪೇಳುತ್ತ । ತಂದೆ ನಿತ್ಯವು ತರುವಂಥ ॥ ೭ ॥

ಹಾಲ ಸಲಿಸಿಕೊಂಬೆ ನಾ ತಂದ ಕ್ಷೀರವ । ಕಾಲಹರ ನೀನೊಲ್ಲೆನೆನಲು ॥
ನಾಳೆ ನಮ್ಮಪ್ಪ ಬಂದರೆ ಕೊಂದಪನೆನ್ನ । ಹಾಲೆಲ್ಲ ನೀಕುಡಿದೆಂದು ॥ ೮ ॥

ಸಲಿಸದೆಪೋದರೆ ಪ್ರಾಣವ ನಿನ್ನಲ್ಲಿ । ಕಳೆವೆನು ದೇವ ನಿಶ್ಚಯವು ॥
ಪೇಳುವ ತರಳೆಯ ದೃಢದ ಭಕ್ತಿಗೆ ಮೆಚ್ಚಿ । ಸಲಿಸಿದ ಸಂಗಯ್ಯ ಪಾಲ ॥ ೯ ॥

ಆ ದಿನಗಳೆದದರ ಮರುದಿನ ಹೊತ್ತಾಗೆ । ಆ ದಂಪತಿಗಳ್ಬಂದರಾಗ ॥
ನಂದನೆಯ ನೋಡಿ ಪಾಲೇನಗೈದೆನೆ । ಮೂದೇವರೊಡೆಯಗರ್ಪಿಸಿದೆ ॥ ೧೦ ॥

ಥಟ್ಟನೆಯಾಗಲಾ ಕೊಡಗೂಸಿನ ಮಾತ । ನೆಟ್ಟನೆ ಕೇಳುತಾಪಿತನು ॥
ದೃಷ್ಟದಿಂ ನೋಡುವೆ ಸಟೆಯ ನಿಜವನೀಗ । ಇಷ್ಟದಿಂ ಸಲಿಸುವಬಗೆಯ ॥ ೧೧ ॥

ವಚನ ॥ ಇಂತೆಂದು ತಂದೆ ತಾಯಿ ತಂದಂಥಾ ವಸ್ತುಗಳಂ ಸುತೆಗಿತ್ತು ವಿನಯದಿಂ ಕೇಳಲು, ಅವಳು ಸಹಜವನ್ನೇ ನುಡಿಯುತ್ತಿರೆ ಎಲೆ ತರಳೆ! ಎನ್ನೊಡನೆ ಠಕ್ಕು ಹೇಳುವೆಯ? ಹೊಡೆವೆ ಕಡಿವೆನೆಂದು ಗರ್ಜಿಸಲು, ಆದರೆ ಎನ್ನ ನಿಜಮಂ ನೋಡೆಂದು ಮರುದಿನ ಹಾಲಂ ಕರೆದು ತಟ್ಟೆಯೊಳ್ತುಂಬಿಕೊಂಡು ಪೂಜೋಪಕರಣಂ ಸಹ ಪಿತನಂ ಹಿಂದಿಟ್ಟುಕೊಂಡು ನೋಡುಬಾರೆಂದು ಪರಿತಂದು ಆ ಸಂಗಮದೇವನ ಪೂಜಿಸಿ ಪಾಲಂ ಮುಂದಿಟ್ಟು ಕೊಡಗೂಸು ಏನೆನ್ನುತಿರ್ದಳು.

**ರಾಗ – ಭೈರವಿ. ತಾಳ – ತ್ರಿವುಡೆ.**

ಶರಣು ಶಂಕರ – ಶರಣು ಪುರಹರ ।
ಶರಣು ತ್ರಿಜಗಧೀಶಭವಹರ ।
ಶರಣು ಉಮೆವರ – ಶಂಭು ಸ್ಮರಹರ ।
ಶರಣು ಎನ್ನ ಭಕ್ತಿಕ್ಷೀರ ಸಲಿಸು ಸಂಗಮ ॥ ಪ ॥

ಮಾತನಾಡು ನೀ – ಮದನಸಂಹರ ।
ಮಾತನಾಡು ಮುನಿಸು ಈಗ ಬೇಡವೆನ್ನೊಳು ।
ಮಾತನುಡಿಯೆ ನೀ – ಪಿತನು ಕೊಂದಪ ।
ಮಾತನಾಡಿ ಪಾಲ ಸಲಿಸೈ ಶರಣು ಶಂಕರ ॥ ೧ ॥

ನಿನ್ನೆ ಮೊನ್ನೆ ನೀ – ಪಾಲ ಸಲಿಸಿದೆ ।
ಚೆನ್ನಿದಲ್ಲವೀಗ ನೀನು ಸುಮ್ಮನಿರುವುದು ।
ಎನ್ನ ತಪ್ಪ ನೀ – ನರಸಿನೋಡುತ ।
ಎನ್ನನೀಗ ಕೊಲಿಸಲೇಕೆ ಪಾಲಸಲಿಸುನೀ ॥ ೨ ॥

ಪಿತನು ಇತ್ತನೀ – ವಸ್ತು ತೆಗೆದುಕೊ ।
ಹಿತದಿ ತಪ್ಪ ಮನ್ನಿಸುತಲಿ ಪಾಲಸಲಿಸೆನೆ ।
ಚಿತ್ತಜಾರಿನೀ – ಸಲಿಸದಿರ್ದಡೆ ।
ಮತ್ತೆ ನಿನ್ನ ಚರಣಕೀಗಪ್ರಾಣವಿತ್ತಪೆ ॥ ೩ ॥

ಶಿರವ ತಡಹುತ – ಮುದ್ದುಗೆಯ್ಯುತ
ಸಲಿಸು ಎನ್ನ ಕಾಡಬೇಡವೊ ।
ಪರಮ ಪಾವನ – ತರ ಪುಣ್ಯಕಾಯನೆ ।
ಪರಮಸಂಗದೇವ ಸಲಿಸು ಪಾಲನೆನುತಲಿ ॥ ೪ ॥

ಸುಮ್ಮನಿರಲಿಕೆ – ಲಿಂಗದೇವನು ।
ಗಮ್ಮನಾಗ ಪಿತನು ಬಂದು ಸುತೆಯ ಹೊಡೆಯಲು ।
ಒಮ್ಮೆ ಈಗಲೇ – ತರಿದುಬಿಡುವೆನು ।
ನಮ್ಮ ವ್ರತಕೆ ಕುಂದನೀಗ ತಂದ ಪಾಪಿನೀ ॥ ೫ ॥

ಆಗ ಪಿತನನು – ಸುತೆಯು ನೋಡುತ ।
ಬೇಗ ಹೊಡೆದ ಲಿಂಗಕವಳು ತನ್ನ ಶಿರವನು ।
ಜಾಗಿನಿಂದಲಿ – ಸಂಗಮೇಶನು ।
ಕೂಗಿ ಸುತೆಯ ಪಾಲುಸಹಿತ ಜವದಿ ಅಪ್ಪಲು ॥ ೬ ॥

ಸಂಗಮಯ್ಯನು – ಆಗ ಬೆದರುತ ।
ಲಿಂಗದೊಳಗೆ ಪೋಪಳೆಂದು ಕೇಶ ಪಿಡಿಯಲು ।
ಲಿಂಗ ಬಾಹ್ಯದಿ – ಪಿಡಿದ ಕೇಶವು ।
ಪಿಂಗದಲ್ಲೆ ನಿಂತು ಬಾಲೆ ಐಕ್ಯವಾದಳು ॥ ೭ ॥

ಉರ್ವಿಯರಿಯಲು – ಜನರು ವಿಸ್ಮಯದೊಳು ।
ಸರ್ವರಾಗ ನುತಿಯಿಸಿದರು ಬಾಲೆ ಮಹಿಮೆಯ ।
ಮುಗ್ಧ ಬಾಲೆಯ – ಭಕ್ತಿ ಕಥೆಯನು ।
ಬದ್ಧದಿಂದಲೋದಿ ಕೇಳ್ವ ಸರ್ವಜನರಿಗೆ ॥ ೮ ॥

ಸಿದ್ಧಿಯಿಂದಲಿ – ಶಿವ ಸದ್ಯೋನ್ಮುಕ್ತಿಯ ।
ಮುದ್ದಿಸುತ್ತ ಕೊಡುವನಿದುವೆ ಸತ್ಯ ಸತ್ಯವು ।
ಮುಗ್ಧಭಕ್ತರು – ಬದ್ಧದಿಂದಲಿ ।
ಸಿದ್ಧಿ ಪಡೆದರೆಂದು ಪೇಳ್ದ ಚೆನ್ನಬಸವಗೆ ॥ ೯ ॥

ವಚನ ॥ ಇಂತಿ ಬಸವೇಶನು ಬಾಲಮುಗ್ಧೆಯ ಕಥೆಯಂ ಪೇಳಿ ಮತ್ತೋರ್ವ ಮುಗ್ಧಭಕ್ತೆಯ ಕಥೆಯಂ ಚೆನ್ನಬಸವಗೆ ಪೇಳುವಲ್ಲಿಗೆ ಸಂಧಿ ಸಂಪೂರ್ಣಂ.

ಇಂತಿ ಪದ್ಯಗಳು ೮೭

**ಅಂತು ಸಂಧಿ ೧೬ ಕ್ಕಂ ಸಂಪೂರ್ಣಗಣನೆ – ೪೪೩೭ ಕ್ಕಂ ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ**

## ಹದಿನೇಳನೆಯ ಸಂಧಿ

# ಬಿಜ್ಜ ಮಹಾದೇವಿಯ ಕಥೆ

**ಕಂದಪದ್ಯ.**

ಸೋಮಧರ ಕಾಮಹರ ಪರ ।
ಭೀಮವರದ ರಾಮಾರ್ಚಿತ ಪಾದಾಂಭೋಜಾ ॥
ನಾಮರಹಿತ ರಕ್ಷಿಸು ನೀಂ ।
ಸಾಮಶ್ರುತಿ ಗಾನವಿನೋದ ಚೆನ್ನಮಲ್ಲೇಶಾ ॥ ೧ ॥

**ತ್ರಿವುಡೆ.**

ಕೇಳಿ ಚೆನ್ನಣ್ಣಗಳೆ ಕುಂತಳ । ಮೇಲುದೇಶದಬೋರ್ವ ಶಿವಭಕ್ತೆ ।
ಶೀಲ ಕ್ರಿಯೆಯಲಿ ಮುಗ್ಧೆ ಲೌಕಿಕ – ಸೊಗಸನರಿಯಳ್ ॥ ೧ ॥

ಅವಳ ಪಿತಮಾತೆ ಗಳಿಸಿದರ್ಥವು । ನವಲಕ್ಷವು ಇರಲು ಗೃಹದಲಿ ।
ಶಿವನ ಜಂಗಮಸೇವೆ ನೇಮದಿ – ತೀವಿ ಇಹಳು ॥ ೨ ॥

ಪತಿಯು ಇಲ್ಲವು ಮಾಸಲಿನ ಕನ್ನೆ । ಸತಿಗಳೆಲ್ಲರ ಶಿಶುಗಳಿಚ್ಛೆಯ ।
ಹಿತದಿ ನೇವರಿಸುವಳು ಪರಶಿಶು – ಗಳನು ಸಲಹುವಳು ॥ ೩ ॥

ಒಂದುದಿನ ಶಿವಗಣರ ವಾಕ್ಯದಿ । ತಂದೆ ತಾಯಿಗಳಿಲ್ಲ ಶಿವನಿಗೆ ।
ಇಂದುಮುಖಿಯರು ಈರ್ವರಿರುವರು – ನಂದನರು ಮೂವರ್ ॥ ೪ ॥

ಅಸಮಪ್ರಮಥರು ಬಂಧುವರ್ಗವು । ಬಿಸಜನಾಭನು ಸಖನು ಇರ್ಪನು ।
ಎಸೆವ ಸಮಸ್ತರು ಆಪ್ತಸೇನೆಯು – ಇರ್ದು ಶಿವಗೆ ॥ ೫ ॥

ಆಪ್ತರಿಲ್ಲವು ಶರೀರಸೌಖ್ಯವ । ಹಸನಮಾಳ್ಪವರಿಲ್ಲ ಮಂಡೆಯು ।
ಹೊಸೆದು ಜಡೆಗಟ್ಟಿಹುದು ಬುದ್ಧಿ ಹ – ಸಾದ ಸರ್ವರಲಿ ॥ ೬ ॥

ಖಪ್ಪರವ ತಾ ಪಿಡಿದು ಕೈಯಲಿ । ನೆಪ್ಪನರಿಯದೆ ತಿರಿದು ಉಂಬನು ।
ಸರ್ಪಾಭರಣವು ವ್ಯಾಘ್ರಚರ್ಮವು – ಶರೀರಪೊದಪವಗೆ ॥ ೭ ॥

ಈ ಪರಿಯ ಶಿವಲೀಲೆ ಪೇಳಲು । ಆ ಪರಮ ಮಹಾದೇವಿ ಕೇಳುತ ।
ತಾಪಗೊಂಡಳು ಮನದಭಕ್ತಿಯಾ – ಲಾಪ ಶೋಕದಲಿ ॥ ೮ ॥

ಅಯ್ಯೊ ಎನ್ನಯ ಕಂದ ಪರಶಿವ । ನೋಯಬಹುದೆ ದಿಕ್ಕು ಇಲ್ಲದೆ ।
ಆಯತದಿ ಎನ್ನ ಕಂದನಾದರೆ – ದಯದಿ ಸಲಹುವೆನು ॥ ೯ ॥

ಜಡೆಯ ಹಿಕ್ಕನು ಒಡೆದು ಎಣ್ಣೆಯ । ತಡವಿ ದಿನಚರಿ ನೀರನೆರೆವುತ ।
ಕೊಡುವೆ ಪಾಲ್ ಘೃತ ದಣಿಯುವಂದದಿ – ಮೃಡನು ಸುತನಾಗೆ ॥ ೧೦ ॥

ನಾನು ಸುತನಾಪೇಕ್ಷೆಯಿಂದಿಹೆ । ಮಾನಿನಿಯರನು ನೋಡಿ ಹಿಗ್ಗುವೆ ।
ಜ್ಞಾನಪರಶಿವನೆನ್ನ ಮಗನಾಗ – ಲೆನಗೆ ಎಣೆಯಾರು ॥ ೧೧ ॥

ವಚನ ॥ ಈ ಪ್ರಕಾರ ಹಲುಬುತ್ತ ಬಿಜ್ಜಮಹಾದೇವಿ ಸುತನಪೇಕ್ಷೆಯಿಂದ ಶಿವನಂ ಧ್ಯಾನಿಸುತ್ತಲು, ಶಿವನ ಕಷ್ಟಗಳಿಗೆ ಮನಮರುಕದಿಂದಿರಲಿಕ್ಕೆ ಆ ಪಾರ್ವತೀಪತಿ ಅವಳ ಮುಗ್ಧಭಕ್ತಿಭಾವಕ್ಕೆ ತಾನೇ ಶಿಶುವಾಗಿ ಅವಳ ಮಗ್ಗುಲೋಳ್ ಅವಳರಿಯದಂತೆ ಅಳುತ್ತಿರಲು ಕಂಡಳದೆಂತೆನೆ.

**ಜಂಪೆ.**

ಅಳುವ ಶಿಶುವನು ಕಂಡು । ಅತಿಹರುಷವನು ಪಟ್ಟು ।
ಘಳಿಲನೇ ಮೈದೊಳೆದು । ಅತಿಹರುಷಮಾಗಿ ॥ ೧ ॥

ದಿವ್ಯಾಭರಣವನಿಟ್ಟು । ದಿವ್ಯ ತೊಟ್ಟಿಲ ಹೂಡಿ ।
ನವ್ಯತರ ಪುತ್ರೋತ್ಸವ । ಭವ್ಯ ಮಾಡಿದಳು ॥ ೨ ॥

ಹೇರೂರ ಬೊಮ್ಮನೆನೆ । ಹೆಸರಿಟ್ಟು ಶಿಶುವಿಂಗೆ ।
ಹರುಷಪೂರಿತವಾಗಿ । ಪುತ್ರನನು ಸಲಹಿ ॥ ೩ ॥

ಅರಳೆಲೆಯು ಮಾಗಾಯಿ । ಕೊರಳ ಸರಪಣಿ ತಾಯ್ತ ।
ಬೆರಳ ಉಂಗುರ ಹೊನ್ನ । ಉಡಿದಾರ ವಿಟ್ಟು ॥ ೪ ॥

ಕಾಲಂದುಗೆಯು ಗೆಜ್ಜೆ । ಕನಕಭರಣವನಿಟ್ಟು ।
ಬಾಲಚಂದ್ರನ ಪೋಲ್ವ । ಬಾಲನನು ಸಲಹೆ ॥ ೫ ॥

ದೃಷ್ಟಿಬಟ್ಟನೆ ಇಟ್ಟು । ಕಟ್ಟಾಣಿ ಶಿಶುವನ್ನು ।
ನಿಷ್ಠೆಯಿಂ ಪೂಜಿಪಳು । ನಲಿದು ಭಕ್ತಿಯಲಿ ॥ ೬ ॥

ಮೊಲೆವಾಲು ಬರಲಾಗ । ಮಲಹರಗೆ ಉಣಿಸುವಳು ।
ಜಲಜಮುಖಿ ಪಾಡುವಳು । ನಗಜೆಯರಸನನು ॥ ೭ ॥

ವಚನ ॥ ಈ ಪ್ರಕಾರ ಬಿಜ್ಜಮಹಾದೇವಿ ಮಾಯದ ಶಿಶುವಂ ಸಲಹುತ್ತ ನಿತ್ಯ ದಾನ ಧರ್ಮಂಗಳನಿತ್ತು ಪೋಷಿಸುತ್ತಿರೆ, ಶಿವನೊಂದು ಯಾತನೆಯಿಂದ ಆಕೆಯ ಭಕ್ತಿಯಂ ಕಲಕಿ ನೋಡಲ್ಕೆ ರೋಗವ ಹಣ್ಣಿಸಿಕೊಂಡನದೆಂತೆನೆ.

**ಏಕತಾಳ.**

ಇರುತಿರ್ದ ಶಿಶುವಿಂಗೆ । ಶರೀರವೆಲ್ಲವು ಬರತು ।
ಹರಿಯಿತ್ತು ಹೊಟ್ಟೆಯು । ನಯನವಿಳಿವುತಲಿ ॥ ೧ ॥

ಕೊಡಿಸುವಳೌಷಧಿಯನು । ಕಂದಗೆ ವೆಚ್ಚಗೆಯ್ವಳ್ ।
ಪೊಡವಿಯೊಳಿರುವೆಲ್ಲ । ಪಂಡಿತರ ಕರೆಸಿ ॥ ೨ ॥

ವರಹ ವೆಚ್ಚವಗೈದು । ಹಿರಿದಾಗಿ ಕೊಡಿಸಲು ।
ಹರಿವುದು ಹೊಟ್ಟೆ ಮೇಣ್ । ದುರ್ಗಂಧಮಾಗಿ ॥ ೩ ॥

ಉಣ್ಣಳನ್ನವ ನಿದ್ರೆ । ಕಣ್ಣಿಗೆ ಬಾರದು ।
ಚಿಣ್ಣನಾ ಶಿವನಿಂತು । ಸಟೆವ್ಯಾಧಿ ತೊಟ್ಟ ॥ ೪ ॥

ಅಲ್ಲಿ ಕಷ್ಟವ ಪಟ್ಟ । ಇಲ್ಲಿ ಸುಖಿಯಾಗಲೆಂದು ।
ಒಲಿದು ಪೋಷಿಸಲಿವಗೆ । ಜಲಿಯುವುದು ಹೊಟ್ಟೆ ॥ ೫ ॥

ಕಂದಗೌಷಧಿ ವೆಚ್ಚ । ಒಂದು ಲಕ್ಷದ ದ್ರವ್ಯ ।
ಮುಂದೆ ತೀರಿತು ರೋಗ । ಮಾಣದೀ ಶಿಶುಗೆ ॥ ೬ ॥

ಪ್ರಾಣವೊತ್ತಗಳಾಗೆ । ಮಾಣದು ಶಿಶುವಿಂಗೆ ।
ತ್ರಾಣಗೆಟ್ಟಳು ಭಕ್ತೆ । ಮಾಣದಲೆ ನೋಡಿ ॥ ೭ ॥

ಮಗನೆ ನಿನ್ನೊಳು ನಾನು । ಮರಣ ಹೊಂದುವೆನೆಂದು ।
ತೆಗೆದು ಕತ್ತಿಯನಾಗ । ಒಗೆದಳಾ ಶಿರಕೆ ॥ ೮ ॥

ಇಂದುಧರ ಮೆಚ್ಚುತಾ । ನಂದದಿಂದಲಿ ಅಪ್ಪಿ ।
ನಿಂದು ಪಿಡಿದನು ಅಸಿಯ । ಕುಂದಬೇಡೆಂದು ॥ ೯ ॥

ನಿಜರೂಪ ತೋರುತಲಿ । ಭಜಕ ಭಕ್ತಳೆ ಬೇಡು ।
ನಿಜಪದವನಿತ್ತಪೆನು । ವಿಜಯದಿಂದೀಗ ॥ ೧೦ ॥

ಇಂತೆನಲು ಮಹಾದೇವಿ । ಕಂತುಮರ್ದನ ನೀನು ।
ಸಂತಸವಿರುವಂಥ । ಇಂತು ವರ ನೀಡು ॥ ೧೧ ॥

ಕಂತುಹರನು ಮೆಚ್ಚಿ । ಸಂತಸವನು ಪಟ್ಟು ।
ಇಂಥ ತಾಯಾಗೆ ನನಗೆ । ಚಿಂತೆಯೆಲ್ಲಿಯದು ॥ ೧೨ ॥

ನಿನ್ನಂಥ ತಾಯಿಯು । ನನಗಿರೆ ಶರೀರವು
ಇನ್ನು ಕುಗ್ಗುವುದುಂಟೆ । ಚೆನ್ನೆ ಸುಖಿಯಾಗು ॥ ೧೩ ॥

ಹರ ಚಿರಂಜೀವತ್ವ । ವರಭಕ್ತೆಗಾಶಿರ್ವದಿಸಿ ।
ಹರ ಪೋದ ಕೈಲಾಸಕ್ಕೆ । ವರಗಣರೊಡನೆ ॥ ೧೪ ॥

ವಚನ ॥ ಇಂತೆಂದು ಬಸವೇಶನು ಚೆನ್ನಬಸವಗೆ ನಿರೂಪಿಸಿ, ಮತ್ತೊಬ್ಬ ಮುಗ್ಧಭಕ್ತನ ಕಥೆಯಂ ಪೇಳುತಿರ್ದನದೆಂತೆನೆ.

# ಗೊಲ್ಲಾಳನ ಕಥೆ.

**ದ್ವಿಪದಿ.**

ಕೇಳಯ್ಯ ಚೆನ್ನಣ್ಣ ಕೇಳು ಶಿವಕಥೆಯ ।
ಭಾಳಲೋಚನನಲ್ಲಿ ಭಕ್ತಿಯಂ ಬಲಿದು ॥ ೧ ॥
ಗೊಲ್ಲಾಳನೆಂದೆಂಬ ಘನಪುಣ್ಯವಂತ ।
ಉಲ್ಲಸದಿ ಮುಗ್ಧನವನಿರುವನೊಂದುದಿನದಿ ॥ ೨ ॥
ಸರಿಮಕ್ಕಳೊಡಗೊಂಡು ಕುಲದ ವರ್ತನದಿ ।
ಕುರಿಯ ಕಾಯುತಲೊಂದು ದಿನದಿ ಕಾಡಿನಲಿ ॥ ೩ ॥
ಮಳಲದಿಣ್ಣೆಯ ಮಾಡಿ ಒಂದು ಗಿಡದಡಿಯೋಳ್ ।
ನಲವಿಂದ ಕುರಿಹಿಕ್ಕೆ ನೋಡಿ ತಂದೊಂದ ॥ ೪ ॥
ಇರಿಸಿ ದಿಣ್ಣೆಯೊಳಾಗ ಇದುವೆ ಶಿವನೆಂದು ।
ಕರೆದು ಪಾಲೆರೆವುತ್ತ ಫಲ ಪತ್ರೆಯನ್ನು ॥ ೫ ॥
ತರದು ತಂದದನೆಲ್ಲ ಲಿಂಗವೊತ್ತಿನಲಿ ।
ಇರಿಸಿ ಶೃಂಗರಿಸುತ್ತ ಹರಹರಾ ಎಂದು ॥ ೬ ॥
ಕರಕಟ್ಟಿ ಕುಣಿಯುತ್ತ ಹರನೊಳ್ಮನವೆರಸಿ ।
ಕುರಿಯ ಮೇಗಲ ಆಸೆ ನೀಗಿ ಆ ಗೊಲ್ಲ ॥ ೭ ॥
ಲಿಂಗವೇ ಗತಿಯೆಂದು ಇರಲು ತೋಳಗಳು ।
ಭಂಗಿಸುತ ಕುರಿಪಿಡಿದು ತಿನ್ನುತಿರಲತ್ತ ॥ ೮ ॥
ಇತ್ತ ಕುರಿಗಳ ರಗಳೆ ಬಲು ಹೆಚ್ಚಲಾಗ ।
ಸುತ್ತಿ ಕಾಡನು ಪಿತನು ಹುಡುಕುತ್ತ ಬರಲು ॥ ೯ ॥
ಒಂದು ಮಾತಾಡನು ಓ ಎಂದುನುಡಿಯ ।
ನಿಂದ ಪೂಜೆಯೊಳಲ್ಲಿ ಮನವನೆಲೆಗೊಳಿಸಿ ॥ ೧೦ ॥
ನೋಡುವನು ಲಿಂಗವನು ಕಾಯುತಲಿ ಕುರಿಯ ।
ಕಾಡೊಳಗೆ ಬಿಟ್ಟವನು ಕರೆವ ಪಾಲನ್ನು ॥ ೧೧ ॥
ಕಾಡಪತ್ರೆಯು ಪುಷ್ಪ ಆರಿಸಿಯೆ ಮುದದಿ ।
ಗಾಢದಿಂದಭಿಷೇಕ ಗೆಯ್ವನರ್ಥಿಯಲಿ ॥ ೧೨ ॥
ಲಿಂಗದೆಡೆಯೊಳು ಸುತನು ಕುಣಿಯುವದ ಕಂಡು ।
ಪಿಂಗದಲೆಕಂಡ ಪಿತ ಸುತನಲೀಲೆಯನು ॥ ೧೩

ತನಯನಂ ಬೈಯ್ಯುತಲಿ ಇನಿತಾಟ ನಿನಗಿರ ।
ಲೆನ್ನ ಕುರಿಗಳನೆಲ್ಲ ತೋಳಗರ್ಪಿಸಿದೆ ॥ ೧೪ ॥

ಛೀ ಮದಾಂಧನೆ ಎಂದು ಕೆಡಹಿದನು ಪದದಿ ।
ಸೋಮಧರನನು ಪಿತನೆ ಕೆಡಹಿದೆಯ ನೀನು ॥ ೧೫ ॥

ಈ ಮಹಾಪಾತಕಿಯ ಪಿತನೆನ್ನ ಬಹುದೆ ।
ಪಾಮರನ ಬಿಡಸಲ್ಲದೆಂದು ತಾನಾಗ ॥ ೧೬ ॥

ಶಿವನಿಂದ್ಯೆ ಗೈದವನ ಬಿಡದೊಡನೆ ಹತಿಸ ।
ಲವಗಿಲ್ಲ ಪಾತಕವು ಇದು ಶಾಸ್ತ್ರವಾಕ್ಯ ॥ ೧೭ ॥

ಎಂದು ಮನದೊಳು ಎಣಿಸಿ ಪಿತನ ಕಾಲುಗಳ ।
ನಿಂದು ಕತ್ತಿಯೊಳ್ತರಿದು ಬಿಸುಟನಾಕ್ಷಣದಿ ॥ ೧೮ ॥

ಎಲೆದ್ರೋಹಿ ಕೆಡಹಿದೆಯ ಲಿಂಗ ಪೂಜೆಯನು ।
ಸುಳುಹಿಲ್ಲದಾಗೆನಲು ಮಿಗೆಭಕ್ತಿ ನೋಡಿ ॥ ೧೯ ॥

ಕಳಿಧರನು ಪ್ರತ್ಯಕ್ಷ ಚೆಲುವಿಂದಲಾಗ ।
ಒಲಿದವಗೆ ಮೋಕ್ಷಪದ ನಲವಿಂದಲಿತ್ತ ॥ ೨೦ ॥

ಪಿತ ಮಾತೆಯರ ಕರೆದು ಶಿವಲೋಕಕಾಗ ।
ಪತಿಕರಸಿ ಕರೆದೊಯ್ದ ಪಾರ್ವತೀಪತಿಯು ॥ ೨೧ ॥

ವಚನ ॥ ಈ ಪ್ರಕಾರ ಬಸವಣ್ಣನು ಅಳಿಯ ಚೆನ್ನಬಸವಣ್ಣಂಗೆ ಪೇಳಿ, ಮತ್ತು ಮುಗ್ಧರ ಕಥೆಯಂ ಪೇಳುವಲ್ಲಿಗೆ ಸಂಧಿ ಸಂಪೂರ್ಣಂ.

ಇಂತಿ ಪದ್ಯಗಳು ೫೮

**ಅಂತು ಸಂಧಿ ೧೭ ಕ್ಕಂ ಸಂಪೂರ್ಣಗಣನೆ – ೪೪೯೫ ಕ್ಕಂ ಮಂಗಳಮಹಾ**

**ಶ್ರೀ ಶ್ರೀ ಶ್ರೀ ಶ್ರೀ ಶ್ರೀ**



ಹದಿನೆಂಟನೆಯ ಸಂಧಿ

# ದೀಪದ ಕಲಿಯಾರನ ಕಥೆ

**ಕಂದಪದ್ಯ.**

ಹರಿ ನಯನದಿಂದೆ ಪೂಜಿಸೆ |
ವರಚಕ್ರವಿತ್ತೆ ಹರಿ ಪರನೆನೆ ಶಿರವರಿದ್ವೈ ||
ಹರಿತನಯನ ಯಾಗದಿ ಶಿರ |
ಹರಿಸಿದೆ ಮಲ್ಲೇಶ್ವರ ದುಷ್ಟಶಿಕ್ಷನೆಲೆ ನೀಂ || ೧ ||

**ತ್ರಿವುಡೆ.**

ಕೇಳಿ ಶಿವಭಕ್ತಾಳಿ ಗಣರುಗಳ್ | ಭಾಳಲೋಚನ ಮುಕ್ತಿಕಥೆಗಳ |
ಹೇಳುವೆನು ಸಂಕ್ಷೇಪ ದೀಪದ – ಕಲಿಯ ಭಕ್ತಿಯನು || ೧ ||

ಚೋಳದೇಶದಿ ಕಾಂಚಿಪುರವನು | ಪಾಲಿಸುವ ತಾಂ ನಮ್ರಭಾವದಿ |
ಶೂಲಿಲಾಂಛನಭಕ್ತಿಪೂರಿತ – ತಮಿಳ ಚೌಮಲಿಯು || ೨ ||

ಸತ್ಯನಡೆ ನುಡಿ ವ್ರತವು ನೈಷ್ಠಿಕ | ಚಿತ್ತಜಾರಿಯ ಪೂಜೆಮೂವೇಳೆ |
ಪೃಥ್ವಿಪಾಲನೆಯಿಂದ ಗಳಿಸಿಹ – ಪತ್ತು ಕೋಟಿಯನು || ೩ ||

ಪುತ್ರನೋರ್ವನ ಪಡೆದು ಸಲಹುತ | ಮತ್ತೆ ದೀಪದಕಲಿಯ ನಾಮವ |
ನಿತ್ತು ಸೌಖ್ಯದಿ ಬಾಳುತಿರ್ದನು – ಅಧಿಕವೈಭವದಿ || ೪ ||

ವಿವಾಹಗೈದರು ದೀಪದಕಲಿಗೆ | ಅಮಿತದಿಂದಲಿ ತಂದೆ ತಾಯ್ಗಳು |
ಶಿವನ ನೇಮವು ಶಿವನ ಪೂಜೆಯೊ – ಳಮಿತವಿಹನು || ೫ ||

ಮುಗ್ಧಭಾವನು ಏನನರಿಯನು | ಮುಗ್ಧೆಯಾತನ ಸತಿಯು ಲೌಕಿಕ |
ದುಗ್ಧವರ್ತನೆಯರಿಯದಿರ್ದರು – ಸತಿ ಪತಿಗಳವರು || ೬ ||

ಕೆಲವುದಿನ ಸುಖಮಿರ್ದು ದೀಪದ | ಕಲಿಯ ಮಾತಾಪಿತರು ಹರಪುರಿ |
ನಿಲಯಕೈದಲು ಇತ್ತ ಸುಖಮಿರು – ತಿರಲು ಕಲಿಯು || ೭ ||

ವೆಚ್ಚವಾದಾಯಗಳನರಿಯನು | ನೆಚ್ಚಿ ಲಿಂಗವ ಪೂಜೆಮಾಳ್ಪನು |
ರಚ್ಚೆನರರಿಗೆ ಹುಚ್ಚನಾಗಿಯೆ – ತೋರುತಿಹನು || ೮ ||

ರೂಪ್ಯ ಕೊಡುವಳಿ ಕೇಳದಾದನು | ದ್ರವ್ಯವನು ಪಾತಕರು ನುಂಗಲು |
ಯಾವುದೆಂಬುದ ಹೊಲಬನರಿಯನು – ಭಕ್ತಕಲಿಯು || ೯ ||

ವಚನ || ಈ ಪ್ರಕಾರ ಇರುವಂಥವನಿಗೆ ಆಪ್ತರಾದವರು ಏನಯ್ಯ! ಈ ಪ್ರಕಾರ ನೀನಿರ್ದಡೆ ದ್ರವ್ಯವು ಲಯವಾದಪುದು ದ್ವೀಪಾಂತರದ ವ್ಯಾಪಾರಕ್ಕೆ ಪೋಗುವ ಬಾರೆಂದು ಕರೆಯಲು, ಅನಿತಾಗಲೆಂದು ಒಪ್ಪಿ ದ್ರವ್ಯವಂ ತೆಗೆದುಕೊಂಡು ಧನಕ್ಕೆ ತಕ್ಕ ಪಟುಭಟರಂ ತೆರಳಿಸಿಕೊಂಡು ಪೋಗುವಲ್ಲಿ, ಒಂದಾನೊಂದು ಮಲೆಯ ಪ್ರಾಂತ್ಯಮಾರ್ಗದಲ್ಲಿ ಬರತ್ತಿರಲು ಎಂತಿರ್ದುದೆಂತೆನೆ.

**ಏಕತಾಳ.**

ಆ ಗಿರಿಯ ತಪ್ಪಲಲ್ಲಿ | ಅತಿಪಿರಿಯ ವ್ಯಾಘ್ರನೊಂದು |
ಬೇಗದಿಂದಿವರ ಕಂಡು | ಬಂದಿತು ಭರದಿ || ೧ ||

ಗರ್ಜಿಸಿ ಪೊದರಿನಿಂ | ಘುಡಿಘುಡಿಸುತ್ತ ಬರಲು |
ಜರ್ಜರಿತರಾಗಲಿವರು | ನಿಂದಿತ್ತು ವ್ಯಾಘ್ರ || ೨ ||

ಮಂದಿ ಮಾರ್ಬಲವೆಲ್ಲ | ನೊಂದು ಕುಂದುತಲಾಗ |
ಒಂದೊಂದು ದೆಸೆಗತ್ತ | ಓಡಿದರೆಲ್ಲ || ೩ ||

ದೀಪದಕಲಿಯಾಗ | ಕಾಪಾಲಿಗುಡಿಯ ಕಂಡು |
ದಾಪಿಡುತಲಿ ಬಂದು | ಗೋಪುರದಿ ನಿಂದು || ೪ ||

ಎನ್ನ ಕಾಯದಿ ಭೀತಿ | ಇನ್ನುಂಟೆ ನನಗೆಂದು |
ನನ್ನಿಯಂ ಲಿಂಗಗುಡಿ | ಯನ್ನು ತಾ ನೋಡಿ || ೫ ||

ಏಕಯ್ಯ ಲಿಂಗೇಶ | ಈ ಕಾನನದಿ ಪಾಳು |
ತೂತಿನ ಗುಡಿಯೊಳಗೆ | ಏತಕಿಲ್ಲಿರುವೆ || ೬ ||

ಭಸ್ಮಾಸುರನಿಗಂಜಿ | ಬಂದೆಯೊ ಲಿಂಗಯ್ಯ |
ಮಸಣ ಕಾಯಲು ಬೇಸ | ರವಗೊಂಡು ಇಹೆಯೊ || ೭ ||

ಕನಕ ಮಣಿಮಯವಾದ | ಘನಸಿಂಹಾಸನವಿರಲು |
ಮನಸಿಜಾಂತಕ ಇಲ್ಲಿ | ಮರೆಯೊಳಿಹುದೇನು || ೮ ||

ಪುತ್ರರ ಸಲಹಲು | ಮತ್ತೆ ಸಾಕಾಗಿ ನೀನು |
ಮೊತ್ತಗಣರನುಳಿದು | ಇತ್ತಲೈದಿದೆಯ || ೯ ||

ಸತಿಯರೀರ್ವರ ಕಲಹ | ಮಿತಿಯ ತಾಳದಲೆ ನೀನು |
ಖತಿಯಿಂದ ಅವಿತಿಹೆಯ | ಕಂತುಹರ ಶಿವನೆ || ೧೦ ||

ಭಕ್ತರಿಷ್ಟಾರ್ಥಗಳ | ಮತ್ತೀವ ಬೇಸರಕೆ |
ಅರ್ಥವಿಲ್ಲದೆ ಇಹೆಯ | ಕರ್ತ ಪೇಳಯ್ಯ || ೧೧ ||

ಶಿರಮಾಸಿ ಶರೀರವು । ಬರತು ಬೆಂಡಾಗಿಹೆ ನೀ ।
ಹರ ಎಷ್ಟು ದಿನವಾಯ್ತು । ಸುರಸವನು ಸವಿದು ॥ ೧೨ ॥

ಆವ ಕಷ್ಟವು ನಿನಗೆ । ಆವ ಭಯವು ಪೇಳು ।
ಈವೆ ನೀ ಬೇಡಿದುದ । ಎನ್ನೊಡನುಸುರು ॥ ೧೩ ॥

ಪೊದೆವುದಕೆ ಮೇಲ್ವಸ್ತ್ರ । ಮುದದಿ ಪೊದಿಸುವೆ ನಿನಗೆ ।
ಸದಮಳ ಲಿಂಗಯ್ಯ । ಸದನಕ್ಕೇಳಯ್ಯ ॥ ೧೪ ॥

ವಚನ ॥ ಈ ಪ್ರಕಾರ ಪ್ರೀತಿವಚನದಿಂ ಬಳಲುವ ಮುಗ್ಧಭಕ್ತನಂ ಕಂಡು ಆಪ್ತರು ಏನೆನ್ನುತಿರ್ದರು.

**ಸೀಸಪದ್ಯ.**

ಬಾರಯ್ಯ ಹೋಗುವ ಕಲಿಯಾರ್ಯ ನಾವು ।
ಭಾರಿದ್ರವ್ಯವ ತಂದು ಘೋರಡವಿಯೊಳಗೆ ॥ ೧ ॥

ಜನಪಾಲು ತಾನಾಯ್ತು ಘನದ್ರವ್ಯವೆಲ್ಲ ।
ವನಮೃಗ ಚೋರರಿರುತಿಹರು ಇರಸಲ್ಲದಿಲ್ಲಿ ॥ ೨ ॥

ಪಾಳದೇಗುಲ ಕಲ್ಲ ಗೊಡವೆಬೇಡಿಲ್ಲಿ ।
ಏಳಯ್ಯ ಮರುಳಾಟವೇಕೆ ಬಾರಯ್ಯ ॥ ೩ ॥

ಕ್ಷಣಿಕದಿ ಜರಿದವನ ಕರೆಯಲಾಪ್ತಿಗರು ।
ಬಣಗರಿಗೆ ತಾನೆಂದ ದೀಪದಕಲಿಯು ॥ ೪ ॥

ವಚನ ॥ ಇಂತೆಂದ ತನ್ನ ಸ್ನೇಹಿತರಿಗೆ ಏನೆನ್ನುತಿರ್ದನು.

**ಏಕತಾಳ-**

ಎಲೆ ನಿಷ್ಠುರಾತ್ಮಕರೆ । ಹೀಗೆಂಬಿರಾ ಎನ್ನ ।
ಸಲಹುವ ಲಿಂಗೇಶ । ಅಗಜೇಶ್ವರನನು ॥ ೧ ॥

ಅಂಗ ಪೋಷಕರ್ನೀವು । ಲಿಂಗಾತ್ಮಕನು ನಾನು ।
ಭಂಗಬಟ್ಟಿರುವ ಶಿವನ । ಸಂಗ ಬಿಡಲಾರೆ ॥ ೨ ॥

ಗಿಡ ಮರ ಲತೆಗಳ । ಕರಿ ಮೃಗ ಇರುವೆಗಳ ।
ಕಡಲ ಜಂತುಗಳ ಮೃಡ । ಬಿಡದೆ ಸಲಹುವನು ॥ ೩ ॥

ಅತಿ ಕಷ್ಟಪಟ್ಟು ಬಂದು । ವನದೊಳಗಿರುತಿಹ ।
ಪತಿಕರಿಸದೆ ಬಿಟ್ಟು । ನುಸುಳುವನಲ್ಲ ॥ ೪ ॥

ಲಿಂಗವ ನೋಡುತ್ತ । ಲಿಂಗದಬಳಿ ನಿಂದು ।
ಲಿಂಗವನಾಶ್ರಯಿಸಿ । ಸಂಗಬಿಡದಿಹನು ॥ ೫ ॥

ಪೂಜದನು ಸ್ಮರಿಸುತ್ತ । ಪಾಡುತ್ತ ಕುಣಿಯುತ್ತ ।
ರಾಜೋಪಚಾರವಿತ್ತು । ಆಪ್ತಜನರೊಡನೆ ॥ ೬ ॥

ದೇವ ಬಡವಾದನೆಂದು । ಭಾವಿಸಿ ಭಕ್ತಿಯಿಂ ।
ಧಾವತಿಯಿಂದ ಕುಂದಿ । ಶಿವನ ಬೇಡಿದನು ॥ ೭ ॥

ಬದುಕು ದ್ರವ್ಯದ ಚಿಂತೆ । ಸದನ ಸತಿಯಳ ವ್ಯಸನ ।
ಪದುಳದಿಂ ಕಳೆದನು । ದೀಪದಕಲಿಯು ॥ ೮ ॥

ಅಲ್ಲಿ ದೇಗುಲದಲ್ಲಿ । ಬಲ್ಲಿದ ನಿರುತಲಿ ।
ವಲ್ಲಭೆಗೆ ತಿಳುಹಿಸಿ । ದ್ರವ್ಯ ತರಿಸಿದನು ॥ ೯ ॥

ಸತಿ ಹಿತದೊಳು ಬಂದು । ಪತಿಯ ಕಾಣುತಲಾಗ ।
ಜೊತೆಯಲ್ಲಿ ನಿಂದು ಲಿಂಗ । ಹಿತದಿ ಪೂಜಿಪಳು ॥ ೧೦ ॥

ವಚನ ॥ ಈ ಪ್ರಕಾರದಲ್ಲಿ ಸತಿ ಪತಿಗಳು ಅತಿಭಕ್ತಿಯಿಂದ ಲಿಂಗಮಂ ಪೂಜಿಸುತ್ತ, ನವನೂತನವಾದಂಥ ದೇವಾಲಯಮಂ ಕಟ್ಟಿಸಿ ಏಳುಸುತ್ತಿನ ಪ್ರಾಕಾರಮಂಗೆಯ್ದು ಪಟುಭಟವಾರ್ಬಲಮಂ ಜೊತೆಗೆಯ್ದು ಪಟ್ಟಣಮಂಕಟ್ಟಿಸಿ, ಲಿಂಗಪುರವೆಂದು ನಾಮವನಿಟ್ಟು ಸರ್ವಜನರಂ ತುಂಬಿಸಿ ಕೆಲವು ದಿನವಿರ್ದ ಬಳಿಕ ಶಿವನೆಂತು ಗೈದನದೆಂತೆನೆ.

**ಸಾಂಗತ್ಯ.**

ಇವರ ಮುಗ್ಧಭಕ್ತಿ ದೃಢವನೋಡುವೆನೆಂದು । ಹರನೊಂದು ಲೀಲೆಯಂಗೈದ ॥
ಭರದಿ ಪಟ್ಟಣವನ್ನು ಬಯಲನ್ನೆ ಮಾಡಲು । ಹರನಭಕ್ತಿಯೊಳಿರ್ದ ಕಲಿಯು ॥ ೧ ॥

ಈ ಶಿವಭಕ್ತನ ನೆರೆನಂಬಿದವರೆಲ್ಲ । ಘಾಸಿಯಾಗುತ ತೆರಳಿದರು ॥
ಲೇಸಾದ ಪುರವೆಲ್ಲ ಮೋಸದ ಚೋರರು । ನಾಶವಗೊಳಿಸಿದರಾಗ ॥ ೨ ॥

ದೀಪದಕಲಿ ಮುನ್ನ ಧನ ಧಾನ್ಯಗಳನೆಲ್ಲ । ಗೋಪುರ ಗುಡಿಗೆ ವ್ಯಯಗೈದ ॥
ಕಾಪುಗಾರರು ಬಿಟ್ಟು ಪೋದರು ಅವರೆಲ್ಲ । ರಾಪಾಗಿ ಮನಬಂದಕಡೆಗೆ ॥ ೩ ॥

ಸುರಪತಿವೈಭವಕಿಮ್ಮಡಿಯೆನಿಸುವ । ಪರಮಸಂಪದ ಭೋಗವೆಲ್ಲ ॥
ಹರಿಯಿತು ಒಂದೊಂದು ಬಯಲಾಗಿ ಬಡವಾದ । ವರ ಭಕ್ತದೀಪದಕಲಿಯು ॥ ೪ ॥

ಪೋದುದ ಬಂದುದನರಿಯನು ಶಿವಲಿಂಗ । ಪಾದಪೂಜೆಯೊಳ್ಮನವೆರೆದು ॥
ಸಾದರದಿಂದ ಖಡ್ಗವಬಿಚ್ಚಿ ಪಿಡಿಕೊಂಡು । ಹಾದಿ ವೀದಿಯ ಕಾಯ್ವನವನು ॥ ೫ ॥

ಚೋರರು ಬಂದೆಮ್ಮ ಮಾರಾರಿಲಿಂಗವ । ಸೂರೆಮಾಡದೆ ಬಿಡರೆಂದು ॥
ಪುರುಷ ಸತಿಯು ಏಕಭಾವದಿ ಲಿಂಗವ । ನರಸಿ ಕಾದಿಹರ್ ದಿವರಾತ್ರಿ ॥ ೬ ॥

ಸಕಲದ್ರವ್ಯಗಳೆಲ್ಲ ದೀಪದ ತೈಲಕ್ಕೆ । ಚಕಿತದಿ ವ್ರಯವಾಗಲೆಲ್ಲ ॥
ಅಖಿಳವಸ್ತುವನಿತ್ತು ಸುಖವಮಾಡುತಿರ್ದನು । ಅಕಟಕಟಯ್ಯಯ್ಯೊ ಎಂದು ॥ ೭ ॥

ತನ್ನಯ ಜಡೆಯನ್ನು ತೈಲದೊಳಗೆ ಅದ್ದಿ । ಉನ್ನತ ಪಂಜನ್ನು ಮಾಡಿ ॥
ಭಿನ್ನವಿಲ್ಲದೆ ನಂಬಿ ಹತ್ತಿಸಿ ಜಡೆಯನ್ನು । ಪನ್ನಗಧರನ ಕಾಯುತಿರೆ ॥ ೮ ॥

ಜಡೆಯೆಲ್ಲ ಬೆಂದು ಮಸ್ತಕವುರಿ ಹತ್ತಲು । ಒಡಲಾಸೆಯವಗಿಲ್ಲದಿರಲು ॥
ಕಡುಭಕ್ತಿಗೊಲಿದು ದೀಪದಕಲಿಯಾರ್ಯಗೆ । ಮಿಡುಕುತ ಹರನಾಗ ಮೆಚ್ಚಿ ॥ ೯ ॥

ಲಿಂಗದೊಳಗೆ ತನ್ನ ನಿಜರೂಪ ತೋರುತ್ತ । ಅಂಗವಿಸಿ ವರಭಕ್ತನನಪ್ಪಿ ॥
ಲಿಂಗಸುಖದಲೆನ್ನ ಆಪ್ತಿಗನಹುದೆಂದು । ಅಂಗಜವೈರಿ ತಾನಾಗ ॥ ೧೦ ॥

ಮೆಚ್ಚಿದೆನೆಲೆ ಭಕ್ತ ನಿನ್ನಯ ಮನಕೀಗ । ಇಚ್ಛೆಯ ವರಗಳ ಕೊಡುವೆ ॥
ನಿಚ್ಚಳದಿಂ ಬೇಡು ಎನಲಾಗ ಭಕ್ತನು । ಸಚ್ಚಿದಾನಂದಗೆ ಮಣಿದು ॥ ೧೧ ॥

ನನ್ನಿಚ್ಛೆ ವರವಾವುದೆಂದಡೆ ಗಿರಿಜೇಶ । ಸನ್ನುತ ಸತಿಯನೆನ್ನನ್ನು ॥
ನಿನ್ನ ಪಾದದಬಳಿ ವರಸೇವೆಗಿರಿಸೆನ್ನ । ಪನ್ನಗಧರಮೂರ್ತಿ ದೇವ ॥ ೧೨ ॥

ವಚನ ॥ ಈ ಪ್ರಕಾರವಾಗಿ ಬೇಡಿಕೊಂಡ ಮುಗ್ಧಭಕ್ತನಂ ಸಂತೈಸಿ, ಪುಷ್ಪರಥವಂ ಬರಮಾಡಿ ಸತಿ ಪತಿಗಳಿಂಬಿಟ್ಟು ಕರೆದೊಯ್ದು ಗಣಪದವನಿತ್ತು ಸಕಲ ಗಣಸಮೂಹದೊಡನೆ ಒಡ್ಡೋಲಗಂಗೊಟ್ಟು ದೇವನುಪಚಾರವಂಕೈಕೊಳ್ಳುತ್ತ, ಸಕಲ ಲೋಕಮಂ ಪಾಲನೆಗೈಯುತ್ತ ಸಂಗಮೇಶನು ಸದ್ಭಕ್ತವತ್ಸಲನಾಗಿಹನೆಂದು ಬಸವನು ಚೆನ್ನಬಸವಗೆ ಪೇಳಿ ಮುಂದಿನ ಕಥೆಯಂ ಪೇಳುವಲ್ಲಿಗೆ ಸಂಧಿ ಸಂಪೂರ್ಣಂ.

ಇಂತಿ ಪದ್ಯಗಳು ೫೫

**ಅಂತು ಸಂಧಿ ೧೮ ಕ್ಕಂ ಸಂಪೂರ್ಣಗಣನೆ – ೪೫೫೦ ಕ್ಕಂ ಮಂಗಳಮಹಾ**

**ಶ್ರೀ ಶ್ರೀ ಶ್ರೀ ಶ್ರೀ ಶ್ರೀ**



## ಹತ್ತೊಂಬತ್ತನೆಯ ಸಂಧಿ

# ನಾಟ್ಯನಮಿತ್ತಂಡಿಯ ಕಥೆ

**ಕಂದಪದ್ಯ.**

ನಂದಿಯವಾಹನ ಗಣರಾ ।
ನಂದನೆ ಚಂದಿರಧರ ಗೌರೀವರ ಮಹಿಮಾ ॥
ಕುಂದದೆ ಸುಮತಿಯನೀಯುತ ।
ತಂದೆ ದಯವಾಗು ಶರಣರ ಚರಿತೆಯ ರಚಿಸಲ್ ॥ ೧ ॥

**ದ್ವಿಪದಿ.**

ಧರೆಯೊಳಗೆ ಮಿಗಿಲಾದ ಕಾಂಚಿಪಟ್ಟಣದಿ ।
ಹರನಸೇವಕ ನಾಟ್ಯನಮಿತ್ತಂಡಿ ಇಹನು ॥ ೧ ॥

ಆತನೊಂದುದಿನ ಏಕಾಮ್ರನಾಥನಿಲಯಕ್ಕೆ ।
ಪ್ರೀತಿಯಿಂದಲಿ ಪೋಗಿ ತಾಂಡವೇಶ್ವರನ ॥ ೨ ॥

ನೋಡಿ ಮನದಲಿ ಬಹು ಚಿಂತೆಯನು ತಾಳಿ ।
ಗಾಢಕಳವಳಿಸುತ್ತ ಅರ್ಚಕ್ವಾರ್ವನನು ॥ ೩ ॥

ನೋಡಿ ಕೇಳಿದನಾಗ ಈ ಶಿವನ ಕಾಯ ।
ಪಾಡೇನು ಮೂರುಕಡೆ ಡೊಂಕಾಗಿ ಇಹನು ॥ ೪ ॥

ಸೊಂಟವೊರಗುತ ಮುಖವು ಬಾಡಿ ಬತ್ತಿಹುದು ।
ಮಂಟೆ ಶಿರ ನುಲಿದೊಂದು ಚರಣ ಮೇಲಕ್ಕೆ ॥ ೫ ॥

ಎದ್ದು ಭೂಮಿಯ ಮೇಲೆ ಬಿದ್ದಿರುವುದೊಂದು ।
ಮುದ್ದುಹಸ್ತಗಳೆಲ್ಲ ಡೊಂಕುತಾಳುತಲಿ ॥ ೬ ॥

ಒಂದೊಂದು ಕಡೆಗೆಲ್ಲ ಚಾಚಿಕೊಂಡಿಹವು ।
ಅಂದವಾದಾಲಿಗಳು ಜೋಲಿಳಿದು ಬಿದ್ದು ॥ ೭ ॥

ಶಿಖಿಗಳೆಲ್ಲವು ಕೆದರಿ ಅಂದಗೆಟ್ಟಿಹನು ।
ಸುಖವಳಿವ ರೋಗವಿದು ಬಂದಿಹುದು ಎಂದು ॥ ೮ ॥

ದಯವಿಟ್ಟು ಪೇಳಯ್ಯ ಹರನ ಅರ್ಚಕನೆ ।
ನಯಗಾರ ನೀನಹುದು ಶಿವನನುವ ಪೇಳು ॥ ೯ ॥

ಅರ್ಚಕಸ್ವಾರ್ವನು ಇವನಮುಗ್ಧಭಾವವನು ।
ಅಚ್ಚಿಗದಿತಿಳಿದಾಗ ವಂಚಿಸುತ ಪೇಳ್ದ ॥ ೧೦ ॥

ಗಿರಿಜೆ ವರನಿಗೆ ವಾಯುರೋಗವದರಿಂದ ।
ಶರೀರ ನರಗಳು ಸೆಳೆದು ಬಾಗಿಹನು ಎಂದ ॥ ೧೧ ॥

**ಜಂಪೆ.**

ಹರಭಕ್ತ ವರ ನಾಟ್ಯ । ನಮಿತ್ತಂಡಿಯಿದ ಕೇಳಿ ।
ಜರಿದು ಬೆದರುತ ಎದೆಯ । ಹಮ್ಮಾದಾರುತಲಿ ॥ ೧ ॥

ಹರಗೆ ಈ ವ್ಯಾಧಿಯನು । ಪರಿಹರಿಪ ಪಂಡಿತನು ।
ಇರಲು ಅವನೆಡೆಯನ್ನು । ಭರದಿ ಪೇಳೆನಲು ॥ ೨ ॥

ಆಗಲಾ ಪೂಜಾರಿ । ವಂಚಿಸುತಲಿವನಿಗಂ ।
ಈಗ ಗುಣವನು ನಾನೆ । ಮಾಡುವೆನು ಭಕ್ತ ॥ ೩ ॥

ಎಂದ ಮಾತಿಗೆ ಆಗ । ನಿಂದು ಮುಗ್ಧನು ಬೇಗ ।
ತಂದೆಯಾಸ್ತಿಯನೆಲ್ಲ । ತಂದು ನಿನಗೀವೆ ॥ ೪ ॥

ಮುಂದೆಂದು ಈ ರೋಗ । ಬಂದು ಕಾಡದ ಹಾಗೆ ।
ಒಂದೆ ಮನವನುಮಾಡಿ । ತಂದೆಗೌಷಧಿಯ ॥ ೫ ॥

ಇಂದು ಕೊಟ್ಟರೆ ಎನ್ನ । ಸತಿ ಸುತರು ಸಹವಾಗಿ ।
ಬಂದು ನಿನ್ನಯ ಸೇವೆ । ಕುಂದದಲೆ ಮಾಳ್ಪೊ ॥ ೬ ॥

ನೀನು ಔಷಧಿಯನ್ನು । ಕೊಟ್ಟು ಗುಣಮಾಡೆನುತ ।
ಹೀನಹಾರ್ವಗೆ ಪೇಳಿ । ಒಪ್ಪಿಸುತ ಪೋದ ॥ ೭ ॥

ಮನೆಗಾಗ ಬಂದವನು । ಸರ್ವ ಸ್ವಾಸ್ತಿಯನೆಲ್ಲ ।
ತೃಣವುಳಿಯದಂದದಲಿ । ವಿಕ್ರಯಿಸಿ ಕೊಟ್ಟ ॥ ೮ ॥

ವಿಪ್ರ ದ್ರವ್ಯವನೆಲ್ಲ । ಸುಪ್ರಾಪ್ತಧನಂತೆದ್ದು ।
ಸಪ್ರಮಾಣದಿ ಕೊಂಡ । ಅಪ್ರತಿಮಧನವ ॥ ೯ ॥

ಯಾರರಿಯದಂದದಲಿ । ಓರ್ವನೇ ತಾನಾಗ ।
ಊರಹೊರಗಡೆ ಬಂದು । ಅಂತರ್ವ್ಯಸ್ಥಲದಿ ॥ ೧೦ ॥

ಕಕ್ಕೆ ಕಾರೆಲೆ ಹರಳು । ಲೆಕ್ಕವಿಲ್ಲದ ಚಿಗುರ ।
ಮಿಕ್ಕು ಮಾರುತ ತಂದು । ಗಕ್ಕನೆಲ್ಲವನು ॥ ೧೧ ॥

ಬಡಿದ್ದಿಡಿದು ಪುಡಿಮಾಡಿ । ಕಡಲೆಯೆಣ್ಣೆ ಯೊಳಾಗ ।
ಗುಡುಗುಡನೆ ಕುದಿಸಿದನು । ನಡುವಾಯುತೈಲ ॥ ೧೨ ॥

ಬಣ್ಣಗಳ ಸೀಷಕದ । ತಣ್ಣಗೆಲ್ಲವ ತುಂಬಿ ।
ಚಿಣ್ಣನಂದದಿ ಬೆರಣಿ । ಸಣ್ಣಪುಟವಿಟ್ಟ ॥ ೧೩ ॥

ಸಕಲ ಭಸ್ಮಗಳೆಂದು । ಹಿಸುಕಿ ಧೂಳಿಯಮಾಡಿ ।
ಬಕಬಕನೆ ತುಂಬಿದನು । ಭರಣಿಯೊಳಗದನು ॥ ೧೪ ॥

ದೇವನಿಲಯಕೆ ಬಂದು । ಮಹಪಂಡಿತನ ತೆರದಿ ।
ದೇವನಿಗೆ ಲೇಪಿಸಿದ । ಕೀಲುಗಳಿಗೆಣ್ಣೆ ॥ ೧೫ ॥

ಸೊಪ್ಪು ಪೊಟ್ಟಣಕಟ್ಟಿ । ಕಾಯಿಸುತ ಬ್ರಾಹ್ಮಣನು ।
ಕಪ್ಪುಗೊರಲಗೆ ಕೊಟ್ಟ । ವಾತರೋಗಕ್ಕೆ ॥ ೧೬ ॥

ನಿಂತು ನೋಡಿ ನಾಟ್ಯನ । ಮಿತ್ತಂಡಿಯಿದನೆಲ್ಲ ।
ಕಂತುಹರ ಕಾಲೂರು । ಪಂಥಬೇಡೆನುವ ॥ ೧೭ ॥

ಶೀತವಾತವ ನಾಶ । ಮಾಡುವದು ಮೂಲಿಕೆಯು ।
ಜಾತ ನೋಡೆನುತಾಗ । ಕಾಯಿಸುತ ಕಷಾಯ ॥ ೧೮ ॥

ಕುಡಿಯಿಸುವೆನೆಂದೆನುತ । ಮೃಡನ ಶಿಖಿ ಹಿಂದಕ್ಕೆ ।
ಬಿಡುವ ಸೊಪ್ಪಿನ ನೀರ । ಕಡುತವಕದಿಂದ ॥ ೧೯ ॥

ವಚನ ॥ ಈ ಪ್ರಕಾರ ಅನೇಕ ದಿವಸಗಳವರೆವಿಗೂ ಪ್ರೌಢಚಿಕಿತ್ಸಕನಂತೆ ಕಾಲ ಕಳೆಯುತ್ತಿರೆ, ಹರನ ಶರೀರ ಮೊದಲಿದ್ದಂತೆಯೇ ಇರಲು ನಾಟ್ಯ ನಮಿತ್ತಂಡಿ ನೋಡಿನೋಡಿ ಬಳಲಿ ಖಿನ್ನತೆಹೊಂದಿ ಎಲೈ ವಿಪ್ರನೆ !! ನಿನ್ನ ಔಷಧದಿಂದ ಸ್ವಲ್ಪ ವಾದರೂ ಗುಣಬಾರದಿರುವ ಕಾರಣವೇನು ? ಎಂದು ಕೇಳಲು, ಇದು ಸೀತವಾತದ ರೋಗ ಇದಕ್ಕೆ ಭಸ್ಮಗಳ ಮಾಡಿಕೊಡಬೇಕು. ನೀಕೊಟ್ಟ ದ್ರವ್ಯಗಳೆಲ್ಲ ಮೂಲಿಕೆ ಗಳಿಗೆ ವೆಚ್ಚವಾದವು. ಇನ್ನು ಔಷಧಮಾಡಿಸುವುದಾದರೆ ? ಖರ್ಚಂಕೊಡು ಮಾಡುವೆ ನೆನಲು, ಅಯ್ಯ ! ಸರ್ವಸ್ವವನ್ನೂ ತಂದಿತ್ತು ನಿನ್ನ ಸೇವಕರಾದ ನಮಗೆ ಧನವೆಲ್ಲಿ ಹುದು ? ದಯವಿಟ್ಟು ಚಿಕಿತ್ಸೆಮಾಡಬೇಕೆನ್ನಲು, ಸತಿ ಸುತರ್ನೀವುಗಳು ಕೂಲಿಮಾಡಿ ಯಾದರೂ ಔಷಧಿ ಖರ್ಚಂ ಕೊಟ್ಟರ ಉಚಿತ ಚಿಕಿತ್ಸೆಮಾಡುವೆನೆಂದುದಕ್ಕಂ ಸತಿ ಸುತರ್ಮ್ಮವರೂ ಕೂಲಿಮಾಡಿ ಧನವಂ ಕೊಡಲು ಮತ್ತೆಂತು ಗೈದನದೆಂತೆನೆ.

**ಏಕತಾಳ.**

ದಿನಮೂರುಗಳೆವುತ್ತ । ಸದನದೊಳಿರುವಂಥ ।
ದನಹಿಕ್ಕೆ ಭಸ್ಮವ । ಅನುವಿಂದ ತಂದು ॥ ೧ ॥

ವರನಟೇಶ್ವರನಿಗೆ । ಉದರಕ್ಕೆ ಭಸ್ಮವ ।
ಭರದಿ ಕೊಡುವೆ ನೋಡು । ವರ ಭಕ್ತ ನೀನು ॥ ೨ ॥

ಎಂದು ಅರ್ಚಕ ಭಕ್ತ । ನೊಂದುಗೂಡುತ ಬಂದ ।
ನಿಂದ ಭಕ್ತನು ಮಧ್ಯ । ಅಂಕಣದಲ್ಲಿ ॥ ೩ ॥

ಪಾರ್ವನು ಗರ್ಭಗೃಹಕೆ । ಪೋಗಿ ನಟೇಶ್ವರನ ।
ಪಾರ್ಶ್ವ ಕೆಳಗಿನ ತುಟಿಗೆ । ತೀಡಿದ ಭಸ್ಮ ॥ ೪ ॥

ನಾಟ್ಯನಮಿತ್ತಂಡಿ । ಮಿಾಟಿ ಮನವನಲ್ಲಿ ।
ಕೂಟ ಚರಣವನ್ನು । ಸಾಟಿ ನೋಡುವನು ॥ ೫ ॥

ಕೆಲವಾರು ದಿನತನಕ । ನಲವಿಂದ ನೋಡಿದ ।
ತಳಗಡೆ ಹರ ಚರ । ಣವನೂರಲಿಲ್ಲ ॥ ೬ ॥

ಏಸಿದಾಶ್ಚರ್ಯವಯ್ಯ । ಏನ ಮಾಡಲು ಇವಗೆ ।
ಮಾಣದು ರೋಗವು । ಜಾಣ ಪೇಳೆಂದು ॥ ೭ ॥

ಕೇಳಯ್ಯ ವರ ಭಕ್ತ । ಹಳೆಯ ರೋಗವು ಇದ ।
ರೊಳಿಗ ವೈದ್ಯರ್ಗ । ಪೇಳಲಸಾಧ್ಯ ॥ ೮ ॥

ಕೇಳಿದಾಗಲೇ ಭಕ್ತ । ಅಯ್ಯಯ್ಯೋ ಶಿವ ಎಂದು ।
ತಾಳುತ ಮೂರ್ಛೆಯ । ಏಳುತಲಾಗ ॥ ೯ ॥

ಬಲು ವ್ಯಸನವ ಪಟ್ಟು । ದುರುಳರೋಗವು ಬಿಡದು ।
ಚೆಲುವಾಗಲರಿಯನು । ಹರನು ಸಾಯುವನು ॥ ೧೦ ॥

ಇನ್ನೆಂತು ಸೈರಿಸಲಿ । ಎನ್ನನಯನಗಳಿಂದ ।
ಇನ್ನು ನೋಡಲು ಸಲ್ಲ । ಎನ್ನ ಪ್ರಾಣವನು ॥ ೧೧ ॥

ಮುನ್ನ ನಿನಗಿತ್ತಪೆನು । ನೋಡೆಂದು ನಿಶ್ಚೈಸಿ ।
ಪನ್ನಗಧರನಿದಿರು । ನನ್ನಿಯಿಂ ನುಡಿದ ॥ ೧೨ ॥

ಪಂಥದಿಂದಸಿ ಪಿಡಿದು । ಝುಳಝುಳ ಝುಳುಪಿಸಿ ।
ನಿಂತು ಶಿವನ ಮುಂದೆ । ಸಂತಸದಿಂದ ॥ ೧೩ ॥

ಹರ ಹರಾ ಎನುತಾಗ । ಶಿರವನರಿವರ ಕತ್ತಿ ।
ಭರದಿ ಇಡುವನಿತರೊಳು । ಹರನಿಂತು ಪಿಡಿದ ॥ ೧೪ ॥

ವಚನ || ಈ ಪ್ರಕಾರ ಪ್ರಯತ್ನಿಸಿದ ಭಕ್ತಂಗೆ ಕೃಪಾಸಮುದ್ರನಾದ ನಟೇಶನು ತನ್ನ ನಿಜರೂಪದಿಂ ಭಕ್ತನಿಗೆ ಪ್ರಸನ್ನನಾಗಿ ಹೊ ! ಹೋ !! ಎಂದು ಕೈಯಂ ಪಿಡಿದು ಕತ್ತಿಯಂ ಕಿತ್ತು ಬಿಸುಡಿ ಅವನನ್ನಾಲಂಗಿಸಿ ಮುದ್ದಾಡಿ, ಎಲೈ ಮುಗ್ಧನೆ ನಿನಗೆ ಬೇಕಾದ ವರಗಳಂ ಬೇಡು ಕೊಡುತ್ತೇನೆನಲು, ಆ ಭಕ್ತನು ಎಲೈ ದೇವ ! ನೀಕೊಡುವ ವರವು ಹಾಗಿರಲಿ ನಿನ್ನ ಶರೀರ ಅಂಕಡೊಂಕಾಗಿರುವುದಕ್ಕೆ ಕಾರಣವೇನು ? ನಿನಗೆ ಸಂಭವಿಸಿರುವ ಈ ಅಸಾಧ್ಯರೋಗವಾವುದು ? ಇದು ನಿನಗೆ ಪರಿಹಾರವಾಗುವ ಬಗೆ ಹೇಗೆ ? ಮೊದಲು ಇದರ ನಿಜವಂ ಸ್ಥಿರವಾಗಿ ಪೇಳೆಂದ ಭಕ್ತಗಿಂತೆಂದಂ.

**ರಾಗ – ಶಂಕರಾಭರಣ – ಏಕತಾಳ.**

ಕೇಳು ಕೇಳಯ್ಯ ಭಕ್ತ – ಎನ್ನಯ ಮಾತ ಕೇಳು ಕೇಳಯ್ಯ ಭಕ್ತ ||
ಕೋಳುಹೋಗದೆ ಎನ್ನ ಮೇಲುರೆ |
ಬಾಳಭಕ್ತಿಯನಿಟ್ಟ ಪೋಷಕ ನೀನು ಇರುತಿರೆ ರೋಗವೆಲ್ಲಿದು ||ಕೇಳು|| ೧ ||

ನಿನ್ನ ಭಕ್ತಿಯೆ ನನಗೆ – ಔಷಧಮಾಗಿ | ಎನ್ನ ಶರೀರವ್ಯಾಧಿಯು ||
ಮುನ್ನ ಹೋಯಿತು ರೋಗವೆಲ್ಲವು |
ಚೆನ್ನ ಚೆಲುವನು ಆಗುತಲಿ ನಾ ನಿನಗೆ ಒಲಿಯುತ ನಿಂದೆ ನೋಡು ||ಕೇಳು|| || ೨ ||

ನಿನ್ನ ಪೂಜೆಯೆ ನನಗೆ – ಬಲುಹಿತಮಾಗಿ | ಚೆನ್ನ ಚೆಲುವದಾಯಿತು ||
ಮುನ್ನಭಕ್ತರು ಪೂಜದಂದದಿ |
ಖಿನ್ನವಾಗುತ ಭಕ್ತಿಯೌಷಧ ಪೂಜೆಮಾಡಲು ಒಲಿದೆ ನೋಡು ||ಕೇಳು|| || ೩ ||

ವಚನ || ಈ ಪ್ರಕಾರವಾಗಿ ಶರೀರವನ್ನು ಸಮನಾಗಿ ತೋರಲು, ಭಕ್ತ ನೋಡಿ ಎನ್ನ ಸ್ವಾಮಿಗೆ ವ್ಯಾಧಿಬಿಟ್ಟು ಗುಣವಾಯಿತು ! ನಾನು ಬದುಕಿದೆನೆಂದು !! ಹರ್ಷಾನಂದವಂ ಪೊಂದಿ ಹರಚರಣಕ್ಕೆ ಮಣಿದು ದೇವ ನಿನ್ನ ಶರೀರವು ಮೊದಲು ಡೊಂಕುಡೊಂಕಾಗಿದ್ದಿತು ಕಾರಣವೇನು ? ನಿಜವಾಗಿ ಪೇಳೆನ್ನಲು ಹೇ ! ಭಕ್ತ !! ಅಂಧಕಾಸುರಂಗೆ ಮುಕ್ತಿಯನೀಯಲು ಅವನ ಇಚ್ಛೆಯಂತೆ ಅವನ ಎದೆಯ ಮೇಲೆ ಭರತದ ಕಟ್ಟಳೆಗನುಸಾರವಾಗಿ ಕುಣಿದ ದೃಶ್ಯವೆನ್ನಲು, ಆಹಾ !!! ಅಂತಪ್ಪ ನರ್ತನವನ್ನು ನಾನು ನೋಡಬೇಕೆಂದು ಆಶ್ಚರ್ಯಮನಸ್ಕನಾಗಿ ನಾಟ್ಯನಮಿತ್ತಂಡಿಯು ಕೇಳಲು ಶಿವಂ ತೋರಿಸಿದನದೆಂತೆನೆ.

**ಅಟತಾಳ.**

ಮುಗ್ಧಭಕ್ತನ ಭಕ್ತಿಗೊಲಿಯುತ | ಸಿದ್ಧಗೊಂಡನು ಸಕಲಾಭರಣವ |
ಪದ್ದುದೇರನು ಹರನ ಇದಿರೊಳು – ಸಿದ್ಧಮಾದ || ೧ ||

ಒಂದು ಕಡೆಯಲಿ ಬ್ರಹ್ಮದೇವನು । ಒಂದು ಕಡೆಯಲಿ ಇಂದ್ರ ಸುರಮುನಿ ।
ನಿಂದು ಮದ್ದಳೆ ತಾಳ ಪಿಡಿದರೊಂ – ದೊಂದನಾಗ ॥ ೨ ॥

ಹರಗೆ ಕಾಸೆಯು ಹುಲಿಯ ಚರ್ಮವು । ಚರಣಕಸುರರ ಕೊರಳಗೆಜ್ಜೆಯು ।
ಕರದಿ ಡಮರುಗ ಪಿಡಿದು ಬಾರಿಸಿ – ನಟಣೆಯೆಸಗೆ ॥ ೩ ॥

ಜಡೆಗಳೆಲ್ಲವು ಕೆದರಿಬಿಚ್ಚಿಯೆ । ಮೃಡನ ಬೆನ್ನಿನ ಮೇಲೆ ಹೊರಳಿತು ।
ಮಿಡಿಯನೆತ್ತುತ ಡಮರು ಬಾರಿಸಿ – ನಾಟ್ಯವಾಡಿದನು ॥ ೪ ॥

ಹರಿಯಜರು ದೇವತೆಗಳೆಲ್ಲರು । ಹರನ ನಟಣೆಯ ನೋಡಿ ಗತಿಗಳ ।
ಅರಸಿ ಕಲಿಯಲು ಬಾಜಿಸಿದರು – ತರಹರಮದಾಗಿ ॥ ೫ ॥

ಪರಶಿವನ ಮಹನಾಟ್ಯದಿಂದಲಿ । ಶರಧಿಗಳು ತುಳುಕಾಡಿ ಉಬ್ಬಲು ।
ಗಿರಿಗಳಲ್ಲಾಡಿದವು ಶೇಷನ – ಶಿರವು ಮುರಿಯಿತ್ತು ॥ ೬ ॥

ಆದಿಕೂರ್ಮನು ತಗ್ಗಿದನು ಧರೆ । ಭೇದಿಸುತ ಬಿಡದಾಗ ನಡುಗಿತು ।
ದ್ಯೋದಿತಾರೆಗಳೆಲ್ಲ ಉದುರಲು – ದೇವತೆಗಳೆಲ್ಲ ॥ ೭ ॥

ಬೆದರುತಲಿ ಕಂಗೆಟ್ಟು ಗಾಬರಿ । ಸಿದರು ತಮಗೆ ತಬ್ಬಿಬ್ಬಿಯಾಗುತ ।
ಅಧಿಕನಾಟ್ಯವ ನೋಡಿ ಭಕ್ತನು – ನಯನ ಮುಚ್ಚುತಲಿ ॥ ೮ ॥

ಸ್ವಾಮಿ ನಿಲ್ಲಿಸು ಕರುಣದಿಂದಲಿ । ಪ್ರೇಮವಿಡು ಬಿಡು ಸಾಕು ಎನ್ನುತ ।
ಕಾಮಿಸುವ ಭಕ್ತಂಗೆ ನಿಲಿಸಿದ – ಸೋಮಧರನು ॥ ೯ ॥

ಅಂತರಿಕ್ಷದಿ ದೇವದುಂದುಭಿ । ನಿಂತು ಧ್ವನಿಗಳ ಮಾಡುತಿರುತಿರೆ ।
ಸಂತಸದಿ ಗಂಧರ್ವ ಪೂಮಳೆ – ಬಂದು ಸುರಿಯೆ ॥ ೧೦ ॥

ಹರನು ಭಕ್ತನ ಪುಷ್ಪರಥದಲಿ । ಇರಿಸಿ ಶಿವಪುರಿ ಕುರಿತು ತೆರಳಿದ ।
ಅರಿತುಕೊಳ್ಳೆಂದು ಚೆನ್ನಬಸವಗೆ – ಬಸವ ಪೇಳಿದನು ॥ ೧೧ ॥

## ಸಾಂಖ್ಯತೊಂಡಿಯ ಕಥೆ.

**ತ್ರಿವುಡೆ.**

ಚೆನ್ನಬಸವ ಶರಣರೆ ಕೇಳಿರಿ । ಪನ್ನಗೇಂದ್ರನ ಮುಗ್ಧಭಕ್ತರ ।
ಚೆನ್ನ ಚರಿತೆಯ ಪೇಳ್ವೆ ಲಾಲಿಸಿ – ಇನ್ನು ನೀವು ॥ ೧ ॥

ಚೋಳದೇಶ[illegible]ಕಾಂಚಿಪುರದೊಳು । ಮೇಲುವೈಭವದಿಂದಲಿರುತಿಹ ।
ಕಾಳಿಪಿಳ್ಳೆ[illegible]ಯು ರಂಜಿಸೆ – ಸೇಲಾಂಬ ಎಂದು ॥ ೨ ॥

ಸಾಂಖ್ಯತೊ[illegible] ಎಂಬ ಪುತ್ರನ । ಕಾಂಕ್ಷ್ಯದಿಂ ಸಲಹುತ್ತ ಕೆಲದಿನ ।
ನೊಂಕೆ ಹರಪುರಿ ಸೇರ್ದ ಪಿಳ್ಳೆಯು – ಭಾರ್ಯೆ ಸುತರುಳಿದು ॥ ೩ ॥

ಬಹಳ ಬಡತನ ಬರಲು ಸೇಲಾಂಬ । ಸಹಿಸಿ ಕೂಲಿಯಮಾಡಿ ಸುತನ ಸ ।
ಲಹಿದಳು ಪದಿನಾರು ವರುಷದ – ತರಳನಾಗಿರಲು ॥ ೪ ॥

ಊರಪ್ರಜೆಗಳ ತುರುವ ಕಾಯಲು । ಧೀರಮಾತೆಯು ನೇಮವೀಯಲು ।
ದೂರ ತುರುಗಳಹೊಡೆದು ಮೇಯ್ಸುವ – ಮಾರಹರಭಕ್ತ ॥ ೫ ॥

ಗೆಣೆಯತರಳರು ಹತ್ತು ಇಪ್ಪತ್ತು । ದಿನಚರಿಯ ತುರುಗಳನು ಕಾಯ್ವರು ।
ವಿನಯದಿಂದಲಿ ಚಂಡು ಚಿಣ್ಣಿಯ – ನಾಡುವರು ಕೆಲರು ॥ ೬ ॥

ಗುಡುಗನಾಡುತ ಕೆಲರು ಪರಿಪರಿ । ಹುಡುಗರೀಪರಿ ಕಾಡೊಳಾಡಲು ।
ಹುಡುಗರೆಲ್ಲರ ಹಿರಿಯನಾಗಿಹ – ಸಾಂಖ್ಯತೊಂಡಯ್ಯ ॥ ೭ ॥

ಬನ್ನಿರೊ ಇದು ಏತರಾಟವು । ನನ್ನಿಯಿಂದಲಿ ಎಲ್ಲರ್ನೊಡುತ ।
ಉನ್ನತದಿ ಒಂದು ಗುಡಿಯ ಕಟ್ಟುವ – ಎಲ್ಲರಿಗೆ ಇರಲಿ ॥ ೮ ॥

ಒಂದು ಲಿಂಗವ ತಂದು ಪೂಜಿಸೆ । ಚಂದ ನಮಗೆಯು ಯಾವ ಕಾರ್ಯಕು ।
ಬಂದಡೆಯು ಮಳೆಗಾಲ ಮರೆಯೊಳು – ಬೇಡಬಹುದೊರವ ॥ ೯ ॥

ದನಕರುಗಳೆತ್ತ್ಯದಿದರೆಯುರೆ । ಮುದದಿ ಹರಕೆಯ ಮಾಡಬಹುದಿಲ್ಲಿ ।
ಎನುತಲೆಲ್ಲರಿಗೆಂದ ಸಾಂಖ್ಯಯು – ತೊಂಡನಂದು ॥ ೧೦ ॥

ಎಲ್ಲ ತರಳರು ಒಪ್ಪಿಕೊಳ್ಳಿರಿ । ಇಲ್ಲಿ ನಾಳೆಗೆ ಗುಡಿಯ ಕಟ್ಟುವ ।
ಕಲ್ಲುಗಳು ಹೇರಳವು ಇರ್ಪವು – ಇಲ್ಲಿ ನೋಡಿ ॥ ೧೧ ॥

ಎಂದು ತರಳರಗೂಡಿ ಮರುದಿನ । ಬಂದು ದನಗಳ ಬಿಟ್ಟು ಎಲ್ಲರು ।
ಸಂದಣಿಸಿ ಹರುಷದಲಿ ಕಟ್ಟಿದ – ರೊಂದು ಗುಡಿಯ ॥ ೧೨ ॥

ನುಣ್ಣಗಿಹ ಕಪ್ಪಾದ ಶಿಲೆಯೊಂದ । ಮಣ್ಣು ಜಲದಲಿ ತೊಳೆದು ಪೊತ್ತದ ।
ಚಿಣ್ಣರೆಲ್ಲರು ಕೂಡಿ ಬಂದರು – ಸೊಗಸಿನಿಂದ ॥ ೧೩ ॥

ಗುಡಿಯೊಳಗೆ ನೆಟ್ಟದನು ಮರುದಿನ । ಹೆಡಗೆಯೊಳಗಭಿಷೇಕ ವಸ್ತುವ ।
ಹುಡುಗರೆಲ್ಲರು ತಂದು ಪೂಜಿಸಿ – ಮೃಡನ ಮೂರ್ತಿಯನು ॥ ೧೪ ॥

ಇಂತಿ ಸಂಭ್ರಮದಿಂದಲಿರುತಿರೆ । ಮುಂತೆ ರವಿಯಸ್ತಮಿಸಲಾಕ್ಷಣ ।
ನಿಂತು ತಮ್ಮಯ ತುರುಕರುಗಳ – ನಾಂತು ನೋಡಿದರು ॥ ೧೫ ॥

ಹುಡುಗರೆಲ್ಲರು ಹುಡುಕಿ ನೋಡುತ । ದುಡುಕಿ ಬಳಲುತ ಕಾಡು ಮೇಡನು ।
ಬಿಡದೆ ನೋಡಲು ಸುಳುಹು ಇಲ್ಲವು – ಅಡರಿತದು ನಿಸಿಯು ॥ ೧೬ ॥

ಹರನೆ ತರಳರು ನಾವು ನಿನ್ನಯು । ಪರಮ ಆಟವ ಆಡುತಲಿ ಮಿಗೆ ।
ಮರೆಯೆ ತುರುಗಳ ವ್ಯಾಘ್ರತಸ್ಕರ – ರ್ಕರಸಿ ಒಯ್ದರಲಾ ॥ ೧೭ ॥

ವಚನ || ಈ ಪ್ರಕಾರವಾಗಿ ಹುಡುಗರಾದ ನಾವುಗಳು ಈ ದೇವರ ಕಾರ್ಯವಲ್ಲದೆ ಬೇರೆ ಕೆಲಸಕ್ಕೆ ಮನವೆಳೆಸದಿರುವರಾದ ಕಾರಣ, ಈ ದೇವರು ದೃಷ್ಟವುಳ್ಳ ಮೂರ್ತಿಯಾದರೆ ? ನಮ್ಮ ದನಕರುಗಳು ನಮ್ಮ ನಮ್ಮ ಮನೆಗಳಿಗೆ ಸೇರಿದ್ದರೆ ? ನಾಳಿಗೆ ಬೆಣ್ಣೆನೈವೇದ್ಯ, ತಂಬಿಟ್ಟುನೈವೇದ್ಯ, ಕಡಬುನೈವೇದ್ಯ, ಅನ್ನೋದಕನೈವೇದ್ಯವೆಂದು ಪಲತೆರದ ಹರಕೆಯಂ ಪೊತ್ತರೆ, ಈ ಸಾಂಖ್ಯತೊಂಡಿಯು ಕೇವಲ ಬಡವೆಯ ಮಗನಾದ್ದರಿಂದ ಎಲೆ ದೇವ ನನಗೆ ಹಿಡುಸಾದ ಕೈಕಲ್ಲು ಐದಂ ತಂದು ಒಗೆದಿಡುವೆನೆಂದು ಹರಸಿ ಕೊಳ್ಳಲು ತರಳರೆಲ್ಲರು ತಮ್ಮ ತಮ್ಮ ಮನೆಗಳಿಗೆ ಬಂದರದೆಂತೆನೆ.

**ಜಂಪೆ.**

ಬಂದು ತರಳರು ತಮ್ಮ | ಮಂದಿರಂಗಳ ನೋಡೆ |
ಬಂದಿರಲು ಪಶು ಕರುಗಳ್ | ಅಂದು ಸಂತಸದಿ || ೧ ||

ಅವರ ಪಿತ ಮಾತೆಯರು | ಅವರ ಒಡೆಯರು ಆಗ |
ಅವರ ದಂಡಿಸುತಲ್ಲಿ | ಒರೆದು ಕೇಳಿದರು || ೨ ||

ದನಕರುವು ಮನೆಗೈದಿ | ಘನಹೊತ್ತು ಈತನಕ |
ಮನವಳುಕು ಇಲ್ಲದಲೆ | ಗೆಳೆಯರಿರಬಹುವೆ || ೩ ||

ಬೆದರಿ ಓಡಲು ಒದರೆ | ಅದಿರು ಸರಿದೆವು ಎಂದು |
ಇದಿರುತ್ತರವ ಅವರು | ಒಡೆಯರಿಗೆ ಕೊಡಲು || ೪ ||

ಆ ರಾತ್ರಿ ತರಳರುಗಳ್ | ಅವರವರ ತಾಯ್ಗಳಿಗೆ |
ಮಾರಾರಿಲಿಂಗಕ್ಕೆ | ಮಾಡಿದೆವು ಗುಡಿಯ || ೫ ||

ಅಲ್ಲಿ ಕೂಡುತಲೆಲ್ಲ | ಉಲ್ಲಸದಿ ಗುಡಿಗೆಲಸ |
ದಲ್ಲಿರ್ದು ದನ ಕರುಗ | ಳೆಲ್ಲ ಕಾಣದಿರೆ || ೬ ||

ಕಾಡೆಲ್ಲ ಹುಡಿಕಿದೆವು | ಕಾಣದೆ ದಿಗುಲಿನಿಂ |
ಮಾಡಿದೆವು ಹರಕೆಯನು | ಮೃಡನಿಂಗೆ ನಾವು || ೭ ||

ನಮ್ಮ ದನ ಕರುವೆಲ್ಲ | ಉಮ್ಮಳದಿ ಮನೆ ಸೇರೆ |
ಸುಮ್ಮನದಿ ಬೆಣ್ಣೆಯನು | ನಿನಗರ್ಪಿಸುವೆವು || ೮ ||

ಆಡುತಲಿ ಇನಿತಾಟ | ಮನದಿ ಹರಸಿದೆವಮ್ಮ |
ಕೊಡು ಬೆಣ್ಣೆಯನು ಶಿವಗೆ | ಒಡನರ್ಪಿಸುವೆವು || ೯

ಮಕ್ಕಳಿರ ಬಲು ಸೊಗಸು | ಮುಕ್ಕಣ್ಣನಾಟವಿದು |
ತಕ್ಕುದೆಲ್ಲವ ಕೊಳ್ಳಿ | ಗಕ್ಕನರ್ಪಿಸಿರಿ || ೧೦ ||

ಮರುದಿವಸ ಬಾಲಕರು । ಸಾಂಖ್ಯತೊಂಡನ ಕರೆಯೆ ।
ಉರಿಜ್ವರವು ನನಗೆ ಬಹು । ಚುರುಕಾಗಿ ಇಹುದು ॥ ೧೧ ॥

ನಿಮ್ಮ ಹರಕೆಯ ನೀವು । ಸುಮ್ಮನದಿ ಒಪ್ಪಿಸಿರಿ ।
ನಮ್ಮ ಹರಕೆಯ ನಾನು । ಗಮ್ಮನೊಪ್ಪಿಸುವೆ ॥ ೧೨ ॥

ಎನಲವರು ಉಂಡುಟ್ಟು । ದನಸಹಿತ ನೈವೇದ್ಯ ।
ವಣಿಮಾಡಿ ತಂದದನು । ಮೃಡಗೆ ಒಪ್ಪಿಸಲು ॥ ೧೩ ॥

ಈ ಸಾಂಖ್ಯತೊಂಡನಿಗೆ । ಮಾಸಮೂರನಕ ಜ್ವರ ।
ಸೂಸುತ್ತಲಿರ್ದು ಮಿಗೆ । ವಾಸಿಯಾಯ್ತಾಗ ॥ ೧೪ ॥

ನೂಕಿದಿನಗಳಿದಿಹುದು । ಲೋಕೇಶನಿಗೆ ಹರಕೆ ।
ಜೋಕೆಯಿಂದೊಪ್ಪಿಸಲು । ಬೇಕೆಂದನಾಗ ॥ ೧೫ ॥

ತೊಂಬತ್ತುದಿನ ಹರಕೆ । ತುಂಬಿದನು ಬಂಡಿಯಲಿ ।
ಇಂಬಾಗಿ ನಾನೂರ । ಐವತ್ತು ಕಲ್ಲ ॥ ೧೬ ॥

ವಚನ ॥ ಈ ಪ್ರಕಾರ ಸಾಂಖ್ಯತೊಂಡನು ಒಳಹಿಡಿಗಿಡುಪಾದ ನಾಲ್ಕು ನೂರ ಐವತ್ತು ಕಲ್ಲಂ ಲೆಕ್ಕವಾದುದನು ತೊಳೆದು, ನೆರಮನೆಯವರ ಬಂಡಿಗಂ ತುಂಬಿ ಸ್ವಮಾತೆಯಂ ದಿನಚರಿಯ ಗೋವಳರಂ ಕರೆದು ಬಂಡಿಯಂ ಸಾಗಿಸಿಕೊಂಡು ಆ ಗುಡಿಯ ಸಮೀಪಕ್ಕಂಬರಲು, ಪಾರ್ವತೀಪತಿಯು ಈ ಭಕ್ತನ ದೃಢಮಂ ನೋಡಲ್ಕೆ ತಾನೇ ಜಂಗಮವಾಗಿ ಗುಡಿಯಿಂದ ಬಂದು ಅವನ ಸಮೀಪದಲ್ಲಿ ಒಡವಾರದ ಮರದ ಮರೆಯಲ್ಲಿ ಕುಳಿತು ನೋಡಲು, ಈ ಭಕ್ತನು ತನ್ನ ಕೈಚಳಕಮಂ ನೋಡಲ್ಕೆ ಒಂದು ಕೈಗಲ್ಲಂ ತೆಗೆದುಕೊಂಡು ಆ ಮರವಂ ನೋಡಿ ಇಡಲು ಶಿವಂಗರ್ಪಿತವಾಗಲು, ಬಳಿಕ ಶಿವನು ಓಡಿಹೋಗಿ ಗುಡಿಯಲ್ಲಡಗಲು ಇತ್ತ ಸಾಂಖ್ಯತೊಂಡಿ ಎಂತುಗೈದನ ದೆಂತೆನೆ.

**ಏಕತಾಳ.**

ಗುಡಿಯ ಬಾಗಿಲೊಳ್ಬಂಡಿ । ಕಡುವೇಗದಿಳುಹುತ್ತ ।
ಒಡನೆ ಸುರಿದು ಕೊಂಡು । ಮೃಡನನ್ನು ನೋಡಿ ॥ ೧ ॥

ಬಿರುಬಿರನೆ ಎಣಿಸುತ್ತ । ಭರದಿ ಲಿಂಗವ ನೋಡಿ ।
ವರ ದೃಢದಿಂದಲಿಟ್ಟ । ಸರಸಭಕ್ತಿಯಲಿ ॥ ೨ ॥

ಪಟಪಟ ಲಟಿಯೆಂದು । ನಟನಟಿಸುತ್ತಲಿಟ್ಟ ।
ನಿಟಲಾಕ್ಷಗಿಟ್ಟುದೊಂದು । ದಿಟಕಲ್ಲಿಲ್ಲದಿರೆ ॥ ೩ ॥

ಹರ ಹರಾ ಎನ್ನುತ್ತ । ಹರಕೆಗೆ ಕುಂದು ಬಂತೆ ।
ಜರಿದು ಭಯ ಪಡುವೆನೆ । ಹರ ನೋಡು ಎಂದು || ೪ ||

ಭರದಿ ಸೊಂಟದೊಳಾಗ । ಸುರಗಿ ತೆಗೆದುಕೊಂಡು ।
ಸಿರಕೊರೆದಿಡಲು ಮತ್ತೆ । ಕರ ಝಳುಪಿಸಲು || ೫ ||

ಅಂಗಜಹರ ಮೆಚ್ಚಿ । ಅಂಗೈಸಿ ಭಕ್ತನ ।
ಅಂಗದಡಹುತ್ತ ಕರವ । ಸಂಗಮನು ಪಿಡಿದು || ೬ ||

ಮೆಚ್ಚಿದೆನೆಲೆ ಕಂದ । ನಿಶ್ಚಲ ಭಕ್ತಿಗೀಗ ।
ಅಚ್ಚುಗದಂದವೀವೆ । ಇಚ್ಛೆವರವೇನು || ೭ ||

ಶರಣು ಶ್ರೀ ಗಿರಿಜೇಶ । ಶರಣು ಅಘವಿನಾಶ ।
ಶರಣು ನಿನ್ನಯ ಚರಣ । ವರಸೇವೆಗಿರಿಸು || ೮ ||

ವರಮಾತೆ ಸ್ನೇಹಿತರು । ತರಳರೆನ್ನನು ಸಹ ।
ಇರಿಸು ಸನ್ನಿಧಿಯೊಳಗೆ । ವರಭೃತ್ಯರೆನಿಸಿ || ೯ ||

ವರಸಾಂಖ್ಯತೊಂಡಿಗೊಲಿದು । ಸ್ಮರಹರನು ತಾಮೆಚ್ಚಿ ।
ತರಿಸಿ ಪುಷ್ಪಕದೊಳು । ಇರಿಸೊಯ್ದನವರ || ೧೦ ||

ಕರೆಯೆ ಮಲ್ಲಿಗೆಮಳೆ । ಮೊರೆಯೆ ದುಂದುಭಿವಾದ್ಯ ।
ಹರುಷದಿಂ ತೆರಳಿದ । ಹರ ತನ್ನ ಪುರಿಗೆ || ೧೧ ||

ವಚನ॥ ಇಂತೀ ಪ್ರಕಾರವಾಗಿ ತನ್ನ ಶಿಷ್ಯನಾದ ಚೆನ್ನಬಸವಂಗೆ ಬಸವೇಶ ಪೇಳಿ ಇದಲ್ಲದೆ ಇನ್ನೂ ಇಂಥ ಮುಗ್ಧರುಂಟೆಂದು ಮುಂದಣ ಕಥೆಯಂ ಪೇಳುವಲ್ಲಿಗೆ ಸಂಧಿ ಸಂಪೂರ್ಣಂ.

ಇಂತಿ ಪದ್ಯಗಳು ೧೦೯

**ಅಂತು ಸಂಧಿ ೧೯ ಕ್ಕಂ ಸಂಪೂರ್ಣಗಣನೆ – ೪೬೫೯ ಕ್ಕಂ ಮಂಗಳಮಹಾ**

**ಶ್ರೀ ಶ್ರೀ ಶ್ರೀ ಶ್ರೀ ಶ್ರೀ**



## ಇಪ್ಪತ್ತನೆಯ ಸಂಧಿ

# ಬೇಡರ ಕಣ್ಣಪ್ಪನ ಕಥೆ

**ಕಂದಪದ್ಯ.**

ನಿಗಮಾಗಮಾದಿಗವೇಧ್ಯ ।
ನಗಣಿತದ ಚೋದ್ಯಗನುಪಮಗಭೇದ್ಯಹರಂ ॥
ಸುಗುಣದಿ ಭಕ್ತರ ಪಾಲಿಕೆ ।
ಜಗಧೀಶಂ ಭವಹರ ಚೆನ್ನಮಲ್ಲೇಶ್ವರಂ ॥ ೧ ॥

**ದ್ವಿಪದಿ.**

ಶ್ರೀ ಗುರುವೆ ಗಣನಾಥ ಸಕಲ ಮುನಿನುತ ಪ್ರೀತ ।
ಭೋಗಿಭೂಷಣ ದೇವ ಸಲಹು ಅನವರತ ॥ ೧ ॥

ನಿನ್ನ ಮುಗ್ಧರ ಕಥೆಯ ಬಲ್ಲಂತೆ ವಿರಚಿಪೆನು ।
ಸನ್ನುತದಿ ದಯವಿತ್ತು ಪಾಲಿಸನುಮತಿಯ ॥ ೨ ॥

ಧರಣಿಯೊಳು ಮಿಗಿಲಾದ ಕಾಳಹಸ್ತಿಯು ಎಂಬ ।
ವರಸ್ಥಳವು ಚೆಲುವಿಂದ ಅಧಿಕವಾಗಿಹುದು ॥ ೩ ॥

ಸಕಲ ತರು ವನದಿಂದ ಅಖಿಳ ಪಕ್ಷಿಗಳಿಂ ।
ನಿಖಿಳ ಮೃಗ ಸಂಕುಲವು ನೆರೆದು ಇಹವಲ್ಲಿ ॥ ೪ ॥

ಉರಗರತ್ನಗಳಿಂದ ಕಸ್ತೂರಿ ಚಳಯದಿಂ ।
ಕರಿಯ ಮಸ್ತಕಮುತ್ತು ಪ್ರಭೆಯು ಮಿಗಿಲಲ್ಲಿ ॥ ೫ ॥

ವ್ಯಾಧರು ಮನೆಗಳಿಂ ಸಿಂಜಿನಿಯ ಅಣಿಮಾಡಿ ।
ಮೋದಬಾಣಗಳಿಂದ ಕೂಡಿ ಇರುತಿಹರು ॥ ೬ ॥

ಇಂತಧಿಕ ಬೇಡರಿಗೆ ಕರ್ತೃ ತಾ ಕಣ್ಣಪ್ಪ ।
ಪಂಥಗಾರನು ಭಕ್ತ ಮುಗ್ಧಶಿವಶರಣ ॥ ೭ ॥

ಒಂದುದಿನ ಸಂತಸದಿ ಕಣ್ಣಪ್ಪ ತಾ ಹಿತದಿ ।
ಸಂದಣಿಯ ಕೂಡುತಲಿ ಬೇಟೆಗನುವಾದ ॥ ೮ ॥

ಪಚ್ಚೆಅಂಗಿಯ ತೊಟ್ಟು ಆಭರಣವಿಟ್ಟು ।
ಹಚ್ಚಡವು ಬಡಿಗೋಲು ಕತ್ತಿಬಾಣಗಳಿಂ ॥ ೯ ॥

ಬಿಲ್ಲು ಬತ್ತಳಿಕೆಗಳ ತೆಗೆದು ಅಣಿಗೊಂಡು ।
ಬುಲ್ಲವಿಸಿ ಹೊರಪಂಟ ಜೇಡರನುವಾಗಿ ॥ ೧೦ ॥

ವನಚರಿಯ ಹೊರಟಲ್ಲಿ ಮೊಲ ಜಿಂಕೆಯಾನೆ ।
ಕನಲಿ ಗರ್ಜಿಪ ಸಿಂಹ ಹುಲಿ ಕರಡಿ ಹಂದಿ ॥ ೧೧ ॥

ಇಂತೀ ಮೃಗಗಳ ಬೇಟೆಯಾಡುತ್ತಲಿರಲು ।
ಅಂತರದಿ ತರಣಿಯೊಳಪ್ರೊಕ್ಕ ಶರಧಿಯನು ॥ ೧೨ ॥

ಕತ್ತಲೆಯು ಕವಿಯಲು ಕಣಪ್ಪನಾಗ ।
ನಿತ್ಯ ಮಾಡುವ ನೇಮ ತೀರಿಸುತ ಮುದದಿ ॥ ೧೩ ॥

ಮಾಮರದ ಕೆಳಗಲ್ಲಿ ಮಲಗಿ ನಿದ್ರಿಸಲು ।
ಸೋಮಧರ ಸ್ವಪ್ನದಲಿ ಬಂದು ಶಿರದಡಹಿ ॥ ೧೪ ॥

ಕರ್ಣದಲಿ ಶಿವಮಂತ್ರ ಉಪದೇಶವಿತ್ತು ।
ತನಯ ಈ ವನದಲ್ಲಿ ಲಿಂಗವೊಂದಿಹುದು ॥ ೧೫ ॥

ನೀನು ಪೂಜಿಸು ಎಂದು ಮರೆಯಾಗಲಾಗ ।
ತಾನೆದ್ದು ಕಣ್ಣಪ್ಪ ಅಚ್ಚರಿಯಗೊಂಡು ॥ ೧೬ ॥

ಸ್ನಾನ ಕ್ರಿಯೆಗಳ ತೀರ್ಚಿ ಪೊರಮಟ್ಟು ಬೇಗ ।
ಕಾನನಕೆ ಪೊರಮಡಲು ದಾರಿ ಕಾಣಿಸಿತು ॥ ೧೭ ॥

ಕನಸಿನಲಿ ಕಂಡದ್ದು ಬಹು ಸಿದ್ಧವೆಂದು ।
ಮನವಿಟ್ಟು ಮುದದಿಂದ ಬರಲು ಶಿವಲಿಂಗ ॥ ೧೮ ॥

ಎದುರಲ್ಲಿ ಕಾಣಿಸುತ ಪ್ರಜ್ವಲಿಸಿತಲ್ಲಿ ।
ಚೆದುರ ನಂಬಿದ ಪ್ರಾಣಲಿಂಗವೆಂದೆನುತ ॥ ೧೯ ॥

ವಚನ ॥ ಹೇ! ದೇವ ನಿನ್ನ ಸತಿಗಳೀರ್ವರ ಜಗಳಕ್ಕೆ ಭಯಗೊಂಡು ಈ ವನಕ್ಕೈದಿದೆಯೊ!! ಸುತರ್ರೂವರ ಸಾಕಲಾರದೆ ಬಡತನಕ್ಕಂಜಿ ಇಲ್ಲಿಗೈದಿದೆಯೊ!!! ಎಂದು ಪಲವಿಧಗಳಾಡಿಕೊಳುತ್ತ ಹೇ! ದೇವ ಈ ದೊಡ್ಡ ಕಾನನದಲ್ಲಿ ನೀನೋರ್ವನೆ ಇರುವುದು ಸರಿಯಲ್ಲ. ಹುಲಿ ಸಿಂಹ ಕರಡಿ ಕಾಡಾನೆಗಳು ನಿನ್ನ ಕಂಡರೆ ಮೈಮೇಲೆ ಬೀಳುವುದಲ್ಲದೆ ನಿನಗೆ ಬಹು ಕಷ್ಟಲಭಿಸುವುದು. ನಿನ್ನ ಮರುಳಾಟಬಿಟ್ಟು ಜೊತೆಯಲ್ಲಿ ಬಾ ಎನ್ನ ಸದನಕ್ಕೆ ಕರೆದೊಯ್ಯುವೆನು ಅಲ್ಲಿ ನಿನ್ನಿಚ್ಛೆಯ ಸುಖವಿತ್ತು ಪ್ರತಿದಿನವೂ ಕಾಪಾಡುವೆನು. ನನ್ನ ಮಾತು ಸುಳ್ಳಲ್ಲ ಸದನದಲ್ಲಿ ಬಹು ರುಚಿಕರವಾದ ಮಾಂಸಗಳು ಹಣ್ಣುಗಳು ಮಧು ಹಾಲು ಬೆಲ್ಲ

ಬಿದಿರಕ್ಕಿ ಗೆಣಸುಗಳಿರುವುವು, ನೀನು ಶೃಂಗಾರವಾಗುವುದಕ್ಕೆ ವಿಧವಿಧದ ಮುತ್ತು ರತ್ನಗಳಿರುವುವು, ಪೂಸುವುದಕ್ಕೆ ಸುಗಂಧಗಳಿರುವುವು ನೋಡು ನಡೆ ಎಂದು ದೈನ್ಯದಿಂ ನಾನಾ ವಿಧವಾಗಿ ಬೇಡಿಕೊಳ್ಳಲು, ಶಿವನು ಸ್ತಬ್ಧನಾಗಿರೆ ! ಮತ್ತಿಂತು ಗೆಯ್ದನದೆಂತೆನೆ.

**ಜಂಪೆ.**

ಪರಶಿವನು ಮರೆಯಾಗಿ । ಇರುವ ಗೌಪ್ಯದಲಿವಗೆ ।
ಸುರಸಭೋಜ್ಯಗಳಿಲ್ಲ । ಸರಿದಿಹುದು ಶಕ್ತಿ ॥ ೧ ॥

ಅರಸಿತ್ತು ಭೋಜ್ಯವನು । ವರತ್ರಾಣವನು ಬರಿಸಿ ।
ಕರದೊಯ್ವೆ ಸದನಕ್ಕೆ । ಪುರಹರನ ಬೇಗ ॥ ೨ ॥

ಇಂತು ಯೋಚನೆಗೈದು । ಬಿಲ್ಲು ಬಾಣಗಳನ್ನು ।
ಸಂತಸದಿ ಪಿಡಿದಾಗ । ನೋಡುವನು ಶಿವನ ॥ ೩ ॥

ಬಿಟ್ಟು ಹೋಗಲು ಶಿವನ । ಇಷ್ಟವಿಲ್ಲದೆ ತಾನು ।
ಕಷ್ಟಮನವನು ಮಾಡಿ । ದಿಟ್ಟಸುತ ಪೋದ ॥ ೪ ॥

ಪೂರ್ವದಲಿ ಅಸುರರೊಳು । ಮಹಕಾಯಸುಂದರರು ।
ಶೌರ್ಯದಲಿ ತಪಮಾಡಿ । ಬೇಡಿದರು ಶಿವನ ॥ ೫ ॥

ಪರಶಿವನು ತಾ ಮೆಚ್ಚಿ । ವರವ ಬೇಡೆನಲಾಗ ।
ವರಸುಕಾಯವ ತೃಪ್ತಿ । ಗಿರದೆ ಕೊಳ್ಳೆನುತ ॥ ೬ ॥

ಹಿಂದೆ ಅಧಮರ ಕೊಂದು । ನಿಂದು ಮುಕ್ತಿಯನಿತ್ತ ।
ತಂದೆ ನಮ್ಮನು ಸಲಿಸಿ । ಹೊಂದಿಸಂಪ್ರೀಯೆನೆ ॥ ೭ ॥

ಪಶುಪತಿಯು ಮೆಚ್ಚಿ ಸುಂ । ದರ ಮಹಾಕಾಯರಿಗೆ ।
ಒಸೆದಿತ್ತನಭಯವನು । ಹರಸುತ್ತಲಾಗ ॥ ೮ ॥

ಕಾಳಹಸ್ತಿಯ ವನದಿ । ನೀವುಗಳು ಮೃಗವಾಗೆ ।
ದಾಳಿಬರುತಲಿ ವ್ಯಾಧ । ಸೀಳುವನು ನಿಮ್ಮ ॥ ೯ ॥

ಅವನ ಹಸ್ತದಿ ನಿಮ್ಮ । ಖಂಡ ಸಲಿಸುವೆನೆಂದು ।
ಜವದಿ ಕಳುಹಿಸಿಕೊಟ್ಟ । ನಸುರರೀರ್ವರನು ॥ ೧೦ ॥

ಅಸುರರಾಗಲೆ ಬಂದು । ಕಾಳಹಸ್ತಿಯ ವನದಿ ।
ಅಸಮ ಮೃಗಗಳು ಆಗಿ । ಸುಖದಿ ಇರುತಿರಲು ॥ ೧೧ ॥

ಹರನಿರೂಪಣೆಯಿಂದ । ಹರಿಣಗಳು ಕಾಣಿಸಲು ।
ಶರವ ಹೂಡಿದನಾಗ । ಕಣ್ಣಪ್ಪ ಬೇಗ ॥ ೧೨ ॥

ಹರಿಣಗಳ ಸುಲಿದಾಗ | ಖಂಡಗಳ ಶೋಧಿಸುತ |
ಹೊರಳಿಸಿಯೆ ಬೆಂಕಿಯಲಿ | ಇಂಪುಮಾಡಿದನು || ೧೩ ||

ತೆಗೆದು ಖಂಡವನಾಗ | ದೊನ್ನೆಯೊಳಗಿಡುತಲ್ಲಿ |
ಚಿಗುರು ಕಕ್ಕೆಯು ಬಿಲ್ವ | ಪತ್ರೆಗಳ ಕಿತ್ತು || ೧೪ ||

ತನ್ನ ಶಿರದೊಳಗಿಟ್ಟು | ಜಲವ ಬಾಯೊಳು ತುಂಬಿ |
ಚೆನ್ನಿಗನು ಪೊರಮಟ್ಟ | ಹರನ ಭವನಕ್ಕೆ || ೧೫ ||

ವಚನ || ಈ ಪ್ರಕಾರವಾಗಿ ಕಣ್ಣಪ್ಪ ಶಿವಧ್ಯಾನಪರವಶನಾಗಿ ಬಂದು ನಿಂತು ತನ್ನ ಪಾದರಕ್ಷೆಯ ಕಾಲಿನಿಂದ ಅರ್ಚಕನು ಪೂಜಿಸಿದ್ದ ಪುಷ್ಪಗಳನ್ನು ಕೆಡಹಿ, ತನ್ನ ಜಿಹ್ವೆಯಲ್ಲಿ ತಂದಿರ್ದ ನೀರನ್ನು ಲಿಂಗದ ಶಿರಸ್ಸಿನ ಮೇಲೆ ಉಗುಳಿ, ಶಿರದ ಮೇಲಿದ್ದ ಪತ್ರೆಯನ್ನು ತಲೆ ಬಾಗಿ ಲಿಂಗದ ಮೇಲೆ ಕೆಡಹಿ, ದೊನ್ನೆಯೊಳಗಿದ್ದ ಮಾಂಸವನ್ನು ಎದುರಿನಲ್ಲಿಟ್ಟು ಬಹು ಪ್ರೀತಿಯಿಂದ ಅರ್ಪಿಸಿದನೆಂತೆನೆ.

**ಏಕತಾಳ.**

ಪೂರ್ವದೊಳು ಶಿವನನ್ನು | ಆರು ಪೂಜಿಸದ ಪರಿ |
ಉರ್ವಿಗಚ್ಚರಿ ಪೂಜೆ | ಧೀರನರ್ಪಿಸಲು || ೧ ||

ಪುರಹರನು ಮೋದದಿಂ | ವರತೃಪ್ತಿಯನು ಪಟ್ಟ |
ಹರಿ ಸುರಾರ್ಚನೆಗಧಿಕ | ಶಬರ ಪೂಜಿಸಿದ || ೨ ||

ಕಣ್ಣಪ್ಪ ದಿಟ್ಟಿಸುತ | ಚೈತನ್ಯ ಬರಲೆಂದು |
ಚೆಣ್ಣ ಕುಣಿಯುತ್ತ ತಾನು | ಉತ್ಸಾಹ ಪಟ್ಟ || ೩ ||

ಮರಳಿ ವನಬೇಟೆಗೆ | ಸರಿದು ಪೋದನು ಅತ್ತ |
ಮರುದಿನಾ ಅರ್ಚಕನು | ಹರನಿಲಯಕೆಯ್ದಿ || ೪ ||

ನೋಡಿದ ಸದನವ | ಮಾಡಿದನಚ್ಚರಿಯ |
ಖೋಡಿಬೇಡರು ಬಂದು | ಮಾಡಿಹರೆಂದು || ೫ ||

ಖಂಡದ ತುಂಡುಗಳ | ದಂಡದಿಂದಲಿ ತಳ್ಳಿ |
ಪುಂಡರ ಕಂಡರೀಗ | ದಂಡಿಪೆನೆಂದು || ೬ ||

ಶಿವನಿಲಯವನಾಗ | ಶಿವಮಂತ್ರೋದಕದಿಂದ |
ಜವದಿ ಪ್ರೋಕ್ಷಿಸಿ ಶುದ್ಧ | ಭವನಮಾಡಿದನು || ೭ ||

ಶಿವಲಿಂಗದೇವಗೆ | ಪಂಚಾಭಿಷೇಕ ಮಾಡಿ |
ಶಿವಸೂಕ್ತದಿಂದ ಮಹ | ವಂಚನೆಯ ಕಳೆದ || ೮ ||

ತುಂಟಬೇಡರನೀಗ । ಸೊಂಟ ಕಳಿಯುವೆನೆಂದು ।
ಅಂಟಿ ಲಿಂಗದ ಹಿಂದೆ । ಪಂಟಿಸಿಯೆ ಕುಳಿತ ॥ ೯ ॥

ಭಕ್ತಕಣ್ಣಪ್ಪನಾಗ । ಶಕ್ತ ಬಂದಲ್ಲಿ ಬೇಗ ।
ಹೊಕ್ಕು ಮೊದಲಂತೆ ಪೂಜೆ । ಯಕ್ಕರಿಂಡೆಸಗೆ ॥ ೧೦ ॥

ಅರ್ಚಕನಾಗ ಕಂಡು । ತುಚ್ಛಬೇಡನ ಭಕ್ತಿ ।
ಇಚ್ಛೆಯಾಯಿತೆ ದೇವ । ಮೆಚ್ಚುನಿನಗಹುದೆ ॥ ೧೧ ॥

ಪಿಟ್ಟವ್ವೆಮನೆಯೊಳು । ಪೆಟ್ಟುತಿಂದವನಿವ ।
ಕೆಟ್ಟವಸ್ತುಗಳೆಂದು । ಸಿಟ್ಟಾಗದಿಹನು ॥ ೧೨ ॥

ಭೃತ್ಯರಾ ಸೇವೆಗಳ । ಭಕ್ತಿಯಿಂದಲಿ ಮಾಳ್ಪ ।
ಸಕ್ತಿಯಿಂದಲಿ ಹಿಂದೆ । ಪಥ್ಯಗೆಟ್ಟಿಹನು ॥ ೧೩ ॥

ಚರಣರಕ್ಷೆಯ ಪೆಟ್ಟು । ಮುಕ್ಕಳಿಸಿದ ನೀರು ।
ಶಿರದ ಪತ್ರೆಯು ಮಾಂಸ । ಹಿತವಾಗದಿಹುದೆ ॥ ೧೪ ॥

ಈ ಶಬರನ ನಾನು । ಮೋಸದಿಂದಲಿ ಕೊಂದು ।
ಈಶನ ಶುಚಿಯನ್ನು । ಸೂಸದೆ ಮಾಳ್ಪೆ ॥ ೧೫ ॥

ಹಿಂದೆ ಈ ಶಿವನಿಗೆ । ಒಂದು ಜೇಡರ ಹುಳು ।
ಬಂದು ನೆಳಲಾಗಲೆಂದು । ನಿಂದು ನೂಲುತಿರೆ ॥ ೧೬ ॥

ಒಂದು ಕುಂಜರವಾಗ । ನಿಂದು ನೋಡಿತು ಹುಳುವ ।
ಬಂದು ಕೀಳುತ್ತ ನೂಲ । ತಂದ ವಾರಿಯನು ॥ ೧೭ ॥

ಲಿಂಗಕ್ಕೆ ಸೊಂಡಲಿಟ್ಟು । ಸುರಿದು ವಾರಿಯನೆಲ್ಲ ।
ಗಂಗೆ ಪುಷ್ಕರ ತಂದು । ಲಿಂಗಕರ್ಪಿಸಿತು ॥ ೧೮ ॥

ಇಂತು ಮಾಡುವ ಗಜವ । ನಿಂತು ಜೇಡರ ಹುಳು ।
ಪಂಥಮಾಡುತ ಕಾಯ್ದು । ಕುಂತಿತು ಅಲ್ಲಿ ॥ ೧೯ ॥

ಎಂದಿನಂದದಿ ಬಂದು । ನಿಂದು ಪುಷ್ಕರವಿಡಲು ।
ಸಂದು ಸರಿದು ಪೋಗಿ । ನಿಂದಿತು ಶಿರದಿ ॥ ೨೦ ॥

ಎನ್ನಲಿಂಗಯ್ಯಗೆ । ಬಿಸಿಲಾಗುವಂತೆ ನೂಲ ।
ಮುನ್ನ ಸೆಳೆದ ಪಾಪಿ । ನಿನ್ನಳಿಸುವೆನು ॥ ೨೧ ॥

ಎನುತ ಕುಂಭವ ಕೆರೆಯೆ । ಘನನೋವ ತಾಳದೆ ।
ಜಿನುಗಿ ಬಿದ್ದಿತು ಆನೆ । ನುಸುಳಿ ಪ್ರಾಣವನು ॥ ೨೨ ॥

ಕುಂಭದಿ ಜೇಡ ಸಿಕ್ಕಿ । ಇಂಬಳಿಯಲು ಪ್ರಾಣ ।
ಶಂಭು ಮೆಚ್ಚುತ ಮುಕ್ತಿ । ನಿಂದಿತ್ತನಾಗ ॥ ೨೩ ॥

ಹಾಗೆ ಈ ಶಬರನ । ಬೇಗ ಕೊಲ್ಲುವೆನೆಂದು ।
ಆಗ ಯೋಚನೆಗೊಂಡ । ತೂಗಿ ಶಿರವನ್ನು ॥ ೨೪ ॥

ಬೇಡ ಪೋಗಲು ಅತ್ತ । ಪೂಜಾರಿ ಬೇಗನೆ ತಾ ।
ನೋಡಿ ಶಬರನ ಶೌರ್ಯ । ಈಡಲ್ಲವೆಂದು ॥ ೨೫ ॥

ಧೀರನಿವಗೆ ತಕ್ಕ । ಭಾರಿ ಕತ್ತಿಯ ತಂದು ।
ಜಾರುವಂದದಿ ಶಿರವ । ಮೀರಿ ಹೊಡೆಯುವೆನು ॥ ೨೬ ॥

ಅರ್ಚಕ ಸದನಕ್ಕೆ । ಚರ್ಚೆಮಾಡುತ ಪೋಗಿ ।
ಇಚ್ಛೆಯಾಯುಧ ಕೊಂಡು । ಸಲಿಸದೆ ಬಂದ ॥ ೨೭ ॥

ವಚನ ॥ ಈ ಪ್ರಕಾರ ಪೂಜಾರಿ ಲಿಂಗದ ಹಿಂದೆ ಕುಳಿತಿರಲು, ಕಣ್ಣಪ್ಪನು ಯಥಾಪ್ರಕಾರ ಬಂದು ಪೂಜೆಗೆ ಯತ್ನಿಸಲು, ಈ ಕಣ್ಣಪ್ಪನ ಮುಗ್ಧಭಕ್ತಿಯಂ ಅರ್ಚಕಗೆ ತೋರಬೇಕೆಂದು ಕಣ್ಣು ಕೆಂಪಗೆ ಮಾಡಿ ಬಲಗಣ್ಣಿನಲ್ಲಿ ನೀರಂ ಸುರಿಸುತ್ತಿರಲು, ಕಣ್ಣಪ್ಪ ನೋಡಿ ಭಯಗೊಂಡು ಚಿಂತಿಸುತ್ತ ಲೀಲೆಲಿಂಗಯ್ಯನಂ ನೋಡಿ ನೋಡಿ, ಎಲೆ ಮಹಾದೇವ! ದೇವಿಯು ದಕ್ಷಯಜ್ಞ ಪ್ರವೇಶಿಸಿದಳೆಂದು ದುಃಖಿಸುವೆಯೊ? ಅರ್ಜುನನ ಪೆಟ್ಟಿಗೊ? ಅಥವಾ ಸಾಂಖ್ಯತೊಂಡನ ಶಿಲೆಯಬಡಿತಕ್ಕೊ? ಪಿಟ್ಟವ್ವೆಯ ಹೊಡೆತವನ್ನು ತಾಳಲಾರದುದಕ್ಕಾಗಿ ಶೋಕಿಸುವೆಯೊ? ಕಲಿಗಣ ಹಲಾಯುಧರು ಹೊರಗೆ ನೂಕಿದುದಕ್ಕೊ? ಬೇಡನಾದ ಎನ್ನ ಪೂಜೆ ಹಿತವಿಲ್ಲವೊ? ಭಾಷೆಗೆ ತಪ್ಪಿದೆನೊ? ಹೇಳಯ್ಯ! ಎನ್ನಯ್ಯ!! ಎಂದು ಹಲವಿಧವಾಡಿ ಬಳಲುತ್ತ ಆಲಿಯನ್ನು ಹಿಗ್ಗಲಿಸಿ ನೋಡಿ ಉಃಫೆಂದು ಊದಿ, ಎನ್ನ ತಂದೆಗಿಂತಾದುದೇ! ಎಂದು ಲಿಂಗದ ಕಣ್ಣನೊರಸುತ್ತ ಬಟ್ಟೆಯ ಪೊಟ್ಟಣವ ಬಾಯಲ್ಲಿಟ್ಟು ಶಾಖಮಾಡಿ ಒತ್ತುತ್ತಿರೆ, ಬಟ್ಟೆಯಲ್ಲಾ ಕಣ್ಣೀರಿನಿಂದ ತಣ್ಣಗಾಗುವುದನ್ನು ನೋಡಿ, ಆನಂದ ಬಾಷ್ಪವೋ! ದುಃಖದ ನೀರೋ!! ಎಂದು ತಿಳಿಯಲು ಅವಕಾಶವಿಲ್ಲದೆ ಕಣ್ಣು ತುಂಬಾ ಎಡಬಿಡದೆ ಹರಿಯುವುದಲ್ಲಾ; ಇದು ರೋಗಗಳಿಂದ ಪೀಡಿತವಾದ ಕಣ್ಣೆಂದು ನಿಶ್ಚೈಸಿ, ನಾನು ಔಷಧ ಮಾಡುವ ಹೊಲಬನ್ನೇ ತಿಳಿಯೆನಲ್ಲ! ಈ ವನದಲ್ಲಿ ಒಬ್ಬರ ಸುಳುಹಾದರೂ ಇಲ್ಲವಲ್ಲಾ!! ಈ ರೋಗ ಮಾಣುವುದು ಹೇಗೆ!!! ಎಲೈ ಸ್ವಾಮಿಯೆ ದೇವತೆಗಳಿಗೆಲ್ಲಾ ಪತಿಯಾದ ನಿನಗೆ ಆಲಿ ಹೋದರೆ ನಗೆಗೆಡೆಯಪ್ಪುದು, ಈ ನೀರು ಸುರಿಯದಂತೆ ಸುಖಿಯಾಗು; ಅನಂತಾಭರಣಗಳಿಂದ ಅಲಂಕರಿಸಬೇಕೆಂದಿರುವಷ್ಟರಲ್ಲಿ ಹೀಗಾಯಿತಲ್ಲಾ! ಎಂದು ಹಲವಿಧವಾಗಿ ಹಂಬಲಿಸಿ ನನ್ನ ಸ್ವಚ್ಛವಾದ, ಕಣ್ಣುಗಳನ್ನು ನನ್ನ ಸ್ವಾಮಿಗೆ ಅರ್ಪಿಸಬೇಕೆಂದು ಯೋಚಿಸಿದನದೆಂತೆನೆ.

**ಏಕತಾಳ – ಅರ್ಧರೇಕು.**

ಕಣ್ಣಪ್ಪ ಹರುಷದಿ – ನೋಡುತ್ತಲಾಗ ।
ಕಣ್ಣನಿತ್ತಪೆನೆಂದು – ಪುಷ್ಕರಪಿಡಿದು ॥ ೧ ॥

ಕಡೆಗಣ್ಣಿನೊಳು ಹಾಕಿ – ಮೀಟುತ್ತಲದನು ।
ಮೃಡನ ಬಲಗಣ್ಣಿಗೆ – ಹತ್ತಿಸಲಾಗ ॥ ೨ ॥

ಭರವಸದೊಳು ಅಪ್ಪಿ – ನಿಂದಿತ್ತು ಕಣ್ಣು ।
ಸುರಿದು ಬೀಳುವ ನೀರು – ನಿಂದಿತ್ತು ಬಲದಿ ॥ ೩ ॥

ವಾಮಗಣ್ಣಿನೊಳಾಗ – ಮಿಗೆಚಿಮ್ಮುತ್ತಿರಲು ।
ಸೋಮಧರನೆ ನಿನಗೆ – ಸುಖ ದುಃಖವಿಹುದು । ॥ ೪ ॥

ಇದು ನಿನ್ನ ಸೊಬಗೆಂದು – ಕಳವಳದಿ ನೋಡಿ ।
ಇದಕೆ ಚಿಂತೆಯು ಸಲ್ಲ – ಮಿಗಿಲೊಂದು ಕಣ್ಣು ॥ ೫ ॥

ನನಗಿರೆ ಭಯವೇನು – ನಿನಗರ್ಪಿಸುವೆನು ।
ಎನುತ ನಗುತ ತನ್ನ – ಕೆರದಕಾಲನ್ನು ॥ ೬ ॥

ಮೃಡನೆಡಗಣ್ಣಿನೊಳು – ಇಡುತಗುರಿಗಾಗಿ ।
ದೃಢಭಕ್ತಿಯಿಂದ ತನ್ನ – ಎಡಗಣ್ಣನಾಗ ॥ ೭ ॥

ಪಿಡಿದು ಬಾಣದ ತುದಿಯಿಂ – ಮೀಟುತ್ತಲಿರಲು ।
ಮೃಡ ಪ್ರಸನ್ನತೆಯಾಗಿ – ಗಣ ತಿಂಥಿಣಿಯೊಡನೆ ॥ ೮ ॥

ದೇವದುಂದುಭಿ ವೊಳಗೆ – ಪೂಮಳೆ ಸುರಿಯೆ ।
ದೇವ ಭಕ್ತನನು ಇದಿರು – ಕರುಣದಿಂ ನೋಡಿ ॥ ೯ ॥

ಕಣ್ಣಪ್ಪಗೆಂದಿನಂತೆ – ಕಣ್ಣನ್ನು ಕೊಟ್ಟ ।
ಬಣ್ಣ ಹೊಳಪೇರಿ ಕಣ್ಣು – ಮುನ್ನ ರಂಜಿಸಿತು ॥ ೧೦ ॥

ನೋಟ ಕೂಟಗಳೆರಡು – ಭೇಟಿದೊಳಿರಲು ।
ನೋಟ ಹೊಸಕವಾಗಿ – ವೊದಲಿನ ಕಣ್ಣು ॥ ೧೧ ॥

ನೋಡುವಂದದಿ ನೋಟ – ಉಭಯ ಬೆರದಿತ್ತು ।
ಕೂಡೆ ಲಿಂಗದ ಹಿಂದೆ – ನೋಡಿ ಅರ್ಚಕನು ॥ ೧೨ ॥

ಈಡುಂಟೆ ಭಕ್ತನಿವಗೆ – ಖೋಡಿ ತಾನೆಂದು ।
ದೂಡಿಸಿಟ್ಟನು ಕತ್ತಿ – ಬೇಡುವೆನೆಂದು ॥ ೧೩ ॥

ವಚನ ॥ ಇಂತೀ ಅರ್ಚಕನು ಪ್ರಸನ್ನ ಪಾರ್ವತೀಶನಂ ನೋಡಿ, ಕಣ್ಣಪ್ಪನ ಭಕ್ತಿಗೊಲಿದು ಕೆರದಕಾಲಂಪಿಡಿದು ಸಾಷ್ಟಾಂಗವೆರಗಿನಿಂದು ನುತಿಸಿದನದೆಂತೆನೆ.

**ರಾಗ – ಭೈರವಿ – ಆದಿತಾಳ.**

ಶಿವಭಕ್ತ ಶಿವಮಹಿಮ – ಕಣ್ಣಪ್ಪ | ಭುವನರಕ್ಷಕನೀನು | ಕುವರನೆನ್ನನು ನಿನ್ನ |
ಹವಣದೊಳಿಟ್ಟು ನೀ | ಜವದಿಕೈಬಿಡದಲೆ | ಅವಿರತ ಪೊರೆವುದು || ಶಿವ || || ೧ ||

ದುಷ್ಕೃತಿಪೂರಿತನು – ದುರ್ಜನ | ಮರ್ಮದ ವಿಷಯಕನು | ಮರ್ಮವನರಿಯದ |
ಕರ್ಮವಿಬದ್ಧಗೆ | ನಿರ್ಮಲ ದಯವಿಡು | ಧರ್ಮಪೂರಾಯ || ಶಿವ || || ೨ ||

ನಿನ್ನ ಕೆರದ ಧೂಳಿ – ಹರನೊಳು | ಮುನ್ನ ರಂಜಿಪ ಶಶಿಗೆ | ಚೆನ್ನಗೆಂಪಾಯಿತು |
ಕನ್ನೆಗಂಗೆಗೆ ಶಿರ | ಚಂದ್ರವದಾಗುತ | ರಂಜಿಸುತಿಹುದು || ಶಿವ || || ೩ ||

ಹರನ ಮುಕುಟದಲ್ಲಿ – ನೆಲಸಿ | ಮಿರುಗುವ ಚಂದ್ರಮಗೆ | ಚಿರಸುಖವಾಯಿತು |
ವರರಕ್ಷೆ ಸೋಂಕಲು | ಕರದ ವಂದನೆಗವ | ಭರದಿಯೋಗ್ಯನು ಆದ || ಶಿವ || || ೪ ||

ಹರನು ಮೆಚ್ಚುತ ನಿನ್ನ – ಕೆರವ | ಧರಿಸಲು ಮಹಿಗೆಲ್ಲ | ನಿರುತವುಹರುಷದಿ |
ವರಭಕ್ತವತ್ಸಲ | ಪರಮಖ್ಯಾತಿಯ ತಾನು | ಸರಸದಿ ಹೊಂದಿದ || ಶಿವ || || ೫ ||

ವಚನ || ಹೇ ! ಕಣ್ಣಪ್ಪ ನಿನ್ನ ಪಾದರಕ್ಷೆಗೆ ಅಜನು ಯೋಗ್ಯನಾಗಿದ್ದರೆ ಶಂಕರನ ಮುಡಿಯನ್ನು ಕಾಣದೆ ಹಿಂದಿರುಗುತಿದ್ದನೆ !! ನಿನ್ನ ಜೋಡು ಮುಕ್ತಾಂಗ ನಾಶಿರಕೆ ಕಿರೀಟವಾಗಿ ರಂಜಿಸಿತು. ಚಕ್ರಾಯುಧವನ್ನು ಬಯಸಿ ಹರಿಯು ಹರನ ಪಾದಕ್ಕೆ ಒಂದು ನಯನವನರ್ಪಿಸಿದ. ನೀನು ಫಲಪದಾಪೇಕ್ಷೆಯಿಲ್ಲದೆ ಕಣ್ಣುಗಳ ನರ್ಪಿಸಿದೆ. " ದುಷ್ಟರ ಸಹವಾಸಕ್ಕಿಂತ ಸತ್ಪುರುಷರ ಕಲಹವೇ " ಲೇಸೆಂದು ಅರ್ಚಕನು ಮತ್ತಿಂತೆಂದನದೆಂತೆನೆ.

**ಅಟತಾಳ.**

ಶಿವನ ಮೆಚ್ಚಿಗ ಶರಣ ನಿನ್ನನು | ಜವದಿ ಕೊಲ್ಲಲು ದೃಢವ ಮಾಡಿಯೆ |
ಅವಿತು ಕುಳಿತಿರ್ದೆನಗೆ ನಿನ್ನಯ – ಕರುಣದಿಂದ || ೧ ||

ಹರನ ಚರಣವ ಕಂಡೆ ಪ್ರಿಯದಲಿ | ಹರನ ಪ್ರೀತಿಯು ನಿನ್ನನಡತೆಯು |
ಧರೆಯೊಳಿಹ ಆಮ್ನಾಯದೊಳಗೆ – ಒರೆದುದಿಲ್ಲ || ೨ ||

ಹರನ ಮಹಿಮೆಯ ಹರನ ಭಕ್ತರು | ಅರಿವರಲ್ಲದೆ ನರಗುರಿಗಳೀ |
ಧರೆಯ ಮನುಜರು ತಿಳಿಯೆ ಶಕ್ತರೆ – ಶರಣ ಮಹಿಮೆಯನು || ೩ ||

ಪಿತನ ಕೊಲುವುದು ಸುತನ ಹರಿವುದು | ಸತಿಯರುಣ್ಣುತ ಕೊಡುವುದು |
ಸತಿಯುಕೊಲಿಸಲು ಕುಂಟಣಿಯ ಮಾಳ್ಪುದು – ಹಿತವು ಶಿವಗೆ || ೪ ||

ಕರವ ಹರಿವುದು ಶಿರವ ಹರಿವುದು | ಭರದಿ ಕಲ್ಲೊಳು ಇಟ್ಟು ಶಿವನನು |
ಹಿರಿಯಮನೆ ಕಾವಲನು ಮಾಳ್ಪುದು – ಚರಿತೆಯಿಹುದು || ೫ ||

ನೀನು ಅತಿಹಿತದಿಂದ ಮಾಂಸವ । ಸಾನುರಾಗದಿ ತಂದು ಸಲಿಸುವ ।
ಪೇನು ತಿಳಿಯದು ಆವ ವೇದವು – ಹೇಳಲಿಲ್ಲ ॥ ೬ ॥

ಪರಮಭಕ್ತ ನಿನ್ನಂಥ ಶರಣರ । ಚರಿತೆ ಸಿದ್ಧಿಯ ಪೇಳಲಸದಳ ।
ದುರುಳನಪರಾಧವನು ಕ್ಷಮಿಸುತ – ಪೊರೆಯೊ ನೀನು ॥ ೭ ॥

ಇಂತಿ ಅರ್ಚಕ ಪೇಳಿ ವಂದಿಸಿ । ಮುಂತೆಬಿದ್ದಿರುವನಿಗೆ ಕಣ್ಣಪ್ಪ ।
ಸಂತಸದಿ ತಾ ನೋಡಿ ಹರಕೃಪೆ – ಗವನ ಸಂಧಿಸಿದ ॥ ೮ ॥

ಶಿವನೋಳ್ ದೃಷ್ಟಿಯು ಎರಕವಾಗುತ । ಜವದೊಳ್ಹರಿವ ಮನವಕರಿಗೊಳಿಸ ।
ರಿವನು ಶಿವನಲಿ ಐಕ್ಯಮಾಡಿದ – ಜವದಿ ಕಣ್ಣಪ್ಪ ॥ ೯ ॥

ಹರನು ಶರಣನನ್ನಪ್ಪಿಕೊಳ್ಳುತ । ಪರಮಪದವಿಯ ಕುರಿತು ಹರಪುರಿ ।
ಗಿರದೆ ಒಯ್ದನು ಪುಷ್ಪರಥದಲಿ – ಕರುಣದಿಂದ ॥ ೧೦ ॥

ದೇವದುಂದುಭಿ ಮೊಳಗೆ ಪೂಮಳೆ । ಸಾವಧಾನದಿ ಕರೆಯಲಾಕ್ಷಣ ।
ದೇವ ಕೈಲಾಸವನು ಪೊಕ್ಕನು – ದೇವಗಣರೊಡನೆ ॥ ೧೧ ॥

ಹರಸಿ ಗಣಪದವಿತ್ತು ಗಣರೊಳು । ಇರಿಸಿದನು ಕಣ್ಣಪ್ಪನನು ಹರ ।
ಶರಣರೊಳು ಸ್ತೋತ್ರಾರ್ಹನಾದನು – ಶರಣರಿದ ಕೇಳಿ ॥ ೧೨ ॥

ನವಸುಮುಗ್ಧರ ಕಥೆಯ ಪೇಳಿದ । ಶಿವನ ಬಸವನು ಚೆನ್ನಬಸವಗೆ ।
ಶಿವನ ಅನುಭವಮಂಟಪದಿ ಕ – ಲ್ಯಾಣಪುರದೊಳಗೆ ॥ ೧೩ ॥

ಮುಗ್ಧಕಥೆಗಳ ನಿಃಶಬ್ದವಾಗಿಯೆ । ಸಿದ್ಧಿಮನದತಿ ಭಕ್ತಿಯಿಂದಲಿ ।
ಬದ್ಧದಿಂ ಲಾಲಿಸಲು ಶಿವಪದ – ಸಿದ್ಧಿಯಾಗುವುದು ॥ ೧೪ ॥

ಶರಣ ಲೀಲಾಕೃತಿಯನಿದ ಬರೆ । ದರಿದು ಓದಿದರರ್ಥಗೆಯ್ದರ ।
ಹರಸುತಲಿ ಶ್ರೀ ಮಲ್ಲಿಕಾರ್ಜುನ – ವರವ ಕೊಡುವ * ॥ ೧೫ ॥

ಇಂತಿ ಪದ್ಯಗಳು ೮೦

**ಅಂತು ಸಂಧಿ ೨೦ ಕ್ಕಂ ಸಂಪೂರ್ಣಗಣನೆ – ೪೭೩೯ ಕ್ಕಂ ಮಂಗಳಮಹಾ**

**ಶ್ರೀ ಶ್ರೀ ಶ್ರೀ ಶ್ರೀ ಶ್ರೀ**



* ಈ ನವಮುಗ್ಧರ ಕಥೆಗಳು (ಅ, ಉ, ಖ, ಗ, ಚ, ಜ, ಟ, ತ, ಬ.) ಪ್ರತಿಗಳಲ್ಲಿಲ್ಲ.

## ಇಪ್ಪತ್ತೊಂದನೆಯ ಸಂಧಿ

# ಹರಳಯ್ಯನ ಕಥೆ

**ವೃತ್ತ.**

ಶ್ರೀ ಗುರುಸಂಗ ನಿರಂಗಂ ವೃಷಭ ಪ್ರೇಮ ಭಕ್ತಕಲ್ಪದ್ರುಮಂ ।
ಶ್ರೀ ಗಿರಿಜೇಶ ಮಹೇಶ ನಿಜಾಂಘ್ರಿ ಸುಪದ್ಮರಾಜಿತ ಶಾಶ್ವತಂ ॥
ನಾಗಕಂಕಣವ ನಾಗವ ಕಂಠದಲಿ ತಾಳ್ದ ಪೃಥುವೀಶನಂ ।
ಆಗಳು ಪೂಜಿಸಿ ದೃಷ್ಟವ ಮೆರೆದಾ ನಂದಿ ಸೀಂ ಸಲಹೆನ್ನನು ॥ ೧ ॥

**ದ್ವಿಪದಿ.**

ಸಿರಿಯ ಕದ್ದೊಯ್ದವನ ಶಿರವನರಿದವನ ।
ತರುಣನ ತಾಯ ತಮ್ಮನ ಮಗಳ ಮಗನ ॥ ೧ ॥

ಸೆರೆಯನಾಳಿದನ ಸೇವೆಯಮಾಡಿ ಮೆಚ್ಚಿಸಿದ ।
ಸೃಷ್ಟಿಗೀಶ್ವರನ ಶರಣರನು ಸೆರೆಭಜಿಸಿ ॥ ೨ ॥

ಸ್ತುತಿಸಿ ಭಜಿಸುತಲಿ ಕೀರ್ತಿಸುತ ಕೊಂಡಾಡಿ ।
ಶರಣೆಂದು ಸಾಷ್ಟಾಂಗವೆರಗಿ ಬಸವನಿಗೆ ॥ ೩ ॥

ಪರಮ ಶ್ರೀ ಗುರು ಪ್ರಭು ಸಿದ್ಧರಾಮುಂಗೆ ।
ಧುರಧೀರ ಮಡಿವಾಳಮಾಚಿದೇವಂಗೆ ॥ ೪ ॥

ಗುರುಚೆನ್ನಬಸವಾದಿ ಸಕಲ ಪ್ರಮಥರಿಗೆ ।
ಶಿರಮಣಿದು ಸಂಗಮೇಶ್ವರಶರಣ ಕೃತಿಯ ॥ ೫ ॥

ವಿರಚಿಸುವೆ ಭಕ್ತಜನ ಮನ ಹರುಷಿಪಂತೆ ।
ಕೇಳಿ ಸಂತಸದಿಂದ ಸದ್ಭಕ್ತಿಭಾವದಲಿ * ॥ ೬ ॥

**ಏಕತಾಳ.**

ಶೃಂಗಾರ ಶಿವಕಳೆ । ಸಿರಿಯು ಕಲ್ಯಾಣದ ।
ಮಂಗಳೋತ್ಸಹದ ಆ । ಮಹಿಮೆಯನೊರೆವೆ ॥ ೧ ॥

---

* ಈ ಅರ್ಧಪದ್ಯ (ಅ, ಒ, ಚ, ಜ, ಬ.) ಪ್ರತಿಗಳಲ್ಲಿಲ್ಲ.

ಇಳೆಗೆ ನಾಲ್ವತ್ತೆಂಟು । ವಿಸ್ತೀರ್ಣ ಯೋಜನ ।
ಕಳೆಯುಳ್ಳ ಕಲ್ಯಾಣ । ಕ್ರಮದಿ ಒಪ್ಪಿಹುದು ॥ ೨ ॥

ಚಂದ್ರ ಸೂರ್ಯರ ವೀದಿ । ಚೆಲುವುಳ್ಳ ಮಾಳಿಗೆಗಳ್ ।
ಮಂದಿರ ಮದನ ಮಂ । ಟಪಗಳೇನೆಂಬೆ ॥ ೩ ॥

ಮದನಕ್ಕೆ ಮಾಳಿಗೆ । ಚದುರ ಬೋದಿಗೆ ಕಂಬ ।
ಪುದಿದ ಕನಕದ ಲೋವೆ । ಮುದದಿ ಒಪ್ಪಿ[1] ಹವು[1] ॥ ೪ ॥

ಮಾಣಿಕ್ಯದಸಾಲು ಮಂ । ಜುಳ ತೋರಣ ದ್ವಾರಗಳು ।
ಮೇಲುಪ್ಪರಿಗೆ ಸಾಲು । ಮೆರೆದವಾ ಪುರದಿ ॥ ೫ ॥

**ಜಂಪೆ.**

ನಿಳಯ ನಿಳಯಗಳಲ್ಲಿ । ಕೊಳನು ಕಿತ್ತಳಿ ಬಾಳೆ ।
ಎಳನೀರು ತೆಂಗು ದ್ರಾ । ಕ್ಷಿಗಳು ಖರ್ಜೂರ ॥ ೧ ॥

ನಳಿನಗೊಳ ನಾಗವ । ಲ್ಲಿಯು ಪೂಗ ಗಜನಿಂಬೆ ।
ತಳಿರೆಸೆವ ಮಾವು ಮಂ । ದಾರ ವೃಕ್ಷಗಳು ॥ ೨ ॥

ಮೊಲ್ಲೆ ಮಲ್ಲಿಗೆ ಜಾಜಿ । ಮರುಗ ಸೇವಂತಿಗೆಯು ।
ಬಿಲ್ವಪತ್ರೆಯ ವೃಕ್ಷ । ವೆಲ್ಲಿ ನೋಡಿದರು ॥ ೩ ॥

ಮನೆ ಮನೆಗೆ ಶೃಂಗಾರ । ಮನವೊಪ್ಪಿ ಇರುತಿಹುದು ।
ಘನದೇವ ವ್ರತ ನೇಮ । ದಿನಚರಿಯುಳ್ಳನರರು ॥ ೪ ॥

ಹೋಮ ನೇಮವು ಜಪವು । ಸ್ವಾಮಿದರುಶನ ತಪವು ।
ಆ ಮಹಾಪುರದೊಳಗೆ । ಅತಿ ಒಪ್ಪುತಿಹವು ॥ ೫ ॥

ವಚನ ॥ ಮತ್ತುಮೆಂತೆನೆ.

**ತ್ರಿವುಡೆ.**

ಪುರದ ವೀದಿಯು ಪುಣ್ಯಜನಗಳು । ತರತರದ ಅಂಗಡಿಯ ಸಾಲಲಿ ।
ಇರುವ ಪರಿಪರಿ ಬೇಹರದ ಶೃಂ -- ಗರವನೇನೆಂಬೆ ॥ ೧ ॥

ತರುಣಿಯರ ಶೃಂಗಾರಕೊಪ್ಪುವ । ಮೆರೆವ ಮೌಕ್ತಿಕ ವಿದ್ರುಮದತರ ।
ತರದಲೊಪ್ಪುವ ವಜ್ರಮಾಣಿಕ -- ನೀಲದಂಗಡಿಯು ॥ ೨ ॥

ಪರಿಪರಿಯ ಬಣ್ಣಗಳ ಬಂಧಿಸಿ । ಒರೆದು ನಿರ್ಧರಮಾಡಿ ಕನಕವ ।
ಧರೆಗೆ ಸುರಿಸುವ ಚೆದುರ ಚಿನ್ನ-- ವರದರಂಗಡಿಯು ॥ ೩ ॥

---

1-1 ಹುದು (ಅ, ಜ, ಡ, ಬ.)

ಪಟ್ಟೆಝುಲ್ಲಿಯು ಚಿನಿಚಿನಾಂಬರ । ಪಟ್ಟು ಪಿತಾಂಬರವು ಪಲಬಗೆ ।
ಇಟ್ಟ ಜವಳಿಯ ಸಾಲು ಮಳಿಗೆಗ – ಳೆಸೆದವರ್ಥಿಯಲಿ ॥ ೪ ॥
ಗಂಧವಿಡಿ ಪರಿಮಳದ ಮೋಹರ । ಚಂದಚಂದದ ಹೂವಿನಂಗಡಿ ।
ಹೊಂದಿ ಮಾರುವ ವಾಣಿಜರ ಕೇ – ಣಿಗರ ಅಂಗಡಿಯು ॥ ೫ ॥

**ಅಟತಾಳ.**

ಮುದ್ದುಮೋಹದ ಮದವಣಿಗರು । ತ್ಸಾಹ ಒಂದುಕಡೆಯಲಿ ।
ಚದುರ ಬ್ರಾಹ್ಮಣ ಚೆಲುವ ಶಿಶು ಮುಂ – ಜಿಗಳು ಒಂದೆಸೆಯು ॥ ೧ ॥
ದೇವರುಗಳುತ್ಸವದ ಸಂದಣಿ । ತೀವಿ ಒಂದು ಕಡೆಯಲಿ ।
ಭಾವಕರು ಬಲ್ಲವರ ಓದಿನ – ದೊಂದು ಸಂದಣಿಯು ॥ ೨ ॥
ನೆತ್ತ ಪಗಡೆಯು ಜೂಜಿನಾಟದ । ಮೊತ್ತವೊಂದು ಕಡೆಯಲಿ ।
ಸತ್ಯವಾಕ್ಯದ ಸಜ್ಜನರ ಸ – ದ್ಗೋಷ್ಠಿಯೊಂದುಕಡೆ । ॥ ೩ ॥
ತುರಗ ಗಜ ನೀರಾಟಕ್ಕೈದುವ । ಅರಸು ಸುತರಾ ಸಂದಣಿ ।
ದೊರೆಗಳತಿ ವೈಹಾಳಿ ತುರಗದ – ಬ್ಬರದ ಸಂದಣಿಯು ॥ ೪ ॥
ಹೊಗುವ ಹೊರಡುವ ಬೇಹರಂಗಳ । ಜಗದ ಜನದಾ ಸಂದಣಿ ।
ಬಗೆಬಗೆಯ ಚೌಷಷ್ಟಿ ವಿದ್ಯಾ – ಧರರ ಸಂದಣಿಯು ॥ ೫ ॥

**ದ್ವಿಪದಿ.**

ಅಂತಪ್ಪ ಪುರದೊಳಗೆ ಅಧಿಕವಾದಂಥ ।
ಸಂತತಾ ಶರಣರ ಸಾಲುಮಂದಿರಗಳ್ ॥ ೧ ॥
ರತ್ನಗೆಲಸಗಳಿಂದ ರಮ್ಯವಾಗಿರ್ದ
ಎತ್ತಿದಾ ಗೋಪುರಗಳೆಸೆವ ಸೌಧಗಳು ॥ ೨ ॥
ಮುತ್ತಿನಾ ತೋರಣವು ಮುಂಗಡೆಯ ಲೋವೆ ।
ಚಿತ್ರಗೆಲಸಗಳಿಂ ವಿಚಿತ್ರವಾಗಿಹವು ॥ ೩ ॥
ಕನಕ ಮಾಣಿಕ ರತ್ನ ಕಳಶದಿಂದೆಸೆವ ।
ಘನತರದ ಕರುಮಾಡ ದಿನಕರನ ಸೋಂಕೆ ॥ ೪ ॥
ಅಂತಪ್ಪ ನಗರದೊಳಗಧಿಕವಾಗಿರ್ದ ।
ಸಂತತೊಪ್ಪುವ ಬಸವರಾಜನರಮನೆಯು ॥ ೫ ॥
ಏಳನೂರೆಪ್ಪತ್ತು ಎಸೆವ ಹೊಂಗಳಶ ।
ಸಾಲುಗೋಪುರವೆತ್ತಿ ಸಲೆ ಒಪ್ಪುತಿಹವು ॥ ೬ ॥

ಚೆನ್ನಬಸವೇಶ್ವರನ ಚೆನ್ನದುಪ್ಪರಿಗೆ ।
ಹೊನ್ನಕಲಶಗಳಿಂದ ಹೊಳೆವ ನಿಳಯಗಳು ॥ ೭ ॥

ಮಿಂಚುಳ್ಳ ಮಿಸುನಿ ದ್ವಾರದಲೊಪ್ಪುವಂಥ ।
ಪಂಚಾಕ್ಷರಿಯಮುದ್ರೆ ಪಟ ನಂದಿಧ್ವಜವು ॥ ೮ ॥

ಷಡುಸ್ಥಳದ ನಿರ್ಣಯದ ಶಾಸನಂ ಬಲಿದು ।
ಪೊಡವಿಗಚ್ಚರಿಯಾಗಿ ಪೊಳೆವ ದ್ವಾರಗಳು ॥ ೯ ॥

ಉಪ್ಪರಿಗೆ ಗುಡಿ ಉಭಯ ನಂದಿಯಕಂಬ ।
ಒಪ್ಪಿ ಮೆರೆದವು ಶಿವನಿಪ್ಪ ನಿಳಯದೊಲು ॥ ೧೦ ॥

**ಏಕತಾಳ.**

ಲಕ್ಷದಮೇಲೆ ತೊಂ । ಬತ್ತಾರು ಸಾವಿರ ।
ಮುಕ್ಕಣ್ಣ ನಿಳಯಗಳು । ಮುದದಿ ಒಪ್ಪಿಹವು ॥ ೧ ॥

ಅಂತೆರಡು ಲಕ್ಷದೆಂ । ಬತ್ತೈದು ಸಾವಿರ ।
ಮುಕ್ಕಣ್ಣಭಕ್ತರ । ಮನೆಯೊಪ್ಪುತಿಹವು ॥ ೨ ॥

ಹಿರಿಯರು ಮಾನ್ಯರು । ಪರಮ ಸದ್ಭಕ್ತರು ।
ಚರಲಿಂಗ ಮೂರ್ತಿಗಳು । ಪುರದಿ ತುಂಬಿಹರು ॥ ೩ ॥

ಸಿರಿ ಭೋಗ ಸಕಲ ಸಂ । ಪದ ಸುಖದಿಂ ಪುರ ।
ಪರಮ ಸಂತೋಷದಿ । ಒಪ್ಪಿರುತಿಹುದು ॥ ೪ ॥

ಅಂತಪ್ಪ ಪುರವನಾ । ಳುವ ನೃಪ ಬಿಜ್ಜಳ ।
ಸಂತತ ಸಕಲ ಭೋ । ಗದೊಳಿರುತಿಹನು ॥ ೫ ॥

ಕರಿ ನವಲಕ್ಷವು । ತುರಗವು ಶತಕೋಟಿ ।
ಪರಿಕಿಸಲು ಕಾಲಾಳು । ವಿರಚಿಪಡರಿದು ॥ ೬ ॥

ಭರತಖಂಡದ ಒಳ । ಗಿರುವ ಐವತ್ತಾರು ।
ಧರೆಗೆಲ್ಲ ಅರಸಾಗಿ । ಇರುವ ಬಿಜ್ಜಳನು ॥ ೭ ॥

ವಚನ ॥ ಮತ್ತಿಂತೆಂದಂ.

**ಜಂಪೆ.**

ಮಂತ್ರಿಗಳು ಮಂಡಲೇ । ಶ್ವರ ಮಕುಟ ವರ್ಧನರು ।
ಅಂತು ಎಪ್ಪತ್ತೇಳು । ವಿನಿಯೋಗದವರು ॥ ೧ ॥

ಹಿಂದು ಮಂತ್ರಿಪ್ರಧಾನ । ತಂಡವೆಲ್ಲಕೆ ಕರ್ತ ।
ದಂಡೇಶಬಸವನು । ದ್ದಂಡ ಒಪ್ಪಿಹನು ॥ ೨ ॥

ದೊರೆ ಮಂತ್ರಿ ಸಕಲ ರಾ । ಜ್ಯದ ಪ್ರಜೆ ಪರಿವಾರ ।
ಪರಮ ಸೌಭಾಗ್ಯದೋಳ್ । ಹರುಷದಿಂದಿಹರು ॥ ೩ ॥

ಧರೆಹದಿನಾಲ್ಕು ಲೋ । ಕವ ಪೊರೆವುತಿಹ ಬಸವ ।
ವರಮಂತ್ರಿ ಬಿಜ್ಜಳಗೆ । ಸರಿಯಾರು ಜಗದಿ ॥ ೪ ॥

ಮಳೆಯಿಂದ ಬೆಳೆಯಿಂದ । ಬಹಳ ಸಂಪದದಿಂದ ।
ಕಳೆಯೇರಿ ಜಗವು ಕಂ । ಗೊಳಿಸುತಿರುತಿಹುದು ॥ ೫ ॥

ದಿನಚರಿಯು ರಾಯನಿಗೆ । ಘನತರದ ಶಿವಮಹಿಮೆ ।
ಯನು ತೋರಿ ಸರ್ವಜನ । ರಚ್ಚರಿಪಡಿಸುತ * ॥ ೬ ॥

ಕಟ್ಟಿದಾರಿಗೆ ಹೊನ್ನು । ಕಂದಾಯ ನೇಮಿಸಲು ।
ಸೃಷ್ಟಿಗೆಲ್ಲಕು ಬಸವ । ಸೌಖ್ಯಗೈದಿಹನು * ॥ ೭ ॥

ಶರಣರನು ಭಕ್ತಿಯಲಿ । ಸಲೆ ಮೆಚ್ಚಿಸುತ ರಾಜ್ಯ ।
ಪರಮ ಸದ್ಧರ್ಮದಲಿ । ಪಾಲಿಸುತಲಿಹನು ⁑ ॥ ೮ ॥

**ಕಂದಪದ್ಯ.**

ಕಲಿವರುಷ ಮೂರುಸಾವಿರ ।
ಸಲೆ ಒಂಬೈನೂರ ನಾಲ್ಕು ಸಲುತಿರಲಾಗಳ್ ॥
ಬಲುಪಿನ ಬಿಜ್ಜಳನೈಶ್ವರಿ ।
ಕಲಿದೇವಿ ಕಡೆಗಾಲಕಿನ್ನು ಕಾರಣ ಸೂಚನೆ ॥ ೧ ॥

ವಚನ ॥ ಕಲಿವರುಷ ಮೂರುಸಾವಿರದ ಒಂಬೈನೂರ ನಾಲ್ಕನೆಯ ಮುಂದಣ ಕೀಲಕ ಸಂವತ್ಸರದಲ್ಲಿ,

**ಸೀಸಪದ್ಯ.**

ಪೊಡವಿಯೇಕ ಚ್ಛತ್ರದೊಡೆಯ ಬಿಜ್ಜಳರಾಯು ।
ಸಡಗರದಿ ಸಕಲ ವೈಭವಂಗಳಿಂದ ॥ ೧ ॥

ಕಡುಜಾಣ ಕವಿ ಗಮಕಿ ವಾದಿ ವಾಜ್ಮಿಕರಿಂದ ।
ಒಡನೊಪ್ಪೆ ಶಕುನ ಶಾಸ್ತ್ರಜ್ಞರಿಂದ ॥ ೨ ॥

---

* ಈ ಪದ್ಯಗಳು (ಅ, ಒ, ಟ, ಡ, ದ, ಬ.) ಪ್ರತಿಗಳಲ್ಲಿಲ್ಲ.

⁑ ಈ ಪದ್ಯ (ಎ.)ಪ್ರತಿಯಲ್ಲಿ ಮಾತ್ರವಿದೆ.

ನಡೆವ ಸ್ಥಿತಿಗತಿಯ ಭೂತಭವಿಷ್ಯದ್ವರ್ತಮಾನ ।
ಪೊಡವಿಯೊಳು ಬಲ್ಲಂಥ ಪ್ರೌಢರಿಂದ ॥ ೩ ॥

ಎಡ ಬಲದ ಮಂತ್ರಿ ಸಾಮಂತ ಸೇನಾಧಿಪರ ।
ಒಡನೆ ಓಲಗಗೊಟ್ಟು ಇರುವೆಡೆಯೊಳು ॥ ೪ ॥

ಮೃಡನಾಜ್ಞೆಯಿಂದ ಮಾಯದಿಂ ।
ಪೊಡವೀಶನಿದಿರೊಳು ಪಲ್ಲಿ ನುಡಿದುದು ದ್ವಾರದಲ್ಲಿ ॥ ೫ ॥

ವಚನ ॥ ಇಂತು ಬಿಜ್ಜಳರಾಯಂ ಕೇಳುವಂತೆ ಪಲ್ಲಿ ನುಡಿಯಲು, ಆ ಪಲ್ಲಿ ನುಡಿದ ಫಲವೇನೆಂದು ಬಿಜ್ಜಳರಾಯ ಬಲ್ಲಂಥ ಶಕುನಿಗಳಂ ಕೇಳಲು ಅವರು ಪೇಳುತಿರ್ದರದೆಂತೆನೆ.

**ಕೊಂಚೆ ಜಂಪೆ.**

ಪೊಡವಿಪತಿ ಲಾಲಿಸೆನ್ನೊಡೆಯ – ಪಲ್ಲಿ । ನುಡಿದಂಥ ಫಲದಬಗೆ ವಿಷಯ ।
ಕೆಡುವ ಕಾಲವು ಇನ್ನು ಜೀಯ – ಕಲ್ಯಾಣ । ದೊಡೆಯನಿಗೆ ಮುಂದೆ ಅಪಜಯ * ॥

ಪಲ್ಲಿಶಕುನವ ಕೇಳು ರಾಯ – ಲೋಕ । ತಲ್ಲಣವು ಕಾರ್ಯ ಬಹುವಾಗಿ ।
ಕಲ್ಯಾಣಕಿನ್ನು ಅಪಜಯವು – ಧಾಳಿ । ಎಲ್ಲ ಲೋಕಕ್ಕೆ ತನ್ಮಯವು ॥ ೨ ॥

ಕಷ್ಟ ಕಲ್ಯಾಣಪಟ್ಟಣಕೆ – ಇನ್ನು । ನಷ್ಟ ಸಕಲಾದಿ ಸಂಪದಕೆ ।
ದೃಷ್ಟವಿದು ನಡೆವ ಕಾರ್ಯಕ್ಕೆ – ಇದನು । ಎಷ್ಟೆಂದು ತಿಳಿಯದಿರು ಮನಕೆ ॥ ೩ ॥

ನಾಲ್ವತ್ತು ಎಂಟು ಯೋಜನದ – ಗ್ರಾಮ । ಪೋಲಿನ್ನು ಕೇಳು ನಿಸ್ಸೀಮ ।
ಮೇಲೆ ನೀ ಗಳಿಸಿರ್ದ ಹೇಮ – ಮುಂದೆ । ಪಾಲಿಸುವರಿಲ್ಲ ಕಲಿಭೀಮ ॥ ೪ ॥

ಬಲಭುಜವು ಬಸವದಂಡೇಶ – ಬಿಟ್ಟು । ತೊಲಗಿ ಪೋಪ[1] ರೆನ್ನು[1] ತೈತೆ ।
ಸಲೆಗುರುವು ಕಪ್ಪಡಿಯ ಸಂಗ – ಮೇಶ್ವರ । ನಲ್ಲಿ ಬೆರೆವರೆನ್ನುತೈತೆ ॥ ೫ ॥

ಪಟ್ಟಣದ ಶರಣಜನರೆಲ್ಲ – ಉಳುವೆಗೆ । ಬಿಟ್ಟು ಹೋದಾರೆನ್ನುತೈತೆ ।
ಗಟ್ಟಿಯ ಕಲ್ಯಾಣವಸ್ತು – ಹಳ್ಳಿಗಳಾಗಿ । ಕೆಟ್ಟುಹೋದೀತೆನ್ನುತೈತೆ ॥ ೬ ॥

ಅರಸುತನ ಸರಿಯೆನ್ನುತೈತೆ – ಮುಂದೆ । ಕರಿಕರೆಯು ಧರೆಯೆನ್ನುತೈತೆ ।
ಪರಿತಾಪರುದ್ರನೆಂಬುವನು – ಕಲ್ಯಾಣ । ಪುರವನಾಳುವನೆನ್ನುತೈತೆ ॥ ೭ ॥

ತುರುಕರಿಗೆ ಪಟ್ಟವೆನ್ನುತೈತೆ – ಮುಂದೆ । ಕರಿಕರೆಯು ಜಗವೆನ್ನುತೈತೆ ।
ತುರುಕರಿಗೆ ಬಲಹೆಚ್ಚಿ ಧರೆಯ – ಗ್ರಾಮಗಳು । ಸೆರೆಸೂರೆಯೆಂದೆನ್ನುತೈತೆ ॥ ೮ ॥

---

* ಈ ಪದ್ಯ (ಜ.) ಪ್ರತಿಯಲ್ಲಿ ಮಾತ್ರವಿದೆ. 1-1 ನೆಂಬು (ಇ, ಖ, ಬ.)

**ಕಂದಪದ್ಯ.**

ಇಂತೆಂದು ಪಲ್ಲಿ ಶಕುನವ ।
ಮುಂತೆಯೆ ಶಕುನಿಗಳು ಪೇಳೆ ಕೇಳುತಲಾಗಂ ॥
ಎಂತಾದಡಾಗಲೆನುತಲಿ ।
ಸಂತೋಷದಿ ರಾಜ್ಯವಾಳುತಿರ್ದನು ರಾಯಂ ॥ ೧ ॥

**ಜಂಪೆ.**

ಗಡಿದುರ್ಗ ಸಕಲ ರಾ । ಜಾದಿಮಾನ್ಯರ ಮೇಲೆ ।
ಎಡಬಿಡದೆ ಎಚ್ಚರದೊ । ಳಿರುತಿರ್ದ ರಾಯ ॥ ೧ ॥
ಮರೆಹೊಕ್ಕವರ ಕಾಯ್ದು । ಮಾರಾಂತವರ ಸದೆದು ।
ಧರೆಯ ಪಾಲಿಸುತ ಸುಖ । ಮಿರುತಿರ್ದ ರಾಯ ॥ ೨ ॥
ವರಮಂತ್ರಿ ಬಸವೇಶ । ಧರೆಯ ಧರ್ಮವ ಬಲ್ಲ ।
ಹಿರಿದು ಬದುಕಿನೊಳು ಎ । ಚ್ಚರವು ಇರಲೆಂದ ॥ ೩ ॥

ವಚನ ॥ ಎಂದ ಮಾತಿಗೆ ಬಸವೇಶ್ವರನಿಂತೆಂದಂ.

**ತ್ರಿವುಡೆ.**

ಎಂದ ಮಾತಿಗೆ ಬಸವರಾಜನು । ಎಂದನಾ ಬಿಜ್ಜಳನೃಪಾಲಗೆ ।
ಮುಂದೆ ನಡೆಯುವ ಕಾರ್ಯಗತಿಗಳ – ಅರಿತರಾರು ॥ ೧ ॥
ನಂದಿವಾಹನ ಶಿವನ ಕಟ್ಟಳೆ । ಇಂದ್ರ ಹರಿಯಜ ಸಕಲ ಸುರರಿಗೆ ।
ಒಂದು ತಪ್ಪದು ಸಕಲ ಮುನಿಜನ – ವೃಂದ ಸರ್ವರಿಗೆ ॥ ೨ ॥
ಕೇಳದಿರು ಕೊಂಡೆಯರ ನುಡಿಗಳ । ತಾಳದಿರು ಮನದಲ್ಲಿ ಕ್ರೋಧವ ।
ಭಾಳಲೋಚನ ಭಕ್ತವೈರವ – ತಾಳಿ ಕೆಡಬೇಡ ॥ ೩ ॥

ವಚನ ॥ ಎಂದು ಬಸವೇಶ್ವರದೇವರು ಬಿಜ್ಜಳಗೆ ಸೂಚನೆಯಂ ತೋರಿ, ಮುಂದೆ ನಾಲ್ಕಾರು ವರುಷವಂ ಕಳೆದು ಇರುತ್ತಿರಲು, ಮುಂದೆ ಹರಳಯ್ಯಗಳ ಕಥಾ ಪ್ರಸಂಗಮಂ ಪೇಳ್ವೆನದೆಂತೆನೆ.

**ದ್ವಿಪದಿ.**

ಘಂಟಕರ್ಣನ ಸೂತ್ರ ಗಮಕದಿಂ ಪಿಡಿದು ।
ಪಂಟಿಸಿಯೆ ಧರೆಗಿಳಿದು ಭಕ್ತಿಮಾರ್ಗದಲಿ * ॥ ೧ ॥
ಕಲ್ಯಾಣಪಟ್ಟಣದಿ ಕಡೆಯಬೀದಿಯಲಿ ।
ಉಲ್ಲಸದಿ ಪ್ರತ್ಯೇಕದೊಂದು ತಾಣದಲಿ * ॥ ೨ ॥

---

* ಈ ಪದ್ಯಗಳು (ಇ, ಎ, ಖ.) ಪ್ರತಿಗಳಲ್ಲಿ ಮಾತ್ರವಿದೆ.

ಮಾಮರವು ತೆಂಗಡಕೆ ಮೆರೆವ ವೃಕ್ಷಗಳು ।
ಕೋಮಲದ ದಾಳಿಂಬ ಜಂಭೀರಫಲವು * ॥ ೩ ॥

ಹೇರಿಳೆ ಕಿತ್ತಳೆ ಬಾಳೆ ಪಲತೆರದ ಹೂವ ।
ತರು ತೋಟ ಹೊಂಡದಿಂ ತೋರ್ಪ ಮಂದಿರವು * ॥ ೪ ॥

ಹರಳಯ್ಯನೆಂಬಧಿಕ ಹರಭಕ್ತನಿರ್ಪಂ
ತರುಣಿ ಕಲ್ಯಾಣಮ್ಮ ತನಯ ಹೊನ್ನಯ್ಯ * ॥ ೫ ॥

ಶಿವನ ಮೋಹದ ಭಕ್ತ ಶಿವಶಕ್ತಿಯುಕ್ತ ।
ಭವರಹಿತ ನಿಜಮುಕ್ತ ಭಾಪು ವಿರಕ್ತ ॥ ೬ ॥

ಲಿಂಗಾಂಗ ಸಮರಸ ನಿರುಪಮ ಚರಿತ ।
ಸಂಗಮೇಶ್ವರಪ್ರೀಯ ಸಕಲ ಜಗದಯ್ಯ ॥ ೭ ॥

ಹರಳಯ್ಯ ಹರಪ್ರೀಯ ಹರುಷ ನಮ್ಮಯ್ಯ ।
ಗುರು ಲಿಂಗ ಜಂಗಮದ ಗುಪ್ತಭಕ್ತಿಯಲಿ ॥ ೮ ॥

ಇರುತಿರಲು ಒಂದು ದಿನ ಇಷ್ಟಲಿಂಗದಲಿ ।
ಪರಮಾತ್ಮಬಸವನ ಬರವ ಹಾರೈಸಿ * ॥ ೯ ॥

ದರುಶನಂಗೈಯಲ್ಕೆ ಪರಮಭಕ್ತಿಯಲಿ ।
ಹೊರಟು ಬಸವಯ್ಯನನು ನೆನೆದು ನಿಂದಿರ್ದ * ॥ ೧೦ ॥

ವಚನ ॥ ಇಂತು ಹರಳಯ್ಯನು ಬಸವೇಶನ ದರ್ಶನಕ್ಕೋಸುಗ, ರಾಜಬೀದಿಯಲ್ಲಿ ನಿಂದು ಏನೆಂದು ಸ್ತುತಿಮಾಡುತಿರ್ದನು.

**ಸೀಸಪದ್ಯ.**

ಬಸವೇಶನಂಘ್ರಿದ್ವಯ ವಿಸರುಹಂಗಳ್ನೆನೆಯೆ ।
ಒಸೆದು ಪರಿವುದು ಸಕಲ ದೋಷವೆಲ್ಲ ॥ ೧ ॥

ಬಸವೇಶನಂಘ್ರಿದ್ವಯುವ ಬಣ್ಣಿಸುತ ಪೊಗಳೆ ।
ಶಿಶುಬಾಲ ವೃದ್ಧರಿಗೆ ಶಿವನ ಕಳೆಯು ॥ ೨ ॥

ಶಶಿ ರವಿ ಸುರ ಮುನಿವರರ ಸುರ ದಿಶಾಧಿಪರ್ಗೆ ।
ವಸುಧೆಜನ ಸಕಲಾದಿ ಜೀವರಿಗೆ ॥ ೩ ॥
ಬಸವೇಶ್ವರನ ಪಾದವಲ್ಲದನ್ಯತರವುಂಟೆ ॥

ವಚನ ॥ ಎಂದು ಮತ್ತಿಂತೆಂದಂ.

---

* ಈ ಪದ್ಯಗಳು (ಇ, ಎ, ಖ.) ಪ್ರತಿಗಳಲ್ಲಿ ಮಾತ್ರವಿವೆ.

**ತ್ರಿವುಡೆ.**

ಬಸವರಾಜನ ಪಾದಭಕ್ತಿ ವಿ । ಸೋದದಮೃತದ ಮೋದ ನೆನೆದರೆ ।
ಬಸವರಾಜನ ಪಾದಭಗ್ಗನ – ಸ್ತುತಿಪ ಚತುರ್ವೇದ ॥ ೧ ॥
ಬಸವರಾಜನ ಚರಣ ತಮ ರವಿ । ಕಿರಣ ರತ್ನದ ಭರಣ ಭಜಿಸರ ।
ಬಸವರಾಜನ ಚರಣ ಲೋಕೋ – ದ್ಧರಣ ಮುಮುಹರಣ ॥ ೨ ॥
ಎಂದು ಕಾಂಬೆನೊ ಬಸವರಾಜನ । ಎಂದು ಕಾಂಬೆನೊ ಬಸವ ಪಾದವ ।
ಎಂದು ಕಾಂಬೆನೊ ಎನಗೆ ಮೋಕ್ಷವ – ದೆಂದು ಸಿದ್ಧಿಪುದೊ ॥ ೩ ॥
ಧರ್ಮರೂಪನು ಬಸವರಾಜನು । [1] ನಿರ್ಮಲಾತ್ಮ [1] ನು ಬಸವರಾಜನು ।
ಕರ್ಮದೂರನು ಬಸವರಾಜನು – ಕಾಮುಸಂಹರನು ॥ ೪ ॥
ಎಂದು ಬಸವನ ಸ್ತುತಿಸಿ ಕೀರ್ತಿಸಿ । ಬಂದು ರಾಜ ವೀದಿ ಮಧ್ಯದಿ ।
ನಿಂದು ಬಸವನ ಬರವ ನೋಡುತ – ಲಿದ್ದ ಹರಳಯ್ಯ ॥ ೫ ॥

ವಚನ ॥ ಆಸಮಯದಲ್ಲಿ ಬಸವೇಶ್ವರದೇವರು ಬರುತಿರ್ದ್ವರದೆಂತೆನೆ.

**ಕಂದಪದ್ಯ.**

ಮೃಡಭಕ್ತ ಬಸವರಾಜನ ।
ಎಡಬಲದಲಿ ಗಣಸಮೂಹವೆತ್ತಿದ ಧ್ವಜಗಳ್ ॥
ಪ್ರೊಡವಿಪರ ಮಂತ್ರಿಸಂದಣಿ ।
ಸಡಗರದಿ ಬಸವರಾಜ ನಡೆತರುತಿರ್ದಂ ॥ ೧ ॥

**ಸೀಸಪದ್ಯ.**

[2] ದೊರೆಮಂಡಲಿಕ [2] ಮಂತ್ರಿಗಳು ಪ್ರಧಾನರು ।
ಕರಣಿಕ ನಿಯೋಗದವರ ಕೈವಾರದಿಂದ ॥ ೧ ॥
ಸರಸ ಸಂಗೀತ ಸಾಹಿತ್ಯ ಸಕಲ ವಿದ್ಯ ।
ನೆರೆಜಾಣರಿಂ ಬಲ್ಲಂಥ ಪ್ರೌಢರಿಂದ ॥ ೨ ॥
ಅಂದಣವು ಛತ್ರ ಚಾಮರ ಪತಾಕೆಗಳಿಂದ ।
ಮುಂದೆಸೆವ ನಂದಿಯ ಧ್ವಜಗಳಿಂದ ॥ ೩ ॥
ಕರಡೆ ಕಂಸಾಳ ಭೋರ್ಗರೆವ ಶಂಖಧ್ವನಿಯ ।
ಮೊರೆವ ನಾನಾವಾದ್ಯ ರಭಸದೊಳು ॥ ೪ ॥
ಹರಭಕ್ತ ಬಸವರಾಜನು ಉರುತರ ಸಂ ।
ದಣಿಯ ನಡುವೆ ಬರುತಿರ್ದಾಗಂ ॥ ೫ ॥

---

1-1 ದಾನಶೀಲ (ಇ, ಒ, ಖ, ಗ, ಚ, ಡ.) 2-2 ಧರಣಿಪರು (ಇ, ಎ, ಖ, ಗ.)

ವಚನ ॥ ಆ ವೇಳೆಯಲ್ಲಿ ಬಸವಣ್ಣನು ಬರುವದಂ ನೋಡಿ ಹರಳಯ್ಯನೇನೆನ್ನುತಿರ್ದನು.

**ತಾಳ – ತ್ರಿವುಡೆ. ರಾಗ – ಭೈರವಿ.**

ಕಂಡೆ ಕಂಡೆನಖಂಡ ಪರಶುವ । ಕಂಡೆನೆನ್ನಯ ಕಾಮ್ಯಸಿದ್ಧಿಯ ।
ಕಂಡೆ ಜಗದಾಧಾರ ಶ್ರೀಗುರು—
ಕಂಡೆ ಬಸವನ ಚರಣಕಮಲವ ॥ ಕಂಡೆ ಕಂಡೆ ॥ ॥ ೧ ॥

ಸಕಲ ಜಗದ್ದೈವಾದಿ ಕರ್ತ್ತನ । ಸಕಲವನು ಸಲಹುವ ಸಮರ್ಥನ ।
ಸಕಲ ಭಕ್ತ್ತರ ಮನದ ಬಯಕೆಯ—
ಸುಖಿಸಿ ಮೆರೆವ ಬಸವರಾಜನ ॥ ಕಂಡೆ ಕಂಡೆ ॥ ॥ ೨ ॥

ಅಖಿಳ ಶ್ರುತಿ ವೇದಾದಿಯಾಗಮ । ನಿಕರವರಿಯದ ನಿಗಮಭೇದ್ಯನ ।
ಮುಕುತಿಗೊಡೆಯನ ಮೂಲಕರ್ತ್ತನ—
ಸಕಲ ಬ್ರಹ್ಮಾಂಡಾದಿಯೊಡೆಯನ ॥ ಕಂಡೆ ಕಂಡೆ ॥ ॥ ೩ ॥

ವೇದ ನಾಲ್ಕರೊಳೆಸೆವ ಪಾದನ । ಆದಿಮೂರುತಿ ಅಮರರೊಡೆಯನ ।
ನಾದ ಬಿಂದು ಕಳಾವಿಶೇಷ ವಿ—
ನೋದ ನರ ಸುರ ನಮಿತ ಪಾದನ ॥ ಕಂಡೆ ಕಂಡೆ ॥ ॥ ೪ ॥

ಧರ್ಮ್ಮರೂಪನ ದಾನಶೀಲನ । ಕರ್ಮ್ಮರಹಿತನ ಕಾಂತಿಯುಳ್ಳನ ।
ನಿರ್ಮ್ಮಲಾತ್ಮಕನಿಳೆಸಮಸ್ತ್ತವ—
ನಿರ್ಮ್ಮಿಸುತ ಸಲಹುವ ಮಹಾತ್ಮನ ॥ ಕಂಡೆ ಕಂಡೆ ॥ ॥ ೫ ॥

ವಚನ ॥ ಆ ಸಮಯದಲ್ಲಿ ಬಸವಣ್ಣನವರು ಸಮೀಪಕ್ಕೆ ಬರಲು ಹರಳಯ್ಯನೇನೆನ್ನುತಿರ್ದನು.

**ಜಂಪೆ.**

ತ್ರಾಹಿ ಭಕ್ತ್ತರ ಬಂಧು । ತ್ರಾಹಿ ಕರುಣಾಸಿಂಧು ।
ತ್ರಾಹಿ ಗುರು ಸಲಹೆಂದು । ತ್ರಾಹಿ ಬಸವಯ್ಯ ॥ ೧ ॥

ಸತ್ಯಗುಣ ಸಂಪನ್ನ । ಭಕ್ತ್ತಜನಕೆ ಪ್ರಸನ್ನ ।
ಮುಕ್ತ್ತಿಗೊಡೆಯನೆ ಎನ್ನ । ಇತ್ತ ನೋಡಯ್ಯ ॥ ೨ ॥

ಭಕ್ತಚಿಂತಾಮಣಿಯು । ಉತ್ತಮನು ಹರಳಯ್ಯ ।
ನತ್ತನೋಡಿದ ಬಸವ । ಮತ್ತೆ ಹರುಷದಲಿ ॥ ೩ ॥

ನೋಡಿದನು ಬಸವಯ್ಯ । ನೋಡಿದನು ಹರಳಯ್ಯ ।
ನೋಡಿ ಕರಗಳ ಮುಗಿದು । ಬೇಗ ಶರಣೆಂದ ॥ ೪ ॥

ಶರಣೆಂದ ಹರಳಯ್ಯ । ಶರಣನಿಗೆ ಬಸವಯ್ಯ ।
**ಶರಣು ಶರಣಾರ್ಥಿಯೆಂದು** । ಕರಮುಗಿದು ಪೋದ ॥ ೫ ॥

ವಚನ ॥ ಅತ್ತ ಬಸವಣ್ಣನವರು ಕರಮುಗಿದು ಪೋಗಲು, ಇತ್ತ ಹರಳಯ್ಯ ಚಿಂತೆಯಿಂದ ಏನೆನ್ನುತಿರ್ದನು.

**ಕಂದಪದ್ಯ.**

ಶರಣೆಂದೆ ನಾನು ಬಸವಗೆ ।
ಶರಣು ಶರಣಾರ್ಥಿಯೆನ್ನುತ ಪೋದಂ ಬಸವಂ ॥
ಶರಣೊಂದು ಮೇಲೆ ಹೆಚ್ಚಿತು ।
ಶರಣಿಗೆ ತೆರನೇನು ಎಂದು ಬೆರಗಾಗಿರ್ದಂ ॥ ೧ ॥

**ಜಂಪೆ.**

ದಾರಿಯಿಲ್ಲದ ದೊಡ್ಡ । ಘೋರಡವಿ ಮಲೆಯೊಳಗೆ ।
ಸೂರ್ಯಗತವಾದಂತೆ । ಮೇರೆದಪ್ಪಿರ್ದ ॥ ೧ ॥

ಕಂತುಹರ ಶರಣಾರ್ಥಿ । ಇಂತು ಹೆಚ್ಚಿತು ನಾನು ।
ಎಂತು ಮಾಡುವೆನೆಂದು । ಚಿಂತೆಯೊಳಗಿರ್ದ * ॥ ೨ ॥

ಇತ್ತ ಹರಳಯ್ಯನ । ಭಕ್ತಿಯೊಳಗಿಹ ಗಣರು ।
ಹೊತ್ತರಿತು ಅರ್ಪಣಕೆ । ಮೊತ್ತದಿಂ ಬರಲು * ॥ ೩ ॥
ಅತ್ತ ಹರಳಯ್ಯನ ಸತಿ । ಉತ್ತಮೆ ಕಲ್ಯಾಣಮ್ಮ ।
ಅರ್ಥಿಯಾ ವ್ರತದಡಿಗೆ । ಭಕ್ತಿಯಿಂ ಮಾಡಿ * ॥ ೪ ॥
ಪುರುಷ ತಡೆದನು ಎಂದು । ಅರಸಿ ಕಲ್ಯಾಣಮ್ಮ ।
ಅರಸುತ್ತ ಬೀದಿಯೊಳು । ಪುರುಷನನು ಕಂಡು ॥ ೫ ॥
ಇಲ್ಲಿ ಈ ವೀದಿಯೊಳು । ನಿಲ್ಲೆ ಕಾರಣವೇನು ।
ಎಲ್ಲ ಜಂಗಮರ್ ಹಸಿದ । ರಲ್ಲಿ ಮನೆಯೊಳಗೆ ॥ ೬ ॥

ಬಾ ಪ್ರಿಯನೆ ಮನೆಯೊಳಗೆ । ಮಾರಾರಿಪದ ಸೇವೆ ।
ಮೀರಿಹೋಯಿತು ಹೊತ್ತು । ಮೇರೆಯೆ ನಿಮಗೆ ॥ ೭ ॥
ಶಶಿಮುಖಿಯೆ ಕೇಳು ನಾ । ಬಸವಂಗೆ ಶರಣೆಂದೆ ।
ಬಸವಯ್ಯ ಶರಣು ಶರ । ಣಾರ್ಥಿ ಮಿಗಿಲೆಂದ ॥ ೮ ॥

---

* ಈ ಪದ್ಯಗಳು (ಅ, ಟ, ದ, ಬ.) ಪ್ರತಿಗಳಲ್ಲಿಲ್ಲ.

ಒಂದು ಹೆಚ್ಚಿತು ಶರಣು । ಮುಂದಿದಕೆ ತೆರನೇನು ।
ಇಂದುಮುಖಿ ಪೇಳೆಂದು । ನೊಂದ ಹರಳಯ್ಯ ॥ ೯ ॥
ಹರಭಕ್ತ ಚಿಂತೆಯಲಿ । ಇರಲೇಕೆ ಬಸವಂಗೆ ।
ಚರಣಪಾದುಕೆ ಮಾಡಿ । ಪರಿಹರಿಪ ಬನ್ನಿ ॥ ೧೦ ॥
ನಮ್ಮೆರಡು ಶರೀರಗಳ । ಕಮ್ಮಗೋಲಾರಿ ಬಸವ ।
ಗೊಮ್ಮನದಿ ಒಪ್ಪಿಸುವ । ಗಮ್ಮನೆ ಬನ್ನಿ * ॥ ೧೧ ॥
ಎಂದು ಪತಿಯನು ಆಗ । ಚಂದದಿಂದೊಡಂಬಡಿಸಿ ।
ಮಂದಿರಕೆ ಕರೆತಂದ । ಳಿಂದುಮುಖಿಯಾಗ * ॥ ೧೨ ॥

ವಚನ॥ ಇಂತೆಂದು ಸತಿ ಪತಿಗಳೀರ್ವರು ಮನೆಗೆ ಬಂದು ಶಿವಪೂಜೆಯ ಸೇವೆಯಂ ತೀರ್ಚಿ, ಜಂಗಮದ ಪಾದತೀರ್ಥ ಪ್ರಸಾದ ಸೇವನೆಯಂ ಮಾಡಿ ಪತಿಯೊಡನೆ ಕಲ್ಯಾಣಮ್ಮ ಏನೆನ್ನುತಿರ್ದಳು.

**ಕೊಂಚೆ ಜಂಪೆ.**

ಶರಣು ಹೆಚ್ಚಿದ ತಪ್ಪಿಗೀಗ – ಬಸವಂಗೆ । ಚರಣ ಪಾದುಕೆ ಮಾಡಿ ಬೇಗ ।
ಹರಶರಣ ಬಸವನೆಡೆಗೀಗ – ಪೋಗಿ । ಎರಗಿ ಕಾಣಿಕೆ ಮಾಡಿ ಬೇಗ ॥ ೧ ॥
ಎಂದ ಮಾತಿಗೆ ಶರಣನಾಗ – ಶಸ್ತ್ರವನು । ತಂದು ಅತಿಹರುಷದೊಳು ಬೇಗ ।
ಇಂದುಧರ ಗತಿಯೆನ್ನುತಾಗ – ಬಲದೊಡೆಯೊ । ಳೊಂದು ಚರ್ಮವನುಗಿದು ಬೇಗ ॥
ಮಡದಿ ಮುದ್ದಿಸಿ ಗಲ್ಲಪಿಡಿದು – ಎಡದೊಡೆಯೊ । ಳುಗಿವುತಾ ಚರ್ಮವನು ತೆಗೆದು ।
ಪಿಡಿದೆರಡು ಚರ್ಮವನು ನೋಡಿ – ಕರೆಯೊಳಗೆ । ಮಡಗಿ ಒಣಗಿಸುತ ಹದಮಾಡಿ ॥
ಮಡದಿಯೆಡದೊಡೆಯ ಚರ್ಮವನು – ಬಸವಂಗೆ । ಎಡದ ಚರಣಾವುಗೆಯ ಮಾಡಿ ।
ಮೃಡಭಕ್ತ ತನ್ನ ಚರ್ಮವನು – ಬಸವಂಗೆ । ಬಲದ ಚರಣಾವುಗೆಯ ಮಾಡಿ ॥ ೪ ॥
ಮಿಸುನಿ ನೂತನಗೆಲಸ ಮಾಡಿ – ಒಳ್ಳೆ ಹೊಸರತ್ನ ಮುತ್ತುಗಳ ಹೂಡಿ ।
ಒಸೆದಷ್ಟವಿಧ ಪೂಜೆಮಾಡಿ – ತನ್ನ । ಶಶಿಮುಖಿಗೆ ತೋರಿ ಕೊಂಡಾಡಿ ॥ ೫ ॥

ವಚನ ॥ ಆಗ ಕಲ್ಯಾಣಮ್ಮನು ಎರಡು ಪಾದರಕ್ಷೆಯಂ ನೋಡಿ, ಬಹಳ ಹಸನಾದವೆಂದು ಎರಡು ಕರಗಳಂ ಮುಗಿದು ಏನೆನ್ನುತಿರ್ದಳು.

**ಏಕತಾಳ.**

ನಂದೀಶಬಸವರಾ । ಜೇಂದ್ರನ ಚರಣಕ್ಕೆ ।
ಅಂದವಾದವು ಕೆಲಸ । ಚಂದ್ರಧರ ಬಲ್ಲ ॥ ೧ ॥
ಕೆಟ್ಟೀತು ಕಲ್ಯಾಣ । ಘಟ್ಟಿಯಾಗಿ ಯಿದರಿಂದ ।
ಭ್ರಷ್ಟೆದ್ದು ಹೋದೀತು । ದೃಷ್ಟ ನೋಡಿದಕೆ ॥ ೨ ॥

* ಈ ಪದ್ಯಗಳು (ಅ, ಎ, ಖ, ಗ, ಚ, ಜ, ಟ, ಬ.) ಪ್ರತಿಗಳಲ್ಲಿ ಮಾತ್ರವಿದೆ.

ದೊರೆಗಳು ಮಡಿವರು । ಶರಣರು ಕಲ್ಯಾಣ ।
ಪುರಬಿಟ್ಟು ಗಿರಿಯ ಗ । ಹ್ವರವ ಸೇರುವರು ॥ ೩ ॥
ಕಾಳಗ ಹಣ್ಣೀತು । ಗೂಳಿಯ ತೆರಳೀತು ।
ಹಾಳಹುದು ಕಲ್ಯಾಣ । ಹೇಳಲಿನ್ನೇನು * ॥ ೪ ॥
ಪರಮಪಾವನ ಬಸವ । ಹರನೊಳು ಬೆರೆವನು ।
ಕರದಿಷ್ಟಲಿಂಗದಿ । ನೀಲಮ್ಮ ಬೆರೆವಳ್ * ॥ ೫ ॥
ಗುರುಚೆನ್ನ ಬಸವಯ್ಯ । ವರಪ್ರಮಥರು ಸಹ ।
ಹರನಿಹ ಕೈಲಾಸ । ಪುರವ ಸೇರುವರು ॥ ೬ ॥
ಕ್ಷಾಮ ಡಾಮರದಿಂದ । ಭೂಮೆಲ್ಲ ಹಸಗೆಟ್ಟು ।
ಕಾಮಿ[1] ಸಿ[1] ಹಿರಿಯರು । ಕ್ರಮವ ತಪ್ಪುವರು ॥ ೭ ॥

ವಚನ ॥ ಎಂದು ಕಲ್ಯಾಣಮ್ಮನು ಮುಂದೆ ನಡೆವ ಕಾಲಸೂಚನೆಯಂ ತೋರುತ್ತಿರೆ, ಹರಳಯ್ಯ ನಿನಗೇಕೆಂದು ಸುಮ್ಮನಿರಿಸಿ ಪಾದರಕ್ಷೆಯನ್ನು ಪಟ್ಟೆಯ ವಸ್ತ್ರದಲ್ಲಿ ಹುದುಗಿಸಿ, ಬಗಲಲ್ಲಿಟ್ಟು ಬಸವಣ್ಣನವರ ಅರಮನೆಗೊಯ್ದನದೆಂತೆನೆ.

**ಜಂಪೆ.**

ಹರಭಕ್ತ ಹರಳಯ್ಯ । ಚರಣಪಾದುಕೆವಿಡಿದು ।
ಭರವಸದಿ ಬಸವಯ್ಯ । ನರಮನೆಗೆ ಬಂದ ॥ ೧ ॥
ಬಂದನಾ ಹರಳಯ್ಯ । ನಿಂದು ನೋಡಿದನಲ್ಲಿ ।
ಸಂದಿಲ್ಲದಿರುವಂಥ । ಮಂದಿ ಸಂದಣಿಯ ॥ ೨ ॥
ಎಡ ಬಲ ಹಜಾರದೊಳು । ಪೊಡವಿಪರ ಸಂದಣಿಯು ।
ಗಡಿದುರ್ಗ ಮಂತ್ರಿ ಮಾ । ನ್ಯರ ಸಂದಣಿಯು । ॥ ೩ ॥

ವಚನ ॥ ಮತ್ತು ಎಂತಿರ್ದುದು.

**ಅಟತಾಳ.**

ಜಡೆಮುಡಿಯು ಕಂತೆಯು ಕಮಂಡಲ । ಪಿಡಿದ ದಂಡ ಕೈಯಲಿ ।
ಉಡಿಗೆ ಕಾವಿಯ ಮೃಡನ ರೂಪಿನ – ತೀತ ಸಂದಣಿಯು ॥ ೧ ॥
ಚೂರಿ ಗರಗಸ ಭಿಂಡಿವಾಲವು । ಚಾರು ಚಕ್ರವು ಕರದಲಿ ।
ಓರೆ ಚಿಮ್ಮುರಿ ವೀರ ಘನಲಿಂ – ಗಿಗಳ ಸಂದಣಿಯು ॥ ೨ ॥
ಉಟ್ಟ ಕಾವಿಯು ಮೆಟ್ಟಿದ್ದಾವುಗೆ । ರಟ್ಟೆ ತೋಳಾಧಾರ ಪುಸ್ತಕ ।
ಬಿಟ್ಟ ಮಂಡೆಯ ಷಡುಸ್ಥಲದ ಬ್ರ – ಹ್ಮಿಗಳ ಸಂದಣಿಯು ॥ ೩ ॥
ಪರಮ ಶ್ರೀ ಗುರು ಬಸವರಾಜನ । ಚರಣಕಮಲಗಳನ್ನು ನೋಳ್ಪರೆ ।
ಧರೆಯೊಳೈತಹ ಭರವಸದ ಶಿವ – ಶರಣ ಸಂದಣಿಯು ॥ ೪ ॥

---

* ಈ ಪದ್ಯಗಳು (ಖ, ಜ, ಟ, ಡ, ಪ, ಬ.) ಪ್ರತಿಗಳಲ್ಲಿಲ್ಲ. 1-1 ತ (ಅ, ಬ.)

ಬರುವ ಹೋಗುವ ದೊರೆಗಳಂದಣ । ನೆರವಿಯೊಳಗೆ ಹರಳಯ್ಯ ।
[1] ಜರಿದು [1] ಹೋಗಲಮ್ಮದಲೆ ತನ್ನೊಳು – ಬೆರಗು ಪಟ್ಟ ॥ ೫ ॥
ಬಸವರಾಜನ ಪಾದಪದ್ಮವ । ವಸುಧೆಯೊಳು ದರುಶನವ ಮಾಳ್ಪರ ।
ಪಶುಪತಿಯ ಶರಣರುಗಳ್ಸಂದಣಿ – ಪಸರಿಸಿರಲು * ॥ ೬ ॥

ವಚನ ॥ ಬಸವಣ್ಣನವರ ಅರಮನೆಯ ಸಂದಣಿಯಂ ನೋಡಿ, ಹೋಗಲಂಜಿ ತನ್ನ ಇಷ್ಟಲಿಂಗದಕೂಡೆ ಹರಳಯ್ಯನೇನೆನ್ನುತಿರ್ದನು.

**ಜಂಪೆ.**

ಉರದ ಲಿಂಗವ ಬಿ [2] ಚ್ಚಿ [2] । ಕರದೊಳಗೆ ಇಂಬಿಟ್ಟು ।
ಅರುಹಿದನು ಬಸವಣ್ಣ । ಗರುಹು ಮಾಡೆಂದು ॥ ೧ ॥
ತ್ರಾಹಿ [3] ಕರ [3] ಸ್ಥಲದಯ್ಯ । ತ್ರಾಹಿ ಭಕ್ತರ ಪ್ರಿಯ ।
ತ್ರಾಹಿ ಬಸವನಿಗರುಹು । ತ್ರಾಹಿ ನನ್ನಯ್ಯ ॥ ೨ ॥
ಚೋಳನಿಗೆ ಹೊನ್ನನುಳಿ । ಏಳುದಿನ ಕರೆಸಿದನೆ ।
ಭಾಳಲೋಚನ ಎನ್ನ । ಏಳಿಗೆಯನರುಹು † ॥ ೩ ॥
ಎಂದು ಲಿಂಗಕೆ ಪೇಳೆ । ಹಿಂದೆ ಕಣ್ಣಪ್ಪನಿಗೆ ।
ಮುಂದೆ ಲಿಂಗದ ನೆನಹ । ನಂದರುಹಿದಂತೆ ॥ ೪ ॥
ಎಚ್ಚರಿಕೆಗುಂದದಿರು । ಹುಚ್ಚವಿಭೀಷಣ ಎಂದು ।
ಮಚ್ಚಕೇಶ್ವರಲಿಂಗ । ಎಚ್ಚರಿಸಿದಂತೆ ॥ ೫ ॥
ಹರಿಯ ಅಲ್ಲಾಟಕ್ಕೆ । ಧರೆಗೊಡೆಯ ಚೋಳನಿಗೆ ।
ಹರನು ಕಾಳಹಸ್ತೀಶ । ನರುಹುಗೊಟ್ಟಂತೆ ॥ ೬ ॥
ಇಂತು ಲಿಂಗವ ತಾನ । ನಂತ ಪರಿಯೊಳು ಸ್ತುತಿಸೆ ।
ಕಂತುಹರ ಬಸವನಿಗಾ । ದ್ಯಂತವೆಲ್ಲವನು ॥ ೭ ॥
ಹರಶರಣ ಹರಳಯ್ಯನ । ಉರದ ಲಿಂಗವು ಹೋಗಿ ।
ಭರವಸದಿ ಬಸವಣ್ಣ । ಗರುಹ ಮಾಡಿದನು ॥ ೮ ॥
ನಂದೀಶ ಕೇಳ್ನಿನ್ನ । ಮಂದಿರದ ಹೊರ [4] ಗೋರ್ವ [4] ।
ನಿಂದಹನೆ ಶರಣ ಹೋ । ಗೆಂದು ಅರುಹಿದನು ॥ ೯ ॥
ಎಂದು ಲಿಂಗವು ತಾನು । ಇಂದುಧರ ಬಸವನಿಗೆ ।
ಮುಂದೆ ಬಹಸೂಚನೆಯ । ಚಂದದಿಂದರುಹೆ † ॥ ೧೦ ॥

---

1 - 1 ಭರದಿ (ಉ, ಎ, ಖ, ಚ.) * ಈ ಪದ್ಯ (ಅ, ಇ, ಒ, ಖ, ಜ, ಟ.) ಪ್ರತಿಗಳಲ್ಲಿಲ್ಲ. 2 - 2 ಟ್ಟು (ಅ, ಇ, ಉ, ಟ, ಡ, ಬ.) 3 - 3 ಶಿವ, (ಅ, ಬ.)
† ಈ ಪದ್ಯಗಳು (ಒ.) ಪ್ರತಿಯಲ್ಲಿ ಮಾತ್ರವಿದೆ. 4 - 4 ವಳಯ (ಅ, ಜ, ಟ.)

ದೊರೆಬಂದ ಪರಮ ಸ । ದ್ಗುರು ಬಂದ ತ್ರಿಪುರಸಂ ।
ಹರ ಬಂದ ಧರೆಯೊಳ । ಸರಿಯೆಂದು ಬಸವ ॥ ೧೧ ॥
ಗುರುಸಂಗಮನೆ ನೀವು । ಧರೆಗೆ ಕಳುಹಿದ ಕಾರ್‍ಯ ।
ಸರಿಯಿಲ್ಲಿಗೆಂದೆರಗಿ । ಹೊರವಂಟ ಬಸವ ॥ ೧೨ ॥

ವಚನ ॥ ಬಸವಣ್ಣನಿಗೆ ಲಿಂಗವು ಹರಳಯ್ಯ ಬಂದನೆಂದು ಅರುಹಂ ಮಾಡಲು, ಬಸವಣ್ಣನವರು ಮುಂದಿನ ಕಾಲಸೂಚನೆಯಂ ತಿಳಿದು ಗುಪ್ತದಲ್ಲಿ ಶರಣನ ನೋಳ್ಪ ಸಂತೋಷದಿಂದ ನಡೆವುತಿರ್ದರದೆಂತೆನೆ.

**ಸೀಸಪದ್ಯ.**

ಮೃಡಭಕ್ತಹರಳನನು ಅಡಿಗಡಿಗೆ ನೆನೆವುತ್ತ ।
ದೃಢಚಿತ್ತದಲಿ ಬಸವ ನಡೆವುತಿರಲು ॥ ೧ ॥
ಎಡ ಬಲದಿ ಶರಣಜನರೊಡನ್ನೈದುತಿರೆ ಮುಂದೆ ।
ಸಡಗರದ ಭಟ್ಟರುಗ್ಘಡಿಸುತಿರಲು ॥ ೨ ॥
ಪಿಡಿದ ಚಾಮರ ಛತ್ರಿ ನಡೆಯೆ ನಂದಿಯ ಧ್ವಜ ।
ಪ್ರೊಡವಿಪರ ಮುಂದಿ ಸಂದಣಿಗಳಿಂದ ॥ ೩ ॥
ಎಡವಿಡದೆ ಕರಡೆ [1] ಕೈತಾಳ [1] ಜಾಗಟೆ ಶಂಖು ।
ಹೊಡೆವ ನಾನಾವಾದ್ಯ ಗಡಣದಿಂದ ॥ ೪ ॥
ಒಡನರ್ಥಿಗಾನರ ಗಣಸಭೆ ಸಂತೋಷ ।
ಸಡಗರದಿಂದಲಿ ಸಕಲರ ಮಧ್ಯದಲ್ಲಿ ॥ ೫ ॥
ಅಡಿಯಿಡುತ ಮೃಡನ ನೆನೆವುತ್ತ ।
ಕಡೆಬಾಗಿಲಿನ ಮುಂದೆ ಬಸವ ಕಂಡನು ಶರಣನ ॥ ೬ ॥

**ಜಂಪೆ.**

ಕಾಣುತಲಿ ಕಡುಹರುಷ । ಪ್ರೊಣ್ಮೆಯಂಗದಿ ಶರಣ ।
ಜಾಣನಪ್ಪಿದ ಬಸವ । ಪ್ರಾಣ ಬಂದಂತೆ ॥ ೧ ॥
ತೆಗೆದಪ್ಪಿ ಬಿಗಿಯಪ್ಪಿ । ಮುಖನೋಡಿ ಮುಂಡಾಡಿ ।
ಬಗೆಬಗೆಯ ಕೊಂಡಾಡಿ । ಮಿಗೆ ಮೆಚ್ಚಿ ಬಸವ ॥ ೨ ॥
ಮುಟ್ಟದಿರು ನನ್ನಯ್ಯ । ಕೆಟ್ಟ ಹೊಲೆಯನು ನಾನು ।
ಕಷ್ಟಜನದತಿ [2] ಸಾ [2] ರ । ಸೃಷ್ಟಿಗತಿ ದೂರ ॥ ೩ ॥
ಹೊಲೆಯಲಲ್ಲದೆ ಲೋಕ । ತಲೆಯಲ್ಲಿ ಪುಟ್ಟುವುವೆ ।
ಹೊಲೆಯನೆಣಿಸಲು ಮುಂದೆ । ನೆಲೆಯುಂಟೆ ಜಗದಿ ॥ ೪ ॥

---

1-1 ಕಂಸಾಳೆ (ಒ, ಖ, ಗ, ಚ, ದ.) 2-2 ಶ್ಯಾ (ಒ, ಖ, ಚ, ಜ, ಟ, ಡ)

ಹೊಲೆ ರಕ್ತ ಸೂತಕದ । ಸ್ಥಲದಲ್ಲದೆ ಪಿಂಡ ।
ಬಲಿವುದೆ ಇನ್ನೊಂದು । ಸ್ಥಲಿದಲ್ಲಿ ಲೋಕ ॥ ೫ ॥

ಕುಲಕಧಿಕ ಬ್ರಾಹ್ಮಣರು । ಕುಲದಲ್ಲಿ ಅರುಂಧತಿಯ ।
ಕುಲವಲ್ಲವೆಂದು ಕುಲ । ಗಳೆದರೆ ಮುನ್ನ ॥ ೬ ॥

ಕಶ್ಯಪನು ಕೌಂಡಲ್ಯ । ವಾಸಿಷ್ಠ ದೂರ್ವಾಸ ।
ರಾಸಿ ಮುನಿಗಳ ಒಳಗೆ । ಲೇಸುಕುಲವುಂಟೆ ॥ ೭ ॥

ಕುಲವೇನು ಛಲವೇನು । ಹಲವು ಮಾತುಗಳೇನು ।
ಮಲಹರನ ಶರಣರಿಗೆ । ಕುಲವುಂಟೆ ಜಗದಿ ॥ ೮ ॥

ಹಿರಿಯ ಭಕ್ತರು ನೀವು । ಹರಕುಲವು ದೊರೆಕುಲವು ।
ಕರುಣವಿಟ್ಟೈದಿದ । ಪರಿಯೇನಿರಯ್ಯ ॥ ೯ ॥

ವಚನ ॥ ಇಂತೆಂದ ಬಸವಯ್ಯನ ವಾಕ್ಯಗಳಂ ಕೇಳಿ ಹರಳಯ್ಯ ಏನೆನ್ನುತಿರ್ದನು.

**ತ್ರಿವುಡೆ.**

ಪರಮ ಪಾವನ ಗುರುವೆ ಬಿನ್ನಹ । ಧರೆಯ ಸಲಹುವ ಬಸವರಾಜನೆ ।
ಶರಣು ನಿಮ್ಮಡಿಗಳಿಗೆ ತಂದೆನು – ಚರಣ ಪಾದುಕೆಯ ॥ ೧ ॥

ಧರ್ಮಶೀಲನೆ ದಯಕೃಪಾಲನೆ । ಕರ್ಮರಹಿತನೆ ಕಾಂತಿಯುಳ್ಳನೆ ।
ನಿರ್ಮಲಾತ್ಮನೆ ನಿನಗಿವನು ಕೊ – ಳ್ಳೆಂದು ನಮಿಸಿದನು ॥ ೨ ॥

ನೋಡಿದನು ಪಾದುಕೆಗಳ ಮಿಗೆ ಕೊಂ । ಡಾಡಿದನು ಕೈಮುಗಿದು ಪೂಜೆಯ ।
ಮಾಡಿದನು ಮನಹರುಷದಲಿ ಕೊಂ – ಡಾಡಿದನು ಬಸವ ॥ ೩ ॥

ಇಂದು ಕಂಡೆನು ಎನ್ನ ಪಡೆದಿಹ । ತಂದೆ ತಾಯ್ಗಳ ಸಕಲ ಬಂಧುವ ।
ಇಂದು ಕಂಡೆನು ಎನ್ನ ಭಾಗ್ಯವ – ಕರೆವ ಸುರತರುವ ॥ ೪ ॥

ಹರಗೆ ಸಲುವುವು ದೇವಪರಮೇ । ಶ್ವರಗೆ ಸಲುವುವು ಪಾದುಕೆಗಳಿವು ।
ಧರೆಗೆ ಅಳವಡವೆಂದು ಇತ್ತ[1] ನು[1] – ತಿರುಗಿ ಹರಳಯ್ಗೆ ॥ ೫ ॥

ವಚನ ॥ ಇಂತು ಬಸವಣ್ಣನವರು ಹರಳಯ್ಯ ತಂದಂಥಾ ಪಾದರಕ್ಷೆಗಳಂ, ಶಿವನ ಒಡವೆಯೆಂದು ತೆಗೆದುಕೊಳ್ಳದೆ ತಿರುಗಿ ಕೊಡಲು ಹರಳಯ್ಯ ಏನೆನ್ನುತಿರ್ದನು.

**ದ್ವಿಪದಿ.**

ತ್ರಾಹಿ ದೇವರ ದೇವ ತ್ರಾಹಿಮಜ್ಜೀವ ।
ತ್ರಾಹಿ ಭಕ್ತರಬಂಧು ತ್ರಾಹಿ ಕೃಪಾಸಿಂಧು ॥ ೧ ॥

---

1-1 ರು (ಅ, ಇ, ಒ, ಖ, ಟ, ಡ, ಬ.)

ತ್ರಾಹಿ ಕೇಳ್ಬಸವಯ್ಯ ತ್ರಾಹಿ ದಮ್ಮಯ್ಯ ।
ದೇವ ನಿಮ್ಮಯ ಶರಣು ತೀವಿಯೆನ್ನಂಗ || ೨ ||

ಆವರಿಸಿದಪರಾಧಕಂಜಿ ನಿಮ್ಮಂಘ್ರಿ ।
ತಾವರೆಗೆ ಜೋಡು ಚರ್ಮ್ಮಾವುಗೆಯು ತಂದೆ || ೩ ||

ಸೃಷ್ಟೀಶ ಇವನೀವು ಮೆಟ್ಟಿನ್ನ ಮನಕೆ ।
ತುಷ್ಟಿಪಡಿಸದೆ ತಿರುಗಿ ಕೊಟ್ಟ್ಯಕಳುಹುವರೆ || ೪ ||

ಎಂದು ಬಸವಯ್ಯನಿಗೆ ಎರಗಿ ಹರಳಯ್ಯ ।
ನಿಂದಿರ್ಕೆ ಚಿಂತೆಯೊಳು ಅಂದು ಬೆರಗಾಗಿ || ೫ ||

ವಚನ || ನಿಂದಿರ್ದ ಹರಳಯ್ಯನ ಮುಖವಂ ನೋಡಿ ಬಸವಯ್ಯನವರು ಏನೆನ್ನುತಿರ್ದರು.

**ಕೊಂಚ ಜಂಪೆ.**

ಶರಣಕುಲದೊಳಗಗ್ರಗಣಿಯೆ – ಭಕ್ತ । ಹರಗಣಂಗಳ ಚಿಂತಾಮಣಿಯೆ ।
ಪರಮಸದ್ಭಕ್ತ ಸಂದಣಿಯೆ – ನಿನ್ನ । ಅರಿತಕಿನ್ನಾರು[1] ನಿನಗೆಣೆಯೆ[1] || ೧ ||

ಚಿಂತೆಯೇಕಯ್ಯ ಮನದಲ್ಲಿ – ನಮಗೆ । ಸಂತೋಷ ಸಕಲ ಬಂತಿಲ್ಲಿ ।
ಚಿಂತಿಸದೆ ಹೋಗು ಮನದಲ್ಲಿ – ಮುಂದೆ । ಕಂತುಹರಕೃಪೆಯು ನಿನಗಲ್ಲಿ || ೨ ||

ಶರಣು ಶರಣಯ್ಯ ಬಸವಯ್ಯ – ನಿಮ್ಮ । ಕರುಣವನೆ ಪ್ರತಿಪಾಲಿಸಯ್ಯ ।
ಗುರುವೆ ಅಪ್ಪಣೆಯೆ ಮನೆಗಯ್ಯ – ಹೋಗಿ । ಹರನ ಕರುಣದಿ ಬಾಳಿರಯ್ಯ || ೩ ||

ಗುರುನಿರೂಪವನು ಕೈಕೊಂಡು – ಹರಳಯ್ಯ । ಬರುತಲಿರ್ದನು ವೀದಿಗೊಂಡು ।
ಬರುವದನು ಮಧುವರಸ ಕಂಡು – ನಿಂತು । ಒರೆದು ಕೇಳಿದನು ಮುಂಕೊಂಡು || ೪ ||

ಎಲ್ಲಿ ಹೋಗಿರ್ದು ನೀ ಬಂದೆ – ಹರಳ । ನಿಲ್ಲು ಹೋಗದೆ ನೀನು ಮುಂದೆ ।
ಬಲ್ಲಿದಾ ಮಧುವರಸ ಕೇಳೆ – ಹರಳಯ್ಯ । ಸಲ್ಲಲಿತದಿಂ ಪೇಳ್ದನವಗೆ * || ೫ ||

ಏಕೆ ತಡೆದಪೆಯೊ ಮಧುವರಸ – ಎನ್ನ । ನೀಕರಿಪೆ ಹರುಬುಂಟು ಸರಸ ।
ಜೋಕೆಯಿಂ ಬಗಲಗಂಟೇನು – ತೋರು । ಸಾಕು ಜಾಣ್ಮೆಯ ಮಾತಿಂದೇನು * || ೬ ||

ಇಲ್ಲಿ ಬಸವಗೆ ಜೋಡು ತಂದೆ – ಅವರು । ಒಲ್ಲೆನೆಂದರು ತಿರುಗಿ ಬಂದೆ ।
ತಳ್ಳಿ ಬೇಡೈ ನನ್ನೊಳ್ನಿನಗೆ – ಪೇಳ್ದೆ । ಚೆಲ್ವ ಮಧುವರಸ ಕೇಳೆನಲು * || ೭ ||

ವಚನ || ಇಂತೆಂದ ಹರಳಯ್ಯನ ಮಾತಿಗೆ ಮಧುವರಸ ಏನೆನ್ನುತಿರ್ದನು.

---

1-1 ಯಣೆಗತಮೆ (ಅ, ಖ, ಬ.)

* ಈ ಪದ್ಯಗಳು (ಅ, ಎ, ಗ, ಚ, ಜ, ಟ, ಡ, ಬ.) ಪ್ರತಿಗಳಲ್ಲಿಲ್ಲ.

**ಏಕತಾಳ.**

ನೋಡುವೆನು ಬಸವನಿಗೆ । ಮಾಡಿಹ ಚಲುವಿಕೆಯ ।
ಜೋಡ ತೋರಿಸು ನಾನು । ನೋಡಬೇಕೆಂದ ॥ ೧ ॥

ಬೇಡವೈ ನೀನರಿಯೆ । ಶರಣರು ಮೆಟ್ಟುವಡಿ ।
ನೋಡಸಲ್ಲದು ನೀನು । ಬೇಡ ಹೋಗೆಂದ ॥ ೨ ॥

ಶರಣರಿಂದಾಡಿದೆ । ನೋಡು ಬಸವನೀಗ ।
[1] ಕೆರವ [1] ಕೊಳಲಾರವೆ । ತಿರುಗಿ ಕಳುಹಿದನು ॥ ೩ ॥

ಮೃಡನ ಶರಣರು ಮೆಟ್ಟಿ । ನಡೆವ ಚಮ್ಮಾವುಗೆಯ ।
ಗೊಡವೇಕೆ ಇದರಿಂದ । ಕೆಡಬೇಡ ನೀನು ॥ ೪ ॥

ಇಂತೆನೆ ಹರಳಯ್ಯ । ನತಿಘನತೆಯ ಮಾತಿ ।
ನಾದ್ಯಂತವೆಲ್ಲವ । ನಾಗ ಕೇಳುತಲಿ * ॥ ೫ ॥

ಇಷ್ಟುಮಾತೇಕೆ ನಿನ್ನ । ದೃಷ್ಟ ಚಮ್ಮಾವುಗೆಯ ।
ಮೆಟ್ಟದಲ್ಲದೆ ಬಿಡೆನು । ಕೊಟ್ಟು ಹೋಗೆಂದು ॥ ೬ ॥

ನಾನು ಮೆಟ್ಟುವೆನೊಮ್ಮೆ । ಏನಾದಡಾಗಲಿ ।
ನೀನಿಡೊ ಕೆಳಗೆ ಜೋ । ಡುಗಳ ನೋಡುವೆನು * ॥ ೭ ॥

**ಜಂಪೆ.**

ಕೊಡಲಾರ ಬಸವಣ್ಣ । ಕೊಳಲಾರ ಲೋಭದಲಿ ।
ಕೊಡುವೆ ನೀ ಬೇಡಿದುದ । ಕೊಡು ಪಾದುಕೆಗಳ ॥ ೧ ॥

ಎಷ್ಟು ಹೇಳಿದರರಿಯೆ । ಮೆಟ್ಟನೋಡಿವನೊಮ್ಮೆ ।
ಕಷ್ಟಪಡುವದ ಮುಂದೆ । ಅಷ್ಟು ವೇಳಿದೆನು ॥ ೨ ॥

ಬಗಲ ಚಮ್ಮಾವುಗೆಯ । ತೆಗೆದು ತೋರಲು ನೋಡಿ ।
ಮಿಗೆ ಹೆಚ್ಚಿ ಮನಕೆ ಬಲು । ಸೊಗಸು ತೋರಿದವು ॥ ೩ ॥

ರತ್ನ ಕನಕಗಳಿಂದ । ಕೆತ್ತಿರ್ದ ಪಾದುಕೆಗ ।
ಳರ್ಥಿಯಲಿ ಮೆಟ್ಟ ಮೈ । ಗೆಟ್ಟು ಒರಗಿದನು ॥ ೪ ॥

ಹನುಮಂತ ಹಣ್ಣೆಂದು । ಇನಗೆರಗಿ ಹಲ್ಲುದುರಿ ।
ಅನುಗೆಟ್ಟು ಬಿದ್ದಂತೆ । ಮನವಳಿದನವನು ॥ ೫ ॥

---

1-1 ಅಡಿಯ (ಅ, ಬ.)

* ಈ ಪದ್ಯಗಳು (ಅ, ಉ, ಎ, ಖ, ಗ, ಚ, ಜ, ದ.)ಪ್ರತಿಗಳಲ್ಲಿಲ್ಲ.

ರಕ್ಕಸನು ರಜತಾದ್ರಿ । ವೆಕ್ಕಸದಿ ಎತ್ತಿ ಕೈ ।
ಸಿಕ್ಕಿ ಬಿದ್ದಂತೆಯವ । ಕಕ್ಕಸಂಗೊಂಡ ॥ ೬ ॥

ಹರನ ಕೈ ಚಕ್ರವೆಂ । ದರಿಯದೆ ಜಲಂಧರನು ।
ಭರದಿ ಎತ್ತಲು ಸಿರವು । ಅರಿದೊರಗಿದಂತೆ ॥ ೭ ॥

ಮರಹಿ ಮೇಲ್ಸರಿಯೆ ಮೈ । ಉರಿಯುತಿದೆ ಬಿರಿವುತಿದೆ ।
ಪರಿಹರಿಪರಿಲ್ಲೆಂದು । ಒರಲೆ ಮಧುವರಸ ॥ ೮ ॥

ಪರಶಿವನು ಬಸವಯ್ಯ । ತಿರುಗಿ ಕಳುಹಿದ ಜೋಡ ।
ಅರಿಯದೆ ಮೆಟ್ಟಿ ಈ । ತೆರನಾದೆನೆಂದ ॥ ೯ ॥

ವಚನ ॥ ಇಂತಪ್ಪ ಬೇನೆಯಿಂದ ಒರಲುವ ಮಧುವರಸಯ್ಯನಂ ನೋಡಿ ಹರಳಯ್ಯ ಏನೆನ್ನುತಿರ್ದನು.

**ತ್ರಿವುಡೆ.**

ಮೃಡನ ಶರಣರ ಪಾದುಕೆಗಳ । ಗೊಡವೆ ಬೇಡೆಂದೊರೆದು ಪೇಳಿದೆ ।
ನುಡಿಯ ಕೇಳದೆ ಮೆಟ್ಟಿ ಗರ್ವದಿ – ಕೆಟ್ಟೆಯಾ ಎಂದ ॥ ೧ ॥

ಮಾಡಿದವರಿಗೆ ಮಾಡಿದಷ್ಟೆಂ । ದಾಡಿ ಪಾದುಕೆವಿಡಿದು ಹರಳಯ್ಯ ।
ರೂಢಿಗೀಶನ ನೆನೆದು ಪೋದನು – ಗಾಢ ಮನೆಗೆ ॥ ೨ ॥

ಇತ್ತ ಮಧುವರಸಯ್ಯ ತಾಪದಿ । ಸತ್ತೆನೆನುತಲಿ ಹೆತ್ತ ತಾಯನು ।
ಹತ್ತಿರಕೆ ಬರಹೇಳ ಕಳುಹಿದ – ನತ್ತ ಮನೆಗೆ ॥ ೩ ॥

ಬಂದಳತಿವೇಗದಲಿ ಮಾತೆಯು । ನೊಂದುಕೊಂಡುರೆ ತನ್ನ ಮನದಲಿ ।
ಕಂದನಿನಗಿಂತಾದುವೇ ವಿಧಿ – ಎಂದು ಮರುಗುತಲಿ ॥ ೪ ॥

ಏನು ಕಾರಣ ಮಗನೆ ಈ ಪರಿ । ಬೇನೆ ವ್ಯಾಪಿಸಿತದನು ಪೇಳೆನೆ ।
ತಾನಳುತ ಮಧುವರಸ ಪೇಳ್ದನು – ತಾಯಿಯೊಡನೆ * ॥ ೫ ॥

ನಮ್ಮ ಪುರದೊಳಗಿಪ್ಪ ಹರಳನು । ತಮ್ಮ ಬಸವಯ್ಯನಿಗೆ ರಮ್ಯದ ।
ಚರ್ಮಹಾವುಗೆ ತರಲು ಕಂಡದರ್ – ಚೆಲುವನೋಡಿ * ॥ ೬ ॥

ಇಡೆಲೊ ಮೆಟ್ಟಿ ನಾ ನೋಳ್ಪೆನೆಂದೆನು । ಮೃಡನ ಶರಣರ ಪಾದುಕೆಗಳ ।
ಗೊಡವೆಬೇಡೆಂದೊರೆದ ಮೂರ್ವೇಳೆ – ಕೇಳದಲೆ ನಾನು * ॥ ೭ ॥

ಮೆಟ್ಟಿದೆನು ಎಲೆ ತಾಯೆ ಗರ್ವದಿ । ಕೆಟ್ಟೆನೆನ್ನಯ ಪ್ರಾಣವುಳಿಯದು ।
ಥಟ್ಟನೆ ಹೊರಹೊರಳಿಯಳುತಲಿ – ಧರೆಯೊಳುರುಳೆ * ॥ ೮ ॥

* ಈ ಪದ್ಯಗಳು (ಅ, ಉ, ಎ, ಗ, ಚ, ಜ, ಡ, ದ) ಪ್ರತಿಗಳಲ್ಲಿಲ್ಲ.

ಏಕೆ ಬಂದುದು ನಿನಗೆ ಈ ವಿಧಿ । ಏಕೆ ಮೆಟ್ಟಿದೆ ಶರಣರಡಿಗಳ ।
ಲೋಕದೊಳಗಿದನಾರು ಕಳೆವರು – ಶಿವನ ಕಲ್ಪನೆಯು ॥ ೯ ॥

ಇಂದು ಈ ರೋಗವನು ಕಳೆವರೆ । ತಂದೆ ಶ್ರೀ ಗುರು ಬಸವನಲ್ಲದೆ ।
ಮುಂದೆ ಕಳೆಯುವ ದೈವವುಂಟೆ – ಮೂರು ಲೋಕದೊಳು ॥ ೧೦ ॥

ತಾಳಲಾರೆನು ತಾಯೆ ಬೇಗದಿ । ಹೇಳು ಬಸವಯ್ಯನಿಗೆ ಎನ್ನಯ ।
ಕಾಳುಮತಿಯಿಂದಾದ ರೋಗವ – ಕಳೆದು ಸಲಹುವನು ॥ ೧೧ ॥

ಎಂದ ಮಾತಿಗೆ ತ್ವರಿತದಿಂದೈ । ತಂದು ಬಸವನಿಗೆರಗಿ ಅರುಹಲು ।
ಅಂದು ಕೇಳುತ ಬಸವರಾಜನಿಂ – ತೆಂದು ಪೇಳಿದನು ॥ ೧೨ ॥

**ಕಂದಪದ್ಯ.**

ಇಂದುಧರ ಶರಣರಡಿಗಳ ।
ನಿಂದಕತನದಿಂ ಮೆಟ್ಟಲು ಬಂದಿತು ರೋಗಂ ॥
ಮಿಂದರೆ ನೀರನು ಪೋಪುದು ।
ಸಂದೇಹವು ಬೇಡ ಪೋಗು ಎಂದನು ಬಸವಂ ॥ ೧ ॥

ಶರಿರದ ನೋವಂ ನೋಡದೆ ।
ಪರಿಪರಿಯ ಚಿಂತೆಯಲಿ ಪೊದಕುಳಿಗೊಳ್ಳದೆ ತಾ ॥
ನಿರುತಿರಲಾರುಂ ತಿಂಗಳು ।
ಹರಕರುಣವು ಮುಂದೆ ನಿಮಗೆಯುಂಜದಿರೆಂದಂ ॥ ೨ ॥

**ದ್ವಿಪದಿ.**

ಎಂದ ಬಸವಯ್ಯಂಗೆ ಎರಗಿ ಆ ಜನನಿ ।
ಬಂದಳಾ ಮಧುವರಸ ಬಳಲುವಾ ಬಳಿಗೆ ॥ ೧ ॥

ಎಂದಳು ಮಧುವರಸನೊಡನೆ ಬಸವಯ್ಯ ।
ಎಂದ ಮಾತುಗಳೆಲ್ಲ ಒಂದುಳಿಯದಂತೆ ॥ ೨ ॥

ಕೇಳೆನ್ನ ಕಂದ ನೀ ಕಂಗೆಡಲುಬೇಡ ।
ಹೇಳಿದನು ಬಸವಯ್ಯ ಹೆದರಬೇಡೆಂದು ॥ ೩ ॥

ನೀರ ಮಿಂದರೆ ರೋಗ ನಿಲ್ಲುವದು ಎಂದು ।
ಆರು ತಿಂಗಳಿಗೆ ಶಿವನಾದರಿಪನೆಂದು ॥ ೪ ॥

ಏಳೆನ್ನ ವರಪುತ್ರ ಏಳಿನ್ನು ಮನೆಗೆ ।
ಭಾಳಲೋಚನನ ಕೃಪೆ ಭಯಗೊಳ್ಳಬೇಡ ॥ ೫ ॥

ಎಂದವನ ಕರದೊಯ್ದು ಮಂದಿರದೊಳಿರಿಸಿ |
ತಂದು ಎರೆದರು ನೀರ ತವಕದಿಂದಾಗ ॥ ೬ ॥

**ಜಂಪೆ.**

ಪರಶಿವನ ವರಭಕ್ತೆ | ಹಿರಿಯ ದಾದಿಯಳಪಳ |
ಕರೆಸುತಲಿ ಮಧುವರಸ | ಅರು[1] ಹುಮಾಡಿದನು[1] ॥ ೧ ॥

ಹರಭಕ್ತಿ ಗುರುಸೇವೆ | ಉರದ ಲಿಂಗದ ನಿಷ್ಠೆ |
ಧರೆಯ ಜನರುಗಳಾರು | ಅರಿಯದಂತಿಹಳು ॥ ೨ ॥

ನಡೆವಲ್ಲಿ ನುಡಿವಲ್ಲಿ | ಉಡುವ ಉಂಬೆಡೆಯಲ್ಲಿ |
ಎಡವಿಡದೆ ಶಿವನೊಳಗೆ | ಒಡವೆರೆದು ಇಹಳು * ॥ ೩ ॥

ಪೂರ್ವಜನ್ಮದ ಫಲದಿಂ | ಹಾರುವರ ಮನೆಯಲ್ಲಿ |
ಸೇರಿ ದಾಸಿಯಳಾಗಿ | ಆರರಿಯದಿಹಳು * ॥ ೪ ॥

ಅಂತಪ್ಪ ದಾಸಿಯಾ | ದಂಥ ಮಹಾದೇವಿಯನು |
ಸಂತತವು ನೀರ ತಾ | ರೆಂದು ಪೇಳಿದನು ॥ ೫ ॥

ಮೈಯ್ಯುರಿಯು ತಂಪುವರೆ | ಮಹಾದೇವಿ ನೀ ನೀರ |
ಆಯತದಿ ತಂದೆರೆಯೆ | ಅಂಬುಜಾನನೆಯೆ ॥ ೬ ॥

ಕಡುಜಾಣೆ ಮಹಾದೇವಿ | ಎಡವಿಡದೆ ಪನ್ನೀರ |
ಒಡೆಯಂಗೆ ತಂದೆರೆದು | ಸಡಗರದೊಳಿಹಳು ॥ ೭ ॥

ಎಷ್ಟುದಿನ ನೀರೆರೆಯೆ | ಅಷ್ಟುಗುಣ ಬಾರವೆ ಮ |
ತ್ತಷ್ಟಷ್ಟು ದಿನದಿನಕೆ | ಕಷ್ಟವಾಗುವುದು ॥ ೮ ॥

ವಚನ ॥ ಮಧುವರಸನು ನೋವಂ ತಾಳಲಾರದೆ ಏನೆನ್ನುತಿರ್ದನು.

**ತ್ರಿವುಡೆ.**

ಪಾಪಿದೇವರೆ ಪಡೆದು ಎನ್ನನು | ತಾಪಕಿಕ್ಕೀ ಕೊಲುವರೆ |
ಈಪರಿಯ ಕಷ್ಟಕ್ಕೆ ತರುವರೆ – ಗೋಪತೀಶ ॥ ೧ ॥

ಎಂದು ಅಳಲುತಲಿರಲು ರೋಗದಿ | ಒಂದು ದಿವಸಾ ದಾದಿಯು |
ಚಂದದಿಂ ನೀರಿಂಗೆ ಪೋದಳು – ಎಂದಿನಂತೆ ॥ ೨ ॥

ಪೋಗುತಿರೆ ಬೀದಿಯೊಳು ಡೊಂಬರು | ಲಾಗಿಸುತ್ತ ಗಣೆಯಲಿ |
ಲಾಗುವೇಗದಿ ಅತಿವಿನೋದದಿ – ಬೇಗದಿಂದ ॥ ೩ ॥

---

1-1 ಹಿದನು ಆಗ (ಉ, ಗ; ಚ, ಟ.) * ಈ ಪದ್ಯಗಳು (ಚ.) ಪ್ರತಿಯಲ್ಲಿಲ್ಲ.

ಮಣಿದು ಲಂಘಿಸಿ ಕುಣಿದು [1] ನಟಣೆಯ [1]| ಮಿಣಿಯ ಮೇಲೆ ನಡೆವುದ |
ದಣಿಯ ನೋಡಿದಳ್ದಾಸಿ ತರುವ– ಗ್ಗಣಿಯ ಮರೆದು || ೪ ||

ಉರವಣೆಯ ಡೊಂಬರಾಟ ಮುಗಿಯಲು । ತರಣಿಯಾಗ ಮುಳುಗಿದ |
ಹಿರಿದು ಕತ್ತಲೆ ಬಂದು ಕವಿದುದು – ಧರೆಯನೆಲ್ಲಾ || ೫ ||

ವಚನ || ಆ ವೇಳೆಯಲ್ಲಿ ನೀರ ತಾರದಿರ್ದಡೆ ಒಡೆಯ ಕೊಂದಾನೆಂಬ ಚಿಂತೆಯಿಂದ ಆ ಮಹಾದೇವಿ ಏನೆನ್ನುತಿರ್ದಳು.

**ಜಂಪೆ.**

ಹೊತ್ತು ಹೋಯಿತು ಶಿವನೆ । ಕತ್ತಲಾಯಿತು ನೀರ |
ಹೊತ್ತುತರುವರೆ ದಾರಿ । ಎತ್ತಲೆಂದರಿಯೆ || ೧ ||

ಉರದ ಲಿಂಗವ [2] ನಾಗ [2] । ಕರದೊಳಗೆ ಇಂಬಿಟ್ಟು |
ಶರಣೆಂದು ಲಿಂಗಕ್ಕೆ । ಅರುಹು ಮಾಡಿದಳು || ೨ ||

ತ್ರಾಹಿ ಕರಸ್ಥಲದಯ್ಯ । ತ್ರಾಹಿ ಇಂದೆನ್ನೊಡೆಯ ।
ಗಾವಳಿಯಗೈದೆನ್ನ । ಗಾರುಮಾಡುವನು || ೩ ||

ಎನ್ನ ಪ್ರಾಣಾಪ್ತ ನೀ । ನೆನ್ನ ರಕ್ಷಿಸು ಧೀರ |
ಎನಗಿಂತು ಕೆರೆ ತೋರು । ಚೆನ್ನಮಲ್ಲೇಶ || ೪ ||

ಶರಣೆ ನುತಿಸಲು ಲಿಂಗ । ಕರೆದೊಯ್ದು ಹರಳೈಯ್ನ |
ಕೆರೆಯ ನೀರನು ತುಂಬಿ । ಹೊರಿಸಿ ಕಳುಹಿದನು || ೫ ||

ಹರಳಯ್ಯನ ಭಕ್ತಿಯ । ಲಿರುವ ಗಣರುಗಳ ಮುಖ ।
ಚರಣ ಪ್ರಕ್ಷಾಳನದ | ಪರಮೋದಕವದು * || ೬ ||

ಇಂದುಧರನಗ್ಗಣಿಯ । ನಂದು ಹೊರಿಸಲು ದಾದಿ |
ತಂದು ಕೊಪ್ಪರಿಕೆಯೊಳ | ಗಂದು ನೀಡಿದಳು || ೭ ||

ಬಂದನಾ ಮಧುವರಸ | ಮಿಂದನಾ ಅಗ್ಗಣಿಯ |
ಅಂದು ನೋಡಿದನು ಮೈ | ಚಂದವಾಗಿರಲು || ೮ ||

ನೊಂದ ನೋವುಗಳಳಿದು | ಬೆಂದ ಬೇನೆಯು ಪೋಗಿ |
ಕುಂದಣದ ಅಂದದಲಿ । ಎಂದಿಗಿಮ್ಮಿಗಿಲು || ೯ ||

---

1-1 ಗಣೆಯಲಿ (ಎ, ಗ, ಚ.) 2-2 ತನ್ನ (ಒ, ಗ, ಚ.) ; ಬಿಟ್ಟು (ಅ, ಟ, ಬ.)
* ಈ ಪದ್ಯ (ಅ, ಇ, ಒ, ಖ, ಜ, ಡ, ದ.) ಪ್ರತಿಗಳಲ್ಲಿಲ್ಲ.

ನಿಂದು ನೋಡಿದನು ಮೈ । ಹೊಂಬಣ್ಣವಾಗಿರಲು ।
ಒಂದಾರು ಭುಜವಾಗಿ । ಅಂದು ಮಧುವರಸ ॥ ೧೦ ॥

ಘನಹರುಷದಲಿ ತನ್ನ । ಮನೆಯ ದಾದಿಯ ಕರೆದು ।
ವಿನಯದಲಿ ಕೇಳಿದನು । ಮನನೋಯದಂತೆ ॥ ೧೧ ॥

ನಾರಿ ನೀ ಮೊಗೆತಂದು । ದಾರ ಭಾವಿಯ ನೀರು ।
ತೋರೆನಗೆ ಮಾಜದಲೆ । ವಾರಿಜಾಗಂಧಿ ॥ ೧೨ ॥

ತರುಣಿ ನೀ ನಿತ್ಯತಹ । ತೆರನ ನೀರಿದು ಅಲ್ಲ ।
ಧರೆಯ ಜಲಕಿಮ್ಮಿಗಿಲು । ಪರಿಯೊಳಿದೆ ಪೊಸತು * ॥ ೧೩ ॥

ಅಂಜದೆ ಪೇಳೆನಗೆ । ಕಂಜಮುಖಿ ಮಹಾದೇವಿ ।
ನಂಜುಧರ ಶಿವನಾಣೆ । ಕುಂಜರಾಗಮನೆ * ॥ ೧೪ ॥

ಒಡೆಯ ಕೇಳೈ ನಿಜವ । ನೊರೆವೆ ಮಾಜದೆ ನಿನಗೆ ।
ಸಡಗರದಿ ನೀರಿಂಗೆ । ಚೂಟಿಯಲಿ ಪೋವೆ * ॥ ೧೫ ॥

ಬೀದಿಯೊಳು ಡೊಂಬರು । ಆಡುತಿರಲದ ನೋಡಿ ।
ಸಾದರದಿ ರವಿ ಮುಳುಗೆ । ಒದಗಿ ಕತ್ತಲೆಯು * ॥ ೧೬ ॥

ಇಳೆಯನೆಲ್ಲವ ಮುಸುಕೆ । ಯೋಚನೆಯಗೈಯುತ್ತ ।
ಘಳಿಲನೆ ಹರಳಯ್ಯನ । ಕೆರೆ ನೀರತಂದೆ * ॥ ೧೭ ॥

ವಚನ ॥ ಆ ಮಹಾದೇವಿಯೆಂದ ಮಾತಿಗೆ ಮಧುವರಸಯ್ಯ ವಿಸ್ಮಿತನಾಗಿ ಏನೆನ್ನುತಿರ್ದನು.

**ತ್ರಿವುಡೆ.**

ಗಂಗೆ ಗೋದಾವರಿ ಭಾಗೀರಥಿ । ತುಂಗಭದ್ರೆಯು ಯಾಗ ಯಮುನೆಯು ।
ಲಿಂಗನದಿ ಕರ್ಣಿಕೆ ಪಿನಾಕಿಯೊಳ್ – ಮುಳುಗಿ ಫಲವೇನು ॥ ೧ ॥
ಸಿಂಧು ಸರಸ್ವತಿ ಕಪಿಲ ಕಾವೇರಿ । ಚಂದ್ರಭಾಗೆ ಕೃಷ್ಣ ಗೌತಮಿಯೊಳು ।
ಮಿಂದರಲ್ಲೇನುಂಟು ಗಂಡಕಿ – ಭೀಮರಥಿಯೊಳಗೆ ॥ ೨ ॥

ಇಂದುಧರ ಶಿವಶರಣರು ಮುದ[1]ದಿ[1] । ಮಿಂದು ಪಾದವ ತೊಳೆದ ವಾರಿಯ ।
ಬಿಂದುವಿಗೆ ಸರಿಬಾರವೀನದಿ – ಎಂದು ಮಧುವರಸ ॥ ೩ ॥

ಕಿರಿದು ಕುಲದವನಾದಡಾಗಲಿ । ಹರನಭಕ್ತನು ಅವನ ಮನೆಯಾ ।
[2]ಕೆ[2]ರೆಯ ನೀರಿಂದೆನ್ನ ರೋಗವು – ಪರಿಹರವಾಯ್ತು ॥ ೪ ॥

---

* ಈ ಪದ್ಯಗಳು (ಇ, ಒ, ಖ.) ಪ್ರತಿಗಳಲ್ಲಿ ಮಾತ್ರವಿವೆ. 1-1 ವ (ಇ, ಒ, ಖ, ಗ, ಜ, ಟ, ಡ.) 2-2 ಕ (ಅ, ಉ, ಒ, ಖ, ಗ, ಚ, ಜ, ಟ, ಡ, ಬ.)

ಮುಂದೆ ಹರಗುರು ಭಕ್ತರೆಲ್ಲಕೆ । ತಂದೆ ಈಶ್ವರ ತಾಯಿ ಪಾರ್ವತಿ ।
ಇಂಥುದರ ಕುಲವಾದ ಬಳಿಕಿ– ನ್ನೊಂದು ಕುಲವುಂಟೆ ॥ ೫ ॥

**ಗ್ರಂಥ** ॥ ಶಿವಜಾತೇ ಕುಲೇ [1] ಬ್ರಾಹ್ಮಃ [1] । ಪೂರ್ವ ಜನ್ಮ ವಿವರ್ಜಿತಃ ।
ಉಮಾ ಮಾತಾ ಪಿತಾ ರುದ್ರ । ಈಶ್ವರಃ ಕುಲಮೇವ ಚ ॥ ೧ ॥

ವಚನ ॥ ಶಿವಕುಲಕ್ಕೆ ಸಮಾನವಾದ ಕುಲವಿಲ್ಲೆಂದು ಮತ್ತೇನೆನ್ನುತಿರ್ದನು.

**ಗ್ರಂಥ** ॥ ಚಂಡಾಲವಾಟಿಕಾಯಾಂ ವಾ । ಶಿವಭಕ್ತಃಸ್ಥಿತೋ ಯದಿ ।
ತತ್ ಶ್ರೇಣೀ ಶಿವಲೋಕಸ್ಸ್ಯಾ ।.ತ್ತದ್ಗೃಹಂ ಶಿವಮಂದಿರಂ ॥ ೧ ॥

ಶ್ವಪಚೋಪಿ ಮುನಿಶ್ರೇಷ್ಠಃ । ಯಸ್ತು ಲಿಂಗಾರ್ಚನೇ ರತಃ ।
ಲಿಂಗಾರ್ಚನ ವಿಹೀನೋ ಯೋ । ದ್ವಿಜೋಪಿ ಶ್ವಪಚಾಧಮಃ ॥ ೨ ॥

ವಚನ ॥ ಎಂದು ಮತ್ತೇನೆನ್ನುತಿರ್ದನು

**ಏಕತಾಳ.**

ಧರೆಯೊಳು ಹರಳಯ್ಯ । ಕಿರಿಕುಲದವನೆಂದು ।
ಸರಕುಗೊಳ್ಳದೆ ನಾನು । ಜರಿದು ಆಡಿದೆನು ॥ ೧ ॥

ಧರೆಯೊಳಾರಾಗಲಿ । ಹರಭಕ್ತಕುಲಕಿನ್ನು ।
ಸರಿಯೆ ಮೂಲೋಕದ । ಸಕಲ ಬ್ರಾಹ್ಮಣರು ॥ ೨ ॥

ಹರಿನಾಮ ಜಪ ಹೋಮ । ಪರಮ ಗಾಯತ್ರಿಯು ।
ಹರಭಕ್ತನಾಮಕ್ಕೆ । ಸರಿಬಾರವೆಂದ ॥ ೩ ॥

ಭಸಿತ ರುದ್ರಾಕ್ಷಿಯು । ಅಸಮ ಪಂಚಾಕ್ಷರಿಯು ।
ಶಶಿಧರ ಶಿವಪೂಜೆ । ವಶವೆ ಎಲ್ಲರಿಗೆ ॥ ೪ ॥

ಶಿವಭಕ್ತಿ ಶಿವಪೂಜೆ । ಶಿವಧ್ಯಾನ ಶಿವಮಂತ್ರ ।
ಶಿವಭಕ್ತರ್ಗಲ್ಲದೆ । ಭವಿಜನಕುಂಟೆ ॥ ೫ ॥

**ಗ್ರಂಥ** ॥ ಶಿವಜ್ಞಾನ ವಿಹೀನಸ್ಯ । ಧ್ಯಾನ ಹೀನಸ್ಯ ಶೂಲಿನಃ ।
ಶಿವಭಕ್ತಿ ವಿಹೀನಸ್ಯ । ತ್ರಿಪುಂಡ್ರೋದ್ಧೂಳನಾದಿಕಾ ॥ ೧ ॥

ಸಂಧ್ಯಾ ಹೀನಸ್ಯ ರುದ್ರಸ್ಯ । ಪ್ರಸಾದಾಚ್ಛುದ್ಧಿ ವಿಜ್ಞಾನಂ ।
ಸದ್ಯೋಮುಕ್ತಿಶ್ಚ ಹೇ ದೇವ । ನೈವ ಸಿದ್ಧ್ಯತಿ ದೇಹಿನಃ ॥ ೨ ॥

---

1-1 ಧರ್ಮ (ಖ, ಗ, ಚ, ಟ, ಡ.)

ಗೌತಮಸ್ಯ ಮುನೇ ಶ್ಶಾಪಃ । ದಧೀಚೇಶ್ಶಾಪಿ ಶಾಪಕಃ ।
ಭೃಗೋಃ ಪರಶುರಾಮಸ್ಯ । ದೂರ್ವಾಸಶ್ಚ ಶಾಪಕಃ ॥ ೩ ॥

**ಜಂಪೆ.**

ಧರೆಯೊಳಗೆ ಗೌತಮನ । ಉರವಣೆಯ ಶಾಪದಲಿ ।
ಹರಭಸಿತ ರುದ್ರಾಕ್ಷಿ । ಹೊರತಾದುವೆಂದ ॥ ೧ ॥

ವರದಧೀಚಿಯ ಶಾಪ । ದುರುತರದ ಯಜ್ಞದಲಿ ।
ಪರಮ ಪಂಚಾಕ್ಷರವು । ಹೊರತಾದುದೆಂದ ॥ ೨ ॥

ಭೃಗುಮುನಿಯ ಶಾಪದಲಿ । ರಘುಪೂಜಕರಿಗೆಲ್ಲ ।
ಹಗೆಯಾಯ್ತು ಶಿವಭಕ್ತಿ । ಜಗದೊಳಂದಿಂದ ॥ ೩ ॥

ಪರಶುರಾಮನ ಶಾಪ । ಹಿರಿಯತನ ಕಿರಿದಾಗಿ ।
ಕಿರಿಕುಲಕೆ ಆಳಾಗಿ । ಇರಬೇಕು ಎಂದ ॥ ೪ ॥

ದೂರ್ವಾಸ ಶಾಪದಲಿ । ಹರಿವಂಶ ಕಡೆಯಾಗಿ ।
ಸರ್ಪಕ್ಕೆ ಕೈಯ ಮುಗಿ । ದಿರಬೇಕು ಎಂದ ॥ ೫ ॥

ಈಪರಿಯ ಹಾರುವರು । ರೂಪಾಗಿ ಶಾಪದಲಿ ।
ಕಾಪಾಲಿ ಶಿವಪೂಜೆ । ಕಡೆಯಾದುದೆಂದ ॥ ೬ ॥

ಎಂದು ಯೋಚನೆ ಮಾಡಿ । ಹಿಂದು ಮುಂದನೆ ಕಳೆದು ।
ಇಂದುಧರ ಶರಣರಡಿ । ಹೊಂದಬೇಕೆಂದ ॥ ೭ ॥

ವಚನ ॥ ಮತ್ತೇನೆನ್ನುತಿರ್ದನು.

**ಅಟತಾಳ.**

ಮಾಡಬೇಕು ಶಿವನ ಪೂಜೆಯ ಮನವುಮುಟ್ಟಿ ಹರುಷದಿ ।
ಕೂಡಬೇಕು ಭಕ್ತರೊಳು ಬೆರೆ– ದಾಡಬೇಕು ॥ ೧ ॥

ಕಣ್ಣುಮೂರನ ಭಕ್ತರುದಕದಿ । ತಣ್ಣಗಾದೆ ಅವರಿಗೆ ।
ಹೆಣ್ಣು ಕೊಟ್ಟರೆ ಎನ್ನ ಭಾಗ್ಯದ– ಪುಣ್ಯವೆಂತೊ ॥ ೨ ॥

ಎಂದು ಯೋಚನೆಗೊಂಡು ಮನದೊಳು । ಎಲ್ಲರ್‍ಕೂಡಿ ಮಗಳನು ।
ಬಂದು[1] ಹರಳನ ಸುತಗೆ ಮದುವೆಯ– ಮಾಡಿಕೊ ಎಂದ[1] ॥ ೩ ॥

ನೋಡಿದನು ಹರಳಯ್ಯ ಹೆಣ್ಣನು । ಬೇಡವೆಂದು ಹಿಂದಕೆ ।
ಕೂಡೆ ಕಳುಹಿದ ನಿಮ್ಮ ಹೆಣ್ಣದು– ಬೇಡವೆಂದು ॥ ೪ ॥

---

1-1 ಮಧುವರಸಯ್ಯ ಕೊಟ್ಟನು – ಅಂದು ಹರಳೈಗೆ ॥ (ಅ, ಇ, ಉ, ಒ, ಟ, ಡ, ಬ.)

ಹಾರುವರು ಹರಿಪೂಜಕರು ನಿಮ್ಮ । ದಾರಿಯೇಕೆ ನಿಮ್ಮನು ।
ದೂರಮಾಡದೆ ಬಿಡುವರೆ ನಿಮ್ಮ – ಹಾರುವರು ಎಲ್ಲ ॥ ೫ ॥
ಇಷ್ಟಲಿಂಗದ ನಿಷ್ಠೆಯಿಲ್ಲದ । ಭ್ರಷ್ಟದ್ವಿಜರು ಅಲ್ಲದೆ ।
ಸೃಷ್ಟಿಜನವೆಲ್ಲಕ್ಕೆ ಮುಂದೆ – ಕಷ್ಟವೆಂದ ॥ ೬ ॥
ಹರನ ಭಕ್ತರು ಸಾವದಲ್ಲದೆ । ಕಿರಿಯ ಕುಲದ ದ್ವಿಜರನು ।
ಬೆರಸಿದರೆ ಮೆಚ್ಚುವರೆ ನಮ್ಮನು – ಶರಣರುಗಳು ॥ ೭ ॥

ವಚನ ॥ ಎಂದು ತೋರಿದ ಹೆಣ್ಣಂ ತಿರುಗಿ ಕಳುಹಲು, ಮಧುವರಸಯ್ಯ ಚಿಂತಾಕ್ರಾಂತನಾಗಿ ಸುಮ್ಮನೆಯಿರಲು, ದಾಸಿಯಾದಂಥ ಮಹಾದೇವಿ ಏನೆನ್ನುತಿರ್ದಳು.

**ದ್ವಿಪದಿ.**

ಕೇಳೆನ್ನ ಒಡೆಯನೆ ಕೇಳನ್ನ ಮಾತ ।
ಬಹಳ ಚಿಂತೆಗಳಲ್ಲಿ ಬಳಲುವದು ಏಕೆ ॥ ೧ ॥

ಭಾಳಾಕ್ಷಶರಣರ ಬಳಿಯ ಲಿಂಗವನು ।
ತಾಳಿ [1] ಧರಿಸಿಯೆ ಬರಲು ಮೇಲು ಎಲ್ಲರಿಗೆ [1] ॥ ೨ ॥

ಎಂದಮಾತಿಗೆ ಹರುಷದಿಂದ ಮಧುವರಸ ।
ಬಂದನು ಶರಣರ ಬಳಿಗೆ ಅತಿಬೇಗ ॥ ೩ ॥

ವಂದಿಸುತ ಶರಣರಿಗೆ ಒಡಲನೀಡಾಡಿ ।
ತಂದೆ ಸಲಹುವದೆನ್ನನೆಂದು ಕೈಮುಗಿದು ॥ ೪ ॥

ತ್ರಾಹಿ ಗುರುವರ ಧೀರ ತ್ರಾಹಿ ಭವದೂರ ।
ತ್ರಾಹಿ ಭಕ್ತಮಂದಾರ ತ್ರಾಹಿ ದಯಪೂರ ॥ ೫ ॥

ಗುರುವೆ ಎನ್ನಯ [2] ದುರಿತ ಕರ್ಮವಂ [2] ಕಳೆದು ।
ಧರಿಸುವುದು ಲಿಂಗವನು ದಯವಿಟ್ಟು ಎನಗೆ ॥ ೬ ॥

ಎಂದ ಮಧುವರಸನಾ ದೈನ್ಯವಂ ಕೇಳಿ ।
ಸಂದೇಹವನು ಬಿಟ್ಟು ಸಂತೋಷ ಪಟ್ಟು ॥ ೭ ॥

ಶರಣಾಗತರಾದವರ ಸಂರಕ್ಷಣಾರ್ಥ ।
ಬಿರುದ ವಹಿಸಿದರಾಗಿ ಬಸವಾದಿ ಪ್ರಮಥರ್ ॥ ೮ ॥

ಇಂದುಧರ ಶಿವಶರಣರೆಲ್ಲರೊಂದಾಗಿ ।
ಅಂದು ದೀಕ್ಷೆಯ ಮಾಡಿ ಆದಿ ವಿಧಿಯಿಂದ ॥ ೯ ॥

---

1-1 ಬರುವನು ನಡೆ ತರಹರವು ಬೇಡ (ಅ, ಇ, ಜ, ಟ, ಡ, ಬ.)
2-2 ಕರ್ಮಮರಿ ತಪಂ (ಅ, ಇ, ಡ, ಬ.)

ಚಂದದಿಂ ಮಧುವರಸನಾ ಬಂಧುಗಳಿಗೆ ।
ಅಂದು ಲಿಂಗವ ಧರಿಸಿ ತಮ್ಮೊಳೊಡವೆರಸಿ ॥ ೧೦ ॥
ಮುಂದೆ ಗುರುಪಾದ ತೀರ್ಥ ಪ್ರಸಾದವನು ।
ಚಂದದಿಂ ಸಲಿಸಿ ಚರಲಿಂಗಕ್ಕೆ ನಮಿಸಿ ॥ ೧೧ ॥
ತಂದು ಕಾಣಿಕೆಯಿರಿಸಿ ತವೆ ಹರುಷದಲ್ಲಿ ।
ಬಂದರೆಲ್ಲರು ತಮ್ಮ ಮಂದಿರಕ್ಕಾಗ ॥ ೧೨ ॥

**ಏಕತಾಳ – ಅರ್ಧರೇಕು.**

ಭ್ರಮರ ಸೋಂಕಿದ ಕೀಟ – ಭ್ರಮರವಾದಂತೆ ।
ಕಮಲ ಸೋಂಕಿದ ಭೃಂಗ – ಶಿವನ ಕಂಡಂತೆ ॥ ೧ ॥
ಕಿಂಚಿತ್ಪುರುಷ ಸೋಂಕಿ – ಮಿಸುನಿಯಾದಂತೆ ।
ವಸುಧೆ ಸೋಂಕಿದ ಬೀಜ – ಸಸಿವಡೆದಂತೆ ॥ ೨ ॥
ಊರಡವಿಯಲ್ಲಿ ಬಹ – ನೀರುಗಳೆಲ್ಲ ।
ಸೇರಿ ನದಿಯು ಪುಣ್ಯ – ತೀರ್ಥವಾದಂತೆ ॥ ೩ ॥
ಗುರುಪಾದ ಸೋಂಕಿನಮ್ಮ – ದುರಿತ ಹಿಂಗಿದವು ।
ಸರಿಯಾರು ನಮಗಿನ್ನು – ಸಕಲ ಲೋಕದೊಳು ॥ ೪ ॥
ಎಂದು ಶರಣರ ಕೂಡಿ – ಅಂದು ಮಧುವರಸ ।
ಮುಂದೆ ಯೋಚನೆಗೊಂಡು – ಅಂದು ಹರಳೈಯ್ನ ॥ ೫ ॥
ಕಂದಗೆ ಹೆಣ್ಣನು – ಇಂದು ಕೊಡುವೆನು ।
ಎಂದು ವೈಭವದಿಂದ – ಎಲ್ಲ ಶರಣರ ॥ ೬ ॥
ಒಡಗೂಡಿ ಮಧುವಯ್ಯ – ಮಂದಿರದಿಂ ಹೊರಟ ॥

**ಜಂಪೆ.**

ಕೆಸರೊಳಗೆ ಪುಟ್ಟಿರ್ದ । ಎಸಳು ಕೆಂದಾವರೆಯು ।
ಕೆಸರನತಿಗಳೆದು ಶಶಿ । ಧರೆಗೆ ಪೋಪಂತೆ ॥೧ ॥
ಧರೆಯೊಳಗೆ ಪುಟ್ಟಿರ್ದ । ವರರತ್ನ ಕನಕವದು ।
ಧರೆಯನುಳಿದುರೆ ದಿವ್ಯಾ । ಭರಣವಾದಂತೆ ॥ ೨ ॥
ನಿರೆಯೊಳಗೆ ಬಿದ್ದಿರ್ದ । ನರರು ಪಾತಕವಳಿದು ।
ಗುರುಕರುಣ ಪಡೆದು ಶಿವ । ಪುರಿಗೆ ಪೋದಂತೆ ॥ ೩ ॥

ಧರೆಯ ಹಾರ್ವರ ಕುಲದ । ನಿರೆಯನೆಲ್ಲವ ಕಳಿದು ।
ಬರುತಿರ್ದ ಮಧುವರಸ । ಶರಣರೊಡಗೊಂಡು ॥ ೪ ॥

ತರುಣಿಯನು ಒಡಗೊಂಡು । ಭರದಿ ಮಧುವರಸಯ್ಯ ।
ಹರಶರಣ ಹರಳೈಯ್ನ । ಗೃಹಕಲ್ಲಿ ಬಂದು ॥ ೫ ॥

ಶಶಿಧರನ ಭಕ್ತರನು । ಒಸೆದು ಸಾಕ್ಷಿಯ ಮಾಡಿ ।
ಭಸಿತಮುಂತಾಗಿ ಶಿಶು । ವಶವ ಮಾಡಿದನು ॥ ೬ ॥

ಹರಶರಣ ಹರಳೈಯ್ನ । ವರಸುತಗೆ ಮಧುವಯ್ಯ ।
ತರಳೆ ವಿವಾಹವ ಮಾಡಿ । ಹರುಷದೊಳಗಿರಲು ॥ ೭ ॥

ವಚನ ॥ ಇಂತೆಂದು ಮಧುವರಸಯ್ಯ ಹರಳಯ್ಯಗಳು ಬೀಗರಾದ ಪ್ರಸಂಗಮಂ ತಿಳಿದು, ಸಮಸ್ತ ಗಣಂಗಳ ಮಧ್ಯದಲ್ಲಿ ಪ್ರಭುದೇವರೊಡನೆ ಬಸವಣ್ಣ ಏನೆನ್ನುತಿರ್ದನು.

**ತ್ಯಾಗಮಾನ – ಅಟತಾಳ.**

ಶರಣು ಶರಣು ಹರಣದೊಡೆಯ ಪ್ರಭುರಾ – ಯ – ಎನ್ನ—
ಗುರುವೆ ಕೇಳಿ ಬಿನ್ನಪವ ಪ್ರಭುರಾ – ಯ ॥ ೧ ॥

ಹರಳಯ್ಯ ಮಧುವಯ್ಯನವರು ಪ್ರಭುರಾ – ಯ – ಈಗ—
ಬೆರೆದ ನಂಟು ಧರೆಗೆ ಕಷ್ಟ ಪ್ರಭುರಾ – ಯ ॥ ೨ ॥

ವಿಕ್ರಮಸಂವತ್ಸರದಲ್ಲಿ ಪ್ರಭುರಾ – ಯ – ನಾವು—
ಹೊಕ್ಕೆವು ಕಲ್ಯಾಣಪುರವ ಪ್ರಭುರಾ – ಯ ॥ ೩ ॥

ರಾಕ್ಷಸಸಂವತ್ಸರವಿದು ಪ್ರಭುರಾ – ಯ – ಇಲ್ಲಿಗೆ—
ಲೆಕ್ಕ ಮೂವತ್ತಾರು ವರುಷ ಪ್ರಭುರಾ – ಯ ॥ ೪ ॥

ಹರನಿರೂಪ ಶರಣಸೇವೆ ಪ್ರಭುರಾ – ಯ – ಸ್ವಾಮಿ—
ಗುರು ಲಿಂಗ ಜಂಗಮದಭಕ್ತಿ ಪ್ರಭುರಾ – ಯ ॥ ೫ ॥

ಸರಿಯು ಇಲ್ಲಿಗೆ ಧರೆಯ ಮಣಿಹಪ್ರಭುರಾ – ಯ – ಇನ್ನು—
ಇರಲುಬಾರದು ಮರ್ತ್ಯದಲ್ಲಿ ಪ್ರಭುರಾ – ಯ ॥ ೬ ॥

**ಕಂದಪದ್ಯ.**

ಎಂದು ಭವಿಷ್ಯವ ಯೋಚಿಸಿ ।
ಅಂದಿನದಿನವುಳಿದು ಬಸವರಾಜನು ಪ್ರಭುವುಂ ॥
ಒಂದಾಗಿ ಶರಣಸಂದಣಿ ।
ಯಿಂದಿರುತ ಮುಂದಿನ ಕಾರ್ಯವಂ ಮಿಗೆ ನೆನೆದರ್ ॥ ೧ ॥

ವಚನ ॥ ಬಸವಣ್ಣ ಪ್ರಭುರಾಯನೊಳು ಏನೆನ್ನುತಿರ್ದನು.

**ಯಾಲಪದ.**

ದೇವ ನಾನು ಮೊದಲಾ ಯುಗದಿ । ದೇವಾಂಗಭಕ್ತನು ಮೋಕ್ಷ ।
ಜೀವ ಜಂಗಮ ನೀವಾಗಿರ್ದು – ದ – ಅಲ್ಲಮಾಪ್ರಭುವೆ – ಈ—
ಭಾವವಂ ಇದನಾರು ಬಲ್ಲರು ॥ ೧ ॥

ಉಂಟು ತ್ರೇತಾಯುಗದಿ ನೀಲ । ಕಂಠನೆಂಬ ಭಕ್ತ ನಾನು ।
ಘಂಟಕರ್ಣ ಜಂಗಮ ನೀ – ವು – ಆಗಿರ್ದುದ – ಶ್ರೀ—
ಕಂಠಶಿವನೇ ನೀವೇ ಬಲ್ಲಿರಿ ॥ ೨ ॥

ಅಸಮಾಕ್ಷ ದ್ವಾಪರಯುಗದಿ । ವೃಷಭನೆಂಬ ಭಕ್ತ ನಾನು ಅನಿ ।
ಮಿಷನೆಂಬ ಜಂಗಮವು ನೀ – ವು – ಅಲ್ಲಮಾಪ್ರಭು – ವೆ—
ವಸುಧೆಯೊಳಗಿದನಾರು ಬಲ್ಲರು ॥ ೩ ॥

ಕಲಿಯುಗದಿ ಕಲ್ಯಾಣದಿ ನಿಮ್ಮ । ಸಲುಗೆಯ ಭಕ್ತಬಸವ ನಾನು ।
ಚೆಲುವ ಜಂಗಮ ನೀವಾಗಿ ಇ – ಲ್ಲಿ – ಅಲ್ಲಮಾಪ್ರಭು – ವೆ—
ಒಲಿದು ಎನ್ನ ಸಲಹ ಬಂದಿರಿ ॥ ೪ ॥

ಯುಗ ಯುಗದಿ ನೀವೆನ್ನ ಕೈಯಿಂ । ಸೊಗಸಿನಿಂದ ಪೂಜೆಗೊಂಬ ।
ಬಗೆಯ ನೀವೇ ಬಲ್ಲಿರಲ್ಲ – ವೆ – ಅಲ್ಲಮಾಪ್ರಭು – ವೆ—
ಜಗದ ಜನಕಾಗಮವು ತಿಳಿವುದೆ * ॥ ೫ ॥

ಇಷ್ಟುದಿನ ಕಲ್ಯಾಣಫಣಿತೆ । ನಿಷ್ಠೆತೈಲವು ನಾನು ಬತ್ತಿ ।
ದೃಷ್ಟಮೂರುತಿ ಚೆನ್ನಬಸವ – ಣ್ಣ – ಪ್ರಭು ಪರಂಜ್ಯೋ – ತಿ—
ಅಷ್ಟದಿಕ್ಕಿಗೆ ಬೆಳಗುತಿರ್ದುದು ॥ ೬ ॥

ಇಷ್ಟರಿಂದೆ ಫಣಿತೆಯೊಡೆದು । ಅಷ್ಟು ತೈಲ[1] ವು ಸೋ[1] ರಿ ಬತ್ತಿ ।
ಇಷ್ಟು ಇಲ್ಲದೆ ಬಯಲನೈದಿ – ತು – ಬೆಳಗುವ ಜ್ಯೋ – ತಿ—
ಅಷ್ಟಮೂರುತಿಯೊಳಗೆ ಬೆರೆದಿತು ॥ ೭ ॥

ಕೆಟ್ಟಿತು ಕಲ್ಯಾಣವಿನ್ನು । ನಷ್ಟವಾಗಿ ಹೋಗುತಿದೆ ।
ಸೃಷ್ಟಿಯೊಳಗಣ ಶರಣರೆಲ್ಲ – ರು – ಅಲ್ಲಮಾಪ್ರಭು – ವೆ—
ಇಷ್ಟಲಿಂಗದೊಳಗೆ ಬೆರೆವರು ॥ ೮ ॥

ಅಲ್ಲಮಸ್ವಾಮಿ ಜಗದೇವ । ಮೊಲ್ಲೆಯಬೊಮ್ಮಣ್ಣ ಜಿಜ್ಜಳನ ।
ಕೊಲ್ಲಲು ಬಹುಕದನ ಹುಟ್ಟೀ – ತು – ಇರಬಾರದಿ – ನ್ನು—
ಮೆಲ್ಲನೇ ಪಯಣವಾಗಬೇಕು ॥ ೯ ॥

---

* ಈ ಪದ್ಯ(ಅ, ಇ, ಖ, ಟ, ಡ, ದ, ಬ.)ಪ್ರತಿಗಳಲ್ಲಿಲ್ಲ. 1-1 ವಸ (ಎ, ಟ, ಡ, ಬ.)

ವಚನ ॥ ಎಂದು ಮತ್ತೀನೆನ್ನುತಿರ್ದರು.

**ತ್ರಿವುಡೆ.**

ಎಂದು ಬಸವೇಶ್ವರನು ಆಗ ತಾ । ವಂದಿಸುತ ಪ್ರಭುಸ್ವಾಮಿಯವರಿಗೆ ।
ಇಂದು ಬೈಗಿಲಿ ಸಕಲ ಶರಣರ– [1] ಮುಂದೆ ತಿಳುಹುವೆನು [1] ॥ ೧ ॥

ಬಸವರಾಜನು ತನ್ನ ಮನದೊಳು । ಒಸೆದು ತೋರುವ ಕಾಲಸೂಚನೆ ।
ಉಸುರುವಡೆಯದೆ ಮೌನದಲಿ ಕರೆ– ಸಿದನು ಶರಣರನು ॥ ೨ ॥

ಒಡೆಯ ಬಸವೇಶ್ವರ [2] ನು ಆ [2] ಗಳೆ । ಪಡಿಹಾರಿ ಉತ್ತಣ್ಣನವರಿಗೆ ।
ಮೃಡನ ಶರಣರ ಬೇಗ ಬರಿಸುವ – ದೆಂದು ನೇಮಿಸಿದ ॥ ೩ ॥

ಅತ್ತ ಶರಣರ ಕರೆವುದಕೆ ಉ । ತ್ತಣ್ಣ ಪೋಗಲು ಬಸವರಾಜನು ।
ಇತ್ತ ಪ್ರಭುಗುರುಸಹಿತ ಕೆಲಬರು – ಶರಣರೊಡಗೊಂಡು ॥ ೪ ॥

ಇಂದುಧರಶಿವತತ್ವ ಕಳೆಗಳ । ಮುಂಪೆ ಶರಣರಿಗರುಹಿ ತೋರುವೆ ।
ನೆಂದು ಬಂದರು ತ್ರಿಪುರಸಂಹರ– ಲಿಂಗದಾಲಯಕೆ ॥ ೫ ॥

ವಚನ ॥ ಆ ತ್ರಿಪುರಾಂತಕಾಲಯವೆಂತಿರ್ದುದು.

**ದ್ವಿಪದಿ.**

ಶ್ರೀ ಗಿರಿಜೆವರನಾಥ ಸೃಷ್ಟಿಗತಿ ಪ್ರೀತ ।
ಯೋಗಿಜನ ಮುನಿನಾಥ ಎಸೆವ ಪ್ರಖ್ಯಾತ ॥ ೧ ॥

ನಾಗಭೂಷಣನಿಪ್ಪ ನಟಣೆಯಾಸ್ಥಾನ ।
ಆಗಮಕತಿ ವೇದ್ಯ ಅಗಣಿತ ಚೋದ್ಯ ॥ ೨ ॥

ಧರೆಗೆ ಶ್ರೀ ಕೈಲಾಸ ಧರ್ಮನಿವಾಸ ।
ದುರಿತ ದುರ್ಗುಣನಾಶ ಧೂರ್ಜಟಿ ವಿಲಾಸ ॥ ೩ ॥

ನರಸುರ ವರಗಣ್ಯ ನೋಳ್ಪವರ ಪುಣ್ಯ ।
ಶರಣಜನಗಳ ಗರ್ಭ ನೋಳ್ಪರ ಕಣ್ಣಹಬ್ಬ ॥ ೪ ॥

ಕಮಲರಿಪು ಕಿರಣ ಕಲ್ಯಾಣದಾಭರಣ ।
ವಿಮಲತರವರ ರಮ್ಯ ಶಾಶ್ವತಾಗಮ್ಯ ॥ ೫ ॥

ಧರೆಯೊಳರುವತ್ತೆಂಟು ಧರ್ಮ ತೀರ್ಥಗಳು ।
ಸರಿಯೆ ಮುಪ್ಪುರವೈರಿಯಿರುವಂಥ ಸ್ಥಲಕೆ ॥ ೬ ॥

---

1-1 ರಾಯರೊಳುತಾ (ಅ, ಟ, ಡ, ಬ.) 2-2 ನದಾ (ಎ, ಖ, ಗ, ಚ.)

ಮಾರಿ ಕಲ್ಯಾಣದಲಿ ಮಿಗಿಲು ಶಿವನಿಳಯ ।
ನೂರ ತೊಂಬತ್ತಾರು ಸಾವಿರಕೆ ಮುಖ್ಯ ॥ ೭ ॥

ಶ್ರೀಕರ ವಿಮಲತರ ಶೃಂಗಾರವಪ್ಪ ।
ಗೋಪುರ ಶಿಖರ ಪ್ರಾಕಾರ ಕುಡ್ಯಗಳು ॥ ೮ ॥

ರತ್ನಗೆಲಸಗಳಿಂದ ರಮ್ಯತರವಾಗಿ ।
ಕೆತ್ತಿಸಿದ ದ್ವಾರ ಚೆಲ್ವೆತ್ತಿ ರಂಜಿಸವು ॥ ೯ ॥

ಕನಕಗೆಲಸದ ಲೋವೆ ರತ್ನತೋರಣವು ।
ಮನಸಿಜನ ಕರುವಿಟ್ಟ ಮದನಬೋದಿಗೆಯು ॥ ೧೦ ॥

ಗಾಳಿಮಂಟಪ ಮಧ್ಯ ಘನ ಅಂತರಾಳ
ಮೇಲು ಸುಖವಾಸ ಮೆರೆವಾಗರ್ಭಗೃಹದಿ ॥ ೧೧ ॥

ರನ್ನಗೆಸಲದ ರಮ್ಯಪ್ರಭಾವಳಿಯಿಂದ ।
ಪನ್ನಗಧರನು ಪ್ರಭಾಕರನ ತೇಜದಲಿ ॥ ೧೨ ॥

ಉನ್ನತಾಸನದಿ ಉಮೆವರನೊಪ್ಪಿ ಇರಲು ।
ಕರವೀರ ಚಂಪಕ ಕಮಲ ಕೈರವದಿಂ ॥ ೧೩ ॥

ಸುರಗಿ ಸುರಹೊನ್ನೆ ಮಲ್ಲಿಗೆ ಮೊಲ್ಲೆ ಜಾಜಿ ।
ಇರುವಂತಿ ಸೇವಂತಿ ಮರುಗ ಪಾದರಿಯು ॥ ೧೪ ॥

ಸರವೆತ್ತಿದಾ ಪೂಜೆ ಸೊಂಪೆಸೆವ ಗಂಧ ।
ದೀಪ ಧೂಪಗಳ ಸದ್ವಾಸನೆ[1] ಗಳಿಂದ[1] ॥ ೧೫ ॥

ಕಾಪಾಲಿ ತ್ರಿಪುರಾಂತಕೇಶನೊಪ್ಪಿರಲು ॥

ವಚನ ॥ ಅಂಥ ತ್ರಿಪುರಾಂತಕೇಶ್ವರನಂ ನೋಡಿ ಬಸವೇಶನೇನೆನ್ನುತಿರ್ದನು.

**ಜಂಪೆ.**

ಶರಣು ಗಿರಿಜಾವರನೆ । ಶರಣು ಕರುಣಾಕರನೆ ।
ಶರಣು ಮನ್ಮಥಹರನೆ । ಶರಣು ಪುರಹರನೆ ॥ ೧ ॥

ಶರಣು ಭಕ್ತರ ಪೊರೆವ । ಶರಣು ಕಲ್ಪತರುವೇ ।
ಶರಣು ಮುಕ್ತಿಯ ಇರವೆ । ಶರಣೆನ್ನ ಗುರುವೆ ॥ ೨ ॥

---

1-1 ಯೊಳಗೆ (ಇ, ಎ, ಒ, ಖ, ಗ, ಚ, ಜ, ಟ.)

ಪರಶಿವನೆ ನಿಮ್ಮ ಕಳಿ । ಧರೆಯೊಳಿಂದಿನತನಕ ।
ಪರಮ ಸಂತೋಷದಲಿ । ಪ್ರಜ್ವಲಿಸಿತಯ್ಯ ॥ ೩ ॥

ಧರೆಯೊಳಗೆ ಕಲಿಹೆಚ್ಚಿ । ಉರವಣಿಸುತಿಜೆ ಮುಂದೆ ।
ಇರಬಹುದೆ ಮರ್ತ್ಯದೊಳು । ಉರಗಭೂಷಣನೆ ॥ ೪ ॥

ಮೃಡನೆ ನಿಮ್ಮಯ ಭಕ್ತಿ । ನಡೆದುದೀವರೆತನಕ ।
ಕಡುಪಾತಕರು ಹೆಚ್ಚಿ । ಕೆಡುತಿಹುದು ಮುಂದೆ ॥ ೫ ॥

ಲಂಡ ಪುಂಡರು ಹೆಚ್ಚಿ । ಭಂಡಾಗಿ ಜಗದೊಳಗೆ ।
ದಂಡು ದಾಳಿಗಳಿಂದ । ಅಂಡಲೆಯು ಜಗಕೆ ॥ ೬ ॥

ಗುರು ದೈವ ತಾಯ್ತಂದೆ । ಹಿರಿದು ಕಿರಿದೆಂ[1] ಬುದನು[1] ।
ಅರಿಯದೆ ಕರ್ಮದಲಿ । ಒರಗುವದು ಲೋಕ ॥ ೭ ॥

ಗುರುವೆ ಮರ್ತ್ಯದ ಮಣಿಹ । ಸರಿಯು ಈ ರಾಕ್ಷಸಕೆ ।
ಧರೆಯುಳಿದು ಕೈಲಾಸ । ಪುರಕೈದಬೇಕು ॥ ೮ ॥

ದೇವಲೋಕಕೆ ಪೋಗಿ । ನಾವು ಬರುವನಕಿಲ್ಲಿ ।
ನೀವು ನಿಕ್ಷೇಪದಲಿ । ತೀವಿಕೊಂಡಿಹುದು ॥ ೯ ॥

ಬಂದೇವು ನಾವು ಆ । ನಂದ ಸಂವತ್ಸರಕೆ ।
ಅಂದಿಗೇ ಏಳ್ನೂರು । ಮುಂದೆ ಎಪ್ಪತ್ತು ॥ ೧೦ ॥

**ಕಂದಪದ್ಯ.**

ಅಂತಪ್ಪ ಸಕಲ ದೈವದ ।
ಚಿಂತಾಮಣಿ ಶಿವನ ಪಾದದರುಶನಗೆಯ್ದುಂ ॥
ಸಂತಸದಿ ಸಕಲ ಶರಣರ ।
ತಿಂಥಿಣಿಯಲಿ ಬಂದರನುಭವಮಂಟಪಕ್ಕಂ ॥ ೧ ॥

ವಚನ ॥ ಅನುಭವಮಂಟಪ ಎಂತಿರ್ದುದು.

**ಸೀಸಪದ್ಯ.**

ಸೃಷ್ಟಿಗೀಶ್ವರಧ್ಯಾನ ಶಿವನ ಮೋಕ್ಷಸ್ಥಾನ ।
ಅಷ್ಟಮಹದೈಶ್ವರ್ಯವತಿ ನಿಧಾನ ॥ ೧ ॥
ವೇದ ಶಾಸ್ತ್ರದ ಭೇದವರಿವ ತತ್ವದ ಮೋದ ।
ನಾದ ಕಳೆ ಬಿಂದು ಸಾಧಕವಿನೋದ ॥ ೨ ॥

---

1-1 ನ್ನದೆ (ಅ, ಇ, ಎ, ಖ, ಗ, ಚ, ಡ, ಬ.)

ಸರ್ವಜ್ಞರಿಹನಾಡು ಸಕಲಮೋಕ್ಷವ ಬೇಡು ।
ವರಿಗೆ ಮುಕ್ತಿಯ ಬೀಡು ಮುಂದೆ ನೋಡು ॥ ೩ ॥

ಸರತತ್ವದನುಭವವರಿದು ಜ್ಞಾನದಿ ನಿಲ್ಲು ।
ವರಿಗೆಲ್ಲ ಒರೆಗಲ್ಲು ಅನುಶೃತ ನಿಲ್ಲು ॥ ೪ ॥

ಅಂತಪ್ಪ ಅನುಭವಮಂಟಪದ ಮಧ್ಯದೊ ।
ಳ್ಸಂತಸದಿ ರತ್ನ ಸಿಂಹಪೀಠದಲಿ ॥ ೫ ॥

ಕಂತುಹರ ಪ್ರಭು ಬಸವರಾಜ ಶರಣರುಸಹಿತಂ ।
ಕುಳಿತರತಿ ಸಕಲ ಸಂತೋಷದಿಂದ ॥ ೬ ॥

ವಚನ ॥ ಆ ಸಮಯದಲ್ಲಿ ಉತ್ತಣ್ಣಯ್ಯಗಳು ಸಮಸ್ತ ಗಣಂಗಳ ಬಿಜಯಂಗೈಸಿತಂದು ಸಿಂದಿರಿಸಲಾ ಸಮಯದಲ್ಲಿ, ಸರ್ವಜ್ಞಮೂರ್ತಿಯು ಸಕಲ ಪುರಾತನರ ಮುಂದೆ ಬಸವೇಶ್ವರನೊಳು ಏನೆನ್ನುತಿರ್ದನು.

## ಸರ್ವಜ್ಞಮೂರ್ತಿಯ ಕಾಲಜ್ಞಾನ.

**ತ್ರಿವುಡೆ.**

ಶರಣು ಶ್ರೀಗುರು ಪ್ರಭುವರೇಣ್ಯಗೆ । ಶರಣು ಬಸವಗೆ ಸಿದ್ಧರಾಮಗೆ ।
ಶರಣು ವರಗುರು ಚೆನ್ನಬಸವಗೆ – ಶರಣು ಪ್ರಮಥರಿಗೆ ॥ ೧ ॥

ಹೇಳುವನು ನಾನಲ್ಲ ಹರುಷದಿ । ಕೇಳುವರು ನೀವ್ಯೆಸೆ ಪರಶಿವ ।
ಹೇಳಿದಷ್ಟುಸುರುವೆನು ಮುಂದಣ – ಕಾರ್ಯಕಥನವನು ॥ ೨ ॥

ಮಾರಹರ ಮರ್ತ್ಯಕ್ಕೆ ಕಳುಹಿದ । ಕಾರಣವ ಕಂಡರಿತು ಮೌನದಿ ।
ಸಾರಹೃದಯರ ಸತ್ಯಶರಣರ – ನೆಲ್ಲ ಕರೆಸಿ[1] ದಿರಿ[1] ॥ ೩ ॥

ಬಂದ ಶರಣಸಮೂಹವೆಲ್ಲಕೆ । ವಂದಿಸುತ ಕರಮುಗಿದು ಪೇಳುವೆ ।
ಇಂದುಧರ ಶಿವಶರಣಸಭೆ ಕೇ – ಳೆನ್ನ ಬಿನ್ನಪವ ॥ ೪ ॥

ಅಲ್ಲಮಾಪ್ರಭು ಗುರುಗುಹೇಶ್ವರ । ನಲ್ಲಿ ಐಕ್ಯವು ಬಸವರಾಜನು ।
ಬಲ್ಲಿದನು ಕಪ್ಪಡಿಯ ಸಂಗಮ – ನಲ್ಲಿ ಬೆರಸುವನು ॥ ೫ ॥

ಪೊಡವಿಯೊಳಗಿಹ ಮೃಡನ ಶರಣರು । ಹಿಡಿದ ಕ್ರಿಯಾಚಾರದಲಿ ಮನ ।
ದೃಢದಿ ತಮ್ಮಯ ಇಷ್ಟಲಿಂಗದ – ಒಡನೆಯ್ದುವರು ॥ ೬ ॥

ಜ್ಞಾನಶಕ್ತಿಯು ನೀಲಲೋಚನೆ । ತಾನು ತನ್ನ ಇಷ್ಟಲಿಂಗ ಸಂ ।
ಧಾನದಲಿ ಪರಶಿವನ ಬೆರೆವಳು – ಜ್ಞಾನಪ್ರಭೆಯೊಳಗೆ ॥ ೭ ॥

1-1 ದನು (ಅ, ಚ, ಜ, ಡ, ಬ.)

ಖುಲ್ಲಬಿಜ್ಜಳ ಕುಹಕಮಾತಿಗೆ । ಹರಳ ಮಧುವರಸಯ್ಯನವರನು ।
ನಿಲ್ಲವೆಳೆಹೊಟಿಯನು ಕಟ್ಟಿಸ – ನಲ್ಲಿ ಫಾಲ್ಗುಣದಿ ॥ ೮ ॥

ಬಲ್ಲಿದ[1] ರು[1] ಜಗದೇವ ಮಡಿವಾಳ । ಮೊಲ್ಲೆಯಬೊಮ್ಮಣ್ಣ ನೃಪತಿಯು ।
ಕೊಲ್ಲುವರು ಗೂಳೆಯದ ಶರಣರು – ಎಲ್ಲ ತೆರಳುವರು ॥ ೯ ॥

ಧರಣಿಪತಿ ಪಂಚತ್ವವೈದಲು । ಹಿರಿದು ಕದನದಿ ಚೆನ್ನಬಸವೇ ।
ಶ್ವರನು ಉಳುವೆಗೆ ದಂಡ ನಡೆವನು – ಶರಣರೊಡಗೊಂಡು ॥ ೧೦ ॥

ಹಿರಿದು ಕೋಪದಿ ಅಳಿಯ ಬಿಜ್ಜಳ । ಶರಣಸಭೆ ಹಿಂದಟ್ಟಿ ದಂಡನು ।
ಭರದಿ ತೆರಳುವ ಶರಣಘಾತಕೆ – ಮುರಿದು ತಿರುಗುವನು ॥ ೧೧ ॥

ಶರಣಸಭೆ ಉಳುವಿಂಗೆ ಪೋಗಲು । ತಿರುಗಿಬರುವನು ಅಳಿಯಬಿಜ್ಜಳ ।
ಹರುಷದಿಂ ಕಲ್ಯಾಣಪುರಕರ – ಸಾಗಿ ನಿಲ್ಲುವನು ॥ ೧೨ ॥

ಅಳಿಯಬಿಜ್ಜಳನಳಿದುಪೋಗಲು । ಇಳೆಗರಸು ಪ್ರತಾಪರುದ್ರನು ।
ಘಳಿಲನೆ ಬಂದಾಳುವನು ಕ – ಲ್ಯಾಣಪಟ್ಟಣವ ॥ ೧೩ ॥

ಬಸವರಾಜನ ಭಾಗ್ಯವೆಲ್ಲವ । ವಸುಧೆಯೊಳು ನಿಕ್ಷೇಪಿಸುತ ನೃಪ ।
ಅಸುವ ಕಳೆಯಲು ಅಧಿಕಪಟ್ಟವು – ಮುಸಲಮಾನರಿಗೆ ॥ ೧೪ ॥

ಹಿಂದೆ ದೈತ್ಯರೊಳೋರ್ವ ತಪವನು । ಇಂದುಧರನನು ಕುರಿತು ಮಾಡಲು ।
ಅಂದು ಪರಶಿವ ಮೆಚ್ಚಿ ವರವ ಬೇ – ಡೆಂದು ಕೇಳಿದನು ॥ ೧೫ ॥

ವಚನ ॥ ಶಿವನೆಂದ ಮಾತಿಗೆ ದೈತ್ಯನೇನೆನ್ನುತಿರ್ದನು.

**ಏಕತಾಳ.**

ದೇವ ಕೇಳೆನ್ನಯ । ಕಾಯುವ ಸ[2] ವೆ[2] ಸಿದ
ಗೋವನು ಸುರೆಯನು । ಈವುದು ಎನಗೆ ॥ ೧ ॥

ದೃಷ್ಟ ಮೂರುತಿಯೆಯನ । ಗಿಷ್ಟಲಿಂಗವನೀಗ ।
ಕೊಟ್ಟು ನಿಮ್ಮಡಿಸೇವೆ । ಇಷ್ಟಕೊಡೆಂದ ॥ ೨ ॥

ಕೊಟ್ಟೇನು ಲಿಂಗವ । ಕಟ್ಟುವರೆ ವಸ್ತ್ರವ ।
ಥಟ್ಟನೆ ತಾರೆಂದು । ಅಟ್ಟಿದನವನ ॥ ೩ ॥

ಸುರೆಯು ಸೇವಿಪ ಗೋವ । ಕೊಡತಿಂಬ ದೈತ್ಯಗೆ ।
ಧರಿಸ ಬಾರದು ಲಿಂಗ । ನೆರವೇರದೆಂದು ॥ ೪ ॥

1-1 ನ್ನು (ಇ, ಒ, ಗ, ಚ.) 2-2 ಲಿ (ಇ, ಒ, ಖ, ಚ.)

ವರ ತಪಸ್ಸಿನ ಫಲಕೆ । ಧರೆಯ ನೀನಾಳೆಂದು ।
ಹರನಿತ್ತ ನೇಳ್ನೂರು । ವರುಷದಾಳಿಕೆಯ ॥ ೫ ॥
ಇಷ್ಟ ಲಿಂಗವ ಮುಂದೆ । ಕೊಟ್ಟೀ ನಿನ್ನವರಿಗೆ ।
ಪಟ್ಟವಾಳೆಂದು ಆಸೆ । ಪುಟ್ಟಿಸಿ ಅವಗೆ ॥ ೬ ॥
ಇಪ್ಪತ್ತು ಒಂದು ಜ[1] ನ[1] । ತಪ್ಪದೆ ಆಳೆಂದು ।
ಸರ್ಪಭೂಷಣ ದೈತ್ಯ । ಗೊಪ್ಪಿಸಿದ ಇಷ್ಟ ॥ ೭ ॥
ಸುರೆಯ ತಾಳಿದನಾಗಿ । ಸುರತಾಳನೆಂಬವಗೆ ।
ಧರೆಯನಾಳುವ ಪಟ್ಟ । ತ್ವರಿತವಾಗುವುದು ॥ ೮ ॥
ಇಲ್ಲಿಂದ ದಕ್ಷಿಣಕೆ । ಬಲ್ಲಾಳರೊಂಬತ್ತು ।
ಗೊಲ್ಲರು ಹದಿಮೂರು । ನಿಲ್ಲದಾಳುವರು ॥ ೯ ॥
ಬಲ್ಲಾಳರೊಳಗೋರ್ವ । ಬಲ್ಲಿದ ತಳವಾರ ।
ನಲ್ಲಿಂದ ಹೊಸಮಳೆ । ಯಲ್ಲಿ ಸೇರುವನು ॥ ೧೦ ॥

**ಜಂಪೆ.**

ಹೊಸಮಳೆಯ ಸೇರಿಕೊಂ । ಡಸಮು ಕಂಪಿಲನಿರುತ ।
ಶಶಿಧರ ವಿರುಪಾಕ್ಷ । ನೊಸೆದು ಸೇವಿಪನು ॥ ೧ ॥

ವಿದ್ಯರಾದ್ಯರು ಬಂದು । ವಿರುಪಾಕ್ಷನ ವರದಿಂ ।
ವಿದ್ಯನಗರಿಯನು ಭ । ದ್ರದಲಿ ಕಟ್ಟುವರು ॥ ೨ ॥

ಹಂಪೆಯಾ ಸ್ಥಲಕೆ ಕಂ । ಪಿಲನ ಪಟ್ಟವಕಟ್ಟಿ ।
ಸೊಂಪಿಂದಲಾಳೆಂದು । ತಂಪ ಹರಸುವರು ॥ ೩ ॥

ಸೃಷ್ಟೀಶ ಕಂಪಿಲಗೆ । ಹುಟ್ಟುವನು ಅರ್ಜುನನು ।
ದಿಟ್ಟ ರಾಮನು ಎಂದು । ಪಟ್ಟವಾಳುವನು ॥ ೪ ॥

ಸುರತಾಳನವರೆದ್ದು । ಶಿರವರಿಯೆ ರಾಮನನು ।
ಕುರುಬರಿಗೆ ಪಟ್ಟ ಹದಿ । ಮೂರು[2] ಜ[2] ನ ತನಕ ॥ ೫ ॥

ಅಷ್ಟರಿಂದಲಿ ಪಾಪ । ಹುಟ್ಟುವುದು ಜಗ[3] ವೆ[3] ಲ್ಲ ।
ಕೆಟ್ಟು ಅನ್ಯಾಯದಲಿ । ಭ್ರಷ್ಟಾಗುತಿಹುದು ॥ ೬ ॥

ಧರೆಗಧಿಕ ಶ್ರೀಗಿರಿಯು । ವರ ಮಲ್ಲಿಕಾರ್ಜುನನ ।
ತೆರೆದ ಪೂರ್ವದ ದ್ವಾರ । ವಿರದೆ ಮುಚ್ಚುವುದು ॥ ೭ ॥

---

1-1 ನ್ನ (ಇ, ಒ, ಖ, ಗ, ಚ,) 2-2 ದಿ (ಇ, ಖ, ಗ, ಚ.)
3-3 ಕೆ (ಇ, ಒ, ಖ, ಗ, ಚ, ಡ.)

ಗುರು ಶಿಷ್ಯರಿಗೆ ನ್ಯಾಯ । ಪುರುಷ ಸತಿಯರ ನ್ಯಾಯ ।
ಹರಭಕ್ತರೊಳು ಕಲಹ । ಇರದೆ ತೋರುವದು ॥ ೮ ॥

ಬರಸಿಡಿಲು ಬಿರುಗಾಳಿ । ಮೆರೆವ ತುರುಕರ ದಾಳಿ ।
ಧರೆಯ ತುಂಬಿತು ಧೂಳಿ । ಶರಣರಿದ ಕೇಳಿ ॥ ೯ ॥

ವರಸೆ ವಾವೆಯು ಕೆಟ್ಟು । ಪರಮ ವ್ರತಗಳ ಬಿಟ್ಟು ।
ತುರುಕರಿಗೆ ಸೆರೆಗೊಟ್ಟು । ಧರೆಯು ಕಂಗೆಟ್ಟು ॥ ೧೦ ॥

**ಅಟತಾಳ.**

ಗುರುವೆ ಕೇಳ್ ಬಸವಯ್ಯ ಶಿವನಿಹ । [1] ಗಿ [1] ರಿಗೆ ನಾವು ಪೋಗಲು ।
ತಿರುಗಿ ಬಹ ಪರಿಯಂತ ಲೋಕ ಈ – ಪರಿಯೊಳಿಹುದು ॥ ೧ ॥

ಧರೆಯ ದೈವಗಳೆಲ್ಲ ತುರುಕರ । ಉರವಣೆಗಳ ತಾಳಲಾರದೆ ।
ಭರದಿ ಉಳುವೆಗೆ ಪೋಗಿ ಮನೆ ಗ – ಟ್ಟಿರುವವೈಯ್ಯ ॥ ೨ ॥

ಶರಣರೆಲ್ಲರು ಶಿವನ ಲೋಕಕೆ । ಭರದಿ ಪೋಗಿ ಮರ್ತ್ಯಕೆ ।
ಬರುವದು ರಾಕ್ಷಸವು ಹದಿಮೂರು – ತಿರುಗಿ ಬಹವು ॥ ೩ ॥

ನಾಲ್ಕು ಸಾವಿರದೇಳು ನೂರೆ । ಪ್ಪತ್ತು ವರುಷಾ ಅಲ್ಲಿಗೆ ।
ನೂಕಿ ನಡೆವುದು ಕಲಿಯು ನಿಜವದು – ಲೋಕದೊಳಗೆ ॥ ೪ ॥

ಇಂದುಧರನೋಲಗದ ಶಿವಗಣ । ವೃಂದವೆಲ್ಲಾ ಮರ್ತ್ಯಕೆ ।
ಬಂದು ತೋರ್ಪರು ಚಂದದಲಿ ಆ – ನಂದದೊಳಗೆ ॥ ೫ ॥

ಚೆನ್ನಬಸವೇಶ್ವರನು ಪ್ರಭು ಪ್ರ । ಸನ್ನ ವೀರವಸಂತರಾಯನು ।
ಉನ್ನತದಿ ಸುರಗಣರು ಬರುವರು – ನನ್ನಿಯಿಂದ ॥ ೬ ॥

ಮುಂದೆ ಶರಣರು ಬರುವದಕೆ ಗುರು । ತೊಂದ ನಾನು ಪೇಳುವೆ ।
ಇಂದುಧರಸಭೆ ಕೇಳಿಮನ ಕಾ – ನಂದವಾಗಿ ॥ ೭ ॥

ಹಗಲು ಕತ್ತಲೆ ಮುಗಿಲು ಗರ್ಜನೆ । ಜಗವು ನಡುಗಿ ಪೂಮಳೆ ।
ಹಗಲು ಕೆಂಡದ ಮಳೆಯು ಪ್ರತಿ ಸೂ – ರ್ಯಗಳು ಮೂಡೆ ॥ ೮ ॥

ಧೂಮಕೇತುವು ಭೂಮಿಜಗಳವು । ರಾ [2] ಮ ಸ್ಥಲ [2] ಕೇ ತುರುಕರು ।
ಪ್ರೇಮದಲಿ ದಂಡೆದ್ದು ನಡೆವರು – ಭೂಮಿ ಬೆದರೆ ॥ ೯ ॥

ಸೃಷ್ಟಿಯೊಳು ಶ್ರೀಗಿರಿಯ ಮಲ್ಲನ । ಶಿಖರ ಬುಡದಿ ತೊಟ್ಟಿಯು ।
ಹುಟ್ಟುವದು ಜಗವರಿಯೆ ಜನಕದು – ದೃಷ್ಟನೋಡಿ ॥ ೧೦ ॥

---

1-1 ಪು (ಚ, ಜ.) 2-2 ಮೇಶ್ವರ (ಇ, ಒ, ಖ, ಟ, ಡ.)

ಹಿಂದೆ ಹರಿಯವತಾರದರಸರು । ಸಂದು ಹೋದವರವರೊಳು ।
ಮುಂದೆ ಕೇಶವಾವತಾರವದು ಹ – ನ್ನೊಂದು ಕಡೆಯು ॥ ೧೧ ॥

ಪಟ್ಟ ಅಚ್ಯುತ ಕಡೆ [1] ಯ [1] ಹರಿಜನ । ಹುಟ್ಟಿ ರಾಜ್ಯವಾಳುತ ।
ಕೆಟ್ಟು ಹೋಗಲು ಕುರುಹು ಶರಣರು – ಹುಟ್ಟುವದಕೆ ॥ ೧೨ ॥

ಕಟ್ಟ ಕಡೆಯಲಿ ರಾ [2] ಮ [2] ಪಟ್ಟವು । ಹುಟ್ಟುತಿಹುವುದೇ ಕಡೆಯದು ।
ಅಟ್ಟಬಹ ಹದಿನೆಂಟು ನ್ಯಾಜವು – ಕೊಟ್ಟ ಕೊನೆಯು ॥ ೧೩ ॥

ಪಾಲಿಭಂಡಾರವನು ಹೊಡೆವರು । ಗಾಲು ಮೇಲೂ ಕಡೆಯದು ।
ಮೇಲೆ ರಾಮನು ಆರು ತಿಂಗಳು – ಆಳುತಿ [3] ಹನು [3] ॥ ೧೪ ॥

ಅಷ್ಟರೊಳು ದಂಡೆದ್ದು ರಾಮನ । ಅಟ್ಟುತಿಹುದೇ ಕಡೆಯದು ।
ಸೃಷ್ಟಿಗೀಶನ ಶರಣರಿಗೆ ಮುಂದೆ – ಪಟ್ಟವಹುದು ॥ ೧೫ ॥

ಮಾರಹರವರ ಸುತನು ಷಡುಸ್ಥಲ । ಧೀರ ಚೆನ್ನಬಸವನು ।
ವೀರ ನೃಪ ವಸವಂತನಾಳುವ – ಧಾರಿಣಿಯನು ॥ ೧೬ ॥

ಕಟ್ಟುವದು ಕಲ್ಯಾಣ ಪಟ್ಟಣ । ಸೃಷ್ಟಿಯೊಳಗೆ ಶರಣರು ।
ಅಷ್ಟಮಹದೈಶ್ವರ್ಯ ಸುಖ ಸಂ – ತುಷ್ಟಿಯಹರು ॥ ೧೭ ॥

ವಚನ ॥ ಎಂದು ಸರ್ವಜ್ಞಮೂರ್ತಿಗಳು ಪೇಳಲು, ಶರಣರೆಲ್ಲರು ಸಂತೋಷವಂ ಪಟ್ಟು ಇರುತ್ತಿರಲು ಮುಂದೆ ಪ್ರಭುದೇವರು ಬಸವೇಶ್ವರದೇವರೊಡನೆ ಏನೆನ್ನುತಿರ್ದರು.

## ಅಲ್ಲಮಪ್ರಭುವಿನ ಕಾಲಜ್ಞಾನ.

**ದ್ವಿಪದಿ.**

ಶ್ರೀಗುರು ಶಿವಭಕ್ತ ಸ್ಥಿರಕರಾಮುಕ್ತ ।
[4] ಭೋ [4] ಗ ಮೋಕ್ಷದಿ ಶಕ್ತ ಭಾಪುವಿರಕ್ತ ॥ ೧ ॥

ಪರಮ ಪರುಷದ ಖಣಿಯೆ ಫಲಿತ ಸುರಮಣಿಯೆ ।
ಶರಣ ಕುಲ ಸಂದಣಿಯೆ ಶರಣಾಗ್ರಗಣಿಯೆ ॥ ೨ ॥

ಕೇಳು [5] ನೀ [5] ಬಸವಯ್ಯ ಕೇಳೆನ್ನ ಪ್ರಿಯ ।
ಏಳೇಳು ಜನ್ಮದಲಿ ಎಡಬಿಡದೆ [6] ನಿನ್ನ [6] ॥ ೩ ॥

---

1-1 ಯು (ಇ, ಒ, ಖ, ಗ, ಚ, ಟ.) 2-2 ಯ (ಇ, ಖ, ಚ, ಜ, ಡ,) 3-3 ಹುದೇ (ಅ, ಒ, ಖ, ಟ, ಬ.) 4-4 ಯೋ (ಅ, ಬ.) 5-5 ಶ್ರೀ (ಇ, ಒ, ಖ, ಗ, ಚ, ಜ.) 6-6 ಬಂದೆ (ಅ, ಉ, ಡ, ಬ.)

ತಾಳಿ ಸಂಗಡ ಕೂಡಿ ಸಕಲರೂ ಎಲ್ಲ ।
ಕೇಳಿರೈ ಶರಣರೂ ಕೇಳಿನೀವೆಲ್ಲ ॥ ೪ ॥

ಮೋಳಿಗೆಯಮಾರಯ್ಯ ಮುಸುಡಿಚೌಡಯ್ಯ ।
ಭಾಳಾಕ್ಷ ಸುತ ಚೆನ್ನಬಸವರಾಜಯ್ಯ ॥ ೫ ॥

ಸಿದ್ಧರಾಮಯ್ಯ ಶ್ರೀ ಮಡಿವಾಳದೇವ ।
ಹೊದ್ದಿದೇಳ್ನೂರು ಎಪ್ಪತ್ತಮರ ಗಣರು ॥ ೬ ॥

ಇದ್ದಂಥ ಶರಣರ ಎಲ್ಲರ ಮುಂದೆ ।
ಸಿದ್ಧಾಂತವನು ಪೇಳ್ವೆ ಶಿವನ ಕಾರಣವ ॥ ೭ ॥

ಹರಪೂಜೆ ಗುರುಸೇವೆ ಪರಮ ಸದ್ಭಕ್ತಿ ।
ಧರೆಯೊಳಿಂದಿನ ತನಕ ಧರ್ಮ ನಡೆಯಿತ್ತು ॥ ೮ ॥

ಧರೆಯ ಧರ್ಮವುತಪ್ಪಿ ಧಾತ್ರಿ ಹಸಗೆಟ್ಟು ।
ಉರವಣಿಸುತಿದೆ ಕಲಿಯು ಇರಬಾರದಿನ್ನು ॥ ೯ ॥

ವಚನ ॥ ಕೇಳು ಬಸವಯ್ಯ ಏಳೇಳು ಜನ್ಮದಲ್ಲಿ ಎಡಬಿಡದೆ ಬಂದೆವು ಇಲ್ಲಿಗೆ ನಿನ್ನ ಭಕ್ತಿ ಸರಿಯೆಂದು ಮತ್ತು ಏನೆನ್ನುತಿರ್ದರು.

**ತ್ರಿವುಡೆ.**

ಬಸವರಾಜನೆ ಭವವಿ ದೂರನೆ । ಅಸಮ ಲೋಚನನಾತ್ಮಬಂಧುವೆ ।
ವಸುಧೆ ಶರಣರ ವಸ್ತುವೇ ಕೇಳ್ – ಬಸವ ಮಜ್ಜೀವ ॥ ೧ ॥

ತೋರುತಿಹ ಕಲಿ ನಡೆದುದಿಲ್ಲಿಗೆ । ಮೂರು ಸಾವಿರ [1] ದೊಳಗೆ [1] ಒಂಬೈ ।
ನೂರ ಹನ್ನೊಂದ್ವರುಷ ಇಂದಿನ – ನಡೆವ ರಾಕ್ಷಸಕೆ ॥ ೨ ॥

ನಿಂದುದೀ ರಾಕ್ಷಸಕೆ ನೀವತಿ । ಮುಂದೆಮಾಡುವ ಭಕ್ತಿ ಮುಕ್ತಿಯು ।
ಇಂದುಧರನೊಳು ಏಕವಾಯಿತು – ಎಂದ ಪ್ರಭುರಾಯ ॥ ೩ ॥

ಒದಗಿತೀ ರಾಕ್ಷಸದ ಕಾರ್ತೀಕ । ಬಿದಿಗೆ ಸೋಮವಾರದಿರುಳಲಿ ।
ಮದನವೈರಿಯ ಮರ್ತ್ಯ ಶರಣರ – ಸುಖವು ನಮಗಿನ್ನು ॥ ೪ ॥

ಉದಯದಿಪ್ಪತ್ತೈದು ಘಳಿಗೆಗೆ । ಮದನಹರನೊಳಗೈಕ್ಯ ನಮಗೆಯು ।
ಸದಮಲಾತ್ಮಕ ಬಸವ ಕೇಳ್ನೀ – ವಿನ್ನು ತಿಂಗಳಿಗೆ ॥ ೫ ॥

ಹಿಂಗದಿಹ ಗುರು ಲಿಂಗ ಜಂಗಮ । ದಿಂಗಿತದ ಸದ್ಭಕ್ತಿ ನಿಮ್ಮಯ ।
ಲಿಂಗಕರ್ಪಿಸಿ ಐಕ್ಯ ಕೂಡಲ – ಸಂಗನೊಳು ನಿಮಗೆ ॥ ೬ ॥

1-1 ಮೇಲೆ (ಗ, ಚ, ಡ.)

ಎಂದು ಗುರುಪ್ರಭುರಾಯ ಪೇಳಲು । ವಂದಿಸುತ ಬಸವಣ್ಣ ಗಣಸಭೆ ।
ತಂದೆ ನಿಮ್ಮಯ ವರ ನಿರೂಪಣೆ – ಯೊಂದೆ ಸಾಕು ॥ ೭ ॥

ವಚನ ॥ ಎಂದ ಪ್ರಭುದೇವರ ನಿರೂಪಣೆಯಂ ಕೈಕೊಂಡು ಬೆಳಗಾದ ಬಳಿಕ ಗಣಪರ್ವವಂ ಮಾಡಿಸಿ, ಪ್ರಭುದೇವರು ತಮ್ಮ ಕಾರುಣ್ಯಪ್ರಸಾದವಂ ಬಸವೇಶ್ವರದೇವರು ಮೊದಲಾದ ಸಕಲ ಪ್ರಮಥರಿಗೆ ಕೊಟ್ಟು ತಮ್ಮ ಗುಹೇಶ್ವರ ಲಿಂಗದಲ್ಲೈಕ್ಯವಾಗಲು, ಇತ್ತ ಬಸವೇಶ್ವರದೇವರು ಶರಣರ ಸದ್ಗೋಷ್ಠಿಯಲ್ಲಿರುತಿರ್ದರದೆಂತೆನೆ.

**ಏಕತಾಳ – ಅರ್ಧರೇಕು.**

ಹರಪೂಜೆ ಗುರುಸೇವೆ – ಶರಣೋಪಚಾರ ।
ಪರಮಜಂಗಮಭಕ್ತಿ – ಹರುಷದಿಂ ಮಾಡಿ ॥ ೧ ॥

ರಾಜರುದ್ಯೋಗವ – ರಾಜ್ಯದ ಸ್ಥಿತಿಯ ।
ರಾಜಶೇಖರ ಬಸವ – ರಾಜ ನಡೆಸಿದನು ॥ ೨ ॥

ದೊರೆಗುರುಕಾರರಿ – ಗಿರುವ ಸಂಬಳವ ।
ಕೊರತೆಯಿಲ್ಲದೆ ಎಲ್ಲ – ಸರಿಮಾಡಿ ನಡೆಸಿ ॥ ೩ ॥

ರಾಜ್ಯರಾಜ್ಯದ ಸರ್ವ – ರಾಜರ ಕೈಯ ।
ಪೂಜೆಗೊಳ್ಳುತ ಬಸವ – ರಾಜನೊಪ್ಪಿರಲು ॥ ೪ ॥

ಹಿಂದೆ ತಮಗೆ ಬದುಕು – ಬಂದಂದಿನಿಂದ ।
ನಿಂದ ರೊಕ್ಕವ ದೊರೆಗೆ – ಹೊಂದಿಸಿಕೊಟ್ಟು ॥ ೫ ॥

ರಾಜನ ರಾಜ್ಯಭಾರ – ವನ್ನೆಲ್ಲ ಅರುಹಿ ।
ವಾಜಿಯಿಂ ಬೊಕ್ಕಸ – ರಾಜಗೆ ತೋರಿ ॥ ೬ ॥

ಸಕಲ ಜನರ ಕೈಯ – ಹಾಡಿಸಿಕೊಳುತ ।
ಸಕಲ ಜನರಕೈಯ – ಪೂಜಿಸಿಕೊಳುತ ॥ ೭ ॥

ಸುಖದಿಂದೊರೆದ ಬಸವ – ಕಾಲಸೂಚನೆಯ ॥

## ಬಸವೇಶ್ವರದೇವರ ಕಾಲಜ್ಞಾನ.

**ಜಂಪೆ.**

ಮುಂದೆ ತಿಂಗಳಿಗೆ ಸಂ । ಗಮನೊಳಗೈಕ್ಯ ನಿಮ ।
ಗೆಂದು ಪ್ರಭು ಪೇಳಿ ಪೋ । ದಂದವನು ತಿಳಿದು ॥ ೧ ॥

ರಾಕ್ಷಸದ ಮಾರ್ಗಶಿರ । ಶುದ್ಧ ಪಾಡ್ಯಮಿ ಸಕಲ ।
ಮೋಕ್ಷತಿಥಿ ಮಂಗಳ್ವಾ । ರದ ರಾತ್ರಿಯೊಳಗೆ ॥ ೨ ॥

ಇಂದುಧರ ಶಿವಶರಣ । ವೃಂದವೆಲ್ಲಕೆ ಬಸವ ।
ವಂದಿಸುತ ಪೇಳಿದನು । ಮುಂದಣ ಸ್ಥಿತಿಯ ॥ ೩ ॥

ಭಾಳಾಕ್ಷಶರಣ ಸಂ । ಮೇಳ ಇಂದಿನ[1] ತನಕ[1]
ನಾಳೆ ಕೂಡಲಸಂಗ । ನೊಳಗೈಕ್ಯ ನಮಗೆ ॥ ೪ ॥

ಬೆಳಗಿನಿಪ್ಪತ್ತೆಂಟು । ಘಳಿಗೆಯೊಳು ಸಂಗಮನ ।
ಕಳೆಗೂಡಿ ಕೈಲಾಸ । ನಿಳಯಕ್ಕೈದುವೆವು ॥ ೫ ॥

ಹರನು ಬಸವೇಶ್ವರನ । ತ್ವರಿತದಿಂ ಬಾಯೆನಲು ।
ಕರೆಯಬಂದವನಂತೆ । ತರಣಿಯುದಿಸಿದನು ॥ ೬ ॥

ತರಣಿಯುದಿಸಲು ಬಸವ । ಶರಣ ಸಂಕುಳಕೆಲ್ಲ ।
ತ್ವರಿತದಿಂ ಗಣಪರ್ವ । ಹರುಷದಿಂಮಾಡಿ ॥ ೭ ॥

ಪರಮಗುರು ಶ್ರೀಪ್ರ । ಸಾದವಂ ಕೈಕೊಂಡು ।
ಶರಣರಿಗೆ ಮುಂದೆ ಬಹ । ಕುರುಹು ಪೇಳಿದನು ॥ ೮ ॥

ಮೀರಿ ನಾವು ಪೋದಂಥ । ಮೂರುವರೆ ತಿಂಗಳಿಗೆ ।
ತೋರುವದು ಕದನ ಹರ । ಳಯ್ಯ ಮಧುವಯ್ಯರಿಂ ॥ ೯ ॥

ಕಳೆಜೂಟಶರಣರನು । ಎಳೆಹೂಟೆ ಕಟ್ಟಿಸುವ ।
ಇಳೆಗೊಡೆಯ ಫಾಲ್ಗುಣದಿ । ಅಳಿವದನು ಅರಿಯ ॥ ೧೦ ॥

ಶರಣದ್ರೋಹವ ನೋಡಿ । ಶರಣರೆಲ್ಲರು ಕೂಡಿ ।
ಪರವಾದಿ ಬಿಜ್ಜಳನ । ಇರಿದು ಕೆಡಹುವರು ॥ ೧೧ ॥

ಧರೆಯಾಣ್ಮನನು ಕೊಂದು । ಶರಣರೆಲ್ಲರು ಪೋಗೆ ।
ಭರದಿ ದಂಡೆತ್ತುವನು । ಅಳಿಯಬಿಜ್ಜಳನು ॥ ೧೨ ॥

ಹಿಂದಟ್ಟಿ ಬಹ ದಂಡ । ಅಂದು ಮಿಗೆ ನಿಟ್ಟಿಸುತ
ಕೊಂದು ಕೊಲೆಯಾಡುತಲಿ । ಹಿಂದಕಟ್ಟುವರು ॥ ೧೩ ॥

ಶರಣರೆಲ್ಲರು ಕೂಡಿ । ಹರುಷದಲಿ ಮಾತಾಡಿ ।
ಭರವಸದಿ ಉಳುವೆ ನಗ । ರಿಯನು ಸೇರುವರು ॥ ೧೪ ॥

---

1-1 ಇರುಳು (ಅ, ಎ, ಒ, ಖ, ಜ, ಟ.)

ಶರಣಜನಕೆಲ್ಲ ಗಣ । ಪರುಷ ಮಾಡಿಸಿ ಬೇಗ ।
ಹರುಷದಲಿ ಕೈಲಾಸ । ಪುರಕೆ ಪೋಗುವರು ॥ ೧೫ ॥

ವಚನ ॥ ಇಂತೆಂದು ಬಸವಣ್ಣನವರು ಮುಂದಣ ಸೂಚನೆಯಂ ಪೇಳಿ ಮತ್ತೀನೆನ್ನುತಿರ್ದರು.

**ದ್ವಿಪದಿ.**

ಶ್ರೀ ಮಹಾದೇವನ ಶಿಖಿಯ ವಹಿಸಿಹರು ।
ಕಾಮವೈರಿಯ ಭಜಿಸಿ ಕರುಣ ಪಡೆದಿಹ[1] ರು[1] ॥ ೧ ॥

ಬನ್ನಿರೈ ಶರಣರು ಬಹುಪರಾಕ್ರಮರು
ಬನ್ನಿರೈ ಶರಣಾಗತ ರಕ್ಷಬಿರುದಕರು ॥ ೨ ॥

ಬನ್ನಿರೈ ಪರವಾದಿ ವಿಪಿನದಾವಗ್ನಿ ।
ಬನ್ನಿರೈ ಪರವಾದಿ ಗರ್ಭ ನಿರ್ಭೇದ ॥ ೩ ॥

ಕರಿಯ ಕುಂಭವ ಪಿಡಿದು ಇರಿದು ಕೆಡಹುವರು ।
ಗಿರಿಯ ಬೆರಳಿಂದೆತ್ತಿ ನೆರಳ ಪಿಡಿವವರು ॥ ೪ ॥

[2] ಮೊರೆವ ಮಾರಿಯ ಕೈಯ [2] ಕೆಲಸಗೊಂಬುವ[3] ರು[3] ।
ಉರವಣಿಪ ಕಾಲನ ಸರಕುಗೊಳದಿಹರು ॥ ೫ ॥

ಮಿಗೆ ಕಾಲಮೃತ್ಯುವ ಬಗೆಗೊಳ್ಳದಿಹರು ।
ಅಗಹರನ ಬಿರುದಿನ ಅಧಿಕ ಸಾಹಸರು ॥ ೬ ॥

ಬನ್ನಿರೈ ಮಡಿವಾಳಮಾಚಿದೇವಯ್ಯ ।
ಬನ್ನಿರೈ ಭವದೂರ ಕಿನ್ನರಯ್ಯಗಳೆ ॥ ೭ ॥

ಸುರಗಿಚೌಡಯ್ಯ ಶೂಲದಬೊಮ್ಮತಂದೆ ।
ಪರವಾದಿಗಳ ಗಂಡ ತಿಮಿರಮಾರ್ತಾಂಡ ॥ ೮ ॥

ಧುರಧೀರ ಜಗದೇವ ಮೊಲ್ಲೆ ಬೊಮ್ಮಯ್ಯ ।
ಇಂತಪ್ಪ ಶರಣರ ಎಲ್ಲರ ಕೈಗೆ ॥ ೯ ॥

ಚಿಂತಾರತ್ನವ ಕೊಳ್ಳಿ ಶಿವನ ಮೋಹನದ ।
ಪನ್ನಗಧರಸುತನ ಪ್ರಮಥನಾಯಕನ ॥ ೧೦ ॥

ಚೆನ್ನಬಸವೇಶ್ವರನ ಚೆಲುವ ಚೆನ್ನಿಗನ ।
ಇನ್ನು ನಿಮ್ಮಯ ಕರಕೆ ಇತ್ತೆನೀಕ್ಷಣ[4] ವೆ[4] ॥ ೧೧ ॥

---

1-1 ರೆ (ಬ, ಗ, ಚ, ಡ.) 2-2 ರದುಮಾರಿಯ ಕರದು (ಎ, ಗ, ಚ.)
3-3 ರೆ (ಬ, ಗ, ಚ, ಡ.) 4-4 ಕೆ (ಬ, ಡ.)

ನನ್ನಿ ಕೂಡಲಸಂಗನಿಳಿಗೆನ್ನ ಪಯಣ ।
ಎಂದು ಪೇಳಿದನಾಗ ಚಂದದಿಂ ಬಸವ * ॥ ೧೨ ॥

**ಕಂದಪದ್ಯ.**

ಶ್ರಿ ಗುರು ಬಸವೇಶ್ವರನುಂ ।
ಆಗಳಿ ಶರಣರ್ಗೆ ನಮಿಸಿ ಅತಿಹರುಷದೊಳಂ ॥
ಬೇಗದಿ ಬಾರೆಂದೆನುತಂ ।
ದಾಗಳೆ ಚೆನ್ನಬಸವಣ್ಣನಂ ತಾ ಕರೆದಂ ॥ ೧ ॥

ನಿಷ್ಕಲಬ್ರಹ್ಮವೆ ನಿಗಮಕೆ ।
ಸಿಲ್ಕದ ಶಿವತತ್ವಕಳೆಯೆ ಚಿಂತಾಮಣಿಯೇ ॥
ಸತ್ಕಲೆ ಸುಮ್ಮನದೊಪ್ಪವೆ ।
ಚಕ್ಕನೆ ನೀಂ ಬಾರೊ ಚೆನ್ನದಂಡೇಶ್ವರನೇ ॥ ೨ ॥

ಬಾರೆನ್ನಯ ಮುದ್ದುಮರಿಯೆ ।
ಬಾರೆನ್ನಯ ಭಕ್ತಜನದ ಭಾಗ್ಯದ ನಿಧಿಯೇ ॥
ಬಾರೆಂದು ಬಸವ ಕರೆಯಲು ।
ಸಾರಿದ ಶ್ರೀ ಚೆನ್ನಬಸವ ಸಕಲರು ನಲಿಯಲ್ ॥ ೩ ॥

ವಚನ ॥ ಇಂತಪ್ಪ ಪ್ರಿಯೋಕ್ತಿಯಿಂದ ಚೆನ್ನಬಸವಣ್ಣನ ಕರೆದು ಚೆನ್ನದಂಡನಾಯಕನೆಂಬ ಪೆಸರನ್ನಿತ್ತು, ಮಡಿವಾಳಯ್ಯ ಮುಂತಾದ ಸಕಲ ಪ್ರಮಥರ ಕೈಗೆ ಕೊಟ್ಟು ಪರವಾದಿಗಳಂ ಜೈಸಿ ಪರಿಣಾಮದಲ್ಲಿ ಬಾರೆಂದು ಹರಸಿ ಕಪ್ಪಡಿಯ ಸಂಗಮೇಶ್ವರನಲ್ಲಿಗೆ ಬಸವಣ್ಣ ಪೋಗುತಿರ್ದನದೆಂತೆನೆ.

**ತ್ರಿವುಡೆ.**

ಧರೆಯೊಳಿಹ ಕಲ್ಯಾಣಪಟ್ಟಣದ । ಸಿರಿಯು ಶ್ರೀ ಕೈಲಾಸವಾಸನ ।
ಹೊರೆಗೆ ಸೇರುವತೆರದಿ ಹೊರಟನು – ಭರದಿ ಬಸವೇಶ ॥ ೧ ॥

ಒಂದಿನಲಿ ಕೆಲಶರಣ ಸಂದಣಿ । ಯಿಂದ ಹೊರಟನು ಬಸವರಾಜನು ।
ಇಂದುಮುಖಿ ನೀಲಾಂಬೆಯನು ನಾ – ವಿಂದು ಮರೆದೆವಲಾ ॥ ೨ ॥

ಎಂದು ಬೇಗದಿ ನೀಲಲೋಚನೆ । ಯಿಂದು ಕರೆ ಅಪ್ಪಣ್ಣ ಎನುತಲಿ ।
ಅಂದು ನೇಮಿಸಿ ಮುಂದೆ ನಡೆದನು – ಚಂದದಲಿ ಬಸವ ॥ ೩ ॥

ಕಂಗೊಳಿಪ ಕಲ್ಯಾಣಪುರವನು । ಹಿಂಗಿ ಕಳೆದನು ಬಸವರಾಜನು ।
ಸಂಗಮೇಶನ ಸರಸಿಜಾಂಘ್ರಿಯ – ಅಂಗದಲಿ ನೆನೆದು ॥ ೪ ॥

---

* ಅರ್ಧಪದ್ಯ (ಅ, ಇ, ಒ, ಖ, ಜ, ಟ,) ಪ್ರತಿಗಳಲ್ಲಿಲ್ಲ.

ಮುಂದೆ ನಡೆವುತ ಮುಕ್ತಿಗೊಡೆಯನ । ಇಂದುಮೌಳಿಯ ಸಂಗಮೇಶನ ।
ಮಂದಿರವ ಕಂಡಾಕ್ಷಣದಿ ಮಿಗೆ – ವಂದಿಸಿದ ಬಸವ ॥ ೫ ॥

ವಸುಮತಿಗೆ ನಿಜಪೂರ್ಣಕಳೆಯ । ಶಶಿಯ ಮಂಡಲದಂತೆ ತೋರುವ ।
ಅಸಮಲೋಚನನಧಿಕ ಭವನವು – ಎಸೆವುದರ್ಥಿಯಲಿ ॥ ೬ ॥

ಸುತ್ತ ಬಳಸಿಹ ಮೊತ್ತ ತರುಕುಲ । ದರ್ಥಿಯನು ನೋಡುತ್ತ ಹರುಷದಿ ।
ಸತ್ಯ ಬಸವನು ಶರಣರೊಳು ಮುದ – ವೆತ್ತು ತೈತರಲು ॥ ೭ ॥

ಬಂದು ಸಂಗಮನಾಥನಿರುತಿಹ । ಮಂದಿರವನೊಳಪೊಕ್ಕು ಬೇಗದಿ ।
ಚಂದ್ರಮೌಳಿಯ ನಿಂದು ನೋಡಿದಾ – ನಂದದಲಿ ಬಸವ ॥ ೮ ॥

ಗುರುವ ಕಂಡೆನು ಎನ್ನ ಭಾಗ್ಯದ । ಸಿರಿಯ ಕಂಡೆನು ಕಂಡೆನೆನುತಲಿ ।
ಎರಗಿ ಸಂಗಮನಾಥನಿಗೆ ಕರ – ಮುಗಿದು ಕು[1] ಳಿತ[1] ॥ ೯ ॥

ವಚನ ॥ ಅತ್ತ ಬಸವಣ್ಣ ಕುಳಿತಿರಲು, ಇತ್ತ ಅಪ್ಪಣ್ಣಗಳು ನೀಲಲೋಚನೆಯ ಕರೆಯಹೋದ ಪ್ರಸಂಗಮಂ ಪೇಳ್ವೆನದೆಂತೆನೆ.

## ಇಷ್ಟಲಿಂಗದಲ್ಲಿ ನೀಲಾಂಬಿಕೆ ಮತ್ತು ಅಪ್ಪಣ್ಣನ ಐಕ್ಯ.

**ಸೊಬಗಿನ ಸೋನೆವರ್ಣ.**

ಸರಸಿಜಮುಖಿ ನೀಲಲೋಚನೆಯ ಬಸವಯ್ಯ । ಕರೆಯೆಂದು ಅಪ್ಪಣ್ಣನ ಕಳುಹಲು ।
ತ್ವರಿತದಿಂ ಬಂದು ನೀಲಮ್ಮ ನಿಮ್ಮನು ಬೇಗ । ಕರೆಯೆಂದು ಬಸವ[2] ಣ್ಣ[2] ಕಳುಹಿದ॥
ಎಲ್ಲಿಗೆ ಬಹುದು ತಾವೆಲ್ಲಿಗೆ ಪೋದರು । ಎಲ್ಲವನುಸುರೆಂದು ಬೆಸಗೊಳ್ಳೆ
ನಿಲ್ಲದೆ ಸಂಗಮನಲ್ಲಿಗೆ ಪೋದರು । ಅಲ್ಲಿಗೆ ನಿಮ್ಮನು ಕರೆದರು ॥ ೨ ॥
ಅಷ್ಟರೊಳಗೆ ಸಿದ್ಧರಾಮಯ್ಯ ನೈತರೆ । ಸಾಷ್ಟಾಂಗವೆರಗಿ ನೀಲಮ್ಮನು ।
ದೃಷ್ಟಮೂರುತಿ ಸಿದ್ಧರಾಮಸ್ವಾಮಿಯೆ ನಮ್ಮ । ಇಷ್ಟಲಿಂಗವೆ ಬನ್ನಿರೆಂದಳು ॥ ೩ ॥
ಅಸಮಾಕ್ಷ ಸಿದ್ಧರಾಮಯ್ಯ ನೀಲಮ್ಮನ । ಶಶಿಮುಖವನೆ ನೋಡಿ ತಲೆದೂಗಿ ।
ಬಸವಣ್ಣ ಪೋದನು ನಿಮ್ಮ ನಮ್ಮನು ಬಿಟ್ಟು । ಉಸುರಲಿನ್ನೇನು ಕೇಳಿಲೆ ತಾಯೆ ॥೪॥
ಎಂದ ಮಾತಿಗೆ ಇಂತೆಂದಳು ನೀಲಮ್ಮ । ತಂದೆ ನಿಮ್ಮಡಿಯಾಸೆ ನಮಗಿರೆ ।
ಸಂದೇಹವೇಕೆ ಸಂಗಮ ನಮ್ಮ ಕರದೊಳು । ನಿಂದಿರೆ ನಮಗೊಂದು ನೆರವುಂಟೆ ॥ ೫ ॥
ಎಂದೊಳಗಡೆ ಪೋಗಿ ತಂದು ಪನ್ನೀರಿತ್ತು । ತಂದೆ ಚಿತ್ತೈಸೆಂದು ನಮಿಸಲು ।
ಬಂದು ಮೂರ್ತವಗೊಂಡು[3] ಲಿಂಗಾರ್ಚನೆಯಗೈದು[3] । ವಂದಿಸಿ ಪಾದಾಂಬುವನೆ ಕೊಂಡು ॥ ೬ ॥

---

1-1 ಳ್ಳಿರ್ದ (ಇ, ಒ, ಜ, ಟ, ದ.) 2-2 ಯ್ಯ (ಇ, ಒ, ಖ, ಟ.)
3-3 ಯಿಂದುಧರನಂ ಭಜಿಸಿ (ಅ, ಖ, ಗ, ಚ, ಜ, ಡ, ಬ.)

ತಂದು ಅಮೃತಾನ್ನ ಶಾಕಾದಿ ಪಾಕಂಗಳ । ಚಂದದಿಂದೀರ್ವರಿಗೆಡೆಮಾಡಿ ।
ಇಂದುಧರನಿಗೆ ಅರ್ಪಿಸಿ ಮನೋಹರುಷದಿ । ಅಂದುಂಡು ದಣಿದು ಶೇಷವನೀಯೆ ॥

ಬಂದು ನೀಲಮ್ಮ ಬೇಗದಿ ಸಿದ್ಧರಾಮಗೆ ।ವಂದಿಸಿ ಶೇಷವ ಕೈಕೊಂಡು ।
ತಂದು ವಿಭೂತಿ ವೀಳ್ಯವನಿತ್ತು ಕರಮುಗಿ । ದೆಂದಳು ಸಿದ್ಧರಾಮನೊಳು ॥ ೮ ॥

ಗುಡಿಯ ಲಿಂಗವು ದೊಡ್ಡಿತೆಂದು ಬಸವಯ್ಯನು । ನಡೆದರೆ ನಡೆಯಲಿ ನಮಗಿನ್ನು ।
ಮೃಡಮೂರ್ತಿ ಗುರುಕೊಟ್ಟ ಲಿಂಗವು ಎನ್ನಯ । ಒಡನಿರಲೊಲ್ಲೆ ನಮಗಲ್ಲೇನು ॥ ೯ ॥

ಸತ್ಯಮೂರುತಿ ಸಿದ್ಧರಾಮಯ್ಯ ನಾ ನಿಮ್ಮ । ತೊತ್ತಿನಮಗಳು ಬಸವಯ್ಯ ತಮ್ಮ ।
ತೊತ್ತೆಂದಿರಿಸಿ ಕರೆಯದೆ ಪೋದರು ನೀವೆನ್ನ । ಕರ್ತೃವೆ ಕರಸ್ಥಲದೊಡೆಯನೆ ॥ ೧೦ ॥

ಉರದ ಲಿಂಗವಬಿಚ್ಚಿ ಕರದೊಳಗಿಂಬಿಟ್ಟು । ಹರನೆ ನೀ ಸಲಹೆಂದು ಸ್ತುತಿಸುತ್ತ ।
ಗುರುಸಿದ್ಧರಾಮಪ್ರಭುವೆ ನೋಡು ನೋಡೆಂದು । ಕರಸ್ಥಲ ಲಿಂಗದೊಳ್ಬೆರೆದಳು ॥೧೧॥

ಉಘೆ ಉಘೆ ಚಾಂಗು ಭಲರೆಂದು ಪುಷ್ಪಕವೇರಿ । ನೆಗೆದಳು ರಜತಾದ್ರಿ ಶೈಲಕ್ಕೆ ।
ಅಘಹರನಡಿಗೆರಗುತ್ತ ನೀಲಮ್ಮನು । ಅಗಜೆಯೋಲಗದೊಳು ಸುಖಮಿರೆ ॥ ೧೨ ॥

ನೋಡಿದ ಸಿದ್ಧರಾಮಯ್ಯ ಅಪ್ಪಣ್ಣನು । ಕೂಡೆ ತಮ್ಮೊಳು ತಾವೆ ಬೆರಗಾಗಿ ।
ಗಾಢದಿಂದೆದ್ದು ಪೋದನು ಚೆನ್ನಬಸವನ । ಕೂಡೆ ಪೇಳುವೆನೆಂಬ ಹರುಷದಿಂ ॥ ೧೩ ॥

ಚೆನ್ನಬಸವಣ್ಣಗೆ ಪೇಳ್ದನೀವಾರ್ತೆಯ । ಇನ್ನು ಸಂಗಮಕ್ಕೈದ ವಾರ್ತೆಯನು ।
ನನ್ನಿಯಿಂ ಬಸವಗೆ ಪೇಳ್ವೆನೆಂದಪ್ಪಣ್ಣ । ಮುನ್ನ ಬಂದನು ಬಸವಯ್ಯನೆಡೆಗೆ ‡ ॥೧೪॥

[1]ಬ[1]ಂದು ಅಪ್ಪಣ್ಣ ಬಸವರಾಜನಂಘ್ರಿಗೆ । ವಂದಿಸಿ ಕರಮುಗಿದಿರುತಿರೆ ।
ಬಂದೆ ನೀ ನೀಲಲೋಚನೆಯಲ್ಲಿ ಬರಲಿಲ್ಲ । ವೆಂದು ಕೇಳ್ದನು ಬಸವರಾಜನು ॥ ೧೫ ॥

ವರಗುರು ಬಸವರಾಜನೆ ಕೇಳು ನಾ ಪೋದೆ । ಗುರುಸಿದ್ಧರಾಮಯ್ಯನೈತಂದ ।
ಕರೆದೆನವರ ಮುಂದೆ ನೀಲಮ್ಮ ಬಾರೆಂದು । ಕರೆದರಿಂತೆಂದು ಮಾರ್ನುಡಿದಳು ॥ ೧೬ ॥

ಕರೆದರೇನಾಯ್ತು ಸಂಗಮ ನಮ್ಮ ಕರದೊಳ । ಗಿರುತಿರೆ ನಾನೊಲ್ಲೆನೆನುತಲ್ಲಿ ।
ಉರದ ಲಿಂಗವಬಿಚ್ಚಿ ಕರದೊಳಗಿಂಬಿಟ್ಟು । ಶರಣೆಂದು ಲಿಂಗದೊಳ್ಬೆರೆದಳು * ॥ ೧೭ ॥

ವಚನ ॥ ಈ ವಾಕ್ಯವಂ ಕೇಳಿ ಬಸವರಾಜದೇವರು ಏನೆನ್ನುತಿರ್ದರು.

**ಅಟತಾಳ.**

ಎಂತು ಪೋದಳು ನೀಲಲೋಚನೆ । ಎಂತು ಶಿವನ ಬೆರೆದಳು ।
ಎಂತು ಪೇಳಪ್ಪಣ್ಣ ನಮಗಾ – ದ್ಯಂತವೆಲ್ಲವನು ॥ ೧ ॥

---

‡ ಈ ಪದ್ಯ (ಅ, ಇ, ಉ, ಎ, ಖ, ಗ, ಚ, ಟ, ಡ, ದ, ಬ.) ಪ್ರತಿಗಳಲ್ಲಿಲ್ಲ.
1-1 ಅ (ಅ, ಎ, ಡ, ಬ.) * ಈ ಪದ್ಯ (ಉ, ಖ, ಗ, ಚ,.) ಪ್ರತಿಗಳಲ್ಲಿ ಆಟತಾಳ ರೂಪವನ್ನು ಹೊಂದಿದೆ.

ಎಂದ ನುಡಿಗಪ್ಪಣ್ಣ ಶಿವಸಭೆ । ಗೊಂದಿಸುತಲಿ ಬೇಗದಿ ।
ಇಂದುಧರನೊಳು ಬೆರದಳೀಬಗೆ – ಎಂದು ಬಯಲಾದ ॥ ೨ ॥

ನೋಡಿ ಬಸವೇಶ್ವರನು ಶಿರವನ । ಲ್ಲಾಡುತಿರಲಾ ಶಿವಸಭೆ ।
ಕೂಡೆ ಉಘೆ ಉಘೆ ಎ[1] ನ್ನು ತಾಕ್ಷಣ[1] ಕೊಂ – ಡಾಡಿತೆಲ್ಲ ॥ ೩ ॥

ವಚನ ॥ ಆ ವೇಳೆಯಲ್ಲಿ ಬಸವೇಶ್ವರದೇವರು ಸಂಗಮೇಶ್ವರನ ಏನೆಂದು ಕೊಂಡಾಡುತಿರ್ದರು.

## ಸಂಗಮೇಶ್ವರನಲ್ಲಿ ಬಸವೇಶ್ವರನ ಐಕ್ಯ.

**ಜಂಪೆ.**

ಶ್ರೀ ಗುರುವೆ ಪರಮ ಸ । ದ್ಗುರುವೆ ಕೃಪಾಗುರುವೆ ।
ನಾಗಭೂಷಣನೆ ದಯ । ವಾಗೆನ್ನ ಗುರುವೆ ॥ ೧ ॥

ಸಂಗ ವರಲಿಂಗ ಭವ । ಭಂಗ ನಿತ್ಯ ಕೃಪಾಂಗ ।
ತುಂಗಜಟಗಂಗಧವ । ಳಾಂಗ ಸಲಹೆನ್ನ ॥ ೨ ॥

ಕರುಣ ವರಭರಣ ಶಿರ । ಹರಿಣಕರ ತರಣಿ ಶಶಿ ।
ಕಿರಣಧರ ದೈತ್ಯಪುರ । ಹರನೆ ಸಲಹೆನ್ನ ॥ ೩ ॥

ಸಿರಿ[2]ವ[2] ರನ ಹರಿ ಹೇಮ । ಗಿರಿಯೆನಲು ಸುತಶಿರವ ।
ನರಿದುಕೊಂಡನಿಗೊಲಿದ । ದೊರೆಯೆ ಸಲಹೆನ್ನ * ॥ ೪ ॥

ಸುರರಕ್ಷ ಧರೆರಕ್ಷ । ಕರಿಯ ದಾನವಶಿಕ್ಷ ।
ಉರಿಯಕ್ಷ ವರಮೋಕ್ಷ । ಹರನೆ ಸಲಹೆನ್ನ * ॥ ೫ ॥

ಸಿಂಧುನಂದನೆ ಸುತನ । ಕುಂದನ್ಪೊಂದಿದ ಸತಿಯ ।
ತಂದೆಗೊಲಿದನೆ ಸಲಹು । ಇಂದು ಮೌಳೀಶ ॥ ೬ ॥

ಮಲ್ಲಿಗೆಯಲಿಟ್ಟವನ । ಹುಲ್ಲುಮಾಡಿಯೆ ಸುಟ್ಟೆ ।
ಕಲ್ಲಲಿಟ್ಟವನಿಗೊಲಿ । ದಲ್ಲಿ ರಕ್ಷಿಸಿದೆ ॥ ೭ ॥

ವೇದವಿಧ ಅಷ್ಟವಿಧ । ಪೂಜೆಮಾಳ್ಪನ ಉಳಿದು ।
ಪಾದದಲಿ ಪೂಜಿಸಿದ । ವ್ಯಾಧನಿಗೆ ಒಲಿದೆ ॥ ೮ ॥

ಗುರುವೆ ಸುರತರುವೆನ್ನ । ಪೊರೆವೆ ನೆನೆವರ ಮನದಿ ।
ಇರುವೆ ಮೋಕ್ಷಕೆ ನೆರೆವೆ । ಹರನೆ ಸಲಹೆನ್ನ ॥ ೯ ॥

---

1-1 ಂದು ಶರಣರ್ (ಎ, ಗ, ಚ.) 2–2 ಥ (ಇ, ಜ.)
* ಈ ಪದ್ಯಗಳು (ಖ, ಗ, ಚ, ಜ.) ಪ್ರತಿಗಳಲ್ಲಿಲ್ಲ.



**ಸಂಗಮೇಶ್ವರಲಿಂಗದಲ್ಲಿ ಬಸವೇಶ್ವರನ ಐಕ್ಯ**

(ದ್ವಿ. ಪದ್ಯ ೧ - ೩ - ೪)

ಭಕ್ತವತ್ಸಲನೆ ಸ । ದ್ಭಕ್ತನಿಧಿ ಸಂಪನ್ನ ।
ಮುಕ್ತಿಗೊಡೆಯನೆ ಎನ್ನ । ಕರ್ತೃ ಸಲಹೆನ್ನ ॥ ೧೦ ॥
ತ್ರಾಹಿವರಗುರು ಸಂಗ । ತ್ರಾಹಿ ನಿತ್ಯಕೃಪಾಂಗ ।
ತ್ರಾಹಿ ಚಿದ್ಘನಲಿಂಗ । ತ್ರಾಹಿ ಸಲಹೆನ್ನ ॥ ೧೧ ॥

ವಚನ ॥ ಎಂದು ಸ್ತುತಿಮಾಡುವ ಬಸವೇಶ್ವರನಂ ನೋಡಿ, ಕಾರುಣ್ಯಾಸಿಂಧುವಾದಂಥ ಸಂಗಮೇಶ್ವರನು ಮೇಘದಲ್ಲಿ ಮಿಂಚಡಗಿ ಧ್ವನಿದೋರುವಂತೆ ತನ್ನೊಳೈಕ್ಯವಂಗೊಂಡನದೆಂತೆನೆ.

**ದ್ವಿಪದಿ.**

ಶ್ರೀ ಗುರುವರ ಸಂಗ ಶಿವನೊಳೈಕ್ಯವನು ।
ಆಗ ಬೆರೆದನು ಬಸವನಧಿಕ ಸಂತಸದಿ ॥ ೧ ॥
ನೀರೊಳಗೆ ವಾರಿಶಿಲೆ ನಿಜದಿ ಬೆರೆದಂತೆ ।
ಮಾರುತನೊಳು ಗಂಧ ಮೈದೋರಿದಂತೆ ॥ ೨ ॥
ಬೇಗ ಕರ್ಪೂರ ಜ್ಯೋತಿ ಬೆರೆದ ವಾಳ್ಕೆ[1] ಯೊಳು[1] ।
ಗುರುಸಂಗನೊಳು ಬಸವ ಬೆರೆದು ಹೋಗಲ್ಕೆ ॥ ೩ ॥
ಸುರಿಯೆ ಕುಸುಮದ ವೃಷ್ಟಿ ಘನಹರುಷದಲ್ಲಿ ।
ಸುರರ ದುಂದುಭಿ ಮೊಳಗೆ ಸ್ತುತಿಸೆ ಸುರಸ್ತೋಮ ॥ ೪ ॥
ಶರಣರುಘೆ ಉಘೆಯೆಂದು ಸ್ತುತಿಸಿ ಸರ್ವರಿಗೆ ।
ಭರದಿ ವೀಳ್ಯವ ಹಂಚಿ ಭಸಿತವನ್ನಿತ್ತು ॥ ೫ ॥
ಹರುಷದಲಿ ಇದ್ದರಾ ಹರನ ಕರುಣದಲಿ ॥

**ಕಂದಪದ್ಯ.**

ಇತ್ತಲು ಶರಣರುಮಿರುತಿರೆ ।
ಅತ್ತಲು ಕೈಲಾಸಪುರಕೆಯ್ದಲು ಬಸವಂ ॥
ಕರ್ತೃ ಶಿವನಿದಿರು ಬಂದಾ ।
ಅರ್ಥಿಯ ನಾಂ ಪೊಗಳ್ವೆ ಶರಣರುತ್ಸಹದಿಂದಂ ॥ ೧ ॥

**ಭಾಮಿನೀ ಷಟ್ಪದಿ.**

ಭೂಮಿಭೋಗವನುಳಿದು ಬರೆನಿ ।
ಸ್ವಾಮಿ ಬಸವನ ಬರವನಾಕ್ಷಣ ।
ಸೋಮಧರನಲಿದೆದ್ದು ಶಿವಗಣ ಸ್ತೋಮವೊಡಗೊಂಡು ॥
ಕಾಮಜನಕನು ಕಮಲಜಾತನು ।
ಆಮಹಾದಿಕ್ಪಾಲ ಮುನಿಗಳು ।
ಪ್ರೇಮಿಬಸವನ ಇದಿರು ನಡೆದರು ಸ್ವಾಮಿಯೆಡ ಬಲದಿ ॥ ೧ ॥

---

1-1 ಯಲಿ (ಇ, ಎ, ಖ, ಗ.)

ರಂಗುಮಾಣಿಕ ರಮ್ಯಗೆಲಸದ |
ಮಂಗಳಪ್ರಭೆಯುಳ್ಳ ಚಂದ್ರನ |
ಹಾಂಗೆ ಸಾಸಿರವೆಸೆವ ಕೋಟಿ[1] ಪತಂಗ[1] ಬೆಳಗಿನಲಿ ||
ಪೊಂಗಿ ಬೆಳೆದಿಹ ರತ್ನಪ್ರಭೆ ಲೋ |
ಕಂಗಳನು ಮುಸುಕಿರ್ದ ರಥವನು |
ಸಂಗಮೇಶ್ವರಲಿಂಗನೇರಿದ ಸಕಲ ವಿಭವದಲಿ || ೨ ||

ನಂದಿ ಗುಹ ಗಣ ವೀರಭದ್ರ ಸು |
ರೇಂದ್ರ ಸಕಲ ದಿನೇಂದ್ರ ಋಷಿಗಳ |
ಚಂದಚಂದದ ರುದ್ರ ಪ್ರಮಥರ ಸಂದಣಿಗಳಿಂದ ||
ಇಂದುಮುಖಿಗಿರಿಜಾತೆ ಜಾಹ್ನವಿ |
ಯೊಂದಿ[2] ನೊಳಗಿ[2] ಹ ಸಪ್ತಮಾತೃಕೆ |
ರಿಂದ ನಡೆವತಿ ದೇವಗಂಗೆಯುಮಖಿಳ ಶಕ್ತಿಯರು || ೩ ||

ಬಂದರತಿ ವೇಗದಲಿ ಶರಣೆಯರ್ |
ವೃಂದ ಶೃಂಗರವಾಗಿ ಬೇಗದಿ |
ಅಂದ ಚಂದದ ಕಳಶ ಕನ್ನಡಿ ಆರತಿಯ ಪಿಡಿದು ||
ಮುಂದೆ ಮೊಳಗುವ ದೇವದುಂದುಭಿ |
ನಂದಿಧ್ವಜ ಕೈವಾರ ಪಾಠಕರ್ |
ಹೊಂದಿ ನಡೆದರು ಬಸವನನಿದಿರುಗೊಂಬ ಹರುಷದಲಿ || ೪ ||

ಸುತ್ತಮುತ್ತಲು ಪ್ರಮಥ ಸಭೆಯಿಂ |
ದರ್ಥಿಯಲಿ ಮಹಾದೇವ ನಡೆಯಲು |
ಮೊತ್ತ ಮೊತ್ತದಿ ಶರಣಸತಿಯರು ಮುಂದುಗಡೆಯಲ್ಲಿ ||
ಸತ್ಯಮೂರುತಿ ಬಸವ ಬರುತಿರೆ |
ಕರ್ತೃ ಶಿವಸಭೆಯೆಲ್ಲ ಕಾಣಲು |
ಎತ್ತಿದರು ಬಸವೇಶನಿಗೆ ಮಿಗೆ ಮುತ್ತಿನಾರತಿಯ || ೫ ||

---

1-1 ಪ್ರಕಾಶ (ಉ, ಗ, ಚ.) 2-2 ನಲಿಬ (ಜ.)

ಫಾಲಲೋಚನ ಪರಮಭಕ್ತಗೆ ।
ನೀಲಕುಂತಳೆ ಗಿರಿಜೆ ಜಾಹ್ನವಿ ।
ಲೀಲೆಯಿಂದಲಿ ದೇವಗಂಗೆಯು ರುದ್ರಕನ್ನೆಯರು ॥
ನೀಲಲೋಚನೆ ದುರ್ಗಿ ಚಂಗಳೆ ।
ಬಾಲೆ ಕೊಡಗೂಸು ಚೋಳಿಯಕ್ಕನು ।
ಕಾಲಹರಬಸವಂಗೆ ಬೆಳಗಿದರಖಿಳರಾರತಿಯ ॥ ೬ ॥

ಜಗದಕರ್ತನು ಶಿವನು ಬಸವನ ।
ಮೊಗವ ಕಾಣುತಲಾಗ ಹರುಷದಿ ।
ತೆಗೆದು ಬಿಗಿಯಪ್ಪಿದನು ಅತಿಮೋಹದಲಿ ಮುಂಡಾಡಿ ॥
ಜಗದ ಜಂಜಡಕಿನಿತು ಸಿಲುಕದೆ ।
ಪಗೆಯ ಮರ್ದಿಸಿ ವೀರಶೈವದ ।
ಬಗೆಯ ನಿಲಿಸಿದೆ[1] ಶಿವಸಮಯ ಗುರುವೆ[1] ಂದ ಮಹಾದೇವ ॥ ೭ ॥

ದ್ವಿತಿಯ ಶಂಭುವು ಎಂಬ ನಾಮವ ।
ದತಿಮಹವು ಮೆಚ್ಚುಗೆಯು ಎನ್ನುತ ।
ಹಿತದಿ ಕೊಂಡಾಡಿದನು ಈಶನು ಬಸವರಾಜನನು ॥
ಅತಿಶಯದಿ ಪ್ರಮಥಗಣ ಮೆಚ್ಚುತ ।
ಮಥನಿಸುತ ಶಿವಪಂಥಗೆದ್ದೆ ಎ ।
ನ್ನುತ ಕೊಂಡಾಡಿದರು ಬಸವನೀಶ ಸಮ್ಮುಖದಿ * ॥ ೮ ॥

ಸರಿಯೆ ನಿನಗೀ ಸಕಲ ಲೋಕದ ।
ಸುರನರೋರಗ ದೇವಸಭೆಯೊಳು ।
ಹಿರಿಯನಹುದೈ ಬಸವರಾಜನೆ ಭಾಪು ಭಾಪೆನುತ ॥
ಹರುಷದಲಿ ರಥವೇರಿಯಾಕ್ಷಣ ।
ಶರಣರೆಲ್ಲರು ಕುಳಿತರಾಗಳೆ ।
ಭರದಿ ಹೋದರು ಹೇಮಗಿರಿ ಕೈಲಾಸಮಂದಿರಕೆ ⁂ ॥ ೯ ॥

---

1-1 ವೀರಶಿಖಾಮಣಿಯ (ಒ.) * ಈ ಪದ್ಯ (ಡ.) ಪ್ರತಿಯಲ್ಲಿ ಮಾತ್ರವಿದೆ.
⁂ ಈ ಪದ್ಯ (ಖ. ಗ.) ಪ್ರತಿಗಳಲ್ಲಿಲ್ಲ.

ಚಂದ ಚಂದದ ವಾದ್ಯನೃತ್ಯಗ ।
ಳಿಂದ ಮೆರೆವಣಿಗೆಯಲಿ ಬಸವನ ।
ಇಂದುಧರ ಕರೆದೊಯ್ದನಲ್ಲಿಗೆ ಸಂಧಿ ಸಂಪೂರ್ಣಂ ॥
ಮುಂದೆ ಈ ಕಥೆ ಹೇಳಿ ಕೇಳಲು ।
ಇಂದುಧರ ಕೃಪೆ ಮೋಕ್ಷಸಾಧನ ।
ದಿಂದ ಶ್ರೀ ಗುರುಚೆನ್ನಸಂಗಮನೊಲಿದು ರಕ್ಷಿಪನು ॥ ೧೦ ॥

ಬಸವನುತಿಯಿದು ಭಕ್ತಿಸಾಧನ ।
ಬಸವ ಕಥೆಯಿದು [1] ಮೋಕ್ಷ [1] ಸಾಧನ ।
ಬಸವಕೃತಿಯಿದು ಸಕಲ ಭಕ್ತರ ಮುಕ್ತಿಸೋಪಾನ ॥
ಬಸವನಂಘ್ರಿಯನೆಲ್ಲ ಕಾಲವು ।
ಒಸೆದು ನೆನೆವಾ ಭಕ್ತಜನರಿಗೆ ।
ಬಸವರಾಜನು ಒಲಿದು ರಕ್ಷಿಪನೆಲ್ಲ ಕಾಲದೊಳು ॥ ೧೧ ॥

ಇಂತಿ ಪದ್ಯಗಳು ೫೬೮

**ಅಂತು ಸಂಧಿ ೨೧ ಕ್ಕಂ ಸಂಪೂರ್ಣಗಣನೆ – ೫೩೦೭ ಕ್ಕಂ ಮಂಗಳಮಹಾ**

**ಶ್ರೀ ಶ್ರೀ ಶ್ರೀ ಶ್ರೀ ಶ್ರೀ**



1-1 ಮುಕ್ತಿ (ಇ, ಒ, ಖ, ಗ, ಚ, ಟ.)

# ಇಪ್ಪತ್ತೆರಡನೆಯ ಸಂಧಿ

# ಹರಳಯ್ಯ ಮಧುವರಸಯ್ಯನವರ ಎಳೆಹೂಟ

**ವೃತ್ತ.**

ಶ್ರೀ ಗಿರಿಜಾಹ್ವಯದಂಗದಿಂ ದನುಜನಂಗವ ಭಂಗಮುಂಗೊಂಡನಂ ।
ನಾಗದ ಭೋಜ್ಯಸಖಾಕ್ಷಿಯಂ ತಳೆದು ಯಾಗವ ವಿಘ್ನಮಂಗೈದನಂ ॥
ಪೂಗಳಮಾರ್ಗಣ ತಾತನ ಸುತನ ಶೀರ್ಷವ ಹಸ್ತದೋಳ್ ತಾಳ್ದನಂ ।
ಈಗಳು ದಿವ್ಯಪದಾಬ್ಜಕೆ ನಮಿಸಿ ಸಾಗಿಸಿ ಪೇಳ್ವೆ ನೀ ಕಾವ್ಯಮಂ ॥ ೧ ॥

**ಕಂದಪದ್ಯ.**

ಸೂ ॥ ಮುಂದಣ ಕಾವ್ಯವದೆಂತೆನೆ ।
ನಿಂದಿಸಿ ಹರಳೈಯ್ಯನನು ಬಾಧಿಸೆ ರಾಯಂ ॥
ಇಂದುಧರ ಶರಣರರಸನ ।
ಕೊಂದುಳುವೆಗೆ ಪೋದ ವಿವರವನುಸುರುತಿಹೆ ನಾಂ ॥ ೧ ॥

**ದ್ವಿಪದಿ.**

ಶ್ರೀ ಗುರುವರ ಸಂಗಲಿಂಗನೊಳ್ಬೆರೆದು ।
ಪೋಗೆ ಬಸವಯ್ಯತ್ತ ಪೊಡವಿಯೊಳಗಿತ್ತ ॥ ೧ ॥

ಆಗ ಕಲ್ಯಾಣ [1] ದೊಳು [1] ಅಧಿಕ ಶರಣರೊಳು ।
ಭೋಗಭಾಗ್ಯದಿ ಚೆನ್ನಬಸವಣ್ಣನಿರಲು ॥ ೨ ॥

ಪುರಹರನ ವರಭಕ್ತ ಪುಣ್ಯಸುವಿರಕ್ತ ।
ಪರಮಸದ್ಗುರು ಸಿದ್ಧರಾಮಯ್ಯನಾಗ ॥ ೩ ॥

ಬರುವ ಬರವನು ಚೆನ್ನಬಸವಣ್ಣ ನೋಡಿ ।
ಶರಣರೊಡನಿದಿರೆದ್ದು ಸಾಷ್ಟಾಂಗವೆರಗಿ ॥ ೪ ॥

ಗುರುವೆ ನಿಮ್ಮಡಿ ಸೇವೆ ತರಳನ ಮೇಲೆ ।
ಕರುಣವಿಟ್ಟಿರಿ ಭಾಗ್ಯ ಕಡಮೆಯಿಲ್ಲೆನಗೆ ॥ ೫ ॥

ಎಲ್ಲೆಲ್ಲಿ ಸಂಚರಿಸಿ ಇಲ್ಲಿಗೈದಿಹಿರಿ ।
ಎಲ್ಲವನು ಉಸುರೆಂದು ಮೆಲ್ಲಡಿಗೆ ನಮಿಸಿ ॥ ೬ ॥

---

1-1 ದಲಿ (ಎ, ಒ, ಟ.)

ಮೂವಯ್ಯ ಕಪ್ಪಡಿಯ ತಾವಿಗೈದಿದರೆ ।
ಭಾವೆ ನೀಲಮ್ಮ ವರ ತಾವ ಸೇರಿದಳೆ ॥ ೭ ॥

ಎಂದು ಕೇಳುವ ಚೆನ್ನಬಸವಣ್ಣನೊಡನೆ ।
ಎಂದನಾ ಸಿದ್ಧರಾಮಯ್ಯನಿಂತೆಂದು ॥ ೮ ॥

**ಏಕತಾಳ.** *

ಕೇಳಿರೈ ಚೆನ್ನಣ್ಣ । ಕೇಳಿರೈ ಶರಣರೆ ।
ಕೇಳಿರೊಂದಚ್ಚರಿಯ । ಪೇಳುವೆನು ನಾನು ॥ ೧ ॥

ಬಂದೆನು ಊರಿಂದ । ಬಸವಣ್ಣನನು ನೋಳ್ಪ ।
ನಂದದಿಂ ಬಸವನಾ । ಮಂದಿರಕೆ ನಾನು ॥ ೨ ॥

ಬರುತಲಿ ಬಾಗಿಲ । ಲ್ಲಿರುವಂಥ ಹಿರಿಯರು ।
ಶರಣೆಂದು ಪೇಳ್ದರು । ಭರದಿ ನನ್ನೊಡನೆ ॥ ೩ ॥

ಬಂದಿರೆ ಸ್ವಾಮಿ ಬಸ । ವಣ್ಣ ತಾ ಕಪ್ಪಡಿಯು ।
ಮಂದಿರಕೆ ಪೋದರು । ಎಂದು ಪೇಳಿದರು ॥ ೪ ॥

ಹರಹರಾ ಬಸವಯ್ಯ । ಶರಣರೆಲ್ಲರನಿಲ್ಲಿ ।
ಇರಿಸಿ ಪೋದರೆ ಎಂದು । ಮರುಗುತ್ತ ನಾನು ॥ ೫ ॥

ಬಂದೆ ನೀಲಮ್ಮನ । ಮಂದಿರಕ್ಕಾಕ್ಷಣ ।
ವಂದಿಸಿ ನೀಲಮ್ಮ । ತಂದಳಗ್ಗಣಿಯ ॥ ೬ ॥

ಆ ಕ್ಷಣದಿ ಅಪ್ಪಣ್ಣ । ಬಂದು ನೀಲಮ್ಮನನು ।
ಈ ಕ್ಷಣ ಬಸವಣ್ಣ । ಕರೆದರೆಂದೆನಲು ॥ ೭ ॥

ಎಲ್ಲಿಗೆ ಬಹುದು ತಾ । ವೆಲ್ಲಿಗೆ ಪೋದರು ।
ಎಲ್ಲವನು ನಮ್ಮೊಳು । ನಿಲ್ಲದುಸುರಯ್ಯ ॥ ೮ ॥

ನಿಲ್ಲದೆ ಸಂಗಮ । ನಲ್ಲಿಗೆ ಪೋದರು ।
ಅಲ್ಲಿಗೆ[1] ನಿಮ್ಮನ್ನು । ಕರೆದರೆಂದೆನಲು[1] ॥ ೯ ॥

ಛಲದಾಂಕ ಬಸವಯ್ಯ । ನಿಲಿಸಿ ಪೋದರೆ ಏನು ।
ಸಲಿಸೆಂದು ಬೇಗದಿ । ಉಣಿಸ ನೀಡಿದಳು ॥ ೧೦ ॥

ತವಕದಿ ಶೇಷಪ್ರ । ಸಾದವಂ ಕೈಗೊಂಡು ।
ಭವಹರಗರ್ಪಿಸಿ । ಸವಿದು ನೀಲಮ್ಮ ॥ ೧೧ ॥

---

* ಈ ಏಕತಾಳ ಪದ್ಯಗಳು (ಗ.) ಪ್ರತಿಯಲ್ಲಿಲ್ಲ. 1-1 ಬಂದನೆಂದು । ನಿಮ್ಮನು ಕರೆಯೆ । (ಅ, ಟ, ಬ.) ; ಬಸ್ಸಿಯಂದು । ನಿಲ್ಲದೆ (ಒ, ಜ.)

ತಂದು ವೀಳ್ಯವನಿತ್ತು । ವಂದಿಸಿ ಬೇಗದಿಂ ।
ಇಂದುಧರನನ್ನು ಕರ । ದಲ್ಲಿ ತಾ ಪಿಡಿದು ॥ ೧೨ ॥

ಕಡುವೇಗ ಲಿಂಗವನು । ಬಿಡದೆ ನಿರೀಕ್ಷಿಸುತ ।
ಮೃಡನೊಳೇಕಾರ್ಥ ಮೋಕ್ಷ । ಪಡೆದು ಬಯಲಾದಳ್ ॥ ೧೩ ॥

ನೋಡಿದನಪ್ಪಣ್ಣ । ಗಾಢ ಬಸವೇಶ್ವರನ ।
ಕೂಡೆ ಪೇಳುವರೆ ಸ । ಗಾಢದಿಂ ಪೋದ ॥ ೧೪ ॥

ಇಂದು ಈ ವಾರ್ತೆಯ । ಮುಂದೆ ನಿಮ್ಗೊಳು ಪೇಳ್ವೆ ।
ನೆಂದು ಈಕ್ಷಣ ಬಂದೆ । ನೆಂದ ರಾಮಯ್ಯ ॥ ೧೫ ॥

ವಚನ ॥ ಇಂತೆಂದು ಸಿದ್ಧರಾಮಯ್ಯ ಪೇಳಲು, ಚೆನ್ನಬಸವಣ್ಣ ಮುಂತಾದ ಶರಣರು ಕೇಳಿ ವಿಸ್ಮಯಂಬಟ್ಟು ಸುಖದಿಂದಿರಲು ಅಷ್ಟರೊಳಗೆ ಬಸವೇಶ್ವರನು ಕಪ್ಪಡಿಯ ಸಂಗಮೇಶ್ವರನೊಳಗೆ ಐಕ್ಯವಾದನೆಂಬ ವಾರ್ತೆಯಂ ಕೇಳಿ, ಶರಣರೆಲ್ಲರು ಸಂತೋಷಂಬಟ್ಟು ಚೆನ್ನಬಸವಣ್ಣನವರು ಗಣಪರ್ವವಂ ಮಾಡಿಸಿ ಸುಖಮಿರಲು, ಇನ್ನು ಮುಂದೆ ನಡೆವ ಕಾರ್ಯಗತಿಯ ಪ್ರಸಂಗವಂ ಪೇಳ್ವೆನದೆಂತೆನೆ.

**ಅಟತಾಳ.**

ಬಸವರಾಜನು ಬಯಲಸೈದಿದ । ಒಸಗೆಯನ್ನಾ ಬಿಜ್ಜಳ ।
ನೊಸೆದು ಕೇಳಿದ ಚಿಂತೆಯಲಿ ನೊಂದು – ಬಸವ[1] ಳಿದ ರಾಯ[1] ॥ ೧ ॥

ಪೋದನೆನ್ನಯ ಪ್ರಾಣನಾಯಕ । ಪೋದನೆನ್ನಾ ಭಾಗ್ಯವು ।
ಪೋದ[2] ನೆನ್ನುತ[2] ಮರುಗಿಸುಯ್ದನು – ಮೇದಿನೀಶ ॥ ೨ ॥

ಎನ್ನ ಪೂರ್ವದ ಪುಣ್ಯಫಲಗಳಿ । ಗಿನ್ನು ಕೊರತೆಯು ಈಶನು ।
ಇನ್ನು ಒಯ್ದನು ಪಾಪಿನಾನೆಂ – ದೆನುತಲಳಲಿದನು † ॥ ೩ ॥

ಅಂದಿನಂದಿನ ದುರಿತವೆಲ್ಲವ । ನಂದಿಬಸವನು ತನ್ನಯ ।
ಸಂದರುಶನವ ಕೊಟ್ಟು ಕಳೆಯುತ – ಸುಲಭದಿಂದಿರ್ದ † ॥ ೪ ॥

ಪಾಪಿ ಪಾಮರನಾದೆನಗೆ ತನ್ನ । ರೂಪ ತಾನು ತೋರಿಯೆ ।
ಆ ಪರಮ ಮಹಿಮೆಯನು ಕಾಣಿಸಿ – ಪಾಪ ಹರಿಸಿದನು † ॥ ೫ ॥

ಪೊಡವಿಗೀಶನು ಬಸವರಾಜನು । ನಡೆದನೆನ್ನಯರಾಜ್ಯಕೆ ।
ಒಡೆಯರಿನ್ನಿಲ್ಲೆಂದು ಚಿಂತಿಸಿ – ನುಡಿದನಾ ನೃಪತಿ ॥ ೬ ॥

1-1 ನಳಿಯೆ (ಅ, ಟ, ಬ.) ; ಳಿದನವನು (ಉ, ಖ, ಗ.) 2-2 ರೆನುತಲಿ (ಇ, ಉ, ಗ, ಚ.) ; ರೆನ್ನುತ (ಅ, ಖ, ಟ, ಬ.) † ಈ ಪದ್ಯಗಳು (ಒ.) ಪ್ರತಿಯಲ್ಲಿ ಮಾತ್ರವಿದೆ.

ತಂತ್ರದಲಿ ರಾಜ್ಯವನು ಪಾಲಿಪ | ಮಂತ್ರಿಯುಂಟೆ ಬಸವನಲ್ಲದೆ |
ಯಂತ್ರವಾಹಕ ತಾನೆ ಲೋಕದ – ಮಂತ್ರಿ ತಾನಲ್ಲ || ೭ ||
ಮಳೆ ಬೆಳೆಯು ಸಕಲಾದಿ ಬಸವನ | ಕಳೆಯು ತಾನೇ ಅಲ್ಲದೆ |
ಇಳೆಗೆ ಬಸವನ ಮಹಿಮೆ ದೈವಗ – ಳೊಳಗೆ ಉಂಟೆ || ೮ ||
ಎಲ್ಲಿ ನೋಡುವೆ ಬಸವರಾಜನ | ಎಲ್ಲಿ ನಾನು ಬದುಕುವೆ |
ಇಲ್ಲಿ ಬಸವನ ಮಹಿಮೆಯರಿಯದೆ – ಖುಲ್ಲನಾದೆ || ೯ ||
ಎಂದು ಶೋಕಾಬ್ಧಿಯಲಿ ಅಳಲುತ | ಅಂದು ಮೂರ್ಛೆಯ ಪೋಗಿ ಬಿಜ್ಜಳ |
ಒಂದೆರಡು ಘಳಿಗೆಯೊಳು ಚೇತನ – ಗೊಂಡು ಆ ಬಳಿಕ * || ೧೦ ||
ಎನ್ನ ಪ್ರಾಣವದೇಕೆ ಅಂತಹ | ಚೆನ್ನಿಗನ ಮಹಿಮಾತ್ಮ ಬಸವನ
ಇನ್ನಗಲಿ ಜೀವಿಪನೆ ಎನುತಲಿ – ಹೇಳಬೊಡನೆ * || ೧೧ ||
ಇಂತು ಹಲುಬುತ ಪ್ರಾಣಘಾತಕೆ | ಮುಂತೆ ಯೋಚನೆಗೈವ ನೃಪನಿಗೆ |
ಮಂತ್ರಿಗಳು ಪ್ರತಿನುಡಿದರಾಗಳೆ – ಧಾತ್ರಿಪತಿಯೆ * || ೧೨ ||
ಶಿವನ ಅಪ್ಪಣೆ ಬರಲು ಬಸವಣ್ಣ | ಅವನು ಪೋದನು ಅವರ ವಂಶದ |
ಪ್ರವಿಮಲರು ಇರ್ದಪರು ನೋಡಿಯೆ – ವಿವರಿಸುವೆವು || ೧೩ ||
ಎಂದು ಪಲಬಗೆ ಬಳಲುತಲಿ ನೃಪ | ನೆಂದ ಬಸವರಾಜನ |
ಹೊಂದಿ ಹೊರದವರಾರು ಇಲ್ಲವೆ – ಎಂದು ಕೇಳ್ದ || ೧೪ ||
ಎಂದ ಮಾತಿಗೆ ಮಂತ್ರಿಗಳು ಇಂ | ತೆಂದು ನೃಪಗೆ ಪೇಳ್ದರು |
ಚಂದ್ರಧರಸುತ ಚೆನ್ನಬಸವ ದಿ – ನೇಂದ್ರನಹನು || ೧೫ ||
ಬಸವರಾಜನ ಅಳಿಯ ಚೆನ್ನ | ಬಸವರಾಜ ಆತಗೆ |
ಎಸೆವ ಮಂತ್ರಿಗಳಾರು ಸರಿ ಕೇಳ್ – ವಸುಧೆ[1] ನಾಥ[1] || ೧೬ ||
ಹರನಭಕ್ತನು ಪರಮುಮುಕ್ತನು | ಧರಯೊಳಧಿಕ ಶಕ್ತನು |
ಹಿರಿದು ಯುಕ್ತನು ಸಿರಿಗೆ ಕರ್ತನ – ಮಾಡೆಲೇಸಯ್ಯ || ೧೭ ||
ಕರೆಸಿದನು ಬಿಜ್ಜಳನು ಬಹು ಮರಿ | ಯಾದೆವೆರಸಿಯಾಗಲೆ |
ಹರಿಯಪೀಠದಿ ಕುಳ್ಳಿರಿಸಿಕೊಂ – ಡೊರೆದು ನೋಡಿದನು * || ೧೮ ||
ಚೆನ್ನಬಸವ ಸುಮೂರ್ತಿರೂಪನು | ತನ್ನ ಮನಕಾನಂದವಾದನು |
ಇನ್ನು ಇತ್ತಪೆ ರಾಜ್ಯಭಾರವ – ತನ್ನೊಳೆಣಿಸಿ * || ೧೯ ||
ಎನ್ನ ಪ್ರಾಣದ ಬಸವನಳಿದನು | ಇನ್ನು ನೀವು ರಾಜ್ಯವ |
ಮನ್ನಣೆಯೋಳ್ ಭಾರವನು ಬುದ್ಧಿಯೊ – ಳಿನ್ನು ನಡೆಸಿ * || ೨೦ ||
ನಿಮ್ಮ ಮಾವನು ಬಸವರಾಜನು | ಸುಮ್ಮನದಿ ರಾಜ್ಯಾಂತು ಪೊರೆದನು |
ಈ ಮಹೀಜನ ಮೆಚ್ಚುವಂದದಿ – ಆಳಿ ನೀವೆಂದು * || ೨೧ ||

---

* ಈ ಪದ್ಯಗಳು (ಬ.) ಪ್ರತಿಯಲ್ಲಿ ಮಾತ್ರ ವಿವೆ. 1-1 ಯೊಳಗೆ (ಬ.)

[1] ಸಂದ ಸಂದಣಿ ಕೂಡಿಯಾಗಳೆ[1] | ಅಂದು ನೃಪತಿ ಹರುಷದಿ |
[2] ಬ [2] ಂದು ಕಟ್ಟಿದ ಚೆನ್ನಬಸವಗೆ– ದಂಡನಾಯಕವ || ೨೨ ||

ಇದ್ದ ಮಂತ್ರೀಶ್ವರರಿಗೆಲ್ಲ ಪ್ರ | ಬುದ್ಧನೆ [3] ನುತ [3] ರಾಯನು |
ಸದ್ಯ ಕೊಟ್ಟನು ಚೆನ್ನಬಸವಗೆ– ಮುದ್ರೆಯುಂಗುರವ || ೨೩ ||

ದೊರೆಗಳ್ಮಂತ್ರಿ ಪ್ರಧಾನರ್ಕರಣಿಕರ್ | ಹಿರಿಯರೆಲ್ಲ ಮೆಚ್ಚಲು |
ಧರೆಯಭಾರವ ನಡೆಸುತಿರ್ದನು – ಚೆನ್ನದಂಡೇಶ || ೨೪ ||

**ಕಂದಪದ್ಯ.**

ಒಂದೆರಡು ಮಾಸ ಕಳೆವುತ |
ಹಿಂದಕೆ ಬಸವೇಶ ಪೇಳ್ದ ಗಡುವಿನ ದಿನಮುಂ ||
ಬಂದಿತು ಕೇಳಿರಿ ಶರಣರು |
ಎಂದಾಲೋಚನೆಗೆಯ್ದಂ ಚೆನ್ನಬಸವೇಶಂ || ೧ ||

**ಜಂಪೆ.**

ಸಿದ್ಧರಾಮಯ್ಯ ಶಿವ | ಶರಣರೆಲ್ಲರು ಕೇಳಿ |
ನಿರ್ಧರವ ಪೇಳ್ವೆ ಮುಂ | ದಿರ್ದ ಕಾರ‍್ಯವನು || ೧ ||

ಇನ್ನು ಧರೆಯೊಳು ನಡೆವ | ಗನ್ನಘಾತಕ ಜನರ |
ಅನ್ಯಾಯವನು ಪೇಳ್ವೆ | ಚೆನ್ನಾಗಿ ಕೇಳಿ || ೨ ||

ಕಲಿಹೆಚ್ಚಿ ನಡೆವುತಿದೆ | ಕರ್ಮ್ಮಕೀಡಾಗಿ ಜನ |
ಮಲಹರನ ಕೃಪೆತಪ್ಪಿ | ಮಡಿವುತಿದೆ ಮುಂದೆ || ೩ ||

ಹಿರಿದು ಕಿರಿದೆನ್ನದಲೆ | ಗುರುದೈವಗಳ ಹಳಿದು |
ಪರರ ನಿಂದಿಸಿ ಯಮಗೆ | ಗುರಿಯಾಗುತಿಹರು || ೪ ||

ಜಂಗಮವ ಪೂಜಿಪರು | ಜಂಗಮವ ನಿಂದಿಪರು |
ಅಂಗದಿಚ್ಛೆಗೆ [4] ಹರಿ [4] ದು | ಭಂಗ ಪಡುತಿಹರು || ೫ ||

ಮಡದಿ ಮಕ್ಕಳಿಗೊಂದು | ಮೃಡನ ಶರಣರಿಗೊಂದು |
ಎಡೆಮಾಡಿ ನೀಡುವರು | ಕಡು ಪಾಪಿಜನರು || ೬ ||

ಗುರುತರಿಗೆ ಹಿರಿಯರಿಗೆ | ಪರಿಪರಿಯ ಉಪಚಾರ |
ಗುರುತರಿಯದಂಥರಿಗೆ | ಕರೆಕರೆಯ ಮಾ [5] ಟ [5] || ೭ ||

---

1-1 ಎಂದ ಮಂತ್ರೀಶ್ವರರ ಮಾತಿಗೆ | (ಅ, ಜ, ಟ, ಡ, ಬ.) 2-2 ತ (ಒ, ಗ.) ; ಅ (ಅ, ಬ.) 3-3 ಂದು (ಒ, ಖ, ಗ, ಚ, ಜ, ಟ.) 4-4 ನಡ (ಒ, ಖ, ಗ, ಚ.) 5-5 ತು (ಇ, ಒ, ಖ, ಗ, ಚ.)

ಪಙ್ತಿ ಭೇದವ ಮಾಡಿ । ಅಂತಕನಿಗೀಡಾಗಿ ।
ಕಂತುಹರಕೃಪೆ ತಪ್ಪಿ । ಚಿಂತೆಯೊಳಗಿಹರು ॥ ೮ ॥

ಅಸಮಾಕ್ಷ[1] ಜಂಗಮವು[1] । ನಸುಮಾಸಿ ಬಂದಡಂ ।
ಹೊಸಬ ಕಡೆಸಾರೆಂದು । ಕುಸಿದು ಆಡುವರು ॥ ೯ ॥

ಕಳ್ಳ ಹಾದರದಕಡು । ವೇಷಧಾರಿಯ ಕಂಡು ।
ಒಳ್ಳಿದರು ಎಂದು ಒಳ । ಗೊಳಗೆ ಪೂಜಿಪರು ॥ ೧೦ ॥

ಡಂಭಕದ ಭಕ್ತಿಯಲಿ । ಶಂಭುವಂ ಸೆರೆಮರೆದು ।
ಕುಂಭಿನಿಯ ದೈವಗಳ । ನಂಬಿ ಪೂಜಿಪರು ॥ ೧೧ ॥

ತಂದು ಪೂ ಕಾಯ್ಪೊಪ್ಪು । ಮಂದಿರಕೆ ಅಡುಕಿದರೆ ।
ತಂದೆ ಒಳ್ಳಿದರೆಂದು । ವಂದಿಸುತಲಿಹರು ॥ ೧೨ ॥

ಕೀಳುಜಂಗಮ ತನ್ನ । ಕೂಳಿನಿಚ್ಛೆಗೆ ಭಕ್ತ ।
ರೂಳಿಗವ ಮಾಡುವರು । ಹೇಳದೆ ತಾವು * ॥ ೧೩ ॥

ಅತಿಶಯದ ಅಟ್ಟುಳಿಗೆ । ಕೃತಕದಲಿ ಜಾರೆಯರು ।
ವ್ರತವಿಡಿದ ಯೋಗಿಗಳ । ಮತಿಗೆಡಿಸುತಿಹರು * ॥ ೧೪ ॥

ಅಪ್ಪ ಎಂಬರು ಹೊರಗೆ । ಅಪ್ಪಿಕೊಂಬರು ಒಳಗೆ ।
ತಪ್ಪುಭಾಷೆಗಳು ತಮ । ಗೊಪ್ಪವೆನುತಿಹರು ॥ ೧೫ ॥

ವ್ರತಹೀನ ಭಕ್ತ[2]ರು[2] । ಮತಿಹೀನ ಜಂಗಮರು ।
ಹಿತೆಗೆಟ್ಟು ಪರಮ ಸ । ದ್ಗತಿಯರಿಯದಿಹರು ॥ ೧೬ ॥

ವಸುಧೆಲುಳ್ಳನಿತು ಜಾತಿ । ಪಶುವರ್ತನೆಗಳಾಗಿ ।
ಹಸಗೆಟ್ಟು ತಮತಮಗೆ । ನಸಿದು ಹೋಗುವರು ॥ ೧೭ ॥

ಕ್ಷಾಮ ಡಾಮರ[3] ನ್ಯಾಯ[3] । ಭೂಮಿಪರ ಅನ್ಯಾಯ ।
ಸೀಮೆಲ್ಲ ಬಹು ಕ್ಷಾಮ । ಕ್ಷೇಮಗೆಟ್ಟಿಹುದು ॥ ೧೮ ॥

ಪರಶಿವನ ಕೃಪೆತೊಲಗಿ । ತುರುಕ ಬಾಧೆಗೆ ಸಿಲುಕಿ ।
ನರರಿಹರು ನಾವ್ಪೋಗಿ । ತಿರುಗಿ ಬರುವನಕ ॥ ೧೯ ॥

**ದ್ವಿಪದಿ.**

ಸೃಷ್ಟಿಯೊಳಗಧಿಕ ಶ್ರೀ ಭರತಖಂಡದೊಳು ।
ಶ್ರೇಷ್ಠ ಶ್ರೀ ಕಲ್ಯಾಣಪಟ್ಟಣವನಾಳ್ವ ॥ ೧ ॥

---

1-1 ಸಮರೂಪ (ಇ, ಒ, ಖ.) * ಈ ಪದ್ಯಗಳು (ಖ, ಗ, ಚ.) ಪ್ರತಿಗಳಲ್ಲಿಲ್ಲ.
2-2 ಜನ (ಇ, ಒ, ಚ.) 3-3 ನೋವು (ಒ, ಖ, ಟ)

ಇಷ್ಟುಜನ ಮಂತ್ರಿ ಮನ್ನೆಯ ಮಂಡಲಿಕರು ।
ಎಷ್ಟೆಂದು ಎಣಿಕೆಗೊಳ್ಳದ ಸಭೆಯ ಮಧ್ಯ ॥ ೨ ॥
ಹುಟ್ಟಿತು ಹೊಸಸುದ್ದಿ ಸೃಷ್ಟಿಪಾಲಕಗೆ ।
ಅಷ್ಟದಶ ಕುಲವುಂಟು ಅಖಿಳಲೋಕದೊಳು ॥ ೩ ॥
ಇಷ್ಟುಂಟೆ ದುರ್ನಡತೆ ಎಲ್ಲಾದರಿನ್ನು ।
ಕಷ್ಟಜನ ಕಡೆಕೀಳು ಕುಲದಗ್ರಜರಿಗೆ ॥ ೪ ॥
ಕೊಟ್ಟ ಕೊಂಡೆಡೆಯುಂಟೆ ಕೋಟಿಗ್ರಾಮದೊಳು ।
ಇಂದುಧರಕುಲವೆಂದು ಈ ಊರ ಒಳಗೆ ॥ ೫ ॥
ಸಂದೇಹವಿಲ್ಲದೆ ಸಕಲ ವಿಭವದಲಿ ।
[1] ಚಂದ [1] ದಿಂ ಮಗಳಿತ್ತ ಚೆದುರ ಮಧುವಯ್ಯ ॥ ೬ ॥
ತಂದನು ಹರಳಯ್ಯ ತನ್ನ ವರ ಸುತಗೆ ।
ಎಂದು ಧಾರಿಣಿಸುರರು ಎಲ್ಲರೂ ಮಸಗಿ ॥ ೭ ॥
ಅಂದು ಪೇಳ್ದರು ನೃಪಗೆ ಅತಿಕೃತಕದಿಂದ ॥

**ಕಂದಪದ್ಯ.**

ಕೇಳುತ ಬಿಜ್ಜಳರಾಯಂ ।
ಕಾಳೋರಗನಂತೆ ಮೊರೆದು ಕಡುಕೋಪದೊಳುಂ ॥
ಪೇಳಿದನು ಚೆನ್ನಬಸವಗೆ ।
ಸೀಳಿಪೆ ನಿನ್ನವರನೆಂದು ಗರ್ಜಿಸಿ ನುಡಿದಂ ॥ ೧ ॥

ವಚನ ॥ ಆ ಮಾತಿಗೆ ಚೆನ್ನಬಸವಣ್ಣ ಏನೆನ್ನುತಿರ್ದನು.

**ಜಂಪೆ.**

ಏನಯ್ಯ ನೃಪತಿ ನಿನ । ಗಿಷ್ಟು ಕೋಪವದೇಕೆ ।
ಏ [2] ನ [2] ಮಾಡಿದರವರು । ಹೀನವೃತ್ತಿಯನು ॥ ೧ ॥
ಅರಮನೆಯ ದ್ರವ್ಯವನು । ಅಪಹರಿಸಿ ಕೆಡಿಸಿದ [3] ರೆ [3]
ಅರಸುತನಕೆರಡೆಂಟು । ಎಣಿಸಿದ [4] ರೆ [4] ಅವರು ॥ ೨ ॥
ಧರೆಯ ಧರ್ಮವ ತಪ್ಪಿ । ಹಿರಿದು ಗರ್ವವು ಹೆಚ್ಚಿ ।
ಪರನಾರಿಯರ ನೋಡಿ । ಪಾಪಕೆಳಸಿದರೆ * ॥ ೩ ॥

1-1 ಬೇಗ (ಅ, ಡ, ಬ.) 2-2 ನು (ಇ, ಒ, ಗ, ಚ, ಡ.)
3-3 ರೊ (ಇ, ಉ, ಒ, ಖ, ಗ, ಚ.) 4-4 ರೊ (ಇ, ಉ, ಒ, ಖ, ಗ, ಚ.)
* ಈ ಪದ್ಯ (ಎ, ಗ, ಚ.) ಪ್ರತಿಗಳಲ್ಲಿಲ್ಲ.

ಎಡವಿಡದೆ ಸಲಹುತಿಹ । ಒಡೆಯಗೆರಡೆಣಿಸಿದರೆ ।
ಬಡವರೆಂದೊಬ್ಬರಾ । ಬದುಕ ಕೆಡಿಸಿದರೆ * ॥ ೪ ॥

ಕೊಟ್ಟವರ ಒಡವೆಗಳ । ಅಷ್ಟು ಒಳಯಿಕೆ ನುಂಗಿ ।
ಅಟ್ಟುಳಿಯ ಮಾಡವರ । ಕಷ್ಟಪಡಿಸಿದರೆ ॥ ೫ ॥

ಯತಿಗಳನು ಅಳಿದರೇ । ವ್ರತಗಳನು ಕೆಡಿಸಿದರೆ ।
ಮತಿಗೆಟ್ಟು ಹೀನ ದು । ರ್ಗತಿಯ ನಡೆಸಿದ [1] ರೆ [1] ॥ ೬ ॥

ಧಾರಿಣಿಯ ಸುರಕುಲವ । ನೀರೊಳಡಕಂಗೈದು ।
ಬೇರೊಂದು ಕುಲಗೂಡಿ । ಬೆರಸಿದರೆ ದ್ವಿಜರ ॥ ೭ ॥

ತಪವು ತನ್ನಿಚ್ಛೆ ಊ । ಟವು ತನ್ನ ಮನದಿಚ್ಛೆ ।
ತ್ರಿಭುವನದ ನೀತಿ ಕೇಳ್ । ಭುವನಾದಿ ನಾಥ ॥ ೮ ॥

ಎಂದು ಶ್ರೀ ಚೆನ್ನದಂ । ಡೇಶ ನೃಪತಿಗೆ ಪೇಳೆ ।
ಒಂದು ಸೊಗಸದು ಮಾತು । ಎಂದ ಬಿಜ್ಜಳನು ॥ ೯ ॥

**ಅಟತಾಳ.**

ಎಂದು ಬಿಜ್ಜಳ ಚೆನ್ನಬಸವನ । ಮೂದಲಿಸುತ ಕೇಳಲು ।
ಎಂದ ನೃಪನೊಳಗುತ್ತರವ ಚೆನ್ನ – ದಂಡನಾಯಕನು ॥ ೧ ॥

ಕೇಳು ಬಿಜ್ಜಳ ಕೀಳುಮನುಜರ । ಜಾಳುಮಾತ ಕೇಳದೆ ।
ಭಾಳಲೋಚನ ಭಕ್ತರನು ಕುಲ – ಕೇಳಬಹುದೆ ॥ ೨ ॥

ಕ್ಷಿತಿಗೆ ಬ್ರಾಹ್ಮರು ಶ್ರೇಷ್ಠಕುಲಜರು । ಗತಿಯ ತಪ್ಪಿ ಶ್ವಪಚಗೆ ।
ಸುತೆಯನೀವರೆ ಮತಿಯನರಿಯದೆ – ಹಿತವುಗೆಟ್ಟು ॥ ೩ ॥

ಪೊಡವಿಸುರರಿಗೆ ಕಡೆಯಜಾತಿಗೆ । ಕೊಡುವ ಕೊಂಬಾನಡತೆಯು ।
ಪೊಡವಿಯೊಳಗುಂಟಾದರೆನ್ನಯ – ಒಡನೆ ಪೇಳು ॥ ೪ ॥

ಕುಲವ ಕೇಳುವೆ ಹೊಲಬನರಿಯದೆ । ಕುಲವದುಂಟೆ ದ್ವಿಜರೊಳು ।
ಕುಲವನೆಣಿಸುವೆ ಪೂರ್ವಋಷಿಗಳ – ಕುಲವ ಕೇಳು ॥ ೫ ॥

ಕಶ್ಯಪನು ಕೌಂಡಲ್ಯ ಗಾರ್ಗ್ಯ ದೂ । ರ್ವಾಸ ಮುಖ್ಯಾ ಸೂತನು ।
ವ್ಯಾಸ ಶುಕ ಮಾಂಡವ್ಯ ವಾಲ್ಮೀಕರ್ – ಲೇಸು ಕುಲವೆ ॥ ೬ ॥

ಸೃಷ್ಟಿಯೊಳು ಕ್ಷತ್ರಿಯರ ಗುರು ವ । ಸಿಷ್ಠಮುನಿಯು ಅರುಂಧತಿ ।
ಕಷ್ಟ ಕುಲದವಳೆಂದು ಕಳೆದ [2] ನೆ [2] – ಶ್ರೇಷ್ಠಮುನಿಪ ॥ ೭ ॥

* ಈ ಪದ್ಯ (ಎ, ಗ, ಚ.) ಪ್ರತಿಗಳಲ್ಲಿಲ್ಲ. 1-1 ರೊ (ಇ, ಉ, ಒ, ಖ, ಗ, ಚ.)
2-2 ರೆ (ಅ, ಒ, ಡ, ಬ.)

ಬಲ್ಲಿದನು ಜಮದಗ್ನಿ ರೇಣುಕಿ | ಯಲ್ಲಿ ಕುಲವ ನೆನೆದನೆ |
ಅಲ್ಲಿ ಮಾತಾಂಗಿಯರ ಸಹವಾ – ಸದಲಿ ಇರನೆ || ೮ ||
ಪೊಡವಿ[1] ದ್ವಿಜರಿಗೆ ಕಡೆಯಜಾತಿಗೆ | ಕೊಡುವ ಕೊಂಬಾ ನಡತೆಯು[1] |
ಬಿಡದೆ ನೋಡೀ ಪೂರ್ವ ಮಾರ್ಗದ – ನಡತೆಯನು ಭೂಪ || ೯ ||

**ಶ್ರುತಿ** || ಓಂಕಾರ ಪಾರಾಯಣೋ ಮಾತಂಗೀ | ರೇಣುಕೇ ಗರ್ಭಸಂಭವಃ || ಎಂಬ ಶ್ರುತಿಯುಂಟಾಗಿರ್ದು ತಮ್ಮ ನಿಜವ ತಾವರಿಯದ ಕುಹಕರ ಮಾತ ಕೇಳಬೇಡ ಅರಸೆ ಎಂದು ಚೆನ್ನಬಸವಣ್ಣ ನಿಂತೆಂದಂ.

**ಕಂದಪದ್ಯ.**

ಅಂತಿರೆ ವಿಪ್ರರ ನಡತೆಯು |
ಸಂತತ ಶಿವಸಮಯಕೊಂದು ಕುಲವೆಂಬುದನೇ ||
ಮುಂತುಸುರುವೆ ಶ್ರುತಿವಾಕ್ಯವ |
ನಿಂತಿದ ನೀ ಕೇಳಿ ಮನದಿ ತಿಳಿಯಲೆ ಭೂಪಾ || ೧ ||

ಪರುಷಂ ಮುಟ್ಟಲು ಕಬ್ಬಿಣ |
ನೆರೆಕನಕವದಾದತೆರದಿ ಸಕಲರ ಕುಲವಂ ||
ಗುರುಮುಟ್ಟೆ ಶುದ್ಧವೆಂಬುದ |
ನರುಪುವೆ ನೀಂ ಕೇಳು ಭೂಪ ಧರೆಜನ ಮೆಚ್ಚಲ್ || ೨ ||

**ಜಂಪೆ.**

ತರಣಿಯಿಂ ತಮಕೆಡುಗು | ಶರಧಿಸೂತಕ ಕೆಡುಗು |
ಗುರುಮುಟ್ಟೆ ಸಕಲ ಜನ | ಹರಕುಲವು ಭೂಪ || ೧ ||
ಗುರುಮುಟ್ಟೆ ಲಿಂಗಧಾ | ರಣೆ ಭಸಿತ ರುದ್ರಾಕ್ಷಿ | ||
ಪರಮವ್ರತ ಜಪನೇಮ | ವಿರಲು ಶಿವಕುಲವು || ೨
ಶ್ವಪಚನಾಗಲಿ ಗುರುವಿ | ನುಪದೇಶದಿಂ ನಡೆಯೆ |
ಉಪಮಿಸಲು ಅವನಮನೆ | ತ್ರಿಪುರಹರ ನಿಳಯು || ೩ ||
ಶಿವತಂದೆ ಶಿವಮಾತೆ | ಶಿವನ ಕುಲದರಿಗಿನ್ನು |
ಭುವಿಯೊಳಿನ್ನೊಂದು ಕುಲ | ವಿವರಿಸಲು ಬಹುದೆ || ೪ ||
ಹಲವು ಜಲ ನದಿ ಬಂದು | ಕ[2] ಲೆ[2] ಯೆ ಮಹಾಸಾಗರವ |
ಕುಲಗೆಟ್ಟತೆನ್ನುವರೆ | ನೆಲೆಗಾಣದರಸೆ || ೫ ||
ಬೇಡ ಶರಣರ ನಿಂದೆ | ಕೇಡಹುದು ಇದರಿಂದ |
ಆಡಿ ಸಾರಿದೆ ನಾನು | ನೋಡಿಕೋ[3] ನೃಪತಿ[3] || ೬ ||

---

1-1 ಯೊಳು ಕುಲಗಳನು ವಿವರಿಸೆ | ಕಡಮೆ ನೋಡು ಚಿತ್ತದಿ | (ಉ, ಎ, ಗ, ಚ.)
2-2 ವಿ (ಇ, ಒ, ಖ, ಗ, ಚ, ಟ.) 3-3 ಮುಂದೆ (ಉ, ಒ, ಖ ಗ.)

ಜಾತಿಹೀನರ ಮನೆಯ । ಜ್ಯೋತಿ ಹೀನವೆ ಶಿವನ ।
ಜಾತಿಯಾದವರನ್ಯ । ಜಾತಿಯೆನ್ನುವರೆ ॥ ೭ ॥

**ಶಾರ್ದೂಲವಿಕ್ರೀಡಿತ ವೃತ್ತ.**

ಪಂಕಃಪಂಕಜಂ ಮೃತ್ತಿಕಾ ಚ ಕನಕಂ ಸೂತೇಜಲಂ ಮೌಕ್ತಿಕಂ ।
ಕೀಟಃಕೋಮಲ ಪಟ್ಟಸೂತ್ರಮಮಲಂ ಕಸ್ತೂರಿ ಕಾಂಕ್ಷಾ ಮೃಗಃ ॥
ಕಾಷ್ಠಾದ್ವಹ್ನಿ ಪಲಾಯನಂ ಶಿವಮಧು ಗೌಃಕ್ಷೀರ ಗೋರೋಜನೇ ।
ಉತ್ಪತ್ತ್ಯಾದಿ ಮಹಾನುಭಾವ ಗಣನಾಂ ಪ್ರಾಪ್ತಸ್ಯ ಕಿಂ ಜನ್ಮನಾ ॥ ೧ ॥

ವಚನ ॥ ಎಂಬ ಶಾಸ್ತ್ರವುಂಟಾಗಿ ಶಿವಶರಣರಾದ ಮಹಾನುಭಾವರು ಆರಲ್ಲಿ ಜನಿಸಿದರೇನು ಆವ ಕುಲವಾದರೇನು, ಅವರ ಗೋಷ್ಠಿ ಬೇಡವೆಂದು ಚೆನ್ನಬಸವಣ್ಣ ಪೇಳಲು, ಆ ಮಾತು ಕಿವಿಗೆ ಸೊಗಸದೆ ಬಿಜ್ಜಳರಾಯನೇನೆನ್ನುತಿರ್ದನು.

**ತ್ರಿವುಡೆ.**

ಈಶಭಕ್ತರು ಇಳೆಗೆ ಘನವೆಂ । ದೀಸು ಮಾತನು ಆಡಿ ನೀಬಲು ।
ನಾಸಿಪಂಥಕೆ ಹೆಣಗಿ ಮಾಡುವ – ದೇನು ನೀ ಮುಂಪೆ ॥ ೧ ॥

ಹಲವು ಕುಲವನು ಒಂದುಗೂಡಿಸಿ । ಕುಲಗೆಡಿಸಿ ಪಟ್ಟಣವನೆಲ್ಲವ ।
ಹೊಲೆಗಲಸಿ ಏಕವನು ಮಾಡುವ – ಛಲವೆ [1] ಇದು ನಿಮಗೆ [1] ॥ ೨ ॥

ನಿಮ್ಮ ಮಾವನ ಆಳ್ವಿಕೆಯೊಳಿಂ । ತಪ್ಪ ದುರ್ನಡತೆಗಳು ಇಲ್ಲದೆ ।
ಸುಮ್ಮನೆಯೆ ಕಟ್ಟಳೆಯು ತಪ್ಪದೆ – ಗಮ್ಮನಾಗಿತ್ತು * ॥ ೩ ॥

ಪಟ್ಟಣದಿ ಈ ಹೀನನಡತೆಯ । ಕಟ್ಟುಮಾಡಲುಬೇಕು ಅಲ್ಲದಿರೆ ।
ಕೆಟ್ಟು ನಡೆವುದು ರಾಜಕಟ್ಟಳೆ – ಇಷ್ಟತಪ್ಪಿ ॥ ೪ ॥

ಸಾಕು ನಿನ್ನಯ ಮಂತ್ರಿ ಸಖತನ । ಸಾಕು ನಿನಗೀ ರಾಜ್ಯಭಾರವು ।
ಸಾಕು ನಿನ್ನಯ ಬದುಕು ಅಂಜುವೆ – ಸಾಕು ಕಡೆಗಾಗು ॥ ೫ ॥

ಪೊಡವಿಯೊಳಗೀ ಹೀನನಡತೆಯ । ನಡೆದ ಮಧುವರಸನನು ಶ್ವಪಚನ ।
[2] ಜ [2] ಡಿದು ಹಿಡಿತನ್ನೆಂದು ಅಪ್ಪಣೆ – ಕೊಟ್ಟ ಭೂಪಾಲ ॥ ೬ ॥

ನೋಡಿದನು ಶ್ರೀ ಚೆನ್ನಬಸವನು । ಕೂಡೆ ರಾ [3] ಯ [3] ನ ಕೋಪಾಟೋಪವ ।
ಬೇಡವೆಂದೆನೆ ಮನಕೆ ನಿಶ್ಚಯ – ಮಾಡಿಕೊ ಎಂದ ॥ ೭ ॥

---

1-1 ನಮ್ಮೊಡನೆ (ಒ, ಖ, ಗ, ಚ.) * ಈ ಪದ್ಯ (ಡ.) ಪ್ರತಿಯಲ್ಲಿ ಮಾತ್ರವಿದೆ.
2-2 ಬ (ಅ, ಖ, ಜ, ಟ, ಡ, ಬ.) 3-3 ಜ (ಇ, ಒ, ಖ, ಜ, ಟ.)

ವೇಣು ವೃಶ್ಚಿಕ ಏಡಿ ಕದಳಿಯ । ಪ್ರಾಣಕಡೆಗಾ ಗರ್ಭಸೂಚನೆ ।
ಕಾಣಿಸುವವೋಲ್ ಬಿಜ್ಜಳಗೆ ಕಡೆ– ಗಾಲವಿದು ಎಂದ ॥ ೮ ॥

ವಚನ ॥ ಇಂತೆಂದು ಚೆನ್ನಬಸವಣ್ಣ ಬಿಜ್ಜಳನ ದುರ್ಬುದ್ಧಿಯಂ ನೋಡಿ ತನ್ನೊಳು ತಾನೆ ಏನೆನ್ನುತಿರ್ದನು.

**ಜಂಪೆ.**

ಕೀರನಿಗೆ ನುಡಿಯುವುದು । ಸೇರುವುದೆ ವಾಯಸಕೆ ।
ನೂರುಪೇಳಲು ಬಿಡದು । ಕಾರಂಬಧ್ವನಿಯ ॥ ೧ ॥

ಎಷ್ಟು ಹೇಳಿದರರಿಯ । ಕಷ್ಟನೃಪ ಇವನ ಸಿರಿ ।
ನಷ್ಟವಾಗದೆ ಬಿಡದು । ಸೃಷ್ಟಿಯೊಳಗಿನ್ನು ॥ ೨ ॥

ಸರಸಿಜಾಕ್ಷನು ಅಜಗೆ । ಹರನ ನಿಂದಿಸದಿರೆಂ ।
ದೊರೆಯೆ ಕೇಳದೆ ತನ್ನ । ಶಿರವ ಕಳಕೊಂಡ ॥ ೩ ॥

ವರಮುನಿಯು ದಕ್ಷನಿಗೆ । ಹರನ ಪಗೆ ಬೇಡೆನಲು ।
ಇರದೆ ಯಜ್ಞವ ಮಾಡಿ । ಕುರಿದಲೆಯ ಪಡೆದ ॥ ೪ ॥

ಧರೆಯೊಳಗೆ ಕೌರವನು । ಹರಿಯ ಮಾತನು ಮೀರಿ ।
ಹಿರಿದು ಕಾಳಗಮಾಡಿ । ಧರೆಗೆ ಒರಗಿದನು ॥ ೫ ॥

ಇಂದು ಇವನೊಳು ಪಗೆಯ । ಮುಂದೆನೋಡುವೆನೆಂದು ।
ಎಂದಿನೊಲ್ವಿಶ್ವಾಸ । ದಿಂದೆಂದ ಮಂತ್ರಿ ॥ ೬ ॥

ಚಾಡಿಮಾತನು ಕೇಳಿ । ಆಡದಾಟವ ನೀನು ।
ಆಡಿದರೆ ನಾವೇನ । ಮಾಡಬೇಕರಸೆ ॥ ೭ ॥

ಕೊಡಹೇಳಿದೆವೆ ಹೆಣ್ಣ । ತರಹೇಳಿದೆವೆ [1] ನಾವು [1] ।
ಕಡುಕೋಪವಾರಲ್ಲಿ । ಪೊಡವೀಶ ಕೇಳು ॥ ೮ ॥

ರೂಢಿಯೊಳು ತಪ್ಪುಗಳ । ಮಾಡಿದವರಿಗೆ ಆಜ್ಞೆ ।
ಬೇಡವೆಂದೆನೆ ನಾನು । ಮಾಡಿಕೊ ಅರಸೆ ॥ ೯ ॥

ಎಂದ ಮಾತಿಗೆ ನೃಪತಿ । ಎಂದ ಚೆನ್ನಣ್ಣನಿಗೆ ।
ಮುಂದರಿಯೆ ಸುಮ್ಮನಿರು । ಎಂದ ಬಿಜ್ಜಳನು ॥ ೧೦ ॥

ಕೇಳು ಮಂತ್ರೀಶ ಈ । ಕೀಳುನಡತೆಗೆ ಹಿತವ ।
ಹೇಳಿದರೆ ನನ್ನಾಣೆ । ಹೇಳದಿರು ಎಂದ ॥ ೧೧ ॥

ವಚನ ॥ ಇಂತೆಂದು ಬಿಜ್ಜಳನು ಮತ್ತೇನೆನ್ನುತಿರ್ದನು.

---

1-1 ಅವಗೆ (ಬ, ಖ, ಜ.)

**ಏಕತಾಳ – ಅರ್ಧರೇಕು.**

ಪೊಡವಿಯೊಳಗೆ ತಮ್ಮ – ಕುಲನಡತೆ ಬಿಟ್ಟು ।
ನಡೆಯಬಹುದೆ ತಮ್ಮ – ಆಚಾರಗೆಟ್ಟು ॥ ೧ ॥
ಹಿಡಿತನ್ನಿ ಅವರನ್ನು – ಕಡುಬೇಗ ಪೋಗಿ ।
ಬಿಡಿಸುವೆ ಈ ಹೀನ – ನಡತೆ [1] ಎಲ್ಲವನು [1] ॥ ೨ ॥
ಪೊಡವಿಪನ ನುಡಿಕೇಳಿ – ಕಡುವೇಗ ಚರರು ।
ನಡೆದು ಬಂದರು ಬೇಗ – ಮೃಡಶರಣರೆಡೆಗೆ ॥ ೩ ॥
ದೊರೆಗಳ್ನಿ [2] ಮ್ಮ್ಯಾರ್ವರ [2] – ಕರೆಸಿದರ [3] ನಲು [3] ।
ತ್ವರಿತದಿಂ ಬನ್ನೆಂದು – ಕರೆಯೆ ಹರಳೈಯ್ನ ॥ ೪ ॥
ಬಂದು ಮಧುವರಸಯ್ಯ – ಹರಳಯ್ಯ ಸಹಿತ ।
ಇಂದು ಬನ್ನೆಂದಾಗ – ನಿಂದು ಕರೆಯಲು ॥ ೫ ॥
ದೊರೆಗಳು ಕಳುಹಿದ – ಇರವ ತಾವ್ ತಿಳಿದು ।
ಧರೆಯಾಟ ಸರಿಯೆಂದು – ಹರುಷವಂ ತಾಳಿ ॥ ೬ ॥
ಹರಶರಣರು ಬೇಗ – ಹರಪೂಜೆಗೈದು ।
ಚರಲಿಂಗ ಚರಣಾಂಬು – ಶೇಷವ ಕೊಂಡು ॥ ೭ ॥
ಕಲಸ್ಥಲದಯ್ಯನೆ – ಕಾಮಸಂಹರನೆ ।
ಸರಿಯೆ ಮರ್ತ್ಯದ ಭೋಗ – ಗುರುವೆ ಎಂದೆನುತ ॥ ೮ ॥
ಚರಲಿಂಗಕೆರುಗುತ್ತ – ಹರನ ನೆನೆಯುತ್ತ ।
ತರುಣಿ ಮಕ್ಕಳಿಗೆ ಬುದ್ಧಿ – ಒರೆದು ಪೇ [4] ಳುತಲಿ [4] ॥ ೯ ॥
ಮೊರೆಮನುಜರು ಬಹು – ತ್ವರಿತವಂ ಮಾಡೆ ।
ಭರದಿ ಬಂ [5] ದರು ಆಗ [5] – ಅರಸನಿದ್ದೆಡೆಗೆ ॥ ೧೦ ॥
ಭರದಿ ಕರೆಸಿದ ಕಾರ್ಯ – ವೇನೆಂದು ಕೇಳೆ ।
ಕಾಳೋರಗನೋಲ್ ರಾಯ – ಕಡು ಕೋಪಗೊಳ್ಳೆ * ॥ ೧೧ ॥

ವಚನ ॥ ಆ ವೇಳೆಯಲ್ಲಿ ಚೆನ್ನದಂಡನಾಯಕರು ಭಕ್ತದ್ರೋಹವ ನೋಡಬಾರದೆಂದು; ಬಿಜ್ಜಳನಕೂಡೆ ನಮಗೆ ಮನೆಯೊಳಗೆ ಪ್ರಸ್ತವಿದೆಯೆಂದು ಕಳುಹಿಸಿಕೊಂಡು ಪೋಗಲು, ಇತ್ತ ಬಿಜ್ಜಳರಾಯನು ಹರಳಯ್ಯ ಮಧುವರಸಯ್ಯನಂ ನೋಡಿ ಏನೆನ್ನುತಿರ್ದನು.

---

1-1 ನಿಂದು (ಎ, ಖ, ಚ.) 2-2 ಸಿಮ್ಮಾನು (ಅ, ಇ, ಉ, ಎ, ಖ, ಗ, ಚ, ಜ, ಟ, ಡ, ಬ.) 3-3 ಂಪು । (ಅ, ಇ, ಉ, ಎ, ಖ, ಟ, ಬ.) 4-4 ಳಿದಾರು (ಉ, ಎ, ಒ, ಚ.) 5-5 ದೀರ್ವರು (ಇ, ಎ, ಗ, ಚ, ಜ, ಟ.) * ಈ ಪದ್ಯ (ಒ.) ಪ್ರತಿಯಲ್ಲಿ ಮಾತ್ರವಿದೆ.

**ಏಕತಾಳ.**

ಮೃಡಶರಣರ ನೋಡಿ । ಘುಡಿಘುಡಿಸುತ ರಾಯ ।
ಹಿಡಿ ಬಡಿ ಹೊಡಿಯೆಂದು । ನುಡಿದು ಗರ್ಜಿಸಿದ ॥ ೧ ॥

ಪೊಡವೀಶ ನಿನಗಿಷ್ಟು । ಕಡುಕೋಪವೇಕೆ ನಿ ।
ನ್ನೊಡನೇನು ಬೀಗತನವ । ನಡೆದಿವೆ ನಾವು ॥ ೨ ॥

ಕೊಟ್ಟರೆ ಕೊಟ್ಟೆ ಹೆಣ್ಣ । ಕೆಟ್ಟರೆ ಕೆಟ್ಟೆನಾನು ।
ಕೆಟ್ಟರೆ ನಿನಗೇನು । ಇಷ್ಟೇಕೆ ಕೋಪ ॥ ೩ ॥

ಎಲವೊ ಮಧುವರಸ ನೀ । ಕುಲದಲ್ಲಿ ಬ್ರಾಹ್ಮಣ ।
ಹೊಲೆಯಂಗೆ ಹೆಣ್ಣನಿತ್ತು । ಕುಲವ ಕೆಡಿಸುವರೆ ॥ ೪ ॥

ಗಾಯತ್ರಿಮಂತ್ರ ಜಪ । ಆಯತ ಸ್ನಾನ ಸಂಧ್ಯ ।
ಒಯ್ಯನೆ ನೀ ಬಿಟ್ಟು । ಈವರೆ ಸುತೆಯ * ॥ ೫ ॥

ಛಲವೆಮ್ಮೊಳಾಡುವೆ । ಸೀಳಿಪೆನೆಲೊ ನಿನ್ನ ।
ಹೊಲೆಯಂಗೆ ಹೆಣ್ಣನಿತ್ತು । ಆಡುವೆ ಇದಿರ * ॥ ೬ ॥

ಎಂದರಾಯನ ಮಾತಿ । ಗಂದು ಮಧುವರಸಯ್ಯ ।
ನಿಂದಂಜದಿದಿರಲ್ಲಿ । ನುಡಿದನುತ್ತರವ * ॥ ೭ ॥

ಹೊಲೆಯರೆನುವರೆ ಭೂಪ । ಮಲಹರನ ಶರಣರು ।
ಕುಲಕಧಿಕರು ಹಿರಿಯ । ಕುಲದವರವರು ॥ ೮ ॥

ಹೊಲೆಯನೆಂಬುವನಾರು । ಕುಲಗುರು ದೈವಗಳ ।
ನೆಲೆಯನರಿಯದ ಪಾಪಿ । ಹೊಲೆಯನೆಂಬುವನು ॥ ೯ ॥

ಗುರುವ ನಿಂದಿಪ ಹೊಲೆಯ । ಪರರ[1] ನಿಂದಿಪ[1] ಹೊಲೆಯ ।
ಸಿರಿಯುಳ್ಳವರ ನೋಡಿ । ಕರುಬುವ ಹೊಲೆಯ ॥ ೧೦ ॥

ಹಸುವ ಕೊಲುವಾತ ಹೊಲೆಯ । ಹುಸಿಯನಾಡುವ ಹೊಲೆಯ ।
ಅಸಮಾಕ್ಷನರಿಯದ । ವಿಷಮ ತಾ ಹೊಲೆಯ ॥ ೧೧ ॥

ಪರಸತಿಯರ ನೋಡಿ । ಪಾಪಕೆಳಸುವ ಹೊಲೆಯ ।
ಧರೆಯ ಧರ್ಮವ ಕೆಡಿಸಿ । ತಿರುಗುವ ಹೊಲೆಯ ॥ ೧೨ ॥

ನೀತಿಯರಿಯದೆ ಧರ್ಮ । ಜೀವಹಿಂಸೆಯ ಮಾಳ್ಪ ।
ಪಾತಕನವ ಸರ್ವ । ಘಾತಕ ಹೊಲೆಯ ॥ ೧೩ ॥

ವಚನ ॥ ಇಂತೆಂದ ಮಧುವರಸನ ಮಾತಿಗೆ ರಾಯನೇನೆನ್ನುತಿರ್ದನು.

---

* ಈ ಪದ್ಯಗಳು (ಒ.) ಪ್ರತಿಯಲ್ಲಿ ಮಾತ್ರವಿದೆ. 1-1 ಕೆಡಿಸುವ (ಇ, ಎ, ಒ, ಖ, ಗ, ಚ, ಜ, ಟ.)

## ತ್ರಿವುಡೆ.

ಎಷ್ಟು ಇವರಿಗೆ ಧರ್ಮನೀತಿಯು । ಕಟ್ಟಿ ಇವರನು ದನದ ಕಾಲಿಗೆ ।
[1] ಅ [1] ಟ್ಟಿ ಎಳಸದೆ ಬಿಡೆನು ಎಂದನು – ಸಿಟ್ಟಿನಲಿ ಭೂಪ ॥ ೧ ॥

ಖೂಳಬಿಜ್ಜಳ ಚರರಿಗಪ್ಪಣೆ । ತಾಳಲೀಸದೆ ಕೊಡಲು ಆಕ್ಷಣ ।
ಊಳಿಗರು ಬನ್ನೆಂದು ಇವರನು – ಎಳೆಯಲಾಕ್ಷಣದಿ ॥ ೨ ॥

ಇಂದುಧರ ಧ್ಯಾನದಲಿಯಾಗಳೆ । ನೊಂದು ಮಧುವರಸಯ್ಯ ಹರಳನು ।
ನಿಂದು ರಾಯನ ಮುಖವ ನೋಡಿಂ – ತೆಂದರಾಗ * ॥ ೩ ॥

ಕೇಳುಬಿಜ್ಜಳ ನಿನ್ನ ರಾಜ್ಯವು । ಹಾಳು ಆಗಲಿ ನಿನ್ನ ದೊರೆತನ ।
ಕೋಳುಹೋಗಲಿ ಎಂದು ಶಪಿಸಿದ – ನಾಗ ಹರಳಯ್ಯ ॥ ೪ ॥

ನೋಡು ಇವರಗ್ಗಳಿಕೆಯೆನುತಲಿ । ಗಾಢದಿಂ ತರಿಸಿ ಎರಡೆತ್ತನು ।
ಹೂಡಿ ಎಳೆಹೂಟೆಯನು ಕಟ್ಟಿಸಿದ – ನಾಗ ಬಿಜ್ಜಳನು ॥ ೫ ॥

ಕಟ್ಟಿ ಎಳೆ [2] ಸಲು ವೇಗದಲಿ ಧರ [2] । ಮುಟ್ಟಲೀಸದೆ ಈಶದಯದಲಿ ।
ಪೃಷ್ಟಿ ಬೆರಗಪ್ಪಂತೆ ಎಳೆದವು – ಶ್ವೇಚರತ್ನದಲಿ ॥ ೬ ॥

ಅರಸು ಹೊಸಹೋರಿಗಳ ಕಟ್ಟಿಸಿ । ಭರದಿ ಎಳೆಸಲು ವಾಯುವೇಗದಿ ।
ಧರೆಯ ಸೋಂಕದೆ ಪೋಗೆ ನೋಡುತ – ಅರಸುಬೆರಗಾದ * ॥ ೭ ॥

ಹರನ ಮೇಲಂಬುಗಳ ಸೇದಿಯೆ । ಉರಿದ ಮನ್ಮಥನಂತೆ ಬಿಜ್ಜಳ ।
ಶರಣರೊಳು ಹಗೆಯಾಗಿ ಕೆಟ್ಟನು – ಎಂ [3] ದರಲ್ಲಿ ಕೆಲರ್ [3] ॥ ೮ ॥

ಮಾಡಿದವರಿಗೆ ಮಾಡಿದಷ್ಟೆಂ । ದಾಡಿದರು ಕೆಲರಲ್ಲಿ ಕೆಲಬರು ।
ನೋಡಬೇಕೆಂತಹುದೊ ಮುಂದೆಂ – ದಾಡಿದರು ಕೆಲರು ॥ ೯ ॥

ಬಲ್ಲಿದರು ಬಹುವೀರ ಶೂರರು । ಮಲ್ಲಮದಗಜ ವೈರಿಗಳ ಎದೆ ।
ಧಲ್ಲಣರು ಶಿವಶರಣರೆಂದರು – ಅಲ್ಲಿ ಕೆಲಜನರು ॥ ೧೦ ॥

ಧರಣಿಯೊಳು ತಪ್ಪಿಲ್ಲದ [4] ಲೆ [4] ನೃಪ । ಶರಣರನು ಹರಣಕ್ಕೆ ಮುನಿಯಲು ।
ಹರನು ಕೋಪಿಸಿ ಅವನ ಭಾಗ್ಯಕೆ – ಉರಿಯನಿಕ್ಕಿಸನೆ ॥ ೧೧ ॥

**ವಚನ ॥ ಎಂದು ಜನರಾಡುತ್ತಿರಲು ಬಿಜ್ಜಳರಾಯನೇನೆನ್ನುತಿರ್ದನು.**

---

1-1 ಕ (ಇ, ಎ, ಒ, ಖ, ಚ, ಟ.) * ಈ ಪದ್ಯಗಳು (ಎ, ಖ, ಗ, ಚ, ಜ, ದ, ಬ.) ಪ್ರತಿಗಳಲ್ಲಿಲ್ಲ. 2-2 ಯಲು ವಾಯು ಭೂಮಿಯ । (ಅ, ಉ, ಒ, ಗ, ಜ, ಟ, ಡ, ಬ.) 3-3 ದು ಕೆಲಜನರು (ಉ, ಎ, ಖ, ಗ, ಚ.) 4-4 ಲಿ (ಅ, ಇ, ಒ, ಖ, ಬ.)

**ಅಟತಾಳ.**

ನೋಡಿದನು ಬಿಜ್ಜಳನು ಶರಣರ । ರೂಢಿಯನ್ನು ನೋಂಕದೆ ।
ಓಡಿದವು ಹಿಡಿತನ್ನಿ ತಿರುಗೆಂ – ದಾಡುತಿರ್ದ ॥ ೧ ॥
ತಿರುಗಿ ಶರಣರ ತರಿಸಿ ನಿಲ್ಲಿಸಿ । ಶರೀರವನ್ನೂ ನೋಡಿದ ।
ಗರಿಯು ನೋಂಕದೆ [1] ಇರೆ ಶರೀರವು [1] – ಅರಸು ಬೆರಗಾದ ॥ ೨ ॥
ಬಿಡ [2] ಲು [2] ಬಾರದು ಇವರನೀಕ್ಷಣ । ಹಿಡಿದು ಕಣ್ಣ ತೆಗೆಸಿ [3] ಯೆ [3] ।
ನಡೆಸು ಶೂಲಕ್ಕೆಂದು ಅಪ್ಪಣೆ – ಕೊಟ್ಟ ಭೂಪಾಲ ॥ ೩ ॥
ಮೊರೆಯು ಅಪ್ಪಣೆ ಕೊಡಲು ಊಳಿಗರ್ । ಕರೆದು ಒಯ್ದಾರೀರ್ವರ ।
ಧರಣಿಸುರಹತ್ಯವನು ಮಾಡ [4] ಲು [4] – ಬಾರದೆಂದೆನುತ ॥ ೪ ॥
ಬೇಗದಲಿ ಮಧುವರಸರವರ್ಕಳ । ಆಗ ಕಣ್ಣಾ ತೆಗೆದರು ।
ಆಗುವೇಗದಿ ಶೂಲವೇರಿದ – ನಾಗ ಹರಳೈಯ್ಯ ॥ ೫ ॥
ಹರನ ಮಂತ್ರವ ಸ್ಮರಿಸುತಲಿ ಹರ । ಳೈಯ್ಯನಾಗಾ ಶೂಲವೇರೆ ಚಿ ।
ಗುರಿತು ಶೂಲವು ಬಿಲ್ವಪತ್ರೆಯ – ಮರನದಾಗಿ ॥ ೬ ॥
ನೋಡುತಲಿ ಧರೆಜನರು ಚೋದ್ಯವ । ಮಾಡಿಕೊಂಡಾಡುತ್ತಲಿರುತಿರೆ ।
ರೂಢಿಯೊಳು ಆ ಶರಣರ್ಮಹಿಮೆಯ – ಆಡಲೇನು * ॥ ೭ ॥
ಸುತ್ತಿದನು ಮಧುವರಸ ಶೂಲವ । ಮತ್ತೆ ದಾರಿಗಾಣದೆ ।
ಸತ್ಯ ಶರಣನಡಿದಾಗೆ ನೊಸಲಿಗೆ – ಒತ್ತಿಕೊಂಡ ॥ ೮ ॥
ಹರುಷದಲಿ ಹರಳೈಯ್ಯನಂಘ್ರಿಗೆ । ಎರಗಲಾಗ ಕಣ್ಗಳು ।
ಭರದಿಬಂದವು ಹರನ ಕರುಣವು – ದೊರಕಿತಲ್ಲಿ ॥ ೯ ॥
ಮೊರೆದವಾಕ್ಷಣ ದೇವದುಂದುಭಿ । ಹರನು ನಿಜವ ತೋರಿದ ।
ಭರದಿ ಪೂಮಳೆ ಗರೆದವಾಕ್ಷಣ – ಸುರರು ಪೊಗಳಿದರು ॥ ೧೦ ॥
ಹರನು ತನ್ನಯ ಶರಣರನು ಪುಷ್ಪ । ರಥದಿ ಇಟ್ಟು ಪ್ರೀತಿಯಿಂ ।
ಕರೆದು ಓಯ್ದನು ನಿಜಪುರಿಗೆ ಇದ – ಶರಣರ್ಲಾಲಿಪುದು ॥ ೧೧ ॥

## ಜಗದೇವ ಮೊಲ್ಲೆಬೊಮ್ಮಣ್ಣನವರ ಕಥೆ.

**ಕೊಂಚೆ ಜಂಪೆ.**

ಉತ್ಸಹದಿ ಶಿವ ತಾನು ಬಂದು – ಶರಣರನು । ಮೆಚ್ಚಿ ಶಿವಪುರಿಗೊಯ್ಯಲಂದು ।
ಹೆಚ್ಚಿ ಬಸವಾದಿ ಪ್ರಮಥರಂದು – ಉಘೆ ಉಘೆ । ಸಚ್ಚರಿತ ಶಿವನೆ [5] ಶರಣೆ [5] ಂದು ॥

---

1-1 ಶರೀರವಿರುತಿರೆ (ಇ, ಖ, ಗ, ಚ, ಟ.) 2-2 ಲಿ (ಇ, ಒ, ಖ, ಗ, ಚ, ಜ, ಟ.) 3-3 ವಿಪ್ರಗೆ (ಇ, ಎ, ಡ, ತ.) 4-4 ಲಿ (ಇ, ಎ, ಒ, ಖ, ಗ, ಚ, ಜ.) * ಈಪದ್ಯ (ಅ, ಉ, ಗ, ಚ, ಜ, ಬ.) ಪ್ರತಿಗಳಲ್ಲಿಲ್ಲ. 5-5 ಸಲಹೆ (ಅ, ಟ, ಡ, ದ, ಬ.)

ಬಲ್ಲಿದ ಶರಣಜಗದೇವ – ಅವನ ಹಿತ । ವೊಲ್ಲೆಬೊಮ್ಮಣ್ಣ ನಿಜಭಾವ ।
ಅಲ್ಲಿ ಶರಣರ ಕೊಲುವ ತಾವ – ನಿಂತು । ಎಲ್ಲ ನೋಡಿದರೆರಡು ಝಾವ ॥ ೨ ॥

ಹಸಿವಾಯಿತೆಂದಾಗ ತಮಗೆ – ಅವರು । ಒಸೆದು ಬಂದರು ಬೇಗ ಮನೆಗೆ ।
ಹಸಿದೆವಮ್ಮಯ್ಯ ನೀಡೆಮಗೆ – ಎಂದು । ರಸಿಕರೆರಗಿದರು ತಾಯಡಿಗೆ ॥ ೩ ॥

**ಜಂಪೆ.**

ಎಲೆ ಮಕ್ಕಳಿರ ನೀವು । ಇಷ್ಟೊಬ್ಬುತ್ತು ಏನರುಬು ।
ಗಳ ಮಾಡಿ ಬಂದಿರ್ಪೆ । ತಿಳುಪಿರೆನ್ನೊಡನೆ * ॥ ೧ ॥

ಕಡುಪಾತಕನು ತಾಯೆ । [1] ಪ್ರೊಡವಿಯೊಳಗೀ [1] ರ್ವರನು ।
ಕೆಡಹಿ ಎಳೆಹೂಟೆಯನು । ಎಳೆಸೆ ನೋಡಿದೆವು ॥ ೨ ॥

ನೋ [2] ಡುತಲಿ [2] ಇಷ್ಟೊಬ್ಬುತ್ತು । ಮಾಡಿದೆವು ನಮ್ಮಮ್ಮ ।
ಗಾಢತಾರಗ್ಗಣಿಯ । ನೀಡು ನಡೆಯಮ್ಮ ॥ ೩ ॥

ಭಕ್ತರೊ ಭವಿಗಳೊ । ಸತ್ಯ ಶರಣರೊ ಅವರು ।
ಎತ್ತಣವರೆಂದು ತಾ । ಮತ್ತೆ ಕೇಳಿದಳು ॥ ೪ ॥

ಭಕ್ತರವರಮ್ಮ ಬಸ । ವೇಶ್ವರನ ಮೋಹದ ।
ಸತ್ಯಶರಣರು ಎಂದು । ವಿಸ್ತರಿಸಿ ಪೇಳೆ ॥ ೫ ॥

ಹರ ಹರಾ ಭಕ್ತದ್ರೋ । ಹವನು ಕೇಳಿದೆನೆಂದು ।
ಸುರಗಿಯಿಂದಲಿ ತನ್ನ । ಇರಿದು ಕೊಳುತಿರಲು ॥ ೬ ॥

ಜಗದೇವ ಮೊಲ್ಲೆಬೊ । ಮ್ಮಣ್ಣ ಸೋಮವ್ವೆಯ [3] ನು [3] ।
ನೆಗಹಿದಲಗನು ಪಿಡಿದು । ತೆಗೆದುಕೊಳಲಾಗ ॥ ೭ ॥

ಎಲವೊ ಭಕ್ತದ್ರೋಹಿ । ಹೊಲೆಯನನು ಪಿಡಿಕೊಂಡು ।
ತಲೆಯನರಿಯದೆ ನೋಡಿ । ನಿಲಲಿನ್ನುಬಹುದೆ ॥ ೮ ॥

ಪನ್ನಗಧರಭಕ್ತ । ರನ್ನು ಕೊಂದವನ ಕೊಲು ।
ವನಕ ಅನ್ನವ ತಿನ್ನೆ । ರಿನ್ನು ಧಾತ್ರಿಯಲಿ ॥ ೯ ॥

ಹಿರಿದು ಕೋಪದಿ ಸುತರ । ಕರೆದು ಧಾತ್ರಿಯ ಮೇಲೆ ।
ಭರದಿಂದ ಅನ್ನವನು । ಸುರಿದಳುಣ್ಣೆಂದು ॥ ೧೦ ॥

ತಾಯಿ ಭಕ್ತದ್ರೋಹಿ । ನಾಯ ಕೊಲುವಾತನಕ ।
ಆಯಿತಿದು ವ್ರತವು ಲೇ । ಸಾಯಿತೆ [4] ಮಗಮ್ಮ [4] ॥ ೧೧ ॥

---

* ಈ ಪದ್ಯ (ಉ, ಖ, ಚ.) ಪ್ರತಿಗಳಲ್ಲಿ ಮಾತ್ರವಿದೆ. 1-1 ಹಿಡಿತರಿಸಿ ಈ (ಎ, ಗ, ಚ.)
2-2 ಡಿದೆವು (ಇ, ಒ, ಗ, ಚ.) 3-3 ರ (ಅ, ಉ, ಡ, ಬ.)
4-4 ಂದೆನುತ (ಉ, ಎ, ಗ, ಚ.)

ಎಂದು ತಾಯೊಡನೆ ಇಂ । ತೆಂದು ಪ್ರತಿಜ್ಞೆಯ ಮಾಡಿ ।
ಬಂದರಾಕ್ಷಣ ಚೆನ್ನ । ದಂಡೇಶನೆಡೆಗೆ ॥ ೧೨ ॥

ಇತ್ತ ಬಿಜ್ಜಳರಾಯ । ಸತ್ಯಶರಣರ ಕೊಲಿಸಿ ।
ಮೃತ್ಯು ಬಹದರಿಯದೆ । ಅರ್ಥಿಯಿಂದಿರ್ದ ॥ ೧೩ ॥

ಮುಂದುಗಾಣದೆ ರಾಯ । ಚಂಡದಿಂದಲಿ ರಾಜ್ಯ ।
ಎಂದಿನಂದದಿ ತಾನು । ಮುಂದಾಳುತಿರ್ದ ॥ ೧೪ ॥

ವಚನ ॥ ಆ ಸಮಯದಲ್ಲಿ ಉತ್ಪಾತವಾದವದೆಂತೆನೆ.

**ಅಟತಾಳ.**

ಧರಣಿಪತಿ ತಾನೇರ್ವ ಪಟ್ಟದ । ಕರಿಯು ಧರೆಗೆ ಒರಗಿತು ।
ಅರಸನರಮನೆಯೊಳಗಿರುವ ಕರ – ಭಗಳು ಉದುರೆ ॥ ೧ ॥

ಜಗವು ಕಂಪಿಸೆ ಹಗಲುಗತ್ತಲೆ । ಮುಗಿಲು ಕವಿಯೆ ಧಾತ್ರಿಲಿ ।
ಮುಗಿಲಿನೊಳು ಹೊಗೆ ಧೂಮಕೇತುವು – ಒಗೆದವಲ್ಲಿ ॥ ೨ ॥

ಕಾಗೆಗಳು ಹುಚ್ಚೆದ್ದು ರಾತ್ರಿಲಿ । ಕೂಗುತಿರಲು ಬೆಟ್ಟದ ।
ಗೂಗೆಗಳು ಹರಿತಂದು ಅರಮನೆ – ಬೇಗಲೇರಿದವು ॥ ೩ ॥

ಅರಸುಬಿಜ್ಜಳನರಸಿ ಇಟ್ಟಿಹ । ಹರಳ ಓಲೆ ಧಾತ್ರಿಗೆ ।
ಉರುಳಿ ಮುತ್ತಿನ ಸರಹರಿದು ಚೆ – ಲ್ಲರಿದವಲ್ಲಿ ॥ ೪ ॥

ನರಿಯು ಕೂಗಲು ಹಗಲು ಪುರದೊಳು । ಸೊಗಲು ಕಾಳಮೇಘವು ।
ಬರಸಿಡಿಲು ಕೂಡೆರಗಿ ಕಲ್ಮಳೆ – ಸುರಿಯಿತಲ್ಲಿ ॥ ೫ ॥

ನಡುಗಿದವು ನಡುಮನೆಯ ಕಂಬಗಳ್ । ಸಿಡಿದವಾಗ ಗಿರಿಗಳು ।
ಪೊಡವಿಜನ ಕಂಪಿಸುತ ಅರಸಗೆ – ನುಡಿದರಲ್ಲಿ ॥ ೬ ॥

ಕೇಳು ನೃಪ [1] ಈ [1] ಮಹೋತ್ಪಾತದ । ಕೀಳುಗುಣವ ಗ್ರಾಮಕೆ ।
ಹೇಳೆ ಕಷ್ಟವು ತಿಳಿಯಲರಿದೆಂದು – ಪೇಳ [2] ಲಾಗ [2] ॥ ೭ ॥

ಏನು ಯೋಚನೆ ಇದಕೆ ಎನ್ನುತ । ಮಾನವೇಂದ್ರನು ಕೇಳಲು ।
ಹೀನದ್ವಿಜರಿಂತೆಂದು [3] ನುಡಿ [3] ದರ – ಜ್ಞಾನಿನೃಪಗೆ ॥ ೮ ॥

ಮೃತ್ಯುದೇವತೆ ಊರಮಾರಿಗೆ । ಅರ್ಥಿಯಿಂದಲಿ ಮಾಡಿಸು ।
ಸತ್ಯಮೂರುತಿ ನಾರಸಿಂಹಗೆ – ಎತ್ತು ದೀಪವನು ॥ ೯ ॥

---

1-1 ತಿಯೆ (ಇ, ಉ, ಎ, ಗ,) 2-2 ಲೇನು (ಉ, ಚ.)
3-3 ಪೇಳ್ದ (ಇ, ಉ, ಎ, ಒ, ಗ, ಟ.)

ನಡೆಸು ನಿನ್ನಯ ಬುದ್ಧದೇವಗೆ । ಹೆಡಗೆಜಾತ್ರೆ ಬ್ರಾಹ್ಮರ ।
ಪಡೆಗೆ ಮಾಡಿಸು ಸಮಾರಾಧನೆ– ಪೊಡವಿನಾಥ ॥ ೧೦ ॥

ಮಂದಿದ್ವಿಜರಿಂತೆಂದ ನುಸುಳಿಗೆ । ಹಿಂದೆ ಮರೆದು ಬಿಜ್ಜಳ ।
ಅಂದಚಂದದಿ ಭೂತಶಾಂತಿಯ– ನಡೆಸುತಿರ್ದ ॥ ೧೧ ॥

ಬರಸಿಡಿಲು ಬಂದೆರಗಲಡ್ಡವೆ । ಹರಿಗೆ ಮೊರನು ಲೋಕದ ।
ಕಿರುಕುಳದ ದೈವಗಳು ಕಾಯ್ವವೆ– ಹರನು ಮುನಿಯೆ ॥ ೧೨ ॥

ಮೃಡನ ಶರಣರ ಮಹಿಮೆಯರಿಯದೆ । ಪೊಡವಿಪತಿ ತಾನಾಗಳು ।
ಬಿಡದೆ ಗ್ರಾಮದಿ ಹೋಮಶಾಂತಿಯ– ನಡೆಸುತ್ತಿರ್ದ ॥ ೧೩ ॥

## ಕಂದಪದ್ಯ.

ಅತ್ತಲು ಬಿಜ್ಜಳರಾಯನು ।
ಅರ್ಥಿಯ ಶ್ರವಣಾದಿ ಸಮಾರಾಧನೆಗೆಯ್ವಲ್ ॥
ಇತ್ತ ಶಿವಶರಣ ಸಂದಣಿ ।
ಯುತ್ಸಾಹವ ಪೇಳ್ವೆ ಸತ್ಯಶರಣರು ಮೆಚ್ಚಲ್ ॥ ೧ ॥

## ದ್ವಿಪದಿ.

ಶ್ರೀ ಗುರುವರಮೂರ್ತಿ ದೇವತಾ ಚಕ್ರವರ್ತಿ ।
ನಾಗಭೂಷಣಮೂರ್ತಿ ನಮಿತ ಸತ್ಕೀರ್ತಿ ॥ ೧ ॥
ಆಗ ಕಲ್ಯಾಣದನುಭಾವ ಮಂಟಪದಿ ।
ಆಗಮಾ ಶಾಸ್ತ್ರದನುಭಾವ ಗೋಷ್ಠಿಯಲಿ ॥ ೨ ॥
ಮೋಳಿಗೆಯಮಾರಯ್ಯ ಮುಸುಡಿಚೌಡಯ್ಯ ।
ಶೂಲದಬ್ರಹ್ಮಯ್ಯ ಸುರಗಿಚೌಡಯ್ಯ ॥ ೩ ॥
ಏಳನೂರೆಪ್ಪತ್ತು ಅಮರಗಣ ಸಹಿತ ।
ಭಾಳಾಕ್ಷಸುತ ಚೆನ್ನಬಸವನೊಪ್ಪಿರಲು ॥ ೪ ॥
ಮೃಡದೂಷಕರ ವೈರಿ ಮಡಿವಾಳದೇವ ।
ಕಡುಗಲಿ ಕಿನ್ನರಯ್ಯಗಳು ಎಡಬಲದಿ ॥ ೫ ॥
ಇಂತಪ್ಪ ಶರಣರಾ ತಿಂಥಿಣಿಯ ಬಳಿಗೆ ।
ಕಂತುಹರ ವರಭಕ್ತರ್ ಕಡುಶಕ್ತಿಯುಕ್ತರ್ ॥ ೬ ॥
ಪಂಥಗಾರರು ಪಟುಸುಭಟಮಲ್ಲರೆನಿಪ ।
ಜಗದೇವ ಮೊಲ್ಲೆಬೊ[1]ಮ್ಮಣ್ಣಗಳು ಆಗ[1] ॥ ೭ ॥

1–1 ಮ್ಮ ತಂಡೆಗಳು (ಉ, ಗ, ಚ.)

ಸೊಗಸಿಂದಲೈತಂದು ಸಾಷ್ಟಾಂಗವೆರಗಿ |
ಜಗಧೀಶ ಭವನಾಶ ಚೆನ್ನದಂಡೇಶ || ೮ ||
ಜಗದಾದಿಶಕ್ತರ ಪ್ರಮಥ ತಿಂಥಿಣಿಯೊಳ್ |
ಅಗಣಿತಾ ಶರಣರಿಗೆ ಅರ್ಥಿಯಿಂ ನಮಿಸೆ || ೯ ||

ವಚನ || ಆ ವೇಳೆಯಲ್ಲಿ ಜಗದೇವ ಮೊಲ್ಲೆಬೊಮ್ಮಣ್ಣಗಳು ಚೆನ್ನಬಸವಣ್ಣ ಮುಂತಾದ ಸಕಲ ಶರಣರ್ಗೆ ನಮಿಸಿ ಏನೆಂದು ಬಿನ್ನೈಸುತಿರ್ದರು.

**ಜಂಪೆ.**

ಎನ್ನ ಗುರು ಚೆನ್ನದಂ | ಡೇಶ ಶರಣರು ಎಲ್ಲ |
ಇನ್ನು ಕೇಳಿರಿ ಸ್ವಾಮಿ | ಎಮ್ಮ ಬಿನ್ನಪವ || ೧ ||

ಭಕ್ತದ್ರೋಹವ ನಾವು | ವ್ಯರ್ಥದಿಂ ನೋಡುತತಿ |
ಹೊತ್ತಾಗಿ ಮನೆಗೆ ನಡೆ | ದತ್ತ ಪೋಗಲ್ಕೆ * || ೨ ||

ಹೆತ್ತಮ್ಮ ನಮ್ಮನ್ನು | ಕುಸ್ತರಿಸಿ ಇಷ್ಟೊಂತ್ತು |
ಮತ್ತೇತಕಾಯಿತೆನೆ | ವಿಸ್ತರಿಸೆ ನಾವು * || ೩ ||

ಎಲವೆಲವೊ ಭಕ್ತದ್ರೋ | ಹವ ಕೇಳ್ದ ತನುವಿನ್ನು |
ನೆಲದೊಳಿರಲೇಕೆಂದು | ಅಳಿಯಲೆತ್ನಿಸಲು * || ೪ ||

ಆಕ್ಷಣವೆ ನಾವವಳ | ಕುಕ್ಷಿಗ್ಹಾಕಿದ ಅಲಗ |
ಕಕ್ಷ್ಯದೊಳು ಪಿಡಿಯಲ್ಕೆ | ಈಕ್ಷಿಸೆಮ್ಮನ್ನು * || ೫ ||

ಮಲಹರನ ಭಕ್ತರನು | ಕೊಲಿಸಿದಧಮನ ನೀವು |
ಇಳೆಯರಿಯೆ ಕೊಲುವನಕ | ಸಲೆ ನಿಮ್ಮ ಊಟ * || ೬ ||

ನೆಲದ ಮೇಲಲ್ಲದಲೆ | ಸಲೆ ಹರಿಯಣಂಗಳಲಿ |
ಸಲಿಸಲಾಗದು ಎಂದು | ಒಲಿದು ಪೇಳಿದಳು * || ೭ ||

ಅದರಿಂದ ನಾವುಗಳು | ಸದೆದು ಶಿವದ್ರೋಹಿಯನು |
ಮುದದಿ ಪಗೆಯನು ತೀರ್ಚಿ | ಸದಯರಾಗುವೆವು * || ೮ ||

ನಮ್ಮ ಶರಣರ ರಾಯ | ನೋಯ್ಸಿ ಕೊಲಿಸಿದನವನ |
ಕುಮ್ಮಿ ಕೆಡಹದೆ ಬಿಡೆವು | ಕೇಳಿ ಶರಣಾಳಿ † || ೯ ||

ಕೇಳಿ ರಾಕ್ಷಸದ ಘಾ | ಲ್ಗುಣ ಶುದ್ಧ ಕುಜನೌಮಿ |
ಮೇಲೆ ಸರಿರಾತ್ರೆ ಮೀ | ರಿದ ವೇಳೆಯೊಳಗೆ || ೧೦ ||

---

* ಈ ಪದ್ಯಗಳು (ಡ.) ಪ್ರತಿಯಲ್ಲಿ ಮಾತ್ರವಿದೆ.

† ಈ ಪದ್ಯ (ಒ, ಖ, ಜ, ಟ.) ಪ್ರತಿಗಳಲ್ಲಿಲ್ಲ.

ಕೋಲಾಹಲವ ಮಾಡಿ । ಕೊಲ್ಲುವೆವು ಬಿಜ್ಜಳನ ।
ಏಳಿ ಶರಣರು ಎಲ್ಲ । ಗೂಳಯುವ ಬೇಗ ॥ ೧೧ ॥
ತಡವಿಲ್ಲ ಮೂರುದಿನ । ದೆಡೆಯೊಳಗೆ ಬಿಜ್ಜಳನ ।
ಕಡಿದು ಧಾತ್ರಿಗೆ ಒಡಲ । ಕೆಡಹುವೆವು ಬಿಡದೆ ॥ ೧೨ ॥
ಹರಭಕ್ತ ಶರಣಸಭೆ । ಇರದೆ ಸರ್ವರು ನೀವು ।
ತೆರಳಿ ಉಳುವೆಯ ಮನೆಗೆ । ಭರವಸದಿ ಎಂದು ॥ ೧೩ ॥
ಹರಭಕ್ತ ದ್ರೋಹಿಯನು । ಇರಿದು ಧಾತ್ರಿಗೆ ಕೆಡಹಿ ।
ಬಿರುದಾಂಕರೆಂಬ ಕೀ । ರ್ತಿಯ ತಹೆವು ನಿಮಗೆ ॥ ೧೪ ॥

ವಚನ ॥ ಜಗದೇವ ಮೊಲ್ಲೆಬೊಮ್ಮಣ್ಣಗಳು ಎಂದ ಮಾತಿಗೆ, ಚೆನ್ನಬಸವಣ್ಣನವರು ಮಡಿವಾಳಯ್ಯಗಳ ಮುಖವಂ ನೋಡಿ ಏನೆನ್ನುತಿರ್ದರು.

**ಭಾಮಿನೀ ಷಟ್ಪದಿ.**

ತಂದೆ ಮಡಿವಾಳಯ್ಯ ನೀ ಕೇಳ್ ।
ಮುಂದೆ ನೃಪನನು ಕೊಂದ ನಿಮಿಷವೆ ।
ಮಂದಿ ಗಜ ತುರಗಾದಿ ಲಕ್ಷದ ಮೇಲೆ ದಳವೆದ್ದು ॥
ಬಂದು ಬಹುಕದನದಲಿ ಶರಣರ ।
ಹಿಂದು ಮುಂದಕೆ ಪೋಗಲೀಸರು ।
ಮುಂದೆ ಇದಕಿನ್ನೇನು ಯೋಚನೆ ಎಂದ ದಂಡೇಶ ॥ ೧ ॥
ಕೇಳಿ ಚೆನ್ನಣ್ಣಗಳೆ ಮುಂದಿ ।
ನ್ನೇಳನೂರೆಪ್ಪತ್ತಮರಗಣ ।
ಭಾಳಲೋಚನ ಭಕ್ತರರುವತುಮೂರು ಪ್ರಮಥಾಳಿ ॥
ಮೇಳವಿಪ ಹನ್ನೆರಡುಸಾವಿರ ।
ದೇಳಿಗೆಯ ಷಡುಸ್ಥಲದ ಮಹಿಮರ ।
ಕೋಳುಗೊಟ್ಟರೆ ಎನ್ನ ಬಿರುದಿಗೆ ಕೊರತೆಬಹುದೆಂದ ॥ ೨ ॥
ಮಾರಹರ ಶರಣರನು ಉಳುವೆಗೆ ।
ಸೇರಿಸದೆ ನಾ ಬಿಟ್ಟೆನಾದ[1] ರೆ[1]
ದೂರನಾಗುವೆ ಮಾರವೈರಿ[2] ಗೆ[2] ಮತ್ತೆ ಕೈಲಿರ್ಪ ॥
ವೀರಭದ್ರನ ರಣವಿಜಯ ಮಹ ।
ಧೀರಖಡ್ಗವು ಸಿಡಿದು ಪೋಗದೆ ।
ತೂರದೇ ಕೋಪಾಗ್ನಿಸುರಗಿಯದೆನ್ನ ಎದೆಯೊಳಗೆ ॥ ೩ ॥

---

1-1 ಡೆ (ಉ, ಎ, ಖ.) 2-2 ಯ (ಎ, ಖ, ಗ, ಡ, ಬ.)

ಪಾದದಲಿ ಕಟ್ಟಿರ್ಪ ಮಿಗೆ ಪರ ।
ವಾದಿ ಗಂಡನು ಎಂಬ ಬಾವುಲಿ ।
ಯಾದ ಬೊಂಬೆಯು ಎನ್ನ ಭಂಗಿಸಿ ಕಡೆಗೆ ಪೊರಮಡದೆ ॥
ಭೇದವಿಲ್ಲದೆ ಎನ್ನ ಕರ್ಣದ ।
ಲೋದಿ ಲಿಂಗವ ನೆನೆವ ಘಂಟೆಯ ।
ನಾದವದು ಶರಣರಿಗೆ ಧಿಃಕ್ಕೃತಿ ಎಂದ ಮಾಚಯ್ಯ ॥ ೪ ॥
ಇಂತು ವೀರತ್ವದ ಸಮರ್ಥದ ।
ಲಂತು ಬಿರುದನು ನೆನೆದು ಹರುಷದಿ ।
ಸಂತವಿಟ್ಟನು ಚೆನ್ನಬಸವನ ಮಾಚಿದೇವಯ್ಯ ॥
ಕಂತುಹರ ಶಿವಶರಣರೆಲ್ಲರು ।
ಮುಂತೆ ಉಳುವೆಗೆ ನಡೆವರೀತಿಗೆ ।
ಚಿಂತೆಬೇಡವು ಸಾಕ್ಷಿ ಕಲಿದೇವಯ್ಯ ನಮಗೆಂದ ॥ ೫ ॥
ಹರನ ಬಿರುದನು ಮುಂದು ಮಾ [1] ಡದೆ [1] ।
ನರರ ಬಲುಮೆಗೆ ಹಿಂವೆಯುಳಿದರೆ ।
ಮೊರೆವ ಕಾಲನ ಮುರಿವ ಬಿರುದಿನ ಮುರಿಗೆ ಕೈಯಲ್ಲಿ ॥
ಹಿರಿದು ಹಾಸ್ಯದಿ ಅಣಕವಾಡುತ ।
ಜರಿಯುತೆನ್ನನು ನಗುತ ಹೋಗದೆ ।
ನರಗುರಿಯು ಬಿಜ್ಜಳನ ಬಲವೆನಗಿದಿರೆ ಹೇಳೆಂದ ॥ ೬ ॥
ಧರೆಯೊಳಗೆ ಶಿವಮಹಿಮೆಯರಿಯದ ।
ಪರಮಪಾತಕರೆದೆಯ ಶೂಲವು ।
ಧುರಕೆ ಚಕ್ರವು ಕಾಲಭೈರವನೆಂಬ ಜವದಾಡೆ ॥
[2] ತರಿತರಿ [2] ದು ಬಿಜ್ಜಳನ ಬಲವನು ।
ಇರಿದು ಕರುಳನು ಹಿರಿಯ ಭೂತಕೆ ।
ಸರಿದು ದಿಗುಬಲಿಯಿಕ್ಕುವೆನು ಕೇಳೆಂದ ಮಾಚಯ್ಯ ॥ ೭ ॥
ಇಂತು ಬಿರುದಿನ ಉಗ್ಘಡದ ಬಲು ।
ಪಂಥವಾಡುತ ಮಾಚಿದೇವನು ।
ಸಂತವಿಟ್ಟನು ಚೆನ್ನದಂಡೇಶ್ವರನ ಹರುಷದಲಿ ॥
ಚಿಂತೆಯೇತಕೆ ಪುರದೊಳಿರುತಿಹ ।
ಕಂತುಹರ ಶಿವಶರಣಗಣರಾ ।
ದ್ಯಂತವನು ಪಯಣವನು ಮಾಡಿಸು ಎಂದ ಮಾಚಯ್ಯ ॥ ೮ ॥

1-1 ಡುವೆ (ಇ, ಎ, ಖ, ಗ, ಚ, ಜ.) 2-2 ತ್ವರಿತಹಿ (ಜ, ಖ, ಗ, ಟ.)

ಇಂದುಧರ ಶಿವಶರಣರೀಪರಿ |
ಯಿಂದ ಯೋಚನೆ ಮಾಡುತಿರಲಾ |
ನಂದದಲಿ ಪಡುಗಡಲನಿಳಿದು ದಿನೇಂದ್ರನೊಳಪೊಕ್ಕ ||
ಸಂಧ್ಯರಾಗವು ಸರಿದು ಪೋಗಲು |
ಬಂದು ತಮ ಧರಣಿಯನು ಮುಸುಕಲು |
ಅಂದಚಂದದಿ ದೀಪವೆಸೆ[1] ದವು[1] ಮಂದಿರಂಗಳಲಿ || ೯ ||

ವಚನ || ಆ ಸಮಯದಲ್ಲಿ ಜಗದೇವ ಮೊಲ್ಲೆಬೊಮ್ಮಣ್ಣಗಳು ಎದ್ದು, ಚೆನ್ನಬಸವಣ್ಣನವರು ಮುಂತಾದ ಸಮಸ್ತ ಗಣಂಗಳ ಮುಂದೆ ಮಡಿವಾಳಯ್ಯಗಳಿಗೆ ನಮಸ್ಕಾರವಂ ಮಾಡಿ, ಅವರ ಹಸ್ತದಿಂ ವಿಭೂತಿಯನ್ನಿಡಿಸಿಕೊಂಡು ಅವರು ಪಿಡಿದಿರ್ದ ಕಾಲಭೈರವನೆಂಬ ಜವದಾಡೆಯನ್ನು ಪಡೆದುಕೊಂಡು, ಪಂಜುಕಟ್ಟುವುದಕ್ಕೆ ಅಡಕವಾಯಿತೆಂದು ಸಮಸ್ತ ಗಣಂಗಳಿಗೆ ವಂದನೆಯಂ ಮಾಡಿ ಆಶೀರ್ವಾದವಂ ಕೊಂಡು ತಮ್ಮ ಮಠಕ್ಕೆ ಪೋಗಲು, ಇತ್ತ ಚೆನ್ನಬಸವಣ್ಣ ಮಡಿವಾಳಯ್ಯಗಳು ಗಣಂಗಳಿಗೆ ನಮಸ್ಕರಿಸಿ ಪಯಣವಂ ಪೇಳುತಿರ್ದ ರದೆಂತೆನೆ.

**ಜಂಪೆ.**

ಅನುಭಾವಮಂಟಪದ | ಘನಮಹಿಮ ಶರಣ ಸಂ |
ದಣಿಯಿಂದ ತನ್ನ ಅರ | ಮನೆಗೈದ ಮಂತ್ರಿ || ೧ ||

ದಂಡನಾಯಕ ಚೆನ್ನ | ದಂಡೇಶಮಂತ್ರಿ ಉ |
ದ್ದಂಡ ಬಂದನು ಶರಣ | ತಂಡದಿಂ ಮನೆಗೆ * || ೨ ||

ಮೋಳಿಗೆಯಮಾರಯ್ಯ | ಮುಸುಡಿಚೌಡಯ್ಯ ಸೊ |
ಡ್ಡಳ ಪ್ರಮಥಾದಿಗಳ | ಸಂಮೇಳದಿಂದ || ೩ ||

ಬಂದರರಮನೆಯ ಅನು | ಭಾವಮಂಟಪ ಸಾರೆ |
ಹೊಂದಿದಾ ಮಹಮ್ಮೇರು | ಮಂದಿರದ ಒಳಗೆ || ೪ ||

ಮೇರುಮಂದಿರದಲ್ಲಿ | ಈರಾರು ಸಾವಿರದ |
ಧೀರ ಷಡುಸ್ಥಲಬ್ರಹ್ಮ | ಮೂರುತಿಗಳೆಡೆಗೆ || ೫ ||

ಶ್ರೀ ಗುರುವೆ ಶರಣು ಷಡು | ಸ್ಥಲಬ್ರಹ್ಮಮೂರ್ತಿಗಳೆ |
ಈಗ ಉಳುವೆಗೆ ಪಯಣ | ಬೇಗೇಳಿ ಸ್ವಾಮಿ || ೬ ||

ಎಂದು ವಿಭೂತಿ ವಿ | ಳ್ಯವ ತಂದು ಮುಂದಿರಿಸಿ |
ವಂದಿಸುತ ಪಯಣವಾ | ಗೆಂದ ಚೆನ್ನಣ್ಣ || ೭ ||

---

1-1 ದುದು (ಎ, ಖ, ಗ, ಚ.) * ಈ ಪದ್ಯ (ಇ, ಎ, ಖ, ಗ, ಚ.) ಪ್ರತಿಗಳಲ್ಲಿಲ್ಲ.

ನಾಳೆ ಮಂಗಳವಾರ | ಕಾಳರಾತ್ರಿಲಿ ನೃಪನ |
ಬೀಳಲಿರಿವರು ಕದನ | ಹೇಳಲಳವಲ್ಲ || ೮ ||

ಈಗಲೇ ಸ್ವಾಮಿಗಳು | ಬೇಗ ಉಳುವೆಯಮನೆಗೆ |
ಸಾಗಿರಾಲಸ್ಯವಿರ | ಲಾಗದೆಂದೆನಲು || ೯ ||

ವಚನ || ಆ ಮಾತಿಗೆ ಷಟ್ಸ್ಥಲಬ್ರಹ್ಮಿಗಳೇನೆನ್ನುತಿರ್ದರು

**ಏಕತಾಳ.**

ನೀವೆ ಕಾಯವು ಪ್ರಾಣ | ನಾವಾದ ಬಳಿಕಿನ್ನು |
ಜೀವ ಕಾಯವು ಒಂದೆ | ಯಾವುದು ಬೇರೆ || ೧ ||

ಎಲ್ಲಮಾತೇನು ನೀ | ವೆಲ್ಲಿರೆಂದರೆ ನಾವು |
ಅಲ್ಲಿರುತಿಹೆವಲ್ಲ | ದಿಲ್ಲ ಬೇರೊಂದು || ೨ ||

ನೋಟ ನುಡಿಯಲ್ಲಡಗಿ | ಭೇಟಿ ಕೂಟದೊಳಡಗಿ |
[1] ಇಷ್ಟು [1] ನಮ್ಮನುಭವ | ನಾಟಿ ನಿಮ್ಮಲ್ಲಿ || ೩ ||

ಉತ್ತರವನು ದಾಂಟಿ | ಉಭಯ ಸ್ಥಲವ ಮೀರಿ |
ಮತ್ತೇಕೆ ಅನುಭಾವ | ದರ್ಥಿಯಾ ಸುದ್ದಿ || ೪ ||

ಇನ್ನೇಕೆ ನಮಗಿಲ್ಲಿ | ಚೆನ್ನದಂಡೇಶ್ವರ |
ನಿನ್ನ ಒಡನೈತಹೆವು | ಭಿನ್ನವಿಲ್ಲದಲೆ || ೫ ||

ಎಂದರಾ ದಂಡೇಶಾ | ನಂದದಿಂದವರಿಗೆ |
ವಂದಿಸಿ ಅಲ್ಲಿಂದ | ಮುಂದಕ್ಕೆ ನಡೆದ || ೬ ||

ಪಂಚಮುಖನ ಶರ | ಣರಿಗೆ ವಂಚಿಸಿ ಪೋಗೆ |
ಪಂಚಮಹ ಪಾತಕವು | ಎಂದ ಸಂಗಯ್ಯ || ೭ ||

ಸಂಗಯ್ಯನ ವಚನವ | ಹಿಂಗದೆ ಕಂಡು ಚರ |
ಲಿಂಗಮೂರ್ತಿಗಳೆಡೆಗೆ | ಹಿಂಗದೆ ಬಂದ || ೮ ||

ಸಾರಹೃದಯರು ಸಕ | ಲರು ಇರುತಿರುವ ವಿ |
ಚಾರಮಂಟಪ ಹೊಕ್ಕಾ | ಮಾರಾರಿಸುತನು || ೯ ||

ವಚನ || ಆ ಚೆನ್ನಬಸವೇಶ್ವರದೇವರು ವಿಚಾರಮಂಟಪವಂ ಪೊಕ್ಕು ಆ ಮಂಟಪದೊಳಗಿರ್ದ ಲಕ್ಷದಮೇಲೆ ತೊಂಬತ್ತಾರುಸಾವಿರ ವೀರಮಾಹೇಶ್ವರರಿಗೆ ನಮಸ್ಕರಿಸಿ, ವಿಭೂತಿ ವಿಳ್ಯವಂ ಮುಂದಿರಿಸಿ ಚೆನ್ನಬಸವೇಶ್ವರದೇವರು ಏನೆನ್ನುತಿರ್ದರು.

---

1-1 ಈಟು (ಅ, ಟ, ಡ, ದ, ಬ.)

**ಅಟತಾಳ.**

ಸತ್ಯಮೂರುತಿ ಸಕಲಗಣ ಮ । ಹತ್ತ ಕೇಳಿ ನಾಳಿನ ।
ರಾತ್ರಿಯಲಿ ಕೊಲ್ಲುವರು ಶರಣರು – ಪೃಥ್ವಿಪತಿಯ ॥ ೧ ॥
ಕೊಲ್ಲೆ ನೃಪತಿಯ ಕೋಟಿದಳವೆ । ದ್ದಲ್ಲಿ ಬಹಳ ಕದನವು ।
ನಿಲ್ಲಬಾರದು ಉಳುವೆಮುಹಮನೆ – ಗೆಲ್ಲ [1] ತೆರಳಿ [1] ॥ ೨ ॥
ಎಂದಮಾತಿಗೆ ಮೂರ್ತಿಗಳು ಇಂ । ತೆಂದರವರು ನಮುಗೆಯು ।
ಇಂದುಧರಸುತ ಕೇಳು ಮರ್ತ್ಯವು – ಹಿಂಗದಿನ್ನೂ ॥ ೩ ॥
ಹೋಗಿ ಗಿರಿಗಹ್ವರಗಳಲಿ ಶಿವ । ಯೋಗದಲ್ಲಿ ಇರುವೆವು ।
ಈಗ ನೀವು ಶಿವನ ಲೋಕಕೆ – ಹೋಗಿಬನ್ನಿ ॥ ೪ ॥
ಈಗ ನೀವು ಶಿವನ ಲೋಕಕೆ । ಹೋಗಿಬಂದಾ ಅಂದಿಗೆ ।
ಆಗ ನಿಮ್ಮೊಳು ಪೂಜೆಗೊಂಬೆವು – ಬೇಗ ಹೋಗಿ ॥ ೫ ॥
ಎಂದಮಾತಿಗೆ ನಗುತ [2] ಲೆಲ್ಲರು [2] । ವಂದಿಸುತಲಿ [3] ಅವರಿ [3] ಗೆ ।
ಮುಂದೆ ನಡೆದರು ಗಂಗೆವಾಲುಕ – ವೃಂದವೆಡೆಗೆ ॥ ೬ ॥
ಬಾಲಚಂದ್ರಮೌಳಿವರಸುತ ವಿ । ಶಾಲಮಂಟಪವನ್ನು ಹೊಕ್ಕನು ।
ಲೀಲೆಯಿಂ ಮೈಯಿಕ್ಕಿದನು ಗಂಗೆ – ವಾಲುಕರಿಗೆ ॥ ೭ ॥

ವಚನ ॥ ಆ ಗಂಗೆವಾಲುಕಸಮಸ್ತ ರುದ್ರರಿಗೆ ನಮುಸ್ಕರಿಸಿ ವಿಭೂತಿ ವಿಳ್ಯವಂ ಮುಂದಿರಿಸಿ, ನಮಗೆ ಉಳುವೆಯ ಮಹಾಮನೆಗೆ ಪಯಣವಾಯಿತು ಎಂದು ಚೆನ್ನಬಸವಣ್ಣ ಪೇಳಲು ಆ ಮೂರ್ತಿಗಳು ಏನೆನ್ನುತಿರ್ದರು.

**ಭಾಮಿನೀ ಷಟ್ಪದಿ.**

ಸತ್ಯಮೂರುತಿ [4] ಸಕಲ ಜಗದಧಿ [4] ।
ಕರ್ತನೇ ಕೇಳ್ ದಂಡನಾಯಕ ।
ಅತ್ತ ಶಿವಪುರಿಗೈದಿ ನೀವಿನ್ನಿತ್ತ ಬರುವನಕ ॥
ಹತ್ತು ಹತ್ತೂವೇಳೆ ಕಾಯುವ ।
ನೆತ್ತಿ [5] ಹೆವು ನೀವ್ಬಂದ ಬಳಿಕಲಿ [5] ।
ಮತ್ತೆ ನಾವುಂ ಪೂಜೆಗೊಂಬೆವು ಚಿತ್ತವಿಸಿ ನೀವು ॥ ೧ ॥
ಎಂದ ಶರಣರ ಚರಣಕಮಲಕೆ ।
ವಂದಿಸುತ ತಾವವರ ಕೈಯಲಿ ।
ಅಂದು ಕಳುಹಿಸಿಕೊಂಡು ಬಂದರು ಮುಂದೆ ಶರಣಜನ ॥
ವೃಂದವರುವತುನಾಲ್ಕು ವ್ರತತತಿ ।
ಯಿಂದ ನಡೆವಾಚಾರ ಪುರುಷರ ।
ಮಂದಿರದಲನುಭಾವಮಂಟಪವನ್ನು ಒಳಪೊಕ್ಕು ॥ ೨ ॥

---

1-1 ಸಾಗೀ (ಇ, ಎ, ಒ, ಖ, ಗ, ಚ, ಜ, ಟ.) 2-2 ಲಾಗ (ಉ, ಗ, ಚ.) 3-3 ನಡೆದರಲ್ಲಿ (ಬ.) 4-4 ಶರಣ ಲೋಕದ (ಎ, ಖ, ಗ, ಚ.) 5-5 ನೈತಂದಖಿಳ ಕಲಿಕೇಳ್ (ಗ, ಚ.)

ವಂದಿಸುತ ವಿಭೂತಿ ವಿಳ್ಯವ |
ಮುಂದಿರಿಸಿ ಆಚಾರಪುರುಷರಿ |
ಇಂದು ಉಳುವೆಯಮನೆಗೆ ಪಯಣವು ನಮಗು ನಿಮಗಲ್ಲಿ ||
ನಿಂದಿರದೆ ಶರಣರ ಸಮೂಹಾ |
ನಂದದಲಿ ಚಿತ್ತೈಸಿ ಎಂದರೆ |
ತಂದೆ ಶ್ರೀ ದಂಡೇಶ ಕೇಳೆಂದವರು ಪೇಳಿದರು || ೩ ||

ನೀವು ಶಿವಪುರಿಗೈದಿ ಮರಳೀ |
ಭೂವಳಯಕೈತರುವತನಕಂ |
ನಾವು ವ್ರತದಾಸೋಹ ಜಂಗಮಪೂಜೆ ಶಿವನೇಮ ||
ತೀವಿ ಗುರು ಚರತೀರ್ಥ ಶೇಷವ |
ಸೇವಿಸುತ ದಿನ ತೃಪ್ತರಪ್ಪೆವು |
ನೀವು ಚಿತ್ತೈಸೆಂದು ಪೇಳ್ದರು ಸಕಲ ಗಣನಿಕರ || ೪ ||

ಎಂದರವರಿಗೆ ನಮಿಸಿ[1] ಬಳಿಕ[1] |
ಲ್ಲಿಂದ ಹೊರಟರು ಶರಣ ಸೇಮದಿ |
ಬಂದು ಹೊಕ್ಕರು ಶರಣಸಂತತಿ ಗವಿಯ ಮಂಟಪವ ||
ಒಂದುಲಕ್ಷದಮೇಲೆ ತೊಂಬ |
ತ್ತಾರು ಸಾವಿರದಿಂದ ತೋರುವ |
ಇಂದುಧರಚರಲಿಂಗಿಗಳಿಗಾನಂದದಿಂ ನಮಿಸಿ || ೫ ||

ಹರುಷಮಿಗೆ ವಿಭೂತಿ ವಿಳ್ಯವ |
ನಿರಿಸಿ ಕರಗಳ ಮುಗಿದು ಪೇಳ್ದನು |
ಶರಣರಿಗೆ ಮನಮೆಚ್ಚೆ ಕರುಣವು ಹೆಚ್ಚೆ ಚೆನ್ನಣ್ಣ ||
ಗುರುವೆ ಗುರುವಿನ ಗುರುವೆ ಪರತರ |
ಗುರುವೆ ನಿಮ್ಮಯ ಭೃತ್ಯ ಸೇವೆಯು |
ಸರಿಯು ಇಲ್ಲಿಗೆ ನೀವು ಕೊಟ್ಟಿಹ ಮಣಿಹ ನಮಗೆಂದ || ೬ ||

ಮುಂದೆ ನೃಪತಿಯ ಕೊಂದ ಹೊತ್ತಿಗೆ |
ಮಂದಿ ತುರಗಗಳಿಂದಲುಪಟಳ |
ದಿಂದ ಕದನವು[2] ಉಳುವೆಮನೆಗಂ ಪಯ[2] ಣವಾಗುವದು ||
ಎಂದ ಮಾತಿಗೆ ಮರಳಿ ಮತ್ತಿಂ |
ತೆಂದರವರಾ ದಂಡಪತಿಗಂ |
ಮುಂದೆ ನಮಗೀ ಮರ್ತ್ಯಭೋಗವು ಚಂದ[3] ವೆಂದೆ[3] ನುತ || ೭ ||

---

1-1 ಅವರ (ಅ, ಇ, ಉ, ಒ, ಖ, ಜ.) 2-2 ನೀವು ಉಳುವೆಗೆ ಪ್ರಯಾ (ಇ, ಒ, ಗ, ಚ, ಜ, ಡ.) 3-3 ನಮಗೆ (ಎ, ಗ, ಚ.)

ಚೆನ್ನದಂಡೇಶ್ವರನೆ ಕೇಳ್ವಾ ।
ವಿನ್ನು ಕೆಲದಿನ ಮರ್ತ್ಯ ಲೋಕದಿ ।
ಭಿನ್ನವಿಲ್ಲದೆ ಪೂಜೆಗೊಂಬೆವು ಸಕಲ ಭಕ್ತರಲಿ ॥
ಮುನ್ನಧರಿಸಿದ ಕಂತೆಸಡಲಿದ ।
ರಿನ್ನು ಬೇರೆಯೆ ಧರಿಸಿ ಕಂತೆಯ ।
ನಿನ್ನ ನೆನಹಿಲಿ ಪೂಜೆಗೊಂಬೆವು ಪೋಗಿ ನೀವೆನಲು ॥ ೮ ॥

ಮುಂದೆ ನೀವೀ ಮರ್ತ್ಯ ಲೋಕಕೆ ।
ಬಂದಕಾಲಕೆ ಪೂಜೆಗೊಂಬೆವು ।
ಇಂದು ನಿಮ್ಮನಗಲಿದ ಚಿಂತೆಯು ಬೇರೆ ಚಿಂತಿಲ್ಲಾ ॥
ತಂದೆ ನಿಮಗೆನ್ನಂಥ ತೊತ್ತುಗ ।
ಳೊಂದುಲಕ್ಷವು ಕೋಟಿ ನಿಮಗುಂ ।
ಟೆಂದು ನಮಿಸಿದ ಚೆನ್ನದಂಡೇಶ್ವರನು ಅವರಡಿಗೆ ॥ ೯ ॥

ಮುತ್ತು ಮಾಣಿಕ ವಸ್ತು ವಾಹನ ।
ಮತ್ತೆ ಕನಕವು ಮಣಿಖಚಿತ ತೊಡ ।
ವಿತ್ತನವರಿಗೆ ಲಕ್ಷಸಂಖ್ಯೆಯ ಮನವು ದಣಿವಂತೆ ॥
ಕುಸ್ತರಿಸಿಯವರಡಿಗೆ ಎರಗುತ ।
ಲಿತ್ತ ಹೊರಟಲ್ಲಿಂದ ಬಂದನು ।
ಸತ್ಯಮೂರುತಿ ಗುರು ಪ್ರಭುವಿನ ಪ್ರಕಾಶಮಂಟಪಕೆ ॥ ೧೦ ॥

ಪಂಚಮುಖಸಮರೂಪ ಸಕಲ ಪ್ರ ।
ಪಂಚರಹಿತ [1] ರು [1] ಪರಮುಮುಕ್ತ [2] ರು [2] ।
ಸಂಚಿತಾರ್ಥವ ಸಲಿಸುವಂಥ ಮಹಾನುಭಾವಿಗಳು ॥
ಪಂಚವಿಂಶತಿ ತತ್ವಮಯ ಪಂ ।
ಚಾಕ್ಷರೀಶ್ವರದೇವರಂಘ್ರಿಗೆ ।
ವಂಚನಿಲ್ಲದೆ ಭಸಿತ ವಿಳ್ಯವನಿರಿಸಿ ವಂದಿಸಿದ ॥ ೧೧ ॥

ವಚನ ॥ ಆಗ ಚೆನ್ನಬಸವೇಶ್ವರದೇವರು ಪ್ರಭುದೇವರ ಪ್ರಕಾಶಮಂಟಪದೊಳಗಿರ್ದ ಪಂಚಾಕ್ಷರಿದೇವರಿಗೆ ನಮಸ್ಕರಿಸಿ, ವಿಭೂತಿ ವಿಳ್ಯವಂ ಮುಂದಿರಿಸಿ, ಸ್ವಾಮಿಗಳಿರಾ ನಮಗೆ ಉಳುವೆಮಹಾಮನೆಗೆ ಪ್ರಯಾಣವಾಯಿತು ದೇವರು ಚಿತ್ತೈಸುವುದೆನಲು ಆ ಮೂರ್ತಿಗಳು ಏನೆನ್ನುತಿರ್ದರು.

---

1-2 ನು (ಇ, ಒ, ಚ, ಜ, ಟ.)

**ಜಂಪೆ.**

ದೊರೆಚೆನ್ನದಂಡೇಶ । ಪರಮ ಭಕ್ತನೆ ಕೇಳು ।
ಹರಪುರಿಗೆ ನೀವೈದಿ । ತಿರುಗಿ ಬಹತನಕ ॥ ೧ ॥

ಧರೆಯ ನರರಿಗೆ ನಾವು । ಇರುವ ಮಠವಿನ್ನಾರಿ ।
ಗರಿಯಬಾರದು ಇಲ್ಲಿ । ಇರುತಿಹೆವು ನಾವು ॥ ೨ ॥

ಪಾಪಿಗಳಿಗೀ ಮಠವು । ರೂಪುದೋರದೆ ನಾವು ।
ಗೋಪ್ಯದಲ್ಲಿಹೆವು ಉ । ಮಾಪತಿಯ ದಯದಿ ॥ ೩ ॥

ವಿನಯದಿ ಬಸವರಸನ । ಘನಪರ್ವದಲಿ ನಮಗೆ ।
ಸನುಮತದಿ ಪ್ರಭುವಿತ್ತ । ಘನಪ್ರಸಾದವನು ॥ ೪ ॥

ಪರಮಪ್ರಸಾದ ಶಿವ । ಪುರಿಗೈದಿ ನೀವಿನ್ನು ।
ತಿರುಗಿ ಬಹತನಕವು ತೀ । ರದು ಹೋಗಿಬನ್ನಿ ॥ ೫ ॥

ಎಂದ ಮಾತಿಗೆ ಚೆನ್ನ । ದಂಡೇಶನವರಡಿಗೆ ।
ವಂದಿಸುತ ನಿಮ್ಮ ದಯ । ಕುಂದದಿರಲೆಂದು ॥ ೬ ॥

ತಮ್ಮ ಶಿವಪೂಜೆಯುಪ । ಕರಣಂಗಳೆಲ್ಲವನು ।
ಗಮ್ಮನವರಲ್ಲಿರಿಸಿ । ಪೇರ್ಮೆಯಿಂ ಪೊರಟ ॥ ೭ ॥

ವಚನ ॥ ಚೆನ್ನಬಸವಣ್ಣನವರು ಅಲ್ಲಿಂದ ಬಸವಣ್ಣನವರ ಜ್ಞಾನಪ್ರಕಾಶದ ಶಿವಪೂಜೆಯ ಮಂಟಪಕ್ಕೆ ಬಂದು, ಶಿವಪೂಜೆಯ ಸಂಗಮನಾಥ ದೇವರಿಗೆ ನಮಸ್ಕಾರವಂ ಮಾಡಿ ನಮಗೆ ಉಳುವೆಯಮಹಾಮನೆಗೆ ಪಯಣವಾಯಿತು ದೇವರು ಚಿತ್ತೈಸುವುದೆನಲು ಆ ಮೂರ್ತಿಗಳು ಏನೆನ್ನುತಿರ್ದರು.

**ತ್ರಿಪದಿ.**

ಚೆನ್ನದಂಡೇಶ ನೀವಿನ್ನು ಶಿವಪುರಿಗೈದಿ । ಮುನ್ನೆಲ್ಲ ಧರೆಗೆ—
ಬರುವನಕ ನೆಲಮಾಳಿಗೆ । ಲಿನ್ನು ಸುಖಮಿಹೆವು ಅನುಗಾಲ ॥ ೧ ॥

ನಿತ್ಯ ಶಿವಧ್ಯಾನದಲಿ ನೆತ್ತಿಯಮೃತವನುಂಡು । ತೃಪ್ತರಾಗಿಹೆವು—
ಯೋಗಮಾರ್ಗದಲಿಹೆವು ನೀವೇ । ಚಿತ್ತೈಸೆಂದು ನುಡಿದರು ॥ ೨ ॥

ಪುರಹರನ ಧ್ಯಾನದೊಳು ಪರಮ ಸಂತೋಷದೊಳು । ಇರುತಿಹೆವು ನಾವು—
ಎನಲವರ ಚರಣಕ್ಕೆ । ದೊರೆಚೆನ್ನಬಸವ ನಮಿಸಿದ ॥ ೩ ॥

ವಂದಿಸಿದನವರಿಗೆ ಚಂದದಲಿ ಚೆನ್ನಣ್ಣ । ಅಂದು ಬಸವನ—
ಶಿವಪೂಜೆಯುಪಕರಣವ । ತಂದು ಅವರಲ್ಲಿ ಇರಿಸಿದ ॥ ೪ ॥

ಅವರಲ್ಲಿ ಅವನಿರಿಸಿ ಅವರಿಂದ ಬೀಳ್ಕೊಂಡು । ತವಕದಿಂದೆದ್ದು—
ಅಕ್ಕನಾಗಮ್ಮನ । ಶಿವಪೂಜೆಯ ಗೃಹಕೆ ನಡೆದನು ॥ ೫ ॥

ಚೆನ್ನದಂಡೇಶ ಪ್ರಸನ್ನ ಮಂಟಪದ ಪ್ರ । ಸನ್ನ ಸೋಮೇಶ—
ಗೆರಗಿ ಪೇಳ್ದನು ನಮು । ಗಿನ್ನುಳುವೆಯಮನೆಗೆ ಪಯಣವು ॥ ೬ ॥

ದೇವ ಚಿತ್ತೈಸಿ ನೀವೀಗ ಈ ಲೋಕದ । ಹಾವಳಿ ಘನವು—
ಇರಸಲ್ಲವೆನಲವರು । ತಾವೆ ಇಂತೆಂದು ನುಡಿದರು ॥ ೭ ॥

ಗಂಗಾಂಬಿಕೆತಾಯಿ ಗಣಂಗಳ ಪರ್ವದಲಿ । ಲಿಂಗ ಪ್ರಸಾದ—
ಪ್ರಭುವಿತ್ತ ತವನಿಧಿಯು ಹಿಂಗದು ನೀವೇ ಗಮಿಸಿ ॥ ೮ ॥

ಮಾರಾರಿಲೋಕಕ್ಕೆ ಸೇರಿ ನೀವೆಲ್ಲರು ಈ । ಧಾರಿಣಿಗೆ ತಿರುಗಿ—
ಬಹತನಕ ತೀರದು ಪ್ರಸಾದವು । ನೀವೇ ಗಮಿಸಿ ॥ ೯ ॥

ನಾವು ನೆಲಮಾಳಿಗೆಯೋಳ್ ತಾವು ಮಾಡಿಕೊಂಡು । ಆವ ಮಾನವರು—
ಅರಿಯದಂತಿರುವೆವು । ನೀವೆ ಪೋಗೆಂದು ನುಡಿದಾರು ॥ ೧೦ ॥

ಮತ್ತಿದರ ಬಾಗಿಲು ಮರ್ತ್ಯದ ಪಾಪಿಗಳಿಗೆ । ಎತ್ತ ನೋಡಿದರು—
ಅರಿಯಬಾರದು ನೀವೇ । ಚಿತ್ತೈಸಿರೆಂದು ನುಡಿದರು ॥ ೧೧ ॥

ವಚನ ॥ ಅಲ್ಲಿಂದ ನೀಲಮ್ಮನವರ ನೆಲಮಾಳಿಗೆಯೊಳಗಣ ಜ್ಞಾನಪ್ರಕಾಶ ಮಂಟಪಕ್ಕೆ ಬಂದು, ಪಂಡಿತಾರಾಧ್ಯರ ಶಿಷ್ಯರಾದ ಆರಾಧ್ಯದೇವರಿಗೆ ನಮಸ್ಕರಿಸಿ, ನಮಗೆ ಉಳುವೆಯ ಮಹಾಮನೆಗೆ ಪ್ರಯಾಣವಾಯಿತು ದೇವರು ಚಿತ್ತೈಸುವುದೆನಲು, ಆ ಮೂರ್ತಿಗಳು ಏನೆನ್ನುತಿರ್ದರು.

**ಏಕತಾಳ.**

[1]ಪ್ರೇಮಿ ಶ್ರೀ[1] ಚೆನ್ನದಂ । ಡೇಶ ನಮಗೆ ನಿಮ್ಮ ।
ಸ್ವಾಮಿ ಪಂಡಿತಾರಾಧ್ಯ । ಪ್ರೇಮದಿಂ ನಮಗೆ ॥ ೧ ॥

ಉನ್ನತಾ ಮಹಿಮ ಪ್ರ । ಸನ್ನ ಪ್ರಸಾದವಂ ।
ಮುನ್ನಿತ್ತು ಪೋದರೈ । ನನ್ನಿಯಿಂ ನಮಗೆ ॥ ೨ ॥

ಹರನ ಕೈಲಾಸಕ್ಕೆ । ಹರುಷದಿಂ ನೀವೈದಿ ।
ತಿರುಗಿ ಬಹತನಕವು । ತೀರದೀ ಶೇಷ ॥ ೩ ॥

ಪಾಪಿಗಳಿಗೆ ನಾವು । ರೂಪುದೋರದೆ ಇಲ್ಲಿ ।
ಗೋಪ್ಯದಲ್ಲಿಹೆವು ಉ । ಮಾಪತಿಯ ದಯದಿ ॥ ೪ ॥

---

1-1 ಕೇಳಯ್ಯ (ಅ, ಒ, ಜ, ಟ, ಡ, ಬ.)

ಈಗಿಲ್ಲಿ ಶಿವಧ್ಯಾನ | ಯೋಗದಲ್ಲಿರುವೆವು |
ಬೇಗ ಸುಖದಿ ನೀವೆ | ಪೋಗಿಬನ್ನೆನಲು || ೫ ||

ವಚನ || ಆ ಆರಾಧ್ಯದೇವರಿಗೆ ನಮಸ್ಕರಿಸಿ, ಕಳುಹಿಸಿಕೊಂಡು ಬರುವ ಸಮಯದಲ್ಲಿ, ಮಡಿವಾಳಯ್ಯಗಳು ಚೆನ್ನಬಸವಣ್ಣನವರಕೂಡೆ ಏನೆನ್ನುತಿರ್ದರು.

**ತ್ರಿವುಡೆ.**

ಘನಮಹಿಮ ಚೆನ್ನಣ್ಣ ಶರಣರ | ಮನೆಮನೆಗೆ ಪೋಗೀಗ ಪೇಳ್ವಡೆ |
ಮನಸಿಜಾರಿಗೆ ತೀರುವುದೆ ಒಂದು – ವರುಷವಾದಡೆಯು || ೧ ||

ಸಾರಿದನು ಪಡುಗಡಲ ದಿನಪನು | ಆರು ಕಾಬರೆ ವೇಳೆಯಿಲ್ಲವು |
ಮೀರಿ ರಾತ್ರಿಯೊಳ್ಪರುವಕೆಲ್ಲರ – ಸಾರಿ ಕರೆಸುವದು || ೨ ||

ಗಿರಿಯು ನೆಲಬಿಲ ಜಪಸಮಾಧಿಯೊ | ಳಿರುವ ಮಹಿಮರ [1] ನೆಲ್ಲರನು [1] ಗಣ |
ಪರುವಕೀಗಾ ಕರೆಸುವದು ಲೇ – ಸೆಂದ ಮಾಚಯ್ಯ || ೩ ||

ಮಡಿವಳಯ್ಯನ ವಾಕ್ಯ ಮನಕಿದು | ಕಡುಹರುಷವೆಂದಾಗ ವೇಗದಿ |
ಒಡನೆ ಉತ್ತಣ್ಣಂಗೆ ನೇಮಿಸಿ – ನುಡಿದ ಚೆನ್ನಣ್ಣ || ೪ ||

ಹೋಗಿ ಉತ್ತಣ್ಣಗಳೆ ಶರಣರ | ಈಗ ಎಲ್ಲರ ಒಬ್ಬರುಳಿಯದೆ |
ಬೇಗ ಕರೆತಹುದೆನಲು ಪೋದನು – ಆಗ ಉತ್ತಣ್ಣ || ೫ ||

ಚೆನ್ನಬಸವೇಶ್ವರನು ಮಡಿವಳ | ಚೆನ್ನಸೊಡ್ಡಳಬಾಚಿರಾಜನು |
ಕಿನ್ನರೇಶ್ವರ ಮೋಳಿಗೆಯಮಾ – ರಯ್ಯ ಸಹವಾಗಿ || ೬ ||

ಎಲ್ಲ ಶರಣರು ಬರುವತನಕಲಿ | ಇಲ್ಲಿ ಪೋಗಿಯೆ ರುದ್ರಮುನಿಗಳ |
ಅಲ್ಲಿ ಅವರಿಗೆ ನಮಿಸಿ ಬಹೆವೆಂ – ದೆಲ್ಲ ತೆರಳಿದರು || ೭ ||

ಅಂ [2] ದು ರೇವಣ ಸಿದ್ಧಶರಣರ [2] | ಮಂದಿರದ ಚೆಂಗಲ್ವಮಂಟಪ |
ಬಂದು ಹೊಕ್ಕರು ರುದ್ರಮುನಿಗಳಿ – ಗೊಂದಿಸಿದರೆಲ್ಲ || ೮ ||

ಸ್ವಾಮಿ ಬಿನ್ನಹ ನಾವು ಉಳುವೆಯ | ಆ ಮಹಾಮನೆಗೀಗ ಪಯಣವು |
[3] ತಾಮಸಿಲ್ಲದೆ [3] ಬಿಜಯಗೈವುದು – ಪ್ರೇಮದಲಿ ನೀವು || ೯ ||

---

1-1 ರಾತ್ರಿಲಿ (ಅ, ಉ, ಎ, ಒ, ಖ, ಗ, ಚ, ಜ, ಡ, ಬ.) 2-2 ದರಾ ರೇವಣಸಿದ್ಧೇಶನ (ಅ, ಇ, ಎ, ಒ, ಟ, ಡ, ದ, ಬ,) 3-3 ಸ್ತೋಮಗೂಡಿಯೆ (ಗ, ಚ.)

ಎಂದು ಚೆನ್ನಣ್ಣಗಳು ಪೇಳಲು । ಎಂದರವರಿಗೆ ರುದ್ರಮುನಿಗಳು ।
ಮುಂದೆ ನೀವುಗಳರಿಯದ್ಯೋಚನೆ – ಇಂದು ನಮುಗುಂಟೆ ॥ ೧೦ ॥

ನೀವು ಹಿರಿಯರು ನಾವು ಕಿರಿಯರು । ಆವಭಾವವು ಎಮಗೆ ತಿಳಿಯದು ।
ದೇವ ಕೃಪೆಮಾಡೆಂದು ಬಿನ್ನಹ – ಗೈದ ಚೆನ್ನಣ್ಣ * ॥ ೧೧ ॥

ಹಿಂದೆ ಅನಿಮಿಷನ ಕಥಾಂತ್ರದಿ । ಬಂದು ಬಸವೇಶ್ವರನು ವಿಕ್ರಮು ।
ದಿಂದ ಮೂವತ್ತಾರು ವರುಷವು – ಆಗೆ ಐದಿದನು ॥ ೧೨ ॥

ಹಿಂದೆ ಕ್ರೋಧಿಯಲಾನು ಉದಯಿಸಿ । ಇಂದು ರಾಕ್ಷಸ ಶುದ್ಧದ್ವಾದಶಿ ।
ಬಂದಕಾರ್ಯವು ಸಾಧ್ಯ ದೇವರ – ಬರವು ಸಂಧಿಸಿತು ॥ ೧೩ ॥

ಇಂದಿಗಿಲ್ಲಿಯ ಮಣಿಹ ತೀರಿತು । ಮುಂದೆ ಪ್ರಭು ರಾಮಯ್ಯ ಪ್ರಮಥರ ।
ಒಂದಿನಲಿ ನಾ ಬಂದು ಪೂಜಿಪೆ –[1] ಮುಂದೆ ನಿಮ್ಮಡಿಯ[1] ॥ ೧೪ ॥

ಅದುವೆ ಕಾರಣ ದೇವ ನಿಮ್ಮಯ । ಪದಕೆ ಬಿನ್ನಹ ಮಾಡಬಂದೆನು ।
ಒದ[2] ವಿ[2] ನಲಿ ಚಿತ್ತೈಸಿ ಉಳುವೆಗೆ – ಪದುಳದಲಿ ನೀವು ॥ ೧೫ ॥

ವಚನ ॥ ಇಂತೆಂದು ಚೆನ್ನಬಸವಣ್ಣ ಪೇಳಲು, ಆ ಮಾತಿಗೆ ರುದ್ರಮುನಿ ದೇವರು ಏನೆನ್ನುತಿರ್ದರು.

**ಜಂಪೆ.**

ಇಂದುಧರಸುತ ನಿನ್ನ । ಒಂದಿನಲಿ ನಾವೀಗ ।
ಬಂದೇವು ಉಳುವೆಮನೆ । ಮಂದಿರದತನಕ ॥ ೧ ॥

ಅಲ್ಲಿಂದ ಕೈಲಾಸ । ಕೆಲ್ಲ ನೀವ್ಯೆದಿದರೆ ।
ನಿಲ್ಲದೇ ಬಹೆವು ನ । ಮ್ಮಲ್ಲಿಗೇ ನಾವು ॥ ೨ ॥

ಇಲ್ಲಿಂದ ಶ್ರೀಶೈಲ । ಕಲ್ಲೈದಿ ಗೋಪ್ಯದಲಿ ।
ನಿಲ್ಲುವೆವು ಗಿರಿಯೊಳಗೆ । ಎಲ್ಲರರಿಯದಲಿ ॥ ೩ ॥

ರೇವಣಸಿದ್ಧೇಶ । ದೇವರಿಗೆ ನೀಲಮ್ಮ ।
ಭಾವೆ ನೀಡಿದ ಭಿಕ್ಷ । ತೀವಿ ಪಾತ್ರೆ[3] ಯಲಿ[3] ॥ ೪ ॥

---

* ಈ ಪದ್ಯ (ಗ, ಚ.) ಪ್ರತಿಗಳಲ್ಲಿಲ್ಲ. 1-1 ನೆಂದ ಚೆನ್ನಣ್ಣ (ಇ, ಖ, ಟ.) 2-2 ಗಿ (ಚ, ಟ.) 3-3 ಯೊಳು (ಉ, ಒ, ಜ, ಟ, ಡ, ಬ.)

ಅಕ್ಷಯಾಪಾತ್ರೆ ಭಾ । ಳಾಕ್ಷಪ್ರಸಾದ ಶಿವ ।
ಮೋಕ್ಷವೆಂದಿತ್ತ ಕ । ಟಾಕ್ಷ ನಮ್ಮಯ್ಯ ॥ ೫ ॥

ಅಷ್ಟಮಹ ಸಿದ್ಧಿ ಬಹು । ದೃಷ್ಟಪ್ರಸಾದ ಸಂ ।
ತುಷ್ಟರಾಗಿಹೆವು ನಾ । ವೆಷ್ಟುದಿನಪರಿಯು ॥ ೬ ॥

ಮ[1] ತ್ತಿ[1] ನೆತ್ತಿಯ ಕೂಪ । ನಿತ್ಯ ಕ್ಷೀರಾಹಾರ ।
ತೃಪ್ತರಾಗಿಹೆವು ನಾವು । ಚಿತ್ತೈಸಿ ನೀವು ॥ ೭ ॥

ಮುಂದೆ ಕೈಲಾಸ ಧರೆ । ಎಂದೆಂಬ ಸಂದೇಹ ।
ಒಂದುಂಟೆ ಶರಣರಿಗೆ । ಇಂದುಧರಸುತನೆ ॥ ೮ ॥

ಶರಣರೆಲ್ಲರು ನೀವು । ಹರಪುರಿಗೆ ಚಿತ್ತೈಸಿ ।
ತಿರುಗಿ ಬಹತನಕ ಧರೆ । ಕರೆಕರೆಯಲಿಹುದು ॥ ೯ ॥

ಅಕೃತ್ಯ ಅನ್ಯಾಯ । ಹೊಕ್ಕು ತುರುಕರ ಬಾಧೆ ।
ದಿಕ್ಕಿಲ್ಲದೆ ಧರೆಯಜನ । ಕಕ್ಕಸದೊಳಿಹರು ॥ ೧೦ ॥

ನೀವು ಬರುವರೆ ಗುರುತು । ನಿಮ್ಮ ಭಂಡಾರದೊಳು ।
ತೀವಿರ್ದ ಶಾಸನವ ತೆಗೆದುದೇಸಾಕ್ಷಿ ॥ ೧೧ ॥

ತಾಂಬರದ ಶಾಸನವ । ತೆಗೆದು ಅರ್ಥವಮಾಡಿ ।
ಕುಂಭಿನಿಯೊಳದನು ಕೊಂ । ಡಾಡುವದೆ ಸಾಕ್ಷಿ ॥ ೧೨ ॥

ದುಷ್ಟ ಉತ್ತಮ ಮಧ್ಯ ಕ । ನಿಷ್ಠವೆಲ್ಲವು ಕೆಟ್ಟು ।
ಅಷ್ಟದಿಗ್ಜನರು ಕಂ । ಗೆಟ್ಟುದೇ ಸಾಕ್ಷಿ * ॥ ೧೩ ॥

ನಿಷ್ಠೆಯಿದು ದೃಷ್ಟ ನೀ । ವಿಷ್ಟು ಬರುವರೆ ಗುರುತು ।
ಅಷ್ಟದಿಕ್ಕಿಲಿ ಭಕ್ತಿ । ಹುಟ್ಟುವದೆ ಸಾಕ್ಷಿ * ॥ ೧೪ ॥

ಕಳೆಧರನ ಶರಣ ಶಿವ । ಕಳೆಯುಳ್ಳ ಮಹಿಮರು ।
ಇಳೆಯೊಳಗೆ ಅಲ್ಲಲ್ಲಿ । ಸುಳಿವುದೇ ಸಾಕ್ಷಿ ॥ ೧೫ ॥

ವಚನ ॥ ಮತ್ತೇನೆನ್ನುತಿರ್ದರು.

---

1-1 ತು (ಒ, ಖ, ಟ.) * ಈ ಪದ್ಯಗಳು (ಎ, ಚ.) ಪ್ರತಿಗಳಲ್ಲಿಲ್ಲ.

**ಅಟತಾಳ.**

ಮುಟ್ಟಿ ತನು ಮನ ಧನವ ಜಂಗಮ | ದಿಷ್ಟಬಯಕೆಯ [1] ಹರುಷದಿ [1] |
ಕೊಟ್ಟು ಶಿವನೊಳು ಬೆರೆವ ಶರಣರು – ಹುಟ್ಟುತಿಹರು || ೧ ||
ಹರನ ಕೈಲಾಸಕ್ಕೆ ಸಮನಾ | ಗಿರುವದಲ್ಲಿ ದಕ್ಷಿಣ |
ಹರಿವ ಶ್ರೀ ಕಾವೇರಿ [2] ಶಿವನಿಹ – ಗಿರಿಗೆ ಸಮನು [2] || ೨ ||
ಸತ್ಯಕಾಯಕ ನಿತ್ಯನೇಮವು | ಭಕ್ತಿ ಬಹಳ ದಕ್ಷಿಣ |
ಎತ್ತನೋಡಲು ಮೊತ್ತ ಮೊತ್ತ ವಿ – ರಕ್ತಮಯವು || ೩ ||
ಮಾಯ ಮರ್ದನ ಮದನರಿಪು ಸು | ಕಾಯರೆನಿಪ ಷಡುಸ್ಥಲ |
ರಾಯಜಂಗಮವಾವ ಕಡೆತ – ನ್ಮಯ [3] ವಹರು [3] || ೪ ||
ಈಶ ನಮ್ಮಯ ರೇವಣಸಿ | ದ್ಧೇಶ [4] ನೆಂದು [4] ದಕ್ಷಿಣ |
ದೇಶದಲಿ ತೋರುವನು **ಶಾಂತಮ - ಲ್ಲೇಶನಾಗಿ** * || ೫ ||

ವಚನ || ಕೇಳಿರೈ ಚೆನ್ನದಂಡೇಶ ಮಡಿವಾಳಯ್ಯ ಮುಂತಾದ ಸಕಲ ಗಣಂಗಳೆಲ್ಲ, ನಾವು ಶಾಂತಮಲ್ಲಿಕಾರ್ಜುನದೇವರ ಒಂದಿನೊಳಗೆ ಆಡುತ್ತಿದ್ದೇವೆ. ನೀವು ಹೋಗಿಬನ್ನಿ ಎಂದು ರುದ್ರಮುನಿದೇವರು ಪೇಳಲು, ಮಹಾಪ್ರಸಾದವೆಂದು ಚೆನ್ನಬಸವಣ್ಣನವರು ಏನೆನ್ನುತಿರ್ದರು.

1-1 ನೆಲ್ಲವ (ಉ, ಎ, ಗ, ಚ.) 2-2 ಸ್ಥಲವು ಹರನಿಪ | ಗಿರಿಗೆ ಸಮವು | (ಇ, ಖ, ಟ.)
3-3 ವಿಹುದು (ಇ, ಖ, ಡ.) 4-4 ತಾನು (ಒ, ಗ, ಚ, ಜ.) ; ನೀಗ (ಅ, ಇ, ಖ, ಟ, ಡ, ಬ.)

೧. * ಈ ಅಟತಾಳದ ಸಾರಾಂಶವೆಲ್ಲ ರಾ|| ಸಾ|| ಪಿ. ಜಿ. ಹಳಕಟ್ಟಿ ವಿಜಾಪುರ ಇವರು ಪ್ರಕಟಿಸಿರುವ "ಕಾಲಜ್ಞಾನದ ವಚನಗಳು" ಎಂಬ ಗ್ರಂಥದ ಅ೬ನೆಯಪುಟದಲ್ಲಿ ಸಂಪೂರ್ಣವಾಗಿ ಬಂದಿದೆ. ಇದೂ ಅಲ್ಲದೆ :—

೨. ಮೈಸೂರಿನಲ್ಲಿ ಮುದ್ರಿತವಾಗಿರುವ "ಶಿವಾತ್ರಗಣೇಶ ಪುರಾಣ ವಿಜಯ" (ಗದ್ಯ) ಭಾಗ ೨. ೨೬೯ ನೆಯ ಪುಟದಲ್ಲಿ ಶಿವಾತ್ರಗಣೇಶನು ಷಣ್ಮುಖನಿಗೆ ಕಾಲಜ್ಞಾನ ಬೋಧಿಸಿರುವುದೇ ನಂದರೆ: — .... ..........ಶಿವಧರ್ಮವನ್ನು ಮರೆತಿರುವಾಂತ್ಯಕ್ಕೆ ರೇಣುಕನು ಇಲ್ಲಿಗೆ ಆರನೂರು ವರುಷ ಕಳೆದು, ಕಲ್ಯಾಣಪಟ್ಟಣದ ಸರಹದ್ದಿನಲ್ಲಿ ಜನಿಸಿ, ದಕ್ಷಿಣ ದೇಶದಲ್ಲಿ ಶ್ರೀ ಗುರುಶಾಂತಮಲ್ಲೇಶನಾಗಿ ಶ್ರೀ ಬಸವಮಂತ್ರ ತತ್ವವನ್ನು ಬೋಧಿಸಿ, ಈ ಶಿವಲಿಂಗಾರೂಢರ ಜಂಗಮಲಿಂಗಪ್ರಾಣಿಯಾಗಿ, ಕಲಿತತ್ವಕ್ಕೆ ನಾಶಮಾಡುವ ವಿದ್ಯಾತತ್ವವನ್ನು ಪರಮಾಪ್ತರಾಗಿ ಬೋಧಿಸಿ, ಅಲ್ಲಿಗೆ ಸರ್ವೋತ್ತಮ ಜಗದ್ಗುರು ನಿರಾಭಾರಿ ಜಂಗಮವೇ ತನ್ನ ವೇದದೈವ ಗುರು ಜಂಗಮ ಪ್ರಾಣಲಿಂಗಿಶರಣನಾಗಿ ಮೆರೆವನು............ಮತ್ತಂ :—

೩. ಸದ್ಭಕ್ತರೂ ತ್ರಿಕಾಲಜ್ಞಾನಿಗಳೂ ಭೂತಭವಿಷ್ಯದ್ವರ್ತಮಾನಗಳನ್ನು ಕುಂತಲ್ಲೇ ಹೇಳುವಶಕ್ತರೂ ಏಕಲಿಂಗನಿಷ್ಠಾಪರರೂ ಷಟ್ಸ್ಥಲವೆ ಅಂಗವಾಗುಳ್ಳವರೂ ಶ್ರೀ ಗುರುಮಲ್ಲೇಶನ ಕರಕಮಲೋದ್ಭವರು ಆದ ಶ್ರೀ ಗುರುಭಿಕ್ಷದಾರ್ಯಮಹಾಸ್ವಾಮಿಯೇ ಮೊದಲಾದ ಶರಣ ಮಹಾತ್ಮರು, ಕಲ್ಯಾಣಪಟ್ಟಣದ ರೇವಣಸಿದ್ಧೇಶನೇ ಶಾಂತಮಲ್ಲೇಶನಾಗಿ ಬಂದಿರುವ ! ಇವನೇ ಗುರುಮಲ್ಲೇಶನೆಂದು - ಶಾಂತಮಲ್ಲೇಶನೆಂದೂ ಬಹು ಸಿದ್ಧಾಂತವಾಗಿ ನುಡಿದು ಹೋದ ವಿಷಯವೇ ಇದಾಗಿದೆ.

**ಇವರು ನೆಲಸಿರುವಸ್ಥಾನ ದೇವನೂರು, ನಂಜನಗೂಡು ತಾಲ್ಲೂಕ್, ಮೈಸೂರು ಜಿಲ್ಲಾ.**



ಸ್ವಲೀಲಾ ಮಹಾತ್ಮ ಶ್ರೀ ಗುರುಮಲ್ಲೇಶಸ್ವಾಮಿಯವರು, ದೇವನೂರು

# ಚೆನ್ನಬಸವೇಶ್ವರನ ಕಾಲಜ್ಞಾನ.

**ಕೊಂಚೆ ಜಂಪೆ.**

ಕೇಳಿರೈ ರುದ್ರಮುನಿದೇವ– ಕಲಿಯುಗದ । ಏಳಿಗೆಯ ಪ್ರಬಲದ ಇರವ ।
ಭಾಳಾಕ್ಷಭಕ್ತಸಂಜೀವ – ಮುಂದಿನ್ನು । ಹೇಳುವೆನು ಅದರ ಸಂಕಟವ ॥ ೧ ॥

ದೃಷ್ಟವಿದು ಕೇಳಿನ್ನ ತಂದೆ – ಕಲ್ಯಾಣ । ಪಟ್ಟದರಸುಗಳಿಲ್ಲ ಮುಂದೆ ।
ಸೃಷ್ಟಿಯೊಳು ಭಕ್ತಿಬರದಿಂದೆ – ಜನರೆಲ್ಲ । ನಷ್ಟವಾಗದೆ ಬಿಡರು ಮುಂದೆ ॥ ೨ ॥

ಇಳೆಗೊಡೆಯ ಬಿಜ್ಜಳನು ಮಡಿಯೆ – ಪಟ್ಟ । ಅಳಿಯ ಬಿಜ್ಜಳನು ಎಂಬವಗೆ ।
ಇಳೆಯಾಳ್ವ ಸುಖಚಿಂತೆಯೊಳಗೆ – ಅವನು । ಅಳಿದುಹೋಹನು ಅಷ್ಟರೊಳಗೆ ॥ ೩ ॥

ಹಿರಿಯಬಿಜ್ಜಳನ ದ್ರವ್ಯವನು – ಹೊ [1] ನ್ನು[1] । ಅರಮನೆಯ ಉಪ್ಪರಿಗೆಗಳನು ।
[2] ಮೆರೆ [2] ವ ಮುತ್ತಿನ ಗದ್ದುಗೆಯನು – ಅವನು । ಧರೆಯೊಳಗೆ ನಿಕ್ಷೇಪಿಸುವನು ॥ ೪ ॥

ಮರಣವಾಗಳಿಯಬಿಜ್ಜಳನು – ರಾಜ್ಯ । ಪರಿತಾಪರುದ್ರನಾಳುವನು ।
ಹಿರಿಯಬಸವನ ದ್ರವ್ಯವನ್ನು–ಸ್ಥಾಪ್ಯ । ಧರೆಯರಿಯದಂತೆ ಮಾಡುವನು ॥ ೫ ॥

ವಚನ ॥ ಮತ್ತೇನೆನ್ನುತಿರ್ದರು.

**ಏಕತಾಳ.**

ದೊರೆಬಸವೇಶನ । ಅರಮನೆಯ ಸಾಲಿನಲಿ ।
ಮೆರೆವ ಉಪ್ಪರಿಗೆಮೇ । ಲಿರುವ ಕಳಶಗಳು ॥ ೧ ॥

ಇನ್ನೊಂದು ಸಾಲಿನ । ಮುನ್ನೂರ ಅರವತ್ತು ।
ಹೊನ್ನಕಳಶಗಳ್ಮತ್ತು । ರನ್ನವೆಲ್ಲವನು ॥ ೨ ॥

ಹೊನ್ನು ರನ್ನವು ಚಿನ್ನ । ಉನ್ನತದ ಭಂ [3] ಡಾ [3] ರ ।
ಶೂನ್ಯಸಿಂಹಾಸನ । ವನ್ನು ಎಲ್ಲವನು ॥ ೩ ॥

ಧ್ಯಾನಸಮಾಧಿ ಪ್ರಭು । ವಿನ ನೆಲಮಾಳಿಗೆಯ ।
ದಿವ್ಯಮಾಣಿಕವಾದ । ಸಕಲ ವಸ್ತುಗಳ ॥ ೪ ॥

ಈಪರಿಯ ಸಕಲ ಭಂ । ಡಾರ ದ್ರವ್ಯವನೆಲ್ಲ ।
ರೂಪುಗಾಣಿಸದೆ ನಿ । ಕ್ಷೇಪಮಾಡುವನು ॥ ೫ ॥

ಪದುಳದಿ ರುದ್ರಪ್ರ । ತಾಪ ಧರೆಯನಾಳಿ ।
ಉದುರುವನವ ಹದಿ । ನೆಂಟು ವರುಷಕ್ಕೆ ॥ ೬ ॥

---

1-1 ನ್ನ (ಉ, ಎ, ಖ, ಗ, ಚ, ಟ.) 2-2 ಹಿರಿದು ಹೇರು (ಒ, ಜ,)
3-3 ಗಾ (ಅ, ಉ, ಎ, ಗ, ಚ, ಬ.)

ಏಳ್ನೂರು ವರುಷ ಕ । ಲ್ಯಾಣಪಟ್ಟಣವನ್ನು ।
ಆಳುವ ಅರಸು ಪ । ಟ್ಟಗಳಿಲ್ಲ ಮುಂದೆ ॥ ೭ ॥

ಆರುನೂರು ವರುಷ ಕ । ಲ್ಯಾಣಪಟ್ಟಣ ಗಜಾ ।
ರಣ್ಯವಾದೀತು ಕೇಳು । ಮಾರಸನ್ನಿಭನೆ ॥ ೮ ॥

ಧರೆಗೆ ಪ್ರತಾಪರುದ್ರ । ನೊರಗಿ ಪೋಗಲು ರಾಜ್ಯ ।
ತುರುಕರಾಳಿಕೆಯಿಂದ । ಕರಿಕರೆಯಲಹುದು ॥ ೯ ॥

ಹಂಪೆಸಿಂಹಾಸನದ । ಸೊಂಪೆಲ್ಲ ಬಯಲಾಗಿ ।
ಹಂಪೆಯ ಜಾಳಿಂದ್ರ । ಇಂಪುಳ್ಳ ಸ್ಥಲದಿ ॥ ೧೦ ॥

ಮೂರುಲಕ್ಷ [1] ದ [1] ಮೂವ । ತ್ತಾರು ಸಾವಿರ ವರುಷ ।
ಮಾರಾರಿ ಧ್ಯಾನದಿ । ಮಾಯ [2] ದಲ್ಲಿ [2] ಹರು ॥ ೧೧ ॥

ಜಡೆಮುಡಿಋಷಿಗಳು । ಪೊಡವಿ ಕಾಣದ ಹಾಗೆ ।
ಮೃಡನಡಿಧ್ಯಾನದಿ । ಅಡಗಿಕೊಂಡಿಹರು ॥ ೧೨ ॥

ನರಸಿಂಹನಾಮದ । ಅರಸು [3] ನರಬೇಂಟೆಹೋದ ।
ಧರೆಯೊಳು [3] ತೂಳಿಗರು । ಹಿರಿದು ಹೆಚ್ಚುವರು ॥ ೧೩ ॥

ವಚನ ॥ ಮತ್ತೀನೆನ್ನುತಿರ್ದರು.

**ಜಂಪೆ.**

ಹರಿಸಮಯ ಹೆಚ್ಚೀತು । ಹರಸಮಯ ಕೆಟ್ಟೀತು ।
ನರರಕ್ತ ಹರಿದೀತು । ಶ್ರೀಗಿರಿಯ ಸ್ಥಲದಿ ॥ ೧ ॥

ಹರಿಯ ಅವತಾರ ಶ್ರೀ । ಪರ್ವತವ ಮುಟ್ಟೀತು ।
ಧರೆಪಂಚ [4] ಸ್ಥಾನದಲಿ [4] । ಹರಣವಳಿದೀತು ॥ ೨ ॥

ಮತ್ತು ಮಿಕ್ಕುದು ಎಲ್ಲ । ಸತ್ತೀತು ಹಂಪೆಯಲಿ ।
ಉತ್ತರಕೆ ದಕ್ಷಿಣಕೆ । ಭಕ್ತಿ ತೊಲಗೀತು ॥ ೩ ॥

ಮತ್ತುತ್ತರವು ಟೆಂಕ । ಭಕ್ತಿ ಘನವಾದೀತು ।
ಉತ್ತರದಿ [5] ನಿಮ್ಮ ಪೂರ್ವ [5] । ಭಕ್ತಿ ಮೆರೆಯುವವು ॥ ೪ ॥

ಭಕ್ತರು ಸ್ಥಾಪ್ಯ ಸ । ದ್ಭಕ್ತರು ದಾಕ್ಷಿಣ್ಯ ।
ಭಕ್ತಿಯಲಿ ಅವರಿಲ್ಲ । ಮುಕ್ತಿಗೆಟ್ಟಾರು ॥ ೫ ॥

---

1-1 ವು (ಒ, ಗ, ಚ, ಜ.) 2-2 ಮೊಳಿ (ಒ, ಜ.) 3-3 ಬೇಂಟೆಯು ತಾನು । ಹೊರಟನು (ಗ, ಚ.) 4-4 ಸ್ಥಲದಲ್ಲಿ (ಒ, ಖ, ಚ, ಜ, ಟ.) 5-5 ಹರಶರಣ (ಉ, ಎ, ಗ, ಚ.)

ಶರಣರ್ವಚನವನೋದಿ । ಮರೆದು ಅದರರ್ಥವನು ।
ಹರನ ಜಂಗಮವ ಪರಿ । ಪರಿಯುಲೆಣಿಸುವರು ॥ ೬ ॥
ಶಿವಜಂಗಮವ ನೋಡಿ । ಶಿವನೆಂದು ಭಾವಿಸದೆ ।
ಭುವಿಯೊಳೊಂದೊಂದು [1] ಕುಲ [1] । ವಿವರಿಸುತಲಿಹರು ॥ ೭ ॥
ವಿಶುವಾಸಿಜಂಗಮಕೆ । ರಸಿರಸವ ನೀಡುವರು ।
ನಸುಮೂಸಿ ಶಿವನು ಬರೆ । ಕೊಸರಿ ಗಜರುವರು ॥ ೮ ॥
ನೂರಕೊಬ್ಬನು ಭಕ್ತ । ನೂರಕೊಬ್ಬನು ಶರಣ ।
ನೂರಕಲ್ಲದೆ ಇನ್ನು । ಬೇರಿಲ್ಲ ಜಗದಿ ॥ ೯ ॥

**ಗ್ರಂಥ** ॥ ಭಸ್ಮಾಂಗಮಾಗತಂ ದೃಷ್ಟ್ವಾ । ಶಯನಂ ಚ ಪರಿತ್ಯಜೇತ್ ।
ಕುಲೀನಂ ವಾ ಕುಲೀನಂ ವಾ । ಭೂತಿ ರುದ್ರಾಕ್ಷಧಾರಕಂ ॥ ೧ ॥
ದೃಷ್ಟ್ವಾಯಶ್ಶಯನೇಶೇತೇ । ಶ್ವಾನಯೋನಿಷು ಜಾಯತೆ ।
ಸದಾಚಾರೇಣ ಸದ್ಭಕ್ತಃ । ಸರ್ವ ಭಕ್ಷ್ಯಾದಿ ಭೋಜ್ಯಕಃ ॥ ೨ ॥

ಟೀಕು ॥ ಎಂಬುದಾಗಿ ಶಿವಜಂಗಮವಂ ಕಂಡರೆ ಆಕ್ಷಣವೇ ಎದ್ದು ನಮಸ್ಕಾರಮಂ ಮಾಡದೆ, ಇವನೇನು ಕುಲಜನೊ? ಅಕುಲಜನೊ? ಶುದ್ಧ ಜಂಗಮವಲ್ಲೆಂದು ಗರ್ವದಲ್ಲಿ ಕುಳಿತಿರ್ದನಾದರೆ, ಶ್ವಾನಯೋನಿಯಲ್ಲಿ ಹುಟ್ಟುವ ನೆಂಬುದು ಪುರಾತನರ ವಚನ.

## ಬಸವಾದಿ ಪ್ರಮಥರ ವಚನ ಮಹತ್ವ.

**ಅಟತಾಳ.**

ಧರೆಯೊಳಗೆ ನಮ್ಮಾದ್ಯರ್ವಚನವ । ಜರಿದು ನುಡಿದು ತಮ್ಮಯ ।
[2] ನ [2] ರಕವಿತ್ವವ ಮೆರೆವುದೀ ಕಲಿ– ತರದ ಗುಣವು ॥ ೧ ॥
ಹರನ ಶರಣರು ಒರೆದ ವಚನವ । ಒದಗಿದಂಥ ಜ್ಞಾನದಿ ।
ಒರೆದೆವೆಂಬರು ತಮ್ಮ ಗುಣವನು– ಮೆರೆವುತಿಹರು ॥ ೨ ॥
ನಮ್ಮ ಶರಣರು ನಮ್ಮರೀತಿಗೆ । ಆಗಲೆಂದು ಹರುಷದಿ ।
ನಿರ್ಮಿಸಿದರೆಂದರಿಯರೀ ಧರೆ– ಕರ್ಮಿಜನರು ॥ ೩ ॥
ಹಿಂದೆ ಹೇಳಿದ ಆದ್ಯರ್ವಚನವೆ । ತಂದೆ ತಾಯಿ ಎನ್ನದೆ ।
ಮುಂದೆ ಹಲಬರು ಬಿಂದುಜನಿತರೊ– ಲೆನ್ನುತಿಹರು ॥ ೪ ॥
ಇದು ಗುರುವು ಇದು ಲಿಂಗ ಜಂಗಮ । ಇದುವೆ ತೀರ್ಥ ಶೇಷದ ।
ವಿಧವ ತೋರಿತು ಆದ್ಯರ್ವಚನವು– ಮುದದಿ ಭಕ್ತರಿಗೆ ॥ ೫ ॥

1-1 ಪರಿ (ಇ, ಉ, ಎ, ಒ, ಗ, ಚ.) 2-2 ವ (ಇ, ಟ, ಡ, ಬ.)

ಧರೆಯೊಳಗೆ ನಮ್ಮಾಧ್ಯರ್ವಚನವು । ಪರಮಜ್ಞಾನವನ್ನೆ ತೋರಿತು ।
ಅರಿಷಡ್ವರ್ಗವ ಮದವ ಮತ್ಸರ – ವನ್ನು ನಿಲ್ಲಿಸಿತು ॥ ೬ ॥

ಸಪ್ತವ್ಯಸನ ಪಂಚೇಂದ್ರಿಯ ದಶವಾ । ಯುಗಳಿಗ್ಗರಿವ ಮನವನು ।
ಸ್ವಸ್ಥಿರಕೆ ನಿಲಿಸಿತ್ತು ಶರಣರ – ಸತ್ಯವಚನ ॥ ೭ ॥

ಅಂಗದಿಂದ್ರಿಯ ಕೆಡಿಸಿ ಷಡುಸ್ಥಲ । ಲಿಂಗದಿಂದ್ರಿಯ ಮಾಡಿತು ।
ಲಿಂಗಕರ್ಪಿಸಿಕೊಂಬುದನು ಮೂ – ರಂಗೀಕರಿಸಿತ್ತು ॥ ೮ ॥

ಧಾರಿಣಿಗೆ ನಮ್ಮಾಧ್ಯರ್ವಚನವು । ನೂರ ಒಂದುಸ್ಥಲವನು ।
ಮಿಾಗಿ ಇಹ ಪರದಲ್ಲಿ ನೆಲಸಿತು – ತೋರಿ ಶಿವನನುವ ॥ ೯ ॥

ಇನ್ನೂರ ಹದಿನಾರು ಲಿಂಗಕೆ । ತ[1] ನ್ನ[1] ಸರ್ವಾದಿಂದ್ರಿಯ ।
ಸನ್ನುತದಿ ಸಾಕಾರ ನಿಲಿಸಿತು ನಿ – ರಾಕುಳವನೆರೆದು ॥ ೧೦ ॥

ನಿತ್ಯ ನಿರ್ಮಲ ನಿರವಯವ ನಿಜ । ಸುಖದಿ ನೆಲಸಿ ತೋರುವ ।
ಸತ್ಯ ನಮ್ಮಾರಾಧ್ಯರ್ವಚನವ – ಮತ್ತೆ ನಂಬಿ ॥ ೧೧ ॥

ಕೇಳಿ ನಮ್ಮಾರಾಧ್ಯರ್ವಚನ ಭಂ । ಡಾರವನ್ನು ಪ್ರಭುಸಹ ।
ಏಳನೂರೆಪ್ಪತ್ತು ಅಮರಗ – ಣಂಗಳೆಲ್ಲ ॥ ೧೨ ॥

ಸಕಲ ಪ್ರಮಥರು ನೋಡಿ ಹಾಡಿ ಕೊಂ । ಡಾಡಿ ಚೆನ್ನಸಂಗನ ।
ಸುಖದೊಳಗೆ ಸ್ವಯಲಿಂಗಿಯಾದರು – ಮುಕ್ತಿ[2] ಪ[2] ಡೆದು ॥ ೧೩ ॥

ವಚನ ॥ ಇದೀಗ ನಮ್ಮ ಪುರಾತನರ ನಡತೆ, ಇದಲ್ಲದೆ ಮುಂದೆ ನಡೆವ ಕಲಿಯುಗದ ಪ್ರಪಂಚದ ನಡತೆ ಏನೆಂದು ಪೇಳುತಿರ್ದರು.

**ಜಂಪೆ.**

ಅಟಮಟದ ಭಕ್ತರು । ಸಟೆಕುಟಿಲ ಪೂಜಕರು ।
ನಿಟಲಾಕ್ಷಭಕ್ತಿ ಸಂ । ಕಟಕೆ ಮಾಡುವರು ॥ ೧ ॥

ಲಿಂಗದಾಟವು ಹೊರಗೆ । ಹೆಂಗಳಾಟವು ಒಳಗೆ ।
ಅಂಗನರ್ತನೆ ಪ್ರಾಣ । ಲಿಂಗವೆನುತಿಹರು ॥ ೨ ॥

ಹೊರಗೆ ಭಕ್ತಿಯ ಮಾಟ । ಒಳಗೆ ಕರ್ಮದ ಕೂಟ ।
ಹೊರಗೆ ಶೀಲದ ಮಾಟ । ಕಾಮದೆಡೆಯಾಟ ॥ ೩ ॥

ಹೊರಗೆ ಅನುಭವವಾಕ್ಯ । ಒಳಗೆ ಪ್ರಪಂಚಗಳು ।
ಗುರು ಹಿರಿಯರೊಳು ಭೇದ । ಪರುಕಿಪರು ವಾದ ॥ ೪ ॥

---

1-1 ನ್ನಿ (ಅ, ಇ, ಎ, ಒ, ಖ, ಗ, ಜ, ಟ, ಬ.) 2-2 ವ (ಅ, ಒ, ಚ, ಜ, ಟ, ಡ, ಬ,)

ಕರೆಕರೆಯ ಮಾಡುವರು । ಹಿರಿಯ ವ್ರತಕೆರಡೆಣಿಸಿ ।
ಕರವಿಡಿದ ಸತಿಯರನು । ಕಷ್ಟಕಿಕ್ಕುವರು * ॥ ೫ ॥

ಹರನ ಕೃಪೆಯಲಿ ಬಂದು । ನೆರೆದಂಥ ದ್ರವ್ಯವನು ।
ಚರಲಿಂಗಕರ್ಪಿಸದೆ । ಧರೆಯೊಳಡುಕುವರು ॥ ೬ ॥

ನರರ ಬೇಡುವರು ಗುರು । ಹಿರಿಯರಿಗೆ ನೀಡರು ।
ಕರವಿಡಿದ ಸತಿಸುತರ । ಹೊರೆದು ಬದುಕುವರು ॥ ೭ ॥

ಮನೆಗೆ ಜಂಗಮು ಹಸಿದು । ತನುಬಳಲಿ ಬರಲವರ ।
ಅನುಮಾನಿಸುತ ಮುಖವ । ಕನಲಿ ನೋಡುವರು ॥ ೮ ॥

ಲಿಂಗ ಅಂಗದಲಿರ್ಪ । ಸಂಕಟಕ್ಕಲ್ಲದಲೆ ।
ಲಿಂಗ ಜಂಗಮುಭಕ್ತಿ । ಇಂಗಿತಗಳಿಲ್ಲ ॥ ೯ ॥

ಸತ್ಯಜಂಗಮು ಬರಲು । ಪ್ರತ್ಯಕ್ಷ ಶಿವನೆಂದು ।
ಮತ್ತೆ ನಂಬಿಯು ಮಾಳ್ಪ । ಭಕ್ತಿ ತಮಗಿಲ್ಲ ॥ ೧೦ ॥

ತನು ಮನವ ಧನವನ್ನು । ಲಿಂಗಕರ್ಪಿಸಿ ಶಿವನ ।
ಘನವ ಹಾರೈಸುತಿಹ । ಮನವು ತಮಗಿಲ್ಲ ॥ ೧೧ ॥

ಭಕ್ತ ಭಕ್ತರಿಗೆ ಹಗೆ । ಮತ್ತೆ ಜಂಗಮಕೆ ಹಗೆ ।
ಮಿಥ್ಯದಿಂ ತಮ್ಮೊಳಗೆ । ನಿತ್ಯ ಹೋರಾಟ ॥ ೧೨ ॥

ಸೃಷ್ಟಿಯೊಳು ಷಡುಸ್ಥಲದ । ಕಟ್ಟಳೆಯನರಿಯದೆ ।
ಕೆಟ್ಟರುಭಯಸ್ಥಲದ । ಕಟ್ಟಳೆಯು ತಪ್ಪಿ ॥ ೧೩ ॥

ಮೃಡನ ಪ್ರಸಾದವೆಂ । ದೊಡನೆಲ್ಲ ಉಂಡಾರು ।
ಕಡೆಯಲವರವರ ಕುಲ । ಒಡೆದು ಆಡುವರು ॥ ೧೪ ॥

ವಚನ ॥ ಮತ್ತು ಏನೆನ್ನುತಿರ್ದರು.

**ಸಾಂಗತ್ಯ.**

ರುದ್ರಾವತಾರ ಶ್ರೀ ರುದ್ರಮುನಿಯೆ ಕೇಳು । ಕ್ಷುದ್ರೋಪದ್ರವ ನಾಶಕನೆ ॥
ಧರೆಯೊಳು ಭಕ್ತರುದ್ರೇಕದ ನಡತೆಯ । ನಿರ್ಧರಿಸುವರಳವಲ್ಲ ॥ ೧ ॥
ಕನ್ನಗಳ್ಳರು ಕಡುಪಾತಕ ಹೀನರು । ಮುನ್ನ ಗುರುವ ಕಾಣದಿಹರು ॥
ಪನ್ನಗಾಧರ ಶಿವಶರಣರನರಿಯದ । ರನ್ನು ಭಕ್ತರು ಎನ್ನಬಹುದೆ ॥ ೨ ॥
ಒಬ್ಬರ ಒತ್ತಿಗೆ ಒಬ್ಬರು ಬರುವರು । ಗುಬ್ಬಿ ಕಾಗೆಯ ಸ್ನೇಹದಂತೆ ॥
ತಬ್ಬುಬ್ಬಿಗೊಂಬರು ಹೊನ್ನು ಹೆಣ್ಣು ಮಣ್ಣು । ದುರ್ಭಾವದೊಳು ಮೈಯ ಮರೆದು ॥

* ಈ ಪದ್ಯ (ಅ, ಇ, ಖ, ಟ, ಬ.) ಪ್ರತಿಗಳಲ್ಲಿಲ್ಲ.

ವಿರಕ್ತರೆಂಬುವರು ದಾರಿಯ ತಪ್ಪುವರು। ಮೂರಾರಿನಡತೆಯನುಳಿದು ॥
ಸಾರಸದ್ಭಕ್ತರ[1] ಸದನವನು ಬಿಡುವರು[1] । ಸೇರುವರು ಧನಿಕರ ಮನೆಯ ॥ ೪ ॥
ತನು ಮನಬಳಲಿ ನೀಡುವ ಸದ್ಭಕ್ತರ । ಮನೆಗೆ ಹೋಗರು ಬಡವರೆಂದು ॥
ಮನಹೀನ ಪರಧನ ಘಾತಕ ಪಾತಕ । ಧನಿಕರ ಮನೆಯ ಕಾದಿಹರು ॥ ೫ ॥
ಕೊಡುವ ಕೊಂಬುವ ಠಾವಿಗೆಡೆ[2] ಯಾ[2] ಡಿ ಭಕ್ತರ । ಗೊಡವೆಯೊಳಗೆ ಸೇರಿಕೊಂಡು॥
ಮೃಡಶರಣರು ಮಹ ಘನವೀರಶೈವದ । ನಡತೆಯ ತಪ್ಪಿ ನಡೆಯುವರು ॥ ೬ ॥
ಮರುಳಶಂಕರ ಗುರುಪ್ರಭು ಸಿದ್ಧರಾಮನು। ಸಿರಿಯೊಳು ಮೈ ಮರೆಯದೆ ತಾವು ॥
ಪರಮಸೌಭಾಗ್ಯದೊಳಿರುತಲಿ ಈಶನ । ಬೆರೆದುದ ಕಂಡು ಅರಿಯರು ॥ ೭ ॥
ಸಂಗನಬಸವ ಸೌಭಾಗ್ಯ ಸುತೃಪ್ತಿಯ । ಜಂಗಮರಂತಿರಬೇಕು ॥
ಹಂಗಿಲ್ಲದ್ಹನ್ನೆರಡು ಸಾವಿರ ಷಡುಸ್ಥಲ । ಲಿಂಗಿಗಳಂತಿರಬೇಕು ॥ ೮ ॥
ಬಿಡದೆ ವೇಶಿಯೊಳಾಡಿ ಬಂದು ನೀಲಮ್ಮನ । ತೊಡೆಯೊಳು ನಿದ್ರೆಗೈಯುತಲಿ ॥
ಮೃಡಭಕ್ತಿ ಶಿವಲಿಂಗಧಾರಣೆ ಎಂದೆಂಬ । ಬಿಡುಗಡೆ ಮನವಿರಬೇಕು ॥ ೯ ॥
ಹಿಂಗದೆ ಬಸವನ ಅಂಗನೆತೊಡೆಯೊಳು । ಜಂಗಮ ನಿದ್ರಿಸುತಿರಲು ॥
ಜಂಗಮನಿದ್ರೆ ಕೆಟ್ಟೀತು ನುಡಿಸಿದರೆಂಬ । ಸಂಗನ ಬಸವನಂತಿಹುದು ॥ ೧೦ ॥
ಇಂತಪ್ಪ ಭಕ್ತಿಯಾದ್ಯಂತವನರಿಯದ । ಭ್ರಾಂತರಿಗೆ ನಿಜವುಂಟೆ ॥
ಸಂತತ ಶಿವನ ದಾಸೋಹಿಯಾಗದೆ ಹೀನ । ಚಿಂತೆಯರಿಗೆ ಭಕ್ತಿಯಹುದೆ ॥ ೧೧ ॥
ಹೊನ್ನು ಹೆಣ್ಣು ಮಣ್ಣು ತನ್ನವೆನ್ನುತ ನಂಬಿ । ಪನ್ನಗಧರಶರಣರನು ॥
ಮುನ್ನರಿಯದೆ ಶಿವನಂ ನೆರೆನಂಬದ । ಕುನ್ನಿಗಹುದೆ ನಿಜಮುಕ್ತಿ ॥ ೧೨ ॥
ಚರಮೂರ್ತಿ ಬಂದರೆ ಪರಮಹರುಷದೊಳು । ಗುರುವಿನ ಗುರು ಬಂದನೆಂದು ॥
ನೆರೆನಂಬಿ ಪೂಜಿಪ ಪರಮಸದ್ಭಕ್ತರು । ಧರೆಯೊಳಗವರು ಅಪೂರ್ವ ॥ ೧೩ ॥
ಹರನಿಷ್ಠೆ ಗುರುಸೇವೆ ಪರಮಜಂಗಮಭಕ್ತಿ । ಇರುವಂಥ ಸದ್ಭಕ್ತಜನಕೆ ॥
ವರಮುಕ್ತಿ ಪಾಲಿಸಿ ನೆರೆಪೂಜೆಗೊಂಬಂಥ । ಗುರುಮೂರ್ತಿ ಜಂಗಮವಪೂರ್ವ ॥೧೪॥
ಮೃಡಭಕ್ತ ಶರಣರು ಹಿಡಿದಂಥ ವ್ರತವನ್ನು । ಬಿಡೆನೆಂಬ ಛಲಡಾಂಕಬಿರುದು ।
ಕೊಡುವ ಪ್ರಸಾದಕ್ಕೆ ಹಿಡಿವ ಮಿಸಲುಮನ । ದೃಢಲಿಂಗ ಮಿಸ[3] ಲು[3] ಮನಕೆ ॥
ಲಿಂಗಕ್ಕೆ ಮಿಸಲು ಜಂಗಮವವರಿಗೆ । ಅಂಗ ಅರ್ಥವು ಪ್ರಾಣವನ್ನು ॥
ಹಿಂಗದೆ ಮಿಸಲಮಾಡಿಸಲಿಸುವಂಥ । ಲಿಂಗಸಂಗಿಗಳು ನಮ್ಮವರು ॥ ೧೫ ॥

1-1 ಬಿಡಿತಿಂದು ತೂರೋ (ಅ, ಒ, ಖ, ಬ.) 2-2 ಮಾ (ಬ.) 3-3 ಲಾ (ಒ, ಟ.)

ನುಡಿಯು ತಪ್ಪದೆ ನಡೆ ನಡೆಯು ತಪ್ಪದೆ ನುಡಿ । ನುಡಿ ನಡೆ ಎರಡಿರುವಂಥ ॥
ಮೃಡನಡಿ ನಿಮಿಷವು ಎಡಬಿಡದಿರುವರ । ಅಡಿಗೆ ಶರಣು ಚೆನ್ನಸಂಗ ॥ ೧೭ ॥

ವಚನ ॥ ಕೇಳಯ್ಯ ರುದ್ರಮುನಿಲಿಂಗವೆ ನಮ್ಮ ಪುರಾತನರ ಒಂದಿಗೆ ಇಂಥ ಸದ್ಭಕ್ತರ ತೋರಿಸಯ್ಯ ಸ್ವಾಮಿ! ರುದ್ರಮುನಿಲಿಂಗವೇ ಎಂದು ಅವರಿಗೆ ನಮಸ್ಕರಿಸಿ, ವಿಭೂತಿ ವಿಳ್ಯವಂ ಮುಂದಿರಿಸಿ, ಕಳುಹಿಸಿಕೊಂಡುಬಹ ಸಮಯದಲ್ಲಿ ಮಡಿವಾಳಯ್ಯಗಳು ಏನೆನ್ನುತಿರ್ದರು.

## ಮಡಿವಾಳಮಾಚಯ್ಯನ ಕಾಲಜ್ಞಾನ.

### ದ್ವಿಪದಿ.

ಕೇಳಿರೈ ಶರಣರು ಕೇಳಿ ನೀವೆಲ್ಲ ।
ಭಾಳಾಕ್ಷಪುರಿಗೈದಿ ಬರುವುದಕೆ ವರುಷ ॥ ೧ ॥

ಏಳನೂರೆಪ್ಪತ್ತು ಎಂತು ಸೈರಿಪುದು ।
ಕಾಳಹುದು ಶಿವಸಮಯ ಪ್ರಮಥರೇಳಿಗೆಯು * ॥ ೨ ॥

ಕಲಿಹೆಚ್ಚಿ ಲೋಕ ಕಂಗೆಡುವ ಸಮಯದಲಿ ।
ನಿಲುವದಿನ್ನಾವಪರಿ ನೀವಿಂದು ಕೇಳಿ ॥ ೩ ॥

ದವಸಧಾರಣೆ ತಗ್ಗಿ ಧರ್ಮ ನೆಲೆದಪ್ಪಿ ।
[1] ದೈವೀಕವೆಗ್ಗಳಿಸಿ [1] ಧನಪತಿಗಳಳಿದು ॥ ೪ ॥

ಪೊಡವಿರಾಜರು ಧರ್ಮನಡತೆಯಂ ಮಿೂರಿ ।
ಬಡಿದು ಬಾಧಿಸಿ ಧನ ಮಾನ್ಯವಂ ಸೆಳೆದು ॥ ೫ ॥

ಕಡುಭಂಗಕಿಕ್ಕಿ ಕಂಗೆಡುವ ಸಮಯದಲಿ ।
[2] ದೃ [2] ಢಭಕ್ತಿ ತಪ್ಪಿ ತಡಬಡಗೊಂಬ ಜನರು ॥ ೬ ॥

ಮೃಡನ ಶರಣರು ಮುಂದೆ ಪೊಡವಿಗೈತಂದು ।
ಕಡುಭಕ್ತಿ ಮಾಳ್ಪ ಸಡಗರವ ನೋಡುವರೆ ॥ ೭ ॥

ಇಂತಲ್ಲದೆ ಶರಣರಂತು ಅಗಲಿರ್ದ ।
ಚಿಂತೆಯಲ್ಲದೆ ಬೇರೆ ಚಿಂತೆಯಿನ್ನುಂಟೆ ॥ ೮ ॥

ಮಲೆಯು ಮಂಜೀರ್ಣಗಿರಿ ಗವಿ ಸರೋವರದಿ ।
ನೆಲ ಬಿಲದಜಪ ಸಮಾಧಿಯ ಶರಣರೆಲ್ಲ ॥ ೯ ॥

---

* ಈ ಅರ್ಧ ಪದ್ಯ (ಅ, ಎ, ಒ, ಟ, ದ, ಬ.) ಪ್ರತಿಗಳಲ್ಲಿಲ್ಲ. 1-1 ಅವನಿಪತಿಗಳು ಹೆಚ್ಚಿ (ಗ, ಚ.) 2-2 ಮೃ (ಒ, ಚ.)

ಬಲು ಎಚ್ಚರವು ಮುಂದೆ ಬಹಳ ಕಷ್ಟಗಳು ।
ಕಲಿಧರ್ಮ ಕರ್ಮವರಿಯದ ಪಾತಕರಿಗೆ ॥ ೧೦ ॥

ಒಲಿದು ನೀವಿರುವ ಮಠ ಬಿಲದ್ವಾರಗಳನು ।
ನೆಲೆಗಾಣಿಸದೆ ನೀವು ಗೆಲುವಿನಿಂದಿಹುದು ॥ ೧೧ ॥

ಮಲಹರನ ಧ್ಯಾನಮಂ ಮನಸಿನಲಿ ನಿಲಿಸಿ ।
ಕಲಿಯುಗದ ಭಕ್ತಿಯಂ ಚೆನ್ನಾಗಿ ನೋಡಿ ॥ ೧೨ ॥

ಮಲಹರನ ಶರಣರು ಮಹಿಮೆ ತೋರಿದರೆ ।
ಕಲಿದೇವ ಸಾಕ್ಷಿ ಕಡುಹಾಸ್ಯ ಮಾಡುವರು ॥ ೧೩ ॥

ವಚನ ॥ ಎಂದು ಮಡಿವಾಳಯ್ಯಗಳು ಪೇಳಲು, ರುದ್ರಮುನಿದೇವರು ಏನೆನ್ನುತಿರ್ದರು.

## ರುದ್ರಮುನಿಸ್ವಾಮಿಯ ಕಾಲಜ್ಞಾನ.

**ಏಕತಾಳ.**

ಇಂದುಧರನ ಚರ । ನಿಂದಕರ ಸಂಹಾರ ।
ತಂದೆ ಕೇಳಿರಿ ಎನ್ನ । ದೊಂದು ವಾಕ್ಯವನು ॥ ೧ ॥

ಕೇಳಿ ವಾಕ್ಯವ ಮಡಿ । ವಾಳದೇವರೆ ಹಿಂದೆ ।
ಹೇಳಿದ ಪ್ರಭುವೊಂದು । ಆಲೋಚನೆಯನು ॥ ೨ ॥

ಅಂದು ಪೇಳಿದ ಮಾತು । ಅಂದಿನವರಿಗೆಂದು ।
ನಿಂದಕ ಪಾತಕರು । ಎಂದರೇನಹುದು ॥ ೩ ॥

ಹಿಂದಣವರ ಮಾತು । ಹಿಂದಕ್ಕೆ ಹೋಯಿತು
ಮುಂದೆ ಎಲ್ಲಿಯದೆಂಬ । ನಿಂದಕಜನರು ॥ ೪ ॥

ಅಂಗಹೀನರು ಮೊಂಡ । ಮೂಕೊರೆಯ ಹೊಲೆಯರು ।
ಹಿಂಗದೆ ಭವಭವದಿ । ಭಂಗಪಡುತಿಹರು ॥ ೫ ॥

ಮೃಡನ ಶರಣರು ಮುಂದೆ । ಪೊಡವಿಗಿಳಿದು ಭಕ್ತಿ ।
ನಡೆಸಿ ಪೂರ್ವದರೀತಿ । ನಡೆವರು ಮುಂದೆ ॥ ೬ ॥

ದಂಡೇಶ ಶರಣರಾ । ಖಂಡ ವಚನದ್ರವ್ಯ ।
ಭಂಡಾರವನ್ನು ನಿಲಿಸಿ । ಮಂಡಲದೊಳಗೆ ॥ ೭ ॥

ನಮ್ಮ ಶರಣರು ಮುಂದೆ । ನಮ್ಮಂತಾಗಲಿ ಎಂದು ।
ನಿರ್ಮಿಸಿದರು ವಚನ । ಪೇರ್ಮೆಯಿಂ ಧರೆಗೆ ॥ ೮ ॥

[1] ಆದರೀಪರಿಯಲ್ಲಿ [1] | ಬೋಧಿಸಿ ಶರಣರಿಗೆ |
ಹಾದಿಯ ತೋರಿಸಿ | ಪೋದುದರಿಯರು ॥ ೯ ॥

ಭಕ್ತಿಹೀನರು ಮುಂದೆ | ಉತ್ತಮ ಶರಣರ |
ಅರ್ಥಿಯಿಂ ಕಾಣದೆ | ವ್ಯರ್ಥವಾಗುವರು ॥ ೧೦ ॥

ರೇವಣಸಿದ್ಧಯ್ಯ | **ಶಾಂತೇಶ್ವರನೆ** ಸಾಕ್ಷಿ |
ನೀವು ಮರ್ತ್ಯದಿ ಭಕ್ತಿ | ತೀವಿ ಮಾಡುವಿರಿ ॥ ೧೧ ॥

ವಚನ ॥ ಎಂದು ರುದ್ರಮುನಿದೇವರು ಚೆನ್ನಬಸವಣ್ಣ ಮಡಿವಾಳಯ್ಯ ಮುಂತಾದ ಶರಣರಿಗೆಲ್ಲಾ ಪೇಳುತ್ತಿರಲು, ಆ ಸಮಯದಲ್ಲಿ ಪಡಿಹಾರಿ ಉತ್ತಣ್ಣಗಳು ಬಂದು ರುದ್ರಮುನಿದೇವರು ಚೆನ್ನಬಸವಣ್ಣ ಮೊದಲಾದ ಶರಣರಿಗೆಲ್ಲಾ ಕರಮುಗಿದು, ವಿಭೂತಿ ವಿಳ್ಯವಂ ಮುಂದಿರಿಸಿ ಏನೆನ್ನುತಿರ್ದರು.

**ತ್ರಿವುಡೆ.**

ಗುರುವೆ ಬಿನ್ನಹ ಪುರದೊಳಿರುತಿಹ ಹಿರಿಯರೆಲ್ಲಾ ಬಂದರು |
ತ್ವರಿತಗಮನಿಸಿ ನಿಲ್ಲಲಾಗದು – ಹರುಷದಲಿ ನೀವು ॥ ೧ ॥
ಊರ ಅಡವಿಯ ಮಠದ ಹಿರಿಯರು | ಸೇರಿ ಗಿರಿ ಗವಿ ಜಪಸಮಾಧಿಯ |
ಮಾರವೈರಿಯ ಮಹಿಮ ಶರಣರು – ಎಲ್ಲರೈದಿಹರು ॥ ೨ ॥
ಗಿರಿಯು ನೆಲಬಿಲ ಜಪಸಮಾಧಿ [2] ಯ | ಹಿರಿಯ [2] ರೆಲ್ಲಾ ಬಂದರು |
ತ್ವರಿತ ನಿಮ್ಮನು ಬಿಜಯಗೈಸಿತಾ – ರೆಂದು ಕಳುಹಿದರು ‡ ॥ ೩ ॥
ಎಂದ ಮಾತಿಗೆ ಚೆನ್ನಬಸವನು | ಎಂದನಾ ಮಹಮಹಿಮರೆಲ್ಲರು |
ಬಂದರೇ ಅವರೆಲ್ಲಿ ಐದಾ – ರೆಂದು ಕೇಳಿದನು ॥ ೪ ॥
ಘನಗುರುವೆ ಚೆನ್ನಣ್ಣ ನಿಮ್ಮಯ | ಅನುಭವದ ಮಂಟಪದ ಬಳಸಿಲಿ |
ನೆನೆವರೊಂದು ಯೋಜನದವರೆಗೂ – ಕುಳಿತು ಇಹರು ॥ ೫ ॥
ಅಕ್ಕನಾಗಮ್ಮನವರ ಅರಮನೆ | ಯಿಕ್ಕೆಲದ ಬಳಸಿಲಿ ಮೂರ್ಗಾವುದ |
ಲೆಕ್ಕವಿಲ್ಲದೆ ಕುಳಿತಹರೆ ಕಿ – ಷ್ಕಿಂಧವಾಗಿ * ॥ ೬ ॥
ಕರ್ತೃ ಬಸವೇಶ್ವರನ ಅರಮನೆ | ಸುತ್ತ ಬಳಸಿಯೆ ಯೋಜನಾಂತರ |
ಮತ್ತೆ ಸಾಲದೆ ಮೂರ್ತಗೊಂಡಿಹರ್ – ಭಕ್ತರ್ಮಠಗಳಲಿ * ॥ ೭ ॥
ಏನಹೇಳಲಿ ಶರಣಜನ ಸ | ನ್ನಾಹ ಸಡಗರ ಸಕಲ ವಿಭವವ |
ಮಾನವರಿಗಳವಲ್ಲ ಮಹಿ [3] ಮರ [3] – ತಾನೆ ಶಿವಬಲ್ಲ ॥ ೮ ॥

---

1-1 ಅದುರಿ ಪದುರಿಯಲ್ಲ | (ಅ, ಉ, ಬ.) 2-2 ಯೊ | ಳಿರುವ (ಎ, ಒ, ಗ, ಚ, ಜ, ಟ.) ‡ ಈ ಪದ್ಯ (ಇ, ಖ.) ಪ್ರತಿಗಳಲ್ಲಿಲ್ಲ. * ಈ ಪದ್ಯಗಳು (ಗ, ಚ.) ಪ್ರತಿಗಳಲ್ಲಿಲ್ಲ. 3-3 ಮೆಯು (ಎ, ಗ, ಚ, ಟ.)

ಎಂದು ಉತ್ತಣ್ಣಗಳು ಪೇಳಲು । ಒಂದು ಭುಜ ಹನ್ನೊಂದು ಆಗುತ ।
ಬಂದ ಸಕಲರ ಒಂದಿನಲಿ ಚೆನ್ನ – ದಂಡನಾಯಕನು ॥ ೯ ॥

ಚೆನ್ನಬಸವನು ಮಡಿವಳಯ್ಯನು । ಕಿನ್ನರೇಶ್ವರ ಮೋಳಿಗಯ್ಯನು ।
ಉನ್ನತದ ಶ್ರೀ ರುದ್ರಮುನಿ ಗಣ – ರಿನ್ನು ನಡೆತರುತ ॥ ೧೦ ॥

ಬರುತ ಹರುಷದಿ ಚೆನ್ನಬಸವೇ । ಶ್ವರನ ಅರಮನೆ ಮುಂದೆ ಒಪ್ಪುತ ।
ಲಿರುವ ಜಂಗಮ ಲಕ್ಷ ತೊಂಬ – ತ್ತಾರುಸಾವಿರವು ॥ ೧೧ ॥

ಮತ್ತು ಅವರ ಬಳಸಿ ಜಂಗಮ । ಸುತ್ತ ನಾಲ್ಕು ಯೋಜನದವರೆ ।
ಗೆತ್ತ ನೋಡಲು ತೆರಪುಗೊಡದೆ – ಮೂರ್ತಗೊಂಡಿರಲು ॥ ೧೨ ॥

ನೋಡಿದನು ಚೆನ್ನಣ್ಣನವರಿಗೆ । ಮಾಡಿದನು ಬಿನ್ನಹವ ಸಲಿಸಲು ।
ಕೂಡೆ ಅಡಿಗೆಯ ಮಾಡತೊಡಗಿದ – ರಖಿಳ ಶರಣೆಯರು ॥ ೧೩ ॥

ಧರಣಿಗೀಶ್ವರ ಬಸವರಾಜನ । ತರುಣಿಗಂಗಾಂಬೆಯರು ಬೇಗದಿ ।
ಶರಣಸತಿಯರು ಕೂಡಿ ಅಡಿಗೆಯ – ಮಾಡತೊಡಗಿದರು ॥ ೧೪ ॥

ಪಾಯಸವು ಕಜ್ಜಾಯ ಪರಿಪರಿ । ಕಾಯಿ ತಾಳಿಲು ಕಚ್ಚಡಿಯು ಪಚ್ಚಡಿ ।
ಬಾಯರುಚಿಕರ ಪಾಕಮಾಡಿದ – ರಾಯತಾಕ್ಷಿಯರು ॥ ೧೫ ॥

ಅಡಿಗೆಯಾಯಿತು ಅಗ್ಗಣಿಯ ಕೊಡಿ । ಪೊಡವಿಗೀಶನ ಶರಣರಿಗೆ ಎನೆ ।
ತಡೆಯದೆ ತಂದಿತ್ತರಗ್ಗಣಿ – ಕೊಡ ಕೊಡದಿ ಮೊಗೆದು ॥ ೧೬ ॥

ಸತ್ಯಶರಣರು ಎಲ್ಲ ಹರುಷದಿ । ಹಸ್ತ ಪಾದವ ತೊಳೆದು ಒಳಗಡೆ ।
ಗರ್ಥಿಯಲಿ ಚಿತ್ತೈಸಿ ಕುಳಿತರು – ರತ್ನಪೀಠದಲಿ ॥ ೧೭ ॥

ಮಾಯಮರ್ದನ ಮದನರಿಪು ಸು । ಕಾಯರೆನಿಪ ಷಡುಸ್ಥಲ ।
ರಾಯಜಂಗಮವಾಯತದಿ [1] ಮೂ – ರ್ತವನು [1] ಮಾಡಿದರು ॥ ೧೮ ॥

ಜಡೆಮುಡಿಯು ವರ ಕಾಷಾಯಾಂಬರ । ಪಿಡಿದ ದಂಡವು ಕಂತೆ ಬಗೆಬಗೆ ।
ಮೃಡನ ರೂಪಿನತೀತಜಂಗಮ – ಕುಳಿತರದು ಲಕ್ಷ ॥ ೧೯ ॥

ಉಟ್ಟ ಚಲ್ಲಣ ದಟ್ಟಿ ಕಾಸೆಯು । ಇಟ್ಟ ರೇಖೆಯ ಭಸಿತ ಚಿಮ್ಮುರಿ ।
ದಿಟ್ಟ ಘನಲಿಂಗಿಗಳು ಕುಳಿತರು – ಲಕ್ಷವರೆ ಮೇಲೆ ॥ ೨೦ ॥

ಇಷ್ಟು ಅಲ್ಲದೆ ಪಟ್ಟಣದಲಿಹ । ಶ್ರೇಷ್ಠಭಕ್ತರು ಸಮಯಾಚಾರ [2] ದ ।
ಗಟ್ಟಿ [2] ಜಂಗಮ ಬಂದು ಕುಳಿತ – ರೆಷ್ಟೆಂದು ಹೇಳುವೆನು * ॥ ೨೧ ॥

---

1-1 ಹನ್ನೆರಡುಸಾವಿರ । ಮೂಹೂರ್ತ (ಇ, ಉ, ಒ, ಖ, ಗ, ಚ, ಜ, ಟ, ಡ.)
2-2 ಗ । ಳಷ್ಟು (ಖ, ಟ, ಡ.) * ಈ ಪದ್ಯ (ಎ, ಗ, ಚ.) ಪ್ರತಿಗಳಲ್ಲಿಲ್ಲ.

ಬಿಂದಿಗೆಯು ಪಾಸಾಲೆಯಗ್ಗಣಿ । ಗಂಧ ಅಕ್ಷತೆ ಧೂಪ ದೀಪವ ।
ತಂದು ಎಡೆಮಾಡಿದರು ಪುಷ್ಪವ – ಇಂದುವದನೆಯರು ॥ ೨೨ ॥

ಬಂದು ಜಂಗಮ ಮೂರ್ತಮಾಡಲು । ಇಂದುಧರಪೂಜೋಪಕರಣವ ।
ತಂದು ಎಡೆಮಾಡಿದರು ಬೇಗದಿ – ಚಂದ್ರವದನೆಯರು ॥ ೨೩ ॥

ವಚನ ॥ ಆ ವೇಳೆಯಲ್ಲಿ ಸಕಲ ಜಂಗಮಮೂರ್ತಿಗಳು ಶಿವಪೂಜೆಯಂ ತೀರಿಸಿಕೊಂಡುದಂ ನೋಡಿ, ಆನಂದದಲ್ಲಿ ಎಡೆಮಾಡುತಿರ್ದರದೆಂತೆನೆ.

**ಏಕತಾಳ – ಅರ್ಧರೇಕು.**

ಉಪ್ಪು ಹಪ್ಪಳ ಸಂಡಿ – [1] ಗು [1] ಪ್ಪಿನಕಾಯ ।
ತಪ್ಪದೆ ಎಡೆಮಾಡಿ – ಪುಷ್ಪಗಂಧಿಯರು ॥ ೧ ॥

ಬಾಳೆ ಬದನೆ ಹೀರೆ – ತಾಳಿಲ ನೀಡಿ ।
ಪಡವಲತಾಳಿಲು – ಕಡಲೆ ಪಚ್ಚಡಿಯು ॥ ೨ ॥

ಕುಂಬಳತಾಳಿಲು – ರಂಭೆಯರು ನೀ [2] ಡಿ [2]
ಗೆಣಸು ಶಾವೆಯ ದಂಟು – ಗುಳ್ಳದಕಾಯಂ ॥ ೩ ॥

ಚಂಬೆ ಕೂಗುರಿ ಕೊ – ತ್ತುಂಬರಿಯ ನೀಡಿ ।
ಸೂಸಲು ಒಗ್ಗರಣೆ – ಲೇಸುಳ್ಳ ಅಡಿಗೆ * ॥ ೪ ॥

ಅತಿರಸ ಚೆಲುಪಾಲು – ಹಿತವುಳ್ಳ ಒಡೆಯು ।
ಲೇಸುಳ್ಳ ಘೃತಪಾಕ – ಈಸನೀಡಿದರು । ॥ ೫ ॥

ಶಿತಿಕಂಠಶರಣರಿಗೆ – ಎಡೆಯ ಮಾಡಿದರು ।
ದೋಸೆಯು ಉಂಡಲಿಗೆ – ಬಿಸಿಯ ಗಾರಿಗೆಯು ॥ ೬ ॥

ಕಿಚ್ಚಡಿಯು ಕಡುರುಚಿ – ಪಚ್ಚಡಿಯನೀಡಿ ।
ಹೆಚ್ಚಿನ ರುಚಿಪಾಕ – ಎಡೆಯಮಾಡಿದರು ॥ ೭ ॥

ಪರಿಪರಿ ಕಜ್ಜಾಯ – ಪರಮಾನ್ನಗಳನು ।
ಸರಸಿಜಮುಖಿಯರು – ಭರದಿ ನೀಡಿದರು ॥ ೮ ॥

ರಾಜಾನ್ನ ದಿವ್ಯಾನ್ನ – ರಸರಸಾಯನವ ।
ರಾಜೀವಮುಖಿಯರು – ವಾಜಿಯಿಂ ನೀಡಿ ॥ ೯ ॥

---

1-1 ಗೆ ಉ (ಇ, ಎ, ಒ, ಖ, ಗ, ಚ, ಜ, ಟ.) 2-2 ಡೆ (ಅ, ಜ, ಬ.)
* ಈ ಪದ್ಯ (ಎ, ಗ, ಚ,) ಪ್ರತಿಗಳಲ್ಲಿಲ್ಲ.

ತುಪ್ಪ ಸಕ್ಕರೆ ಜೇನು – ಇಕ್ಷುಗಟ್ಟಿಗಳ |
ಸರ್ಪಭೂಷಣನವರಿ – ಗೊಪ್ಪದಿಂ ನೀಡೆ ॥ ೧೦ ॥

ವಚನ ॥ ಸಕಲ ಬೋನ ಪದಾರ್ಥಂಗಳಂ ಎಡೆಮಾಡಲು, ಆಗ ಚೆನ್ನಬಸವಣ್ಣನವರು ಸಕಲ ಗಣಂಗಳಿಗೆ ಕರಕಮಲಂಗಳಂ ಮುಗಿದು ಸ್ವಾಮಿಗಳಿರಾ! ಶರಣಾರ್ಥಿ ಲಿಂಗಾರ್ಪಿತವ ಮಾಡೆನ್ನಲು ಆ ಗಣಂಗಳು ಏನೆನ್ನುತಿರ್ದರು.

**ಜಂಪೆ.**

ಒನ್ನಿ ಚೆನ್ನಣ್ಣ ನೀ | ವಿನ್ನು ಅರ್ಪಿಸಿ ಮುಂದೆ |
ಚೆನ್ನಾಗಿ ಪ್ರಸಾದ | ವನ್ನು ಮಾಡೆನಲು ॥ ೧ ॥

ತಂದೆಗಳಿರ ನೀವು | ಮುಂದೆ ಅರ್ಪಿಸಿ ತೃಪ್ತಿ |
ಹೊಂದೆ ಹರುಷದಿ ಕೊಂಬೆ | ನಿಂದ ಶೇಷವನು ॥ ೨ ॥

ಎಂದ ಮಾತಿಗೆ ಶರಣ | ರೊಂದಾರು ಭುಜವಾಗಿ |
ಇಂದುಧರಗರ್ಪಿಸುತ | ಚಂದದಿಂ ಸಲಿಸಿ ॥ ೩ ॥

ಭರಿತವಾಗಿಯೆ ಸಲಿಸಿ | ಕರ ಜಿಹ್ವೆಗಳ ತೊಳೆಯೆ |
ಭರದಿ ವಿಳ್ಯವ ತಂದು | ಶರಣು ಮಾಡಿದನು ॥ ೪ ॥

ವಿಳ್ಯವನು ಕೈಕೊಂಡ | ಭಾಳಾಕ್ಷ ಶರಣರಿಗೆ |
ಪೇಳಿದನು ಚೆನ್ನಣ್ಣ | ಬಹಳ ವಿನಯದಲಿ ॥ ೫ ॥

ಗುರುಗಳಿರ ನಿಮ್ಮಸೇವೆ | ಸರಿನಮಗೆ ನೀವಿನ್ನು |
ಇರಬೇಡಿ ಚಿತ್ತೈಸಿ | ಸರಿಬಂದಕಡೆಗೆ ॥ ೬ ॥

ಇಂದುಧರಶರಣರಿರ | [1] ಸಂದೇಹಬೇಡಿನ್ನು[1] |
ಚಂದ್ರಧರ ಸಲಹುವನು | ಮುಂದೆ ನಿಮ್ಮನ್ನು ॥ ೭ ॥

ದೊರೆಚೆನ್ನದಂಡೇಶ | ಗುರುವೆ ನಿಮ್ಮನು ಅಗಲಿ |
ಇರಬಹುದೆ ಹಾ ಎಂದು | ಮರುಗಿದರು ಎಲ್ಲ ॥ ೮ ॥

ತಂದೆಗಳಿರ ನೀವು | [2] ಇಂದು ಚಿಂತಿಸಲೇಕೆ [2] |
ಬಂದು ಪೂಜಿಪೆ ನಿಮ್ಮ | ಮುಂದೆ ಎಲ್ಲರನು ॥ ೯ ॥

ನಾವು ಬಹತನಕ ಶಿವ | ಜೀವಶಾಸ್ತ್ರಗಳ ಅನು |
ಭಾವದಲಿ ಮೈ ಮರೆದು | ತೀವಿಕೊಂಡಿಹುದು ॥ ೧೦ ॥

1-1 ಇಂದು ಚಿಂತಿಸಲೇಕೆ | (ಗ, ಚ.) 2-2 ಸಂದೇಹವೇಕಿನ್ನು | (ಗ, ಚ.)

**ಮುಕ್ಕಣ್ಣ ಶರಣರಿರ** | ಅಕ್ಕರಿಂ ನಿಮಗೆಲ್ಲ |
ಇಕ್ಕಿ ಎರೆವಂಥ ಮನೆ | **ದಕ್ಷಿಣದೊಳಿಹುದು** || ೧೧ ||

ವಚನ || ಎಂದು ಚೆನ್ನಬಸವಣ್ಣ ಪೇಳಲು, ಒಬ್ಬರಿಗೊಬ್ಬರು ಶರಣ ಸಂಬಂಧಗಳಂ ಕೈಕೊಂಡು, ಆ ಚರಮೂರ್ತಿಗಳೆಲ್ಲ ತಮ್ಮ ಮನಬಂದಕಡೆಗೆ ಚಿತ್ತೈಸಲು, ಮುಂದೆ ಚೆನ್ನಬಸವಣ್ಣನವರ ಸಹಭೋಜನವಂ ಪೇಳ್ವೆನದೆಂತೆನೆ.

**ಅಟತಾಳ.**

ಶರಣರೆಲ್ಲರು ಸಲಿಸಿದೆಡೆಯೊಳು | ಅರಸಿ ತಂದು ಶೇಷವ |
ಭರದಿ ಹರಿವಾಣದಲಿ ಪೂಜಿಸಿ – ಕರವ ಮುಗಿಯೆ || ೧ ||

ಒಕ್ಕ ಶೇಷವನೆಲ್ಲ ಆಯಲು | ಸಿಕ್ಕಿತೊಂದು ಬಟ್ಟಲು |
ಅಕ್ಕರಿಂ ಪೂಜಿಸಲು ಬೆಳೆಯಿತು – ಮಿಕ್ಕು ಮೀರಿ || ೨ ||

ಬೆಳೆದ ಶೇಷಪ್ರಸಾದಸುತ್ತಲು | ಕುಳಿತರಾಗ ಹರುಷದಿ |
ಅಳಿಯ ಚೆನ್ನಣ್ಣಗಳು ಶರಣರ – ಬಳಗಗೂಡಿ || ೩ ||

ಸಂಗಮೇಶನ ಸುಪ್ರಸಾದಕೆ | ಹಿಂಗದೆಲ್ಲ ನಮಿಸುತ |
ಲಿಂಗಕರ್ಪಿಸಿ ಭೋಜ್ಯಗೊಂಡರು – ಸಂಗಡೆಲ್ಲ || ೪ ||

ಶರಣರೆಲ್ಲ ಸಲಿ [1] ಸುತಿರಲತಿ [1] | ಗಿರಿಯು ಬೆಳೆದರೀತಿಗೆ |
ಪರಮ ಶೇಷವು ಬೆಳೆಯುತಿರೆ ಕಂಡು – ಹರುಷವಾಗಿ || ೫ ||

ಪ್ರಮಥಗಣ ಶ್ರೀ ರುದ್ರಗಣ ಶಿವ | ಅಮರಗಣರು ಎಲ್ಲರು |
ವಿಮಲ ಸುಪ್ರಸಾದವನು ಸೇವಿಸಿ – ದಣಿದರರ್ಥಿಯಲಿ * || ೬ ||

ಪರಶಿವನ ಮಹ ಸುಪ್ರಸಾದವ | ಶರಣರೆಲ್ಲ ಸಲಿಸುತ |
ಕರಕರದು ಭೋಜ್ಯಗಳನಿತ್ತರು – ಹೊರೆಯ ಶರಣರಿಗೆ || ೭ ||

ಸಲಿಸುತಿರೆ ಚೆಲುಪಾಲು ಸಕ್ಕರೆ | ಕಲಸಿದಂತೇ ರುಚಿಕರ |
ಪಲಬಗೆಯ ಮಧುರೋಕ್ತಿ ಸ್ವಾದವು – ಒಲಿದು ಇಹುದು || ೮ ||

ಹರಪ್ರಸಾದವು ಗುರುಪ್ರಸಾದವು | ಚರಪ್ರಸಾದವು ಎನ್ನುತ |
ಶರಣಜನ ಕೊಂಡಾಡಿ ನುತಿಸುತ – ಹರಸಿತೆಲ್ಲಾ || ೯ ||

ವಚನ || ಆ ಮಹಾಪ್ರಸಾದವಂ ಮತ್ತೇನೆಂದು ಕೊಂಡಾಡುತಿರ್ದರು.

---

1-1 ಹರುಷದಿ (ಇ, ಒ, ಖ, ಟ.) * ಈ ಪದ್ಯ (ಎ.) ಪ್ರತಿಯಲ್ಲಿಲ್ಲ.

**ಜಂಪೆ.**

ಪ್ರಭುದೇವರಿತ್ತ ಪ್ರ । ಸಿದ್ಧಪ್ರಸಾದವಿದು ।
ವರಸಿದ್ಧರಾಮ ಒಲಿ । ದಿತ್ತ ಪ್ರಸಾದ ॥ ೧ ॥
ಷೋಡಶಗಣಂಗಳಾ । ಸೊಬಗಿನ ಪ್ರಸಾದವಿದು ।
ನೋಡೆ ತೇರಸರಿತ್ತ । ತೇಜ ಪ್ರಸಾದ ॥ ೨ ॥
ದಶಗಣಂಗಳ ಕರುಣ । ವೆಸೆವ ಪ್ರಸಾದವಿದು ।
ಒಸೆದು ಅಜಗಣ್ಣನ । ಐಕ್ಯಪ್ರಸಾದ ॥ ೩ ॥
ನಿಜಗುಣಯ್ಯಗಳಿತ್ತ । ನಿರುಪಮ ಪ್ರಸಾದವಿದು ।
ಮಝು ಭಾಪುರೆ ಚೆಂದಿ । ಮರಸರ ಪ್ರಸಾದ ॥ ೪ ॥
ಬಿಬ್ಬಿಬಾಚಯ್ಯಗಳ । ಬಿರುದಿನ ಪ್ರಸಾದವಿದು ।
ಹಬ್ಬವಿದು ಸೊಡ್ಡಳನ । ಹರುಷಪ್ರಸಾದ * ॥ ೫ ॥
ಕಿನ್ನರಯ್ಯಗಳಿತ್ತ । ಕೀರ್ತಿ ಪ್ರಸಾದವಿದು ।
ಉನ್ನತಪ್ಪಣ್ಣಗಳ । ಉಚಿತ ಪ್ರಸಾದ * ॥ ೬ ॥
ಮಹಾದೇವಿಯಕ್ಕಗಳ । ಮಹಾಪ್ರಸಾದವಿದು ।
ಸಹಸಿ ಮುಕ್ತಾಯಕ್ಕನ । ಮುಕ್ತಿ ಪ್ರಸಾದ * ॥ ೭ ॥
ನೀಲಮ್ಮನವರ ನಿ । ರ್ವಯಲ ಪ್ರಸಾದವಿದು ।
ಬಾಲೆಗಂಗಾಂಬಿಕೆಯ । ಭಕ್ತಿಪ್ರಸಾದ ॥ ೮ ॥
ಸಕಲ ಪುರಾತನರ । ಸಲಹುವ ಪ್ರಸಾದವಿದು ।
ಅಕಳಂಕಧರಭಕ್ತಿ । ಐಕ್ಯಪ್ರಸಾದ ॥ ೯ ॥
ಗುರು ಲಿಂಗ ಜಂಗಮದ । ಪರಮ ಪ್ರಸಾದ[1] ವನು[1] ।
ಶರಣರೆಲ್ಲರು ಸವಿದು । ಹರಸಿ ಪಾಡಿದರು ॥ ೧೦ ॥
ಹಾಡಿ ಕೊಂಡಾಡಿ ನಲಿ । ದಾಡಿ ಪಾಡುತಲಿ ।
ಕೂಡೆ ಒಬ್ಬರಿಗೊಬ್ಬ । ರೂಢಿಸರ್ಧಿಯಲಿ ॥ ೧೧ ॥

ವಚನ ॥ ಅಂತಪ್ಪ ಮಹಾಪ್ರಸಾದವ ಸಕಲ ಗಣಂಗಳು ಸಲಿಸಿದರೂ ತೀರದೆ, ಪರುಷದ ಗಿರಿಯಂತೆ ಬೆಳೆಯುತ್ತಿರಲು ಸಕಲ ಗಣಂಗಳು ನೋಡಿ ಏನೆನ್ನುತಿರ್ದರು.

---

* ಈ ಪದ್ಯಗಳು (ಅ, ಇ, ಉ, ಋ, ಟ, ಡ, ದ, ಬ,) ಪ್ರತಿಗಳಲ್ಲಿಲ್ಲ.

1-1 ವಿದು (ಉ, ಋ, ಡ, ಬ,)

**ದ್ವಿಪದಿ.**

ಶ್ರೀಗಿರಿಜಾವರಸುತನೆ ಶಿವಕುಮಾರಕನೆ ।
ಸಾಗರದೊಲು ಗಭೀರ ಸಕಲ ಗುಣಹಾರ ॥ ೧ ॥
ಆಗಮಾ ವೇದಾರ್ಥ ಅಮೃತವ ಸಾರ ।
ಯೋಗಿಜನಹೃತ್ಕಮಲ ವೇದ್ಯತತ್ಸಾರ ॥ ೨ ॥
ಭಕ್ತವತ್ಸಲ ಚೆನ್ನಬಸವದಂಡೇಶ ।
ಕರ್ತೃವೇ ನೀನ್ನೋಡಿ ಅರ್ಥಿ ಮಿಗಿಲಾಗಿ ॥ ೩ ॥
ಭಕ್ತರೊಂದಿಲಿ ಚೆನ್ನಬಸವದಂಡೇಶ ।
ಸುತ್ತ ಮುತ್ತಲು ಸಲಿಸಿ ಸೂರೆಮಾಡುತ್ತ ॥ ೪ ॥
ಷಡುಸ್ಥಲದ ಬ್ರಹ್ಮಿಗಳು ಪನ್ನೆರಡ್ಸಾಸಿರವು ।
ಕೊಡು ನಮಗೆ ಸುಪ್ರಸಾದ ಕಡುವೇಗ ಎನಲು ॥ ೫ ॥
ಮೃಡನ ಪ್ರಮಥರು ಅವರ ಮಡದಿಯರು ಎಲ್ಲ ।
ಕೊಡು ನಮಗೆ ಪ್ರಸಾದ[1] ಕಡುವೇಗ ಎ[1] ನಲು ॥ ೬ ॥
ಭಾಳಾಕ್ಷಶರಣ ಸದ್ಭಕ್ತರ ಸಮೂಹ ।
ಏಳನೂರೆಪ್ಪತ್ತು ಅಮರಗಣರೆಲ್ಲ ॥ ೭ ॥
ಕೇಳ ಮೇಳದಿ ಒಬ್ಬರೊಬ್ಬರುಣಿಸುತ್ತ ।
ಏಳಿ ನೀವೇಳಿ ತಾವೇಳಿ ಎಂದೆನುತ ॥ ೮ ॥
ಸಕಲ ಪ್ರಮಥರು ಸಲಿಸಿ ಸವೆಯದೆ ಇರಲು ।
ಪ್ರಕಟಿಸಿ ಬೆಳೆವ ಮಹಾಪ್ರಸಾದ ಮಹಿಮೆಯನು ॥ ೯ ॥
ಅಕಳಂಕಧರಬಲ್ಲನೆನ್ನಳವೆ ಪೇಳಲ್ ॥

ವಚನ ॥ ಅಂಥಾಮಹಾಪ್ರಸಾದವನ್ನು ಚೆನ್ನಬಸವಣ್ಣನವರು ನೋಡಿ ಏನೆನ್ನುತಿರ್ದರು.

**ಭಾಮಿನೀ ಷಟ್ಪದಿ.**

ಕಡಲನೊಕ್ಕುಡಿತೆಯನು ಮಾಳ್ಪರು ।
ಪಿಡಿವರಾ ಗಿರಿಗಳನು ನಖದಲಿ ।
ಪೊಡವಿಯಾಕಾಶವನು ತಾಳವ ಮಾಡುವಂಥವರು ॥
ಪಿಡಿದು ಬ್ರಹ್ಮಾಂಡಗಳನೆಲ್ಲವ ।
ಬಿಡದೆ ಮಾಲೆಯ ಮಾಡಿ ಧರಿಸುವ ।
ಕಡುಗಲಿ ಪ್ರಮಥಾದಿಗ[2] ಳಿಗಳವಡದೆ[2] ಮೀರಿದುದು ॥ ೧ ॥

1-1 ವಡನೆಯಂದೆ (ಎ, ಒ, ಖ, ಜ, ಟ, ದ, ಬ.)
2-2 ಳು ತನ್ನೊಡನೆ (ಅ, ಇ, ಉ, ಬ.)

ಅಣುವಿಗಣುವಾಗಿಹುದು ಮಹಘನ |
ಘನಕೆ ಘನವಾಗಿಹುದು ನೋಳ್ಪಡೆ |
ತ್ರಿಣಯಶರಣರ ಶೇಷವೆಂತುಟೊ ಶಿವ ಮಹಾದೇವ ||
ಪ್ರಣವವೇ ರೂಪಾದ ಈಶನ |
ಶರಣರೊಕ್ಕ ಮಹಾಪ್ರಸಾದವ |
ಎಣಿಕೆಯಿಲ್ಲದೆ ಸಲಿಸೆ ಮೀರಿತು ದಣಿಸಿತೆಲ್ಲರನು || ೨ ||

ಶಂಭುಸುತ ಶ್ರೀ ಚೆನ್ನಬಸವಾ |
ದಂಡನಾಯಕನಾ ಪ್ರಸಾದವ |
ತುಂಬಿ ಮೊರ ಹೆಡಗೆಯಲಿ ಕಳುಹಿದ [1] ನುಳಿದ [1] ಶರಣರಿಗೆ ||
ಕುಂಭಿನಿಯ ನೆಲಬಿಲ ಸರೋವರ |
ದಿಂಬುಗೊಂಡಿಹ [2] ಮಹಿಮ [2] ನಿಕರಕೆ |
ಸಂಭ್ರಮದಿ [3] ತಂದಿತ್ತರದ ಗಂಭೀರಭಾವದಲಿ [3] || ೩ ||

ಪಟ್ಟಣದ ಶಿವಭಕ್ತ ಮಹಗಣ |
ವಸ್ತು ಸಲಿಸಲು ತೀರದಿರುತಿರೆ |
ಎಷ್ಟು ಹೇಳುವೆ ತತ್ಪ್ರಸಾದದ ಮಹಿಮೆಯೇನೆಂಬೆ ||
ದೃಷ್ಟಮೂರುತಿ ಚೆನ್ನಬಸವನು |
ಅಷ್ಟು ಶೇಷವ ತನ್ನ ಕರದಲಿ |
ಇಷ್ಟುಮಿಲ್ಲದೆ ಬಯಲ ಮಾಡಿದನೇನ ಹೇಳುವೆನು || ೪ ||

ಹರನ ಕೈಲಾಸದಲಿ ಆ ಮಹ |
ಗಿರಿಜೆದೇವಿಯು ಪ್ರಮಥ [4] ಸಂಘ [4] ಕೆ |
ಹಿರಿದಿನೌತಣವೆಂದು ಮಾಡಿದಳಂದು ವಿನಯದಲಿ ||
ಪರಿಪರಿಯ ಶಾಕಾದಿ ಪಾಕವ |
ಗಿರಿಗಳಂತಿಹ ಭಕ್ಷ್ಯವೆಲ್ಲವ |
ಶರಣಬಾಲಕ ಸಲಿಸಿದಂದದಿ ಬಯಲ ಮಾಡಿದನು || ೫ ||

ವಚನ || ಆ ಸಮಸ್ತಗಣಂಗಳೆಲ್ಲ ಸಲಿಸಿ ಸವೆಯದೆ ಇದ್ದಂಥ ಮಹಾಪ್ರಸಾದವು ಚೆನ್ನಬಸವಣ್ಣನವರ ಹಸ್ತದಲ್ಲಿ ಐಕ್ಯವಾಗಲು, ಸಂತೋಷದಿಂದ ಸಮಸ್ತ ಗಣಂಗಳಾ ಸಮೂಹದೊಳಗೆ ಕುಳಿತಿಹ ಸಮಯದಲ್ಲಿ ಮಡಿವಾಳಯ್ಯಗಳು ಏನೆನ್ನುತಿರ್ದರು.

---

1-1 ರಿದ್ದ (ಅ, ಉ, ಬ.) 2-2 ಶರಣ (ಎ.) 3-3 ಶೇಷ ಪ್ರಸಾದವ ತುಂಬಿ ಯಲ್ಲರಿಗೇ (ಎ.)
4-4 ನಿಕರ (ಎ.)

**ಅಟತಾಳ.**

ಕೇಳಿರೈ ಚೆನ್ನಣ್ಣ ಬೆಳಗಿಗೆ । ವೇಳೆ ನಾಲ್ಕು ಘಳಿಗಿದೆ ।
ಏಳಿ ಶರಣರ ಜನಕೆ ಪಯಣವ – ಪೇಳಬೇಕು ॥ ೧ ॥

ಸತ್ಯಶರಣರ ಗೂಳ್ಯ ಸಾಗಲು । ಮತ್ತೆ ವೇಳೆ ಇಲ್ಲವು ।
ಹೊತ್ತುಗಳೆಯದೆ ಏಳಿ ಬೇಗದಿ – ಸ್ವಸ್ಥಿರದೊಳು ॥ ೨ ॥

ಎಂದ ಮಾತಿಗೆ ದಂಡನಾಯಕ । ನೆಂದ ಶರಣರೆ ಜಂಗಮು ।
ತಂದೆಗಳೆ ಚಿತ್ತೈಸಿ ನಿಮ್ಮನ – ಬಂದ ಕಡೆಗೆ ॥ ೩ ॥

ಬರುವ ಮಹಿಮರು ಬನ್ನಿ ಉಳುವೆಗೆ । ಬಾರದವರು ಮನಸಿಗೆ ।
ಸರಿಯು ಬಂದಾಕಡೆಗೆ ಸಾಗಿರಿ – ಹರುಷದಿಂದ ॥ ೪ ॥

ಎಂದು ಚೆನ್ನಣ್ಣಗಳು ಗಣರಿಗೆ । ವಂದಿಸಿಯೆ ತಾವ್ನಿಲ್ಲಲು ।
ಎಂದರಾ ಗಣಸಭೆಯು ಚೆನ್ನ – ದಂಡನಾಯಕಗೆ ॥ ೫ ॥

ಪರಮಭಕ್ತನು ಬಸವರಾಜನು । ಇರದೆ ಪೋಗೆ ಸಲಹುವ ।
ದೊರೆಯು ನೀವೆಂದಿರ್ದ್ವೆನ್ನುತ – ಮರುಗುತೆಲ್ಲ ॥ ೬ ॥

ಸ್ಮರಿಸಿ ಕೀರ್ತಿಸಿ ಸ್ತುತಿಸಿ ಪೊಗಳುತ । ಶರಣರೆಲ್ಲ ಹರಸಿದರ್ ।
ಹಿರಿಯ ಬಸವನ ಚೆನ್ನಬಸವನ – ಹರುಷದಿಂದ ॥ ೭ ॥

ವಚನ ॥ ಆ ಜಂಗಮಮೂರ್ತಿಗಳು ಕಳುಹಿಸಿಕೊಂಡು ಏನೆನ್ನುತಿರ್ದರು.

**ಸೀಸಪದ್ಯ.**

ಬಸವರಾಜನು ಚೆನ್ನಬಸವೇಶ ನಿಮ್ಮಂಥ ।
ರಸಿಕಭಕ್ತರು ನಮಗೆ ಭವಭವದಲಿ ॥ ೧ ॥

ಅಸಮಪ್ರಮಥರ ರಾಣಿವಾಸ ತಾಯಿಗಳಾಗಿ ।
ಶಶಿಧರನ ಶರಣರೇ ಬಂಧುವಾಗಿ ॥ ೨ ॥

ಬಿಸುಗೆಯಿಲ್ಲದೆ ಇಂಥ ಮಾಟಕೂಟವು ನಿತ್ಯ ।
ವಸುಧೆಯೊಳಗಾವಾಗ ಕುಸಿಯದಿರಲಿ ॥ ೩ ॥

ಶಶಿರವಿಯು [1] ಆಕಾಶ ಧರಣಿಯು [1] ಳ್ಳನಕ ।
ಸ್ವಸ್ಥಿರಚಿತ್ತ ನಿತ್ಯರಾಗೆಂದು ಹರಸಿ ॥ ೪ ॥

ಬಸವಪ್ರಮಥರನಗಲಿ ಹೋಗಲಾರದೆ ದುಃಖ ।
ವೆಸಗಿ ಹೋದರು ಚೆನ್ನಬಸವನಗಲಿ ॥ ೫ ॥

---

1-1 ಧರಣಿಯಾಕಾಶವು (ಅ, ಟ, ಡ, ಬ.)

ವಚನ ॥ ಆ ಶಿವಜಂಗಮಮೂರ್ತಿಗಳು ಗಣಂಗಳ ಕೈಯಿಂ ಕಳುಹಿಸಿಕೊಂಡು ತಮ್ಮ ತಮ್ಮ ಮನ ಬಂದಕಡೆಗೆ ಚಿತ್ತೈಸಲು, ಇತ್ತ ಚೆನ್ನಬಸವಣ್ಣನವರು ಸಕಲ ಪ್ರಮಥರೊಡಗೂಡಿ ತಮ್ಮ ಮಹಾಮೇರುವೆಯ ಅನುಭಾವ ಮಂಟಪದಲ್ಲಿ ಮೂರ್ತಗೊಂಡು, ಪಡಿಹಾರಿ ಉತ್ತಣ್ಣಗಳ ಕರೆದು ಏನೆನ್ನುತಿರ್ದರು.

**ಕೊಂಚೆ ಜಂಪೆ.**

ಕೇಳಿ ಉತ್ತಣ್ಣಗಳಿ ಬೇಗ – ಉಳುವೆಗೆ । ಏಳಬೇಕೀಕ್ಷಣದೊಳೀಗ ।
ಭಾಳಾಕ್ಷಗಣ ಪರ್ವಕೀಗ – [1] ಹೇರಿಸು [1] । ಹೇರಳಸೈಧನಗಳನು ಬೇಗ ॥ ೧ ॥

ಎನಲು ಉತ್ತಣ್ಣಗಳು ಪೋಗಿ – ಎತ್ತು । ಘನಕಂಬಿಕಾರರನುವಾಗಿ ।
ಧನಕನಕ ವಸ್ತು ಸಹವಾಗಿ – ನವರತ್ನ । ಚಿನಿಚಿನಾಂಬರ ಜವಳಿ ಮುಂತಾಗಿ ॥ ೨ ॥

ಅಕ್ಕಿ ಬೇಳೆಯು ಬೆಲ್ಲ ಘೃತವು – ಜೇನು । ಸಕ್ಕರೆಯು ಸಕಲ ವಸ್ತುವನು ।
ಚೊಕ್ಕಟದ ಗೋಧಿ ಕಡಲೆಯನು – ಉದ್ದು । ಲೆಕ್ಕವಿಲ್ಲದೆ ಹೇರಿಸಿದನು ॥ ೩ ॥

[2] ಉಪ್ಪು [2] ಹುಳಿ ಮೆಣಸುಗಳನು – ಒಳ್ಳೆ । ಹಪ್ಪಳ ಸಂಡಿಗೆಗಳನು ।
ಉಪ್ಪುಗಾಯ್ಗಳ ಕಂಬಿಗಳನು – ಬೇಗ । ತಪ್ಪದೆಲ್ಲವ ಹೇರಿಸಿದನು ॥ ೪ ॥

ಯಾಲಕ್ಕಿ ಶುಂಠಿ ಅರಿಸಿನವ – ಒಳ್ಳೆ । ಮೇಲಡಕೆ ಎಲೆ ಹೇರುಗಳನು ।
ಜಾಲ ಗುಗ್ಗುಳ ಧೂಪಗಳನು – ಹೇರಿಸಿದ । ಸಾಲುಕಾವಡಿ ಕಂಬಿಗಳನು ॥ ೫ ॥

ಹೀರೆ ಕೂಗುರೆ ಕುಂಬಳವನು – ಹಾಲು । ಸೋರೆ ಪಡವಲಕಾಯಿಗಳನು ।
ಮೀರಿದ ಬಾಳೆ ಬದನೆಯನು – ಮನಹಾರ । ಹೇರಿಸಿದ ಕಾಯ್ಪಲ್ಯಗಳನು ॥ ೬ ॥

ಹಲಸು ಕಿತ್ತಳೆ ನಿಂಬೆಗಳನು – ಒಳ್ಳೆ । ಸಲೆದ್ರಾಕ್ಷಿ ತೆಂಗು ಫಲಗಳನು ।
ಬೆಳಲು ದಾಳಿಂಬ ಫಣ್ಣಗಳನು – ಸಕಲ । ಫಳಿಲನೆಲ್ಲವ ಸಾಗಿಸಿದನು * ॥ ೭ ॥

ಎತ್ತು ಕಾವಡಿಯೊಂದು ಲಕ್ಷ – ಕಂಬಿಗಳ । ಹೊತ್ತ ಹೊರೆಯೊಂದೊಂದು ಲಕ್ಷ ।
ಎತ್ತು ಹೆಗಲಿನ ಹಸುಬೆಗಂಟು – ಹೆಡಗೆಯಲಿ । ಹೊತ್ತು ಸಾಗಿತು ಒಂದುಲಕ್ಷ ॥ ೮ ॥

ಸೂಪು ಸಕಲಾತಿ ಕುತ್ನಿಗಳ – ಗದ್ದುಗೆಗೆ । ಒಪ್ಪುವ ರತ್ನಗಂಬಳಿಗಳ ।
ಲೇಪನದ ಪುನುಗು ಜವ್ವಾಜಿ – ಕಸ್ತೂರಿಯ । ಪರಿಮಳಂಗಳ ಸಾಗಿಸಿದನು ॥ ೯ ॥

ಕೊಡಪಾನ ಕೊಪ್ಪರಿಗೆಗಳನು – ಬೆಳ್ಳಿ । ಅಡ್ಡಣಿಗೆ ಹರಿವಾಣಗಳನು ।
ಕುಡಿನೀರು ಚೆಂಬುಗಿಂಡಿಗಳ – ಸಾಗಿಸಿದ । ಕಡೆಯಿಲ್ಲದ ವಸ್ತುಗಳನು ॥ ೧೦ ॥

ರನ್ನ ಚಿನ್ನದ ಹೇರುಗಳನು – ಇಡುವಂಥ । ಹೊನ್ನು [3] ರತ್ನ [3] ದ ತೊಡಿಗೆಗಳನು ।
ಇನ್ನು ಅಧಿಕಾರಭಕ್ತರನು – ಹೇರುಗಳ । ಬೆನ್ನಹಿಂದೆಯೆ ಸಾಗಿಸಿದನು ॥ ೧೧ ॥

1-1 ಕಳುಹು (ಎ.) 2-2 ತುಪ್ಪ (ಉ, ಖ, ಡ, ಬ.)
* ಈ ಪದ್ಯ (ಒ.)ಪ್ರತಿಯಲ್ಲಿಲ್ಲ. 3-3 ಚಿನ್ನ (ಅ, ಡ, ಬ.)

ವಚನ || ಆಗ ಉತ್ತಮಗಳು ಸಕಲ ಸಾಮುಗ್ರಿಗಳನ್ನೆಲ್ಲಾ ಸಾಗಿಸಿ ಬಂದು ಚೆನ್ನಬಸವಣ್ಣನೊಡನೆ ಪೇಳಲು, ಚೆನ್ನಬಸವಣ್ಣ ಮಡಿವಾಳಯ್ಯ ಮುಂತಾದ ಗಣಂಗಳೆಲ್ಲಾ ಬಂದು ಸಾಮುಗ್ರಿಯನ್ನೆಲ್ಲಾ ಊರಬಾಗಿಲ ದಾಂಟಿಸಿ ಬಾಗಿಲವರ ಕೂಡೆ ಸಂಗಮೇಶ್ವರನಲ್ಲಿ ಗಣಪರ್ವವೆಂದು ಹೇಳಿ, ಬರುವಂಥಾ ವೇಳೆಯಲ್ಲಿ ಅಸ್ತಮಯವಾಗಲು ಚೆನ್ನಬಸವಣ್ಣನವರು ಬಿಜ್ಜಳನ ಓಲಗಕ್ಕೆ ಪ್ರಯಾಣವಾದರದೆಂತೆನೆ.

**ತ್ರಿವುಡೆ.**

ಹರನ ವರಸುತ ಚೆನ್ನದಂಡೇ | ಶ್ವರನು ಸಕಲ ಶರಣರೊಂದಿಲಿ |
ಹೊರಟ ಬಿಜ್ಜಳರಾಜನೊಡ್ಡೋ – ಲಗದ ಸಮ್ಮುಖಕೆ || ೧ ||

ಎಡಬಲದಿ ಭೋರ್ಗರೆವ ಶಂಖವು | ನುಡಿವ ಕಹಳೆಯು ಛತ್ರಿಚಾಮರ |
ಪಿಡಿದ ನಂದಿಯಧ್ವಜವು ಮುಂ – ದುಗ್ಘಡಿಪ ಕೈವಾರ || ೨ ||

ಕಿನ್ನರೇಶ್ವರ ಮಡಿವಳಯ್ಯನು | ಉನ್ನತದ ಪ್ರಮಥಾಳಿ ಎಡಬಲ |
[1] ಇನ್ನು ತುರುಕ [1] ವಜೀರರುಗಳು ಹ – ನ್ನೆರಡು ಸಾವಿರವು || ೩ ||

ನಡೆಯೆ ಎಡಬಲವಿಡಿದ ಮನುಜರು | ಹೊಡೆದು ನೂಕುತ ಬಿಡಿಸೆ ದಾರಿಯ |
ಪೊಡವಿಪತಿ ಇದಿರೆದ್ದು ನಮಿಸುತ – ಒಡನೆ ಕುಳಿತಿರಲು || ೪ ||

ಸತ್ಯಮೂರುತಿ ಚೆನ್ನಬಸವನು | ಮತ್ತೆ ಬಿಜ್ಜಳರಾಯನಿದಿರೊಳು |
ಅರ್ಥಿಯಲಿ ಪ್ರ [2] ತ್ಯೇಕ [2] ಓಲಗ – ವಿತ್ತು ಕುಳ್ಳಿರ್ದ || ೫ ||

ಸಕಲ ಪ್ರಮಥರ ಸಭೆಯು ಸಂದಣಿ | ಅಖಿಳ ರಾಜ್ಯಗಳರಸರೊಂದಿನೋಳ್ |
ಮಕರಕೇತನ ವೈರಿಸುತ ಮುಂ – ಡಿಸಿದನೋಲಗದಿ || ೬ ||

ಇತ್ತ ಚೆನ್ನಣ್ಣಗಳು ಓಲಗ | ವಿತ್ತು ಕುಳಿತಿರೆ ಅತ್ತಪೇಳುವೆ |
ಮತ್ತೆ ಜಗದೇವಯ್ಯ ಬೊಮ್ಮ – ಯ್ಯಗಳ ವಾರ್ತೆಯನು || ೭ ||

ನಳಿನಮಿತ್ರನ ಕಳೆಯು ಧಾತ್ರಿಗೆ | ಇಳಿಯೆ ಜ್ಯೋತಿಯ ಬೆಳಗು ಪಸರಿಸೆ |
ಕಳೆಧರನ ಭಜಿಸಿದರು ಜಗದೇ – ವಯ್ಯ ಬೊಮ್ಮಯ್ಯ || ೮ ||

ಮೃಡನ ಅರ್ಚನೆಗೈದು ಜಂಗಮ | ದಡಿಗೆರಗಿ ತೀರ್ಥಪ್ರಸಾದವ |
ಒಡನೆ ಜಗದೇವಯ್ಯ ಬೊಮ್ಮ – ಯ್ಯಗಳು ಸಲಿಸಿದರು || ೯ ||

ಮಡಿವಳಯ್ಯಗಳಿತ್ತ ಸುರಗಿಯ | ಹಿಡಿದು ಪಂಜುಗಳೆರಡ ಜೋಡಿಸಿ |
ಪಡೆದ ಮಾತೆಯ ಅಡಿಗೆ ನಮಿಸುತ – ನುಡಿದರೊಂದನುವ || ೧೦ ||

1-1 ಮುನ್ನ ತುರುಗ (ಚ.) 2-2 ತ್ಯಕ್ಷ (ಅ, ಟ, ಡ, ಬ.)

ಪಡೆದ ಜನನಿಯೆ ಕೇಳು ಶರಣರ । ಮಡದಿಯರು ಗಂಗಾಂಬೆ ಎಲ್ಲರು ।
ನಡೆದರುಳುವೆಗೆ ಅವರ ಸಂಗಡ – ಕೂಡಿ ನಡೆಯಮ್ಮ ॥ ೧೧ ॥

ಈಗ ಶರಣರ [1] ಗೂಳ್ಯ [1] ವೆಲ್ಲವು । ಸಾಗಿತಾಗಲೆ ಅವರ ಸಂಗಡ ।
ಸಾಗಿನಡೆ ಅಮ್ಮಯ್ಯ ಎಂದೆನ – ಲಾಗ ಅವರೊಡನೆ ॥ ೧೨ ॥

ಕಂದಗಳಿರ ಕೇಳಿ ದ್ರೋಹಿಯ । ಕೊಂದರಲ್ಲದೆ ನಾನು ಈಗಳು ।
ಮುಂದಕೊಂದಡಿ ಇಡುವಳಲ್ಲವು – ಎಂದು ಪೇಳಿ ॥ ೧೩ ॥

ಶರಣದ್ರೋಹಿಯಾ ಬಿಜ್ಜಳನ ಸಂ । ಹರಿಸಿದಲ್ಲದೆ ನಾನು ನಡೆಯೆನು ।
ಭರದಿ ದ್ರೋಹಿಯನಿರಿದು ಕೊಲ್ಲೆಂ – ದ್ಬರಸಿದಳು ಅವರ ॥ ೧೪ ॥

ಹರಸಿದಳು ಮಕ್ಕಳನು ಬಹುಕು । ಸ್ತರಿಸಿದಳು ಸೋಮವ್ವೆ ಬೇಗದಿ ।
ಇರದೆ ಪೋಗಿರಿ ಚೆನ್ನದಂಡೇ – ಶ್ವರನ ಹೊರೆ [2] ಗೆಂದು [2] ॥ ೧೫ ॥

**ಕಂದಪದ್ಯ.**

ಪಡೆದಾ ತಾಯಿಗೆ ನಮಿಸುತ ।
ಕಡುಗಲಿ ಜಗದೇವ ಮೊಲ್ಲೆಬೊಮ್ಮಣ್ಣರುಗಳ್ ॥
ಪಿಡಿಯುತ ಪಂಜುಗಳಿರಡಂ ।
ಕಡುವೇಗದಿಂ ಬಂದು ಮಂತ್ರಿಯಡಿಗೆರಗಿದ [3] ರ್ [3] ॥ ೧ ॥

ವಚನ ॥ ಆಗ ಜಗದೇವ ಮೊಲ್ಲೆಬೊಮ್ಮಣ್ಣನವರು ಬಂದು ಚೆನ್ನಬಸವಣ್ಣನವರಿಗೆ ಸಾಷ್ಟಾಂಗದಂಡಪ್ರಣಾಮವಂ ಮಾಡಲು, ಹರಸಿ ಶಿರವಂ ಪಿಡಿದೆತ್ತಲು, ಅವರ ಪಂಜಿನ ಬೆಳಗು ಬಿಜ್ಜಳರಾಯನ ಓಲಗವನ್ನೆಲ್ಲಾ ಮುಸುಕಲು, ಅದಂ ನೋಡಿ ಬಿಜ್ಜಳರಾಯ ಏನೆನ್ನುತಿರ್ದನು.

**ಭಾಮಿನೀ ಷಟ್ಪದಿ.**

ನೋಡಿದನು ನೃಪನಾಗ ಪಂಜನು ।
ರೂಢಿಯಾಕಾಶವ ಪ್ರಕಾಶಿಸೆ ।
ಕೂಡೆ ಚೋದ್ಯಂಬಟ್ಟು ಬೆರಗಿಂ ತೂಗುತಲಿ ಶಿರವ ॥
ಈಡಹವೆ ನಮ್ಮ ಪಂಜ್ಜನ್ನೆ ।
ರಡು ಸಾಸಿರವಿರ್ದು ಫಲವೇಂ ।
ನಾಡೆಬೆಳಕನು ನುಂಗಿಯಿರ್ಪುದನಾಡಲೇನೆಂದ * ॥ ೧ ॥

---

1-1 ಸ್ತೋಮ (ಎ, ಗ, ಜ.) 2-2 ಗಾಗೀ (ಎ, ಗ, ಚ.) 3 3 ರಾಗಂ (ಎ, ಗ, ಚ.)
* ಈ ಪದ್ಯ (ಅ, ಜ, ಟ, ಡ, ಬ.) ಪ್ರತಿಗಳಲ್ಲಿಲ್ಲ.

ಚೆನ್ನಬಸವದಂಡೇಶಮಂತ್ರಿಯ ।
ಸನ್ನಿಧಿಯ ಪಂಜೆರಡು ನಮ್ಮಯ ।
ಹನ್ನೆರಡು ಸಾವಿರದ ಪಂಜುಗಳನ್ನು ನುಂಗಿದವು ॥
ಇನ್ನು ಮಂತ್ರಿಗೆ ಪೇಳಿ ಇವರನು ।
ಎನ್ನ ಬಳಿಯಲಿ ಇರಿಸಿಕೊಂಬೆನು ।
ಎನ್ನುತಲಿ ಯೋಚಿಸಿದ ಬಿಜ್ಜಳ ತನ್ನ ಮನದೊಳಗೆ ॥ ೨ ॥

ಗಡಣದಿಂ ದಂಡೇಶನಿದಿರಿಲಿ ।
ಪಿಡಿದಿಹವೆರಡ ಪಂಜ ನೋಡಲು ।
ಪೊಡವಿ ಮುಸುಕಿತು ಚಂದ್ರ ಸೂರ್ಯ ಪ್ರಕಾಶದಲಿ ಬೆಳಗು ॥
ಬಿಡದೆ ನಮ್ಮೆಡ ಬಲದಿ ನೋಡಲು ।
ಪಿಡಿದ ಪಂಜ್ಹನ್ನೆರಡುಸಾಸಿರ ।
ವಡಗಿತಾ ಬೆಳಕಿನಲಿ ಮಂತ್ರಿಯ ಬೆಡಗದಿನ್ನೆಂತೊ ॥ ೩ ॥

ಎಲ್ಲಿ ಕರೆಸಿದೆ ಪಂಜಿನವರನು ।
ಎಲ್ಲಿ ಸ್ಥಲವಿವರ್ಗೇನು ಜೀತವು ।
ಚೆಲುವದಾಯಿತು ಎನ್ನ ಸದರಿಗೆ ಪಂಜು ರಂಜಿಸಿತು ॥
ಎಲ್ಲಿ ಈ ಧರೆಯೊಳಗೆ ಇವರ್ಗ್ಹಿಣೆ ।
ಸಲ್ಲಲಿತ ಬಹು ಕಲೆಯ ಪ್ರೌಢರು ।
ಇಲ್ಲಿ ಕಂಡೆನು ಕಣ್ಣ ಪುಣ್ಯವ ನಿನ್ನದೆಸೆಯಿಂದ * ॥ ೪ ॥

ಚೆನ್ನಬಸವ ಸುಮಂತ್ರಿ ಬಾಗ್ಯ ।
ನಿನ್ನ ಬಳಿ ಇಹ ಪಂಜಿನವರನು ।
ಎನ್ನ ಹತ್ತಿರ ಇರಿ[1] ಸಬೇಕೈ ಸನ್ನುತದಿ ನೀ[1] ನು ॥
ಎನ್ನಲಾ ಮಾತಿಂಗೆ ನುಡಿದನು ।
ಚೆನ್ನಬಸವೇಶ್ವರನು ನೃಪತಿಗೆ ।
**ನಿನ್ನಮನ ಸರಿಹೋದರೆಯು ನೀನಿರಿಸಿಕೊಳ್ಳೆಂದ** ॥ ೫ ॥

ನನ್ನ ಮನ ಸರಿಹೋದ ಕಾರಣ ।
ನನ್ನ[2] ಬಳಿಯಲಿ [2] ಇರಿಸಿಕೊಂಬೆನು ।
ಮುನ್ನ ಕೊಡುವೆನು ಪಂಜಿನವರಿಗೆ ನನ್ನಿಯಿಂ ನೂರ ॥
ಭಿನ್ನವಿಲ್ಲದೆ ಅವರನೀಗಳೆ ।
ಎನ್ನ ಬಳಿಯಲಿ ಇರಿಸಲವರಿಗೆ ।
ಇನ್ನು ಕೊಡುವೆನು ಉಚಿತ ಉಡುಗೊರೆಯನ್ನು ದಣಿವಂತೆ ॥ ೬ ॥

---

§ ಈ ಪದ್ಯ (ಅ, ಟ, ದ. ಬ ) ಪ್ರತಿಗಳಲ್ಲಿಲ್ಲ. 1-1 ಸುಯಿಾಗಲೆಯಂದ ಬಿಜ್ಜಳ (ಇ, ಎ, ಒ, ಖ, ಗ, ಚ.) 2-2 ನಾನೆ (ಇ, ಗ, ಚ, ಟ.)

ಸರಸಗುಣ ಮಂತ್ರೀಶ ಇವರನು |
ಕರೆಸಿ [1] ದಾವೂರಿಂದಲೆನುತಲಿ [1] |
ಅರಸು ಕೇಳಲು ಮರೆಯಮಾತಿನಲೊರೆದ ದಂಡೇಶ ||
ಕರೆಸಿದೆನು ನಾ ಮೇಲುನಾಡಿನ |
ಅರಸುಗಳ ಬಳಿಯಿಂದಲಿವರನು |
ಇರಿಸಿಕೊಳ್ಳೈ ನಿನಗೆ ಬೇಕಿರೆ ಹರುಷವಿದ್ದೊಡೆಲು ನೀಂ || ೭ ||

ವಚನ || ಇಂತೆಂದು ದಂಡೇಶ ನುಡಿಯಲು ಆ ಮಾತಿನಿಂದ ಬಿಜ್ಜಳ ರಾಯ ದೀವಟಿಗೆಯವರಂ ಕರೆದು ಏನೆನ್ನುತಿರ್ದನು.

**ಜಂಪೆ.**

ಎಲ್ಲಿಂದ ಬಂದಿರೈ | ಯಾವನೃಪ ನಿಮ್ಮರಸು |
ಬಲ್ಲಿದರು ನಮ್ಮಲ್ಲಿ | ನಿಲ್ಲಿ ನೀವೆನಲು || ೧ ||

ಮಲ್ಲಿನಾಥನು ಅರಸು | ಕೊಲ್ಲಾಪುರದ ದೇಶ |
ದಲ್ಲಿಂದ ನಾವು ನಿ | ಮ್ಮಲ್ಲಿಗೈದಿಹೆವು || ೨ ||

ಮೃತ್ಯುಂಜಯನ ಭಕ್ತ | ಹತ್ಯದ್ರೋಹಿ ಕೊಲುವ ನಿ |
ಮಿತ್ತ [2] ದಿಂದೈದಿದೆವು | ಪೃಥ್ವೀಶ ಕೇಳು [2] || ೩ ||

ಎಲ್ಲಿರಲು ನಿಮ್ಮಪಗೆ | ಯೆಲ್ಲ ತೀವಿಪಿರಂತೆ |
ನಿಲ್ಲಿ ನಮ್ಮಲ್ಲಿ ಮುಂ | ದೆಲ್ಲ ನೋಡು [3] ವಿರಿ [3] || ೪ ||

ಎಂದ ಮಾತಿಗೆ ನಾವು | ಮುಂದೆ ದಂಡೇಶನಿಗೆ |
ಒಂದು ಮಾತನು ಪೇಳಿ | ಬಂದೇವು ಕೇಳು || ೫ ||

ಘಳಿಗೆ ಕಟ್ಟಳೆ ಜೀತ | ಕೇಳು ನೃಪ ನಮ್ಮಚರ್ಯ |
ಬೆಳಕ ಪಿಡಿದಿರಬೇಕು | ಘಳಿಗೆಯೊವರೆಗೆ * || ೬ ||

ಘಳಿಗೆಯೊಂದಕೆ ಜೀತ | ಒಲಿದೀವನೊಂದು ವರ |
ಇಳೆಯಾಧಿಪ ಚೆನ್ನಣ್ಣ | ಸಲೆಯಿತ್ತು ನಡೆಪ * || ೭ ||

ಮೇದಿನಿಪತಿಯೆ ಕೇಳು | ಮುಂದೆ ನೋಡಾ ಪರಿಯು |
ಸಾದರದಿ ಘಳಿಗೆ ಲೆಕ್ಕ | ಜೀತವಿತ್ತಪೆಯ * || ೮ ||

ಎಂದು ಪೇಳಲು ರಾಯ | ಅಂತಾಗಲೆಂದೊಪ್ಪೆ |
ಚಂದದಿಂ ಮರಳಿ ಇಂ | ತೆಂದರಾ ಶರಣರ್ * || ೯ ||

---

1-1 ಮದು ಲೇಸಾಯ್ತು ಯತ್ತಣರ್ (ಇ, ಎ, ಖ, ಗ, ಚ.) 2-2 ನಿಲ್ಲದೆ ನಾವು | ಇತ್ತಲೈದಿದೆವು (ಇ, ಎ, ಖ, ಗ, ಚ, ಜ, ಟ, ಡ.) 3-3 ವೆನು (ಅ, ಉ, ಜ, ಡ, ಬ)
* ಈ ಪದ್ಯಗಳು (ಒ.) ಪ್ರತಿಯಲ್ಲಿ ಮಾತ್ರವಿವೆ.

ಅರಘಳಿಗೆ ತಾಮಿಸಲು । ಎಮ್ಮ ಜೀತವ ಕೊಡಲು ।
ಹರನಾದರೆಯು ಅವನ । ತ್ವರಿತ ಕೊಲ್ಲುವೆವು * ॥ ೧೦ ॥

ಎನಲೊಪ್ಪಿ ನೃಪನಾಗ । ಈಕ್ಷಣವೆ ಬನ್ನೆಂದು ।
ಅನುವಿನಿಂ ಕಳುಹುತಲಿ । ಅತಿಹರುಷದಿಂದ * ॥ ೧೧ ॥

ಆವಲ್ಲಿರುವಿರೀಗ । ಆವ ನಾಮವು ನಿಮಗೆ ।
ಆವಬಗೆ ನಿಮದೆಂದು । ಭೂವರನು ಕೇಳ್ದ ॥ ೧೨ ॥

ಇಲ್ಲಿ ಇರುತಿಹೆವೀಗ । ಗೊಲ್ಲರಾಬಗೆ ನಾವು ।
[1] ಮೊಲ್ಲೆ [1] ಬೊಮ್ಮಯ್ಯ ದೇ । ವಯ್ಯ ಎಂಬುವರು ॥ ೧೩ ॥

ಜಾಗುಮಾಡದೆ ಪೋಗಿ । ಈಗ ಮಂತ್ರಿಗೆ ಪೇಳಿ ।
ಬೇಗದಲಿ ಬನ್ನೆಂದ । ನಾಗ ಭೂಪಾಲ ॥ ೧೪ ॥

ಅರಸು ಕಳುಹಲು ಬಂದು । ಭರದಿ ಮಾಚಯ್ಯಗಳ ।
ದೊರೆಮಂತ್ರಿ ಪ್ರಮುಥರಿಗೆ । ಎರಗಿ ಪೇಳಿದರು ॥ ೧೫ ॥

[2] ವೀ [2] ರ ನಿಮ್ಮಯ ಸುತರ । [3] ಧೀ [3] ರತ್ವವನು ನೋಡಿ ।
ಚೂರುಮಾಡುವೆವು ಈ । ಧಾರಿಣೀಪತಿಯ ॥ ೧೬ ॥

ಭಳಿಭಳಿರೆ ಖೋ ಎಂದು । ಭಾಳಾಕ್ಷವರಸುತನು ।
ವಿಳ್ಯಂಗಳಿತ್ತ ಸಂ । ಮ್ಮೇಳದಿಂದವರ್ಗೆ ॥ ೧೭ ॥

ವಚನ ॥ ಆ ಚೆನ್ನಬಸವಣ್ಣನವರು ಜಗದೇವ ಮೊಲ್ಲೆಬೊಮ್ಮಣ್ಣಗಳ ಕರೆದು ಪರವಾದಿಯಂ ಸಂಹರಿಸೆಂದು ವಿಳ್ಯವಂ ಕೊಡಲು, ಅವರ ಮುಖವಂ ನೋಡಿ ಮಡಿವಾಳಯ್ಯಗಳು ಏನೆನ್ನುತಿರ್ದರು.

**ಏಕತಾಳ.***

ಕೇಳಿರೈ ಜಗದೇವ । ಮೊಲ್ಲೆಬೊಮ್ಮಣ್ಣಗಳೆ ।
ಪೇಳುವೆ ನಾನೊಂದು । ಆಲೋಚನೆಯನು ॥ ೧ ॥

ಇಲ್ಲಿಂದ ಪೋಗಿ ನೀ । ವೆಲ್ಲಿ ಬಿಜ್ಜಳನೃಪನ ।
ಕೊಲ್ಲುವ ತಾವಾವು । ದೆಲ್ಲಿ ಎಂದೆನಲು ॥ ೨ ॥

ಹಿರಿಯ ಹೆಗ್ಗಡತಿ ಹೊ । ನ್ನಮ್ಮನಾ ಚಾವಡಿಯ ।
ಹೊರೆಯಲ್ಲಿ ಇರಿದರೆ । ಅರಿಯರಿನ್ನಾರು ॥ ೩ ॥

---

* ಪದ್ಯಗಳು (ಒ.) ಪ್ರತಿಯಲ್ಲಿ ಮಾತ್ರವಿದೆ. 1-1 ಯಲ್ಲ (ಅ, ಉ, ಡ, ಬ.) 2-2 ಧೀ 3-3 ವೀ (ಇ, ಎ, ಒ, ಜ, ಟ.) * ಈ ಏಕತಾಳದ ಪದ್ಯಗಳು (ಗ, ಚ.) ಪ್ರತಿಗಳಲ್ಲಿಲ್ಲ.

ಅಲ್ಲಿಯಲ್ಲದೆ ಮತ್ತಿ । ನ್ನೆಲ್ಲಿಯಾಗದು ಸುತ್ತ ।
ಲೆಲ್ಲ ಕಾವಲು ಮತ್ತೆ । ಕೊಲ್ಲಲೆಂತಹುದು ॥ ೪ ॥

ಎಂದವರ ಮಾತಿಗಿಂ । ತೆಂದನಾ ಮಾಚಯ್ಯ ।
ಇಂದುಧರ ಶರಣರು । ಸಂದಿದೂರುವರೆ ॥ ೫ ॥

ಏರಿ ಮದ್ದಾನೆಯನು । ತೂರುವರೆ ಗಂಡಿಯಲಿ ।
ಮಾರಾರಿ ಶರಣರಿಗೆ । ಸೇರುವುದೆ ಬಿರುದು ॥ ೬ ॥

ಪರವಾದಿಯನ್ನು ನು । ಗ್ಗಿರಿದು ಸಂದಿಯ ತೂರೆ ।
ಹರಶರಣರೆಂದೆಂಬ । ಬಿರುದು ದಕ್ಕುವದೆ ॥ ೭ ॥

ಹಿಂದೆ ಹರಳೈಯ್ಯ ಮಧು । ವರಸಯ್ಯನವರನ್ನು ।
ಕೊಂದ ದ್ರೋಹಿಯ ನಾವು । ಕೊಲ್ಲುವೆವೆನುತ ॥ ೮ ॥

ಅಗಜೇಶನ ಶರಣರ । ಪಗೆಯ ತೀರಿಸಿದಂಥ ।
ಜಗದೇವ ಮೊಲ್ಲೆಬೊ । ಮ್ಮಣ್ಣ ನಾವೆಂದು ॥ ೯ ॥

ಕೂಗಿ ಖೋ ಎಂದು ಬೊ । ಬ್ಬಿರಿದು ಸಾರುತ ಬರಲು ।
ಸಾಗಿ ಬರುವೆ ನಿಮು । ಗಾಗಿ ನಾನಿದಿರ ॥ ೧೦ ॥

ಇಂತಲ್ಲದಾ ದ್ರೋಹಿ । ಯಂತರದಿ ನಿಂತೊಡೆದು ।
ಮುಂತೆ ಕಳವಿಂದ ಬರೆ । ಪಂಥ ದಕ್ಕುವದೆ ॥ ೧೧ ॥

ವಚನ ॥ ಇಂತೆಂದು ಮಡಿವಾಳಯ್ಯಗಳು ಎಂದ ಮಾತಿಗೆ, ಜಗದೇವ ಮೊಲ್ಲೆಬೊಮ್ಮಣ್ಣಗಳು ಏನೆನ್ನುತಿರ್ದರು.

**ಅಟತಾಳ.**

ಹಿರಿಯ ಉಪ್ಪರಿಗೆಯ ಹಜಾರದ । ಮೆರೆವ ದೊಡ್ಡಾ ಬಾಗಿಲ ।
ಲ್ಲಿರುವ ನಾಗರಾಜನೆಂಬವ– ಹಿರಿಯ ತಳವಾರ ॥ ೧ ॥

ಅವನ ತುರಗವೈನೂರು ಕಾವಲು । ಅವನ ಮುಂದಿ ಸಾಸಿರ ।
ತವಕದಲಿ ಬೆಂಬತ್ತಿ ಬರುವುದು– ಕವಿದು ಮೇಲೆ ॥ ೨ ॥

ಅದುವೆ ಅಲ್ಲದೆ ನಾಲ್ಕುಸಾವಿರ । ಒದವಿ ಕವಿದು ಎಮ್ಮ ಮುಂದಕೆ ।
ಕದಲಲೀಪರೆ ಅವರು ಆಕ್ಷಣ– ದಲ್ಲಿ ನಮಗೆ ॥ ೩ ॥

ಇಂದು ಮಂಗಳವಾರ ಲಿಖಿತವು । ಸಂದು ಸಾವಕಾಲ ನೃಪತಿಗೆ ।
ತಂಪೆ ಅಪ್ಪಣೆ ನಿಮ್ಮ ದಯವಿರ– ಲೆಂದು ಕೇಳಿದರು ॥ ೪ ॥

ಎಂದರವರಾ ಮಾತ ಕೇಳುತ । ಎಂದ ಮಾಚಿದೇವನು ।
ಮಂದಿ ಕುದುರೆಯು ಬಂದು ಕವಿದರೂ – ಅಂಜಬೇಡಿ ॥ ೫ ॥

ಕೊಂದು ಕೊಲೆಯಾಡುತ್ತ ಕೂಗುತ । ಹಿಂದೆ ಬರುವೆನು ನೀವುಗಳ್ ।
ಮುಂದೆ ನಡೆಯಿರಿ ಹೆದರಬೇಡಿರಿ – ಎಂದು ಪೇಳಿ ॥ ೬ ॥

ಶರಣಪಗೆಯರ ಕೊಲ್ಲಲೋಸುಗ । ಎರಡುವೇಳೆ ಲಿಂಗದೋಳ್ ।
ಬೆರೆದು ಐಕ್ಯದಿ ಬಂದೆನಿಲ್ಲಿಗೆ – ಹರನು ಕಳುಹೆ ॥ ೭ ॥

[1] ಹಿರಿಯ [1] ಬಸವೇಶ್ವರನು ಶರಣರ । ಬಿರುದು ನಿಮ್ಮದು ಎನುತಲಿ ।
ಕರೆದು ನಿಮ್ಮೆಲ್ಲರನು ತಂದೆನ್ನ – ಕರದೊಳಿತ್ತ ॥ ೮ ॥

ಅದುವೆ ಅಲ್ಲದೆ ಶಿವನ ಲೋಕದಿ । ಮದನಹರನೂ ಕಳುಹಿದ ।
ಇದು ನಿಮಿತ್ತವು ಶರಣ ಪಗೆಯರ – ವಧಿಸು ಎಂದು ॥ ೯ ॥

ನಿಮ್ಮ ಕೈಯಲಿ ಮುಂಚಿದಲ್ಲದೆ। ನಾನು ಮುಂಚಬಾರದು ।
ನಿಮ್ಮ ಕೈ ಮುಂಚಿದಲ್ಲದೇ ನಿಮ್ಮ – ಶಾಪ ಬಿಡದು ॥ ೧೦ ॥

**ಹಿಂದೆ ಬಸವೇಶ್ವರ [2] ಗೆ [2] ಊಟಕೆ** । ಎಂದು [3] ಪೇಳಿ ನೀವು ಎಣಿಸದೆ [3]
ಮುಂದೆ ದ್ವಿಜರಿಗೆ ನೀಡೆ **ನಿಮಗಿಂ – ತಾದುದೀ ಶಾಪ** ॥ ೧೧ ॥

ಧರಣಿಪತಿ ಹರಳಯ್ಯ ಮಧುವ । ಯ್ಯಗಳ ಕೊಲಿಸಲಾತನ ।
ಇರಿದು ಕೊಲ್ಲಲು ನಿಮ್ಮ ಶಾಪವು – ಹರಿವುದೆಂದ ॥ ೧೨ ॥

ಅದು ನಿಮಿತ್ತವು ನೀವು ನೃಪತಿಯ । ಸದೆದು ಬರಲು ನಿಮ ಯ ।
ಇದಿರ ಬರುವೆನು ನೀವು ಪೋಗಿರಿ – ಹೆದರಬೇಡಿ ॥ ೧೩ ॥

ವಚನ ॥ ಎಂದು ಧೈರ್ಯವಂ ಪೇಳಿ ಮಡಿವಾಳಯ್ಯಗಳು ಮತ್ತೂ ಏನೆನ್ನುತಿರ್ದರು.

**ದ್ವಿಪದಿ.**

ಶ್ರೀ ಕೀರ್ತಿಗುಣಹಾರ ಲೋಕಮಂದಾರ ।
ಲೋಕೈಕವೀರ ಪ್ರತ್ಯೇಕ ರಣಶೂರ ॥ ೧ ॥

ಬನ್ನಿ ಜಗದೇವಯ್ಯ ಬನ್ನಿ ಬೊಮ್ಮಯ್ಯ ।
ನನ್ನಿಯಿಂ ಪೇಳ್ವೆ ನಿಮಗಿನ್ನೊಂದು ಮಾತ ॥ ೨ ॥

---

1 1 ಹರನು (ಅ, ಉ, ಬ.) 2-2 ನ (ಎ.) 3-3 ಪೋಗಿ ಪೇಳಲು (ಅ, ಉ, ಡ, ಬ.)

ಸೂರ್ಯನು ಗತಿತಪ್ಪಿ[1] ಶೃತಿತಪ್ಪಿ[1] ನಡೆಯೆ ।
ವಾರಿಧಿಯು ಉಕ್ಕಿ ಉಮ್ಮಳಿಸಿ ಮೇಲ್ವರಿಯೆ ॥ ೩ ॥

ಮಾರಾರಿ[2] ಯೆಂತೆಂಬುದಂ[2] ಮರೆಯಬೇಡಿ ।
ನಾಲ್ಕು ದಿಕ್ಕಿನ ಕುದುರ ನೂಕಿ ಏರಿದರೂ ॥ ೪ ॥

ಸಾಕೆಲ್ಲ ಮಂದಿ ಸಂದಣಿಸಿ ಒದಗಿದರೂ ।
ಖೋಖುಲಿಲಿ ಖೋ ಎಂದು ಕೂಗಿ ಬೊಬ್ಬಿರಿದು ॥ ೫ ॥

ನೂಕುತಾಕಿ[3] ಲಿ[3] ಮಂದಿ ನುಗ್ಗುನುರಿಮಾಡಿ ।
ಇರಿದಿರಿದು ತರಿತರಿದು ಕೊರಕೊರೆದು ಕೆಡಹಿ ॥ ೬ ॥

ಕರಿ ತುರಗ ಕಾಲಾಳು ಉರವಣಿ[4] ಪ[4] ರಥವ ।
ಬಿರುಗಾಳಿ ಬೀಸೆ ತರಗೆಲೆ[5] ಉದು[5] ರುವಂತೆ ॥ ೭ ॥

ಕೊಂದು ಕೊಲೆಯಾಡಿ ಕೂಗುತ ನಿಮ್ಮ ಬಳಿಗೆ ।
ಬಂದೆನಾ ನಿಮಗಿನಿತು ಭಯಬೇಡಿ ಪೋಗಿ ॥ ೮ ॥

ಎಂದು ಕಳುಹಲು ಎಲ್ಲ ಶರಣರಿಗೆ ನಮಿಸಿ ।
ವಂದಿಸಿ ದಂಡೇಶನ ವರವ ಕೈಕೊಂಡು ॥ ೯ ॥

ತಂದೆ ಅಪ್ಪಣೆಯೆ[6] ನಲು[6] ತಕ್ಕೈಸಿ ಹರಸಿ ।
ಕಂದಗಳಿರ ಪೋಗಿ ಕಡು ಎಚ್ಚರದಲಿ ॥ ೧೦ ॥

ಹೆದರದೇ ಧೈರ್ಯಪರವಶರಾಗಿ ನೀವು * ।
ಎಂದು ಪೇಳಲು ಪೋದರಂದು ನೃಪನೆಡೆಗೆ ॥ ೧೧ ॥

**ಸೀಸಪದ್ಯ.**

ಅವರ ಕಳುಹಿಸಿ ಮಂತ್ರಿ ಶಿವಶರಣರೊಂದಾಗಿ ।
ತವಕದಿಂದೆದ್ದು ಬಿಜ್ಜಳನಕೂಡೆ ॥ ೧ ॥

ಭುವನೇಶ ಇಂದಿನ ದಿನ ನಮ್ಮ ಮನೆಯಲ್ಲಿ ।
ಶಿವಸೇವೆಪ್ರಸ್ತ ಶೀಘ್ರದ ಕೆಲಸವು ॥ ೨ ॥

ಶಿವಪೂಜೆವೇಳೆ ಪೋಗುವೆನೆನಲು ನೃಪನೆದ್ದು ।
ಅವಶ್ಯದಿ ಪೋಗೆಂದು ಆಜ್ಞೆಯನೀಯೆ ॥ ೩ ॥

---

1-1 ಮೇರೆಯಿಂ (ಇ, ಉ, ಎ, ಖ, ಗ.) 2-2 ಗತಿಯೆಂದು ಮೈ (ಇ, ಒ, ಖ.) 3-3 ನ (ಒ, ಗ, ಚ, ಜ.) 4-4 ಸಿ (ಇ, ಎ, ಒ, ಗ, ಟ.) 5-5 ಹಾ (ಇ, ಎ, ಒ, ಗ, ಟ.) 6-6 ನುತ (ಇ, ಎ, ಖ, ಗ, ಚ, ಡ.) * ಈ ಅರ್ಧಪದ್ಯ (ಉ, ದ.) ಪ್ರತಿಗಳಲ್ಲಿ ಮಾತ್ರವಿದೆ.

ಮಂಡಲದ ಮಂತ್ರಿ ಮನ್ನೆಯ ಮಕುಟ ವರ್ಧನ |
ಮೇಘಪ್ರಚಂಡ ಮಾರ್ತಾಂಡನಾಗ || ೪ ||

ಅಖಂಡ ಪರುಷ ದಂಡನಾಯಕನು ದಂಡೇಶಮಂತ್ರಿ |
ಉದ್ದಂಡ ಸಕಲ ಪ್ರಮಥರ್ಸಹ || ೫ ||

ಗಿಡಿಬಿಡಿಯು ನಿಸ್ಸಾಳ ಹೊಡೆವ ತಂಬಟ ಭೇರಿ |
ನುಡಿಪ ಕಹಳೆಯು ಶಂಖ ಘೋರ್ಗರೆಯಲು || ೬ ||

ಒಡನೆ ಕೈವಾರ ಭಟ್ಟರು ಪೊಗಳುತಿರೆ ಮಂತ್ರಿ |
ಕಡುವೇಗ ಬಂದನತಿ ಸಡಗರದೊಳು || ೭ ||

ವಚನ || ಚೆನ್ನಬಸವಣ್ಣನವರು ಜಗದೇವ ಮೊಲ್ಲೆಬೊಮ್ಮಣ್ಣಗಳ ಬಿಜ್ಜಳರಾಯನ ಓಲಗಕ್ಕೆ ಕಳುಹಿ ತಾವು ತಮ್ಮ ಅರಮನೆಗೆ ಬಂದು, ಸಕಲ ಪ್ರಮಥರೊಂದಿನಲ್ಲಿ ಪ್ರಸಂಗಿಸುತ್ತ ಕುಳಿತಿರುವ ಸಮಯದಲ್ಲಿ ಗಂಗಾಂಬೆಯಮ್ಮನವರು ಬಂದು ಏನೆನ್ನುತಿರ್ದರು.

**ತ್ರಿವುಡೆ.**

ಒಡೆಯ ಶ್ರೀಗುರು ರುದ್ರಮುನಿ ಎ | ನ್ನೊಡೆಯ ಬಿನ್ನಹ ಶಿವನ ಪೂಜೆಗೆ |
ಎಡೆಯ ಮಾಡಿದೆ ತಡೆಯದಿರಿ ಎ – ನ್ನೊಡೆಯ ಚಿತ್ತೈಸಿ || ೧ ||

ಚೆನ್ನದಂಡೇಶ್ವರನೆ ಶರಣರ | ಬಿನ್ನಹವ ಮಾಡಿ ಬಿಜಯಂಗೈಸುವ |
ದಿನ್ನು ತಡೆಯದೆ ವೇಳೆಯಾಯಿತು – ಬನ್ನಿ ಸಲಿಸುವರೆ || ೨ ||

ಎನಲು ದಂಡೇಶ್ವರನು ಉತ್ತ | ಣ್ಣನನು ಕರೆಸಿಯೆ ಪೇಳ್ದನವನಿಗೆ |
ಅನುಭವಾಮಂಟಪದ ಮಹಿಮರ – ಪಾದಗಳಿಗೆರಗಿ || ೩ ||

ಅಕ್ಕನಾಗಾಯಮ್ಮನರಮನೆ | ಚೊಕ್ಕ ಭೋಜನಶಾಲೆಯಲ್ಲಿಗೆ |
ಗಕ್ಕನವರನು ಬಿಜಯಂಗೈಸ – ಲ್ಲಿಕ್ಕು ಗದ್ದುಗೆಯ || ೪ ||

ಎನಲು ಉತ್ತಣ್ಣಗಳು ಪೋಗಿಯೆ | ವಿನಯದಿಂ ಕರಮುಗಿದು ಊಟಕೆ |
ಘನಗುರುವೆ ಬನ್ನೆಂದು ಕರೆಯಲು – ಕನಲಿ [1] ಗರ್ಜಿಸುತ [1] || ೫ ||

ಬಿನುಗೆ ನಿಮ್ಮಯ ಭಕ್ತಿ ಹಮ್ಮಿನ | ಘನತೆಗರ್ವವೆ ಶರಣರೊಂದಿಲಿ |
ಅನುಕರಿಸಿ ಒಬ್ಬೊಬ್ಬರಂಘ್ರಿಗೆ – ನಮಿಸಿ ಬಿನ್ನೈಸು || ೬ ||

ಎನುತ ಕೋಪಿಸಿ ಶರಣರೆಲ್ಲರು | ಬಿನುಗೆ ಛೀ ಬರಲೊಲ್ಲೊ ಹೋಗೆಂ |
ದೆನಲು ಕೇಳುತ ಮಂತ್ರಿ ಬಂದನು – ಶರಣರಿದ್ದೆಡೆಗೆ || ೭ ||

1-1 ದರುಯಲ್ಲಾ (ಒ, ಜ, ಟ.)

ಬಂದು ಉತ್ತಣ್ಣಗಳ ಬಯ್ಯುತ । ವಂದಿಸುತ ಶರಣರಿಗೆ ಆಗಳು ।
ಎಂದ ಉತ್ತಣ್ಣಂಗೆ ಚೆನ್ನ – ದಂಡನಾಯಕನು ॥ ೮ ॥

ಹಿಂದೆ ಅಪ್ಪಣ್ಣಗಳು ಪ್ರಭುವಿನ । ಸಂದಣಿಯ ಗಣಪರ್ವದಲಿ ತಾ ।
ನಿಂದಲ್ಲಿ ಕೈಬೀಸಿ ಬನ್ನಿರಿ – ಎಂದು ಕರೆಯಲಿಕೆ ॥ ೯ ॥

ನೊಂದು ಕೋಪಿಸಿ ನಿಮ್ಮ ಭಕ್ತಿಗ । ಳಿಂದು ತಾಮಸ ಬಾರೆವೆನ್ನಲು ।
ಬಂದು ಅಲ್ಲಿಗೆ ಬಸವರಾಜನು – ವಂದಿಸವರಡಿಗೆ ॥ ೧೦ ॥

ಮಾರಮರ್ದನ ಮಹಿಮತೀತರೆ । ಬೇರೆ ಬಿನ್ನಹವರಿಯನೆನುತಲಿ ।
ಧೀರ ಬಸವೇಶ್ವರನು ಮಾಡಿದ – ಬೇರೆ ಬಿನ್ನಹವ ॥ ೧೧ ॥

ಎಂದು ಉತ್ತಣ್ಣನಿಗೆ ಚೆನ್ನ । ದಂಡನಾಯಕ ಪೇಳಿ ಅವರಿಗೆ ।
ವಂದಿಸುತ ಪ್ರತ್ಯೇಕ ಬಿನ್ನಹ – ಮಾಡಿ ಕೈಮುಗಿದ ॥ ೧೨ ॥

ಧೀರಷಡುಸ್ಥಲ ಜಂಗಮವು ಈ । ರಾರುಸಾವಿರವೆಲ್ಲ ಹರುಷದಿ ।
ಭೋರನೈದಿದರಕ್ಕನಾಗಲೆ – ಯಮ್ಮನರಮನೆಗೆ ॥ ೧೩ ॥

ವಚನ ॥ ಆ ಷಡುಸ್ಥಲ ಮೂರ್ತಿಗಳೆಲ್ಲಾ ಅಕ್ಕನಾಗಮ್ಮನವರ ಭೋಜನ ಶಾಲೆಯಲ್ಲಿ ಮೂರ್ತಂಗೊಂಡು, ಲಿಂಗಾರ್ಚನೆಯಂ ಮಾಡಿ, ಪಂಚಭಕ್ಷ್ಯ ಪರಮಾನ್ನ ಮುಂತಾದ ಷಡುರಸಾನ್ನಗಳಂ ಭುಂಜಿಸಿ ತೃಪ್ತರಾಗಿ, ಸಂತೋಷದಿಂದ ವಿಳ್ಯವಂ ಕೈಕೊಂಡು ಮೂರ್ತಗೊಂಡಿರ್ಪಾ ಸಮಯದಲ್ಲಿ, ಚೆನ್ನಬಸವಣ್ಣನವರು ಮಡಿವಾಳಯ್ಯಗಳಕೂಡೆ ಏನೆನ್ನುತಿರ್ದರು.

**ಅಟತಾಳ.**

ಕೇಳಿರೈ ಮಾಚಯ್ಯಗಳೆ ಶಿವ । ಸಿದ್ಧರಾಮಯ್ಯ ದೇವರಿಂದಿನ ।
ವೇಳೆಯಲಿ ಬರಬೇಕು ಬಾರದೆ – ಉಳಿದರಿನ್ನೇಕೊ ॥ ೧ ॥

ಅಂದೆ ರಾಮಯ್ಯಗಳು ಎಮ್ಮಯ । ಒಂದಿನಲ್ಲಿ ಉಳುವೆಗೆ ।
ಬಂದೆವೆಂದರು ಬಾರದುಳಿದರು – ಇಂದಿನೊಳಗೆ ॥ ೨ ॥

ಎಂದ ಚೆನ್ನಣ್ಣಗಳ ವಾಕ್ಯಕೆ । ಎಂದ ಮಾಚಿದೇವನು ।
ಅಂದೆ ಶಿವಸಮಾಧಿಯ್ಯೆದುವೆ – ನೆಂದರವರು ॥ ೩ ॥

ಹಿಂದೆ ಗಣಪರ್ವದಲಿ ಪ್ರಭುವಿನ । ಒಂದಿನಲ್ಲಿಯೆ ಶಿವಸಮಾಧಿಯ ।
ಅಂದೆಯ್ಯೆದುವೆ ಎಂದರದರಿಂ – ನಿಂದರೇನೊ ॥ ೪ ॥

ಎಂದು ಯೋಚನೆ ಮಾಳ್ಪ ಸಮಯಕೆ । ಚಂದ್ರಮೂಡಿದಂದದಿ ।
ಬಂದರಾಗಲೆ ಸಿದ್ಧರಾಮಯ್ಯ – ತಂದೆಯವರು ॥ ೫ ॥

ಸಿದ್ಧರಾಮಯ್ಯಗಳ ಕಾಣುತ | ಎದ್ದರೆಲ್ಲ ಹರುಷದಿ |
ಹೊದ್ದಿದರು ಅವರಂಘ್ರಿಕಮಲಕೆ – ಬಿದ್ದರೆಲ್ಲ || ೬ ||

ಚಿನುಮಯನೆ ಶಿವಸಿದ್ಧರಾಮೇ | ಶ್ವರನೆ ನಿಮ್ಮ ಈಗಳು |
ನೆನೆವುತಿರೆ ಪ್ರತ್ಯಕ್ಷವಾದಿರಿ – ವಿನಯದಿಂದ || ೭ ||

ಎಂದು ಚೆನ್ನಣ್ಣಗಳು ಮಡಿವಾ | ಳಯ್ಯ ಮುಖ್ಯ ಪ್ರಮಥರ |
ಒಂದಿನಲಿ ಗದ್ದುಗೆಯನಿಕ್ಕಿದ – ರಂದದಿಂದ || ೮ ||

ತಂದರಗ್ಗಣಿ ಅರ್ಘ್ಯಪಾದ್ಯಗ | ಳಿಂದಲಾಗ ಭಜಿಸಲು |
ಬಂದು ಕುಳಿತರು ಗದ್ದುಗೆಯಲಾ – ನಂದದಿಂದ || ೯ ||

ಅಷ್ಟವಿಧದಿಂದರ್ಚಿಸುತ ತ | [1] ಮ್ಮಿ [1] ಷ್ಟಲಿಂಗಪೂಜೆಯ |
ನಿಷ್ಠೆಯಲಿ ಮಾಡಿದರು ಮನಸಂ – ತುಷ್ಟರಾಗಿ || ೧೦ ||

ಇಂದುಧರನರ್ಚಿಸಿದ ಮೇಲಿಂ | ತೆಂದರಾಗ ಪಟ್ಟಣ |
ಅಂದಗೆಟ್ಟಿತಿದೇನು ಕಾರಣ – ವೆಂದು ಕೇಳಿ || ೧೧ ||

ಮಂಗಳಮಯವಾದ ಪುರದೊಳು | ಲಿಂಗಪೂಜೆ ಘಂಟೆಗ |
ಳಂಗೈಪ ಶಿವಶಂಖನಾದ ಪ್ರ – ಸಂಗವಿಲ್ಲ || ೧೨ ||

ಪುರದೊಳಾರು ಗಾವುದವ ಬಂದೆನು | ಶರಣರೆಂಬ ನಾಮವು |
ಅರಿವಿಗೊಬ್ಬರ ಕಾಣೆ ಮಂತ್ರಿಗ – ಳರಸೆ ಕೇಳು || ೧೩ ||

**ಜಂಪೆ.**

ಎಂದು ಕೇಳಿದ ಸಿದ್ಧ | ರಾಮಯ್ಯನೊಳು ಮಂತ್ರಿ |
ಎಂದ ಶರಣರ ಮಹಿಮೆ | ಮುಂದೆ ಇಂತೆಂದ || ೧ ||

ಜಗದೇವ ಮೊಲ್ಲೆ ಬೊ | ಮ್ಮಣ್ಣಗಳು ಬಿಜ್ಜಳನ |
ಸೊಗಸ ಮುರಿದಿರಿದು ಕೊ | ಲ್ಲಲು ಪೋದರಿನ್ನು || ೨ ||

ಆಗಲೇ ಶರಣಸಭೆ | ಸಾಗಿತು ಉಳುವೆಗೆಲ್ಲ |
ಈಗ ನೀವಿರಬೇಡಿ | ಸಾಗಿ ಶೀಘ್ರದಲಿ || ೩ ||

ಮತ್ತೆ ಯತಿವ್ರತಶರಣ | ವೊತ್ತ ಸಾಗಿತು ಎಲ್ಲ |
ಕತ್ತಲೆನ್ನದೆ ಬೇಗ | ಚಿತ್ತೈಸಿ ನೀವು || ೪ ||

ಎನಲು ಷಡುಸ್ಥಲದ ಹ | ನ್ನೆರಡು ಸಾವಿರ ಮಂತ್ರಿ |
ಘನಮಹಿಮ ಮಡಿವಾಳ | ಪ್ರಮಥಗಣರ್ಗೆಲ್ಲ || ೫ ||

---

1-1 ಮ್ಮ | ಇ (ಒ, ಟ.)

ವಿನಯದಲಿ ಭಯಭಕ್ತಿ । ಘನಕರುಣ ನಮ್ಮಮೇ ।
ಲನುದಿನವು ಇರಲೆಂದು । ನಮಿಸಿ ರಾಮಯ್ಯ ॥ ೬ ॥

ಮಂಗಳಾತ್ಮಕ ಶರಣ । ರಂಗನೆಯ ತಾಯ್ಗಳಿರ ।
ಗಂಗಾಂಬೆ ನಿಮ್ಮದಯ । ಹಿಂಗದಿರಲೆಮಗೆ ॥ ೭ ॥

ಜ್ಞಾನಿ ಜಗದಾಂಬೆ ಭ । ವಾನಿ ಶಾಸ್ತ್ರದ ರಂಭೆ ।
[1] ಧ್ಯಾ [1] ನಿ ಶಿವಸಂಧಾನಿ । ನೀನೆನ್ನ ತಾಯಿ ॥ ೮ ॥

ಎಂದು ಎಲ್ಲರಿಗರುಹಿ । ಮುಂದಕೀಗಲೆ ಪೋಪೆ ।
ವೆಂದು ಗಮನಿಸಲಾಗ । ಎಂದಳ್ಗಂಗಾಂಬೆ ॥ ೯ ॥

ಬಳಲಿದಿರಿ ಸ್ವಾಮಿ ಕು । ಳ್ಳಿರಿ ಒಂದು ನಿಮಿಷ ಸಂ ।
ಬಳಿಸೆಂದು ಗದ್ದುಗೆಯ । ನಿಕ್ಕಿ ಕುಳ್ಳಿರಿಸಿ ॥ ೧೦ ॥

ಚೆಲುಪಾಲು ಸಕ್ಕರೆಯು । ಸುಲಿದ ಬಾಳೆಯ ಹಣ್ಣು ।
ಕಲಸಿ ತಂದಿತ್ತಳಾ । ಜಲಜಾಕ್ಷಿತಾಯಿ ॥ ೧೧ ॥

ಹಣ್ಣು ಸಕ್ಕರೆ ಜೇನು । ಅಣ್ಣವಾಲತಿ ಘೃತವು ।
ಕಣ್ಣುಮೂರಗೆ ತೋರಿ । ಉಣ್ಣಲತಿ ಬೇಗ ॥ ೧೨ ॥
ತೊಳೆದ ಬಿಳಿಯೆಲೆ ಚೊಕ್ಕ । ಕಳಿಯಡಕೆ ಕೆನೆಸುಣ್ಣ ।
ಘಳಿಲನೇ ಇತ್ತಳಾ । ನಳಿನಾಕ್ಷಿತಾಯಿ ॥ ೧೩ ॥

ವಚನ ॥ ಆ ಗಂಗಾಂಬೆಯಮ್ಮನವರು ಸಮಸ್ತ ಸತಿಯರೊಡಗೊಂಡು ಸಿದ್ಧರಾಮೇಶ್ವರದೇವರಿಗೆ ನಮಸ್ಕಾರವಂಮಾಡಿ, ಸ್ವಾಮಿಗಳು ನೆನ್ನೆ ಬಂದಾರೆಂದು ಇದ್ದೆವು ನೆನ್ನೆ ಬಾರದೆ ನಿಂತಿರಿ ; ಏನುಕಾರಣವೆನಲು ಆ ಸಿದ್ಧರಾಮಯ್ಯಗಳು ಏನೆನ್ನುತಿರ್ದ್ದರು.

**ಏಕತಾಳ.**

ಕೇಳವ್ವ ಇಲ್ಲಿಂದ । ಏಳನೂರೆಪ್ಪತ್ತು ।
ಭಾಳಾಕ್ಷ[2] ಶರಣ[2] ರು । ಬಂದರು ಮಠಕೆ ॥ ೧ ॥

ಮತ್ತವರ್ಗೆ ಬೋನ ಪ । ದಾರ್ಥವಂ ಮಾಡಿಸುತ ।
ಹೊತ್ತು ಹೋಯಿತು ಅದು । ನಿಮಿತ್ತ ಉಳಿದೆನು ॥ ೨ ॥

ಇಲ್ಲಿ ವಾರ್ತೆಯನೆಲ್ಲ । ಎಲ್ಲರೂ ಪೇಳಲು ।
ನಿಲ್ಲದೆ ಬಂದೆನು । ಇಲ್ಲಿಗೆ ತಾಯಿ ॥ ೩ ॥

1-1 ಧಾ (ಅ, ಟ, ಡ, ಬ.) 2-2 ನಜಂಗಮ (ಒ, ಜ, ಟ.)

ಅವರೆಲ್ಲ ಸಲಿಸಿಹೋ । ದರು ಅತ್ತ ನಾನಿತ್ತ ।
ತವಕದಿ ಬಂದೆನು ನಾ । ತಾಯೆ ನೀ ಕೇಳು ॥ ೪ ॥

ಎಂದ ಮಾತಿನೊಳಾಗ । ಬಂದರು ಶರಣರು ।
ವಂದಿಸಿ ನುಡಿದರು । ಒಂದು ವಾಕ್ಯವನು ॥ ೫ ॥

**ದ್ವಿಪದಿ.**

ಶ್ರೀ ಗುರುಶಿವಸಿದ್ಧರಾಮಯ್ಯ ಸ್ವಾಮಿ ।
ಈಗ ಕೇಳಿನ್ನೊಂದು ವಿನಯ ವಾಕ್ಯವನು ॥ ೧ ॥

ಹೋಗಿ ಕೈಲಾಸಗಿರಿಯಲ್ಲಿರ್ಧಡೆನ್ನ ।
ಈಗ ಮರ್ತ್ಯದಿ ಪುಟ್ಟಿ ಇಲ್ಲಿರ್ಪ[1] ಡೆ[1] ನ್ನ ॥ ೨ ॥

ಶಿವಶರಣಸೇವೆಯಲ್ಲದೆ ಬೇರೆ ಮತ್ತೊಂ ।
ದರಿಯದಂತಿರಿಸು ಜನ್ಮ ಜನ್ಮಾಂತರದಲಿ ॥ ೩ ॥

ಎಂದು ರಾಮಯ್ಯನಡಿಗೆರಗೆ ಗಂಗಾಂಬೆ ।
ಎಂದರಾ ರಾಮಯ್ಯ ಏಳವ್ವ ತಾಯೆ ॥ ೪ ॥

**ಎಂದೆಂದು ನಿಮ್ಮಂಥ** ಬಂಧುಗಳು ಎನಗೆ ।
ಕುಂದದಿರಲೆಂದು **ಭಸಿತವ ಧರಿಸಿ ಹರಸೆ** ॥ ೫ ॥

ಬಂದನಾವೇಳೆ ಭಕ್ತನು ಮೋಳಿಗಯ್ಯ ।
ಎಂದನಾ ರಾಮಯ್ಯಗೆರಗಿ ಕಾಯಕವ ॥ ೬ ॥

ತಂದು ತನು ಮನ ಬಳಲಿ ತಾತ್ಪರ್ಯದಿಂದ ।
ಇಂದುಧರ ಶರಣರಿಗೆ ಇಕ್ಕಿ ಒಕ್ಕಂಥ ॥ ೭ ॥

ಶೇಷವನು ಕೊಂಬ ನಿಜವನ್ನು ಕೊಡು ಎನುತ ।
ವಂದಿಸಲು ಭಸಿತವಿಟ್ಟೆಂದರಿಂತೆಂದು ॥ ೮ ॥

ಎಂದೆಂದು ಮೋಳಿಗಯ್ಯಗಳ ಪ್ರಸಾದ ।
ದಿಂದ ಬದುಕಿಸು ಕಪಿಲಸಿದ್ಧಮಲ್ಲೇಶ ॥ ೯ ॥

ಬಂದನಾವೇಳೆ ಭಕ್ತನು ಸೊಡ್ಡಳೇಶ ।
ವಂದಿಸಿದ ರಾಮಯ್ಗೆ ಉಚಿತಭಕ್ತಿಯಲಿ * ॥ ೧೦ ॥

ಇಂದುಧರಜಂಗಮವು ಇಳೆಗೆ ಘನವೆಂದು । *
ಮುಂದೆ ಪಂಚಾಕ್ಷರವು ಮುಕ್ತಿಪಥವೆಂದು ॥ ೧೧ ॥

---

1-1 ಡ (ಒ, ಜ, ಬ.) * ಈ ಅರ್ಧರ್ಧ ಪದ್ಯಗಳು (ಅ, ಡ, ಬ.) ಪ್ರತಿಗಳಲ್ಲಿಲ್ಲ.

ಕುಂದದೆ ಸ್ತುತಿಸಿ ಕೂಡಿದೆ ನಿಮ್ಮ ಪದವ |
ಎಂದೆಂದು ಈ ಪದವಿ ಕುಂದದಿರಲೆಂದು ॥ ೧೨ ॥

ವಂದಿಸಲು ಭಸಿತವನು ಧರಿಸಿ ರಾಮಯ್ಯ |
ಇಂತಪ್ಪ ಶರಣರ ಪಂಚಾಕ್ಷರವು ಎನಗೆ ॥ ೧೩ ॥

ಸಂತತಂ ಕೇಳಿ ಬದುಕಿಸು ಕಪಿಲಸಿದ್ಧ |
ನೆಂತೆಂಬ ವೇಳೆಗೆ ಬಂದ ಮಾಚಯ್ಯ ॥ ೧೪ ॥

ತಂದೆ ರಾಮಯ್ಯಗೆ ವಂದಿಸಿಂತೆಂದು |
ಧರಣಿಯಾಕಾಶ ಶಶಿ ತರಣಿಯಡಗಿದರು ॥ ೧೫ ॥

ಹರಿಯಜಾಸುರರೆಲ್ಲ ಮರಣವೈದಿದರು |
ಪರಶಿವನು ನಿಷ್ಕಲಪಥವನೈದಿದರು ॥ ೧೬ ॥

ನಿರುತೆನ್ನ ಸತ್ಯಬಿಡದಿರುವಂತೆ ಮಾಡು |
ಗುರು ಲಿಂಗ ಜಂಗಮದ ಚರಣಸೇವೆಯೊಳು ॥ ೧೭ ॥

ಇರುವಂತೆ ಮಾಡೆನ್ನ ಗುರುಸಿದ್ಧರಾಮ |
ಮೃಡನಿಂದ್ಯ ಕೇಳದಂತೆ ಪ್ರಮಥರುಗಳ ॥ ೧೮ ॥

ಅಡಿಯ ಸೇವೆಯನೆಂದೂ ಬಿಡದಂತೆ ಮಾಡಿ |
ಒಡೆಯ ಸಲಹೆಂದು ಅಡಿಗೆರಗೆ ಮಾಚಯ್ಯ ॥ ೧೯ ॥

ಪಿಡಿದೆತ್ತಿ ರಾಮಯ್ಯ ನುಡಿದನಿಂತೆಂದು |
ಪುರಹರನ ಪದದರ್ಧಿ ಪುಣ್ಯಸತ್ಕೀರ್ತಿ ॥ ೨೦ ॥

ಪರಮ ದಯಪೂರ್ತಿ ಶರಣರ ಚಕ್ರವರ್ತಿ |
ಧುರಧೀರ ದುಷ್ಕೃತ ದೂರಮಾಚಯ್ಯ ॥ ೨೧ ॥

ಎಂದು ಶರಣರ ನೆನೆದು ಅವರನುಭವಾಬ್ಧಿ |
ಸರಸಿಜವ ಮಾಡೆನ್ನ ಗುರು ಕಪಿಲಸಿದ್ಧ ॥ ೨೨ ॥

ದೊರೆ ಸಲಹು ಮಾಚಯ್ಯ ಸ್ಥಿರಬಾಳು ಎನುತ |
ಧರಿಸಿದನು ಭಸಿತವನು ಹರಸಿ ರಾಮಯ್ಯ ॥ ೨೩ ॥

ವಚನ ॥ ಆ ವೇಳೆಯಲ್ಲಿ ಚೆನ್ನಬಸವಣ್ಣನವರು ಏನೆನ್ನುತಿರ್ದರು.

**ಜಂಪೆ.**

ಪರಮಯತಿ ಕೇಳು ರಾ | ಮಯ್ಯ ಈಬಗೆಯಲ್ಲಿ |
ಧರಿಸೆ ಭಸಿತವನು ತೀ | ರುವುದೆ ವರುಷಕ್ಕೆ ॥ ೧ ॥

ಶರಣಜನರಿಗೆ ಭಸಿತ | ಧರಿಸೆ ಒಬ್ಬೊಬ್ಬರಿಗೆ |
ಹರಗೆ ತೀರುವುದೆ ಒಂ | ದ್ವರುಷವಾದರೆಯು || ೨ ||

ಶರಣರೆಲ್ಲರ ಹತ್ರ | ಬರಿಸಿ ವಿಭೂತಿಯನು |
ಧರಿಸೆಂದ ಚೆನ್ನಣ್ಣ | ಹರುಷದಿಂದವರ್ಗೆ || ೩ ||

ಎನಲು ಶರಣರನೆಲ್ಲ | ಹರುಷದಿಂದಲಿ ಕರೆದು |
ವಿನಯದಿಂ ಧರಿಸಿದನು | ಮನಸಿಜನ ವೈರಿ || ೪ ||

ಅಮರಗಣ ರುದ್ರಗಣ | ಪ್ರಮಥಗಣರಿಗೆ ಸಿದ್ಧ |
ರಮಣ ಧರಿಸಿದನೊಂದು | ಕ್ಷಣಮಾತ್ರದೊಳಗೆ || ೫ ||

ಧರಿಸಿದನು ದುಃಖ ಮುಂ | ಬರಿಸಿದನು ಕಣ್ಣೀರ |
ಒರಸಿದನು ಶರಣರನು | ತೊರೆದೆನೆಂದೆನುತ || ೬ ||

ಕಂತುಹರರಾಮಯ್ಯ | ಚಿಂತೆ ನಿಮಗೇಕೆಂದು |
ಸಂತೈಸೆ ಚೆನ್ನಣ್ಣ | ಗಿಂತೆಂದರವರು || ೭ ||

ಇಂದುಧರಸುತ ಚೆನ್ನ | ದಂಡೇಶ ನೀಪ್ಪೋಗೆ |
ತಂದೆ ತಾಯ್ಗಳಗಲಿದ | ಕಂದ ನಾನೆಂದ || ೮ ||

ಬಸವೇಶ್ವರನು ಚೆನ್ನ | ಬಸವಣ್ಣಪ್ರಭುವಿನೊಡ |
ನೆಸೆವ ಪ್ರಮಥರು ಒಕ್ಕ | ಅಸಮ ಶೇಷವನು || ೯ ||

ತಂದೆ ಭವಭವದಿ ಶರ | ಣರು ಒಕ್ಕ ಶೇಷವ ನಾ |
ನೆಂದೆಂದು ಕಾಯ್ವಂತೆ | ಮಾಡೆಂದ ರಾಮು || ೧೦ ||

ಕಂತುಹರ ಶರಣರಂ | ಘ್ರಿಯ ಕಪಿಲಸಿದ್ಧೇಶ |
ಸಂತತಂ ನಾನು ನೆನೆ | ವಂತೆ ಮಾಡಯ್ಯ || ೧೧ ||

ಎಂದು ರಾಮಯ್ಯ ಗ | ಣಂಗಳೆಲ್ಲಕೆ ಭಸಿತ |
ಚಂದದಿಂ ಧರಿಸಿ ಆ | ನಂದದಿಂ ಹರಸೆ || ೧೨ ||

ಧರಿಸಿ ಭಸಿತವನು ದಯ | ವೆರಸಿ ಚೆನ್ನಣ್ಣಗಳು |
ಎರಗಿ ರಾಮಯ್ಯನಿಗೆ | ಒರೆದರಿಂತೆಂದು || ೧೩ ||

ವಚನ || ಚೆನ್ನಬಸವಣ್ಣನವರು ಸಿದ್ಧರಾಮಯ್ಯಸ್ವಾಮಿಗಳೊಡನೆ ಏನೆನ್ನುತಿರ್ದರು.

**ಸೀಸಪದ್ಯ.**

ತಂದೆ ಕೇಳ್ ರಾಮಯ್ಯ ಹಿಂದೆ ಜನ್ಮವು ಹರಿಯಿ |
ತೆಂದು ಮುಂದಕೆ ಬೇಡಿಕೊಂಬರೆಲ್ಲ || ೧ ||

ಮುಂದೆನಗೆ ಒಂದು ಜನ್ಮದ ಜಾಡ್ಯವಿಲ್ಲ ಸಾ ।
ಕೆಂದು ಶಿವಜಂಗಮವ ಕಂಡೆನಾಗಿ ॥ ೨ ॥

ಗುರು ಲಿಂಗ ಜಂಗಮಕ್ಕೆರಗಿ ಭಕ್ತಿಯಮಾಡಿ ।
ಹರಿಯಿತೆನ್ನಯ ಭವ ಹೆರೆಹಿಂಗಿತು ॥ ೩ ॥

ಪರಿಶುದ್ಧವಾಯಿತೆನ್ನಯ ಕಾಯವೆನಗಿನ್ನು ।
ಮರುಜನ್ಮವುಂಟೆ ಮನ್ಮಥನ ವೈರಿ ॥ ೪ ॥

ಇಂತಪ್ಪ ಶರಣರಸಂಖ್ಯಾತರಂಘ್ರಿಯನು ।
ಸಂತತಂ ಕಾಯ್ದು ಇರ್ಪಂತೆ ಮಾಡು ॥ ೫ ॥

ಚಿಂತೆನಾಶಕ ಚೆನ್ನ ಸಂಗಮ ಸಾಕ್ಷಿಯಾಗಿ ।
ಮುಂತೆ ಸಲಹೆನ್ನ ನಿಶ್ಚಿಂತ ರಾಮಯ್ಯ ॥ ೬ ॥

ವಚನ ॥ ಎಂದ ಚೆನ್ನಣ್ಣಗಳ ವಾಕ್ಯಕ್ಕೆ ಸಿದ್ಧರಾಮಯ್ಯಗಳು ಇಂತೆಂದರು ; ಆವಾವಭವಾಂತರದಲ್ಲಿಯೂ **ಚೆನ್ನಬಸವಣ್ಣನೇ ಗುರುವಾಗಿ** ನಾನೇ **ಶಿಷ್ಯನಾಗಿ** ಪ್ರಭುದೇವರೇ ಎನ್ನ **ಪರಮಾರಾಧ್ಯರಾಗಿ** ಪ್ರಮಥಗಣಂಗಳೆಲ್ಲಾ **ಬಂಧುವಾಗಿ** ಎನ್ನ ಗುರುವು ಚೆನ್ನಬಸವಣ್ಣನವರ ಜ್ಞಾನಪ್ರಸಾದವಂ ಸವಿದು ಬದುಕುವಂತೆ ಮಾಡಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಲಿಂಗವೇ, ಎಂದು ವಿಭೂತಿಯಂ ಧರಿಸಲು ಚೆನ್ನಬಸವಣ್ಣನವರು ಏನೆನ್ನುತಿರ್ದರು.

### ಭಾಮಿನೀ ಷಟ್ಪದಿ.

ಸ್ವಾಮಿ ಕೇಳ್ಳೈ ಸಿದ್ಧರಾಮ ನಿ ।
ಸ್ಸೀಮ ನಿನ್ನಯ ಚರಣಕಮಲವ ।
ಪ್ರೇಮದಿಂ ಪೂಜಿಸುವ ಶಿವಭಕ್ತಾದಿ ಶರಣರಿಗೆ ॥
ತಾಮಸದ ಭವಬಂಧನಂಗಳು ।
ಆವ ಪರಿಯಲಿ ಆಗಬಲ್ಲವೆ ।
ವ್ಯೋಮಕೇಶನ ಚರಣಸೇವೆಯೊಳಿಪ್ಪ ಮಹಿಮರಿಗೆ ॥ ೧ ॥

ಭವಿಗೆ ಬಂಧನ ಬಾಧೆ ನರಕವು ।
ಭುವಿಯೊಳಿರುವಾ ಕರ್ಮಿಜೀವಿಗ ।
ಳವರು ಚತುರಾಶೀತಿ ಲಕ್ಷದ ಜನನ ಮರಣಗಳು ॥
ಶಿವನ ಕಾರಣ ಜನಿಸಿ ಕ್ರಮದಲಿ ।
ಶಿವನ ಸೇವೆಯೊಳಿರುವ ಭಕ್ತಗೆ ।
ಭವಗಳುಂಟೇ ಭಕ್ತವತ್ಸಲ ಶಿವನ ನಂಬಿಹಗೆ ॥ ೨ ॥

ಧರೆಯೊಳಗೆ ಗುರು ಲಿಂಗ ಜಂಗಮ |
ಚರಣಸೇವೆಯ ಮಾಡಿಯವರಿಗೆ |
ಹರುಷದಲಿ ತನು ಮನ ಧನಂಗಳನರ್ಪಿಸುತ ಶಿವನ ||
ಸರಸಿಜಾಂಘ್ರಿಯ ಸತತ ಪೂಜಿಸಿ |
ಹರನ ಶ್ರೀ ಕೈವಲ್ಯಪದವಿಯ |
ನಿರದೆ ಪೊಂದುವ ಶರಣರಿಗೆ ಭಯವುಂಟೆ[1] ಭ[1] ಕ್ತರಿಗೆ || ೩ ||

ಮಾರಹರ ತನ್ನವರಿಗೋಸುಗ |
ತೋ[2] ರುತಿ[2] ಪ್ಪತ್ತೈದು ಲೀಲೆಯ |
ಬೇರೆ ಬೇರೊಂದೊಂದು ಅವತಾರದಲಿ ಆಡಿದನು ||
ಧಾರಿಣಿಯ ಶಿವಭಕ್ತಮಹಿಮರು |
ಆರು ಜನಿಸಲು ಅವರ ಲೀಲೆಯು |
ಮಿಾರಿ ಬೆಳೆವುದದಿಲ್ಲದಡೆ ಶಿವಮಹಿಮೆ ಮೆರೆದಪುದೆ || ೪ ||

ಮಾರಹರ ಕೈಲಾಸ ಮತ್ತದು |
ಧೀರಗಂಡನ ಮನೆಯು ಶರಣರು |
ಪಾರಭಕ್ತರ ಮಹಿಮೆ ಮೆರೆಯಲು ಮರ್ತ್ಯ ತೌರುಮನೆ ||
ಮೂರು ಪುರರಿಪುವೆಂಬ ಗಂಡನು |
ಧಾರಿಣಿಗೆ ಕಳುಹಿದರೆ ಜನಿಸಿಯೆ |
ಸಾರಸಜ್ಜನಭಕ್ತ ಶಿವಗುರು ಕರುಣಮಂ ಪಡೆದು || ೫ ||

ಪರಮ ಶ್ರೀ ಗುರು ಲಿಂಗ ಜಂಗಮ |
ಚರಣ ಸೇವೆಯಮಾಡಿ ಈಶನ |
ಹೊರೆಗೆ ಸೇರುವರಲ್ಲದೇ ಯಮಪುರಿಗೆ ಸೇರುವರೆ ||
ಗುರುವು ಲಿಂಗವು ಜಂಗಮವು ಎಂ |
ದರಿಯದಿಹ ನರಕಿಗಳು ಅನುದಿನ |
ತಿರುಗುವರು ಭವಭವದಿ ದುಃಖದ ಮರಣಗತಿಗಳಲಿ || ೬ ||

ಧರೆಯೊಳಗೆ ಪರಿಪರಿಯ ಭವದಲಿ |
ಮರಳಿ ಹುಟ್ಟುತ ತಿರುಗಿ ಸಾವುತ |
ದುರುಳ ಯಮದೂತರುಗಳೊಯ್ದಾ ಯಮನಲೋಕದಲಿ ||
ನರಕದಲಿ ಅದ್ದದ್ದಿ ತೆಗೆವುತ |
ನರಕ ತೀರಲು ಧರೆಗೆ ಕಳುಹುತ |
ಮರಳಿ ಜನಿಸುತ ಸಾಯುತಿಹರಂತಲ್ಲ ಶಿವಸಮಯ || ೭ ||

---

1-1 ಮು (ಟ.) 2-2 ರಿಯಿ (ಬ.)

ಹರನ ಪುರ ಕೈಲಾಸದಿಂದಲಿ ।
ಧರೆಗೆ ಬರುವರು ಶರಣರುದರದ ।
ಶರಧಿಯೊಳು ಜನಿಸುತ್ತ ಶ್ರೀಗುರು ಚರಣಸೇವೆಯಲಿ ॥
ಪರಮ ಶಿವಜಂಗಮುದ ತೀರ್ಥದ ।
ವರಪ್ರಸಾದವ ಸಲಿಸಿ ನಿತ್ಯವು ।
ಹರನ ಪೂಜಿಸಿ ದುರಿತ ಭವಗಳನುರುಹಿ ಕೆಡಿಸುವರು ॥ ೮ ॥

ಹರನು ಕಳುಹಲು ಧರೆಗೆ ಬರುವರು ।
ಹರನ ಲೀಲೆಯ ತೋರಿ ಮೆರೆವರು ।
ಹರನ ಪೂಜಿಸಿ ಪರಮಯೋಗವ ಬಲಿದು ಧಾತ್ರಿಯಲಿ ॥
ಸರಸಿಜದ ಅರಳಂತೆ ಮಣ್ಣೊಳ ।
ಗಿರುವ ಕುಂಡಲಿ ಕೀಟನಂದದಿ ।
ಶರಣರಿರುವರು ನರರ ಹೊಂದದೆ ಹರನ ಲೀಲೆಯಲಿ ॥ ೯ ॥

ಹರನ ಕೈಲಾಸಕ್ಕು ಮರ್ತ್ಯದೊ ।
ಳಿರುವ ಕಲ್ಯಾಣಕ್ಕು ನಮ್ಮನು ।
ಹರನು ಕಳುಹಿದ ಲೀಲೆತೀರದೆ ಇರುವ ಪರಿಯಂತ ॥
ಧರೆಗೆ ಕೈಲಾಸಕ್ಕೆ ಬಟ್ಟೆಯ ।
ತೆರವುಗೊಡದಾ ಶರಣದರುಶನ ।
ಧರೆಯೊಳೆಂದೆಂದಾದರೆಯು ಹೆರೆ ಹಿಂಗದಿನ್ನೆಮಗೆ ॥ ೧೦ ॥

ನಮಗೆ ನಮ್ಮಯ ಪ್ರಮಥರಿಗೆ ಮಿಗೆ ।
ಅಮರಗಣರೇಳ್ನೂರ ಎಪ್ಪತು ।
ಉಮೆಯವರ ಶರಣಾದ್ಯಸಂಖ್ಯಾತದಾ ಮಹಿಮರಿಗೆ ॥
ಸ್ವಾಮಿ ಕಳುಹಿದ ಲೀಲೆ ಬಿಡುಗಡೆ ।
ನೇಮವಿಹನಕ ಶರಣದರುಶನ ।
ಭೂಮಿಯೊಳು ತಾ ಹಿಂಗಲರಿಯದು ಸಿದ್ಧರಾಮಯ್ಯ ॥ ೧೧ ॥

ಧರೆಯೊಳಗೆ ಶಿವಸೇವೆಗೋಸುಗ ।
ವರಶರೀರವ ಧರಿಸುತೀಶನ ।
ಪರಮವ್ರತ ನೇಮಾದಿಕಾಯಕ ಶೀಲಗಳ ಪಿಡಿದು ॥
ಗುರುವಿನುಪದೇಶದಲಿ ಲಿಂಗದ ।
ಇರವರಿದು ಜಂಗಮುವ ಪೂಜಿಸಿ ।
ಹರನ ಹೊರೆಗೈದುವರು ಕೆಲಬರುಶರೀರವನು ನಿಲಿಸಿ ॥ ೧೨ ॥

ಕಾಯದಲಿ ರುದ್ರಾಕ್ಷಿಭಸಿತವು ।
ಆಯತವು ಪಂಚಾಕ್ಷರವು ಶಿವ ।
ಸ್ವಾಯತವು ಲಾಂಛನವು ಹರಚರ ಮುದ್ರೆಯಂ ನೋಡಿ ॥
ಮಾಯಮರ್ದನನೆಂದು ನಂಬದ ।
ನಾಯಿಗಳು ನರನೆನ್ನೆ ಅವರಾ ।
ಬಾಯಲಿಕ್ಕುವೆನುತ್ತಣ್ಣನವರಾ ಎಡದ ಪಾದುಕೆಯ ॥ ೧೩ ॥

**ದ್ವಿಪದಿ.**

ಶ್ರೀ ಭಸಿತ ರುದ್ರಾಕ್ಷಿ ಶಿಶಿಲಿಂಗಪೂಜೆ ।
ಶಿವಷಡಾಕ್ಷರಮಂತ್ರ ಶಿವಮೂರ್ತಿಧ್ಯಾನ ॥ ೧ ॥
ಶಿವಗಣಂಗಳ ಸೇವೆ ಸ್ಥಿರಕಾಲದಲ್ಲಿ ।
ಶಿವತತ್ವದನುಭಾವ ಶಿವಶರಣಗೋಷ್ಠಿ ॥ ೨ ॥
ನಿತ್ಯನೇಮವು ವ್ರತವು ಸತ್ಯಕಾಯಕವು ।
ಭಕ್ತಿಯಾಚಾರಭಾವವು ಶುದ್ಧಿಯಿಂದ ॥ ೩ ॥
ನಿತ್ಯಮಾಡುವ ಕ್ರಿಯಾಚಾರ ತತ್ವದಲಿ ।
ಅರ್ಥಿಯಿಂ ನಡೆಸುವ ಆ ಶಿವನ ಘನವು ॥ ೪ ॥
ಮತ್ತಿದೆಲ್ಲವು ಶಿವನ ಮಹಿಮೆಯೆಂಬುದನು ।
ಸತ್ಯರಲ್ಲದೆ ಜಗದ ಕತ್ತೆಮಾನವರು ॥ ೫ ॥
ಎತ್ತಬಲ್ಲರು ಶರಣರರ್ದ್ಧಿ ಮಹಿಮೆಯನು ।
ನಿಂದ್ಯೆ ವಂದನೆಯಿಂದ ನಿರಯನನುಭವಿಸಿ ॥ ೬ ॥
ಬಂದು ಭವಭವದಿ ಬಾಧೆಗೆ ಬೀಳುವಂಥ ।
ಹಂದಿಮನುಜರು ಮುಂದೆ ಅರಿಯುವರೆ ಶಿವನ ॥ ೭ ॥
ಮುಂದೆ ನಾವೆಲ್ಲ ಕೈಲಾಸಕ್ಕೆ ಪೋಗಿ ।
ಬರುವತನಕವು ಬಿಡದು ತೊಂದರೆಯು ಜಗಕೆ ॥ ೮ ॥

ವಚನ ॥ ಎಂದು ಕೇಳಯ್ಯ ! ಸಿದ್ಧರಾಮಲಿಂಗವೆ ನಾವು ಕೈಲಾಸಕ್ಕೆ ಪೋಗಿ ಬರುವತನಕ ಕಲಿಕಾಲದ ದುರ್ಘಟತೆ ಘನವಾದೀತೆಂದು ಚೆನ್ನಬಸವಣ್ಣನವರು ಏನೆನ್ನುತಿರ್ದರು.

**ಜಂಪೆ.**

ಶರಣರೆಲ್ಲರು ಕೇಳಿ । ಧರಣಿಯೊಳು ಕಲಿ ಹೆಚ್ಚಿ ।
ಉರವಣಿಸಿ ಕರ್ಮದಲಿ । ಒರಗುವುದು ಲೋಕ ॥ ೧ ॥

ಒಂದು ವರುಷ ಬಹಳ । ನೊಂದೀತು ಜಗವೆಲ್ಲ ।
ಮುಂದಕ್ಕೆ ನಾವು ಬರೆ । ಚಂದವಾದೀತು ॥ ೨ ॥

ಪೊಡವಿಯೊಳು ನಾವು ಅಡಿ । ಇಡೆ ಕಪಿಲಸಿದ್ಧನ ।
ಗುಡಿಯ ಪಂಚಾಘಂಟೆ । ನುಡಿದುದೇ ಸಾಕ್ಷಿ ॥ ೩ ॥

ರುದ್ರಮುನಿದೇವರ । ಚೆಂಗಲ್ಲಮಂಟಪದ ।
ಭದ್ರಕದವದು ತೆರೆದು । ಇರ್ದುದೇ ಸಾಕ್ಷಿ ॥ ೪ ॥

ಮುಂದೆ ನಾವೆಲ್ಲ ಬರು । ವಂದಿಗೇ ಮಹಿಮರುಗಳ್ ।
ಬಂದು ನಿಮ್ಮಡಿಯ ಸಂ । ದರುಶನವೆ ಸಾಕ್ಷಿ ॥ ೫ ॥

ಅಂದಿಗೆ ಪ್ರಮಥಗಣ । ವೃಂದವೆಲ್ಲರ ಒಡನೆ ।
ಮುಂದೆ ಉಳುವೆಗೆ ಎಮ್ಮ । ಬಂದಾರು ಎನ್ನಿ ॥ ೬ ॥

ಏಳುನೂರ್ವರುಷ ಬಹು । ಕಾಳಗದಿ ಜಗವೆಲ್ಲ ।
ಹಾಳಾಗಿ ನಾವು ಬರೆ । ಏಳಿಗೆಯು ಎನ್ನಿ ॥ ೭ ॥

ನಾಲ್ಕುಸಾವಿರದ ಏ । ಳ್ನೂರು ಎಪ್ಪತ್ತು ವರುಷ ।
ನೂಕೆ ಕಲಿಯುಗ ಮುಂದೆ । ಜೋಕೆ ಕಲ್ಯಾಣ ॥ ೮ ॥

ಸಂದಾಬ್ದ ಸಾಹಸ್ರ । ನಾ[1] ಲ್ಕು[1] ಮೀರಿದಾಚೆಯಾ ।
ನಂದನದ ಮುಂದೆ ಬಂ । ದಾನು ವಸವಂತ ॥ ೯ ॥

ಅಂದಿನಾನಂದದಾ । ಮುಂದಣಾನಂದದಲಿ ।
ಬಂದೇವು ಕಾರ್ತೀಕ । ಪೌರ್ಣೀಮಿದಿವಸ ॥ ೧೦ ॥

ಅಮರಗಣ ರುದ್ರಗಣ । ಪ್ರಮಥಗಣರೊಳು ನಾವು ।
ಸುಮನಸದಿ ಬಂದೆಲ್ಲ । ನಮಿಸುವೆವು ನಿಮಗೆ ॥ ೧೧ ॥

ತಂದೆ ಕೇಳ್ ರುದ್ರಮುನಿ । ಅಂದು ನಿಮ್ಮಂಘ್ರಿಯನು ।
ಬಂದು ಪೂಜಿಪೆ ಮೊದಲೆ । ಎಂದ ಚೆನ್ನಣ್ಣಾ ॥ ೧೨ ॥

ವಚನ ॥ ಎಂದು ರುದ್ರಮುನಿದೇವರಿಗೆ ನಮಸ್ಕಾರವಂ ಮಾಡಿ ಕಳುಹಿಸಿಕೊಂಬ ಸಮಯದಲ್ಲಿ, ಸಿದ್ಧರಾಮಯ್ಯಸ್ವಾಮಿಗಳು ರುದ್ರಮುನಿದೇವರೊಡನೆ ಏನೆನ್ನುತಿರ್ದರು.

**ಏಕತಾಳ.**

ತಂದೆ ಶ್ರೀ ರುದ್ರಮುನಿ । ಮುಂದೆ ಉಳುವೆಯ ಮನೆಗೆ ।
ಬಂದಿರೋ ನೀವಿಲ್ಲೆ । ನಿಂದಿರೋ ಎನಲು ॥ ೧ ॥

---

1-1 ಲ್ಕನು (ಅ, ಎ, ಒ, ಡ, ಬ.)

ಕೇಳಯ್ಯ ಸಿದ್ಧರಾ । ಮಯ್ಯಲಿಂಗವೆ ನಾನು ।
ಪೇಳುವೆನು ನಿನಗೊಂದು । ಆಲೋಚನೆಯನು ॥ ೨ ॥
ಲಿಂಗವೇ ನಮ್ಮಯ । ಚೆಂಗಲ್ವಮಂಟಪವ ।
ಹಿಂಗಿ ಬಾರೆನು ಕೇಳು । ಮಂಗಳಾತ್ಮಕನೆ ॥ ೩ ॥
ಹರನ ಲೋಕಕೆ ಪೋಗಿ । ಬರುವನಕ ಚೆನ್ನಣ್ಣ ।
ಇರುವೆನು ಕಲ್ಯಾಣ । ಪುರದಲ್ಲೆ ನಾನು ॥ ೪ ॥
ಮುಂದಣ ಕಥನಕ್ಕೆ । ಬಂದರೆ ಚೆನ್ನಣ್ಣ ।
ಬಂದೇನು ನಾನು ಇ । ನ್ನಂದಿನ ದಿನಕೆ ॥ ೫ ॥
ಉಳುವೆಯ ಮನೆಗೆಲ್ಲ । ಇಳಿವತನಕ ಶಿವಯೋಗ ।
ಮೊಳಗಿರ್ಪೆನಾ ಮಹಾ । ಕಳೆಯ ಬೆಳಗಿನಲಿ ॥ ೬ ॥
ನೆಲಬಿಲದ ಗವಿಯಲಿ । ಶಿವಯೋಗ ಸಮಾಧಿಯಲಿ ।
ಮಲಹರನ ಮಹಿಮರು । ಇರುವರನೇಕ ॥ ೭ ॥
ಇನ್ನು ಕೈಲಾಸಕ್ಕೆ । ಚೆನ್ನಣ್ಣನೊಂದಿನಲಿ ।
ಹನ್ನೆರಡುಸಾವಿರ । ಚೆನ್ನಜಂಗಮರು ॥ ೮ ॥
ಏಳನೂರೆಪ್ಪತ್ತು । ಭಾಳಾಕ್ಷಶರಣ ಸಂ ।
ಮೇಳ ಕೈಲಾಸಕ್ಕೆ । ತಾಳಿತು ಪಯಣ ॥ ೯ ॥
ಇಷ್ಟಲ್ಲದಾ ಮಹಾ । ದೃಷ್ಟಪ್ರಮಥಗಣ ।
ರಷ್ಟು ಈ ಲೋಕದಲಿ । ಇಷ್ಟು ನಿಲ್ಲುವರು ॥ ೧೦ ॥
ಇಲ್ಲಿ ಕಲ್ಯಾಣದೊಳ । ಗೆಲ್ಲ ಗಾವುದ ಕೋಶ ।
ದಲ್ಲಲ್ಲಿ ಶರಣಗಣ । ರೆಲ್ಲ ನಿಲ್ಲುವರು * ॥ ೧೧ ॥
ಸುತ್ತ ಕಲ್ಯಾಣ ನಾ । ಲ್ವತೆಂಟು ಯೋಜನವು ।
ಮೊತ್ತದಿಂ ರೂಪು ಮಾ । ಜುತ್ತ ನಿಲ್ಲುವರು ॥ ೧೨ ॥
ಮನುಜಪಾಪಿಗಳ ಕಣ್ಣಿ । ಗವರಿರುವ ಮನೆ ಮಠ ।
ಇನಿಸುಗಾಣಿಸದು ಒಂ । ದಿನಿಸಾದರಿನ್ನು ॥ ೧೩ ॥
ಯತಿವ್ರತಿ ಮುನಿಗಳು । ನ್ನತ ಮಹಾಮಹಿಮರು ।
ಶಿತಿಕಂಠಧ್ಯಾನದಿಂ । ಗುಪ್ತದಿಂದಿಹರು ॥ ೧೪ ॥

* ಈ ಪದ್ಯ (ಜ.) ಪ್ರತಿಯಲ್ಲಿಲ್ಲ.

ಈ ಪರಿಯ ಲೋಕದ । ಪಾಪಿಗಳಿಗೆ ತಮ್ಮ ।
ರೂಪು ಮಾಜಿರುವರು । ತಾಪಸರಂತೆ ॥ ೧೫ ॥

ವಚನ ॥ ಕೇಳಯ್ಯ ! ಸಿದ್ಧರಾಮಲಿಂಗವೆ ಎಂದು ರುದ್ರಮುನಿದೇವರು ಏನೆನ್ನುತಿರ್ದ್ದರು.

**ಅಟತಾಳ.**

ಶ್ರೀಗುರುವೆ ಶಿವಸಿದ್ಧರಾಮೇ । ಶ್ವರನೇ ನೀವು ನಿಮ್ಮಯ ।
ಯೋಗಸಮಾಧಿಯಲಿ ನೀವಿರಿ – ಭೋಗದಿಂದ ॥ ೧ ॥

ನಾವು ನಿಮ್ಮಯ ಜ್ಞಾನ ಶಿವಸ । ಮಾಧಿಯಲ್ಲಿ ಇರುವೆವು ।
ದೇವ ಕೇಳ್ಚಿಂಗಲ್ವಮಂಟಪ – ಠಾವಿನಲ್ಲಿ ॥ ೨ ॥

ಮುಂದೆ ಕೇಳ್ಚೆನ್ನಣ್ಣ ಉಳುವೆಗೆ । ಬಂದ ದಿನಕೆ ಎಲ್ಲರು ।
ಒಂದಿನಲಿ ಚಿತ್ತೈಸಿ ದರುಶನ – ದಿಂದ ಬಹೆವು ॥ ೩ ॥

ದಂಡನಾಯಕ ಬರುವತನಕವು । ಕಂಡುದೀಗಲೆ ನಿಮ್ಮನು ।
ಖಂಡಪರಶುವೆ ಸಿದ್ಧರಾಮೋ – ದ್ದಂಡಸ್ವಾಮಿ ॥ ೪ ॥

ಎಂದು ಒಬ್ಬೊಬ್ಬರಿಗೆ ಶರಣ ಸಂ । ಬಂಧಗಳನು ಮಾಡುತ ।
ಮುಂದೆ ಸಕಲ ಗಣಂಗಳನು ಬೀ – ಳ್ಕೊಂಡರಾಗ ॥ ೫ ॥

ರುದ್ರಮುನಿ ಶ್ರೀ ಸಿದ್ಧರಾಮೇ । ಶ್ವರನು ದಂಡಾಧೀಶಗೆ ।
ಇದ್ದ ಶರಣರಿಗರುಹಿ ಪೋದರ್‍ತಾ – ವಿದ್ದ ಸ್ಥಳಕೆ ॥ ೬ ॥

ಅತ್ತವರು ಚಿತ್ತೈಸಲಾಕ್ಷಣ । ಇತ್ತ ದಂಡಾಧೀಶನು ।
ಮತ್ತೆ ಮಡಿವಾಳಯ್ಯಗೆಂದ ಪ್ರ – ಯತ್ನಗಳನು ॥ ೭ ॥

ಕೇಳು ಮಡಿವಾಳಯ್ಯ ಇನ್ನುಂ । ಏಳು ಎಂಟು ಘಳಿಗೆ ಬೆಳಗಿ[1]ದೆ[1] ।
ಏಳಬೇಕಿದು ಸಮಯ ಶರಣರ – ಗೊಳ್ಳವೆಲ್ಲ ॥ ೮ ॥

ಎಂದ ಚೆನ್ನಣ್ಣಗಳ ವಾಕ್ಯಕೆ । ಎಂದ ಮಾಚಿದೇವನು ।
ಮುಂದೆ ಕೇಳ್ಚೆನ್ನಣ್ಣ ನೀಂ ಮುದ – ದಿಂದ ನಾನು ॥ ೯ ॥

ಘಳಿಲನೆಮ್ಮಯ ಶರಣರಂಜನ । ಹೊಳೆಯ ದಾಂಟಿಸಿ ಈಗಳು ।
ತಳುಹಮಾಡದೆ ಬಹೆನು ನಾನಿಮ್ಮ – ಬಳಿಗೆ ಎಂದ ॥ ೧೦ ॥

ಚೆನ್ನದಂಡೇಶ್ವರನೆ ನೀವು । ಕಿನ್ನರೇಶಾ ಸೊಡ್ಡಳ ।
ರಿನ್ನು ವೋಳಿಗಯ್ಯಗಳು ಕೂಗಿನ – ಮಾರಿತಂದೆಗಳು ॥ ೧೧ ॥

---

1-1 ಗೆ (ಇ, ಉ, ಖ, ಗ, ಚ, ಟ,ಡ.)

ಎಲ್ಲ ಶಿವಗಣರೊಡನೆ ನೀವು । ಇಲ್ಲಿ ಬಹಳ ಎಚ್ಚರ ।
ದಲ್ಲಿ ಇರುವದು ನಾನು ಬರುವಂ – ತಲ್ಲಿತನಕ ॥ ೧೨ ॥
ಬಾಗಿಲನು ಬಲಿಕೊಳ್ಳಿ ಒಬ್ಬರು । ಬರಲುಬೇಡಿ ಹೊರಗಡೆ ।
ಈಗ ಶರಣರ ಕಳುಹಿ ಈಕ್ಷಣ – ಬೇಗ ಬಹೆನು ॥ ೧೩ ॥
ಶರಣರೆಲ್ಲರು ಊರಬಾಗಿಲ । ಹೊರಡುವನಕ ಸಂಗಡ ।
ಕರೆದು ಶೂಲದಬೊಮ್ಮಿತಂದೆಯು – ನೆರಹುಗೊಂಡು ॥ ೧೪ ॥
ಒರೆದ ಚನ್ನಣ್ಣಂಗೆ ನಾನು । ಬರುವತನಕ ಬಾಗಿಲ ।
ತೆರೆಯಬೇಡೆಂದರುಹಿ ಹೊರಟನು – ಭರದಿ ಮಾಚಯ್ಯ ॥ ೧೫ ॥

ವಚನ ॥ ಆಗ ಮಾಚಿದೇವರು ಸಕಲ ಗಣಂಗಳಂ ಸಾಗಿಸಿಕೊಂಡು ನೈಋತ್ಯದ ನಾರಾಯಣನೆಂಬ ಊರಬಾಗಿಲಿಗೆ ಪೋಗಲು, ಬಾಗಿಲ ಕಾಯ್ವ ತಳವಾರನೇನೆನ್ನುತಿರ್ದನು.

**ಕೊಂಚೆ ಜಂಪೆ.**

ಇತ್ತ [1] ಈ ಹೊ [1] ತ್ತಿನಲಿ ಈಗ – ನೀವು । ಎತ್ತ ಪೋಗುವಿರಿನ್ನು ಬೇಗ ।
ಕರ್ತರಪ್ಪಣೆಯ ತರಲೀಗ – ನಾವು । ಅತ್ತ ಬಿಡುವೆವು ನಿಮ್ಮ ಬೇಗ ॥ ೧ ॥
ಎಲ್ಲಿ ಹೋಗುವಿ [2] ರೆಲ್ಲ ಇ [2] ಲ್ಲಿ – ದೊರೆಗ । ಳಲ್ಲಿ ಅಪ್ಪಣೆಯು [3] ಬೇಕಿ [3] ಲ್ಲಿ ।
ಇಲ್ಲಿ ಇಷ್ಟೊಂತ್ತಿನಲಿ ಈಗ – ಎಂದು । ಅಲ್ಲಿ ತಡೆದರು ಬಾಗಿಲಲ್ಲಿ ॥ ೨ ॥
ದೊರೆಗಳಪ್ಪಣೆಯು ಬರುವತನಕ – ನಿಮ್ಮ । ಹೊರಗಡೆ ಬಿಡೆವು ಆತನಕ ।
ತ್ವರಿತದಿಂ ಗುರುತ ತರುವನಕ – ನೀವು । ಬರಬೇಡಿ ಹೋಗಿ ಆತನಕ ॥ ೩ ॥
ಎಂದವರ ಮಾತುಗಳ ಕೇಳಿ – ಮಾಚಯ್ಯ । ನೆಂದ ಮನದಲಿ ಕಪಟತಾಳಿ ।
ಮುಂದೆ ದೊರೆಯಪ್ಪಣೆಯ ಕೇಳಿ – ನಮಗೆ । ಇಂದಿಗೆ ಮೂರುದಿನ ಕೇಳಿ ॥ ೪ ॥
ದೊರೆಗಳಪ್ಪಣೆಯಾದರಾಗ – ಅವರ । ಗುರುತೆಲ್ಲಿ ತೋರಿ ನಮಗೀಗ ।
ಕರೆದು ಶೂಲದಬೊಮ್ಮಿ ಬೇಗ – ಇದಿಗೊ । ಅರಮನೆಯ ಗುರುತೆನ್ನಲಾಗ ॥ ೫ ॥
ಬಲ್ಲಿರಾ ತಳವಾರರಿವನ – ಬರಹೋಗ । ಎಲ್ಲ ಕಾಲದಿ ಸಮುಖವಿಹನ ।
ಬಲ್ಲೆವಹುದೆಂದು ತಾವೊಪ್ಪಿ – ಕಾವಲವ । ರೆಲ್ಲರಿಂತೆಂದರರಿದಪ್ಪಿ * ॥ ೬ ॥
ಮಡದಿ ಪುರುಷರು ಮಕ್ಕಳೆಲ್ಲ – ದಂಡು । ನಡೆವಂತೆ ಬಂದಿರೇಕೆಲ್ಲ ।
ಒಡೆಯಕೂಡಲಸಂಗಗೆಲ್ಲ – ಮನೆತೀರ್ಥ । ನಡೆದೆವು ಗಣಪರ್ವಕೆಲ್ಲ ॥ ೭ ॥

1-1 ಇಷ್ಟೊ (ಒ, ಟ.) 2-2 ರಿನಿಲ್ಲಿನಿ (ಜ.) 3-3 ಬರಬೇಕುನಿ (ಟ.)
* ಈ ಪದ್ಯ (ಒ, ಗ, ಚ.) ಪ್ರತಿಗಳಲ್ಲಿ ಮಾತ್ರವಿದೆ.

ನಿಮ್ಮ ದೊರೆ ಹಿರಿಯ ಊಳಿಗವು – ಶೂಲದ ಬೊಮ್ಮಿ ಬಂದಹರೆ ಸಂಗಡವು ।
ಸುಮ್ಮನೆಂ[1] ದ[1] ರೀಗ ನೀವು – ನೋಡೆಂದು । ಬೊಮ್ಮಿತಂದೆಯ ತೋರಿತಾವು ॥೮॥

ದೊರೆಗಳೂಳಿಗ ಬಂದಬಳಿಕ – [2] ನಿ [2] ಮಗೆ । ಗುರುತೇಕೆ ಪೋಗಿ ಎಂದೆನುತ ।
ತೆರದ ಬಾಗಿಲ ಹೊರಡುವನಕ – ಮಾಚಯ್ಯ । ಹೊರಗೆ ನಿಂತೆಲ್ಲ ಬರುವನಕ ॥೯॥

ಬಂದ ಶರಣರನ್ನೆಲ್ಲ ನೋಡಿ – ಮಾಚಯ್ಯ । ಹಿಂದು ಮುಂದಾರೈದು ನೋಡಿ ।
ಒಂದಾಗಿ[3] ಎಲ್ಲ ಒ[3] ಡಗೂಡಿ – ನಡೆದನು । ಮುಂದಕ್ಕೆ ತಾ ಮನವಮಾಡಿ ॥೧೦॥

ವಚನ ॥ ಆಗ ಮಡಿವಾಳಯ್ಯಗಳು ಸಕಲ ಶರಣರನ್ನು ಮುಂದಕ್ಕೆ ಸಾಗಿಸಿ, ಶೂಲದಬೊಮ್ಮಿತಂದೆಯಂ ಕರೆದು ನೀವು ನಮ್ಮ ಸಂಗಡ ಕಳುಹಬಂದವರಾಗಿ ಹಿಂದಕ್ಕೆ ತಿರುಗಿ ಪೋಗಿ ಎಂದು, ಆ ಊರಬಾಗಿಲ ಹತ್ತಿರ ಹಿಂದಕ್ಕೆ ಕಳುಹಿಸಿ ಆ ಸಮಯದಲ್ಲಿ ಏನೆನ್ನುತಿರ್ದರು.

**ತ್ರಿವುಡೆ.**

ಬನ್ನಿ ಶೂಲದಬೊಮ್ಮಿತಂದೆಯೆ । ಇನ್ನು ಶರಣರ ಕಳುಹಿ ನಾನೂ ।
ಚೆನ್ನಬಸವೇಶ್ವರನ ಹತ್ತಿರ – ಕಿನ್ನು ಬರುವನಕ ॥ ೧ ॥
ಈಗ ಕೇಳ್ಚೆನ್ನಣ್ಣ ಹಸುಮಗ । ತಾಗುಬಾಗನು ಅರಿತನಲ್ಲವು ।
ಬಾಗಿಲನು ತೆಗೆದಾನು ಭದ್ರದಿ – ಹೋಗಿ ನೀವು ॥ ೨ ॥
ಈಗ ಶರಣರ ಕಳುಹಿ ಈಕ್ಷಣ । ಬೇಗ ಬರುವೆನು ನೀವು ಗಕ್ಕನೆ ।
ಹೋಗೆನುತ ಮಾಚಯ್ಯ ತಿರುಗಿದ – ನಾಗಲತ್ತ ॥ ೩ ॥
ಮತ್ತೆ ಚೆನ್ನಣ್ಣಗಳ ಹತ್ತಿರ । ಕರ್ತೃಶೂಲದಬೊಮ್ಮಿ ಪೋಗಲು ।
ಇತ್ತ ಮರಳಿದ ಶರಣರೊಳು ಮುದ – ವೆತ್ತು ಮಾಚಯ್ಯ ॥ ೪ ॥
ಎತ್ತು ಕಂಟಲೆ ಕಂಬಿ ಕಾವಡಿ । ಹೊತ್ತ ಹೊರೆಹಸುಬೆಗಳ ಶರಣರ ।
ಮೊತ್ತಸಾಗಿತು ಬಾಲ ವೃದ್ಧ ಕು – ಮಾರರರ್ಥಿಯಲಿ ॥ ೫ ॥
ಮೃಡನ ಕೈಲಾಸಕ್ಕೆ[4] ಶರಣರ[4] । ಹೆಡಗೆ ಜಾತ್ರೆಯು ಹೋಗುವಂದದಿ ।
ಮಡದಿ ಮಕ್ಕಳು ಸಹಿತ[5] ನಡೆದರು – ಒಡನೆ ಒ[5] ಗ್ಗಿನಲಿ ॥ ೬ ॥
ಧರೆಯೊಳಗೆ ಕಲ್ಯಾಣಪಟ್ಟಣ । ಸಿರಿಯು ಕೈಲಾಸಕ್ಕೆ ಹೋಗುವ ।
ತೆರದಿ ನಡೆಯಿತು ಶರಣಗೂಳ್ಯವು – [6] ಭರದೊಳಾಗ [6] ॥ ೭ ॥

1-1 ದಿ 2-2 ನ (ಜ, ಟ, ಡ.) (ಒ.) 3-3 ಶರಣರೊ (ಎ.) 4 4 ಹೋಗುವ (ಇ, ಒ, ಖ, ಗ, ಚ.) 5-5 ಯಲ್ಲರು । ನಡೆಯಿತೊ (ಇ, ಒ, ಎ, ಖ, ಗ, ಚ, ಟ.) 6-6 ಏನಪೇಳುವೆನು (ಎ.)

ಸದಮಲಾತ್ಮಕರಂಜನಾನದಿ । ಯೊಳಗೆ ಕರ ಚರಣಾದಿ ಮುಖವನು ।
ಮುದದಿ ತೊಳೆವುತ ಮದನವೈರಿಯು – ಭಜಿಸಿ ತೀವ್ರದಲಿ ॥ ೮ ॥

ಪದುಳದಲಿ ಶಿವಶರಣರಂಜನ । ನದಿಯ ದಾಂಟಿಸಿ ಮಾಚಿದೇವನು ।
ಒದವಿನಲಿ ಶರಣ[1] ರನು[1] ಚಿತ್ತೈ – ಸೆಂದು ಬೀಳ್ಕೊಟ್ಟ ॥ ೯ ॥

ಸಾಗಿ ನಿಮಗಿನ್ನಾವ ಭಯಬೇ । ಡೀಗ ಬರುವೆವು ನಿಮ್ಮ ಸಂಗಡ ।
ಪೋಗಿ ನಿಲ್ಲದೆ ಎಂದು ತಿರುಗಿದ – ನಾಗ ಮಾಚಯ್ಯ ॥ ೧೦ ॥

ತಿರುಗಿಬಂ[2] ದು[2] ಚೆನ್ನಬಸವಂ । ಗೆರಗಿ ಪೇಳ್ದನು ಶರಣರಂಜನ ।
ತರಂಗಿಣಿದಾಂಟಿಸಿದೆ ಪೋದರು – ಹರುಷದಿಂದ ॥ ೧೧ ॥

ಎಂದು ಪೇಳುವ ಸಮಯದಲಿ ಭೋ । ರೆಂದುಮೊಳಗುವ ಕಹಳೆ ನಾನಾ ।
ದುಂದುಭಿಯ ಬಹು ರಭಸವೆದ್ದುದು – ನೃಪನ ಓಲಗದಿ ॥ ೧೨ ॥

ಕೇಳಿ[3] ರೈ[3] ಚೆನ್ನಣ್ಣ ಬಿಜ್ಜಳ । ನೋಲಗವು ಪರಿಯಿತ್ತು ರಭಸವು ।
ತೂಳುವರೆ ತುಂಬಿತ್ತು ನೃಪನಳಿ – ವೇಳೆಯಾಯ್ತು ॥ ೧೩ ॥

ವಚನ ॥ ಎಂದು ಮಡಿವಾಳಯ್ಯಗಳು ಬಿಜ್ಜಳನ ಕೊಲ್ಲುವ ಸಮಯ ವಾಯಿತು ಎಂದು ಪೇಳುವಲ್ಲಿ ಅತ್ತ ಜಗದೇವ ಮೊಲ್ಲೆಬೊಮ್ಮಣ್ಣಗಳ ಕೀರ್ತಿ ಪ್ರತಾಪವಂ ಪೇಳ್ವೆನದೆಂತೆನೆ.

## ಬಿಜ್ಜಳನ ವಧೆ.

**ದ್ವಿಪದಿ.**

ಶ್ರೀಮನ್ಮಹಾರಾಜ ಕ್ಷಿತಿಪ ಬಿಜ್ಜಳನು ।
ಭೂಮಿಯೊಳಗಧಿಕ ಭುಜಬಲ ಪರಾಕ್ರಮನು ॥ ೧ ॥
ಪ್ರೇಮದಿಂ ಸಕಲ ಸೌಭಾಗ್ಯಂಗಳಿಂದ ।
ಈ ಮಹಿಗೆ ಘನವೆಂದು ಇಳೆಯಾಳುತಿಹನು ॥ ೨ ॥
ಮಾಳವ ಮಗಧ ಮದ್ರಾಟ ಮರಾಟ ।
ಕಾಳಿಂಗ ಕಾಶ್ಮೀರ ಕಾಂಭೋಜದವರು ॥ ೩ ॥
ಲಾಳ ಗುರ್ಜರ ತುರುಕ ಲಾಟ ಕರ್ಣಾಟ ।
ಚೋಳ ಕೇರಳವು ಪಾಂಚಾಳ ಬರ್ಬರವು ॥ ೪ ॥
ಕೊಂಗು ಕೊಂಕಣ ಕೊಡಗು ಮಲೆಯಾಳದವರು ।
ವಂಗ ಸಿಂಗಳ ಪಾಂಡ್ಯ ಬಂಗಾಳದವರು ॥ ೫ ॥

---

1-1 ರಿಗೆ (ಇ, ಒ, ಖ.) 2-2 ದನು (ಓ, ಒ, ಖ, ಗ, ಚ, ಟ.) 3-3 ದ್ಯಾ (ಅ, ದ, ಬ.) ; ದನು (ಉ, ಎ, ಒ, ಖ, ಗ, ಚ, ಜ, ಟ.)

ಆಂಧ್ರ ಸಿಂಧು ಪುಳಿಂದ ಆರೆ ಸೌರಾಷ್ಟ್ರ ।
ಗಾಂಧಾರ[1] ಗೊಟ್ಟ[1] ಮಾಹೇಂದ್ರವಾ[2] ಮತ್ಸ್ಯ[2] ॥ ೬ ॥

ಮಧುರ ಮಾಳವದೇಶ ಕಕ್ಕಯ್ಯ ಗೊಲ್ಲ ।
ಪಾರಶಿ ಅರಬ್ಬಿ ತಿರುಪತಿ ನೀಲಕಂಠ ॥ ೭ ॥

ಧರೆಯೊಳೈವತ್ತಾರು ಧಾತ್ರಿಪಾಲಕರು ।
ಬಿರುದಾಂಕ ಮನ್ನೆಯರು ಭೀಕರದ ಭಟರು ॥ ೮ ॥

ಹಿರಿಯರು ಕಿರಿಯರು ಹೆಚ್ಚುಮಂತ್ರಿಗಳು ।
ಎರವಿಲ್ಲದೋಲೈಸಿ ಇರುವರೆಡ ಬಲದಿ ॥ ೯ ॥

ದೂರದೃಷ್ಟಿಯು ದೂರಶ್ರವಣವುಳ್ಳವರು ।
ಭೂರಿ ಶಕುನಜ್ಞರು ಬಹು ಪ್ರೌಢಜನರು ॥ ೧೦ ॥

ಇಂತಪ್ಪ ಸಭೆವೆರಸಿ ಇರುವ ಕಾಲದೊಳು ।
ಯಾರು ಕಾಣರು ಈಶ ಮುನಿವ ಕಾಲದಲಿ ॥ ೧೧ ॥

ವಚನ ॥ ರಾಕ್ಷಸಸಂವತ್ಸರದ ಫಾಲ್ಗುಣ ಶುದ್ಧ ಪೌರ್ಣಿಮೆ ಮಂಗಳವಾರದ ರಾತ್ರಿಯಲ್ಲಿ, ಹದಿನೆಂಟು ಘಳಿಗೆಗೆ ಬಿಜ್ಜಳರಾಯನು ಓಲಗಂ ಪರಿದು ತನ್ನರಮನೆಗೆ ಪೋಗುತಿರ್ದನದೆಂತೆನೆ.

**ಭಾಮಿನೀ ಷಟ್ಪದಿ.**

ಬಂದರಾಕ್ಷಣ ಬೆಸ್ತರಾ ಹೊ ।
ನ್ನಂದಣವ ಹೆಗಲಲ್ಲಿ ತಾಳಲು ।
ಬಂದು ಏರಿದ ನೃಪತಿ ಮನದಾನಂದ ಹರುಷದಲಿ ॥
ಹಿಂದೆ ಮುಂದೆಡ ಬಲ ಕುಮಾರಿಕೆ ।
ಹೊಂದಿ ಹಳೆಯಾ ಪೈಕಸಂದಣಿ ।
ಅಂದಳದ ಎಡಬಲದಿ ಜಗದೇವಯ್ಯ ಬೊಮ್ಮಯ್ಯ ॥ ೧ ॥

ಪಿಡಿದು ಎತ್ತಿದರೆರಡು ಪಂಜುಗ ।
ಳೆಡ ಬಲದಿ ಸೂರ್‍ಯಪ್ರಕಾಶದಿ ।
ಪೊಡವಿ ಬೆರಗಪ್ಪಂತೆ ತೋರುತಲಾ ಮಹಾ ಬೆಳಗು ॥
ನುಡಿದರವರಿವರೆನ್ನದಿರಿ ಜಗ ।
ದೊಡೆಯ ಮೊಲ್ಲೆಯಬೊಮ್ಮಿ ನಾವೆಂ ।
ದೊಡನೆ ಸುರಗಿಯ ತೆಗೆದು ಸವರಿಸಿ ಕೇಳ್ದರಾ ನೃಪನ ॥ ೨ ॥

---

1-1 ಬೂಟಕ 2-2 ಯಾಟ (ಟ.)

ಕೇಳು ನೃಪ ಬಿಜ್ಜಳನೆ ಹದಿನೇಳ್ ।
ಘಳಿಗೆಯೊಳಗೀಗರ್ಥವಾಯಿತು ।
ಪೇಳ್ದ ಜೀತವನಿಲ್ಲಿಮಗೆ ಈಕ್ಷಣದಿ ಕೊಡು ನೀನು ॥
ತಾಳಮೇಳದಿ ಪ್ರೋಪ ಅಂದಳ ।
ದಾಳುಗಳ ಧಿಃಕ್ಕರಿಸಿ ನಿಲ್ಲಿಸಿ ।
ಕೇಳಲವರಿಗೆ ನುಡಿದ ನೃಪ ಮಂದಿರಕೆ ನಡೆಯಿರಿ ನಾಂ * ॥ ೩ ॥

ಕೊಡುವೆ ನಿಮ್ಮಯ ಜೀತವೆನ್ನಲು ।
ನುಡಿದರೀರ್ವರು ಮಾತು ನಿನಗೆಲೆ ।
ಒಡೆಯ ಆಡಿದುದನ್ನು ನೆನೆಸಿಕೊ ಎಂದು ಝೇಂಕರಿಸಿ ॥
ಒಡನೆ ಸುರಗಿಯ ಕಿತ್ತು ನಿನ್ನಯ ।
ನುಡಿಯು ನಿನಗೆಲೆ ಎಂದು ಜರಿಯುತ ।
**ಬಿಡದೆ ಇರಿದೆತ್ತಿದರು ಶರಣದ್ರೋಹಿ ಭೂಪತಿಯ *** ॥ ೪ ॥

ಮದನವೈರಿಯ ಶರಣರನು ಮಿಗೆ ।
ಮಧುವರಸ ಹರಳರನು ನೋಯಿಸಿ ।
ದಧಮ ಪಾತಕ ದ್ರೋಹಿಯನು ನಾವ್ಕೊಂದೆವೆಂದೆನುತ ॥
ಒದಗಿ ತಿವಿದಬ್ಬರಿಸಿ ಕೂಗಲು ।
ಬೆದರಿ ಜನ ದಿಕ್ಕಾಗಿ ಓಡಲು ।
ಸದೆದು ಗರ್ಭವ ಸಿಗಿಯಲಾಕ್ಷಣ ಒದಗೆ ಕಲಿಭಟರು ॥ ೫ ॥

ಕಡಿದು ಹಿಡಿ ಕೊಲ್ಲೆಂದು ಹೋ ಎಂ ।
ದಡರಿಯಬ್ಬರಿಸುತ್ತ ಕೂಗಲು ।
ಹೊಡೆದು ತಲೆಗಳ ಕಡಿದು ಚಂಡಾಡಿದರು ಅರಿಭಟರ ॥
ಜಡಿದು ಖಡ್ಗವ ಪಿಡಿದು ಮುಂದಕೆ ।
ನಡೆದು ಬೊಬ್ಬೆಯ ಹೊಡೆದು ಮುಂದಲೆ ।
ಪಿಡಿದು ತಲೆಗಳ ಹೊಡೆದು ಕೆಡಹಲು ವೀರಬೊಬ್ಬೆಯಲಿ ॥ ೬ ॥

ನೂಕುತಾಕಿಲಿ ನುಗ್ಗಿಬರುತಿಹ ।
ಕಾಕುಮನುಜರ ಕಡಿದು ತಲೆಗಳ ।
ಹಾಕಿದರು ಹಾ ಎಂದು ಅಬ್ಬರಿಸಿದರು ಹರಿಹರಿದು ॥
ನೂಕಿ ಮುಂದಕೆ ಸಾಗಿಗೊಡದಲ ।
ನೇಕಬಲ ಬಂದೊದಗೊ ಸಮಯಕೆ ।
ಹೋಕುಲಿಲಿ ಹೋ ಎಂದು ಬಂದನು ವೀರಮಾಚಯ್ಯ ॥ ೭ ॥

---

* ಈ ಪದ್ಯಗಳು (ಅ, ಜ, ಟ, ದ, ಬ.) ಪ್ರತಿಗಳಲ್ಲಿಲ್ಲ.

ಹೆದರದಿರಿ ಹಿಮ್ಮೆಟ್ಟದಿರಿ ಕಿಂಚಿ ।
ದ್ಬೆದರದೆ ಮನದಲ್ಲಿ ಚಂಚಲ ।
ಹೃದಯದಲಿ ಎಳ್ಳನಿತು ಭಯಬೇಡೆಂದೆಚ್ಚರಕೊಡುತ ॥
ಸದೆದು ಸವರುತ ಸಕಲ ಬಲವನು ।
ಒದೆದು ತರಿತರಿದಿರಿದು ಕೆಡಹುತ ।
ಒದಗಿದನು ಮಾಚಯ್ಯ ಜಗದೇವಯ್ಯಗಳ ಬಳಿಗೆ ॥ ೮ ॥

ಅಂದು ಜಗದೇವಯ್ಯಗಳನಾ ।
ನಂದದಿಂ ಬಿಗಿಯಪ್ಪಿ ಕೇಳಿದ ।
ತಂದಿರಾ ಗುರುತೆಲ್ಲಿ ದ್ರೋಹಿಯ ಕೊಂದುದಕೆ ಸಾಕ್ಷಿ ॥
ತಂದೆ ಕೇಳ್ಮಡಿವಾಳದೇವರೆ ।
ಕೊಂದೆವಾ ಬಿಜ್ಜಳನ ಕ್ಷಣದೊಳು ।
ಬಂದು ಕವಿದುದು ಬಹಳದಲಿ ಮೈಗಾವ [1] ಲಿನ [1] ಭಟರು ॥ ೯ ॥

ಹಿಂದು ಮುಂದಕೆ ಸಾಗಲೀಸದೆ ।
ಬಂದು ಕವಿಯಲು ಗುರುತ ತರುವರೆ ।
ಹೊಂದಲಿಲ್ಲದೆ ಹೋರುತಿರ್ದೆವು ಸಕಲ ಬಲದೊಡನೆ ॥
ತಂದೆ ನಿಮ್ಮಡಿಯಾಸೆಯಿಂದಲಿ ।
ಇಂದು ಶಿವದ್ರೋಹಿಯನು ಕೊಂದೆವು ।
ಎಂದು ಪೇಳಲು ಹರುಷದಲಿ ಇಂತೆಂದ ಮಾಚಯ್ಯ ॥ ೧೦ ॥

ಹೋಗಿ ನೀವಿಲ್ಲಿರದೆ ಮುಂದಕೆ ।
ಸಾಗಿ ಕವಿದಿಹ ಸಕಲ ಬಲವನು ।
ಚಾಗುಬಾಗನೆ ಮಾಡಿ ಬಿಡಿಸುವೆನೀಗ [2] ದಾರಿಯನು [2] ॥
ಬೇಗ ನೃಪನನು ಕೊಂದುದಕೆ ಗುರು ।
ಶೀಗ ತರುವೆನು ನೀವು ಸಂಗಡ ।
ಹೋಗಿ ಎನುತಲಿ ಹೊಕ್ಕ ಭರದೊಳಗಾಗ ಮಾಚಯ್ಯ ॥ ೧೧ ॥

ಹೊ [3] ಕ್ಕು ಕವಿ [3] ಕವಿದಿರ್ದ ಬಲವನು ।
ದಿಕ್ಕು ದಿಕ್ಕನೆ ಮಾಡಿ ಕಡಿಕಡಿ ।
ದಿಕ್ಕಿದನು ಸಕಲಾದಿ ಭೂತಗಣಕ್ಕೆ ದಿಗ್ಬಲಿಯ ॥
ಗಕ್ಕನೆ ಜಗದೇವ ಬೊಮ್ಮಿಯು ।
ತಕ್ಕಯಿಸಿ ಮುಂಡಾಡಿ ವೈರಿಗೆ ।
ಸಿಕ್ಕಲೀಸದೆ ಮನೆಗೆ ಕಳುಹಿದನಾಗ ಮಾಚಯ್ಯ ॥ ೧೨ ॥

---

1-1 ಲರಿ (ಇ, ಒ, ಚ.) 2-2 ಧಾತ್ರಿಯಲ್ಲಿ (ಇ, ಉ, ಎ, ಒ, ಖ, ಗ, ಚ, ಜ, ಟ, ದ.)
3-3 ಕ್ಕನಾ (ಇ, ಎ, ಖ, ಗ, ಚ.)

ಹೋಗಿ ಸೋಮಾಯಕ್ಕ ತಾಯಿಗೆ ।
ಆಗ ನಮಿಸಲು ಶಿವನ ಪುಷ್ಪಕ ।
ಬೇಗ ಬಂದುದು ದೇವದುಂದುಭಿ ಸಕಲ ಗಣಸಹಿತ ॥
ಸಾಗಿ ಸೋಮಾಯಕ್ಕ ಸಹ ಜಗ ।
ದೇವ ಮೊಲ್ಲೆಯಬೊಮ್ಮ ತಂದೆಗ ।
ಳಾಗ ಪುಷ್ಪಕವೇರಿ ನಡೆದರು ಬೇಗ ಶಿವನೆಡೆಗೆ ॥ ೧೩ ॥

ಇತ್ತ ಮಡಿವಾಳಯ್ಯ ಕವಿಕವಿ ।
ದೊತ್ತಿ ಬರುತಿಹ ಸಕಲ ಬಲವನು ।
ಚಿತ್ತಹೊತ್ತಿಲಿ ಹೊಯ್ದು ಹೊಕ್ಕನು ಬಿಜ್ಜಳನ ಬಳಿಗೆ ॥
ಮತ್ತೆ ನೋಡಿದ ಬಿಜ್ಜಳನ ಹೆಣ ।
ಸತ್ತು ಬಿದ್ದಿರಲವನ ಬಲಗೈ ।
ಹಸ್ತವನು ಕೊಯ್ಕೊಂಡು ತಿರುಗಿದನಿತ್ತ ಮಾಚಯ್ಯ ॥ ೧೪ ॥

ಈಶಶರಣರ **ಕೈಲಿ ಸತ್ತನು ।**
ಲೇಸಿನಿಂದಲಿ ಬಿಜ್ಜಳನು ಕೈ ।
ಲಾಸಕೈದಿದ[1] ನೆಂದಿನಂದದಿ[1] **ದಿವ್ಯಕಾಯದಲಿ** ॥
ಈಶನಂಘ್ರಿಗೆ ನಮಿಸಿ ಸುಖಸಂ ।
ತೋಷದಲಿ ಕೈಲಾಸ ಬಾಗಿಲ ।
ವಾಸದಲಿ ಕಾದಿರ್ದ ದ್ವಾರದ ಪಾಲಕನು ಎನಿಸಿ ॥ ೧೫ ॥

ತಿರುಗಿದನು ಮಾಚಯ್ಯ ನೋಡಿದ ।
ನುರವಣಿಸಿ ಕವಿದಿರ್ದ ಬಲವನು ।
ಹರಿಯು ಕರಿಗಳಿಗೆರಗಿ ತಾ ಸಂಹರಿಸುವಂದದಲಿ ॥
ಕರಿಯ ಕುಂಭವ ಹಿಡಿದು ತಿರುಹುತ ।
ತುರಗ ತುರಗದೊಳಿಟ್ಟು ಕೆಡಹುತ ।
ಮುರಿದು ರಥಗಳ ಕೊರೆದು ಮಂದಿಯನಿರಿದ ಕಲಿಭಟರ ॥ ೧೬ ॥

ಬೀಗದವ ತಳವಾರನಾಯಕ ।
ನಾಗರಾಜನು ಎಂಬವನು ದಿ ।
ಕ್ಕಾಗಿ ಓಡಿದ ತನ್ನ ಮಂದಿಯ ಕುದುರೆ ಬಲಸಹಿತ ॥
ಕೂಗಿ ಬೊಬ್ಬಿರಿದಿರಿದು ಕೆಡಹಿದ ।
ಸಾಗಲೀಸದೆ ಸಕಲ ಬಲವನು ।
ಹೋಗಲೀಸದೆ ಹೊಡೆದು ಕೆಡಹಿದನಾಗ ಮಾಚಯ್ಯ ॥ ೧೭ ॥

1-1 ಯಂದಿನಂತೆಯು (ಉ.)

ಅತ್ತ ಬಿಜ್ಜಳ ಸತ್ತ ಸುದ್ದಿಯ ।
ನಿತ್ತ ಕೇಳುತ ಅಳಿಯಬಿಜ್ಜಳ ।
ನತ್ತು ಹೊರಳಿದ ಮತ್ತೆ ಕೋಪಾಟೋಪವೆಗ್ಗಳಿಸಿ ॥
ಕತ್ತಿ ಹರಿಗೆಯ ಸಬಳಭಟರಿಂ ।
ಹಸ್ತಿ ತುರಗದ ಮೊತ್ತದಿಂದಲಿ ।
ಮುತ್ತಿದನು ಶ್ರೀ ಚೆನ್ನದಂಡಾಧೀಶನರಮನೆಯ ॥ ೧೮ ॥

ಹರನ ಬಿರುದಿನ ವರಕುಮಾರರು ।
ಧುರಕೆ ಸಿಂಹಗಳೆನಿಪ ಶೂಲದ ।
ಶರಣಬೊಮ್ಮಯ್ಯ ಕಿನ್ನರಿಯ ಬೊಮ್ಮಯ್ಯಗಳು ಬೇಗ ॥
ಎರಗಿ ಚೆನ್ನಣ್ಣಂಗೆ ಪೇಳುತ ।
ಹೊರಡುತರಮನೆಯಿಂದ ಬೇಗದಿ ।
ಭರದಿ ಹೊಡೆದಾಡುತ್ತ ತಾಕಿದರಳಿಯಬಿಜ್ಜಳನ ॥ ೧೯ ॥

ಒಂದು ಕಡೆಯಲಿ ಕಿನ್ನರೇಶನು ।
ಒಂದು ಕಡೆಯಲ ಬೊಮ್ಮ ತಂದೆಯು ।
ಸಂದಣಿಸಿ ಕವಿದಿರ್ದ ಮೋಹರ ಮಂದಿ ಕುದುರೆಯನು ॥
ಕೊಂದು ಕೊಲೆಯಾಡುತ್ತಲೀರ್ವರು ।
ನಿಂದು ಕಾದುತ್ತಿರಲು ಬೇಗದಿ ।
ಬಂದನಾಕ್ಷಣ ವೀರಬೊಬ್ಬೆಗಳಿಂದ ಮಾಚಯ್ಯ ॥ ೨೦ ॥

ಬಂದು ಚೆನ್ನಣ್ಣಂಗೆ ವಂದಿಸಿ ।
ಕೊಂದೆವಾ ಪರವಾದಿಯನು ಗುರು ।
ತೆಂದು ತೋರಿದ ಬಿಜ್ಜಳನ ಕೊಯ್ತಂದ ಹಸ್ತವನು ॥
ತಂದೆ ಕೇಳೀ ಅಳಿಯ ಬಿಜ್ಜಳ ।
ಬಂದು ಕಾದುತಲಹನೆ ಕೊಲ್ಲುವೆ ।
ನೆಂದು ಪೇಳುತ ಬಿಸುಟ ಬೀದಿಗೆ ತಂದ ಹಸ್ತವನು ॥ ೨೧ ॥

ಘುಡಿಘುಡಿಸಿಯಾರ್ಭಟಿಸಿ ಕೋಪದಿ ।
ನಡೆದು ಖಡ್ಗವ ಜಡಿದು ಹೊಕ್ಕನು ।
ಕಡಿಯೆ ಶಿರಗಳು ಮಿಡಿಯೆ ಮುಂಡವು ಪೊಡವಿಗುರುಳಿದವು ॥
ಪಡೆಮುರಿದು ದಿಕ್ಕಾಗಿಯೋಡಲು ।
ಬಿಡದೆ ಬೆಂಬತ್ತುತ್ತ ಭಟರನು ।
ಹೊಡೆದ ಹೆಡಮುಡಿ ಬಾಹು ಭುಜಗಳು ಕೆಡೆದು ಉರುಳಿದವು ॥ ೨೨ ॥

ಇಟ್ಟಣಿಸಲಾ ಅಳಿಯಬಿಜ್ಜಳ ।
ಅಷ್ಟದಿಕ್ಕಿಲಿ ಕವಿದು ನೂಕಲು ।
ದಿಟ್ಟ ನೋಡಿದ ಜೈನಕೀಟಕ ಹೊರಟು ಬಾರೆನುತ ॥
ಅಟ್ಟಿದನು ಕಾಲಾಳ ಕಡುಗಲಿ ।
ಕುಟ್ಟಿದನು ಕರಿ ತುರಗ ರಥಗಳ ।
ಒಟ್ಟಿದನು ಹೆಣವೆದೆಯ ಕೆಲಬರನಿಟ್ಟ ಕೈಸೆರೆಯ ॥ ೨೩ ॥

ದಿಟ್ಟಿಸಿದನಾ ಅಳಿಯಬಿಜ್ಜಳ ।
ಕೆಟ್ಟೆನೆಂದೆನುತೋಡಿಯರಮನೆ ।
ಥಟ್ಟನೆಯೆ ಒಳಪೊಕ್ಕು ಬಾಗಿಲನಿಟ್ಟು ಬಲಿಕೊಂಡ ॥
ದೃಷ್ಟ ಮೂರುತಿ ಮಾಚಿದೇವನು ।
ಕುಟ್ಟಿ ಬಲವನು ಸಕಲ ಭಟರನು ।
ಅಟ್ಟಿ ತಿರುಗಿದ ಚೆನ್ನದಂಡೇಶ್ವರನ ಹೊರೆಗಾಗಿ ॥ ೨೪ ॥

ಬಂದು ಚೆನ್ನಣ್ಣಂಗೆ ವಂದಿಸಿ ।
ಎಂದನೀಕ್ಷಣವಿರದೆ ಸಾಗಿರಿ ।
ತಂದೆಗಳಿರಾ ತಡವಮಾಡದಿರೆಂದ ಮಾಚಯ್ಯ ॥
ಎಂದರಾಕ್ಷಣ ಚೆನ್ನಬಸವನು ।
ಮಂದಿ ಕುದುರೆಯು ಸಕಲ ಶರಣರ ।
ಒಂದಿನಲಿ [1] ದಳ [1] ಗೂಡಿ ಸಾಗಿದನಂದು [2] ಶೀಘ್ರ [2] ದಲಿ ॥ ೨೫ ॥

**ಕಂದಪದ್ಯ.**

ಇಂದುಧರಶರಣದ್ರೋಹಿಯ ।
ನಿಂದಕಬಿಜ್ಜಳನ ಕೊಂದು ಗಣಸಭೆ ಸಹಿತಂ ॥
ಮುಂದುಳುವೆಗೆ ಪೋದರನಿತ ।
ರೆಂದೆಂಬಲ್ಲಿಗೆ ಸಂಧಿಯು ತಾಂ ಸಂಪೂರ್ಣಂ ॥ ೧ ॥

ಇಂತಿ ಪದ್ಯಗಳು ೭೭೩

**ಅಂತು ಸಂಧಿ ೨೨ ಕ್ಕಂ ಸಂಪೂರ್ಣಗಣನೆ– ೬೧೯೦ ಕ್ಕಂ ಮಂಗಳ ಮಹಾ**

**ಶ್ರೀ ಶ್ರೀ ಶ್ರೀ ಶ್ರೀ ಶ್ರೀ**



1-1 ಬಲ (ಎ, ಬಿ.) 2-2 ತೀವ್ರ (ಅ, ಎ, ಒ, ಜ, ಟ, ಡ, ಬ.)

ಇಪ್ಪತ್ತಮೂರನೆಯ ಸಂಧಿ

# ಗಣಂಗಳು ಉಳುವೆಗೆ ಹೊರಟದ್ದು

**ವೃತ್ತ.**

ಶ್ರೀಗುರುವೆ ಸರಸಿಜಭವಕಪಾಲ ಭಿಕ್ಷಾಂದೇಹಿ |
ಬೇಗದಿ ಪರಮ ಪುರುಷ ಶಿವ ನೀಂ ಸಂತೋಷಂಮಾಡು ||
ಈಗಲು ಶರಣರ ಕದನವ ಶಾಂತವಂ ಮೇಣ್ಮಾಡಿ |
ಸಾಗಿಸಿ ಉಳುವೆಗೆ ಮೆರೆದುದ ನಾಂ ನುತಿಪೆಂ ಪಾಹಿ || ೧ ||

**ದ್ವಿಪದಿ.**

ಶ್ರೀಗುರು ವರಮೂರ್ತಿ ಚೆನ್ನದಂಡೇಶ |
ಆಗ ಉತ್ತಣ್ಣಗಳ ಅತಿವೇಗ ಕರೆದು || ೧ ||

ಈಗ ಪುರದೊಳಗಿರ್ಪ ಈಶಶರಣರನು |
ಸಾಗಿಸು ಹನ್ನೆರಡು ಸಾವಿರತುರಗಗಳ * || ೨ ||

ಏಳನೂರೆಪ್ಪತ್ತು ಅಮರಗಣರನ್ನು * |
ಭಾಳಾಕ್ಷ ಷಟ್ಸ್ಥಲದ ಬ್ರಹ್ಮಿಗಳನೆಲ್ಲ || ೩ ||

ವೇಳೆಯಾಯಿತು ಬೇಗ ಎಬ್ಬಿಸಿತಹುದು |
ಎಂದು ನೇಮಿಸಲಾಗ ಎದ್ದು ಉತ್ತಣ್ಣ || ೪ ||

ಬಂದನಾ ಶರಣರ ಬಳಿಗೆ ಬೇಗದಲಿ |
ಇಂದುಧರಶರಣರೆಲ್ಲರನು ಒಡಗೊಂಡು || ೫ ||

ಮಂದಿ ತುರಗವು ತಮ್ಮ ಮನೆಯ ಕೈಜೀತ |
ಬಂದಿತು ಚೆನ್ನಬಸವಣ್ಣನ ಬಳಿಗೆ || ೬ ||

ಪೊಡವಿಮೂಷಕವೈರಿ ಮಡಿವಾಳದೇವ |
ಹಿಡಿದ ಛಲ ಬಿಡದ ಶೂಲದಬೊಮ್ಮತಂದೆ || ೭ ||

ಮೃಡನ ಬಿರುದಾಂಕ ಕಡುಗಲಿಯು ಕಕ್ಕಯ್ಯ |
ಹೊಡೆದು ಶಿವದ್ರೋಹಿಗಳ ಕೆಡಹುವ ಕಿನ್ನರನು || ೮ ||

* ಈ ಅರ್ಧರ್ಧ ಪದ್ಯಗಳು (ಅ, ಉ, ಎ, ಗ, ಚ, ಜ, ಟ, ಡ, ಬ.) ಪ್ರತಿಗಳಲ್ಲಿಲ್ಲ.

ಕೂಗುಕೂಗಿಗೆ ಲಕ್ಷ ಕೊಲಿಸುವನವರ |
ಕೂಗಿನಾಮಾರಯ್ಯ ಬೇಗನೈತಂದ || ೯ ||

ಆಗ ಕೂಡಿದರಧಿಕ ಶರಣರರ್ಧಿಯಲಿ |
ಬೇಗ ಬಂದರು ಚೆನ್ನಬಸವಣ್ಣನೆಡೆಗೆ || ೧೦ ||

ಸಾಗಿದಾ ಚೆನ್ನಣ್ಣ ಸಕಲರೊಂದಾಗಿ |
ಬೇಗದಿಂ ಹೊರಟನತಿ ಶೀಘ್ರದಿಂದಲ್ಲಿ * || ೧೧ ||

**ತ್ರಿವುಡೆ.**

ಮೃಡನವರು ದಂಡೆದ್ದು ಮುಂದಕೆ | ನಡೆಯೆ ಕಲ್ಯಾಣದ ಮಹಾಸಿರಿ |
ಒಡನೆಯೈದಿತು ಶರಣರೊಂದಿಲಿ – ನಡೆದು ಬೇಗದಲಿ || ೧ ||

ಬಿಡದೆ ರಾಯನ ವಿಜಯಲಕ್ಷ್ಮಿಯು | ನಡೆಯಿತಾ ದಂಡೇಶನೊಂದಿಲಿ |
ಪೊಡವಿಪಾತಕರೊಡನೆ ಇರುವುದು – ಕಡಿಮೆಯೆಂದೆನುತ || ೨ ||

ನಡುಗಿತಾ ಕಲ್ಯಾಣ ತನ್ನಯ | ಒಡಲ ಜೀವವು ಹೊರಡುತಿದೆ ಇದ |
ತಡೆದು ಸಲಹುವರಿಲ್ಲವೆನುತಲಿ – ನಡುಗಿತಾ ಪುರವು || ೩ ||

ಧರೆಗೆ ಪಾತಕ ಅಳಿಯಬಿಜ್ಜಳ | ಇರದೆ ಬೆಂಬತ್ತುವದ ಶರಣರಿ |
ಗರುಹುವಂದದಿ ರವಿಯು ಪೂರ್ವದ – ಗಿರಿಗೆ ಬಂದ || ೪ ||

ಉರವಣಿಸಿ ಚೆನ್ನಣ್ಣ ತನ್ನಯ | ಶರಣದಂಡಿಲಿ ತೆರಳಿ ಬರುವುದ |
ಭರದಿ ಕಂಡರು ಊರಬಾಗಿಲ – ಬಲಿದರಾಕ್ಷಣದಿ || ೫ ||

ಆಗ ನೋಡಿದ ಮಾಚಿದೇವನು | ಬೇಗ ಹೋದನು ಊರಬಾಗಿಲ |
ಬೀಗವನು ಮುರಿದಿಕ್ಕಿ ಹೊಯ್ದನು – ಬಾಗಿಲವರನ್ನು || ೬ ||

ಇರಿದು ಕೆಡಹಿದ ಬಾಗಿಲವರನು | ತೆರೆದ ಕದಗಳನೆರಡ ಹಿಂದಕೆ |
ಉರವಣಿಸಿ ದಂಡೇಶ ಶರಣರು – ಭರದಿ ಪೊರಡೆಂದ || ೭ ||

ಇರಿದು ಬಾಗಿಲಕಾವಲವರನು | ತರಿದು ಬೀಗವ ಮುರಿಯೆ ಬೊಬ್ಬೆಯು |
ಪುರವ ಮುಸುಕಿತು ಅಳಿಯಬಿಜ್ಜಳ – ಗರುಹಿದರು ಚರರು || ೮ ||

ಅರಸೆ ಪೊರೆಯೊ ಎಮ್ಮ ರಕ್ಷಿಪ | ದೊರೆಯ ಕಾಣೆವು ನೃಪನು ಅಳಿದನು |
ಪುರವು ಕೊಳ್ಳೆಯು ಬಾಗಿಲವರನು – ಹಿರಿದು ಕೆಡಹಿದರು || ೯ ||

ದಂಡನಾಯಕ ಚೆನ್ನಬಸವನು | ದ್ದಂಡಶರಣರು ದಂಡುಗೂಡಿಯೆ |
ಮಂಡಲದಿ ಮಲತವರ ಖಂಡಿಸಿ – ಕದಲಿದರು ಎಲ್ಲಾ || ೧೦ ||

---

* ಈ ಅರ್ಧಪದ್ಯ (ಅ, ಉ. ಎ, ಗ, ಚ, ಜ, ಟ, ಡ, ಬ.) ಪ್ರತಿಗಳಲ್ಲಿಲ್ಲ.

ಇರಿ[1] ದಿರಿದು ತರಿತರಿದು ಬಾಗಿಲೊ | ಳಿರುವ[1] ಭಂಟರನೆಲ್ಲ ಖಂಡಿಸಿ |
ತೆರೆದುಬಿಟ್ಟರು ಊರಬಾಗಿಲ – ಹೊರಟರವರೆಲ್ಲ * || ೧೧ ||

ಎಂದು ಕೂಗುವ ಮಾತ ಕೇಳುತ | ಬಂದನಾಕ್ಷಣ ಅಳಿಯಬಿಜ್ಜಳ |
ಮಂದಿ ಗಜ ರಥ ತುರಗವನು ಕರೆ – ಎಂದು ಚರರಟ್ಟಿ || ೧೨ ||

ಹೋದರಾಕ್ಷಣ ಚರರು ಪುರದಾ | ಬೀದಿ ಬೀದಿಗಳಲ್ಲಿ ದಳವನು |
ಮೇದಿನೀಪತಿ ಕರೆಸಿದನು ಎಂ – ದೆನುತ ಸಾರಿದರು * || ೧೩ ||

ಬಂ[2] ದಿತಾ[2] ಕ್ಷಣ ಬಲವು ಶಂಖಗ | ಳಿಂದ ಕೋಟಿಯು ತುರಗ ಲಕ್ಷವು |
ಸಿಂಧುರವು ರಥ[3] ವಾಜಿ ಸಾಸಿರ್ಪ – ನ್ನೆರಡು[3] ಕೂಡಿದವು * || ೧೪ ||

ಪಟಲು ಬಾಣ ಫಿರಂಗಿ ಕೋವಿಯ | ಭಟರು ಹರಿಗೆಯ ಬಿಲ್ಲಿನಲಿ ಸಂ |
ಘಟಿಸಿತಾಕ್ಷಣ ಅಳಿಯಬಿಜ್ಜಳ – ರಾಯನಿದಿರಿನಲಿ || ೧೫ ||

ಬಂದ ಬಲವನು ನೋಡಿ ಮನದಾ | ನಂದದಲಿ ಆ ಶರಣಸಭೆಯನು |
ಕೊಂದುಬಿಸುಡುವೆನೆಂದು ಉಮ್ಮಳಿ – ಸಿದನು ಮನದೊಳಗೆ || ೧೬ ||

ಕರಿಯು ಕೇಸರಿಗೆರಗುವಂದದಿ | ಉರಗ ಗರುಡನ ತರುಬುವಂದದಿ |
ಶರಣರ್ಬೆನ್ನೊಳು ಧಾಳಿಸರಿದನು – ಭರದಿ ಗಜವೇರಿ || ೧೭ ||

ಸುತ್ತಮುತ್ತಲು ಸಾಲುಸತ್ತಿಗೆ | ಎತ್ತಿರಲು ಚಾಮರ ಪತಾಕೆಗ |
ಳೆತ್ತ ನೋಡಲು ಬಲದವೋಹರ – ವೊತ್ತ ವೊತ್ತದಲಿ || ೧೮ ||

ಎಡಬಲದಿ ಭೋರ್ಗರೆವ ಕಹಳೆಯು | ಗಿಡಿಬಿಡಿಯು ನಿಸ್ಸಾಳ ದುಂದುಭಿ |
ನುಡಿಯೆ ಭೂಮಿಯು ಜಡಿಯೆ ಫಣಿಪೆಡೆ – ಮುಡಿಯೆ ದಳನಡೆಯೆ || ೧೯ ||

ಹರನ ಉಗ್ರದ ಉರಿಯ ನಂದಿಪ | ತರಗಿನಂದದಿ ಅಳಿಯಬಿಜ್ಜಳ |
ಭರದಿ ಪೋಗುವ ಶರಣರನು ಕಂ – ಡುರವಣಿಸಿ ನಡೆದ || ೨೦ ||

ನೋಡಿದನು ಚೆನ್ನಣ್ಣ ಶರಣರೊ | ಳಾಡಿದನು ಈ ಪಾಪಿ ಬೆನ್ನೊಳು |
ಕೂಡೆಬಂದ[4] ನು[4] ಮಾಚಿ ದೇವರೆ – ನೋಡಿ ನೀವೆಂದ || ೨೧ ||

ಎಕ್ಕ ಸೌಖ್ಯದ ಕೂಳುಕೊಬ್ಬಿನ | ಸೊಕ್ಕು ತಾ ತಲೆಗೇರಿ ಶರಣರ |
ಕುಕ್ಕಬಂದರೆ ಬರಲಿ ಭಯಬೇ – ಡೆಂದ ಮಾಚಯ್ಯ || ೨೨ ||

---

1-1 ದುತರಿದು ಬಾಗಿಲವರನು | ಬಿರುದ (ಒ, ಜ.) * ಈ ಪದ್ಯಗಳು (ಎ, ಗ, ಚ.) ಪ್ರತಿಗಳಲ್ಲಿಲ್ಲ. 2 2 ದರಾ (ಇ, ಒ, ಟ.) 3-3 ಸಾಸಿರಕೆ ಮಿಗಿ | ಲೆಂದು (ಇ, ಒ, ಜ, ಟ.) 4-4 ರೆ (ಅ, ಉ, ಬ.)

**ಭಾಮಿನೀ ಷಟ್ಪದಿ.**

ಹಿಂದೆ ಕೂಗುವ ಕಲಕಲ ಧ್ವನಿ ।
ಮುಂದಿ ಗಜ ತುರಗಾದಿ ಮೋಹರ ।
ದಿಂದ ಬಿರುದಿನ ಭೇರಿ ಕಹಳೆಗಳಿಂದಲಬ್ಬರಿಸಿ ॥
ಇಂದು ಭರವಸದಿಂದಲೆಲ್ಲರು ।
ಮುಂದೆ ನೀವಿನ್ನೆಲ್ಲಿ ಪೋಗುವಿ ।
ರೆಂದು ಮೂದಲಿಸುತ್ತ ನೂಕಿದ ಮುಂದಿ ಕುದುರೆಯನು ॥ ೧ ॥

ನೋಡಿದನು ದಂಡೇಶ ತುರಗವ ।
ಜೋಡಿಸಿದ ಹನ್ನೆರಡು ಸಾವಿರ ।
ಕೂಡೆ ಪ್ರಮಥಾದಿಗಳ ಒಂದೆಸೆ ಮಾಡಿದನು ದಳವ ॥
ಕೂಡೆ ತನ್ನೊಂದಿನಲಿ ಕಲಿಮಡಿ ।
ವಾಳದೇವನು ಕಿನ್ನರಯ್ಯನು ।
ನೋಡೆ ಶೂಲದಬೊಮ್ಮ ಕೂಗಿನಮಾರಿ ಕಕ್ಕಯ್ಯ ॥ ೨ ॥

ಧುರಕೆ ಚಕ್ರಗಳೆನಿಪ ಮಹಿಮರ ।
ಸರಿಸಕೆಲ್ಲರ ಕರೆದು ಬೇಗದಿ ।
ಹಿರಿಯ ಕಿರಿಯರನಿರದೆ ಮುಂದಕೆ ಭರದಿ ನಡೆಸಿದ[1]ನು[1] ॥
ನರಿಯ ಕೂಗಿಗೆ ಕರಿ ಹೆದರಿ ಹಿಂ ।
ಜರಿವುದೇ ಕಾಲಿಂದಲೆಲ್ಲರ ।
ಒರಸುವಂದದಲೊರಸುವೆನು ನಡೆ ಎಂದ ಮಾಚಯ್ಯ ॥ ೩ ॥

ಅಷ್ಟರೊಳಗಾ ಅಳಿಯಬಿಜ್ಜಳ ।
ಸಿಟ್ಟಿನಲಿ ಗಜ ತುರಗ ರಥಗಳ ।
ಇಟ್ಟಣಿಸಿ ಕವಿದೇರಿ ಪೆಟಲು[2] ಫಿರಂಗಿ[2] ಬಾಣಗ[3]ಳಿಂ[3] ॥
[4]ದಿ[4]ಟ್ಟಿಸುತ ತುರಗದ ವಜೀರರು ।
ಅಷ್ಟದಿಕ್ಕಿಲಿ ಕವಿ[5]ದ[5] ಬಲವನು ।
ಕುಟ್ಟಿದರು ಅರಿಭಟರ ಸಿರವರಿದಿಟ್ಟರವನಿಯಲಿ ॥ ೪ ॥

ಚೆನ್ನದಂಡೇಶ್ವರನ ಬಿರುದಿನ ।
ಹನ್ನೆರಡುಸಾವಿರ ವಜೀರರು ।
ಎನ್ನಬಿಡು ತನ್ನಬಿಡು ಎಂದೆನುತಾಗ ಹೊಣಕೆಯಲಿ ॥
ಭಿನ್ನವಿಲ್ಲದೆ ಒಬ್ಬರೊಬ್ಬರು ।
ಚೆನ್ನದಂಡೇಶನ ಪಥಾಡಿಸಿ ।
ಇನ್ನು ಹೊಕ್ಕರದೇನ ಹೇ[6]ಳುವೆ[6] ನವರ ಕಾಳಗವ ॥ ೫ ॥

1-1 ರೂ (ಇ, ಎ, ಒ, ಡ.) 2-2 ಗಳಿಟ್ಟ 3-3 ಳ (ಎ, ಒ, ಗ, ಚ.)
4-4 ದ (ಇ, ಉ, ಎ, ಗ, ಚ.) 5 5 ವ (ಒ.) 6-6 ಳಲಿ (ಒ, ಗ, ಛ, ದ,)

ಹಿಂದೆ ಬಹ ನವಲಕ್ಷ ತುರಗಗ ।
ಳಿಂದ ಕಡಿಕಡಿ ಎಂದು ಬರುತಿರೆ ।
ನಿಂದರೊಬ್ಬೊಬ್ಬರು ಸಹಸ್ರಕೆ ಒಂದು ಕೋಪಿನಲಿ ॥
ಸಿಂಧುರದ ಬಲಕೆರಗುತಿಹ ಸಿಂ ।
ಹೇಂದ್ರನಂದದಿ ಹೊಕ್ಕುಹೊಡೆಯಲು ।
ಮಂದಿ ತುರಗ ರಥಾದಿ ಮುರಿದುರೆ ಹಿಂದಕೋಡಿದ[1] ವು[1] ॥ ೬ ॥

ಹರಿಣಮೃಗ ಸಾಹಸ್ರ ಹಿಂಡಿಗೆ ।
ಎರಗುತಿಹ ಶಾರ್ದೂಲನಂದದಿ ।
ಉರವಣಿಸಿ ಜೊಬ್ಬಿರಿದು ಹೊಕ್ಕರು ಬರಸಿಡಿಲಿನಂತೆ ॥
ಬೆರಸಿ ಹೊಡೆಯಲು ರಾಹುತಗೆ ಹ ।
ಕ್ಕರಿಕೆ ತುರಗವು ಒಂದೆ ಹೊಯ್ಲಿಗೆ ।
ಹರಿದು ಪುಡಿಪುಡಿಯಾಗಿ ಬಿದ್ದವು ಒರಗಿ ಧಾತ್ರಿಯಲಿ ॥ ೭ ॥

ಹಿಂದೆ ಬರುತಿಹ ಅಳಿಯ ಬಿಜ್ಜಳ ।
ನಿಂದು ನೋಡಿದ ಓಡಿಬರುತಿಹ ।
ಮಂದಿಯನು ಓಡದಿರಿ ಹೋ ಹೋ ನಿಲ್ಲಿ ನಿಲ್ಲೆನುತ ॥
ಸಂದಣಿಸಿ ಸಕಲಾದಿ ಬಲವನು ।
ಒಂದುಗೂಡಿಯೆ ಶರಣರೆಲ್ಲರ ।
ಹಿಂದು ಮುಂದಕೆ ಸಾಗಲೀಸದೆ ಕಟ್ಟಿ ಕಡಿ ಎನುತ ॥ ೮ ॥

ದುಂದುಭಿಯು ನಿಸ್ಸಾಳ ಕಹಳೆಗ ।
ಳಿಂದ ಘೋರ್ಗರೆವುತ್ತ ದಳವನು ।
ಮುಂದೆ ನೂಕಿದನಳಿಯಬಿಜ್ಜಳ ಮಂದಿಮೋಹರಿಸಿ ॥
ಸಿಂಧುರದ ಕಾಲಾಳು ತುರಗದ ।
ಸಂದಣಿಯ ಹೂಂಕಾರದಲಿ ಭಟ ।
ರಿಂದ ಕವಿದನು ಪೆಟಲು ಬಾಣ ಫಿರಂಗಿ ರಭಸದಲಿ ॥ ೯ ॥

ಭಾರಿ ಭಾರಿಯ ತುರಗ ಸಂದಣಿ ।
ವಾರಣವು ಕಡೆಯಿಲ್ಲ ರಥಗಳು ।
ಸಾರಿ ನೂಕಿತು ಸಕಲ ಬಲ ಕವಿದೇರಿ ಉಗ್ಘಡಿಸಿ ॥
ಕ್ರೂರ ಮನುಜರು ಇಟ್ಟ ಎಸುಗೆಯು ।
ವೀರಶರಣರ ಸೋಂಕಲಮ್ಮದೆ ।
ಹಾರಿ ಬಿದ್ದವು ಏರಿ ಮೇಲಕೆ ದೂರ ಕಡೆಕಡೆಗೆ ॥ ೧೦ ॥

---

1 1 ರೂ (ಎ, ಒ, ಟ, ಡ.)

ದಡಿಗ ಜೈನರ ದಳಕೆ ಹೆದರದೆ ।
ಹೊಡೆದು ಕಡಿದಾಡುತ್ತ ಶರಣರು ।
ನಡೆದು ಮೂಗಾವುದವು ಬಂದರು ಕೊಡದೆ ಒಬ್ಬರನು ॥
ಕಡುದುರಾತ್ಮಕ ಕರ್ಮಿ ಬಿಜ್ಜಳು ।
ಬಿಡದೆ ಹೋರುತಲಹನೆ ಅವನಾ ।
ಪಡೆಯ ಮುರಿವೆನು ದಂಡನಾಯಕ ನೋಡು ನೀನೆಂದ ॥ ೧೧ ॥

ವೀರ ಮಡಿವಾಳಯ್ಯ ಕೂಗಿನ ।
ಮಾರಿ ತಂದೆಯು ಕಿನ್ನರಯ್ಯನು ।
ಧೀರಕಕ್ಕಯ್ಯಗಳು ಶೂಲದಬೊಮ್ಮತಂದೆಗಳು ॥
ಮಾರಹರ ಬಿರುದಾಂಕ ಮಹಿಮರು ।
ದಾರ ಚೆನ್ನಣ್ಣನ ಪಥಾ[1] ಡಿ[1] ಸಿ ।
ಘೋರನೆದ್ದರು ಕ್ರೂರ ಜೈನನ ಸಾರಬಲಕಿದಿರ ॥ ೧೨ ॥

ಎಷ್ಟು[2] ಪರಿಯಲಿ ತಾಳಿ[2] ಬಂದರು ।
ಕಷ್ಟಪಾತಕಿ ನಮ್ಮ ಬಿಜ್ಜಳು ।
ಅಟ್ಟಿ ಬಿಡದಲೆ ಕಾದಿಬರುವಟ್ಟುಳಿಯ ನೋಡಿ[3] ವನ[3] ॥
ಅಷ್ಟು ಬಲವನು ಮುರಿದು ಬೀಜದ ।
ಹುಟ್ಟುಗೆಡಿಸದೆ ಬಿಟ್ಟೆನಾದರೆ ।
ಸೃಷ್ಟಿಯೊಳು ಮಹಾದೇವನಂಘ್ರಿಗೆ ಕಷ್ಟ ನಾನೆಂದ ॥ ೧೩ ॥

ವಚನ ॥ ಎಂದು ಮಡಿವಾಳಯ್ಯಗಳು ಮತ್ತು ಏನೆನ್ನುತಿರ್ದರು.

**ಜಂಪೆ.**

ಸತ್ಯಮೂರುತಿಯೆನ್ನ । ಕತ್ರ್ರ್ಗ ಕೇಳಿರಿ ನಿಮ್ಮ ।
ಭೃತ್ಯನ ಸಾಹಸವ । ಮತ್ತೆ ನೋಡೆಂದ ॥ ೧ ॥

ನರಮನುಜಗಿಷ್ಟೊಂದು । ಉರವಣೆಯದೇಕೆಂದು ।
ಶರಣರೊಳು ಕಲಿಭಟರು । ತಿರುಗಿದರು ಇದಿರ ॥ ೨ ॥

ಈರಾರು ಸಾವಿರದ । ವಾರುವ ವಜೀರರು ।
ಏರಿಬಹ ದಳಕೆ ಹೊಗ । ಲೇರಿದರು ಅವರು ॥ ೩ ॥

ಮಾರಾರಿಸುತ ನೋಡು । ತೋರುವೆನು ದಕ್ಷಸಂ ।
ಹಾರವನು ಮಾಡಿದವ । ತಾರವನು[4] ನಾನು[4] ॥ ೪ ॥

---

1-1 ರಿ (ಒ, ಗ, ಜ, ಟ) 2-2 ಈ ಪರಿತಾಳ (ಇ, ಉ, ಗ, ಚ.)
3-3 ದನು (ಇ, ಒ, ಗ, ಚ.) 4-4 ತಾಳ್ದ (ಎ, ಒ, ಗ, ಚ, ಟ.)

ಧಾರಿಣಿಯೊಳು ಮಲತ । ಕ್ರೂರ ಜೈನನ ಪಡೆಯ ।
ಮಾರಿ ಮಸಣಿಗಳಿಗಾ । ಹಾರವಿಕ್ಕುವೆನು ॥ ೫ ॥
ಎಂದು ಮಾಚಯ್ಯನಿಂ । ತೆಂಬ ಸಮಯದೊಳಾಗ ।
ಬಂದು ಕೂಗಿನ ಮಾರಿ । ತಂದೆ ಬೇಗದೊಳು ॥ ೬ ॥
ಭಾಳಾಕ್ಷಸುತ ಕೇಳು । ಕಾಳುಜೈನನ ಪಡೆಯ ।
ಹಾಳುಮಾಡುವೆ ಘಳಿಗೆ । ತಾಳಿ ನೋಡೆಂದ ॥ ೭ ॥
ಎಂದು ಚೆನ್ನಣ್ಣನೊಳು । ಮೊದಲಿಸಿ ಪ್ರಮಥಗಣ ।
ನಿಂದರಾ ಜೈನದಳ । ಕಂದು ಇದಿರಾಗಿ ॥ ೮ ॥
ನೋಡಿದನು ಅಳಿಯಬಿ । ಜ್ಜಳ ತನ್ನ ಮಾರ್ಬಲವ ।
ಕೂಡೆ ಜೋಡಿಸಿ ಪೌಜು । ಮಾಡಿದನು ಬೇಗ ॥ ೯ ॥

ವಚನ ॥ ಇಂತು ಅಳಿಯಬಿಜ್ಜಳನ ದಳದ ಮೋಹರವೆಂತಿರ್ದುದು.

**ಭಾಮಿನೀ ಷಟ್ಪದಿ.**

ಸುತ್ತ ಯೋಜನದಳತೆ ಮೇಘದ ।
ಮೊತ್ತವೋ ಎನೆ ರಾಜ ರಾಜರಿ ।
ಗೆತ್ತಿ ಮೆರೆದವು ಛತ್ರಿ ಚಾಮರ ಧ್ವಜಪತಾಕೆಗಳು ॥
ಮೊತ್ತ ಮೊತ್ತದಿ ಗಜ ತುರಗ ರಥ ।
ವೆತ್ತ ನೋಡಲು ಬಲದ ಮೋಹರ ।
ಸತ್ಯಶರಣರ ಸುತ್ತ ಹೊಗಲೇ[1] ರಿತ್ತು[1] ಉರವಣಿಸಿ ॥ ೧ ॥
ದೆಸೆದೆಸೆಯ ಕವಿದೇರಿ ಮದ್ದಿನ ।
ಎಸುಗೆ ಬಾಣ ಫಿರಂಗಿ ಪೆಟಲಿನ ।
ಬಿಸಿಯ ಗುಂಡಿನ ಮಸೆದ ಸರಳ್ಗಳ ಮಳೆಯ ಕರೆವುತಲಿ ॥
ಅಸಮಪ್ರಮಥರು ಅಧಿಕವೆಂಬಿರಿ ।
ವಸುಧೆಯೊಳಗಿನ್ನೆಲ್ಲಿ ಸಂದಿಯ ।
ನುಸುಳಿದರು ನಾ ಬಿಡೆನು ಎಂದನು ಅಳಿಯಬಿಜ್ಜಳನು ॥ ೨ ॥
ಹೊಡೆವ ಭೇರಿಯ ಕಹಳೆಧ್ವನಿಯು ।
ಗ್ಘಡದ ತುರಗವು ವಾರಣವು ರಥ ।
ಒದಗಿ ರಾವುತ ಮಾವುತರು ಜಯ ಜಯವು ಎಂದೆನುತ ॥
ನಡೆಯೆ ದಳವುರವಣಿಸಿ ಎಸುಗೆಯ ।
ನಿಡುತ ಬಾಣ ಫಿರಂಗಿ ಹೊಗೆಯಲಿ ।
ಮೃಡನ ಶರಣರ ಮೇಲೆ ಹೊಗಿಸಿದ ಪೊಡವಿ ಕಂಪಿಸಲು ॥ ೩ ॥

1-1 ದನು (ಒ, ಜ.)

ಗಿರಿಗೆ ಕವಿವ ತುಷಾರ ಸಿಡಿಲಿನ ।
ಮರಿಯ ಪಿಡಿವ ವಿಕಾರ ವಿಪಿನದ ।
ಉರಿಯ ನಂದಿಪ ತರಗು ಕರಿ ಹರಿಗೆರಗುವಂದದಲಿ ॥
ಹಿರಿದು ಕೋಪದಿ ಅಳಿಯಬಿಜ್ಜಳ ।
ಮೊರೆದು ಮೀಸೆಯ ಮುರಿದು ಶರಣರ ।
ತರಿದು ಬಿಸುಡುವೆನೆಂದು ಪೊಕ್ಕನು ಭರದಿ ನಾಲ್ದೆಸೆಯ ॥ ೪ ॥

ಪರಮ ಚಂಪಕದರಳ ಸೌರಭ ।
ಕೆರಗಲಮ್ಮದ ತುಂಬಿಯಂದದಿ ।
ಮೊರೆವ ಬಾಣ ಫಿರಂಗಿ ಪೆಟಲಿನ ಗುಂಡು [1] ಗೋಲಿಗಳು [1] ॥
ಹರನ ಶರಣರ ಸೋಂಕಲಮ್ಮದೆ ।
ಭರದಿಯಂಬರಕಡರಿ ಆಚೆಗೆ ।
ಹರಿದು ಬಿದ್ದವು ದೂರ ಮಹಕಾಂತಾರಬಯಲಿನಲಿ ॥ ೫ ॥

ಆಗ ಕೂಗಿನಮಾರಿತಂದೆಯು ।
ಸಾಗಿ ಬರುತಿಹ ಸಕಲ [2] ಬಲ [2] ಕಿದಿ ।
ರಾಗಿ ಕೂಗಿದ ಖೋಖುಲಿಲಿ ಖೋ ಎಂದು ಆರ್ಭಟಿಸಿ ॥
ಕೂಗುಮಾರಿಯೊ ಭೂತವೋ ಅದು ।
ಕೂಗು ಕಾಲನ ಮೃತ್ಯುವೋ ಎನೆ ।
ಕೂಗಿಗೊರಗಿತು ಕೂಗುಧ್ವನಿಗೊಳಗಾದ ಜನವೆಲ್ಲ ॥ ೬ ॥

ಉಮ್ಮಳಿಸಿ ಕೋಪದಲಿ ಶೂಲದ ।
ಬೊಮ್ಮ ಹೊಕ್ಕನು ಒಂದುಕಡೆಯಲಿ ।
ಕುಮ್ಮಿದನು ಕವಿದೇರಿ ಬರುತಿಹ ಬಲವನೆಲ್ಲವನು ॥
ಹೆಮ್ಮೆಗೆಡಿಸಿದ ಜೈನದಳವನು ।
ಚಿಮ್ಮಿ ಶೂಲದಲಿರಿದು ಕೆಡಹಿದ ।
ಹಮ್ಮುಮುರಿದನು ಅಳಿಯಬಿಜ್ಜಳನಾಪ್ತ ಪಟುಭಟರ ॥ ೭ ॥

ಹೊಕ್ಕನತಿ ರೋಷದಲಿ ರಿಪುಹರ ।
ಕಕ್ಕಯ್ಯ ತಾನೊಂದು ಕಡೆಯಲಿ ।
ಒಕ್ಕಲಿಕ್ಕುತ ಹೊಡೆದು ಕೆಡಹಿದ ದಿಕ್ಕು ದಿಕ್ಕಿನಲಿ ॥
ಕಕ್ಕಸದ ಕಲಿಭಟರನಿದಿರಲಿ ।
ಕೆಕ್ಕರಿಸಿ ಕವಿದೇರಿಯವರನು ।
[3] ಹೊಕ್ಕು ಕವಿ [3] ದನು ಸೊಕ್ಕುಮುರಿದನು ಇಕ್ಕಿ[4] ದಿಗ್ಬ [4] ಲಿಯ ॥ ೮ ॥

---

1-1 ಗಳುಯಲ್ಲ (ಎ, ಒ, ಗ, ಚ, ಜ, ಟ.) 2-2 ದಳ (ಒ, ಗ, ಚ, ಟ.)
3-3 ಕುಕ್ಕಲಿರಿ (ಇ, ಒ, ಗ.) 4 4 ದನು (ಇ. ಒ, ಡ.)

ಒಡನೆ ಹೊಕ್ಕನು ಕಿನ್ನರಯ್ಯನು ।
ಹಿಡಿದು ಖಡ್ಗವ ಜಡಿದು ಕೋಪದಿ ।
ಹೊಡೆದ ಹೊಯ್ಲಿಗೆ ನಡಮುರಿದು ಸಿರಕೆಡೆದವವನಿಯಲಿ ॥
ಬಿಡದೆ ಬೆಂಬತ್ತುತ್ತಲಾನೆಯ ।
ಪಡೆಗೆ ಸಿಂಹಗಳೆರಗುವಂದದಿ ।
ಹೊಡೆದು ಕೆಡಹಿದರರಿಯ ಬಲವನು ಮೃಡನ ಕಲಿಭಟರು ॥ ೯ ॥

ಹೊಕ್ಕು ಚೆನ್ನಣ್ಣನ ವಜೀರಿಕೆ ।
ಲೆಕ್ಕದಲಿ ಹನ್ನೆರಡುಸಾವಿರ ।
ಕಕ್ಕಸದ ತುರಗಗಳ ದುವ್ವಾಳಿಸುತ ಹೊಗಲೇರಿ ॥
ದಿಕ್ಕು ದಿಕ್ಕಿಲಿ ಹರಿದು ಹೊಡೆದರು ।
ಲೆಕ್ಕವಿಲ್ಲದ ತುರಗದವರನು ।
ಸೊಕ್ಕಿಬಿದ್ದರು ರಕ್ತದೋಕುಳಿಯುಕ್ಕಿ ಹರಿಯಿತ್ತು ॥ ೧೦ ॥

ಅಷ್ಟದಿಕ್ಕಿಲಿ ಹೊಡೆದು ಕೆಡಹಲು ।
ಇಷ್ಟು ಸವೆಯದೆ ಜೈನದಳವದು ।
ಸೃಷ್ಟಿ ಬೆಸ[1] ಲಾ[1] ದಂತೆ ತರತರದಟ್ಟಿ ಬರುತಿಹುದು ॥
ನಿಟ್ಟ ನೋಡಿದ ಮಾಚಿದೇವನು ।
ತಟ್ಟಿದನು ತನ್ನೆರಡು ಭುಜವನು ।
ಗಟ್ಟಿಸಿದ ಛೀ ಜೈನಪಾತಕಿ[2] ಕಷ್ಟ ಬಾರೆಂದ[2] ॥ ೧೧ ॥

ನಿಲ್ಲಿ ನಿಲ್ಲಿರಿ ನೀವು ಬಲ್ಲಿದ ।
ರಲ್ಲದೇ ಮತ್ತೊಬ್ಬರಲ್ಲವು ।
ಖುಲ್ಲತನವನು ಮಾಡಿ ಓಡಲು ಕುಟಿಲಗತಿಗಳಲಿ ॥
ಎಲ್ಲಿ ಹೊಕ್ಕರು ಬಿಡುವೆನೆ ನಿ ।
ಮ್ಮೆಲ್ಲರನು ಕಡಿದೊಟ್ಟಿ ಖಂಡವ ।
ಚೆಲ್ಲಿ ಭೂತಕೆ ಬಲಿಯನಿಕ್ಕುವೆ ನಿಲ್ಲಿ ನೋಡೆಂದ ॥ ೧೨ ॥

ಎಂದು ಒಬ್ಬರಿಗೊಬ್ಬರಿದಿರಲಿ ।
ಮಂದಲಿಸಿ ಮಹರಥ ಗಜಂಗಳ ।
ಸಂದಣಿಯ ಸಕಲಾದಿ ತುರಗವು ಮಂದಿ ಮೋಹರಿಸಿ ॥
ಹಿಂದು ಮುಂದಕೆ ಹೋಗಲೀಸದೆ ।
ಬಂಧಿ[3] ಸುತಲಾ[3] ಗಷ್ಟ ದಿಕ್ಕನು ।
ಕೊಂದು ಕೊಲೆಯಾಡೆಂದು ನೂಕಿದ ಅಳಿಯ ಬಿಜ್ಜಳನು ॥ ೧೩ ॥

1-1 ನಾ (ಒ, ಜ.) 2-2 ಹೊಟ್ಟೆಬಾರೆನುತ (ಜ.) 3-3 ಸಿದಬೇ (ಜ.)

ಹರನ ಶರಣರ ಮಹಿಮೆಯರಿಯದೆ ।
ಉರವಣಿಸಲಾ ಅಳಿಯಬಿಜ್ಜಳ ।
ಹಿರಿದು ಕೋಪದಿ ನೋಡಿದನು ಮಡಿವಾಳಮಾಚಯ್ಯ ॥
ನೊರಜು ಇವಗೇಕಿಷ್ಟು ಎನ್ನಯ ।
ಗುರುವೆ ದಂಡಾಧೀಶ ನೋಡೆಂ ।
ದುರಿಯ ಮುಕ್ಕಳಿಸುತ್ತ ತೋರಿದ ತನ್ನ ನಿಜರೂಪ ॥ ೧೪ ॥

ರಕ್ಕಸೇಂದ್ರನ ರೌದ್ರವನು ಮುರಿ ।
ದಿಕ್ಕಿದಾ ನರಸಿಂಹನಾತನ ।
ಲೆಕ್ಕಿಸದ ಶರಭೇಂದ್ರನಿಂದ್ರ ಮುನೀಂದ್ರ ಸುರರೆಲ್ಲ ॥
ದಕ್ಷ ಹರಿಯಜರೀಶ್ವರನಹೊರ ।
ಗಿಕ್ಕಿ ಯಜ್ಞವ ರಚಿಸಲೆಲ್ಲರ ।
ಶಿಕ್ಷಿಸಿದ ನಿಜರೂಪನಾಕ್ಷಣ ತಾಳ್ದ ಮಾಚಯ್ಯ ॥ ೧೫ ॥

ಹಿರಿ[1] ದು[1] ಸುರಗಿಯ ಸರಳು ಸಿಂಗಣಿ ।
ಮುರಿದ ಮೀಸೆಯು ಬಿರುದು ಕಾಶೆಯು ।
ಕರದ ಹಲಗೆ ಕಠಾರಿ ಕೆಂಜುರಿಗಣ್ಣು [2] ಕಿಡಿಸೂ [2] ಸೆ ॥
ಹರಿಗೆ ಚಕ್ರ ತ್ರಿಶೂಲ ಡಮರುಗ ।
ಶರಿರವೆಲ್ಲವು ಬಾಹು ಬ್ರಹ್ಮನ ।
ಶಿರವನರಿದವತಾರವಾದನು ಧರಣಿಗಂಬರಕೆ * ॥ ೧೬ ॥

ಕಡೆಗೆ ಕಾಣಿಸಬಾರ ತನ್ನಯ ।
ಒಡಲನಾರಿಗೆ ತೋರ ಲೋಕದ ।
ನಡತೆಯೆಂದರೆ ಸೇರನೀಶನು ಶರಣಸಂಕುಲಕೆ ॥
ಕಡಲನತಿ ಗಾಂಭೀರ್ಯ ಮೀರಿದ ।
ಪೊಡವಿ ಪಾತಾಳಾದಿ ಸ್ವರ್ಗದ ।
ಒಡೆಯರೆನ್ನದೆ ಕೆಡಹಿ ಬಿಸುಡುವ ವೀರಮಾಚಯ್ಯ ॥ ೧೭ ॥

ಮತ್ತೆ ನೋಡಿದ ಜೈನದಳಕಿದಿ ।
ರೆತ್ತಿ ಮುರುಗೆಯನೆತ್ತಿ ನೇವರಿ ।
ಸುತ್ತ ಸುರಗಿಯು ಕಿತ್ತು ಹೊಕ್ಕನು ವೀರ ಬೊಬ್ಬೆಯಲಿ ॥
ಸತ್ಯಹೀನರ ಸದೆವ ಕಾಲನೊ ।
ಮೃತ್ಯುವೋ ಎಂಬಂತೆ ಕರಿಗಳ ।
ನೆತ್ತಿಗಳ ಒಡೆದಿಕ್ಕಿ ದಾಡೆಯ ಕಿತ್ತು ಕೋಡುಗಳ ॥ ೧೮ ॥

1-1 ದ (ಜ.) 2-2 ಕುಡಿಮೀ (ಡ, ಬ.) * ಈ ಪದ್ಯ (ಗ, ಚ.) ಪ್ರತಿಗಳಲ್ಲಿಲ್ಲ.

ಮತ್ತೆ ನುಡಿಸಿದ ವೀರಘಂಟೆಯ ।
ನೆತ್ತಿಯಂಬರದತ್ತಲಡಗಿರಿ ।
ಸುತ್ತ ಬೆಳೆದನು ಕಾಲಭೈರವನಂತೆ ಅಂಬರಕೆ ॥
ಮೊತ್ತಮೊತ್ತದ ಮೇಘವನು ಹೊಡೆ ।
ದೊತ್ತಿ ಬರುವ ಪ್ರಚಂಡನೆಂಬೊಲು ।
ಒತ್ತಿ ಬಹ ಗಜಗಳನು ತುರಗವನಿಟ್ಟ ಅಂಬರಕೆ ॥ ೧೯ ॥

ಹೊಡೆದ ರಥಗಳ ಬಡಿದ ಗಜಗಳ ।
ಕಡಿದ ತುರಗವ ಸಕಲ ಬಲವನು ।
ಕೆಡಹಿ ತುಳಿದೊರಸಿದನು ಘುಡಿಘುಡಿಸುತ್ತ ಕೋಪದಲಿ ॥
ನಡುಗಿ ದಳಬಲವುಡುಗಿ ಬಲು ಕಂ ।
ಗೆಡುತ ಓಡಲು ಅಳಿಯಬಿಜ್ಜಳ ।
ಬಿಡದೆ ಹೋ ಹೋ ನಿಲ್ಲಿ ಹೊಡೆಬಡಿಯೆಂದು ನೂಕಿದನು ॥ ೨೦ ॥

ಲಕ್ಷಕೋಟಿ ಫಿರಂಗಿ ಪೆಟಲಿನ ।
ಲಕ್ಷಕೋಟಿಯು ಬಾಣ ಸರಳಿನ ।
ಲಕ್ಷಕೋಟಿಯು ಗಜ ರಥವು ತುರಗಾದಿ ಬಲವೆರಸಿ ॥
ಲಕ್ಷಕೋಟಿಗಳೊಳಗೆ ಇರುವರು ।
ಲೆಕ್ಕವಿಲ್ಲದೆ ನಿಂತು ಕೊಲುವರು ।
ಸಿಕ್ಕಿದರ ಬಿಡಬೇಡವೆನುತೊಳಪೊಕ್ಕು ನೂಕಿದನು ॥ ೨೧ ॥

ಭೇರಿ ತಮ್ಮಟೆ ಬುರುಗು ಕಹಳೆಯು ।
ಘೋರುಗರೆವುತ ಸಕಲವೈವ ।
ತ್ತಾರು ದೇಶದ ರಾಯರೊದಗಿದರಖಿಳ ಬಲಸಹಿತ ॥
ಸಾರೆಗಟ್ಟಿತು ಸಕಲ ರಣಭಯ ।
ಕಾರರೆಂಬತಿರಥರು ಮಹರಥ ।
ಭೂರಿ ಭೂಪರು ಭುಜಬಲರು ಹೊಗಲೇರಿದರು ಬೇಗ ॥ ೨೨ ॥

ತಿರುಗಿ ಉರವಣಿಸುತ್ತ ಬರುವದ ।
ನರಿದು ~~ನುಡಿದನು ಮಾಚಿದೇವನು~~ ।
ನರ[1] ರು[1] ಕಾದುವ ಕದನ ನಾಕದ ಸುರರು ಕಾದುವರೆ ॥
ನರಿಯ ಕೂಗಿಗೆ ನಡುಗಿ ಸೊಕ್ಕಿದ ।
ಕರಿಯು ಹೆದರಲುಬಲ್ಲುದೇ ಎಂ ।
ದೆರಗಿದನು ಮುಂಗಾರ ಮೇಘದ ಬರಸಿಡಿಲಿನಂತೆ ॥ ೨೩ ॥

1-1 ರ (ಎ, ಒ, ಗ, ಚ, ಟ.)

ಹೊಕ್ಕು ಹೊಡಕರಿಸುತ್ತ ಕರಿಗಳ |
ಕುಕ್ಕರಿಸಿ ಕೋಡುಗಳ ಕೀಳುತ !
ಇಕ್ಕಿದನು ಗಜದಲ್ಲಿ ಗಜಗಳ ಸೊಕ್ಕು ಮುರಿವಂತೆ ||
ದಿಕ್ಕು ದಿಕ್ಕಿಲಿ ಬರುವ ದಳವನು |
ಲೆಕ್ಕಿಸದೆ ಹೊಡೆಗೆಡೆದು ಕೂಗುತ |
ತಿಕ್ಕಿದನು ತುರಗಾದಿ ರಥ ಮುರಿದಿಕ್ಕಿ ಕೆಡಹಿದನು || ೨೪ ||

ಮುರುಗೆಯಲಿ ಹೊಡೆಹೊಡೆದು ಕೆಲಬರ |
ಸರಳ ಬಾಣದೊಳಿಟ್ಟು ಕೆಲಬರ |
ಸುರಗಿಯಿಂದಿರಿದಿರಿದು ಕೆಲಬರ ಸವರಿ ಕೆಡಹಿದನು ||
ಕರಿಯ ಕುಂಭವ ಪಿಡಿದು ಮತ್ತದ |
ಕರಿಯ ಹಿಂಡಿಗೆ ತಿರುಹಿ ಎಸೆಯಲು |
ಕರಿಯು ರಥ ತುರಗಾದಿ ಬಿದ್ದವು ಒರಗಿ ಧಾತ್ರಿಯಲಿ || ೨೫ ||

ಎಕ್ಕಸದ ಮೂವುತರ ತುರಗದ |
ಕಕ್ಕಸದ ರಾವುತ ವಜೀರರ |
ಒಕ್ಕಲಿಕ್ಕುತ ಒರಸಿ ಕಾಲಲಿ ತಿಕ್ಕಿದನು ಕೆಲರ ||
ಸೊಕ್ಕಿದವರನು ಸೊಬಗ ಮುರಿದನು |
ಸಿಕ್ಕಿದವರನು ಸೆರೆಯ[1] ಲಿ[1] ಟ್ಟನು |
ಮಿಕ್ಕು ಮೀರಿದ ಭಟರ ಖಂಡಿಸಿ ದಿಕ್ಕುಗೆಡಿಸಿದನು || ೨೬ ||

ಒಂದು ಕಡೆಯಲಿ ಮಾಚಿದೇವನು |
ಒಂದು ಕಡೆಯಲಿ ಕಿನ್ನರಯ್ಯನು |
ಒಂದು ಕಡೆಯಲಿ ಕೊಂದ ಶೂಲದಬೊಮ್ಮಿದೇವಯ್ಯ ||
ಒಂದು ಕಡೆಯಲಿ ಶರಣರೊಂದಿಲಿ |
ಬಂದ ತುರಗ ವಜೀರರಾದರೆ |
ಕೊಂದುದಕೆ ಕಡೆಯಿಲ್ಲ ಜೈನನ ಮಂದಿ ಮಾರ್ಬಲವ || ೨೭ ||

ಬಂದನಂಬರದಲ್ಲಿ ಈಶ ಫ |
ಣೀಂದ್ರಭೂಷಣ ರವಿಪ್ರಕಾಶನು |
ಸಿಂಧುಜೂಟನು ದೇವಗಣಸಹ ಚಂದ್ರಶೇಖರನು ||
ನಿಂದು ನೋಡಿದ ಪ್ರಮಥಗಣ ದೇ |
ವೇಂದ್ರ ಮನುಮುನಿ ಸಕಲ ದಿವಿಜರ |
ಸಂದಣಿಯ ಸಂರಂಭ ಸಂತಸದಿಂದ ಮಾಚಯ್ಯ || ೨೮ ||

1-1 ಬಿ ( ಇ, ಒ, ಗ, ಚ, ಜ, ಡ, ಬ.)

ನರರ ಕಣ್ಣಿಗೆ[1] ಪೂರ್ವದೇವ[1] ನು |
ಸುರರ ಕಣ್ಣಿಗೆ ಕಾಲಭೈರವ |
ಹರಗಣರಿಗುರೆ ಪ್ರಳಯಕಾಲದ ರುದ್ರನಂತಿಹನು ||
ಸುರರು ಕಂಡಾ ಮಾಚಿದೇವನ |
ಇಕಲಿಗಚ್ಚರಿಬಟ್ಟು ತರ್ಜನಿ |
ಬೆರಳ ನಾಸಿಕಕಿಟ್ಟು ತಮ್ಮಯ ಶಿರವ ತೂಗಿದರು || ೨೯ ||

ಚಂದ್ರಧರ ತಮ್ಮವರು ಕಿಂಚಿತು |
ನೊಂದರಾದರೆ ಕಾಲಭೈರವ |
ನಿಂದು ಕಳುಹುವೆ ಜೈನದಳವನು ಕೊಂದು ಬಿಸುಡುವೆನು ||
ಎಂದು ಅಂಬರದಲ್ಲಿ ಈಶನು |
ನಿಂದು ನೋಡುತ್ತಿರಲು ಇತ್ತಲು |
ಸಿಂಧುರವು ರಥ ತುರಗ ಮೋಹರಮಂದಿ ಕವಿದೇ[2] ಳೆ[2] || ೩೦ ||

ಸಿಡಿಲು ಉರಗನ ಪಡೆಯ ಮುರಿವಂ |
ತಡರಿ ಗಜಗಳ ಕೆಡಹಿ ಸೊಂಡಿಲ |
ವಿಡಿದು ಗಜದಿಂ ಗಜವ ತುರಗದಿ ತುರಗವಂ[3] ಬಡಿದು[3] ||
ಹೊಡೆದು ರಥಗಳ ಪಿಡಿದು ಅಂಬರ |
ಕಿಡಲು ಕಳಪಿಳಿಯಾಗಿ ಕೀಲ್ಗಳು |
ಸಡಿಲಿ ತಾಕಲು ಸತ್ತ ಪ್ರಜೆಯದು ಕಡೆ ಮೊದಲೆ ಇಲ್ಲ || ೩೧ ||

ಮಂದಿ ಗಜ ರಥ ತುರಗ ಸಂದಣಿ |
ಸಂದಿನಲಿ ತುಳಿದಾಡಿ ಸತ್ತಾ |
ಮಂದಿಯದು ಕಡೆಯಿಲ್ಲ ಕಂಗೆಟ್ಟು ಮಿಗೆ ಕಾಲ್ಗೆಟ್ಟು ||
ಮುಂದುಗಾಣದೆ ಮುರಿದು ನೂರ್ಕಡಿ |
ಸಂದು ಬಗೆಬಗೆಗುಂದಿ ಗಾಯದಿ |
ನೊಂದು ಸತ್ತುದು ಮಂದಿಯದನೆಷ್ಟೆಂದು ಹೇಳುವೆನು || ೩೨ ||

ಬೆದರಿ ಸಿಂಹದ ಧ್ವನಿಯ ಕೇಳಿದ |
ಮದಕರಿಯ ಹಿಂಡೋಡುವಂದದಿ |
ಹೆದರಿ ಬಲಮುರಿದೋಡಿ ಬರುತಿರೆ ಅಳಿಯಬಿಜ್ಜಳನು ||
ಹೃದಯದಲಿ ಭಯಗೊಂಡು ನಾಲಿಗೆ |
ತುದಿಯ ಧೈರ್ಯದಿ ಬಲವನೆಲ್ಲವ |
ನೊದಗಿ ಒಬ್ಬುಳಿಮಾಡಿ ಸಂಗರಕಿರದೆ ನೂಕಿದನು || ೩೩ ||

1-1 ದೇವಪೂರ್ವ (ಅ, ಉ, ಗ, ಬ.) 2-2 ರೆ (ಇ, ಟ.) 3-3 ಟಸುತ (ಅ, ಉ, ಎ, ಡ, ಬ.)

ವೀರ ಸಂಗರಧೀರ [1] ರಿಪುಸಂ [1] ।
ಹಾರ ಕುಜನಕುಠಾರ ಕೂಗಿನ ।
ಮಾರಿ ಬಲವನು ಸವರಿ ಮಿಗೆ ಹೊಗಲೇರಿ ಒಳಪೊಕ್ಕ ॥
ಮಾರಿಯಬ್ಬರಕಧಿಕ ದನಿ ಝುಂ ।
ಗಾರ ಸಿಡಿಲೆಂಬಂತೆ ಕೂಗಲು ।
ಸಾರಿ ಕೇಳಿದ ಅಳಿಯಬಿಜ್ಜಳ ಹೆದರಿ ಒಗ್ಗೊಡೆದ ॥ ೩೪ ॥

ಮೀ [2] ರಿದಾ [2] ಸಂಗರದಿ ರಣಹೆ ।
ಮ್ಮಾರಿ ಹೊಡೆದುದೊ ಶಾಕಿನಿಯದೇಂ ।
ಕ್ರೂರಗ್ರಹ ಸೋಂಕಿದುದೊ ಧೈರ್ಯವು ಹಾರಿ ಭಯಗೊಂಡು ॥
ಮಾರಹರ ಸದ್ಭಕ್ತ ಕೂಗಿನ ।
ಮಾರಿತಂದೆಯ ದನಿಯು ಕೇಳುತ ।
ಹಾರಿ ಕಂಗೆಟ್ಟಳಿಯಬಿಜ್ಜಳ ಧಾರಿಣಿಗೆ ಕೆಡೆದ ॥ ೩೫ ॥

ಕೂಗೆ ಕೂಗಿನಮಾರಿತಂದೆಯ ।
ಕೂಗ ಕೇಳುತ ಅಳಿಯಬಿಜ್ಜಳ ।
[3] ನಾಗ ಬಳಲುತ ಕೂಗಿಯೊ [3] ರಗಿದನಲ್ಲಿ ಮೂರ್ಛೆಯಲಿ ॥
ಆಗ ದೇಹದ ಸ್ಮರಣೆಯಿಲ್ಲದೆ ।
ಭೋಗ ಭಾಗ್ಯವ ಮರೆದು ಜನರಾ ।
ನಗೆಗೆ ತಾಗುತ ಬಿದ್ದ ತನ್ನಯ ಬಲದ ಮಧ್ಯದಲಿ ॥ ೩೬ ॥

ಬಂದರಾಕ್ಷಣ ಅವನ ಸಕಲಾ ।
ಬಂಧುಜನರು ಸಮಸ್ತ ದೊರೆಗಳು ।
ಬಂದು ದುಃಖದಲಂದು ಜಲವನು ತಂದು ಬಾಯ್ಗೆರೆದು ॥
ಗಂಧವನು ದೇಹಕ್ಕೆ ಪೂಸುತ ।
ಅಂದು ಗಾಳಿಯ ಬೀಸಿ ತಂಪಿಸಿ ।
ತಂದು ಊದಿದರುಭಯ ಕರ್ಣದಿ ತಿಂದು ಶುಂಠಿಯನು ॥ ೩೭ ॥

ಬಿದ್ದನವನೊಂದೆರಡು ಝಾವದ ।
ಲೆದ್ದು ಕಂಗಳ ತೆರೆದು ನೋಡಿದ ।
ಗದ್ಗದ ಕಂಠದಲಿ ಕಂಪನಹೊಂದಿ ತನ್ನವರ ॥
ಇದ್ದರಿಲ್ಲಿಯೆ ನಮ್ಮನೆಲ್ಲರ ।
ಸದ್ಯ ಕೊಲ್ಲದೆ ಬಿಡರೆನುತಲೆದೆ ।
ಬಿದ್ದು ಓಡಿದನಳಿಯಬಿಜ್ಜಳ ತನ್ನ [4] ನಿಜಪುರಿಗೆ [4] ॥ ೩೮ ॥

1-1 ದುರಿತ (ಇ, ಎ, ಒ, ಚ, ಟ.) 2-2 ಚದಿರಿ (ಅ, ಉ, ಒ, ಟ, ಡ, ಬ.) 3-3 ನೀಗಿದನು ತನ್ನಸುವನೊ (ಅ, ಇ. ಉ, ಎ, ಒ, ಗ, ಟ, ಜ, ಡ, ಬ.) 4-4 ಪಟ್ಟಣಕೆ (ಉ, ಗ, ಚ.)

ತ್ವರಿತವಂದಣವೇರಿ ಬೆಸ್ತರ ।
ಉರವಣಿಸಿ ನಡೆಯೆಂದು ಬೈಯ್ಯುತ ।
ತಿರುತಿರುಗಿ ನೋಡುತ್ತ ಭರವಸನಾಗಿಯೋಡಿದನು ॥
ತುರಗ ಗಜ ರಥ ಸಕಲ ಬಲದಾ ।
ಸ್ಮರಣೆಯಿಲ್ಲದೆ ಬಿಟ್ಟು ಎಲ್ಲರ ।
ತೊರೆದು ಶರಣರ ಭಯದಲೋಡಿದ ತನ್ನ ಪಟ್ಟಣಕೆ ॥ ೩೯ ॥

ಅತ್ತ ಓಡಿದ ಅಳಿಯಬಿಜ್ಜಳ ।
ಸತ್ತು ಬದುಕಿದೆನೆಂದು ತಲೆದಡ ।
ಹುತ್ತಲೆದೆ ನಡುಗುತ್ತ ಹೊಕ್ಕನು ತನ್ನ ಅರಮನೆಯ ॥
ಇತ್ತ ತನ್ನಯ ಬಲಮುರಿದು ತನ ।
ಗೆತ್ತಿ ಮೆರೆವಾ ಛತ್ರ ಚಾಮರ ।
ಹೆತ್ತ ಮುತ್ತುರ ಬಿರುದ ಬಿಟ್ಟಳುತಳುತಲೋಡಿದನು ॥ ೪೦ ॥

ಹೊಡೆವ ಭೇರಿ ಫಿರಂಗಿ ಕಹಳೆಗ ।
ಳೊಡೆದು ಪುಡಿಪುಡಿಯಾಗಿ ಹೋದವು ।
ಮಡಿದು ತುರಗ ಗಜಾದಿ ರಥಗಳು ಪ್ರೊಡವಿಗುರುಳಿದವು ॥
ಕಡಿದು ಹೊಡೆದಾಡುತ್ತ ರಣಕಣ ।
ಬಿಡದೆ ಮೂಗಾವುದದವರೆಗಂ ।
[1] ಕೆಡೆದು [1] ಹೆಣ ರಣಮಯವು ರಕ್ತದ ಕಡಲು ಹರಿಯಿತ್ತು ॥ ೪೧ ॥

ಖಂಡ ಕರುಳ್ಗಳು ಹರಿದು ಬಿದ್ದಿಹ ।
ಮುಂಡವದು ಕಡೆಯಿಲ್ಲ ರಥಗಳ ।
ತುಂಡುಗಳು ಕಡೆಯಿಲ್ಲ ಬಲವೆಷ್ಟೆಂದು ಪೇಳುವೆನು ॥
ಸುಂಡಿಲಂಗಳು ಹರಿದು ಗಿರಿಹೆ ।
ಗ್ಗುಂಡುಗಳು ಉರುಳಿರ್ದ ರೀತಿಗೆ ।
ತಂಡ ತಂಡದಿ ಸಿಂಧುರದ ಹೆಣದಿಂಡುಗೆಡೆದಿಹವು ॥ ೪೨ ॥

ಧೀರದಕ್ಷಾಧ್ವರದ ರಿಪುಸಂ ।
ಹಾರ ಶಿವನ ಕುಮಾರ ಶ್ರೀ ಕಲಿ ।
ವೀರ ರುದ್ರಾವತಾರ ಸದ್ಗುಣಹಾರ ಮಾಚಯ್ಯ ॥
ಪಾರವರ ಗಂಭೀರ ಹರ ಸಂ ।
ಸ್ಕಾರ ಭಕ್ತೋದ್ಧಾರ ಅಮೃತದ ।
ಸ್ಸಾರ ಸಕಲ ವಿಚಾರ ರಣಕಂಠೀರ ಕೋಪದಲಿ ॥ ೪೩ ॥

1.1 ಹೊಡೆದ (ಉ, ಡ, ಬ.)

ಸುರಗಿಯಿಂದಿರಿದಿರಿದು ಕೆಲಬರ |
ಸರಳ ಬಾಣದೊಳೆಚ್ಚು ಕೆಲಬರ |
ತೆರೆದ ತನ್ನಯ ನೊಸಲಗಣ್ಣುರಿಯಿಂದ ಕೆಲಬರನು ||
ತುರಗ ತುರಗದಲಿಟ್ಟು [1]ಸೊಕ್ಕಿದ[1] |
ಕರಿಯ ಕರಿಯಿಂದಿಟ್ಟು ರಥಗಳ |
ಮುರಿದು ಅಂಬರಕಿಟ್ಟು ಈಡಾಡಿದನು ರಣದೊಳಗೆ || ೪೪ ||

ಕಿರಿದು ಒಲೆ ಹೊತ್ತಿದರೆ ಲೋಕದ |
ನರರು ಜೀವಿಸಬಲ್ಲರಲ್ಲದೆ |
ಧರೆಯು ಉರಿದರೆ ನಿಲ್ಲಬ[2]ಲ್ಲರೆ[2] ಹರ ಮಹಾದೇವ ||
ನರರ ಉರವಣೆ ಕಾಳಗವ ಧರೆ |
ನರರು ಕಾದಲುಬಲ್ಲರಲ್ಲದೆ |
ಹರನು ಮುನಿದರೆ ಹರಿ ಸುರ ಬ್ರಹ್ಮಾದಿ ನಿಲ್ಲುವರೆ || ೪೫ ||

ಹರನ ವರಸುತ ಮಾಚಿದೇವನೆ |
ಉರವಣೆಗೆ ಕಂಗೆಟ್ಟು ಮಹಬಲ |
ಮುರಿದು ಮೂಗಾವುದವು ಹೆಣಮಯವಾಯ್ತದವನಿಯಲಿ ||
ಪರಮ ಪಾತಕನಳಿಯಬಿಜ್ಜಳನ |
ನಿರದೆ ಕೊಲ್ಲುವೆನೆಂದು ಯೋಚಿಸಿ |
ಇರಿಯಬಾರದು ಮುಂದೆ ಕಾರಣವೆಂದು ತಲೆಗಾಯ್ದ || ೪೬ ||

ಮಂದಿ ಮುರಿದೋಡುತ್ತ ತಲ್ಲಣ |
ಗೊಂಡು ಓಡಿದನಳಿಯಬಿಜ್ಜಳ |
ನಿಂದು ಮುಗುಳ್ನಗೆಯಿಂದ ನೋಡಿದ ಮಾಚಿದೇವಯ್ಯ ||
ಕೊಂದೆನೇ ಕೊಲಬಾರದೀತನ |
ಮುಂದೆ ತನ್ನಯ ಬಂಧುವೆನುತ |
ಲ್ಲಿಂದ ಹಿಂದಿರುಗಿದನು ತನ್ನಯ ಬಂಧು ಒಡಗೊಂಡು || ೪೭ ||

ಬನ್ನಿ ಶೂಲದಬೊಮ್ಮತಂದೆಯೆ |
ಬನ್ನಿ ಕಿನ್ನರಿಬೊಮ್ಮದೇವರೆ |
ಬನ್ನಿ ಕೂಗಿನಮಾರಿತಂದೆಯೆ ಬನ್ನಿ ಕಕ್ಕಯ್ಯ ||
ಬನ್ನಿರೈ ಹನ್ನೆರಡುಸಾವಿರ |
ಚೆನ್ನದಂಡೇಶನ ವಜೀರಿಕೆ |
ಬನ್ನಿರೆಂದೊಮ್ಮುಖವ ಮಾಡಿಯೆ ತಿರುಗಿದನು ಬೇಗ || ೪೮ ||

---

1-1 ಕೆಲಬರ (ಇ, ಒ, ಗ, ಚ.) 2-2 ಹುದೆ (ಇ, ಎ, ಜ, ಟ.)

ತಡೆದ ಕಡೆಗೋಡಲ್ಲಿ ಶರಣರ |
ಬಿಡದೆ ಕಾದಿದ ಕದನದಲಿ ಮಿಗೆ |
ಕೆಡೆಮುರಿದು ಓಡಿದನು ಮುರಿಗೋಡೆಂಬ ಪುರದಲ್ಲಿ ||
ಕಡಿದು ಜೈನರನಟ್ಟಿ ಶರಣರು |
ಸಡಗರದಿ ಮುರಿಗೋಡ ಕೆರೆಯಲಿ |
ಕಡಿದ ರಕ್ತವ ತೊ[1] ಡೆ[1] ದು ತೊ[2] ಳೆ[2] ದರು ಹಿಡಿದ ಖಂಡೆಯವ || ೪೯ ||

ಸತ್ಯಶರಣರ ಕೈಯ ಹೊಯ್ಲಿ ಲಿ |
ಸತ್ತ ಜೈನನ ಬಲವದೆಲ್ಲವು |
ಅತ್ತ ಹೋಯಿತು ಸ್ವರ್ಗಲೋಕಕೆ ಮುಕ್ತರೆಂದೆನಿಸಿ ||
ಇತ್ತ ಮಾಚಯ್ಯಗಳು ಶರಣರು |
ಕತ್ತಿಗಳ ನೆರೆತೊಳೆದು ಕೆರೆಯೊಳು |
ಅರ್ಥಿಯಲಿ ಜಳಕವನು ಮಾಡಿದರಧಿಕ ಹರುಷದಲಿ || ೫೦ ||

ಪರಮಜಂಗಮಪಾದದುದಕದಿ |
ಶರಿರ ಶುದ್ಧಿಯಮಾಡಿ ಜಂಗಮ |
ಕೆರಗಿ ಕರಗಳ ಮುಗಿದು ಹರುಷದಲಾಗ ಮಾಚಯ್ಯ ||
ಪರಮ ಭಸಿತವ ಧರಿಸಿ[3] ಕರದೊ[3] ಳು |
ಹರನ ಪೂಜೆಯ ಮಾಡಿ ಬೇಗದಿ |
ಇರದೆ ನಡೆದರು ಚೆನ್ನಬಸವೇಶ್ವರನ ಹೊರೆಗಾಗಿ || ೫೧ ||

ಹರನ ವರಸುತ ಮಾಚಿದೇವನು |
ಕರೆದು ತನ್ನವರನ್ನು ಹತ್ತಿರ |
ಭರದಿ ಬಂದನು ದಂಡನಾಯಕಗೆರಗಿ ಕೈಮುಗಿದ ||
ಪರಮ ಸದ್ಗುರು ಚೆನ್ನದಂಡೇ |
ಶ್ವರನು ಎಲ್ಲರ ಕರೆಯುತಭಯವ |
ನಿರಿಸಿ ಸತ್ಕರಿಸುತ್ತ ಹರಸಿದ ಚಿರದಿ ಬಾಳೆಂದು || ೫೨ ||

ಚಂದ್ರಧರಸುತ ಚೆನ್ನಬಸವನು |
ಹಿಂದು ಮುಂದಾರೈಕೆ ನೋಡುತ |
ಕುಂದು ಬಾರದೆ ಕೋಳುಹೋಗದೆ ಬಂದ ಶರಣರನು ||
ಒಂದಿನಲಿ ಒಡಗೊಂಡು ಎದ್ದನು |
ಮುಂದೆ ಹೋಗುವ ಪ್ರಮಥಗಣವನು |
ನಿಂದಿರಿಸು ಮಾ[4] ರ[4] ಯ್ಯ ನೀ ಕೂಗೆಂದು ಪೇಳಿದನು || ೫೩ ||

---

1-1 ಳೆ (ಎ, ಒ.) 2-2 ಡೆ (ಎ.) 3-3 ಕೆರೆಯೊ (ಇ, ಜ, ಜ, ಟ.) 4-4 ಚ (ಅ, ಟ, ಡ, ಬ.)

ಎಂದು ಪೇಳಲು ಮಾರಿತಂದೆಯು ।
ನಿಂದು ಅಬ್ಬರಿಸುತ್ತ ಕರೆಯಲು ।
ಮುಂದೆ ಹೋಗುವ ಪ್ರಮಥಗಣ ಮುದದಿಂದ ಕೇಳಿದರು ॥
ನಿಂದಿತಾ ಶಿವಸಭೆಯು ಬೇಗದಿ ।
ಬಂದು ಒದಗಿದ ಚಿನ್ನಬಸವನು ।
ಬಂದು ಕುಳಿತರು ಬಯಲ ಬಸವನ ಮುಂದೆ ಸಭೆಯಲ್ಲ ॥ ೫೪ ॥

ಅಂದಿಗಾ ಬಸವಾದಿ ಪ್ರಮಥರು ।
ನಿಂದಕನ ಬಿಜ್ಜಳನ ಬಲಸಹ ।
ಕೊಂದು ಉಳುವೆಗೆ ಸಾಗಿಪೋದರು ಎಂದು ನಿರ್ಣಯವು ॥
ನಂದಿನಾಥನ ಬಯಲಬಸವನ ।
ಮುಂದೆ ಯೋಚನೆಗೊಂಬ ತಾವಿಗೆ ।
ಸಂಧಿ ಪೂರ್ಣವು ಸಲಹು ಶ್ರೀಗುರುಸಂಗಮೇಶ್ವರನೆ ॥ ೫೫ ॥

ಇಂತಿ ಪದ್ಯಗಳು ೧೧೩

**ಅಂತು ಸಂಧಿ ೨೩ ಕ್ಕಂ ಸಂಪೂರ್ಣಗಣನೆ – ೬೩೦೩ ಕ್ಕಂ ಮಂಗಳಮಹಾ**

**ಶ್ರೀ ಶ್ರೀ ಶ್ರೀ ಶ್ರೀ ಶ್ರೀ**



# ಇಪ್ಪತ್ನಾಲ್ಕನೆಯ ಸಂಧಿ

# ಗಣಂಗಳು ಕೈಲಾಸಕ್ಕೆ ಉಯ್ಯಾಲೆಯನ್ನು ತೂಗಿ ಹೋದದ್ದು

**ದ್ವಿಪದಿ.**

ಶ್ರೀ ಗುರು ವರಮೂರ್ತಿ ದೇವತ ಚಕ್ರವರ್ತಿ ।
ಭೋಗ ಮೋಕ್ಷಾರ್ಥ ಸರ್ವಥ ಶಕ್ತಿಯುಕ್ತಿ ॥ ೧ ॥
ಆಗಮಕತೀತ ಅರ್ಚಿತ ಭಕ್ತಿ ಮುಕ್ತಿ ।
ನಾಗಭೂಷಣಮೂರ್ತಿ ಅಖಿಳ ಜಗದರ್ಥಿ ॥ ೨ ॥
ಶ್ರೀ ಗುರುವರ ಚೆನ್ನಸಂಗಮನ ದಯದಿ ।
ಸಾಗಿಪೆನು ಸಕಲ ಶಿವಶರಣರ್ವೈಭವವ ॥ ೩ ॥
ಭೋಗ ಮೋಕ್ಷಾರ್ಥ ಮುಕ್ತಿಯ ಪಡೆದು ಬೇಗ ।
ಆಗ ಉಳುವೆಗೆ ಸಾರಿ ಉಯ್ಯಾಲೆಯೇರಿ ॥ ೪ ॥
ತೂಗಿ ಪೋದರು ತೂರ್ಯ ಕೈಲಾಸಕೆಂದು ।
ಈಗ ಪೇಳ್ವೆನು ಕೇಳಿ ಇಳೆಯ ಸಜ್ಜನರು ॥ ೫ ॥

ವಚನ ॥ ಶ್ರೀ ಗುರುಮೂರ್ತಿ ಸಕಲ ಜಗದ ಕರ್ತೃವಾದಂಥ ಬಯಲ ಬಸವೇಶ್ವರದೇವರ ಮುಂದೆ ಅಸಂಖ್ಯಾತಗಣಂಗಳೆಲ್ಲ ಆಸ್ಥಾನವನಿಕ್ಕಿ ಮಾತನಾಡುವ ಸಮಯದಲ್ಲಿ, ಮಡಿವಾಳಯ್ಯಗಳು ಬಂದು ಚೆನ್ನಬಸವಣ್ಣ ಮುಂತಾದ ಸಮಸ್ತ ಗಣಂಗಳಿಗೆ ನಮಿಸಿ ಏನೆನ್ನುತಿರ್ದರು.

**ಜಂಪೆ.**

ಎನ್ನ ಬಿನ್ನಪ ಕೇಳಿ । ಚೆನ್ನದಂಡೇಶ್ವರನೆ ।
ಇನ್ನು ನಿಮಗಿತ್ತ[1]ಮ । ತ್ತಿನ್ನು ನಮಗತ್ತ[1] ॥ ೧ ॥
ನೀವು ಉಳುವೆಗೆ ಪೋಗಿ । ಯಾವ ಭಯ ನಿಮಗಿಲ್ಲ ।
ನಾವು ಪಿಪ್ಪಲಿಗೆಯ । ಠಾವಿಗೈದುವೆವು ॥ ೨ ॥

1-1 ನಮ । ಗಿನ್ನತ್ತ ಗಮನ । (ಖ, ಗ, ಚ.)

ಹಿಂದೆ ನಮ್ಮೊಂದಿನಲಿ । ಬಂದ ವಜೀರರಿಗೆ ।
ತಂದು ವಿಳ್ಯವನು ಕೊಡಿ । ಎಂದ ಮಾಚಯ್ಯ ॥ ೩ ॥
ಎಂದ ಮಾತಿಗೆ ಚೆನ್ನ । ದಂಡೇಶನವರಿಂಗೆ ।
ತಂದಿತ್ತ ಹಣ ಹೊನ್ನ । ಚಂದದುಡುಗೊರೆಯ ॥ ೪ ॥
ಉಡುಗೊರೆಯ ಕೈಕೊಂಡು । ಅಡಿಗೆರಗಲವರನ್ನು ।
ಪೊಡವಿ ನೀವಾಳೆಂದು । ಬಿಡದೆ ಹರಸಿದರು ॥ ೫ ॥
**ಅಲ್ಲ ಎಂದರೆ ಪ್ರಭುವು ।** ಎಲ್ಲ ಮಹಮ್ಮದು ಬಸವ ।
ಸಲ್ಲಾಮು ಮಾಡಿ ಪೋ । ದರು ಡಿಳ್ಳಿಪುರಿಗೆ ॥ ೬ ॥
ಇತ್ತ ಮಡಿವಾಳಯ್ಯ । ಮತ್ತೆ ಚೆನ್ನಣ್ಣನಿಗೆ ।
ಅರ್ಥಿಯಿಂ [1] ನಮಿಸಿ [1] ಮುದ । ವೆತ್ತು ಪೇಳಿದನು ॥ ೭ ॥
ಎನ್ನ ಮಾತನು ಕೇಳಿ । ಇನ್ನು ಪಿಪ್ಪಲಿಗೆಯ ।
ಚೆನ್ನಮಲ್ಲಿಕಾರ್ಜುನನು । ಎನ್ನ ಆಚಾರ್ಯ ॥ ೮ ॥
ಮಲ್ಲಿನಾಥನು ಎನ್ನ । ಕರಸ್ಥಲದ ಮೂರುತಿಯು ।
ಅಲ್ಲಿಗೈದುವೆನೆಂದು । ಮೆಲ್ಲಡಿಗೆ ನಮಿಸೆ ॥ ೯ ॥
ಅಲ್ಲಿಂದ [2] ಶಿವಲೋಕ । ಕಲ್ಲಿಗೈ [2] ದುವೆ ನಾನು ।
ಇಲ್ಲೈದಿ ಉಳುವೆ ಮನೆ । ಯಲ್ಲಿ ನೀವೆಲ್ಲ ॥ ೧೦ ॥

ವಚನ ॥ ಎಂದು ಮಡಿವಾಳಯ್ಯಗಳು ಚೆನ್ನಬಸವಣ್ಣ ಮುಂತಾದ ಸಮಸ್ತ ಗಣಂಗಳಿಗೆ ನಮಸ್ಕರಿಸಿ, ಸ್ವಾಮಿ! ಚೆನ್ನದಂಡೇಶ್ವರ; ನೀವು ಗಣಂಗಳೂ ಸಹ ಕೈಲಾಸಕ್ಕೆ ಪೋಗುವುದಕ್ಕೂ ನಾವು ಬರುವುದಕ್ಕೂ ನಾಲ್ಕೆಂಟು ಘಳಿಗೆ ಹಿಂಚು ಮುಂಚು, ಅಲ್ಲಿ ಮಹಾದೇವನ ಮುಂದೆ ನಮಗೂ ನಿಮಗೂ ಸಂದರುಶನವಾದೀತೆಂದು ಸಾಷ್ಟಾಂಗ ದಂಡಪ್ರಣಾಮವಂ ಮಾಡಿ, ತಮ್ಮ ಮಲ್ಲಿನಾಥದೇವರು ಇರುವಂಥ ಪಿಪ್ಪಲಿಗೆಯ ಗ್ರಾಮಕ್ಕೆ ಪೋದರದೆಂತೆನೆ.

**ಅಟತಾಳ.**

ಹರನ ಶರಣರಿಗೆರಗಿ ಹೊರಟನು । ಭರದಿ ಮಾಚಿದೇವನು ।
ತ್ವರಿತ ಬಂದನು ಪಿಪ್ಪಲಿಗೆ ಎಂಬ – ಪುರಿಗೆ ಬೇಗ ॥ ೧ ॥

ಅಲ್ಲಿ ತಮ್ಮಯ ಸಮಯಾಚಾರದ । ಮಲ್ಲಿಕಾರ್ಜುನಯ್ಯನ ।
ಮೆಲ್ಲಡಿಗೆ ನಮಿಸಿದರು ಸಂತಸ – ದಲ್ಲಿಯವರಿಂಗೆ * ॥ ೨ ॥

---

1-1 ಮಾತು (ಅ, ಉ, ಡ.) 2-2 ನೀ ವಿರುವ । ಲೋಕಕ್ಕೈ (ಅ, ಉ, ಖ, ಬ.(
* ಈ ಪದ್ಯ (ಗ, ಚ.) ಪ್ರತಿಗಳಲ್ಲಿಲ್ಲ.

ಹರುಷದಿಂದವರಂಘ್ರಿ ತೀರ್ಥ ಪ್ರ । ಸಾದವನ್ನು ಸೇವಿಸಿ ।
ಕರೆದರವರನು ಬನ್ನಿ ಕೈಲಾಸ – ಪುರಿಗೆ ಎಂದು ॥ ೩ ॥

ಬಲ್ಲಿದನು ದಂಡೇಶ ಭರವಸ । ದಲ್ಲಿ ಪ್ರಮಥರೊಂದಿಲಿ ।
ಎಲ್ಲ ಪೋದರು ಉಳುವೆಮಹಮನೆ – ಗಲ್ಲಿಗೀಗ ॥ ೪ ॥

ಅಲ್ಲಿ ಕೈಲಾಸಕ್ಕೆ ಪೋಗುವ । ರೆಲ್ಲ ಪ್ರಮಥಾದಿಗಳು [1] ನಾವುಗ [1] ।
ಳೆಲ್ಲರೈದುವ ಬನ್ನಿ ಶಿವಪುರಿ – ಗಲ್ಲಿಗೀಗ ॥ ೫ ॥

ಎಂದ ಮಾಚಯ್ಯಗಳ ವಾಕ್ಯವ । ಚಂದದಿಂದ ಕೇಳುತ ।
ಎಂದರವರಿಗೆ ಮಲ್ಲಿಕಾರ್ಜುನ – ತಂದೆಯವರು ॥ ೬ ॥

ಹೋಗಿ ಮಾಚಯ್ಯಗಳೆ ಶಿವಪುರಿ । ಗೀಗ ನೀವು ಮರ್ತ್ಯದ ।
ಭೋಗ ಹಿಂಗದು ನಮಗೆ ನೀವೇ – ಪೋಗಿ [2] ರಯ್ಯ [2] ॥ ೭ ॥

ಇತ್ತ ಉಳುವೆಗೆ ಪೋಗಿ ನಾವು । ಸತ್ಯಶರಣರೆಲ್ಲರು ।
ಮತ್ತೆ ಕೈಲಾಸಕ್ಕೆ ಪೋಗುವ – ಅರ್ಥಿಯನ್ನು ॥ ೮ ॥

ತೂಗಿ ಉಯ್ಯಾಲೆಯಲಿ ಪೋಗುವ । ಭೋಗವನ್ನು ನೋಡಿಯೆ ।
ಬೇಗ ಬರುವೆವು ನಮ್ಮ ತಾವಿಗೆ – ಪೋಗಿ ನೀವೇ ॥ ೯ ॥

ಎಂದು ಪೇಳಲು ಮಾಚಿದೇವನು । ವಂದಿಸುತ್ತಲವರಿಗೆ ।
ಬಂದನಾಕ್ಷಣ ಮಲ್ಲಿನಾಥನ – ಮಂದಿರಕ್ಕೆ ॥ ೧೦ ॥

ಸತ್ಯಸದನ [3] ನ [3] ನಾಡು ಮುಕ್ತಿಯ । ಮತ್ತೆ ಬೀಡಾ ಮಲ್ಲಿನಾಥನ ।
ಉತ್ತಮದ ನಿಳಯವನು ಕಂಡ [4] ನು [4] – ಅರ್ಥಿಯಿಂದ ॥ ೧೧ ॥

ಚಂದನವು ಮಂದಾರ ಚಂಪಕ । ನಂದಿವರ್ತವು ಪಾದರಿ ।
ಯಿಂದಶೊಪ್ಪುವ ಶಿವನ ನಿಳಯಕೆ – ಬಂದ ಬೇಗ ॥ ೧೨ ॥

ಬಂದು ಕಂಡನು ಸಿಂಧುಜೂಟನ । ಚಂದ್ರಮೌಳಿ ಈಶನ ।
ವಂದಿಸಿದ ಮಾಚಯ್ಯ ಮನದಾ – ನಂದದಿಂದ ॥ ೧೩ ॥

ವಚನ ॥ ಆಗ ಮಾಚಿದೇವರು ಮಲ್ಲಿನಾಥಗೆ ನಮಸ್ಕರಿಸಿ ತಮ್ಮ ಇಷ್ಟಲಿಂಗದಲ್ಲಿ ಬೆರೆದರದೆಂತೆನೆ.

**ದ್ವಿಪದಿ.**

ನೋಡಿ ತಮ್ಮಿಷ್ಟಲಿಂಗದಿ ನೋಟ ಬೆರಸಿ ।
ಹೂಡಿ ಪದ್ಮಾಸನವ ಹುರಿಗೊಳಿಸಿ ಮನವ ॥ ೧ ॥

1-1 ಮುಖ್ಯರು (ಉ, ಎ, ಒ, ಖ, ಗ, ಚ.) 2-2 ಬನ್ನೆನಲು (ಎ, ಒ, ಖ, ಗ, ಚ, ಜ.) 3-3 ದ (ಅ, ಎ, ಒ, ಖ, ಡ, ಬ.) 4-4 ರು (ಇ, ಎ, ಒ, ಖ, ಗ, ಚ, ಡ.)

ಈಡ ಪಿಂಗಳ ಸುಷುಮ್ನನಾಳವೀದಿಯಲಿ ।
ಜೋಡಿಸಿಯೆ ದೃಷ್ಟಿಯನು ಜೋಕೆಯಿಂದರಿತು ॥ ೨ ॥

ನಾದ ಬಿಂದು ಕಳೆಯನಂಗೈಸಿಕೊಳುತ ।
ಶೋಧಿಸುತಲಾಧಾರ ಸ್ವಾಧಿಷ್ಟಗಳನು ॥ ೩ ॥

ಭೇದಿಸುತ ಮಣಿಪೂರ ಬಿಂದು ಕಳೆಯೊಳಗೆ ।
ಸಾಧಿಸುತನಾಹತ ವಿಶುದ್ಧಿಯಾಜ್ಞೆಯನು ॥ ೪ ॥

ತ್ರಿಕೂಟಮನೇರಿ ತ್ರಿಚಕ್ರವಂ ಮಿಾರಿ ।
ಸಾರೆಲ್ಲ ಸಕಲ ಲೋಕವನು ಒಳಗೊಂಡು ॥ ೫ ॥

ಅನೇಕ ಬೆಳಗಿನ ಅಬ್ಜದಳ ಸಹಸ್ರದಲಿ ।
ಸರಸಿಜಾಕ್ಷನು ಸರಸಿಜೋದ್ಭವನು ಸುರರು ॥ ೬ ॥

ರುದ್ರಗಣ ವೃಷಭಗಣ ಪ್ರಮಥಗಣ ಮುಖ್ಯ ।
ಅಮರಗಣ ತಿಂಥಿಣಿಯ ಸಹಸ್ರಗಣಮಧ್ಯ * ॥ ೭ ॥

ಗಂಗೆ ಸರಸ್ವತಿ ಯಮುನೆ ನದಿಯ ತಾಣದೊಳು ।
ಸಂಗಮಾ ಸುಕ್ಷೇತ್ರ ಚೌದಳದಿ ನಿಂದು * ॥ ೮ ॥

ವರಪ್ರಮಥ ಸಕಲರೊಡ್ಡೋಲಗದೊಳಗೆ ।
ಇರುವಂಥ ಈಶನ ಇರವನೀಕ್ಷಿಸುತ ॥ ೯ ॥

ಬೆಳಗಿನಲಿ ಮಾಚಯ್ಯ ಬೆರೆದು ಬಯಲಾದ ॥

ವಚನ ॥ ಇತ್ತ ಮಾಚಿದೇವರು ತಮ್ಮ ಇಷ್ಟಲಿಂಗವಂ ನಿರೀಕ್ಷಿಸುತ್ತ ಬಯಲನೈದಲು, ಶಿವನು ಮಾಚಿದೇವನಂ ತೆಗೆದು ಬಿಗಿದಪ್ಪಿ ಸಕಲ ಪ್ರಮಥಾದಿಗಳಸಹಿತ ಪುಷ್ಪರಥವನ್ನೇರಿ ಕೈಲಾಸಕ್ಕೈದಲು, ಅತ್ತ ಚೆನ್ನಬಸವಾದಿ ಪ್ರಮಥರ ಪ್ರಸಂಗವಂ ಪೇಳ್ವೆನದೆಂತೆನೆ.

**ಜಂಪೆ.**

ಇಂದುಧರನಾ ಶರಣ । ರೆಲ್ಲ ಬಯಲ ಬಸವನ ।
ಮುಂದೆ ಕುಳ್ಳಿರ್ದು ಯೋ । ಚನೆಯ ಮಾಡಿದರು ॥ ೧ ॥

ಗುರುಚೆನ್ನದಂಡೇಶ । ಪರಮ ಹರುಷದಿ ಎಲ್ಲ ।
ಶರಣರೊಳಗಿಂತೆಂದು । ಒರೆದನೀ ಮಾತ ॥ ೨ ॥

ಲಿಂಗದೊಳು ಬೆರೆದರ್ ಸಂ । ಗನಬಸವ ನೀಲಮ್ಮ ।
ಲಿಂಗದೊಳು ಬೆರೆದ ನಿಜ । ಲಿಂಗಪ್ರಭುಸ್ವಾಮಿ ॥ ೩ ॥

---

* ಈ ಪದ್ಯಗಳು (ಅ, ಇ, ಉ, ಎ, ಖ, ಚ, ಟ, ಬ.) ಪ್ರತಿಗಳಲ್ಲಿಲ್ಲ.

ಬಲ್ಲಿದಾಪ್ರಮಥಗಣ | ಕಲ್ಯಾಣಪುರದೊಳಗೆ |
ಅಲ್ಲಿ ನಿಂದರು ಕೆಲರು | ಬಿಲ ಗುಹೆಗಳೊಳಗೆ ॥ ೪ ॥
ಮಡಿವಾಳ ಮಾಚಯ್ಯ | ನಡೆದ ಪಿಪ್ಪಲಿಗೆಗೆ |
ದೃಢಸಿದ್ಧರಾಮಯ್ಯ | ನಡೆದ ಸೊನ್ನಲಿಗೆಗೆ ॥ ೫ ॥
ಶರಣರೊಳು ಕೈಲಾಸ | ಪುರಿಗೆ ಬರುವಂಥವರ |
ಭರದಿ ವಿಂಗಡಿಸೆಂದು | ಒರೆದ ಚೆನ್ನಣ್ಣ ॥ ೬ ॥
ದೃಢಮೂರ್ತಿ ಸತ್ಯ ವರ | ಷಡುಸ್ಥಲದ ಬ್ರಹ್ಮಿಗಳು |
ಒಡನೆ ಬರುವರು ಹ | ನ್ನೆರಡು ಸಾವಿರವು ॥ ೭ ॥
ಏಳನೂರೆಪ್ಪತ್ತು | ಭಾಳಾಕ್ಷನಮರಗಣ |
ಏಳಿಗೆಯು ಹರುಷ ಸ | ಮ್ಮೇಳದಲಿ ಬಹರು ॥ ೮ ॥
ಅರವತ್ತುಮೂರು ಪು | ರಾತನರು ಪ್ರಮಥಗಣ |
ಭರದಿ ದಂಡೇಶನ | ಹೊರಿಗೆಯ್ಯೆದಿದರು ॥ ೯ ॥
ಪ್ರಮಥಗಣ ರುದ್ರಗಣ | ವಿಮಲ ಭಕ್ತಾಗಣರು |
ಗಮನಿಸಿದರಲ್ಲಿಗೆ | ಘನ ಹರುಷದಿಂದ ॥ ೧೦ ॥
ಷತ್ಯಣ್ಣ ಉತ್ತಣ್ಣ | ಮತ್ತೆ ಶೂಲದಬೊಮ್ಮ |
ಸುತ್ತ ನಿಂದರು ಭಾರಿ | ಯೆತ್ತಿ ಹರುಷದಲಿ ॥ ೧೧ ॥
ಇಂತಪ್ಪ ಸಕಲ ಪ್ರಮ | ಥರು ತಂಡತಂಡದಲಿ |
ನಿಂತರಾ ಕೈಲಾಸ | ಕಿಂದು ಬಹೆವೆನುತ ॥ ೧೨ ॥
ಬಂದ ಶರಣರ ನೋಡಿ | ಒಂದಾರು ಭುಜವಾಗಿ |
ಇಂದುಧರ ಮೆಚ್ಚು ಇವ | ರೆಂದ ಚೆನ್ನಣ್ಣ ॥ ೧೩ ॥

ವಚನ ॥ ಆ ವೇಳೆಯಲ್ಲಿ ಚೆನ್ನಬಸವೇಶ್ವರದೇವರು ಕೈಲಾಸಕ್ಕೆ ಬರುವಂಥವರನೆಲ್ಲ ಪರಾಂಬರಿಕೆಯಂ ತೆಗೆದುಕೊಂಡು, ಸಮಸ್ತ ಗಣಂಗಳ ಒತ್ತಿನಲ್ಲಿ ಬಯಲ ಬಸವೇಶ್ವರದೇವರಂ ಬೀಳ್ಕೊಂಡು, ಮುಂದೆ ಉಳುವೆಯ ಮಹಾಮನೆಗೆ ಬರುತಿರ್ದರದೆಂತೆನೆ.

**ಏಕತಾಳ.**

ಶ್ರೀ ಗುರು ಚೆನ್ನದಂ | ಡೇಶ ಪ್ರಮಥರೊಳು |
ಸಾಗಿದನುಳುವೆಗೆ | ಸಕಲರೊಂದಿನಲಿ ॥ ೧ ॥

ಕಡುವೇಗ ಉಳುವೆಗೆ । ನಡೆವ ದಾರಿಯಲೊಂದು ।
ಗೊಡಚಿ ಎಂಬುವ ಗ್ರಾಮ । ದೆಡೆ[1] ಯಲ್ಲಿ[1] ನಿಂದು ॥ ೨ ॥

ಮಾರಾರಿಸುತ ಚೆನ್ನ । ವೀರಭದ್ರನ ಸಾಕ್ಷಿ ।
ದೋರಿ ನಿಲ್ಲಿಸಿ ಗೊಡಚಿ । ವೀರ ಬಾರೆಂದು ॥ ೩ ॥

ಬಲ್ಲಿದ ಶಿವಗಣ । ರೆಲ್ಲ ಕೈಲಾಸದ ।
ಅಲ್ಲಿಗೆ ಪೋಗಿ ತಿರು । ಗಿಲ್ಲಿ ಬರುವನಕ ॥ ೪ ॥

ನಿಲ್ಲು ನೀನಿಲ್ಲಿ ಇ । ನ್ನೆಲ್ಲಿ ಪೋಗದೆ ನಾವು ।
ಎಲ್ಲರು ಬರುವಂದಿ । ಗಿಲ್ಲಿರದೆ ಪೋಗು ॥ ೫ ॥

ಏಳನೂರೆಪ್ಪತ್ತು । ಏಳು ವರುಷಕೆ ನಾವು ।
ಭಾಳಾಕ್ಷಪುರಿಯಿಂದ । ಬರುವೆವೀ ಬಳಿಗೆ ॥ ೬ ॥

ಧರೆಗಿನ್ನು ಶರಣರು । ಬರುವ ಅಂದಿಗೆ ನೀನು ।
ಇರದಿಲ್ಲಿ ಬಯಲಾಗೆ । ಧರೆಗದು[2] ಗುರುತು[2] ॥ ೭ ॥

ಎಂದು ಗೊಡಚಿವೀರ । ಗಂದಭಯವನಿತ್ತು ।
ಮುಂದಕ್ಕೆ ನಡೆದರು । ಚಂದದಿಂ ಬೇಗ ॥ ೮ ॥

ಬರುವ ದಾರಿ[3] ಗಳೊಳು[3] । ತರುಗುಲ್ಮಲತೆಗಳ ।
ನೆರವಿಯದೊಂದು ಶೃಂ । ಗರವ ಪೇಳುವೆನು ॥ ೯ ॥

ವಚನ ॥ ಉಳುವೆಯ ದಾರಿಯಲ್ಲಿ ಇರುವಂಥಾ ವನದ ಶೃಂಗಾರಮಂ ಪೇಳ್ವೆನದೆಂತೆನೆ.

**ಸೊಬಗಿನಸೋನೆ ವರ್ಣ.**

ಕಾರೆ ತಾರೆಯು ಬಿಲ್ವ ಬೋರೆ ಬೊಬ್ಬುಲಿ ಬೇಲ ।
ಗೇರು ಕಾಮಾರೆ ಕಾಂತಾರದೊಳು ॥
ತೂರಬಾರದ ಸೀಗೆ ಲತೆ ಗುಲ್ಮ ತರುಮಧ್ಯ ।
ದಾರಿಯಿಮ್ಮಯ್ಯಲೊಪ್ಪಿರುವವು ॥ ೧ ॥

ಕಕ್ಕೆ ಕಡಸಿ ಹಿಪ್ಪೆ ಎಕ್ಕ ತಂಡಸಿ ತರಿಯು ।
ಬಿಕ್ಕೆ ಬೆಳಲು ಬೇವು ಬಿದುರಿಂದ ॥
ಕಕ್ಕಸದಡವಿ ಗಿರಿಯು ಕೊಳ ಸರೋವರ ।
ದಿಕ್ಕೆ[4] ಯಲಿ[4] ಶರಣರು ನಡೆದರು ॥ ೨ ॥

1-1 ಯೊಳು (ಎ, ಒ, ಚ.) 2-2 ಕುರುಹು (ಇ, ಒ, ಗ, ಚ, ಟ.) 3-3 ಯೊಳಾಗ (ಎ, ಖ, ಗ, ಚ.) 4-4 ಯೊಳು (ಅ, ಇ, ಎ, ಒ, ಖ, ಗ, ಜ, ಡ, ಬ.)

ಕರಡಿ ಕಾಡೆಮ್ಮೆ ಕಾಳ್ಕೋಣ ಕಸ್ತೂರಿಮೃಗ |
ಸರಟ ಜಂಬುಕನು ಮುಂಗುಲಿ ಮೊಲನು ||
ಹರಿಣ ವ್ಯಾಘ್ರನು ತೋಳ ವೊರೆವ ಎಕ್ಕಲ ಸಿಂಹ |
ಕರಿಯು ಸಾರಂಗವಲ್ಲಿ ಅವರಾಟ || ೩ ||

ಕೋಡಗ ಕೊಂಡಮುಸುವ ಕೊಂಡ ಇಲಿ ಬೆಕ್ಕು |
ಆಡುವ ಅಂಚೆ ಆರಡಿವಿಂಡು ||
ಜೋಡಗಲದ ಪಕ್ಷಿ ಜವ್ವಾಜಿ ಮೃಗಗಳು |
ಕಾಡಾನೆ ಕಾಂತಾರಜೊಳಗೆಲ್ಲ || ೪ ||

ಹಂಗ[1] ಹಾರಡೆ[1] ಹಾಲಕ್ಕಿ ಹಸುಬ ಪಾರಿ |
ವಂಗಳು ಶುಕಪಿಕ ಭೇರುಂಡ ||
ಕಂಗೊಳಿಸುವ ಸೋಗೆ ನವಿಲು ಕರ್ತರಬಳ |
ಗಂಗಳೊಪ್ಪಿಹವು ಕಾನನವೆಲ್ಲ || ೫ ||

ಬರಲತ್ತ ಮುಂದೆ ಶೃಂಗರವುಳ್ಳ ಉಳುವೆಯ |
ಪುರಿಯ ಇಮ್ಮೈಯಲೊಪ್ಪುವ ವನವು ||
ಹಿರಿದಪ್ಪ ತೆಂಗು ಕಿತ್ತಳೆ ಬಾಳೆ ಹಲಸು ಕೆಂ |
ದಳಿರಿಂದಲೆಸೆವ ಮಾಮರ ನೆಲ್ಲಿ || ೬ ||

ಚಂದನವಗಿಲು ಚಂಪಕ ದ್ರಾಕ್ಷಿ ಖರ್ಜೂರ |
ಬಂದುಗೆ ಬಕುಳ ಬಾವನ್ನವು ||
ನಂದಿವೃಕ್ಷವು ನಾಗಸಂಪಿಗೆ ಸುರಹೊನ್ನೆ |
ಯಿಂದೊಪ್ಪಿತು ಕಣ್ಗೆ ಇನಿದಾಗಿ || ೭ ||

ನಿಂಬೆ ಹೇರಿಳೆ ಬಿಲ್ವ ಜಂಬು ನೇರಿಲು ಜಾಲ |
ಅಂಬುಜ ಅಡಕೆಯ ಬನದಿಂದ ||
ಹಂಬು ಹಬ್ಬಿದ ನಾಗವಲ್ಲಿ ಕಡಲೆ ಕಬ್ಬು |
ಸಂಭ್ರಮದಿಂದಲೆಸೆದುದು ಮುಂದೆ || ೮ ||

ಗಿಳಿಯಂಚೆ ನವಿಲು ಕೋಗಿಲೆ ಹಂಸ ಪಾರಿವ |
ಗಳಹಂಸೆ ಗರುಡ ಗೀಜಗವಿಂಡು ||
ಕೊಳರ್ವಕ್ಕಿ ಕೊಂಚೆ ಚಕೋರ ಚಕ್ರವಾಕ |
ನಳಿನ ಸರಸಿ ಸೊಂಪು ಎಸೆದವು || ೯ ||

---

1-1 ಹರಿಣ (ಅ, ಉ, ದ, ಬ.)

ತಳಿರಿಂದ ನೆಳಲಿಂದ ಪುಳಿನದ ಸೊಂಪಿಂದ ।
ಕೊಳದಿಂದ ಕೋಕ ಸೌರಭದಿಂದ ॥
ಸುಳಿವ ತಂಗಾಳಿಯ ಸೊಬಗಿಂದಲೊಪ್ಪುವ ।
ಉಳುವೆಮಹಾಮನೆಯ ಸಾರಿದರೆಲ್ಲ ॥ ೧೦ ॥

ಮೊಲ್ಲೆ ಮಲ್ಲಿಗೆ ಜಾಜಿ ಮುಡಿವಾಳ ಸೇವಂತಿ ।
[1] ಪಲ್ಲವಿ [1] ಸಿ ಬೆಳೆದ ಪಾದರಿ ಪಚ್ಚೆ ॥
ಸೊಲ್ಲಲಿಕ್ಕಳವೆ ಸುಗಂಧಿ ಸಂಪಿಗೆ ಗಂಧ ।
ವೆಲ್ಲಿ ನೋಡಲು ಸೊಂಪು ಎಸೆದವು ॥ ೧೧ ॥

ಯತಿಗಳು ವ್ರತಿಗಳು ಅತಿ ತಪೋನಿಷ್ಠರು ।
ನತ ಶಿವಧ್ಯಾನದ ಋಷಿಗಳು ॥
ಶಿತಿಕಂಠ ಶಿವನನರ್ಚಿಪ ಮಹಾಮುನಿಗಳು ।
ಸತತಕಾಲವಿಹರಾ ವನದಲ್ಲಿ ॥ ೧೨ ॥

ಅಂತಪ್ಪ ಉಳುವೆಗೆ ಕಂತುಹರಶರಣರ್ಮು ।
ಹಂತರ್ಬ್ಬಂದವು ಮಹಾಮಹಿಮರು ॥
ಸಂತತ ಸಕಲರಾದ್ಯಂತ ಶರಣರು ಬಂದು ।
ನಿಂತರುಳುವೆಯ ಮಹಾಮನೆಯಲ್ಲಿ ॥ ೧೩ ॥

ಹರುಷದಿಂ ಮುಂದೆ ಬಂದಂಥ ಗಂಗಾಂಬೆ ಶಿವ ।
ಶರಣಸತಿಯರ ಒಡಗೊಂಡು ॥
ತ್ವರಿತದಿಂ ಬಂದು ಚೆನ್ನದಂಡಾಧೀಶಗೆ ।
ಎರಗಿ ಬಿನ್ನೈಸಿದಳಿಂತೆಂದು ॥ ೧೪ ॥

ಮಾರಾರಿಸುತ ಚೆನ್ನಧೀರದಂಡೇಶ್ವರ ।
ಕ್ರೂರಜೈನ [2] ರ [2] ಕೂಡೆ ಹೊಡೆದಾಡಿ ॥
ದಾರಿಯ ನಡೆದು ದಣಿದು ಹಸಿದಿರಿ ಸ್ವಾಮಿ ।
ವಾರಿಯಕೊಳ್ಳಿ [3] ಊಟಕೆ ಬನ್ನಿ [3] ॥ ೧೫ ॥

ಎಂದು ಗಂಗಾಂಬೆಯರೆಲ್ಲ ಶಿವಶರಣರ್ಗೆ ।
ವಂದಿಸುತ್ತೆರಗಿ ಬಿನ್ನಹಮಾಡಿ ॥
ತಂದೆಗಳಿರ ಶಾಕ ಪಾಕವೆಲ್ಲಾಗಿವೆ ।
ನಿಂದಿರದೇಳಿ ಸ್ವಾಮಿಗಳೆಲ್ಲ ॥ ೧೬ ॥

1-1 ವಾಲ್ಯೆ (ಅ, ಬ.) 2-2 ನ (ಅ, ಒ, ಖ, ಗ, ಟ, ಬ.) 3-3 ಸಲಿಸುವದೈದಿ (ಇ, ಎ, ಒ, ಗ, ಚ.)

ಎಂದೆಲ್ಲರ್ಗೆರಗಿ ಬಿನ್ನಹಮಾಳ್ಪ ಸಮಯಕ್ಕೆ ।
ಬಂದರೀರ್ವರು ಭವದೂರರು ॥
ಚಂದ್ರಧರನ ರೂಪ ಚೆನ್ನಮಲ್ಲಿಕಾರ್ಜುನ ।
ತಂದೆ ರುದ್ರಮುನಿಗಳ್ತವಕದಿಂ ॥ ೧೭ ॥

ವಚನ ॥ ಗಣಂಗಳೆಲ್ಲ ಊಟಕ್ಕೆ ಏಳುವ ಸಮಯದಲ್ಲಿ ಚೆನ್ನಮಲ್ಲಿಕಾರ್ಜುನ ದೇವರು ರುದ್ರಮುನಿದೇವರು ಬಿಜಯಗೈಯಲು, ಚೆನ್ನಬಸವಣ್ಣ ಮುಂತಾದ ಗಣಂಗಳೆಲ್ಲ ಇದಿರೆದ್ದು ನಮಸ್ಕರಿಸಿ ಏನೆನ್ನುತಿರ್ದರು.

**ಏಕತಾಳ - ಅರ್ಧರೇಕು.**

ಬಂದಿರೆ ರುದ್ರಮುನಿ – ತಂದೆ ನೀವ್‌ದಯದಿ ।
ಬಂದಿರಿ ದಯವಿಟ್ಟು – ಇಂದೆಮ್ಮ ಬಳಿಗೆ ॥ ೧ ॥
ಬಂದಿರೆ ಚೆನ್ನಮಲ್ಲಿ – ಕಾರ್ಜುನಸ್ವಾಮಿ ।
ಬಂದುದು ಲೇಸಾಯ್ತು – ತಂದೆ ಬದುಕಿದೆವು ॥ ೨ ॥
ಭರದಿ ಗಂಗಾಬೆ ಬಂದು – ಶರಣೆಯರು ಸಹಿತ ।
ಎರಗಿದಳು ರುದ್ರಮುನಿ – ಗುರುವೆ ಎಂದೆನುತ ॥ ೩ ॥
ನಡೆದು ದಾರಿಯ ಪಾದ – ಗಳು ಬಳಲಿದವು ।
ಷಡುರಸಾನ್ನದ ಊಟ – ಸಲಿಸೇಳಿ ಸ್ವಾಮಿ ॥ ೪ ॥
ಎಂದರ್ಘ್ಯ ಪಾದ್ಯವ – ತಂದಿತ್ತು ಬೇಗ ।
ಚಂದದಿಂ ರತ್ನಪೀಠ – ದಲ್ಲಿ ಕುಳ್ಳಿರಿಸಿ ॥ ೫ ॥
ಕಡುವೇಗ ಉತ್ತಣ್ಣನ – ಕರೆದು ಚೆನ್ನಣ್ಣ ।
ಒಡನೆ ಗಣರನೆಲ್ಲ – ಒಡಗೊಂಡು ಬಹುದು ॥ ೬ ॥
ಎಂದು ಪೇಳಲು ಬೇಗ – ಆಗ ಉತ್ತಣ್ಣ ।
ವಂದಿಸಿ ಎಲ್ಲರಿಗೆ – ಒಡನೆ ಬಿನ್ನೈಸಿ ॥ ೭ ॥
ಬನ್ನಿ ಸ್ವಾಮಿಗಳೆಲ್ಲ – ಬಹಳ ಬೇಗದಲಿ ।
ಚೆನ್ನದಂಡೇಶನ – ಸನ್ನಿಧಿಗೆನಲು ॥ ೮ ॥
ಎಂದು ಕರೆಯಲು ಎಲ್ಲ – ಬಂದರಾಕ್ಷಣದಿ ।
ತಂದಿತ್ತಳ್ಗಂಗಾಂಬೆ – ಗಂ[1] ಗೋ[1] ದಕವನು ॥ ೯ ॥
ಶರಣರೆಲ್ಲರು ಕರ – ಚರಣವಂ ತೊಳೆದು ।
ಭರದಿ ಕುಳಿತರು ರತ್ನ – ಗದ್ದುಗೆಯಲ್ಲಿ ॥ ೧೦ ॥

---

1-1 ಧೋ (ಇ, ಎ, ಒ, ಖ, ಚ, ಜ, ಟ.)

ಶರಣು ಶ್ರೀ ದಂಡೇಶ – ಶರಣಯ್ಯ ನಿಮಗೆ।
ಶರಣು ಬರುತಿದೆ ಸ್ವಾಮಿ – ಶರಣು ಕೈಕೊಳ್ಳಿ ॥ ೧೧ ॥

ಶರಣು ಶ್ರೀ ಸಕಲಾದಿ – ಪ್ರಮಥರೆಲ್ಲರಿಗೆ ।
ಶರಣೆಂದು ರುದ್ರಮುನಿ – ಕರಗಳಂ ಮುಗಿಯೆ ॥ ೧೨ ॥

ಮರಳಿ ದಂಡೇಶ ಸಕಲ – ಪ್ರಮಥರು ಎಲ್ಲ ।
ಶರಣೆಂದು ರುದ್ರಮುನಿಗೆ – ಶರಣು ಮಾಡಿದರು ॥ ೧೩ ॥

ವಚನ ॥ ಸಮಸ್ತ ಗಣಂಗಳೆಲ್ಲರೂ ರುದ್ರಮುನಿದೇವರಿಗೆ ಮತ್ತು ಮಡಿವಾಳಯ್ಯನ ಸಮಯಾಚಾರದ ಚೆನ್ನಮಲ್ಲಿಕಾರ್ಜುನದೇವರಿಗೆ ನಮಸ್ಕರಿಸಿ ಮೂರ್ತಗೊಂಡಿರುವ ಸಮಯದಲ್ಲಿ, ಚೆನ್ನದಂಡೇಶ್ವರನು ಸ್ವಾಮಿ! ಚೆನ್ನಮಲ್ಲಿಕಾರ್ಜುನ ಲಿಂಗವೆ ನಿಮ್ಮ ಬಳಿಗೆ ಮಡಿವಾಳಯ್ಯನವರು ಬಂದರು ; ಅವರು ಆವಕಡೆಗೆ ಚಿತ್ತೈಸಿದರು ? ಎನಲಾಗಿ, ಆ ಚೆನ್ನಮಲ್ಲಿಕಾರ್ಜುನದೇವರು ಏನೆನ್ನುತಿರ್ದರು.

**ದ್ವಿಪದಿ.**

ಶ್ರೀ ಗುರು ವರಮೂರ್ತಿ ಶಿವನ ಕುಮಾರ ।
ಈಗ ಕೇಳಿ[1] ರಿ[1] ನೀವು ಎಲ್ಲ ಶಿವಗಣರು ॥ ೧ ॥

ಮಡಿವಾಳದೇವರ ಮಹಾಮಹಿಮೆಯನ್ನು ।
ಪೊಡವಿಯೊಳು ಕೊಂಡಾಡಿ ಪೊಗಳುವರಿಗರಿದು ॥ ೨ ॥

ಬಂದು ಮಾಚಯ್ಯಗಳು ನಮಗೆ ಹರುಷದಲಿ ।
ವಂದಿಸಿದರವರು ತಾವು ಉಚಿತ ಭಕ್ತಿಯಲಿ ॥ ೩ ॥

ತ್ವರಿತದಿಂ ತೀರ್ಥಪ್ರಸಾದವಂ ಕೊಂಡು ।
ಕರೆದರವರೆಮ್ಮ ಕೈಲಾಸ[2] ಕೈದುವರೆ[2] ॥ ೪ ॥

ತೆರಳಿರೆಂದು ಸಾಷ್ಟಾಂಗವೆರಗಿ ಬಿನ್ನೈಸೆ * ।
ಧರೆಯ ಭೋಗವು ಇನ್ನು ಹೆರೆಹಿಂಗದೆಮಗೆ ॥ ೫ ॥

ಹರುಷದಿಂ ನೀವೆ ಪೋಗಿರೆನಲು ನಾವು ।
ಕಡುವೇಗದಿಂದೆಮ್ಮ ಅಡಿಗೆರಗಿ ತಾವು ॥ ೬ ॥

ನಡೆದರು ಕಲಿದೇವರೆಡೆಗೆ ಅತಿವೇಗ ।
ಮೃಡಮೂರ್ತಿ ಕಲಿದೇವರೊಡೆಯನನು ನೋಡಿ ॥ ೭ ॥

---

1-1 ರೆ (ಒ, ಖ, ಟ, ಬ.) 2-2 ಕ್ಕೆ ಬನ್ನೆಂದು (ಅ, ಇ, ಎ, ಒ, ಖ, ಡ, ಬ.)
* ಈ ಅರ್ಧ ಪದ್ಯ (ಅ, ಎ, ಒ, ಖ, ಟ, ಡ, ಬ.) ಪ್ರತಿಗಳಲ್ಲಿಲ್ಲ.

ಬಿಡದೆ ಕೊಂಡಾಡಿ ಸ್ತುತಿಸುತಲಾಡಿ ಪಾಡಿ ।
ಪಿಡಿದು ತಮ್ಮಯ ಇಷ್ಟಲಿಂಗವಂ ಕರದಿ ॥ ೮ ॥
ನೋಡಿ ಮಹಾಲಿಂಗದಾ ಚಿತ್ಪ್ರಭೆಯ ಕೂಡೆ ।
ನೋಡಿಯೈದಿದರ್ ಬಯಲ ರೂಪಿ ಬೆರಗಾಗೆ ॥ ೯ ॥

**ಅಟತಾಳ.**

ಎಂದು ಪೇಳಲು ಎಲ್ಲ ಗಣರಾ । ನಂದದಿಂದ ಉಘೆ ಉಘೆ ।
ತಂದೆ ಪೋದಿರೆ ಮಾಚಿದೇವರೆ – ಎಂದು ನಲಿದು ॥ ೧ ॥
ತರಿಸಿದರು ವಿಭೂತಿ ವಿಳ್ಯವ । ಭರದಿ ಶರಣರೆಲ್ಲಕೆ ।
ಹರುಷದಿಂದೀವುತ್ತ ಜಯ ಜಯ – ವೆಂದು ಕೊಂಡಾಡಿ ॥ ೨ ॥
ಮಾಡುತಲಿ ಪುಷ್ಪಾಂಜಲಿಯ ಕೊಂ । ಡಾಡುತೆಲ್ಲ ಹರುಷದಿ ।
ಕೂಡೆ ಗಣಪರ್ವಕ್ಕೆ ಮೂರ್ತವ – ಮಾಡಿತೆಲ್ಲ ॥ ೩ ॥
ಪಙ್ತಿ ಸಾಗಿತು ಪರಮಷಡುಸ್ಥಲ । ವಂತರೆಲ್ಲ ಒಂದೆಸೆ ।
ಕಂತೆ ಜಡೆಮುಡಿಯುಳ್ಳತೀತ ಮ – ಹಂತರೊಂದೆಸೆಯು ॥ ೪ ॥
ಮನಸಿಜಾರಿಯ ಮನಕೆ ಒಪ್ಪುವ । ಘನಲಿಂಗಾಂಗಿಗಳವರು ಒಂದೆಸೆ ।
ಘನಮಹಿಮರೇಳ್ನೂರು ಎಪ್ಪ – ತ್ತಮರರೊಂದೆಸೆಯು ॥ ೫ ॥
ಹರನ ಮಹಿಮರರವತ್ತು ಮೂರು ಪು । ರಾತರೊಂದುದೆಸೆಯಲಿ ।
ಧರೆಗಧಿಕ ಸಕಲಾದಿ ಪ್ರಮಥರು – ಶರಣರೊಂದೆಸೆಯು ॥ ೬ ॥
ಶರಣರೆಲ್ಲಾ ಉಳುಮೆಮಹಾಮನೆ । ಹೊರೆಯಲಿರ್ಪ ಕಾನನ ।
ನೆರಳ ತಂಪಿನೊಳ್ಪಙ್ತಿ ಸಾಗಿತು – ತರತರಂಗಳಲಿ ॥ ೭ ॥
ಸತ್ಯ ಶರಣರು ರತ್ನಗದ್ದುಗೆ । ಯಲ್ಲಿ ಕುಳಿತು ಎಲ್ಲರು ।
ಮತ್ತೆ ಲಿಂಗಾರ್ಚನೆಯ ಮಾಡಿದ – ರರ್ಥಿಯಿಂದ ॥ ೮ ॥
ಸಾಧು ಕಸ್ತುರಿ ಅಗಿಲು ಕುಂಕುಮ । ವಾದ ಗಂಧ ಅಕ್ಷತೆ ।
ಮೋದವೆಸೆವತಿ ಸಕಲ ಪುಷ್ಪವಿ – ನೋದದಿಂದ ॥ ೯ ॥
ಧೂಪ ದೀಪ ನೈವೇದ್ಯ ಮಂತ್ರಕ । ಲಾಪದಿಂದ ಷೋಡಶ ।
ಉಪಚಾರಂಗಳಿಂದ ಪೂಜಿಸಿ – ಕಾಪಾಲಿಯನ್ನು ॥ ೧೦ ॥

ಒಂದೆರಡು ಮೂರಾರು ನವವಿಧ । ಮುಂದೆ ಹದಿನೆಂಟರೊಳು ಸಾಧಿಸಿ ।
ಸಂದ ಚೌಶೀತದಲಿ ಮನ ಮುಳು – ಗಾಡಿ ಮುದದಿಂದ ॥ ೧೧ ॥

ಕಂಡರಾಗಲಖಂಡತೇಜೋ । ನ್ಮಯನ ತಮ್ಮಾ ಇಷ್ಟದಿ ।
ಕಂಡು ಹೃದಯದೊಳಿಂಬಿಟ್ಟು ಕುಳಿತಿರೆ – ಗಣಸಮೂಹಗಳು ॥ ೧೨ ॥

ಮದನವೈರಿಯ ಪೂಜೆ ಮುಗಿಯಲು । ಮಾನಿನಿಯರುಗಳೆಲ್ಲರು ।
ಕದಳಿಪರ್ಣವನಿತ್ತರೂಟಕೆ – ಒದಗಿನಿಂದ ॥ ೧೩ ॥

ಸಂದಣಿಸಿ ಗಂಗಾಂಬೆ ಶರಣೆಯ । ರೊಂದಿನಲ್ಲಿ ಬೇಗದಿ ।
ತಂದು ಎಡೆಮಾಡಿದಳು ಶಾಕ ಪಾ – ಕಾದಿ ಭೋಜ್ಯಗಳ ॥ ೧೪ ॥

ದಾನಿ ಶಿವಸಂಧಾನಿ ತಾಯಿ ಭ । ವಾನಿದೇವಿಯ ಸಂಗಡ ।
ಮಾನಿನಿಯರೆಡೆ ಮಾಡಿದರು ಸು – ಮ್ಮಾನದಿಂದ ॥ ೧೫ ॥

ವಚನ ॥ ಗಂಗಾಂಬೆ ಮುಂತಾದ ಶರಣಸತಿಯರಾ ಒಂದಿನಲ್ಲಿ ಭಂಡಾರಿ ಬಸವಯ್ಯ, ಅಗ್ಗಣಿಯ ಹೊನ್ನಯ್ಯ, ಉಗ್ರಾಣದ ರುದ್ರಯ್ಯ, ಬಾಣಸಿಗ ಭೀಮಯ್ಯ ಮುಂತಾದವರು ನಡು ಸುತ್ತಿಕೊಂಡು ಎಡೆ ಮಾಡುತಿರ್ಪರದೆಂತೆನೆ.

**ಸಾಂಗತ್ಯ.**

ಆಟಪಾಟಗಳಿಗೆ ನಾಟರಾಗವೆ ಮೊದಲು । ನೋಟಕ್ಕೆ ಕಣ್ಗಳೆ ಮೊದಲು ॥
ಕೋಟಿ ದೈವಗಳಿಗೆ ಮಿಾಟು ಶಿವನೆ ಮೊದಲು । ಊಟಕುಪ್ಪಿನಕಾಯಿ ಮೊದಲು ॥ ೧ ॥
ಎಲ್ಲಕ್ಕೆ ಮೊದಲು ತಾನೆಲ್ಲಿ ಎಂಬರು ಎನ್ನ । ಬಲ್ಲಿದನಮಳನೆಂಬುವರು ॥
ಸಲ್ಲೀಲೆಯಿಂದ ಸಕಲರಿಗೆ ನೆಲ್ಲಿಯ । ಉಪ್ಪಿನಕಾಯ ನೀಡಿದರು ॥ ೨ ॥
ರಂಭೆಯ ಮೈಸಿರಿ ಹೊಂಬಣ್ಣವೆಂದೆನ್ನ । ಹಂಬಲಿಪರು ತನ್ನ ಪೆಸರ ॥
ಶಂಭು ಮೊದಲು ಶಕ್ತಿದೇವತೆಯರ ಪ್ರಿಯ । ನಿಂಬೆಯಹಣ್ಣ ನೀಡಿದರು ॥ ೩ ॥
ವಾರಿಯೊಳಗೆ ಎತ್ತು ಹೇರು ವಾಣಿಜ್ಯರು । ಹೇರೆತ್ತು ಇಳುಹು ಎಂದೆನುತ ॥
ಊರೆಲ್ಲ ನೆನೆವರೆಂಬುವದೊಂದು ಶರಣರ್ಗೆ । ಹೇರಿಳೆ ಹಣ್ಣ ನೀಡಿದರು ॥ ೪ ॥
ಎಲ್ಲ ವಸ್ತುಗಳಿಗೆ ಬಲ್ಲಿದನಾಗಿರ್ದ । ಅಲ್ಲ ಎಂಬರು ಎನ್ನ ಜನರು ॥
ಎಲ್ಲೆಲ್ಲಿ ತಾನಲ್ಲದಿಲ್ಲವೆಂಬುವ ಹಸಿ । ಅಲ್ಲವ ತಂದು ನೀಡಿದರು ॥ ೫ ॥
ಆಗರಡಕೆ ಎಲೆ ಕಡಲೆ ಕಬ್ಬಿಹರಾಜ್ಯ । ಮಾಗಳಿಭೂಮಿ ಎಂಬುವರು ॥
ಹೀಗೆನ್ನ ಪೆಸರು ಒಪ್ಪುವುದೆಂಬ ಉಪ್ಪಿನ । ಮಾಗಳಿಬೇರ ನೀಡಿದರು ॥ ೬ ॥

* ಈ ಪದ್ಯಗಳು (ಬ, ಜ.) ಪ್ರತಿಗಳಲ್ಲಿ ಮಾತ್ರವಿವೆ.

ಕ್ಕ[1] ರು ಅತ್ತೆಯಿಲ್ಲದ[1] ಅಳಿಯುದರುಂಟೆ । ಮಕ್ಕಳಿಲ್ಲದ ಮಾವನೆಂದು ॥
ಕ್ಕಿಲ್ಲ ಕರೆವರೆಂಬುದು ಒಂದು ಮಾವಿನ । ಇಕ್ಕಡಿಗಾಯ ನೀಡಿದರು ॥ ೭ ॥
ಂಬುಜವದನ ಅಂಡಲೆಯೇನು ಘನವೆ ಕೂ । ಷ್ಮಾಂಡವೆಂಬರು ತನ್ನ ಪೆಸರ ॥
ಂಭುಮನೋಪ್ರಿಯ ಎಂದೆಂಬ ಶರಣರಿಗೆ । ಕುಂಬಳಕಾಯ ನೀಡಿದರು ॥ ೮ ॥
ಲ್ಲ ಗಿರಿಯ ಮೇಲೆ ಬಲ್ಲಿದನಾಗಿರ್ಪ । ಬಿಲ್ವದತರು ಎಂಬರೆನ್ನ ।
ಲ್ಲಿಕಾರ್ಜುನ ಪ್ರಿಯವೆಂದೊಂದು ಶರಣರ್ಗೆ । ಬೆಲ್ಲವತ್ತವ ನೀಡಿದರು * ॥ ೯ ॥
ಾಲೋಕದೊಳು ಸಕಲ [2] ಕಾಯಿಪಲ್ಯಗಳೊಳು [2] । ಹಾಗಲ ತಾ ಹಸನೆಂದು ॥
ಗಭೂಷಣಪ್ರಿಯ ಎಂದೊಂದು ಶರಣರ್ಗೆ । ಹಾಗಲಕಾಯ ನೀಡಿದರು ॥ ೧೦ ॥

ೇರೆ ಪಡವಲ ಗುಳ್ಳ ಸೋರೆ ಬದನೆ ಬಾಳೆ । ಮೀರಿದ ಕಾಯಿ ತಾಳಿಲನು ॥
ಾ[3] ರಾರಿಯ ಮನೋಹರ ಪ್ರೀಯ[3] ಶರಣರ್ಗೆ। ನಾರಿಯರೆಡೆಯ ಮಾಡಿದರು ॥೧೧॥
ಚ್ಚಡಿ ಪಚ್ಚಡಿ ಚೊಕ್ಕ ಕಡಲೆಬೇಳೆ । ಹೆಚ್ಚಾದ ರುಚಿಯ ಶಾಕಗಳ ॥
ಚ್ಚಿ ಈಶನ ಕೃಪೆ ಬೆಚ್ಚಂತೆ ಶರಣರ್ಗೆ । ಉತ್ಸಾಹದಿಂದ ನೀಡಿದರು ॥ ೧೨ ॥
ಪ್ಪಳ ಸಂಡಿಗೆ ಒಪ್ಪುವ ಪಾಯಸ । ತುಪ್ಪ ಸಕ್ಕರೆ ಜೇನು ಸಹಿತ ॥
ಪ್ಪುರಹರ ಮನಕೊಪ್ಪಂತೆ ಶರಣರ್ಗೆ । ಪುಷ್ಪಗಂಧಿಯರು ನೀಡಿದರು ॥ ೧೩ ॥

ಳಿಗೆ ಸಜ್ಜಿಗೆ ಪರಡಿಯ ಪಾಯಸ । ಹೆರದುಪ್ಪ ದೋಸೆ ಕಜ್ಜಾಯ ॥
ರಿವ ಪಾಯಸ ಹುಗ್ಗಿಗೌಲೆಯ ಪಾಯಸ । ಶರಣರಿಗೆಡೆಯ ಮಾಡಿದರು ॥ ೧೪ ॥
ಾರಿಗೆ ಹೂರಣ ಕಡುಬು ಇಡ್ಡಲಿಗೆಯು । ಗಾರಿಗೆ ಮಂಡಿಗೆಯು ರಾಜಾನ್ನ॥
ರದ ಷಡುರುಚಿ ಸಾರಾಮೃತವ ತಂದು । ನಾರಿಯರೆಡೆಯ ಮಾಡಿದರು ॥ ೧೫ ॥
ಲು ಸಕ್ಕರೆ ಘೃತ ಮೇಲು ಬಾಳೆಯಹಣ್ಣು । ಮೇಲೆ ಆರಾರು ಬಯಸಿದುದ ॥
ಲುಗಟ್ಟಿತು ಕೆನೆಮೊಸರು ಮಜ್ಜಿಗೆಕುಂಭ । ಬಾಲೆಯರ್ತಂದು ನೀಡಿದರು ॥ ೧೬ ॥

ತು ಎಲ್ಲಕೆ ಎಡೆಯಾಗಲು ಭಂಡಾರಿ । ನಿಂತನು ದೈವ ಮಧ್ಯದಲಿ ॥
ತುಮರ್ದನ ಶಿವಶರಣರಾದ್ಯಂತ ಮ । ಹಂತರೆ ಸಲಿಸೆಂದು ನಮಿಸೆ ॥ ೧೭ ॥
ಚೆನ್ನೆ ಚರಲಿಂಗ ಪುರಹರಗರ್ಪಿಸಿ । ಸವಿದರು ಷಡ್ರುಚಿಯ ಸ್ವಾದಾನ್ನ ॥
ಪರಿ ಶಾಕ ಪಾಕಾದಿಯ ರುಚಿಸುತ್ತ । ಹರುಷದಿ ತೃಪ್ತಿಯೈದಿದರು ॥ ೧೮ ॥

---

1 ಕ್ಕರೆಯಿಲ್ಲದೆ ಅತ್ತೆ (ಉ, ಗ, ಚ, ಜ.)   * ಈ ಪದ್ಯ (ಅ, ಜ, ಟ, ದ, ಬ.) ಪ್ರತಿಗಳಲ್ಲಿಲ್ಲ.
2 ಪಣ್ಣುಕಾಯಿಗಳಿಗೆ (ಇ, ಒ, ಗ, ಚ, ಟ.)   3-3 ಹರಪ್ರಿಯ ಮನೋಹರ (ಒ, ಜ.)

ಶರಣರೆಲ್ಲರು ಷಡುರಸ ದಿವ್ಯಾನ್ನವ। ಭರಿತದಿ ಸಲಿಸಿ ಸಂತಸದಿ ॥
ಕರಗಳ ತೊಳೆದು ಕುಳ್ಳಿರಲಾಕ್ಷಣದಲಿ ಕ। ರ್ಪೂರ ವೀಳ್ಯವನಿತ್ತು ನಮಿಸೆ ॥ ೧೯ ॥
ರೇಚಿತಂದೆಯು ವೀಳ್ಯವೆಲ್ಲ ಗಣಂಗಳ್ಗೆ। ವಾಜಿಯಿಂ ಕೊಡುತಿರಲಾಗ ॥
ತೇಜಗುಂದಿಯೆ ಕುರೂಪಿನ ಜಂಗಮನೋರ್ವ। [1]ನಿರಲು ಮಿಕ್ಕೊಂದು[1] ಕರಿಯೆಲೆಯ* ॥
ಎಲೆಯೆಲ್ಲ ಮುಗಿದು ಮಿಕ್ಕೊಂದು ಕರಿಯೆಲೆಯನ್ನು। ಕುರೂಪಿಜಂಗಮನಿಗೆ ಕೊಡಲು ॥
ಘಳಿಲನೆ ತಾನಿತ್ತ ರೇಚಣ್ಣ ಮುಂದಕ್ಕೆ। ಬಳಲುವಪರಿಯು ಸೂಚನೆಗೆ † ॥ ೨೧ ॥
ಹಿರಿಯರು ಮಾನ್ಯರು ಪರಶಿವನಿಷ್ಠರು। ನೆರೆದು ಕುಳ್ಳಿರ್ದ ಸಮಯದಲಿ ॥
ತರಿಸಿ ವಿಭೂತಿ ವೀಳ್ಯವ ಚೆನ್ನದಂಡೇಶ। ಶರಣರ ಮುಂದೆ ಇರಿಸಿದನು ॥ ೨೨ ॥
ಶರಣು ಅಲ್ಲಮಪ್ರಭು ಶರಣು ಕೂಡಲಸಂಗ। ಶರಣು ಬಸವ ಸಿದ್ಧರಾಮ ॥
ಶರಣು ಶ್ರೀ ಬಸವಾದಿ ಸಕಲ ಪ್ರಮಥರಿಗೆ। ಶರಣೆಂದು ಸಾಷ್ಟಾಂಗವೆರಗಿ ॥ ೨೩ ॥
ಗುರುವೆ ಕೇಳ್ ಶ್ರೀ ರುದ್ರಮುನಿ ನಿಮ್ಮ ಶರಣರ। ಕರುಣ ಪ್ರಸಾದದಿಂ ನಾನು ॥
ಶರೀರವ ತಾಳಿ ಬಂದೆನು ಧನ್ಯನಾದೆ ಮುಂ। ದೊರೆವೆನು ಬರುವ ಕಾರಣವ ॥ ೨೪ ॥
ಧಾರಿಣಿಪತಿ ಬಿಜ್ಜಳನಿಗೆ ಕೈಲಾಸದ। ದ್ವಾರದ ಮಣಿಹ ಸಂಧಿಸಿತು ॥
ಧೀರ ಮಾಚಯ್ಯನು ಮಾರಾರಿ ಸನ್ನಿಧಿಯ। ಸೇರಿ ಉತ್ಸಹದಿಂದಲಹನೆ ॥ ೨೫ ॥
ಇಂದು ನಾವೆಲ್ಲ ಕೈಲಾಸಕ್ಕೆ ಪೋಗೀಗ। ಇಂದುಧರನ ಸಾರ್ದು ಇರ್ದು ॥
ಮುಂದೆ ಏಳ್ನೂರು ಎಪ್ಪತ್ತು ವರುಷಕ್ಕೆ। ಬಂದೇವು ಈ ಲೋಕಕೆಲ್ಲ ॥ ೨೬ ॥
ಯತಿಗಳು ಮುನಿಗಳು ವ್ರತನಿಷ್ಠ ಮಹಿಮರು। ಅತಿಹಿತಭಕ್ತಿ ಸಜ್ಜನರು ॥
ಕ್ಷಿತಿಗೆ ನಾವೈತರೆ ಅತಿ ವೇಗಬೈತಂದು। ನತರಾಗಿ ಎಮ್ಮ ಕಾಣುವರು ॥ ೨೭ ॥
ಧೀರ ಬಿಜ್ಜಳನ ವಂಶಾಬ್ಧಿ ಚಂದ್ರಮನೆಂಬ। ವೀರವಸಂತಗೆ ಮುಂದೆ ॥
ಧಾರಿಣಿಯೊಳು ರಾಯಪಟ್ಟ ಕಲ್ಯಾಣದ। ಪುರದೊಳು ಆನಂದ ಕವಿದು * ॥ ೨೮ ॥
ಗುರು ಲಿಂಗ ಜಂಗಮ ಚರಣಾಂಬು ಶೇಷವ। ವರ ಸೇವನೆ ಮಾಳ್ಪ ವ್ರತರು ॥
ಹರಪೂಜೆ ಗುರುಸೇವೆ ಪರಮ ಜಂಗಮ ಭಕ್ತಿ। ಇರುವರಂದಿಗೆ ಕಾಂಬರೆಮ್ಮ ॥ ೨೯ ॥
ಎಂದು ಹಡಪದರೇಚಿತಂದೆಯ ಮುಖ ನೋಡಿ। [2]ಕಂದ[2] ಬಾರೆಂದು ತಲೆದಡಹಿ ॥
ಇಂದು ನಾನೊಂದ ಮರೆದೆ ಬಯಲ ಬಸವನ। ಮುಂದೆಮ್ಮ ಚರಣಪಾದುಕೆಯ ॥ ೩೦ ॥

---

1-1 ಕೂಜದಿಂದಿರೆ (ಒ, ಖ, ಡ.) * ಈ ಪದ್ಯಗಳು (ಟ.) ಪ್ರತಿಯಲ್ಲಿಲ್ಲ.
† ಈ ಪದ್ಯ (ಅ, ಜ, ಟ, ಬ.) ಪ್ರತಿಗಳಲ್ಲಿಲ್ಲ. 2 2 ತಂದೆ (ಅ, ಬ.)

ಶರೀರದಿ ಕಪಟವ ಧರಿಸಿ ಚೆನ್ನಣ್ಣನು । ತರಪ್ರೋಗು ಎಂದು ನೇಮಿಸಲು ॥
ಭರದಿ ಪೋದವನಂತೆ ಪೋಗಿ ರೇಚಣ್ಣನು । ತರುಗಳ ಮರೆಮಾಡಿ ನಿಂದ ॥ ೩೧ ॥
ಮುಂದೆ ಬೇಗದಿ ಚೆನ್ನದಂಡೇಶ ಶರಣರ್ಗೆ । ವಂದಿಸಿ ಕರಗಳ ಮುಗಿದು ॥
ತಂದೆಗಳಿರ ತಳು[1] ವ[1] ದೆ ಬೇಗಲೇಳಿನಾ । ವಿಂದೆ ಶಿವಪುರಿಗೈದಬೇಕು ॥ ೩೨ ॥
[2] ಹೋಗಬೇಕೀಕ್ಷಣ[2] ಹಾಕಬೇಕುಯ್ಯಾಲೆ । ತೂಗಬೇಕೆಲ್ಲ ಶರಣರನು ॥
ಬೇಗ ಸೊಡ್ಡಳದೇವ ಪೋಗಿ ಕಟ್ಟಿಸು ಎಂದು । ಆಗ ಚೆನ್ನಣ್ಣನಿಂತೆಂದ ॥ ೩೩ ॥
ಸದ್ಯ ಈ ಉಳುವೆಯ ಉದ್ಯಾನವನ[3] ದಾ[3] ಚೆ । ಸಿದ್ಧಗಿರಿಯ ಶಿಖರದಲಿ ॥
ಎದ್ದುದು ವಟವೃಕ್ಷ ಅದರುತ್ರ ಶಾಖೆಗೆ । ಭದ್ರದಿ ಕಟ್ಟಿ ಹೋಗೆಂದ ॥ ೩೪ ॥
ಎಂಬು ಪೇಳಲು ಶರಣವೃಂದವೆಲ್ಲವು ಎದ್ದು । ಚಂದದಿಂ ಶೃಂಗಾರವಾಗಿ ॥
ಮುಂದೆ ಕೈಲಾಸದ ಚಂದ್ರಮೌಳಿಯ ಪ್ರಮಥ । ವೃಂದಕ್ಕೆ ಪಯಣ ಪೇಳಿಸಿದ ॥೩೫॥
ಇತ್ತ ಸೊಡ್ಡಳದೇವ ಸತ್ಯಪ್ರಮುಥರ ಮೊತ್ತ । ವೆಲ್ಲವನೊಡಗೊಂಡು ಬಂದ ॥
ಉತ್ತಮ ಸಿದ್ಧಗಿರಿಯ ಅರೆದಪ್ಪಲ । ಹತ್ತಿರಲೇನ[4] ವರ್ಣಿ[4] ಸುವೆ ॥ ೩೬ ॥
ಸಾಮವೇದಿಗಳು[5] ಕುಮಾರ[5] ಮೈದುನ ರಾಮು । ಹಲಾಯುದಯ್ಯಗಳವರೆಲ್ಲ ॥
ಭೂಮಿಯೊಳಿದ್ದು ಕೈಲಾಸಕ್ಕೆ ತಾವಿರ್ದ । ಗ್ರಾಮುವ ಕೊಂಡು ಪೋದಂತೆ ॥ ೩೭ ॥
ರುದ್ರರ ಅರಮನೆ ಸಿದ್ಧರ ನೆಲೆವೀಡು । ಸಿದ್ಧಋಷಿಗಳಿರ್ಪ ಸ್ಥಲವು ॥
ಸಿದ್ಧಕಲ್ಪಂಗಳ ಹೊದ್ದಿದ ಘನಗಿರಿ । ಇರ್ದುದು ಮಹ[6] ಋಷಿ[6] ಯಂತೆ ॥ ೩೮ ॥
ಸಂಜೀವ ಘುಟಿಕೆ ದಿವ್ಯಾಂಜನ ರಸಸಿದ್ಧಿ । ಮಂಜುಳ ಪರುಷವೇದಿಗಳು ॥
ರಂಜಕರಿಗೆ ಸಿದ್ಧಮೂಲಿಕೆ ಘನಕ್ರಿಯ । ರಂಜಿಸುತಿಹವಾಗಿರಿಯಲ್ಲಿ ॥ ೩೯ ॥
ಕಾಮಧೇನುವು ಕಲ್ಪವೃಕ್ಷ ಚಿಂತಾಮಣಿ । ಹೇಮದ ರಸ ಪರುಷವೇದಿ ॥
ಕಾಮಿತ ಜನರಿಗೆ ಕಾಮ್ಯಾರ್ಥಗಳನೀವ । ಸ್ವಾಮಿಯಂತಿಹುದು ಆ ಗಿರಿಯು ॥ ೪೦ ॥
ತೃಣಜ್ಯೋತಿಯು ಕಾಷ್ಠಜ್ಯೋತಿ ಭುವನಜ್ಯೋತಿ । ಗುಣವ ತಿಳಿವರಾರು ಜಗದಿ ॥
ತ್ರಿಣಯನ ಪುರವ ತೋರುವ ನಾನಾ ಕಲ್ಪವ । ಎಣಿಸುವರಾರೀ ಗಿರಿಯೊಳು ॥ ೪೧ ॥
ಅಂತಪ್ಪ ನಾನಾ ಕಲ್ಪಂಗಳ[7] ನೋಡು[7] ತ್ತ । ಕಂತುಹರಶರಣರು ನಡೆಯೆ ॥
ಮುಂತೆ ಶ್ರೀಗಿರಿಯ ತುದಿಯಲಿರ್ಪ ಅಗ್ರವ । ನಂತು ಕಂಡರು ಶರಣರೆಲ್ಲ ॥ ೪೨ ॥
ಧರೆಯ ಪರ್ಬಿದ ಪಾದಂಬರವ ಪರ್ಬಿದ ಶಿರ । ಹರಿದು ಬೀಳಲು ಜಡೆ ತನಗೆ ॥
ಧರಿಸಿರ್ದ ಅಖಿಳಾಂಡಫಲವನ್ನು ಹರಿದಾಳ್ವ । ಪರಬ್ರಹ್ಮವೆನೆ ವೃಕ್ಷವಿಹುದು ॥ ೪೩ ॥
ಇನ್ನು ಇಂತಪ್ಪ ಆಲದವೃಕ್ಷ ಶಾಖೆಗೆ । ಚಿನ್ನದ ಸರಪಳಿ ಬಿಗಿದು ॥
ಉನ್ನತವಾದ ವಿಭೂತಿಯ ತೊಟ್ಟಿಲ । ಚೆನ್ನಾಗಿ ಅಳವಡಿಸಿದರು ॥ ೪೪ ॥

---

1-1 ಹ (ಇ, ಉ, ಒ, ಖ, ಟ, ಡ) 2-2 ಈಗ ಈ ಕ್ಷಣದಲ್ಲಿ (ಇ, ಎ, ಒ, ಖ, ಗ, ಚ, ಜ.) 3-3 ದಯಿಾ (ಅ, ಬ.) 4-4 ಬಣ್ಣಿ (ಇ, ಎ, ಖ, ಗ, ಚ.) 5-5 ರಪಾಲ (ಇ, ಒ, ಏ, ಗ, ಚ, ಜ.) 6-6 ಸಿರಿ (ಒ, ಖ, ಗ, ಚ.) 7-7 ಕೇಳು (ಅ, ಡ, ಬ.)



**ಶ್ರೀ ಚೆನ್ನಬಸವೇಶ್ವರನು ರೇಚಣ್ಣನನ್ನು ಪಾದುಕೆ ತೆರಲು ಕಳುಹಿದುದು** (ಸಾಂ. ಪದ್ಯ ೩೦ - ೩೧ - ೩೨ - ೩೪.)

ಬಂಧಿಸಿ ತೊಟ್ಟಿಲ ಬಿಗಿದು ಸೊಡ್ಡಳದೇವ । ಮುಂದೆ ಶರಣರನು ಕುಳ್ಳಿರಿಸಿ ॥
ಚಂದದಿಂ ತೂಗಿಬಿಡುವೆನೆಂಬಾಸಮಯಕ್ಕೆ । ಬಂ[1] ದ ಪುಷ್ಪಕವನೇನೆಂಬೆ[1] ॥ ೪೫ ॥

ವಚನ ॥ ಇಂತು ಮರ್ತ್ಯಲೋಕದ ಮಹಾಗಣಂಗಳು ಕೈಲಾಸಕ್ಕೆ ಬರುವಂಥಾ ಉತ್ಸಾಹವ ಖೇಚರದಲ್ಲಿ ಶ್ರೀ ಪರಮೇಶ್ವರನು ನೋಡುತಿರ್ದನದೆಂತೆನೆ.

**ವೃತ್ತ.**

ಶ್ರೀ ಗಿರಿಜೆ ವರರಮಣ ಪರಮೇಶ ಸೂರ್ಯಸುಪ್ರಕಾಶ ।
ಭರ್ಗ ಭವಹರ ಪರಮಶಂಭು ಮಹೇಶ ಮೂಜಗಧೀಶ ॥
ರಾಗವಿರಹಿತ ರಜತಪರ್ವತವಾಸ ಮನ್ಮನತೋಷ ।
ಸಾಗಿ ಶರಣರು ಬರುವ ಮೇಲ್ಮೆಗೆ ಆಗ ಸಂತಸಗೊಂಡ * ॥ ೧ ॥

**ಭಾಮಿನೀ ಷಟ್ಪದಿ.**

ಸಿಂಧುಜೂಟ ಫಣೀಂದ್ರಕಂಕಣ ।
ಇಂದ್ರಹರಿಯಜ ಸುರರ ಮುನಿಗಳ ।
ಚಂದ್ರಮೌಳಿಯು ಕರೆಸಿದನು ಪ್ರಮಥೇಂದ್ರ ಗಣಸಭೆಯ ॥
ನಂದಿಕೇ[2] ಶನು[2] ಸ್ಕಂದ ಗಣಪತಿ ।
ಬಂದರಾ ಶರಭೇಂದ್ರ ಮುಖ್ಯರು ।
ಸಂದಣಿಸಿತಾ ಸಕಲ ವೈಭವದಿಂದ ಶಿವಸಭೆಯು ॥ ೧ ॥

ನಂದಿವಾಹನನಮರ ಮುನಿಗಣ ।
ವಂದಿತನು ವನಜಾಕ್ಷಪೂಜಿತ ।
ನಂದು ನಂದಿಯ ತಂದು ಶೃಂಗರಿಸೆಂದ ನಾರದಗೆ ॥
ಇಂದುಧರ ವಾಕ್ಯವನು ಕೇಳುತ ।
ವಂದಿಸುತ ನಾರದನು ಈಶಗೆ ।
ತಂದು ನಂದಿಯ ಚಂದದಲಿ ಶೃಂಗರಿಸಿದನು ಬೇಗ ॥ ೨ ॥

ಕಾಲುಗಗ್ಗರ ಕಡಗ ಕೊರಳಲಿ ।
ಸಾಲು ಸರಪಳಿ ಘಂಟೆ ಲಾವಳ ।
ಮೇಲೆಸೆವ ಕೋಡಣಸು ಅರಳೆಲೆ ಗೆಜ್ಜೆ ಮುಖರಂಬ ॥
ಜೋಲುತಿಹ ಝುಲ್ಲಿಯು ಸುರತ್ನದ ।
ಮೇಲುಗೆಲಸದ ಸಬರಪಟ್ಟಣಿ ।
ಕಾಲಹರ ಪರಶಿವನ ವಾಹನ ಕಣ್ಗೆ ರಂಜಿಸಿತು ॥ ೩ ॥

---

1-1 ದುದು ಶಿವನ ಪುಷ್ಪಕವು (ಇ, ಎ, ಖ, ಗ, ಚ.) * ಈ ವೃತ್ತ (ಇ, ಖ, ಗ, ಚ.) ಪ್ರತಿಗಳಲ್ಲಿಲ್ಲ. 2 2 ಶ್ವರ (ಖ, ಗ, ಚ, ಡ.)

ಆದಿಮೂರ್ತಿಯು ಅಖಿಳ ಲೋಕವ |
ಭೇದವಿಲ್ಲದೆ ಬೆಳಸಿ ಸಲಹುವ |
ನಾದಿ ಚಿನ್ಮಯ ಧರ್ಮ ನಿರ್ಮಲಮೂರ್ತಿ ವೃಷಭೇಂದ್ರ ||
ಮಾಧವಾದಿ ವಿರಂಚಿ ಮನು ಮುನಿ |
ಮೇದಿನಿಗಳೇನಿಲ್ಲದಾಚೆಗೆ |
ಭೇದಿಸುವೊಡದಸಾಧ್ಯ ನಿಷ್ಕಲರೂಪ ಮಹಾಮಹಿಮ || ೪ ||

ಮೇದಿನಿಯ ಹರಗುತ್ತ ಬಿತ್ತುತ |
ಲಾದ ಫಲವನು ತುಳಿದು ವೃಷಭನು |
ಮೇದು ಮಿಕ್ಕ ಪ್ರಸಾದವದಖಿಳ ದೈವಯೋಗ್ಯವದು ||
ಆದಿಕರ್ತನು ವೃಷಭರಾಜನ |
ಪಾದವನು ನೆರೆನಂಬಿದವರಿಗೆ |
ಆಧಿ ವ್ಯಾಧಿಯು ಪರಿದು ಮೋಕ್ಷದ ಹಾದಿಯವರ್ಗಹುದು || ೫ ||

ಬಂದ ನಂದಿಯು ನೋಡಿ ಹರುಷದಿ |
ಚಂದ್ರಮೌಳಿಯು ಮತ್ತೆ ತರಿಸಿದ |
ಅಂದಚಂದಾನಂದಮಯವಹ ದಿವ್ಯರಥಗಳನು ||
ಕುಂದಣದ ಬಹು ಕುಶಲಗೆಲಸಗ |
ಳಿಂದ ರಚಿಸಿದ ರತ್ನತೋರಣ |
ದಿಂದಲೊಪ್ಪುವ ದಿವ್ಯಪುಷ್ಪಕ ಬಂದವಾಕ್ಷಣದಿ || ೬ ||

ಪೃಥ್ವಿಶರಣರ ಶಿವನ ಮೋಹದ |
ಸುತನ ಚೆನ್ನದಂಡೇಶನನು ತಾ |
ವತಿಶಯದೊಳಿದಿರ್ಗೊಂಬೆವೆಂಬಾ ವಿಪುಲ ಸಂತಸದಿ ||
ಅತಿರಥರು ಮಹರಥರು ಪ್ರಮಥರು |
ನುತಿಪ ಕೀರ್ತಿಪ ಚಂಡಕೀರ್ತಿಗ |
ಳತಿಶಯದ ಮಹನಂದಿಕಾಳರು ಕಾಲಭೈರವರು || ೭ ||

ಹರಿಯಜೇಂದ್ರರು ಸುರರು ಮನುಮುನಿ |
ಗರುಡ ಗಂಧರ್ವಾದಿ ಸಿದ್ಧರು |
ಉರಗ ಕಿನ್ನರ ಖೇಚರರು ಮಹ ಯಕ್ಷ ರಾಕ್ಷಸರು ||
ಸರಸನಾರದ ಸಪ್ತಮಾ[1]ತೃಕೆ[1] |
ರ್ಕಿರಿವ ದ್ವಾದಶ ಸೂರ್ಯ ಚಂದ್ರರು |
ತರತರದ ದಿಕ್ಪಾಲ ಸಂದಣಿ ನೆರೆದುದಾಕ್ಷಣದಿ || ೮ ||

1-1 ತ್ರಿಯರು (ಇ, ಒ, ಖ, ಗ, ಜ.)

ಇಂದು ಶೇಖರನೇರಿ ನಂದಿಯ |
ಹಿಂದು ಮುಂದೆಡ ಬಲದಿ ಬರುತಿಹ |
ನಂದಿ ಗುಹ ಗಣ ವೀರಭದ್ರರ ಸಂದಣಿಗಳಿಂದ ||
ವಂದಿ ನಾರದ ಗಂಧರ್ವಗಾನ |
ದಿಂದ ತುಂಬುರಗೀತ ಭರದಿಂ |
ದಂದು ಮೇನಕಿ ರಂಭೆಯೂರ್ವಶಿ ತಿಲೋತ್ತಮೆ ಸಹಿತ || ೯ ||

ಕೊಂಗುನಗೆಗಳ ನಗಿಸಿಯಾಡುವ |
ಭೃಂಗಿನಾಟ್ಯವ ಬಳಸಿ ಬರುತಿಹ |
ಶೃಂಗರದ ಶಿವಶರಣಸತಿಯರು ರುದ್ರಕನ್ನೆಯರು ||
ಮಂಗಳಾರತಿ ಪಿಡಿದು ಈಶನ |
ಸಂಗಡದಿ ಸಲೆ ಸಾಗಿಬರುತಿರೆ |
ರಂಗು ಮಾಣಿಕ ರತ್ನರಥಗಳು ಮುಂದೆ ಸಾಗಿದವು || ೧೦ ||

ಹರನು ನಂದಿಯನೇರಿ ತೊಡೆಯೊಳು |
ಗಿರಿಜದೇವಿಯು ಪರಮ ಜಡೆಯೊಳು |
ಪರಿವ ಜಾನ್ಹವಿ ವಜ್ರಮಕುಟದಿ ಧರಿಸಿ ಚಂದ್ರಮನ ||
ಉರಗಭರಣವು ಕರದಕಂಕಣ |
ಶಿರದ ಮಾಲೆಯು ಹರಿಣ ಹಸ್ತದಿ |
ಮೆರೆವ ಶೂಲದಿಪೆಣನು ವ್ಯಾಘ್ರದ ಚರ್ಮದಂಬರವು || ೧೧ ||

ಎತ್ತಿದಾ ಭೂ ಚಕ್ರಶ್ವೇತ |
ಚ್ಛತ್ರಿ ಚಾಮರ ಧ್ವಜ ಪತಾಕೆಗ |
ಳೆತ್ತರದಿ ಪಿಡಿದಿರ್ದ ನಂದಿಯ ಧ್ವಜದ ಸಂಭ್ರಮದ ||
ಮೊತ್ತ ಮೊತ್ತದಿ ಸಕಲ ಪ್ರಮಥರು |
ಸುತ್ತ ಬಿರುದುಗಳೆತ್ತಿ ಪೊಗಳಲು |
ಅರ್ಥಿಯಲಿ ಅಂಬರದ ಮಾರ್ಗದಿ ಬಂದ ನಂದೀಶ || ೧೨ ||

ಅತ್ತಲಂಬರ ಮಾರ್ಗದಲಿ ಶಿವ |
ನರ್ಥಿಯಲಿ ನಿಂದಿರಲು ಮರ್ತ್ಯದಿ |
ಇತ್ತ ಚೆನ್ನದಂಡೇಶ್ವರನು ತಾ ರುದ್ರಮುನಿ ಸಹಿತ ||
ಸತ್ಯವೋಳಿಗೆಮಾರಿತಂದೆಯು |
ಕರ್ತೃಚೆನ್ನಮಲ್ಲಿಕಾರ್ಜುನನು |
ಸುಸ್ಥಿರದಿ ಕುಳ್ಳಿರ್ದು ತೊಟ್ಟಿಲ ತೂಗಿದರು ಬೇಗ || ೧೩ ||

ಭಕ್ತ ಸೊಡ್ಡಳಬಾಚಿದೇವನು ।
ಹತ್ತಿ ಕುಳಿತ ಶರಣರ ತೊಟ್ಟಿಲ ।
ಮುಕ್ತಿಸೋಪಾನವನು ಹತ್ತಿಸಿ ಮೋಕ್ಷಮನೆಗೊಯ್ವ ॥
ಯುಕ್ತಿಯಲಿ ವಿಭೂತಿತೊಟ್ಟಿಲ ।
ಹತ್ತಿಸುತಲಂಬರದ ಮಾರ್ಗಕೆ ।
ಎತ್ತಿ ತೂಗಲು ಈಶಪುಷ್ಪಕವೇರುವರು ಹೋಗಿ ॥ ೧೪ ॥

ತುಂಬಿ ಕುಳ್ಳಿರಿಸುವರು ಹತ್ತೆಂ ।
ಟಂಬರಕೆ ತೂಗಾಡಿ ಬಿಡುವರು ।
ಸಂಭ್ರಮದಿ ಸಾರುವರು ಬೇಗದಿ ಶಿವನ ಪುಷ್ಪಕವ ॥
ಶಂಭು ಮೆಚ್ಚಲು ಸಕಲ ಶರಣರ ।
ಕುಂಭಿನಿಯ ಬಿಟ್ಟಿನ್ನು ಪೋಗುವ ।
ನಂಬುಗೆಯ ಶಿವಶರಣರೆಂಬರ ಮಹಿಮೆ ಇನ್ನೆಂತೊ ॥ ೧೫ ॥

ಕಾಯವದು ಕಾಣಿಪುದು ತೂಗಲು ।
ಕಾಯವದು ಬಯಲಾಗಿ ದಿವ್ಯದ ।
ಕಾಯದಲಿ ಪೋಗುವರು ಸೂರ್ಯನ ಕಾಯದಂದದಲಿ ॥
ಮಾಯ ಮೋಹವಿರಹಿತ ಷಡುಸ್ಥಲ ।
ರಾಯರನು ಪ್ರಮಥಾಟಯಮರರ ।
ರಾಯ ಸೊಡ್ಡಳದೇವ ತೂಗಿದ ನಿಮಿಷಮಾತ್ರದಲಿ ॥ ೧೬ ॥

ಬಂದು ಸಂಭ್ರಮದಿಂದ ಪುಷ್ಪಕ ।
ನಿಂದು ಅಂಬರದಲ್ಲಿ ಸಾಲ್ವಿಡಿ ।
ದಂದವನು ನಾನೇನನುಸುರುವೆನಪರ ಉತ್ಸಹವ ॥
ಅಂದಚಂದದ ಮೇಘಾಡಂಬರ ।
ಹೊಂದಿ ಏಳುವ ಮಾಳ್ಕೆಯಲಿ ರಥ ।
ಸಂದಣಿಸಿ ಸಾಲ್ವಿಡಿದು ನಿಂ[1]ದ[1]ವು ಚಂದ್ರಪ್ರಭೆಯುಂತೆ ॥ ೧೭ ॥

ಸತ್ಯಶರಣರ ತೂಗಲಾಕ್ಷಣ ।
ಹತ್ತಿದರು ಪರಶಿವನ ರಥವನು ।
ಇತ್ತ ಸೊಡ್ಡಳ ಮೋಳಿಗಯ್ಯನು ಚೆನ್ನದಂಷ್ಟೇಶ ॥
ಕತ್ರ್ರುವಾ ರುದ್ರಮುನಿ ಕಾರಣ ।
ಮೂರ್ತಿಯು ಚೆನ್ನಮಲ್ಲಿಕಾರ್ಜುನ ।
ರರ್ಥಿಯಲಿ ಕುಳಿತೈವರೊಂದ್ಯೋಚನೆಯ ಮಾಡಿದರು ॥ ೧೮ ॥

1-1 ತ (ಇ, ಎ, ಖ, ಗ.)

ಗುರುವೆ ಕೇಳಿರಿ ರೇಚಿತಂದೆಯು ।
ಚರಣಪಾದುಕೆಗೆಂದು ಕಳುಹಲು ।
ತರಲು ಪೋದರು ಅವರು ಹಿಂದೆ ವಿಳ್ಯವನು ಕೊಡುವಲ್ಲಿ ॥
ಶರಣವರ್ಗ್ಗಕೆ ಬಿಳಿಯೆಲೆಯ ಒಬ್ಬ ।
ಶರಣನಿಗೆ ಕರಿಯಲೆಯನಿತ್ತರು ।
ಕೊರತೆ ಬಂದುದು ರೇಚಿತಂದೆಗೆ ಅದರ ಕಾರಣದಿ ॥ ೧೯ ॥

ಹರನು ಕೈಲಾಸದಲಿ ವಿವರಣೆ ।
ಪರಿಕಿಸಲು ಮರಳಿಯುಂ ಧಾತ್ರಿಗೆ ।
ತಿರುಗಿ ಕಳುಹುವನೆಂದು ಅವರನು ಕರೆಯದಿಹೆವೀಗ ॥
ಇರದೆ ಮುಂದಕೆ ನಾವು ಶರಣರು ।
ಧರೆಗೆ ಬಂದಂದಿಂಗೆ ತಮ್ಮನು ।
ಕರೆದು ಸಂಗಡವೊಯ್ವ[1] ರೆ[1] ಂದರುಹುವದು ಸ್ವಾಮಿಗಳು ॥ ೨೦ ॥

ಎಂದು ಓಲೆಯ ಬರೆದು ಕರಿಯೆಲೆ ।
[2] ಯೊ [2] ಂದು ಘಳಿಗೆಯು ಮಾಡಿ ಬೇಗದಿ ।
ತಂದು ಮತ್ತಾರುದ್ರಮುನಿ ಚೆನ್ನಮಲ್ಲಿಕಾರ್ಜುನರ ॥
ಮುಂದೆ ಇಟ್ಟರೆ ತಾವು ಮೂವರು ।
ಬಂದು ಹತ್ತಿದರಾಗ ತೊಟ್ಟಿಲ ।
ಚಂದದಿಂ ತೂಗಾಡಿ ಪೋದರು ಇಂದುಧರನೆಡೆಗೆ ॥ ೨೧ ॥

ನಂದಿವಾಹನ ನಾಗಭೂಷಣ ।
ಚಂದ್ರಮೌಳಿಯು ಚೆನ್ನಬಸವನ ।
ಕಂದ ಬಾರೆಂದಪ್ಪಿ ಮಗನನು ನೋಡಿ ಮನದಣಿಯ ॥
ಬಂದ ಶರಣರ ಭಾವಿಸುತ್ತಲಿ ।
ಅಂದು ಶಿವನತ್ಯಂತ ಹರುಷವ ।
ಪೊಂದಿ ಮಸ್ತಕದಡಹಿ ಸಲಹಿದ ಚಂದ್ರಶೇಖರನು ॥ ೨೨ ॥

ಪರಮ ಹರುಷದಿ ಬಂದರಾಕ್ಷಣ ।
ಸುರ ನರೋರಗ ರುದ್ರಕನ್ನೆಯ ।
ರುರವಣಿಸಿ ಬೆಳಗಿದರು ಬೇಗದಿ ಮಂಗಳಾರತಿಯ ॥
ಮೊರೆದವಾಕ್ಷಣ ದೇವದುಂದುಭಿ ।
ಕರೆದವಾಕ್ಷಣ ಕುಸುಮವೃಷ್ಟಿಯು ।
ಶರಣರೊಂದಿನೊಳೆರಗಿ ನುತಿಸಿದ ಚೆನ್ನದಂಡೇಶ ॥ ೨೩ ॥

1-1 ನೆ (ಇ, ಎ, ಟ.) 2-2 ನ (ಅ, ಬ)

ತ್ರಾಹಿ ದೇವರದೇವ ದೇವನೆ ।
ತ್ರಾಹಿ ಪರಮ ಕೃಪೈಕ ಸಿಂಧುವೆ ।
ತ್ರಾಹಿ ಭಕ್ತರ ಬಂಧು ಮದ್ಗುರು ತ್ರಾಹಿ ಮಾಂ ತ್ರಾಹಿ ॥
ತ್ರಾಹಿ ಹರಿಯಜದೇವವಿ ನಮಿತ ।
ತ್ರಾಹಿ ಭುವನಕ್ಕಾದಿ ಒಡೆಯನೆ ।
ತ್ರಾಹಿ ರಕ್ಷಿಸು ರಕ್ಷಿಸೆಂದೆರಗಿದನು ಚೆನ್ನಣ್ಣ ॥ ೨೪ ॥

ಗುರುವೆ ರಕ್ಷಿಸು ಭಕ್ತಕಲ್ಪಸು ।
ತರುವೆ ರಕ್ಷಿಸು ರಕ್ಷಿಸೆನುತಲಿ ।
ಶರಣಜನ ಕೊಂಡಾಡುತೀಶಗೆ ನಮಿಸಿದರು ಎಲ್ಲ ॥
ಹರನು ಹರುಷಿತನಾಗಿ ಎಲ್ಲರ ।
ಬರಸೆಳೆದು [1] ಬಿಗಿಯ [1] ಪ್ಪಿ ಹರಸಿದ ।
ಕರುಣರಸ ಬೀರುತ್ತ ಪುಷ್ಪಕದೊಳಗೆ ಕುಳ್ಳಿರಿಸಿ ॥ ೨೫ ॥

ಭೇರಿ ಮದ್ದಳೆ ಕರಡಿ ಡಿಂಡಿಮು ।
ಭೋರುಗರೆವುತ ಶಿವನ ಪುಷ್ಪಕ ।
ಮೀರಿ ನೆಗೆದವು ಸಾರೆಗಟ್ಟಿತು ಧರೆಗೆಯಂಬರಕೆ ॥
ಕಾರುಮೇಘದ ಮಿಂಚು ಬೆಳಗುತ ।
ಲೇರುವಂದದಿ ಸಕಲ ಪುಷ್ಪಕ ।
ಹಾರಿದವು ಕ್ಷಣಮಾತ್ರದಲಿ ಕೈಲಾಸಪರ್ವತಕೆ ॥ ೨೬ ॥

ಹರನು ಮರ್ತ್ಯದ ಶರಣರೆಲ್ಲರ ।
ಕರೆದು ಕೈಲಾಸಕ್ಕೆ ಪೋಗಿಯೆ ।
ಹರುಷ ಮಿಗೆ ಇಂಬಿಟ್ಟು ಪ್ರಮಥರ [2] ನೆರವಿಯಲಿ ಕುಳ್ಳಿರ್ದ [2] ॥
ಹರಿಯಜೇಂದ್ರರು ಸುರರು ಮನುಮುನಿ ।
ಗರುಡ ಗಂಧರ್ವಾದಿ ಪ್ರಮಥರ ।
ನೆರವಿಯಲಿ ಕುಳ್ಳಿರ್ದ ಈಶಗೆ ಶರಣು ಶರಣಾರ್ಥಿ ॥ ೨೭ ॥

---

1-1 ತೆಗೆದ (ಎ, ಖ, ಜ, ಟ, ಡ.) 2-2 ಹೊರೆಯಲೆಲ್ಲರನು (ಅ, ಟ, ಢ, ದ, ಬ.)

ಈಶನೊಪ್ಪಿದ ಸೂರ್ಯಕೋಟಿ ಪ್ರ ।
ಕಾಶನೊಪ್ಪಿದ ಕನಕಗಿರಿಯ ನಿ ।
ವಾಸನೊಪ್ಪಿದ ಗಿರಿಜೆರಮಣ ಮಹೇಶನೊಪ್ಪಿದನು ॥
ರಾಶಿದೇವರ ಗಂಡ ರವಿ ಶಶಿ ।
[1] ವೈಶ್ವ[1] ಲೋಚನ ದೋಷರಹಿತನು ।
ಶೇಷಭೂಷಣ ಪ್ರಮಥಪತಿ ಜಗಧೀಶನೊಪ್ಪಿದನು ॥ ೨೮ ॥

ಧರೆಯೊಳಗೆ ಬಸವಾದಿ ಪ್ರಮಥರು ।
ಪರಶಿವನ ನೆರೆ ಭಜಿಸಿ ಭಕ್ತರಿ ।
ಗರುಹಿ ಗುರು ಲಿಂಗ ಜಂಗಮುವ ಪೂಜಿಸಿ ಪರಮ ಸಮರಸದಿ ॥
ಇರದೆ ಕೈಲಾಸಕ್ಕೆ ಎಲ್ಲರು ।
ಭರದಿ ಪೋದರು ಎಂಬ ಠಾವಿಗೆ ।
ಹರುಷ ಮಿಗಿಲೆನೆ ಸಂಧಿ ಪೂರ್ಣ್ಣವು ಶರಣು ಶರಣರಿಗೆ ॥ ೨೯ ॥

ಇದುವೆ ಭಕ್ತರ ಶಿಶುಗಳನು ತವೆ ।
ಯೋದಿಸುವ ಚೆನ್ನಪ್ಪದೇವರ ।
ಹೃದಯದಲಿ ಬಸವೇಶ ನೆಲಸಿಯೆ ನೆನಹು ನೆಲೆಗೊಳಿಸಿ ॥
ಸದಮಲಾತ್ಮಕ ಸಕಲ ಶರಣರ ।
ವಿದಿತಕೃತಿಯನು ಪೇಳ್ದೆಸಿದನಾ ।
ಮುದದಿ ಕೇಳ್ವುದು ಶಿವನ ಭಕ್ತರು ಮಿಗಿಲು ಹರಸುವುದು ॥ ೩೦ ॥

ಇಂತಿ ಪದ್ಯಗಳು ೧೯೯

**ಅಂತು ಸಂಧಿ ೨೪ ಕ್ಕಂ ಸಂಪೂರ್ಣಗಣನೆ – ೬೫೦೨ ಕ್ಕಂ ಮಂಗಳಮಹಾ**

**ಶ್ರೀ ಶ್ರೀ ಶ್ರೀ ಶ್ರೀ ಶ್ರೀ**



1-1 ಸರ್ವೇಶ (ಇ, ಎ, ಒ, ಖ, ಗ, ಚ.)

## ಇಪ್ಪತ್ತ್ರೈದನೆಯ ಸಂಧಿ

# ರೇಚಣ್ಣನ ಕಥೆ

**ವೃತ್ತ.**

ಶ್ರೀ ಗಿರಿಜೆಮನತೋಷ ಸರ್ವೇಶ ಶಂಕರ ಶ್ರೀ ಮಹೇಂದ್ರ ಶರ್ವ ।
ನಾಗವರಶಯ ನಂದಿವಾಹನ ಮಹಾನಗಚಾಪ ಸುಪ್ರತಾಪ ॥
ನಾಗರಿಪು ತುರಗೇಂದ್ರ ಚಂದ್ರ ಮುನಿಪಗ್ಗೆ ಸುಮೋಕ್ಷವಂ ಸದಾ ಸು ।
ಭೋಗವ ಕೊಡುವ ವೀರರುದ್ರ ಪೊರೆ ಸರ್ವರ ಚೆನ್ನಪರ್ವ ಸಂಗ * ॥ ೧ ॥

ವಚನ ॥ ಅತ್ತ ಚೆನ್ನಬಸವಾದಿಪ್ರಮಥರೆಲ್ಲ ಕೈಲಾಸಕ್ಕೆ ಪೋಗಲು, ಇತ್ತ ರೇಚಣ್ಣಗಳ ಕಥಾಪ್ರಸಂಗಮಂ ಪೇಳ್ವೆನದೆಂತೆನೆ.

**ಜಂಪೆ.**

ಗುರುಮೂರ್ತಿ ವರಚೆನ್ನ । ದಂಡೇಶ ಪಾದುಕೆಯ ।
ತರಕಳುಹೆ ರೇಚಣ್ಣ । ತರುಮರೆಯಲಡಗಿ ॥ ೧ ॥

ಸತ್ಯಶರಣರು ಎಲ್ಲ । ಹತ್ತಿ ತೊಟ್ಟಿಲ ತೂಗಿ ।
ಮತ್ತೆ ಶಿವನೆಡೆಗೈ [1] ದ [1] । ಅರ್ಥಿಯಂ ನೋಡಿ ॥ ೨ ॥

ಬಿಡದೋಡಿ ಪೋಗಿಯಾ । ಬಯಲಬಸವನಲಿರ್ದ ।
ಒಡೆಯನಾ ಪಾದುಕೆಯ । ಕಡುವೇಗ ತಂದು ॥ ೩ ॥

ತಂದು ರುದ್ರಮುನಿಯ । ಮುಂದೆ ಪಾದುಕೆಯಿರಿಸಿ ।
ವಂದಿಸುತ ಕರಮುಗಿದು । ಎಂದ ರೇಚಣ್ಣ ॥ ೪ ॥

ವರಮುನಿಯೆ ಕೇಳಿನ್ನ । ಗುರುಚೆನ್ನದಂಡೇಶ ।
ಕರೆಯದೆ ಎನ್ನನಿ । ಲ್ಲಿರಿಸಿಯೈದಿದರು ॥ ೫ ॥

ಸೃಷ್ಟಿಯೊಳಗವರೆನ್ನ । ಬಿಟ್ಟು ಪೋದರು ಗುರುವೆ ।
ಸಿಟ್ಟೇನೊ ನಾನರಿಯೆ । ದೃಷ್ಟಮೂರುತಿಯೆ ॥ ೬ ॥

ಧರೆಯೊಳಗೆ ಅವರೆನ್ನ । ಕರೆಯದುಳುಹಿಸಿ ಪೋದ ।
ತೆರನೇನೊ ನಾನರಿಯೆ । ಅರುಹೆನ್ನ ಗುರುವೆ ॥ ೭ ॥

ವಚನ ॥ ಇಂತು ರೇಚಿತಂದೆಗಳು ಎಂದ ಮಾತಿಗೆ ರುದ್ರಮುನಿದೇವರು ಏನೆನ್ನುತ್ತಿರ್ದರು.

---

* ಈ ವೃತ್ತ (ಇ, ಉ, ಗ, ಚ) ಪ್ರತಿಗಳಲ್ಲಿಲ್ಲ. 1-1 ದಿ (ಅ, ಬ)

**ಏಕತಾಳ.**

ರೇಚಣ್ಣ ಕೇಳಿನ್ನು । ಯೋಚನೆಯ ಮಾಡದೆ ।
ಸೂಚಿಪೆ ನಿನಗೊಂದು । ಯೋಚನೆಯನ್ನು ॥ ೧ ॥
ಮುಂ[1] ಚೆ[1] ಜಂಗಮಮೂರ್ತಿ । ಗಳಿಗೆಲ್ಲ ವಿಳ್ಯವ ।
ಹಂಚುವಲ್ಲಿ ನೀನು ಪ್ರ । ಪಂಚನಡೆಸಿದೆ ॥ ೨ ॥
ಶರಣರಿಗೆಲ್ಲ ಚೊಕ್ಕ । ಬಿಳಿಯೆಲೆಯಿತ್ತು ಒಬ್ಬ ।
ಶರಣಂಗೆ ಕರಿಯೆಲೆಯ । ನಿತ್ತ ಕಾರಣದಿ ॥ ೩ ॥
ಕರೆಯದೆ ನಿನ್ನನಿಲ್ಲಿ । ಇರಹೇಳಿ ಪೋದರು ।
ಕರಿಯೆಲೆ ಘಳಿಗೆ ಓಲೆ । ಬರೆದಿದೆ ನೋಡು * ॥ ೪ ॥
ಎಂದು ಇತ್ತರು ಬ[2] ರೆ[2] ದ । ಚಂದ್ರಿಕೆಯೋಲೆಯ ।
ನಿಂದು ಕರಯೆಲೆ ಘಳಿಗೆ । ಮುಂದೆ ತಾನಾಗ ॥ ೫ ॥
ಕರಿಯೆಲೆ ಘಳಿಗೆಯೋ । ಲೆಯ ನೋಡಿ ರೇಚಣ್ಣ ।
ಹರ ಹರಾ ಶಿವಾಯೆಂದು । ಮರುಗಿ ಇಂತೆಂದ ॥ ೬ ॥
ಗುರುವೆ ಕೇಳಿರಿ ಒಬ್ಬ । ಶರಣಂಗೆ ಕರಿಯೆಲೆಯ ।
ಅರಿಯದೆ ಕೊಟ್ಟದ್ದು । ಗುರುತುಂಟು ಸ್ವಾಮಿ ॥ ೭ ॥

ವಚನ ॥ ಸ್ವಾಮಿ ; ರುದ್ರಮುನಿಲಿಂಗವೆ ನಾನು ಮಾಡಿದ ಪ್ರಪಂಚವ ಕೇಳಿರಯ್ಯ ಮಹೇಶ್ವರರಿಗೆಲ್ಲ ಬಿಳಿಯೆಲೆವಿಳ್ಯವಿತ್ತು, ಒಬ್ಬಮೂರ್ತಿ ಕುರೂಪಿಯಾಗಿರಲು ಅವರಿಗೆ ಕರಿಯೆಲೆ ವಿಳ್ಯವಂ ಕೊಟ್ಟದ್ದು ಉಂಟು. ಇದೀಗ ಎನ್ನ ಪ್ರಪಂಚ, ಒಂದು ಕರಿಯೆಲೆ ಮಾತ್ರಕ್ಕೆ ಎನ್ನ ಕರೆಯದೆ ಮರ್ತ್ಯಲೋಕದಲ್ಲಿ ಬಿಟ್ಟುಪೋದರು. ಈ ಮರ್ತ್ಯದ ಮನುಜರ ಏನೆನ್ನಬಹುದು ಸ್ವಾಮಿ; ಎಂದು ರೇಚಣ್ಣಗಳು ಏನೆನ್ನುತಿರ್ದರು.

**ತ್ರಿವುಡೆ**

ಗುರುವೆ ಗತಿ ಎನುತಿಹರು ಕೆಲಬರು । ಗುರುವ ನಿಂದಿಸುತಿಹರು ಕೆಲಬರು ।
ಗುರುವಿನಂಘ್ರಿಯನರಿಯದಿರುತಿಹ– ಅಧಮರದು ಕೆಲರು ॥ ೧ ॥
ಇಷ್ಟಲಿಂಗವ ನಂಬಿ ಕೆಲರು ಪ್ರ । ತಿಷ್ಠಲಿಂಗವ ನಂಬಿ ಕೆಲಬರು ।
ಕಷ್ಟದೈವವ ನಂಬಿ ಪೂಜಿಪ– ಭ್ರಷ್ಟರದು ಕೆಲರು ॥ ೨ ॥
ಹರನ ಜಂಗಮಕೆರಗುವರು ಕೆಲ । ಹರಿಯದಾಸರಿಗೆರಗುವರು ಕೆಲರ್ ।
ಪರಿಪರಿಯ[3] ವಿಧ[3] ದಿಂದಲುಣಿಸುವ– ನರಕಿಜನ ಕೆಲರು ॥ ೩ ॥
ಲಿಂಗವಂಗದಿ ಹಿಂಗದಿರುತಿರ । ಲಿಂಗ ಜಂಗಮಕೆರಗಿ ಬದುಕದೆ
ಲಿಂಗವಿಲ್ಲದ ಮದ್ಯಪಾನಿಗೆ– ಹಿಂಗದೆರಗುವರು ॥ ೪ ॥

---

1-1 ದೆ (ಅ, ಎ, ಒ, ಬ) * ಈ ಪದ್ಯ (ಅ, ಉ, ದ, ಬ.)ಪ್ರತಿಗಳಲ್ಲಿಲ್ಲ.
2-2 ರ (ಅ, ಒ, ಖ, ಟ.) 3-3 ನೆವ (ಇ, ಉ, ಗ, ಚ.)

ನುಡಿವರತಿ ಬಾಯೊಳಗೆ ಬ್ರಹ್ಮವ | ನಡೆವರತಿ ಮ [1] ನದೊಳಗ [1] ಸತ್ಯವ |
ಮೃಡನ ಶರಣರ ಎಡೆಗೆ ನಡೆಸುವ – ರತಿ ಪ್ರಪಂಚವನು || ೫ ||
ಚಂದಚಂದದಿ ಹಣ್ಣು ಹೂವನು | ತಂದು ಕೊಡುವಂಥಧವು ಜಂಗಮು |
ತಂದೆ [2] ಬಾ ಎನ್ನೊಡೆಯ [2] ಎನುತಲಿ – ನಂಬಿ ಪೂಜಿಸರು || ೬ ||
ಪರಶಿವನ ವರರೂಪುಜಂಗಮು | ಹಿರಿದು ಮಾಸಿಯೆ ಹಸಿದು ಬಂದರೆ |
ತಿರುಕ ಎಲ್ಲಿಯವನೆಂದು ಮುಖವನು – ಉರುಹಿಕೊಳ್ಳುವರು || ೭ ||
ನಾಡಮಾತನು ಆಡಿ ಹಲುಬುವ | ಖೋಡಿಮನಸಿನ ಕುಹಕಜಂಗಮು |
ಚಾಡಿಚದುರಿನ ಚಪಳ ಚೇಷ್ಟ[3] ರೂ – ಖಾ [3] ಡಿ ಕೆಡುತಿಹರು || ೮ ||
ಹಾಲು ಹಣ್ಣನು ಹಲವು ಮಾತಿನ | [4] ಕೀಳು [4] ಜಂಗಮುಕೆಡೆಯ ಮಾಳ್ಪರು |
ಮೇಲು ಜಂಗಮುಕೆಡೆಯು ಸೊಪ್ಪಿನ – ಹಾಲು ಹಸಿಬಿಸಿಯು || ೯ ||
ನೀಡುವಲ್ಲಿ ಪ್ರಪಂಚ ಭಕ್ತಿಯ | ಮಾಡುವಲ್ಲಿ ಪ್ರಪಂಚ ಸುಳ್ಳಿನ |
ಖೋಡಿಮಾಡುವ ಭಕ್ತಿಯದು ತಾ – ರೂಢಿಗೇರುವುದೆ || ೧೦ ||
ಒಂದು ಎಲೆಯ ಪ್ರಪಂಚಿಗೋಸುಗ | ನಿಂದೆ ನಾ ಮರ್ತ್ಯದಲಿ ಲೋಕದಿ |
ನಿಂದ್ಯೆ ವಂದನೆ ಮಾಳ್ಪ ಮನುಜರಿ – ಗೆಂತಹುದೊ ಮುಕ್ತಿ || ೧೧ ||

## ಉರಿಲಿಂಗದೇವರ ವಚನ.

ಉಂಡ ಒಡೆಯರ ಕೈಯ್ಯಕೊಂಬ ಪ್ರಸಾದ ಕಾರಿದ ಕೂಳು. ಮಜ್ಜನವ ನೀಡದಂಥ ಸಣ್ಣ ಒಡೆಯರ ಕೈಯ್ಯಕೊಂಬ ಪ್ರಸಾದ ಸಂತೆಸೂಳೆಯರ ಎಂಜಲು. ಅಳಿಯಒಡೆಯರ ಕೈಯ್ಯಕೊಂಬ ಪ್ರಸಾದ ಅಮೇಧ್ಯ. ಮಕ್ಕಳ ಕೈಯ್ಯಕೊಂಬ ಪ್ರಸಾದ ಗೋಮಾಂಸ. ನಂಟನ ಕೈಯ್ಯಕೊಂಬ ಪ್ರಸಾದ ನರಮಾಂಸ. ತಮ್ಮನ ಕೈಯ್ಯಕೊಂಬ ಪ್ರಸಾದ ಸಿಂಗಿಕಾಳಕೂಟವಿಷ. ಅನಾಥರಲ್ಲಿ ವಂದಿಸಿ ನೀಡಿಸಿಕೊಂಬ ಪ್ರಸಾದ ಉರಿಲಿಂಗಪೆದ್ದಿಗಳರಸ ಒಲ್ಲನವ್ವ. || ೧ ||

ಗುರುವಿದ್ದಂತೆ ಪರರಿಗೆ ನೀಡಬಹುದೇ? ಗುರುವಿನಲ್ಲಿ ತೀರ್ಥಪ್ರಸಾದವಂ ಕೊಳ್ಳದೆ ಭಕ್ತಿ ಮುಕ್ತಿ ಗುರುವಂ ಬಿಟ್ಟು ಅನ್ಯಗುರುವಿಂಗೆ ನಡೆವನು ಭಕ್ತನಲ್ಲ. ಮನೆ ಯಾಕಳು ಉಪವಾಸವಿರುತ್ತಿರೆ ಪರ್ವತದ ಆಕಳಿಗೆ ಹುಲ್ಲು ಹೇರಿದಂತೆ, ಎಂಬ **ಪರವಾದಿಯೇ** ನೀಕೇಳು; ಗುರುವು ಶಿಷ್ಯಂಗೆ ಲಿಂಗವಕೊಟ್ಟು ತಾನು ವ್ರತಗೇಡಿ ಯಾಗಿ ಹೋಗುವಲ್ಲಿ ಪರರ ಪಾದೋದಕಪ್ರಸಾದದಿಂದ ಪವಿತ್ರನಾದಕಾರಣ ; ಪರರ ಕಂಡರೆ ತನ್ನಂತೆ ಕಾಣು ಎಂದು ಗುರು ಹೇಳಿದ ವಾಕ್ಯಮರೆದಿರಲ್ಲ. ಅಳಿಯಒಡೆಯರು ಮಗಳುಮುತ್ತೈದೆ, ಮನೆದೇವರಿಗೆ ಶರಣೆಂದರೆ ಸಾಲದೆ? ಎಂಬ ಅನಾಚಾರಿಗಳ ಮಾತು ಅದಂತಿರಲಿ, ಜಂಗಮವೇ ಪ್ರಾಣವೆಂಬ ಭಕ್ತರು ಲಿಂಗಜಂಗಮುದ ಕೈಯ್ಯ ಹೂವು, ಹಣ್ಣು, ಕಾಯಿ, ಪತ್ರೆ, ಹೋಗುವ, ಬರುವ ಊಳಿಗವ ಕೊಂಬಾತ ಭಕ್ತನಲ್ಲ.

---

1-1 ನದಲ್ಲ (ಉ, ಗ, ಚ.) 2-2 ನೀಬಾರಯ್ಯ (ಖ, ಗ, ಚ.) 3-3 ರುವ್ಪೋ (ಅ, ಞ, ಬ.) 4-4 ಪೋಲು (ಎ, ಒ, ಟ.)

ಅಲ್ಲಿ ಕೂಳಿನಿಚ್ಛೆಗೆ ಪೂಜೆಗೊಂಬಾತ ಜಂಗಮನಲ್ಲ; ಇವರಿಬ್ಬರು ನಾಯಕ ನರಕಕ್ಕೆ ಯೋಗ್ಯರಯ್ಯ, ಇವರಿಬ್ಬರ ಉರಿಲಿಂಗಪೆದ್ದಿಗಳರಸ ಒಲ್ಲನವ್ವ. || ೨ ||

ಎಂಬ ಸಾಕ್ಷಿಯಂ ತೋರಿ, ಕೇಳಿರಯ್ಯ ರುದ್ರಮುನಿಲಿಂಗನೇ: ಶಿವಭಕ್ತಿಯಂ ಮಾಡಿ ಶಿವನ ಒಲಿಸಿಕೊಂಬಂಥ ಸದ್ಭಕ್ತರು ಶಿವಲಾಂಛನವ ಧರಿಸಿದ ಜಂಗಮವ ಕಂಡರೆ, ರೂಪು ಕುರೂಪು ಡಂಭಾಚಾರವಂ ನೋಡದೆ ಶಿವನೆಂದು ನಂಬಬಲ್ಲರೆ ಆತನೇ ಶಿವಭಕ್ತ. ಅದಲ್ಲದೆ ಪ್ರಪಂಚದಿಂದ ನೋಡಿದನಾದರೆ, ಶ್ವಾನ ಸೂಕರನ ಗರ್ಭದಲ್ಲಿ ಪುಟ್ಟುವನೆಂಬುದಕ್ಕೆ ಸಾಕ್ಷಿ.

**ಗ್ರಂಥ** || ಭಸ್ಮಾಂಗಮಾಗತಂ ದೃಷ್ಟ್ವಾ | ಶಯನಂ ಚ ಪರಿತ್ಯಜೇತ್ |
ಕುಲೀನಂ ವಾ ಕುಲೀನಂ ವಾ | ಭೂತಿ ರುದ್ರಾಕ್ಷಧಾರಕಂ || ೧ ||

ದೃಷ್ಟ್ವಾಯೋ ಶಯನೇ ಶೇತೇ | ಶ್ವಾನಯೋನಿಷು ಜಾಯತೆ |
ಸದಾಚಾರೇನ ಸದ್ಭಕ್ತ | ಸ್ಸರ್ವ ಭಕ್ಷ್ಯಾದಿ ಭೋಜಕಃ || ೨ ||

ಸಮಾಚಾರಂ ವಿನಾಭುಂಕ್ತೇ | ಶ್ವಾನಜನ್ಮಸು ಜಾಯತೆ ||

ವಚನ || ಎಂದುದಾಗಿ ಜಂಗಮಕ್ಕೆ ಒಂದನಿಕ್ಕಿ ತಾನೊಂದನುಂಬುವ ಪಾಪಿಗೆ ಎಕ್ಕಲನರಕವೆಂದು ಶ್ರುತಿಯುಂಟು. ಸ್ವಾಮಿ ರುದ್ರಮುನಿಲಿಂಗವೇ! ಲೋಕದ ಪ್ರಪಂಚ ನೋಡೇನು ಎಂದರೆ ನಾನಾಪ್ರಕಾರವುಂಟು. ನಾನು ಹರಪೂಜೆ ಗುರುಸೇವೆ ಪರಮಜಂಗಮಭಕ್ತಿ ಶರಣಜನ ಮೆಚ್ಚ ಮಾಡಿದೆ, ಒಂದು ಕರಿಯೆಲೆಯ ಪ್ರಪಂಚಿಗಾಗಿ ಎನ್ನ ಭಕ್ತಿ ಬೆರಳು ಕಡಿಮೆ ಅಗಳ ದಾಂಟಿದಂತಾಯಿತು. ಎನ್ನೊಡೆಯ ಚೆನ್ನದಂಡೇಶ್ವರ ಕೊಟ್ಟಂಥ ಓಲೆಯ ನಿರೂಪ ಕ್ರಮವೆಂತಿರ್ದುದು.

**ದ್ವಿಪದಿ.**

ಶ್ರೀಮನ್ಮಹಾದೇವ ಶಿವತತ್ವ ಭಾವ |
ಶ್ರೀ[1] ಮತು[1] ಚೆನ್ನದಂಡೇಶ ಭವನಾಶ || ೧ ||
ಪ್ರೇಮದಿಂ ರೇಚಿತಂದೆಗೆ ಪೇಳ್ದ ವಿವರ |
ಭಾಳಾಕ್ಷಪ್ರಿಯ ಭವದೂರ ಶರಣರಿಗೆ || ೨ ||
ವಿಳ್ಯವಂ ಬಿಳಿಯೆಲೆಯನಿತ್ತು ಒಬ್ಬರಿಗೆ |
ಕಾಳುಕರಿಯೆಲೆಯಿತ್ತ ಕಾರಣದಿ ನಿನಗೆ || ೩ ||
ಪೇ[2] ಳದೆ[2] ನಾ ಪೋದೆ ಭಾಳಾಕ್ಷಪುರಿಗೆ |
ಮಾರಹರಪುರಿಯಲ್ಲಿ ಮಹಿಮರೆಲ್ಲರನು || ೪ ||
ವಿಚಾರಣೆಯ ಮಾಡಿ ವಿಂಗಡಿಪಲ್ಲಿ ನಿನ್ನ |
ಧಾರಿಣಿಗೆ ತಿರುಗಿ ಕಳುಹುವರು ಎಂತೆಂದು || ೫ ||

1-1 ಗುರು (ಅ, ಒ.) 2-2 ೪ (ಅ, ಬ.)

ಈಗ ಕರೆಯದೆ ನಾನು ಕೈಲಾಸಕ್ಕೈದೆ ।
ಒಂದೆಲೆ ಪ್ರಪಂಚವು ಒಡನೆ ನಿಲ್ಲಿಸಿತು ॥ ೬ ॥

**ಮುಂದರಿತುಕೊಳ್ಳಿ, ಮೋಕ್ಷವ ಪಡೆವರೆಲ್ಲ ।**
ಎಂದು ರೇಚಣ್ಣ ಕೇಳೊಂದು [1] ಯೋ [1] ಚನೆಯ ॥ ೭ ॥

ಮುಂದೆ ನಿನಗೊಂದು ಮುಕ್ತಿಯ ಮಾರ್ಗ ಪೇಳ್ವೆ ।
ಚಂದದಿಂದಲಿ ಮನಕೆ ತಂದುಕೊ ನೀನು ॥ ೮ ॥

ಇಂದು ಕಲ್ಯಾಣದಿಂ ತಂದ ದ್ರವ್ಯವನು ।
ಒಂದುಳಿಯದಂತೆಲ್ಲ ವಸ್ತು ಒಡವೆಯನು ॥ ೯ ॥

ಇಂದುಧರ ಶರಣರಿಗೆ ಇತ್ತು ಹರುಷದಲಿ ।
ಬಂದು ಉಳುವೆಯ ಮಹಾಮಂದಿರದೊಳಗೆ ॥ ೧೦ ॥

ಸಂಗಮೇಶ್ವರನ ಸನ್ನಿಧಿಯೊಳು ನೀನು ।
ಲಿಂಗಸಂಧಾನ ನಿಜ ಶಿವಸಮಾಧಿಯಲಿ ॥ ೧೧ ॥

ಹಿಂಗದೆಯೆ ಶಿವಶರಣರಂಘ್ರಿ ನೆನೆಯುತ್ತ ।
ಲಿಂಗವೇ ಗತಿಯೆಂದು ನೀನಿರಲು ಮುಂದೆ ॥ ೧೨ ॥

ಇಂದಿಗೇಳ್ನೂರು ಎಪ್ಪತ್ತು ವರುಷಕ್ಕೆ ।
ಬಂದೇವು ನಾವು ನೀ ಭಯಗೊಳ್ಳಬೇಡ ॥ ೧೩ ॥

ಬಂದು ಆನಂದಸಂವತ್ಸರಕೆ ನಿನ್ನ ।
ಹಿಂದಿಟ್ಟು ಕಲ್ಯಾಣಕಂದು ಪೋಗುವೆವು ॥ ೧೪ ॥

ಮುಂದೆ ಕೂಡಲಚೆನ್ನಸಂಗಸಾಕ್ಷಿಯಲಿ ।
ಹಿಂದಿಟ್ಟು ಪೋದೇವು ಸಂದೇಹಬೇಡ ॥ ೧೫ ॥

ಎಂದು ಓಲೆಯೊಳಿರ್ದ ಲಿಖಿತವಂ ನೋಡಿ ।
ನೊಂದು ತಾ ರೇಚಣ್ಣ ರುದ್ರಮುನಿಗುಲಿದ * ॥ ೧೬ ॥

ವಚನ ॥ ಎಂದು ಬರೆದಿರ್ದ ಓಲೆಯಂ ಓದಿಕೊಂಡು, ರೇಚಣ್ಣಗಳು ರುದ್ರಮುನಿದೇವರೊಡನೆ ಏನೆನ್ನುತಿರ್ದರು.

**ಜಂಪೆ.**

ಗುರುಚೆನ್ನದಂಡೇಶ । ಬರೆದೋಲೆ ರೇಚಣ್ಣ ।
ಹರುಷದಿಂದೋದಿ ಮು । ರುಗಿದನು ಮನದಲ್ಲಿ ॥ ೧ ॥

---

1-1 ಸೂ (ಇ, ಎ, ಒ, ಖ, ಗ, ಚ.) * ಈ ಪದ್ಯ (ಉ, ಗ, ಚ.) ಪ್ರತಿಗಳಲ್ಲಿ ಮಾತ್ರವಿದೆ.

ಗುರುವೆ ಕೇಳ್ರುದ್ರಮುನಿ । ದೊರೆಯೆ ಒಬ್ಬಯ್ಯನಿಗೆ ।
ಕರಿಯೆಲೆಯ ಕೊಟ್ಟದ್ದು । ಗುರುತುಂಟು ಸ್ವಾಮಿ ॥ ೨ ॥
ಇಷ್ಟುಮಾತ್ರಕೆ ಎನ್ನ । ಬಿಟ್ಟು ಹೋದರು ಸ್ವಾಮಿ ।
ಶ್ರೇಷ್ಠಗುರು ದಯವ ನೀ । ನಿಟ್ಟೆನ್ನ ಸಲಹು ॥ ೩ ॥
ಹೆದರದಿರು ರೇಚಣ್ಣ । ಮದನಹರ ಕೃಪೆಯುಂಟು ।
ಹೃದಯದೊಳಗೆಳ್ಳನಿತು । ಬೆದರದಿರು ನೀನು ॥ ೪ ॥
ಸೃಷ್ಟಿಯೊಳು ಚೆನ್ನಣ್ಣ । ಬಿಟ್ಟು ಪೋದಾವಸ್ತು ।
ಇಷ್ಟು ಶಿವಶರಣರಿಗೆ । ಕೊಟ್ಟು ಎಡೆಮಾಡು ॥ ೫ ॥

ವಚನ ॥ ಎಂದು ರುದ್ರಮುನಿದೇವರು ರೇಚಣ್ಣಗಳು ಚೆನ್ನಮಲ್ಲಿಕಾರ್ಜುನದೇವರು ಮುಂತಾಗಿ ಅಲ್ಲಿರ್ದಂಥ ಗಣಂಗಳೆಲ್ಲರು ಕುಳಿತು ಪ್ರಸಂಗಿಸುವ ಸಮಯದಲ್ಲಿ, ಧರೆಯೊಳಗಿರ್ದಂಥ ಭಕ್ತಮಾಹೇಶ್ವರರು ಚರಮೂರ್ತಿಗಳು,ಚೆನ್ನಬಸವಣ್ಣ ಮುಂತಾದ ಪ್ರಮಥರೆಲ್ಲ ಕೈಲಾಸಕ್ಕೆ ಪೋಗುವ ಉತ್ಸಾಹವಂ ನೋಡುವೆವೆಂದು ಬಂದರದೆಂತೆನೆ.

**ಭಾಮಿನೀ ಷಟ್ಪದಿ.**

ನಿಡುಜಡೆಯ ಜೋಲ್ಮುಡಿಯ ಮಕುಟದ ।
ಪಿಡಿದ ದಂಡವು ಕಂಥೆ ಕಾವಿಯ ।
ಉಡಿಗೆ ಕೊರಳಲಿ ಜಡಿವ ರುದ್ರಾಕ್ಷಿಗಳ ಭರಣಗಳಿಂ ॥
ಮೃಡನ ರೂಪಿನೊಲಿಟ್ಟು ಭಸಿತವ ।
ನುಡಿವ ಕಹಳೆಯ ಶಂಖಧ್ವನಿಗಳ ।
ಗಡಣದಿಂದಲಿ ತೀವಿಲಕ್ಷವು ಒಡನೆ ಬಂದಿಳಿಯೆ ॥ ॥ ೧ ॥
ಉಟ್ಟು ಚಲ್ಲಣ ದಟ್ಟಿ ಕಾಶೆಯ ।
ಇಟ್ಟು ರೇಖೆಯ ಭಸಿತ ಗಂಧವ ।
ತೊಟ್ಟು ಕನಕದಮಾಲೆ ಕಂಠಾಭರಣ ಭೂಷಣದಿ ॥
[1] ಇಟ್ಟ [1] ಬಾಕು ಕಠಾರಿ ಚಾಣದಿ ।
ಸೃಷ್ಟಿಯೊಳು ಶಿವದೂಷಕರ ಎದೆ ।
ಮೆಟ್ಟಿ ನಡೆವತಿ ವೀರಘನಲಿಂಗಿಗಳು ಅದು ಲಕ್ಷ ॥ ೨ ॥
ಬೋಳು ಮಂಡೆಯು ಬೊದಡೆ ಪುಸ್ತಕ ।
ತೋಳಿನಲ್ಲಾಧಾರ ಕಾವಿಯ ।
ಹೋಳು ಪಾವಡವಡ್ಡಜಾಡಿಯ ಅಧಿಕ ಪಟ್ಟಸ್ಥಳದ ॥
ಭಾಳಲೋಚನಬ್ರಹ್ಮರೆಂಬೊಲು ।
ಹೇಳಲಳವೇ ಶಿವ ಮಹೇಶ್ವರ ।
ಕಾಲಹರ ಸುವಿರಕ್ತಮೂರ್ತಿಗಳೊದಗಿತದು ಲಕ್ಷ ॥ ೩ ॥

1-1 ಕತ್ತಿ (ಅ, ಒ, ಗ, ಚ, ಟ, ಡ, ಬ.) ;ಕಟಿ (ಇ, ಎ, ಖ, ಜ.)

ಉಳುವೆಮನೆಯಲಿ ಸಕಲಪ್ರಮಥರು ।
ಅಳಿಯಬಸವನ ಒಂದಿಲೆಲ್ಲರು ।
ಕಳಿಧರನ ಕೈಲಾಸಕೈದುವ ಕಣ್ಣ ಹಬ್ಬವನು ॥
ತಳುವದಲಿ ನೋಡೆಮ್ಮ ಭವಗಳ ।
ಕಳೆವೆವೆಂದೆಂಬಿಚ್ಛೆಯಲಿ ಮಿಗಿ ।
ಲಿಳೆಯ ಭಕ್ತರು ಬಂದರವರಿಷ್ಟೆಂದು ಹೇಳುವೆನು ॥ ೪ ॥

ಧರೆಯ ಎಣ್ದೆಸೆ ಬಂದು ನೋಡಲು ।
ಹರನ ಶರಣರು ಮುಂಚಿ ಪೋಗಲು ।
ಮರುಗಿ ಶ್ರೀ ರುದ್ರಮುನಿಯ ಚರಣಕೆ ಎರಗಿದರು ಎಲ್ಲ ॥
ಹರುಷಸತ್ಕರದಿ ರುದ್ರಮುನಿ ।
ವರನು ಬಂದಾ ಭಕ್ತ ಮಹಿಮರಿ ।
ಗಿರದೆ [1] ಗಣ [1] ಪರ್ವಕ್ಕೆ ಯತ್ನವ ಮಾಡು ರೇಚಣ್ಣ ॥ ೫ ॥

ಎಂದ ಗುರುರುದ್ರಮುನಿ ವಾಕ್ಯಕೆ ।
ಅಂದು ಹರುಷದಿ ರೇಚಿತಂದೆಯು ।
ಮುಂದೆ ಕರೆಸಿದ ಚೊಕ್ಕಸದ ಭಂಡಾ [2] ರ [2] ಕರಣಿಕರ ॥
ತಂದರಾಕ್ಷಣ ಅಕ್ಕಿ ಕಣಿಕಗ ।
ಳಿಂದ ಘೃತತೈಲಾದಿ ಶಾಕವ ।
ತಂದು ಸುರಿದರು ರುದ್ರಮುನಿಯ ಮುಂದೆ ಹರುಷದಲಿ ॥ ೬ ॥

ಕರೆಸಿದರು ಸದ್ಭಕ್ತಸತಿಯರ ।
ನೆರವಿ ಸಂದಣಿಸಿತ್ತದಾಕ್ಷಣ ।
ಪರಿಚರತ್ವದ ಸರಸಭಂಡಾರಿಗಳು ಒದಗಿದರು ॥
ಹೊರಿಸಿದರು ಸಕಲಾದಿ ಶಾಕವ ।
ಪರಿಪರಿಯ ಸಾಮಗ್ರಿಯೆಲ್ಲವ ।
ತರಿಸಿದರು ಸುರಿಸಿದರು ತಮ್ಮಯ ಒಡೆಯನಾ ಮುಂದೆ ॥ ೭ ॥

ಅಕ್ಕಿ ಕಣಿಕವು ತುಪ್ಪ ಸಕ್ಕರೆ ।
ಚೊಕ್ಕಕಡಲೆಯು ಉದ್ದು ಹೆಸರನು ।
ಮಿಕ್ಕ ನಾನಾಪರಿಯ ಸೌರಣೆ ಲೆಕ್ಕವಿಲ್ಲದಲೆ ॥
ಚೊಕ್ಕಬೆಳ್ಳಿಯ ಭಾಂಡ ಭಾಜನ ।
ಇಕ್ಕಿ ತಪ್ಪಲೆ ಬಿಂದಿಗೆಗಳಿಂ ।
ದಿಕ್ಕು ದಿಕ್ಕಿಲಿ ಹೂಡಿ ಅಡಿಗೆಯ ಮಾಡತೊಡಗಿದರು ॥ ೮ ॥

1-1 ಘನ (ಅ, ಉ, ಒ, ಟ, ಡ, ಬ.) 2-2 ರಿ (ಒ, ಖ, ಗ, ಜ.)

ಕಡುಬು ಕಜ್ಜಾಯಗಳು ಹೋಳಿಗೆ ।
ವಡೆಯು ಅತಿರಸ ದೋಸೆ ಗಾರಿಗೆ ।
ಮಡಿಕೆ ಹೂರಿಗೆ ಚಕ್ಲಿ ಹಪ್ಪಳ ಸಂಡಿಗೆಯು ಭಕ್ಷ್ಯ ॥
ಕೊಡ ಕೊಡದಿ ಪರಮಾನ್ನ ಪಾಯಸ ।
ಅಡಿಗೆಗಳನಿಳುಹಿದರು ಬೇಗದಿ ।
ಬಿಡದೆ ಪರಿಪರಿ ಶಾಕ ಪಾಕಾದಿಗಳನಿಳುಹಿದರು ॥ ೯ ॥

ಅಡಿಗೆಯಾಯಿತು ಪ್ರಮಥರೆಲ್ಲಕೆ ।
ಕೊಡಿರಿ ಅರ್ಘ್ಯ ಪಾದ್ಯವವರಿಗೆ ।
ತಡವ ಮಾಡದೆ ರತ್ನಗದ್ದುಗೆ ರಚಿಸಿರೆಂದೆನಲು ॥
ಒಡನೆ ಪನ್ನೀರಿಂದ ಶರಣರ ।
ಅಡಿದೊಳೆದು ಪಾದುಕೆಯನೀಡಲು ।
ಅಡಿಯಿಡುತ ಬಂದೇರಿ ಕುಳಿತರು ರತ್ನಗದ್ದುಗೆಯ ॥ ೧೦ ॥

ಅರ್ಘ್ಯ ಪಾದ್ಯವ ಕೊಂಡು ರತ್ನದ ।
ಮಿಗಿಲು ಗದ್ದುಗೆ ಏರಿ ಹರುಷದಿ ।
ಭರ್ಗನರ್ಚನೆಗೈದು ಅರ್ಪಿತಕಾಗಿ ನಾಗಿದರು ॥
ವರ್ಗವರ್ಗದ ಚರ ಚರಂತಿಗ ।
ಳಗ್ಗಳಿ ಮಹಂತ ಮಕುಟವರ್ಧನರು ।
ಶೀಘ್ರದಿಂ ವರಸೆಯಲಿ ಕುಳಿತರು ವೆಗ್ಗಳದಿ ಪಜ್ತಿ ॥ ೧೧ ॥

ಜಾಲ ಜಂಬೂ ನೇರಿಲಪರ್ಣದಿ ।
ಆಲವಂಬುಜವಡಕೆ ಪರ್ಣದಿ ।
ಪಲಾಶ ಪಾದರಿ ಪಲವುಬಗೆಯಾ ಕದಳಿಯೆಲೆಗಳೊಳು ॥
ಹಾಲು ಘೃತ ಪರಮಾನ್ನ [1] ಷಡ್ರ [1] ಸ ।
ಲೀಲೆಯಿಂದಲಿ ತಂದು ಆಕ್ಷಣ ।
ಬಾಲೆಯರು ಎಡೆಮಾಡೆ ಹಿರಿಯರು ಭರದಿ ಸಲಿಸಿದರು ॥ ೧೨ ॥

ವೀಳ್ಯವನು ಕೈಕೊಂಡು ಕುಳಿತಿಹ ।
ವೇಳೆಯಲಿ ರೇಚಣ್ಣ ಬೇಗದಿ ।
ಬಾಳ ಜವಳಿಯು ಭಾಗ್ಯ ಹೊನ್ನಿನಜಾಳಿಗೆಯು ಸಹಿತ ॥
ಹೇಳಲಳವೇ ಚಿನಿಚಿನಾಂಬರ ।
ಮೇಲು ನವರತ್ನಾದಿ ಭೂಷಣ ।
ಕಾಲಹರಶರಣರಿಗೆ ಕಾಣಿಕೆಯಿತ್ತ ಹರುಷದಲಿ ॥ ೧೩ ॥

---

1-1 ಪಾಯ (ಅ, ಉ, ಬ.)

ಚಿನ್ನ ಬೆಳ್ಳಿಯ ರೂಪು ತಾಮ್ರದ ।
ಹೊನ್ನಕೊಡ ಕೊಪ್ಪರಿಗೆ ಬೆಳ್ಳಿಯ ।
ಹೊನ್ನಹರಿವಾಣಗಳ ಗಿಂಡಿಯ ಚಂಬು ಚರುವಿಗೆಯ ॥
ರನ್ನ ಚಿನ್ನದ ರತ್ನಭರಣಗ ।
ಳನ್ನು ರುದ್ರಮುನಿವರಮುಖದಿಂ ।
ದಿನ್ನು ಅಣುಮಾತ್ರುಳಿಯದಿತ್ತನು ಶರಣಸಂಕುಲಕೆ ॥ ೧೪ ॥

ಶರಣರೆಲ್ಲರು ಸಕಲವಸ್ತುವ ।
ಹರುಷದಿಂ ಕೈಕೊಳ್ಳುತೀಶನ ।
ವರಕುಮಾರಕ ಚೆನ್ನಬಸವನ ಹರಸಿದರು ಎಲ್ಲ ॥
ಪರಮಋಷಿ ಶ್ರೀ ರುದ್ರಮುನಿಗುರು ।
ವರಗೆ ಚೆನ್ನಮಲ್ಲಿಕಾರ್ಜುನಗೆ ।
ಎರಗಿ ಕಳುಹಿಸಿಕೊಂಡು ಹೊರಟರು ಶರಣಜನರೆಲ್ಲ ॥ ೧೫ ॥

ಶರಣಜನ ತಮತಮ್ಮಭೀಷ್ಟದ ।
ಹರುಷಹರವರಿದೇಶಕ್ಕೈದಲು ।
ಪರಮಜಂಗಮ ಸಲಿಸಿ ಬಿಟ್ಟಾ ಪತ್ರಭಾಜನವ ॥
ಉರುಹಿ ದಗ್ಧವ ಮಾಡಿ ಭಸ್ಮವ ।
ಧರೆಯೊಳಗೆ ಇಂಬಿಟ್ಟು ಚಿಂತಾ ।
ತುರದಿ ಬಂದೆರಗಿದನು ಶ್ರೀ ರುದ್ರಮುನಿಯಡಿಗಳಿಗೆ ॥ ೧೬ ॥

ರುದ್ರಮುನಿ ಚೆನ್ನಮಲ್ಲಿಕಾರ್ಜುನ ।
ಸದ್ಯಪರಶಿವತತ್ವರಂಘ್ರಿಗೆ ।
ಬಿದ್ದು ಬಿನ್ನಹಮಾಡಿದನು ರೇಚಣ್ಣ ಭಕ್ತಿಯಲಿ ॥
ಇರ್ದ ವಸ್ತುವನೆಲ್ಲ ಮದನನ ।
ಮರ್ದನನ ಶರಣರಿಗೆ ಸಲಿಸಿದೆ ।
ಬುದ್ಧಿಗಲಿಸಿನ್ನೆನಗೆ ಮುಂದಣ ಸದ್ಗತಿಗೆ ಸ್ವಾಮಿ ॥ ೧೭ ॥

ಹಿಂದೆ ಮಾಡಿದ ದೋಷವದು ಬಂ ।
ದಿಂದು [illegible]ವಿಸಿತ್ತು ಎನ್ನನು ।
ಮುಂ[illegible]ನ್ನೇನು ಸದ್ಗತಿ ತಂದೆ ಮುನಿರಾಯ ॥
ಮುಂ[illegible]ಪದೆ ಶಿವನ ಶರಣರಿ ।
ಗೊಂದು [illegible]ಯೆಲೆ ವೀಳ್ಯವಿತ್ತೆನು ।
ನಿಂದಿರಿಸಿತದು ಎನ್ನ ಮೋಕ್ಷಕೆ ಹಿಂದು ಮಾಡಿತಲಾ ॥ ೧೮ ॥

ಆರ ಜಪತಪಗಳನು ಅಳಿದೆನೊ ।
ಆರ ಧರ್ಮಕೆ ಅಡ್ಡಲಾದೆನೊ ।
ಆರ ಬದುಕಿಗೆ ಕ್ರೂರಚಾಡಿಯನಾಡಿ ಕೆಡಿಸಿದೆನೊ ॥
ಮಾರಮರ್ದನಶರಣರರಿಯದೆ ।
ಮಾಡಿದೆನೊ ಅಪನಿಂದೆ ದೋಷವ ।
ಧಾರಿಣಿಯ ಶಿವಶರಣರಂಘ್ರಿಗೆ ದೂರವಾದೆನಲಾ ॥ ೧೯ ॥

ಪರಮಗುರುವರ ಚೆನ್ನಬಸವನು ।
ಕರೆಯದೆನ್ನಿಲ್ಲಿರಿಸಿ ಪೋದನು ।
ಧರೆಗೆ ಪಾತಕನೆಂದು ಶರಣರು ಜರಿಯರೇ ಎನ್ನ ॥
ಹರಣ ದೊಡೆಯನು ಚೆನ್ನ ಬಸವನು ।
ಕರೆಯದಲೆ ತಾ ಪೋದಬಳಿಕೀ ।
[1] ಹರಣ [2] ವೇತಕೆ ಗುರುವೆ ನಿನ್ನಯ ಚರಣಕೊ [1] ಪ್ಪಿಸಿಕೊ ॥ ೨೦ ॥

ಸಾಕಿದೆನ್ನಯ ಜನ್ಮ ಶರಣರು ।
ನೀಕರಿಸಿ ಬಿಟ್ಟೆನ್ನು ಪೋದರು ।
ಸಾಕು ನನಗೀ ಲೋಕದಾಟವು ಸಾಕೆನಗೆ ಗುರುವೆ ॥
ಸಾಕು ಅಪಕೀರ್ತಿಯಲಿ ಕಾಯವ ।
ನೇಕಕಾಲವು ಇದ್ದರೇನ್ಸೈ ।
ಸಾಕು ನಿನ್ನಡಿಯೊಳಗೆ ಎನ್ನನು ಐಕ್ಯವನು ಮಾಡೈ ॥ ೨೧ ॥

ಮಂದಮತಿಯಲಿ ನಾನು ಮಾಡಿದ ।
ದೊಂದು ಅಪರಾಧಕ್ಕೆ ಒಡೆಯನು ।
ಕೊಂದು ಬುದ್ಧಿಯ ಕಲಿಸಿದರೆ ಬೇಡೆಂದೆನೇ ನಾನು ॥
ತಂದೆ ಶ್ರೀ ಗುರುಚೆನ್ನಬಸವನಿ ।
ದೊಂದ ಮನಸಿಗೆ ತಂದು ಎನ್ನನು ।
ಹಿಂದುಗಳೆವುದನರಿಯದಾದೆನು ಚಂದ್ರಮೌಳೀಶ ॥ ೨೨ ॥

ಅಯ್ಯ ಕೇಳ್ಶ್ರೀ ರುದ್ರಮುನಿ ಜಗ ।
ದಯ್ಯನೆನಿಸುವ ಚೆನ್ನಬಸವನ ।
ಕೈಯ್ಯ ಕೆಳಗಿನ ಸೇವಕನು ನಾ ಕಾಣ [3] ದಾ [3] ದೆನಲಾ ॥
ಕೈಯೊಳಗೆ ದೀವಟಿಗೆ ಇರುತಿರೆ ।
ಅಯ್ಯ ಕಾಣದೆ ಕಮರಿಯೊಳು ಬೀ ।
ಳ್ದಯ್ಯಲಿಡುತಿಹ ಹುಚ್ಚುಮನುಜನ ಮತಿಗೆ ಈಡಾದೆ ॥ ೨೩ ॥

---

1-1 ಬಿಡದೆ ನಿಮ್ಮಯ ಚರಣಕಮಲಕೆ ಈತನೊ (ಅ, ಬ.) 2 ಶರಿರ (ಇ.)
3-3 ದೋ (ಒ, ಖ, ಗ, ಚ, ಜ.)

ರುದ್ರಮುನಿ ಚೆನ್ನಮಲ್ಲಿಕಾರ್ಜುನ ।
ಸಿದ್ಧರಾಮಗೆ ಸಕಲ ಪ್ರಮಥರಿ ।
ಗಿದ್ದ ಶರಣರಿಗೀಗ ಸಾಷ್ಟಾಂಗದ ನಮಸ್ಕಾರ ॥
ಬುದ್ಧಿಯರಿಯದೆ ನಾನು ಮಾಡಿದೆ ।
ಕ್ಷುದ್ರತನವನು ನಿಮ್ಮ ಚರಣವ ।
ಹೊದ್ದಿದೆನ್ನನು ರಕ್ಷಿಸೆನುತೆಲ್ಲರಿಗೆ ಸ್ಟೈಗೆಡೆದ ॥ ೨೪ ॥

ಮರುಗದಿರು ರೇಚಣ್ಣ ನಿನ್ನಯ ।
ಉರಕೆ ಸಂಚಲ ಬೇಡವೆನುತಲಿ ।
ಶಿರವ ಪಿಡಿದೆತ್ತಿದನು ಕರುಣದಿ ರುದ್ರಮುನಿಸ್ವಾಮಿ ॥
ಶರಣರೆಲ್ಲರು ಬರುವ ತನಕವು ।
ಇರುತಿಹುದು ಶಿವಯೋಗತತ್ವದ ।
ವರಸಮಾಧಿಯಲಿದಕೆ ಯೋಚನೆ ಮಾಡಬೇಡೆಂದ ॥ ೨೫ ॥

ಕರುಣನಿಧಿ ಚೆನ್ನಣ್ಣ ದಯದಲಿ ।
ಬರೆದ ಲಿಪಿಯನು ನೋಡಲಿಲ್ಲವೆ ।
ಸ್ಥಿರದಿ ಉಳುವೆಯ ಸಂಗಮೇಶನ ಹೊರೆಯೊಳಿಹುನೆಂದು ॥
ಇರುವುದಿಲ್ಲವೆ ನಾವು ಶರಣರು ।
ಪರಮ ಗುರುವರ ಸಿದ್ಧರಾಮನು ।
ಧರೆಯೊಳಿರುತಿಹ ಶರಣರೆಲ್ಲರು ಗಿರಿ ಗುಹೆಗಳೊಳಗೆ ॥ ೨೬ ॥

ಪರಶಿವನ ಸಂಧಾನದಲಿ ನಿಜ ।
ಕುರುಹು ಮಾಜಿಯನೇಕ [1]ಶರಣ[4] ರು ।
ಗಿರಿಬಿಲದಿ ವರಸಿದ್ಧರೆ[2] ನಿಸಿ[2] ರುತಿಹರು ನೋಡೆಂದು ॥
ಧರೆಯು ಕೈಲಾಸಂಗಳೆಂಬಾ ।
ಪರಿಗಳುಂಟೇ ಶಿವಮಹಾತ್ಮರಿ ।
ಗಿರುವ ತಳ ಭೂಲೋಕ ತಮ್ಮಯ ಶರೀರ ಶಿವಲೋಕ ॥ ೨೭ ॥

ಪರಮ ವರಗುರು ಚೆನ್ನಬಸವೇ ।
ಶ್ವರನು ಶರಣರು ಮರಳಿ ಮರ್ತ್ಯಕೆ ।
ತಿರುಗಿ ಬಂದರೆ ನಾವು ನೀವುಗಳೆಲ್ಲರವರೊಡನೆ ॥
ಹರುಷದಿಂ ಕಲ್ಯಾಣಪಟ್ಟಣ ।
ಕಿರದೆ ಪೋಗುವೆವಿದಕೆ ಸಂಶಯ ।
ತರಲಿಬೇಡೆಂದೆನುತ ತಲೆದಡಹಿದರು ಸತ್ವರಿಸಿ ॥ ೨೮ ॥

---

1-1 ಮಹಿಮ (ಒ, ಖ, ಗ, ಚ, ಜ, ಟ.) 2-2 ತಾವಿ (ಅ, ಬ.)

ಪರಮುನಿಯ ಕರುಣದಲಿ ಜ್ಞಾನದ ।
ಕುರುಹು ತಲೆದೋರಿದುದು ಆಕ್ಷಣ ।
ಧರೆಯು ಪಾತಾಳಾದಿ ಸ್ವರ್ಗವು ಸರಿಸ ಕಾಣಿಸಿತು ॥
ಹರ[1] ನ[1] ಕೈಲಾಸಾದಿ ಪ್ರಮಥರ ।
ಸುರರ ಸಚರಾಚರ ಸಮಸ್ತವ ।
ಶರಿರಜ್ಞಾನಜ್ಯೋತಿಯಲಿ ನೋಡಿದನು ರೇಚಣ್ಣ ॥ ೨೯ ॥

ಕಂಡನಾ ರೇಚಣ್ಣ ಸಕಲಾ ।
ಖಂಡ ಬ್ರಹ್ಮಾಂಡಗಳ ನಿರ್ಣಯ ।
ಕಂಡ ಮನದಲಿ ಭೂತ ಭವಿಷ್ಯದ್ವರ್ತಮಾನವನು ॥
ಕಂಡ ಜ್ಞಾನದಿ ಖಂಡಪರಶುವ ।
ಕಂಡು ಮನ ಮುಂಕೊಂಡು ಹರುಷದಿ ।
ಮಂಡೆತೂಗಿದ ಮತ್ತೆ ನಮಿಸಿದ ರುದ್ರಮುನಿಯಡಿಗೆ ॥ ೩೦ ॥

ಗುರುವೆ ಮುಂದಣ ಕಾರ್ಯಕಥನವ ।
ನರಿಯಬಾರದು ಕಾಲಸೂಚನೆ ।
ಧರೆಯೊಳಗೆ ಕಲ್ಯಾಣದ್ಪೈಶ್ವರಿ ಹ[2] ರಿ[2] ದು ಹೋಯಿತಲಾ ॥
ಧರೆಯೊಳಿಹ ಶಿವಶರಣರೆಲ್ಲರು ।
ಗಿರಿಯು ನೆಲಬಿಲ ಜಪಸಮಾಧಿಯೊ ।
ಳಿರುವ ಇರವನು ನರರು ತಿಳಿಯದ ಪರಿಯದಾಯ್ತಲ್ಲ ॥ ೩೧ ॥

ಮುಂಪೆ ಕೇಳ್ವನ್ಮೊಡೆಯ ಚೆನ್ನಬಸ ।
ವೇಂದ್ರರಾಜನು ಸಕಲ ಪ್ರಮಥರು ।
ಬಂದು ಮರ್ತ್ಯಕೆ ಉಳುವೆಮನೆಯಲಿ ನಿಂದ ಕಾಲಕ್ಕೆ ॥
ಚಂದದಿಂ ನಾವೆಲ್ಲ ಹೊರಟರೆ ।
ಅಂದು ಚೆನ್ನಣ್ಣಂಗೆ ವಂದಿಸಿ ।
ಮುಂದೆ ಕಲ್ಯಾಣಕ್ಕೆ ಪೋದಪೆವೆಂದ ರೇಚಣ್ಣ ॥ ೩೨ ॥

ಧರೆಗೆ ಚೆನ್ನದಂಡಾಧಿಪತಿ ತಾಂ ।
ಬರುವ ವೇಳೆಗೆ ಕಾಲಸೂಚನೆ ।
ಕುರುಹುಗಳು ತೋರುವವು ಶರಣರು ಅರಿತುಕೊಂಡಿಹುದು ॥
ಧರೆಯು ನಡುಗಲುಶರಧಿ ಬತ್ತಲು ।
ಗಿರಿಗಳೊಡೆದಬ್ಬರಿಸಿ ಗುಂಡುಗ ।
ಳುರುಳೆ ಧಾತ್ರಿಗೆ ಸುರಿಯೆ ಕಲ್ಮಳೆಗರೆಯೆ ಕೆಂಡಗಳು ॥ ೩೩ ॥

---

1-1 ನು (ಇ, ಖ, ಗ, ಚ, ಜ, ಟ.) 2-2 ರ (ಅ, ಖ, ಬ.)

ಹಗಲು ಕತ್ತಲೆ ಮುಗಿಲು ಗರ್ಜನೆ ।
ಜಗಕೆ ಸೂರ್ಯರು ತೋರಲಿಬ್ಬರು ।
ಜಗಕೆ ಜಿಗಿಬಿಗಿ ತು[1] ರುಕರ[1] ಟ್ಟುಳಿ ಹೊಗಲು ದಕ್ಷಿಣದಿ ॥
ನಾಗಪತಿ ನರಪತಿಗಳೆಲ್ಲರು ।
ಹೋಗಿ ತುರುಕರಿಗಾಗಿ ಕಡೆಯಲಿ ।
ಬೇಗ ತುರುಕರು ಹಂಪೆಯೊಳಗಸು ನೀಗುವದೆ ಸಾಕ್ಷಿ ॥ ೩೪ ॥

ಹರಮತವು ಕಿರಿದಾಗಿ ಲೋಕದಿ ।
ಹರಿಮತವು ಪಿರಿದಾಗಿ ಜಗದಲಿ ।
ಗುರುವು ಶಿಷ್ಯರ ವರಕ ತರಕವು ಪುರುಷ ಸತಿಮಥನ ॥
ಹಿರಿದು ಕಿರಿದೆಂಬುಭಯ ಧರ್ಮವ ।
ನರಿಯದಲೆ ಜಗವೆಲ್ಲ ಪಾಪದಿ ।
ಹೊರಳಿ ನರಕದಿ ಉರುಳಿ ದುಃಖದಿ ಮರುಗುವುದೆ ಸಾಕ್ಷಿ ॥ ೩೫ ॥

ಕಲ್ಲಕೋಳಿಯು ಕೂಗೆ ದಕ್ಷಿಣ ।
ಕಲ್ಲನಂದಿಯು ಕಲೆಯಲೀಶನ ।
ಕಲ್ಲುಬೋದಿಗೆಯಲ್ಲಿ ಇರುತಿಹ ಕಲ್ಲಚೇಳುನುದು ॥
ನಿಲ್ಲದಲೆ ಬಯಲಾಗೆ ಶರಣರು ।
ಎಲ್ಲ ಬರುವರು ಮರ್ತ್ಯಲೋಕಕೆ ।
ಅಲ್ಲಿ ಕಲ್ಯಾಣದಲಿ ಪಟ್ಟವು ವೀರಭೋಜನಿಗೆ ॥ ೩೬ ॥

ಪೊಡವಿಯೊಳು ಬಸವಾದಿ ಪ್ರಮಥರ ।
ಅಡಿಯ ಕಾಣುತ ಶರಣರೆಲ್ಲರು ।
ನಡೆ ನುಡಿಯು ಕಾಯಕವನೊಂದೇ ದೃಢಮನದಿ ಮಾಡಿ ॥
ಬಿಡದೆ ವರಗುರು ಲಿಂಗ ಜಂಗಮ ।
ದಡಿಯ ಪೂಜಿಸಿ ವಂಚನಿಲ್ಲದೆ ।
ನಡೆವ[2] ಭಕ್ತ[2] ರು ನಮ್ಮ ಕಾಣ್ಬರು ಮೃಡನ ಕರುಣದಲಿ ॥ ೩೭ ॥

ಹರನ ಭಕ್ತರಿಗಿಕ್ಕಿ ಲೆಕ್ಕವ ।
ಪರಿಕಿಸುವ ಪಾತಕರು ಕೆಲಬರು ।
ವರುಷ ತಿಂಗಳು ಪಕ್ಷ ದಿನಚರಿ ಬರೆದುಲೆಕ್ಕವನು ॥
ವರುಷಕಿಷ್ಟಾಯಿತ್ತು ಹೇಳಿಲೆ ।
ತರುವ ಸೈಧನವೆಷ್ಟು ಎನ್ನುತ ।
ಕರುಬುತಿಹ ಪಾತಕರು ಕಾಂಬರೆ ಹರಶರಣರಡಿಯ ॥ ೩೮ ॥

1-1 ರಗದ (ಅ, ಉ, ಎ, ಒ, ಖ, ಟ, ಡ, ದ, ಬ.) 2-2 ಭೃತ್ಯ (ಅ, ಡ, ಬ.)

ಸತಿಸುತರು ಬಾಂಧವರಿಗೋಸುಗ |
ಅತಿಹಿತದಲಡಿಗೆಯನು ಮಾಳ್ಪರು |
ಶಿತಿಗಳನ ಪಡಿರೂಪು ಜಂಗಮು ಹಸಿದು ಗೃಹಕೆಯ್ದೆ ||
ಹಿತದ ಪಾಕವ ಹಿಂದೆ ಮಡುಗುತ |
ಕೃತಕದಲಿ ಹಸಿಬಿಸಿಯ ನೀಡುವ |
ಶತನರಕಿಜೀವಿಗಳು ಕಾಣ್ಬರೆ ಮೋಕ್ಷಪದಗಳನು || ೩೯ ||

ಮನೆಯ ಹಿರಿಯರಿಗೊಂದು ಮಕ್ಕಳಿ |
ಗೊಂದು ಜಂಗಮಕೊಂದ ನೀಡುವ |
ಬಿನುಗು ಪಾತಕ ಧನವಿಘಾತಕ ಮನದ ಸೂತಕರ ||
ಮನಸಿಜಾರಿಯು ಒಲ್ಲ ಮೋಕ್ಷದ |
ಮನೆಗೆ ಸಲ್ಲದ ಹೀನರವರನು |
ಇನನ ಸುತನಾಜ್ಞೆಯಲಿ ಇಕ್ಕುವನೀಶ ಭವನಾಶ || ೪೦ ||

ಅಂಗವನು ಬಣ್ಣಿಸುತ ಕೆಲರಿಗೆ |
ಹಿಂಗದಲೆ ಸೇವೆಯನು ಮಾಡುತ |
ಹೆಂಗಳನು ಭೋಗಿಸುತ ತನ್ನಯ ಅಂಗವನೆ ಹೊರೆವ ||
ಭಂಗಗೇಡಿಯ ಬಗೆವರಲ್ಲದೆ |
ಮಂಗಳಾತ್ಮಕ ಮಹಿಮರರಿವರೆ |
ಸಂಗಸುಖ ಸರಸದಲಿ ಸತಿಯರ ಪಿಂಗಲಾರದರು || ೪೧ ||

ಧನದಿ ವಂಚನೆ ಮನದಿ ವಂಚನೆ |
ತನುವ ವಂಚನೆ ಮಾಳ್ಪ ಮನುಜರು |
ಮನಸಿಜಾರಿಯ ಶರಣರರಿಯದ ಮನುಜಭೂತಗಳು ||
ಕನಸು ಮನಸಿನೊಳ್ಕಾಣಲರಿಯರು |
ಕನಕಗಿರಿಯ ನಿವಾಸನೀಶನ |
ಅನುವನರಿಯದ ಆತ್ಮಘಾತಕರರಿವರೇ ಎ[1] ಮ್ಮ[1] || ೪೨ ||

ಒಂದು **ಕರಿಯೆಲೆಯಾ ಪ್ರಪಂಚಿಗೆ** |
ನಿಂದೆ ನಾ ಮರ್ತ್ಯದಲಿ ಲೋಕದ |
ಮಂದಮತಿ ಮನಹೀನಮನುಜರು ಮಹಿಮರರಿಯದರು ||
ನಿಂದ್ಯೆ ವಂದನೆಗಳ ಪ್ರಪಂಚದಿ |
ಮುಂದುಗಾಣದೆ ಮುಗ್ಗಿ ಬೀಳುವ |
ಹಂದೆ ಮನುಜರು ಹಿರಿದು ನರಕದಿ ನಿಂದಿರದಲಿಹರೆ || ೪೩ ||

---

1-1 ಂದ (ಅ, ಉ, ಖ, ಬ.)

ಒರಳೊಳಗೆವೊಂದೊಬ್ಬೆ ಕೆಡಿಸಿದ ।
ಪರಿಯು ತನಗಾಯಿತ್ತಿದೆನ್ನುತ ।
ಬಿರಳು ಕಡಿಮೆಯ[1] ಲಗಳು[1] ದಾಂಟಿದ ತೆರನು ನಾನಾದೆ ॥
ತರಳನಾಗಿರ್ದಾಗಳಿಂದಲೂ ।
ಶರಣ ಸೇವೆಯ ಮಾಡಿ ಕಡೆಯಲಿ ।
ಕರಿಯ ಎಳೆಯ ಪ್ರಪಂಚಿಗೋಸುಗ ಧರಣಿಯೊಳು ನಿಂದೆ * ॥ ೪೪ ॥

ಎನ್ನ ಶ್ರೀ ಗುರುಚೆನ್ನಬಸವನು
[2] ನ [2] ನ್ನ ನೊಲ್ಲದೆ ಬಿಟ್ಟುಪೋದನು ।
ತನ್ನ ಚರಣದಸ್ತಿಹೊನ್ನ ಪಾದುಕೆ ಎನ್ನ ಕೈಲಿರಲು ॥
ನಿನ್ನ ಪಾದವ ಬಿಡುವೆನೇ ಇ ।
ನ್ನೆನ್ನ ಜೀವನವುಳ್ಳ ತನಕವು ।
ನಿನ್ನ ಕೃಪೆಯೆನಗಿಲ್ಲವೇ ಶ್ರೀ ರುದ್ರಮುನಿಸ್ವಾಮಿ ॥ ೪೫ ॥

ಗುರುವೆ ನಿಮ್ಮಯ ಶರಣರಂಘ್ರಿಯ ।
ಮರೆಯದಲೆ ಬಸವಾದಿ ಪ್ರಮಥರು ।
ಬರುವತನಕವು ನೆನೆದು ಜೀವದಿ ಚಿರದಿ ಬಾಳುವೆನು ।
ಕರುಣಿಸಿನ್ನೆನಗೊಂದು ಬುದ್ಧಿಯ ।
ಗುರುನಿರೂಪಣೆ ಶಿವಪ್ರಸಾದವ ।
ಮರೆಯದಂತೆನಗರಿವು ಪಾಲಿಸಿ ಪೊರೆವುದೆನ್ನಯ್ಯ ॥ ೪೬ ॥

ಮುಂದೆ ಬಹ ಕಲಿಕಾಲ ಧರ್ಮವ ।
ನೊಂದನೆಣಿಸಲು ಬಾರದೆನ್ನಯ ।
ತಂದೆ ಶ್ರೀ ಗುರು ಚೆನ್ನಬಸವನು ಅಂದೆ ಪೇಳಿದನು ॥
ಇಂದುಧರಸದ್ಭಕ್ತರೆಂಬರು ।
ತೊಂದರೆಯ ಪ್ರಪಂಚ ಮಾಟದಿ ।
ಮುಂದುಗೆಡುವರು ಭಕ್ತಿಮಾರ್ಗವ ಹೊಂದದಿಹರೆಂದ ॥ ೪೭ ॥

ರೂಪನರಸಿದ ಭಕ್ತ ಕೆಡುವನು ।
ರುಚಿಯನರಸಿ ಮಹೇಶ ಕೆಡುವನು ।
ಪಾಪಕೆಳಸಿದ ಸತಿಯ ಪತಿವ್ರತಧರ್ಮವದು ಕೆಡುಗು ॥
ಕೋಪವೆಳಸಿದ ಯತಿಗೆ ಕೊರತೆಯು ।
ತಪದ ನಿಷ್ಠೆಯು ತಾನೆ ಕೆಡುವುದು ।
ಗುಪಿತವಿಲ್ಲದ ಭಕ್ತಿ ಗಾಳಿಯ ಸೊಡರಿನಂತಹುದು ॥ ೪೮ ॥

---

1-1 ಹೊಳೆಯ (ಅ, ಉ, ಬ.) * ಈ ಪದ್ಯ (ಇ, ಎ, ಖ, ಗ, ಚ.) ಪ್ರತಿಗಳಲ್ಲಿಲ್ಲ.
2-2 ತ (ಇ, ಒ, ಜ, ಜ.)

ಏಕೆ ಈ ಕಲಿಕಾಲ ನಡೆತೆಯ ।
ನೇಕತೆರಮೊಳಗುಂಟು ನಮಗದು ।
ಸಾಕು ಹೋಗುವ ಬನ್ನಿ ಮಾಮನೆಸಂಗಮನ ಬಳಿಗೆ ॥
ಸಾಕು ಸಾಕೀ ಲೋಕದಾಟವು ।
ಸಾಕು ನರರಿಗೆರೂಪುದೋರದೆ ।
ಏಕಭಾವದಿ ಗುಪ್ತದಲಿ ಇಹೆವೇಳಿ ಭಕ್ತಾಳಿ ॥ ೪೯ ॥

ವಚನ ॥ ಕೇಳಿರಯ್ಯ ಶರಣರೆಲ್ಲ; ಎಲೈ ರುದ್ರಮುನಿಲಿಂಗವೆ ಮುಂದೆ ಕಾಲ ದೇಶ ವರ್ತಮಾನಂಗಳಂತಿರಲಿ, ಎನ್ನೊಡೆಯ ಚೆನ್ನಬಸವಣ್ಣನವರು ಕೊಟ್ಟ ನಿರೂಪ ಎನ್ನ ಉಳುವೆಯ **ಸಂಗಮನಾಥನಲ್ಲಿಟ್ಟು** ನಿಮ್ಮ ನಿಮ್ಮ ಸ್ಥಲಂಗಳಿಗೆ ಚಿತ್ತೈಸಿರೆನ್ನಲು, ಗಣಂಗಳೆಲ್ಲಾ ಎದ್ದು ಉಳುವೆಯ ಮಹಾಮನೆಯ ಸಂಗಮನಾಥ ದೇವರ ಸನ್ನಿಧಾನಕ್ಕೆ ಹೋಗುತಿರ್ದರದೆಂತೆನೆ.

**ಅಟತಾಳ.**

ರುದ್ರಮುನಿ ಚೆನ್ನಮಲ್ಲಿಕಾರ್ಜುನ । ರಿರ್ದ ಶರಣರೆಲ್ಲರು ।
ಎದ್ದು ನಡೆದರು ಉಳುವೆಮಹಮನೆ – ರುದ್ರನೆಡೆಗೆ ॥ ೧ ॥
ಚಂದನವು ಮಂದಾರ ಚಂಪಕ । ನಂದಿವರ್ತದ ನೆಳಲೊಳು ।
ಬಂದರೆಲ್ಲರು ರೇಚಿತಂಡೆಯ – ಒಂದಿನಲ್ಲಿ ॥ ೨ ॥
ಕುಂದ ಮಂದಾರದಿ [1] ಂದೆ [1] ಸೆವ ಸು । ಗಂಧದಿಂದಲಿ ಒಪ್ಪುವ ।
ನಂದಿನಾಥನ ಉಳುವೆಮಹಮನೆ – ಮಂದಿರಕ್ಕೆ ॥ ೩ ॥
ಮರುಗ ಮಲ್ಲಿಗೆ ಜಾಜಿ ಸಂಪಿಗೆ । ಸುರಗಿ ಪಚ್ಚೆಯು ಪಾದರಿ ।
ಪರಿಮಳದ ಪನ್ನೀರ ತಂಪಿನ – ನೆರಳಿನೊಳಗೆ ॥ ೪ ॥
ಹರನ ಪುರಿಗಿಮ್ಮಿಗಿಲು ಒಪ್ಪುವ । ಗಿರಿಯ ಮಧ್ಯದೆಸೆಯೊಳ ।
ಗಿರುವ ಮಹಮನೆಯನ್ನು ಕಂಡರು – ಹರುಷದಿಂದ ॥ ೫ ॥
ಬಂದು ನೋಡಿದರಾಗ ಮಹಮನೆ । ಯಂದವನ್ನು ಬಗೆಬಗೆ ।
ಯಿಂದ ತೋರುವ ಉಳುವೆ ಮಹಮನೆ – ಚಂದವನ್ನು ॥ ೬ ॥
ಶರಣರಿಗೆ ಸುರಹೊನ್ನೆ ಸಂಪಿಗೆ । ಸುರಗಿವನವು ಪಾಪಿಗೆ ।
ಕರಿಯ ಜಾಲಿಯು ಬೇಲ ನೆಗ್ಗಿಲು – [2] ಭರಿತ [2] ವನವು ॥ ೭ ॥
ಶರಣರಿಗೆ ಸುರಲೋಕದಮರರು । ಇರುವ ಸ್ಥಲವು ಪಾಪಿಗೆ ।
ಉರಗ ವೃಶ್ಚಿಕ ಕರಡಿ ವ್ಯಾಘ್ರಗ – ಳಿರುವ ವನವು ॥ ೮ ॥
ಶರಣರಿಗೆ ನೋಡಲು ರಸಾಮೃತ । ವಿರುವ ಮಡುವು ಪಾಪಿಗೆ ।
ಗರಳವಿಷ ಮಹಕಾಳಕೂಟದ – ಗರಳ ಮಡುವು ॥ ೯ ॥

---

1-1 ಕ್ಕೆ ( ಅ, ಉ, ಬ, ) 2-2 ಇರುವ ( ಇ, ಎ, ಒ, ಖ, ಗ, ಚ, ಜ, ಟ. )

ಪಾಪಿಗಳ ಕಣ್ಣಿಂಗೆ ಕೌತುಕ । ಕಾಣಬಾರದ ಸ್ಥಲವದು ।
ರೂಪು ಶರಣರ[1] ಕಾ [1] ಪು ಶಿವಚಿ – ದ್ರೂಪಸ್ಥಲವು ॥ ೧೦ ॥
ಜಗಿಬಿಗಿಯ ಕಪ್ಪಡಿಯ ಕಣಿವೆಯು । ಹೊಗಲುಬಾರದು ಪಾಪಿಗೆ ।
ಸೊಗಸು ದಾರಿಯ ಸೊಂಪು ಶರಣರ – ಬಗೆಗೆ ತೋ [2] ರ್ಕು [2] ॥ ೧೧ ॥
ಅಂತೆಸೆವ ಉಳುವೆಯ ಮಹತ್ವವ । ಅಂತು ಎಲ್ಲಾ ನೋಡುತ ।
ಮುಂತೆ ಕಂಡರು ಸಂಗಮೇಶ್ವರ – ನಂತಸ್ಥಲವ ॥ ೧೨ ॥
ಸುರರು ಕಿನ್ನರ ಯಕ್ಷ ರಾಕ್ಷಸ । ಹರಿಯಜೇಂದ್ರ ನಮಿತನ ।
ಹೊರಗೆ ಬಂದರು ಶರಣರೆಲ್ಲರು – ಹರುಷದಿಂದ * ॥ ೧೩ ॥
ಬಂದು ಸಂಗಮನಾಥನಂಘ್ರಿಗೆ । ವಂದಿಸಿದರು ಹರುಷದಿ ।
ತಂದೆ ಸದ್ಗುರು ಸಂಗಮೇಶ್ವರ – ಸಲಹು ಎಂದು ॥ ೧೪ ॥
ತ್ರಾಹಿ ಶ್ರೀ ಗುರುನಾಥ ಸಂಗಮ । ತ್ರಾಹಿ ನಮ್ಮನು ರಕ್ಷಿಸು ।
ತ್ರಾಹಿ ಎಂದೆನುತೆರಗಿದ [3] ರು ರೇಚಿ – ತಂಡೆ ಸಹಿತ [3] ॥ ೧೫ ॥
ಗುರುವೆ ರಕ್ಷಿಸು ಭಕ್ತಕಲ್ಪ । ತರುವೆ ರಕ್ಷಿಸು ಹರಿಯಜೇಂದ್ರರ ।
ಸುರರ ಸಲಹುವ ದೊರೆಯೆ ರಕ್ಷಿಸು – ರಕ್ಷಿಸೆಮ್ಮ ॥ ೧೬ ॥
ಎಂದು ಸಂಗಮನಾಥನಂಘ್ರಿಗೆ । ವಂದಿಸೆಲ್ಲಾ ಕುಳಿತಿರೆ ।
ಎಂದ ಶ್ರೀ ರುದ್ರಮುನಿಯು ರೇಚಿಯ – ತಂದೆಗೊಲಿದು ॥ ೧೭ ॥

ವಚನ ॥ ಈ ಪ್ರಕಾರದಲ್ಲಿ ಶರಣರೆಲ್ಲರು ಉಳುವೆಯ ಸಂಗಮನಾಥದೇವರ ಆಸ್ಥಾನಮಂಟಪದಲ್ಲಿ ಗದ್ದುಗೆಯಿಕ್ಕಿ ಕುಳ್ಳಿರುವ ಸಮಯದಲ್ಲಿ, ರುದ್ರಮುನಿಸ್ವಾಮಿಗಳು ರೇಚಣ್ಣಗಳ ಮುಖವಂ ನೋಡಿ ಏನೆನ್ನುತಿರ್ದರು.

**ದ್ವಿಪದಿ.**

ಕೇಳಯ್ಯ ರೇಚಣ್ಣ ಕೇಳು ನಿಜಭಕ್ತ ।
ಕಾಳುಮನದೊಳು ಶಂಕೆ ತಾಳಿರಲುಬೇಡ ॥ ೧ ॥
ಭಾಳಾಕ್ಷಪದಭಕ್ತಿ ಬಲುಮೆ ಬಿಡಬೇಡ ।
ಏಳನೂರೆಪ್ಪತ್ತು ಅಮರಗಣರೆಲ್ಲ † ॥ ೨ ॥
ಭಾಳಲೋಚನಭಕ್ತ ಬಸವಪ್ರಮಥಾಳಿ ।
ಇಳೆಗೆ ಬರುವಾತನಕ ಇರು ಇಲ್ಲಿ ಸುಖದಿ † ॥ ೩ ॥
ಸಂಗಮೇಶನ ಪಾದಸನ್ನಿಧಿಯ ಬಿಡದೆ † ।
ಲಿಂಗಸಂಧಾನ ನಿಜ ಸುಖಸಮಾಧಿಯಲಿ ॥ ೪ ॥

1-1 ತಾ (ಅ, ಟ, ಡ, ಬ.) 2-2 ರುವದು (ಇ, ಉ, ಎ, ಖ, ಗ, ಚ.) * ಈ ಪದ್ಯ (ಇ, ಎ, ಖ, ಚ.) ಪ್ರತಿಗಳಲ್ಲಿ ಮಾತ್ರವಿದೆ. 3-3 ನು ರೇ – ಚಣ್ಣ ಭಕ್ತಿಯಲಿ । (ಇ, ಎ, ಒ, ಖ, ಗ.) † ಈ ಅರ್ಧರ್ಧ ಪದ್ಯಗಳು (ಒ, ಜ, ದ.) ಪ್ರತಿಗಳಲ್ಲಿ ಮಾತ್ರವಿದೆ.

ಹಿಂಗದೆ ಶಿವಶರಣರಂಘ್ರಿ ನೆನೆವುತ್ತ ।
ಗಂಗಾಂಬಿಯಮ್ಮ ಪ್ರಭುಗಣಪರ್ವದಲ್ಲಿ ॥ ೫ ॥
ಸಂಗನ ಶರಣರಿಗೆ ಸವೆಯದ ಪ್ರಸಾದ ।
ಲಿಂಗಕಾಧಾರವಕ್ಷಯ ಪಾತ್ರೆಯಲ್ಲಿ ॥ ೬ ॥
ಹಿಂಗಲರಿಯದು ಶರಣರಿಳಿಗೆ ಬರುವತನಕ ।
ಈಗ ಕಲ್ಯಾಣಕ್ಕೆ ಪೋಗಿ ಅಲ್ಲಿಂದ ॥ ೭ ॥
ಪೋಗುವೆವು ಶ್ರೀಗಿರಿಗೆ ನಿಲ್ಲದೆ ನಾವು ।
ಶ್ರೀಗಿರಿಸರೋವರದ ಶೃಂಗಾರ ಬಿಲದಿ ॥ ೮ ॥
ಯೋಗಮಾರ್ಗದಿ ನಾವು ಇರುತಿಹೆವು ಅಲ್ಲಿ ।
ಸೊನ್ನಲಿಗೆಯಾ ಸಿದ್ಧರಾಮಯ್ಯನವರು ॥ ೯ ॥
ಉನ್ನತ ಯೋಗದಲಿ ಉಳಿದಿಹರು ಅಲ್ಲಿ ।
ಚೆನ್ನಮಲ್ಲಿಕಾರ್ಜುನ ಚೆಲುವ ಮೂರ್ತಿಗಳು ॥ ೧೦ ॥
ತಮ್ಮ ಕಲಿದೇವರ ಸ್ಥಲದಿ ನಿಲ್ಲುವರು ।
ಧರೆಯೊಳಗೆ ಇರುವ ಚರಮೂರ್ತಿಗಳು ಎಲ್ಲ ॥ ೧೧ ॥
ಗಿರಿ ಗುಹೆ ಸ [1] ರೋವರದಿ [1] ಇರುತಿಹರು ಸ್ಥಿರದಿ ।
ಶರಣರೆಲ್ಲರು ತಿರುಗಿ ಧರೆಗೆ ಬರುವನಕ ॥ ೧೨ ॥
ಇರುತಿಹುದು ಶಿವಯೋಗ ವರ ಸಮಾಧಿಯಲಿ ॥

ವಚನ ॥ ಎಂದು ರುದ್ರಮುನಿದೇವರು ಏನೆನ್ನುತಿರ್ದರು.

**ಕಂದಪದ್ಯ.**

ಮುಂದೆ ಶ್ರೀ ಚೆನ್ನಬಸವಂ ।
ಬಂದಂದಿಗೆ ನಿಂದು ಕಲ್ಯಾಣಕೆ ಪೋದಂದಿಗೆ ॥
ಇಂದುಧರಶರಣಸಂದಣಿ ।
ಯೊಂದಿಗೆ ಪೋಗುವೆವು ಇದಕೆ ಸಂದೇಹ ಬೇಡ ॥ ೧ ॥
ಮಂಡಲದೊಳು ನವಖಂಡದ ।
ತಂಡದೊಳುಳ್ಳಂಥ ಭರತಖಂಡದೊಳು ಪಶ್ಚಿಮ ॥
ಖಂಡೇಂದುಧರನು ಸಲಹುವ ।
ಕಂಡದಿನದಲ್ಲೆಸವ ಪುಣ್ಯತಲದ ವಿಶೇಷ ॥ ೨ ॥

1-1 ಮಾಧಿಯಲಿ (ಜ.)

ಶ್ರೀಗಿರಿಗಿಮ್ಮಡಿ ತಲವಿದು ।
ಭೋಗ ಮೋಕ್ಷಾರ್ಥವನೀವ ಭಾಗ್ಯದ ಮನೆಯು ॥
ಈಗ ಉಳುವೆಯ ಸ್ಥಲವೊಳು ।
ಶ್ರೀ ಗುರು **ಸಂಗಮನ ಬಳಿಯಲಿ**ರು ರೇಚಣ್ಣಾ ॥ ೩ ॥

ತುಳುಕಿ ಅಂಬುಧಿಯು ಹೊರಳಲು ।
ಮಳೆಗಳುಂ ತಡೆದು ದೊರೆಗಳು ಮಥಸಿಸುತ್ತಿರಲು ॥
ಇಳೆಯು ಕಳವಳಗೊಳ್ಳಲು ।
ಕಳೆಧರನ ಕರುಣದಿಂದಂ ಉಳಿಯುವದು ಉಳುವೆ ॥ ೪ ॥

ಧರೆಯೊಳಗಣ ದೈವಂಗಳು ।
ತುರುಕರ ಅಟ್ಟುಳಿಗೆ ಅಂಜಿ ಇರಲಾರದಲೇ ॥
ಹಿರಿಯರು ಮಾನ್ಯರೆಲ್ಲರು ।
ಶರಣರು ಬಂದುಳುವೆಯ ಮನೆಯ ಸೇರ್ವರು ಮುಂದೆ ॥ ೫ ॥

**ವೃತ್ತ.**

ಗಿರಿಜಾತ ವರ ಪ್ರೀತ ತನ್ನಬಕುತರ್ಗಿರಲು [1] ಮಹಾ [1] ಸ್ಥಾನ [2] ಮಂ ।
ಧರೆಯೊಳ್ಕಲ್ಪಿಸಿಕೊಟ್ಟನೀ ಸ್ಥಳಕೆ ಶಾಶ್ವತವಿರಲೀ ನಾಮವಂ ॥
ಚಿರಕಾಲ ಸ್ಥಿರಬಾಳ್ವುದಕ್ಕುಳುವೆನಾಮನೆವೆಸರೇ ಸಾಕ್ಷಿಯೈ ।
ಇರುನೀಂ ಶ್ರೀ ಗುರು ಚೆನ್ನದಂಡೇಶ ಬರ್ಪತನ [3] ಕವೀ ಸ್ಥಾನಸೋಳ್[3] ॥ ೧ ॥

ವಚನ ॥ ಎಂದು ರೇಚಣ್ಣಗಳಂ ಒಡಂಬಡಿಸಿ ಉಳುವೆಯ ಸಂಗಮನಾಥದೇವರ ಸನ್ನಿಧಿಯಲ್ಲಿಟ್ಟು, ಅವರೊಡನೆ ಕೆಲವು ಮಾಹೇಶ್ವರರನ್ನಿರಿಸಿ ಸತ್ಕರಿಸಿ, ರುದ್ರಮುನಿ ಶ್ರೀ ಚೆನ್ನಮಲ್ಲಿಕಾರ್ಜುನದೇವರೀರ್ವರೂ ಕಳುಹಿಸಿಕೊಂಡು ಪೋಪಲ್ಲಿ ರೇಚಣ್ಣಗಳು ಏನೆನ್ನುತಿರ್ದರು.

**ಭಾಮಿನೀ ಷಟ್ಪದಿ.**

ಶರಣು ಶ್ರೀ ಗುರುರುದ್ರಮೂರ್ತಿಗೆ ।
ಶರಣು ಚೆನ್ನಮಲ್ಲಿಕಾರ್ಜನಯ್ಯಗೆ ।
ಶರಣು ಪರಮಾರಾಧ್ಯ ಶ್ರೀ ಚೆನ್ನಬಸವರಾಜನಿಗೆ ॥
ಶರಣು ನಿಮ್ಮಯ ಚರಣನೆನಹಿನೋ ।
ಳಿರುವೆ ಉಳುವೆಯ ಮಂದಿರದಿ ನಾಂ ।
ಗುರುವೆ ನಿಮ್ಮಯ ಕರುಣವೆನ್ನೊಳಗಿರಲಿ ಅನವರತ ॥ ೧ ॥

1-1 ಸು (ಅ, ಇ, ಎ, ಒ, ಗ, ಚ.) 2 ಸ್ಥಲ (ಇ, ಜ.) 3-3 ಕಿಲ್ಲಿರೇಚಣ್ಣ (ಜ.)

ಎಂದು ಭಯ ಭಕ್ತಿಯಲಿಯವರಿಗೆ ।
ವಂದಿಸುತ ಬೀಳ್ಕೊ [1] ಟ್ಟು [1] ಕಳುಹಲು ।
ಚಂದದಿಂ ಸತ್ಕರಿಸಿ ರೇಚಣ್ಣ ತಂದೆಯನು ಹರಸಿ ॥
ಒಂದಿನಲಿ ಚೆನ್ನಮಲ್ಲಿಕಾರ್ಜುನ ।
ತಂದೆ ರುದ್ರಮುನೀಂದ್ರರೀರ್ವರು ।
ಮುಂದಕೈದಿದರವರು ತಾವಿಹ ಎಂದಿನಾ ಸ್ಥಲಕೆ ॥ ೨ ॥

ಇದುವೆ ದಕ್ಷಿಣ ಕಾಶಿ ಹಂಪೆ [2] ಯು [2] ।
ಮದನಹರ ವಿರುಪಾಕ್ಷನಿರುತಿಹ ।
ನಿಧಿಗೆ ಟೆಂಕಲು ಸ್ಥಲದಿ ನಿಡುಗಲ್ಲೆಂಬ ಪಟ್ಟಣದ ॥
ಚದುರಪೇಟೆಯ ಬಸವರಾಜನ ।
ಮದನಮುಂಟಪದಲ್ಲಿ [3] ಸದ್ಗು [3] ಣ ।
ಹೃದಯ ಚೆನ್ನಪ್ಪಯ್ಯದೇವರು ಪೇಳ್ದರೀ ಕೃತಿಯ ॥ ೩ ॥

ನಾನು ಪೇಳ್ದವನಲ್ಲ ಲೋಕದ ।
ಮಾನವರಿಗಳವಲ್ಲ ತತ್ವದ ।
ಜ್ಞಾನ ಶಿವಸಂಧಾನ ಮಂತ್ರಾಧೀನ ಸುಯಿದಾನ ॥
ನಾನು ಮದಡನು ನನ್ನ ಹೃದಯದಿ ।
ತಾನು ಪೇಳಿದ ಬಸವರಾಜನು ।
ಏನ ಪೇಳಿದನೆಂದು ಎಕ್ಕಸವಾಡದಿರಿ ನರರು ॥ ೪ ॥

ಕಾಗೆ ಚಂದ್ರನ ಗೂಗೆ ಸೂರ್ಯನ ।
ಹೇಗ ಶಾಸ್ತ್ರವ ಮೂಗ ಕಾವ್ಯವ ।
ರೋಗಿಯಮೃತವ ಹೊಂದಬಲ್ಲನೆ ಶಿವನ ಸಂತತಿ [4] ಯ [4] ॥
[5] ಯೋ [5] ಗವರಿಯದ ನರರು ನರಕಕೆ ।
ಹೋ ಗಿ ಕೀಟಕ [6] ರಾ [6] ಗಿಯವರೊಳು ।
ತಾಗುವಾ ಪಾತಕರು ಅರಿವರೆ ಶರಣಸತ್ಕೃತಿಯ ॥ ೫ ॥

ಕಾಶಿ ಗಯೆ ಕಾವೇರಿ ವಾರ ।
ಣಾಸಿ ಹಂಪೆಯು ತುಂಗಭದ್ರೆಯು ।
ಲೇಸೆನಿಪ ಮಹಗಂಗೆ ಕೃಷ್ಣಾ ವೇಣಿ ಸರಸತಿಯು ॥

---

1-1 ಂಡು (ಇ, ಒ, ಖ, ಚ, ಜ, ಟ.) 2-2 ಯು (ಅ, ಇ, ಬ.) 3-3 ದಕ್ಷಿ (ಆ, ಬ.)
4-4 ಯು (ಒ, ಜ.) 5-5 ಭೋ (ಅ, ಇ, ಎ, ಒ, ಖ, ಗ, ಚ, ಜ, ಡ, ಬ.)
6-6 ನಾ (ಇ, ಎ, ಖ, ಗ, ಚ, ಜ.)

ದೇಶದೊಳಗಿಹ ಯಮುನೆನದಿ ರಾ ।
ಮೇಶ ಸಹ ಸಕಲಾದಿ ತೀರ್ಥವು ।
ಈಶಶರಣರ ಚರಣನುತಿಪದಕೆಣೆಯೆ ಧಾತ್ರಿಯಲಿ ॥ ೬ ॥

ಶಂಭು ನುತಿಸಿದ ಶರಣಪದವನು ।
ನಂಬಿ ನುತಿಸಿದ ಶರಣರಂಘ್ರಿಯ ।
ಕುಂಭಸಂಭವ ಹರಿಯಜೇಂದ್ರ ಮುನೀಂದ್ರ ಸುರರೆಲ್ಲ ॥
ಶಂಭುಪೂಜಕರನ್ನು ನುತಿಸುತ ।
ಶಂಭುವನು ಪ್ರತ್ಯಕ್ಷ ಮಾಡಿಯೆ ।
ಸಾಂಬಲೋಕಕೆ ಪೋದರೆಂಬವು ಸಕಲ ಶಾಸ್ತ್ರಗಳು ॥ ೭ ॥

ಪಾಲುಕುರಿಕೆಯಸೋಮ ವರಕಲಿ ।
ಭೀಮ ಶಂಕರದೇವ ಧೂರ್ಜಟಿ ।
ಫಾಲಲೋಚನಭಕ್ತ ಮಲುಹಣ ಗುಬ್ಬಿಮ [1] ಲ್ಲಣನು [1] ॥
ಲೀಲೆಚಾಮರಸಯ್ಯ ದಸುರಿಯು ।
ಕಾಲಹರಸುತ ವೀರಭದ್ರನ್ಯ ।
ಪಾಲರೆಲ್ಲರು ಶಿವನ ಶರಣರ ನುತಿಸಿ ಬಾಳಿದರು ॥ ೮ ॥

ದೇವ ಭಕ್ತನು ಭಕ್ತ ದೇವನು ।
ದೇವ ಭಕ್ತರೊಳುಭಯ ಸಂಶಯ ।
ಶೈವಶಾಸ್ತ್ರವ ಬಲ್ಲ ಹಿರಿಯರು ಏಂಗಡಿಪುದುಂಟೆ ॥
ದೇವ ಭಕ್ತರ ಜೀವವೊಂದೇ ।
ಕಾಯವೆರಡಾಗಿರ್ದಡೇನದು ।
ಆವಪರಿಯೊಳು ಭಕ್ತದೇಹಿಕ ದೇವನುರೆ ತಾನೆ ॥ ೯ ॥

ಸಕಲ ಮಂತ್ರಕೆ ಸಕಲ ತಂತ್ರಕೆ ।
ಸಕಲ ವೇದಾಗಮ ಪುರಾಣಕೆ ।
ಸಕಲ ಶಾಸ್ತ್ರಕೆ ಹೆಚ್ಚು ಮೆಚ್ಚದು ಶರಣನುತಿಯೆಂದು ॥
[2] ಸಕಲ ಭಕ್ತರು ತಿಳಿವರೀತಿಗೆ ।
ಪ್ರಕಟಿಸಿಗ ಶ್ರೀ ಸೋಮನಾಥನು [2] ।
ಸಕಲ ಭಕ್ತರು ಕೇಳಿ ಹುರುಷವ ತಾಳಿ ಹರಸುವುದು ॥ ೧೦ ॥

---

1-1 ಲುಹಣ್ಣಾ (ಅ, ಒ, ಜ, ಡ, ಬ.) 2-2 ಶರಣರರಿಯಲು ಸಕಲ ಶಾಸ್ತ್ರವ । ನೊರದು ನೋಡಲು ಇದಕೆ ಸಾಟಿಯೆ । (ಅ, ಇ, ಉ, ಎ, ಒ, ಖ, ಜ, ಟ, ಡ, ಬ.)

ಶರಣನುತಿಯಿದನಾವ ಭಕ್ತರು |
ಧರೆಯೊಳಗೆ ಬರೆದೋದಿ ಕೇಳಲು |
ಪರಮ ಶುಭಕರ ದುರಿತ ಪರಿಹರ ಪೊರೆವ ಶಿವನೊಲಿದು ||
ಧರೆಯ ಪಾಲಿಪ ಬಸವರಾಜನು |
ಹರುಷದಲಿ ದಯವಿಟ್ಟು ಸಲಹುವ |
ಶರಣಸಂತತಿಯೊಳಗೆ ಸತತವು ಬೆರೆದು [1] ಸುಖವಿಹರು [1] || ೧೧ ||

ಶರಣು ಜಗದಾರಾಧ್ಯ ಪ್ರಭುವಿಗೆ |
ಶರಣು ಶ್ರೀ ಗುರುಬಸವರಾಜಗೆ |
ಶರಣು ಪರಶಿವ ವರಕುಮಾರಕ ಚೆನ್ನಬಸವನಿಗೆ ||
ಶರಣು ಶ್ರೀ ಸಕಲಾದಿ ಪ್ರಮಥರ |
ಚರಣಕಮಲವ ನುತಿಸಿ ಕೀರ್ತಿಸಿ |
ಶರಣ ಲೀಲಾ ಯಕ್ಷಗಾನವ ವಿರಚಿಸಿದೆ ನಾನು || ೧೨ ||

ಗುರು ಲಘುವು ಛಂದಸ್ಸು ಯತಿ ಗಣ |
ಸ್ವರವು ರೂಪಕ [2] ವಾಕು [2] ಮೊದಲಾ |
ಗಿರುವ ಶಾಸ್ತ್ರವನರಿದು ಶೋಧಿಸಿ ನೋಡಿದವನಲ್ಲ ||
ಪರಮ ಶ್ರೀ ಗುರು ಚೆನ್ನಸಂಗಮ |
ವರದಿ ಪೇಳಿದೆ [3] ನೀಗ [3] ಲೀಕೃತಿ |
ಹರನ ಭಕ್ತರು ಕೇಳಿ ಹರುಷವ ತಾಳಿ ಸುಖಿಸುವುದು || ೧೩ ||

ಅರಿಯದವ ಪೇಳಿದನಿದೇತರ |
ಬರಿಯ ಮಾತಿನ ಬಣಬೆಯೆನುತಲಿ |
ಜರಿದು ನುಡಿಯಲು ಬೇಡಿ ಶರಣರ ಕರುಣರಸವಿದನು ||
ಧರೆಯೊಳಗೆ ಸದ್ಭಕ್ತಜನ ಶಿವ |
ಶರಣರಾದ ಮಹಾನುಭಾವರು |
ಒರೆದು ತಪ್ಪುಳ್ಳೊಡೆ ವಿಚಾರಿಸಿ ಬರೆದು ತಿದ್ದುವುದು || ೧೪ ||

---

1-1 ಸಲಹುವನು (ಅ, ಬ.) 2-2 ದಾತು (ಜ, ಪ.) 3-3 ನಾನು (ಇ, ಒ, ಖ, ಚ, ಜ).

ಕಾನನದ ನಿಜಸೊಂಪನರಿಯದ ।
ಕಾಗೆ ನಂದನವನವ ಜರಿದರೆ ।
ಏನು ಕೊರತೆಯು ದಿವ್ಯಗಂಧದೊಳೆಸೆವುದಾ ವನವು ॥
ಹೀನಮನುಜರ ಹೆಚ್ಚು ಕುಂದಿಗೆ ।
ತಾನು ಕೆಡುವುದೆ ಶಿವಮಹಾತ್ಮೆಯು ।
ಭಾನುಕಳೆಗುಂದುವುದೆ ಮೇಘದ ಬಲುಮೆ ಹೆಚ್ಚಿದರೆ ॥ ೧೫ ॥

ಕೂಟಸಾಕ್ಷಿಯ ಕುಟಿಲ ಹೀನರು ।
ತಾಟಕರು ಬಹು ಠವಳಿಕಾರರು ।
ಮಾಟಮಾದಿಗ ಶೂನ್ಯಗಾರರು ಮಾಂಸಭಕ್ಷಕರು ॥
ತಾಟುಪೋಟಿನ ಠೌಳಿಮಾತಿನ ।
ಪಾಟಿಮಾಡುವ ಪರಮಪಾತಕ ।
ರೇಟುಗಾಯಿಗಳರಿವರೇ ಶಿವಶರಣರಿಂಗಿತವ ॥ ೧೬ ॥

ಇದು ಶರಣವಿಸ್ತಾರ ರತ್ನದ ।
ಹಾರ ಭಕ್ತವಿಚಾರ ಕರ್ಣಕೆ ।
ಮಧುರತರದಾ ಸಾರ ಕೇಳ್ವರಿಗಿಂಪು ಬಹು ಸೊಂಪು ॥
ಮದನಹರ ಮಂದಾರ ಮಹಿಮರ ।
ಹೃದಯಕಿದು ಗಂಭೀರವೀಕೃತಿ ।
ಸದಮಲಾತ್ಮರು ಕೇಳಿ ಹರುಷವ ತಾಳಿ ಹರಸುವುದು ॥ ॥ ೧೭ ॥

**ಕಂದಪದ್ಯ.**

ಇದು ಶರಣ ಲೀಲಾಮೃತ ।
ವಿದು ಭಕ್ತರ ಭಕ್ತಿಯುಕ್ತ ಮೋಕ್ಷದ ಮಾರ್ಗಂ ॥
ಇದ ಬರೆದೋದಲು ಕೇಳಲು ।
ಪದವೀವನು ಸಂಗಮೇಶ ಕರ್ಮವಿನಾಶಂ ॥ ೧ ॥

ಈ ಶರಣ ಲೀಲಾಮೃತವ ।
[1] ಲೇಸಿನ [1] ದೃಢಭಕ್ತಿಯಿಂ ಪೂಜಿಸಿ ಪಠಿಸಿದರ್ಗಂ ॥
ಬೇಸರಿಸದೆ ಲಾಲಿಸಿದರ್ಗೆ ।
ಈಶನು ಕರುಣದಿ ಪಾಲಿಪ ಫಲಮಿದು ಸತ್ಯಂ ॥ ೨ ॥

1-1 ಆಶ್ಚರ್ಯದಿಯಿ (ಗ, ಜ.)

ಕೇಳಿದ ಸ[1] ದ್ಭಕ್ತರ್ಗಳು[1] |
ಮೇಲಾಗಿಯೆ ದಾಸೋಹವಂಗೈದು ತಾವಂ ||
ಗ ಲಿಂಗ ಸುವಸ್ತ್ರಂಗಳೀ |
ಯಲ್ಗಣಕೆ ಭಾಳಾಕ್ಷನ ಮನಮೆಚ್ಚುಗೆ ಸತ್ಯಂ || ೩ ||

**ಸ್ತುತಿ.**

ಶಾಂತಿರಸ ಭರಿತನಂ ಸನ್ಮಾರ್ಗ ಚರಿತನಂ |
ಮಂತ್ರಸ್ವರೂಪನಂ ಮಾಂಗಲ್ಯ ಹೃದಯನಂ |
ಭ್ರಾಂತಿಗಿರಿವಜ್ರನಂ ಭವತಿಮಿರ ಸೂರ್ಯನಂ ಸೇವಕಜನರಾ ಭವದ ||
ದಂತಿ ಪಂಚಾಸ್ಯನಂ ಧರ್ಮಸ್ವರೂಪನಂ |
ಅಂತರವನರಿವನಂ ಅಷ್ಟಾವಧಾನನಂ |
ಚಿಂತೆವನದಾವನಂ ಚೆನ್ನಬಸವೇಶನಂ ಸಂತತಂ ಬಲಗೊಂಬೆನು * || ೧ ||

ಇಂತಿ ಪದ್ಯಗಳು ೧೬೫

**ಅಂತು ಸಂಧಿ ೨೫ ಕ್ಕಂ ಸಂಪೂರ್ಣಗಣನೆ – ೬೬೬೭ ಕ್ಕಂ ಮಂಗಳಮಹಾ**

**ಶ್ರೀ ಶ್ರೀ ಶ್ರೀ ಶ್ರೀ ಶ್ರೀ**

ಸ ಮಾ ಪ್ತಂ



1-1 ಜ್ಜನಭಕ್ತಾಳಿಗಳ್ಮೀ (ಇ, ಒ.) * ಈ ಸ್ತುತಿ (ಅ, ಡ, ಬ) ಪ್ರತಿಗಳಲ್ಲಿ ಮಾತ್ರವಿದೆ.

# ಕಠಿಣಶಬ್ದಗಳ ಕೋಶ

### ಅ

**ಅಕಳಂಕ** ಕೊರತೆಯಿಲ್ಲದ, ಶುದ್ಧ
**ಅರ್ಕ** ಸೂರ್ಯ, ಎಕ್ಕೆಗಿಡ
**ಅಗರು** ಗುಗ್ಗುಳದ ಮರ
**ಅಗಳು** ಕಂದಕ, ಅಗೆ, ಶಬ್ದ
**ಅಗಿಲು** ಪರಿಮಳ, ಧೂಪ
**ಅಘ** ಪಾಪರೂಪ, ನೋವು
**ಅಜಿನ** ಚರ್ಮ
**ಅಡ್ಡಣಿಗೆ** ಮಣೆ
**ಅಣಿಕುಲ** ಸೈನ್ಯ, ಪಡೆ, ದಳ
**ಅಣ್ಣೆವಾಲ್** ಶುದ್ಧವಾದ ಹಾಲು
**ಅಧಟು** ದರ್ಪ, ಸಾಹಸ, ಪರಾಕ್ರಮ
**ಅಧೋಕ್ಷಜ** ವಿಷ್ಣು, ಕೃಷ್ಣ
**ಅನಘ** ಪಾಪವಿಲ್ಲದ, ದುಃಖವಿಲ್ಲದ
**ಅನಲ** ಅಗ್ನಿ, ಬೆಂಕಿ
**ಅನಂತ** ಕೊನೆಯಿಲ್ಲದ, ವಿಷ್ಣು, ಶಿವ
**ಅನಿಮಿಷ** ರೆಪ್ಪೆ ಹೊಯ್ಯದವ, ದೇವತೆ, ಒಬ್ಬ ರಾಜ
**ಅನು** ಜತೆ, ಸಿದ್ಧ, ಸಂಗಡ
**ಅನುನಯ** ಪ್ರಾರ್ಥನೆ, ಸ್ನೇಹ, ವಿನಯ
**ಅಭವ** ಹುಟ್ಟಿಲ್ಲದವ, ಶಿವ
**ಅಭ್ರ** ಮೇಘ, ಮೋಡ
**ಅಬ್ಧಿ** ಸಮುದ್ರ, ನಿರಾಶ್ರಯ
**ಅಬುಜ** ತಾವರೆ, ಚಂದ್ರ
**ಅಮರ** ಮರಣವಿಲ್ಲದವ ದೇವತೆ
**ಅಲಸಿ** ಬೇಸರಿಸಿ, ಶ್ರಮಗೊಳಿಸಿ
**ಅವಿರತಂ** ಒಂದೇಸಮನಾಗಿ
**ಅಸ್ತವ್ಯಸ್ತ** ಗತವಾಗುವ ವ್ಯಾಕುಲ
**ಅಸಿ** ಕತ್ತಿ
**ಅಸು** ಪ್ರಾಣ, ಜೀವ
**ಅಸುರ** ರಾಕ್ಷಸ, ರಾತ್ರಿ
**ಅಹಿ** ಸರ್ಪ, ಹಾವು
**ಅಳಿ** ಭ್ರಮರ, ತುಂಬಿ
**ಅಂಗುಷ್ಠ** ಅಂಗುಲಿ
**ಅಂಚೆ** ಹಂಸ
**ಅಂಬ** ಅಮ್ಮ, ತಾಯಿ
**ಅಂಬು** ಬಾಣ, ನೀರು
**ಅಂಬುಜ** ನೀರಲ್ಲಿ ಹುಟ್ಟಿದ್ದು, ತಾವರೆ

### ಆ

**ಆಖಂಡಲ** ಇಂದ್ರ
**ಆಣತಿ** ಆಜ್ಞೆ, ಅಪ್ಪಣೆ
**ಆಧಿ** ಮನೋವ್ಯಥೆ,' ಕಷ್ಟ
**ಆಮ್ನಾಯ** ವೇದ, ಆಗಮ
**ಆರಡಿ** ಭ್ರಮರ, ತುಂಬಿ
**ಆಳಾಪ** ಸಂಭಾಷಣೆ
**ಆಳಿ** ಸಮೂಹ, ಸಖಿ, ಗೆಳತಿ

### ಇ

**ಇಕ್ಷು** ಕಬ್ಬು
**ಇನ** ಸೂರ್ಯ, ಒಡೆಯ, ಪತಿ
**ಇಮ್ಮೈ** ಎರಡು ಭಾಗಗಳು
**ಇಂದು** ಚಂದ್ರ, ಈದಿನ

### ಈ

**ಈಡು** ಸರಿ, ಸಮ, ಜತೆ
**ಈಶ** ಶಿವ, ಒಡೆಯ, ಯಜಮಾನ
**ಈಂಟು** ಕುಡಿ, ಪಾನಮಾಡು

### ಉ

**ಉಕ್ತಿ** ಮಾತು, ಶಬ್ದ, ಹೇಳಿದ್ದು
**ಉಡುಗಿ** ಗುಡಿಸಿ, ಬೆಳಗಿ
**ಉದ್ದಂಡ** ಧೈರ್ಯ, ಆಧಿಕ್ಯ, ಹೆಮ್ಮೆ
**ಉರು** ದೊಡ್ಡ, ವಿಶೇಷ
**ಉಗ್ರ** ಶಿವ, ಸಿಟ್ಟು

ಎ

**ಎಕ್ಕಲ** ಕಾಡುಹಂದಿ
**ಎಡೆ** ಸ್ಥಾನ, ಊಟಕ್ಕೆ ಬಡಿಸಿದ ಭಕ್ಷ್ಯಗಳನ್ನುಳ್ಳುದು
**ಎಣ್ದೆಸೆ** ಎಂಟುದಿಕ್ಕು
**ಎರೆಯ** ಒಡೆಯ
**ಎಸುಗೆ** ಬಾಣದ ಹೊಡೆತ
**ಎವೆ** ರೆಪ್ಪೆ

ಏ

**ಏಡಿ** ನಳ್ಳಿ, ಎಸಡಿ
**ಏಣಾಂಕ** ಚಂದ್ರ

ಒ

**ಒಕ್ಕ** ಹೊರಬಿದ್ದ, ಚೆಲ್ಲಿದ
**ಒಡಬಡಿಸಿ** ಒಡಂಬಡಿಸಿ, ಒಪ್ಪಿಸಿ
**ಒಡ್ಯಾಣ** ಡಾಬು
**ಒರೆ** ಹೇಳು, ತೇಯು, ಖಡ್ಗದ ಚೀಲ
**ಒಸಗೆ** ಸುದ್ದಿ, ಸಂತೋಷ, ಮಂಗಳವಾರ್ತೆ

ಓ

**ಓಗರ** ಅನ್ನ, ಆಹಾರ, ದಿನಸು
**ಓಜೆ** ಕ್ರಮ, ವರಸೆ, ಬಲ
**ಓರಣ** ಸಾಲು, ಭಂಗಿ
**ಓರಂತೆ** ಚೆನ್ನಾಗಿ
**ಓರೆ** ವಾಲಿರು, ತುಸುಬಾಗಿರು
**ಓಲಗ** ರಾಜಾಸ್ಥಾನ, ವಾದ್ಯ
**ಓಷ್ಠ** ತುಟಿ
**ಓಸರಿಸು** ಹಿಂದೆಗೆ, ಮರೆಯಾಗು

ಔ

**ಔಡನಗಿ** ಹಲ್ಲುಕಡಿ

ಕ

**ಕರ್ಕಟ** ಎಸಡಿ, ನಳ್ಳಿ
**ಕರ್ಕಶ** ಕಠಿಣ, ಕ್ರೂರ
**ಕಕ್ಷೆ** ಕಂಕುಳು
**ಕಚ** ತಲೆಗೂದಲು
**ಕಚ್ಛಪ** ಆವೆ, ಆಮೆ
**ಕಜ್ಜ** ಕಾರ್ಯ, ಕೆಲಸ
**ಕಟ್ಟಾಣಿ** ಅಮೂಲ್ಯ, ಸುಂದರ ಸ್ತ್ರೀ
**ಕಟಿ** ನಡು, ಸೊಂಟ
**ಕಟ್ಟಿಗೆ** ಉರಿಸುವ ಮರ
**ಕಡವರ** ಚಿನ್ನ, ಬಂಗಾರ
**ಕಣಿಕ** ತೆನೆತೆಗೆದ ಕಾಳು
**ಕಣೆ** ಬಾಣ, ಕೋಲು
**ಕತ್ತೂರಿ** ಕಸ್ತೂರಿ
**ಕದಂಬ** ಸಮೂಹ
**ಕದಳಿ** ಬಾಳೆ, ಗುಂಪು, ಪತಾಕೆ
**ಕನಲಿ** ಕೋಪಿಸಿ, ಸಿಟ್ಟಾಗಿ, ರೇಗಿ
**ಕಪರ್ದಿ** ಶಿವ, ಮಹಾದೇವ
**ಕಮಠ** ಆವೆ, ಕಮಂಡಲು, ಆನೆ
**ಕರ್ಮ** ಕೆಲಸ, ಹಿಂದಿನ ಫಲ
**ಕ್ರಮುಕ** ಅಡಕೆ
**ಕರವಾಳ** ಖಡ್ಗ, ಕತ್ತಿ
**ಕರಭ** ಒಂಟೆಮರಿ, ಆನೆಮರಿ
**ಕರಡಿಗೆ** ಹುವ್ವಿನ ಬುಟ್ಟಿ, ಪೆಟ್ಟಿಗೆ
**ಕರಾಳ** ಭೀಕರರೂಪು
**ಕರಿ** ಕಪ್ಪು, ಆನೆ
**ಕರು** ಪುತ್ಥಳಿ, ಬೊಂಬೆ
**ಕರುಮಾಡ** ಉಪ್ಪರಿಗೆಮನೆ
**ಕರೆ** ದಡ, ಸುರಿ, ಕಪ್ಪು
**ಕಲ** ಮಧುರ
**ಕಲಿ** ವೀರ, ಶೂರ
**ಕವಾಟ** ಬಾಗಿಲು
**ಕಂತೆ** ಕಂಥೆ, ದೇಹ, ಶರೀರ
**ಕಂಬು** ಶಂಖ, ಮದ್ದಾನೆ, ಒಂದು ಧಾನ್ಯ
**ಕಲೆ** ಗುರುತು, ಪ್ರಕಾಶ, ವಿದ್ಯೆ
**ಕಳವಳ** ವ್ಯಥೆ, ಮನದ ಪೀಡೆ
**ಕಂಜ** ತಾವರೆ
**ಕಂಧರ** ಕುತ್ತಿಗೆ, ಕಂಠ
**ಕಂಪರ್ಪ** ಮನ್ಮಥ, ಕಾಮ
**ಕಾಕುಬುದ್ಧಿ** ಕುವಿಚಾರ, ಕೆಟ್ಟಬುದ್ಧಿ

**ಕಾಪು** ಕಾಯುವಿಕೆ, ಕಾವಲು
**ಕಾರುಕ** ಅಕ್ಕಸಾಲೆ
**ಕಾಷಾಯ** ಕಾವಿಬಣ್ಣ, ಮೂಲಿಕೆಗಳ ಬಿಟ್ಟ ಇಳಿಸಿದ್ದು
**ಕಾಸಾರ** ಸರೋವರ, ಕೊಳ
**ಕಾಂಚಿ** ಡಾಬು
**ಕೀರ** ಗಿಳಿ, ಮುಂಗುಸಿ
**ಕ್ರೀಡಾ** ಆಟ, ವಿನೋದ
**ಕುಟಜ** ಕೊಡಸಿಗೆ, ಬೆಟ್ಟಮಲ್ಲಿಗೆ
**ಕುಡ್ಯ** ಗೋಡೆ
**ಕ್ಷುತು** ಶೀನು
**ಕುಮಾರಶಃವ** ಗುರುಹಿರಿಯರ ಒಪ್ಪಿಗೆ
**ಕುರುಳು** ತಲೆಯ ಸುರುಳಿಗೂದಲು
**ಕೃಶ** ಅಲ್ಪ, ಕ್ಷೀಣ, ಬಡವಾದ
**ಕುಲಾಲ** ಕುಂಬಾರ
**ಕುಂತಳ** ತಲೆಗೂದಲು, ಒಂದು ದೇಶ
**ಕುಂದ** ಕೋಲುಮಲ್ಲಿಗೆ
**ಕುಂಭಸಂಭವ** ಅಗಸ್ತ್ಯ
**ಕೂಪ** ಬಾವಿ, ಪ್ರಿಯ
**ಕೂರ್ಮ** ಆಮೆ, ಆವೆ
**ಕೂರ** ಹರಿತ, ಮೊನೆ, ವೀರ
**ಕೂಲಿಸು** ನಾಶಗೊಳಿಸು
**ಕೂಷ್ಮಾಂಡ** ಕುಂಬಳಕಾಯಿ
**ಕೇಣ** ಮತ್ಸರ, ಅಸೂಯೆ
**ಕೇಣಿ** ಉದ್ಯೋಗ, ವ್ಯಾಪಾರ
**ಕೇಶ** ಕೂದಲು
**ಕೇಶವ** ವಿಷ್ಣು, ಕೃಷ್ಣ
**ಕ್ಲೇಶ** ದುಃಖ, ಸಂಕಟ
**ಕೈರವ** ಬಿಳೀನೈದಿಲೆ
**ಕೈವಲ್ಯ** ಮೋಕ್ಷ, ಮುಕ್ತಿ
**ಕೈವಾರ** ಹೊಗಳಿಕೆ, ಪ್ರಶಂಸೆ
**ಕೊತ್ತಳ** ಕೋಟೆ, ಬುರುಜು
**ಕೊಪ್ಪು** ಕಿವಿಯಾಭರಣ
**ಕೋಕ** ಕೆಂದಾವರೆ, ಕೆನ್ನೈದಿಲೆ
**ಕೋಪಿಲಿ** ಕುದುರೆಸೇನೆ, ಹಾವಭಾವ
**ಕ್ಷೋಣಿ** ಭೂಮಿ, ಕ್ಷಿತಿ
**ಕೌಬೇರ** ಕುಬೇರ

## ಖ

**ಖಗ** ಪಕ್ಷಿ
**ಖಪ್ಪರ** ತಲೆಯೋಡು, ಚಿಪ್ಪು
**ಖರ** ಕತ್ತೆ, ಕಠಿಣ, ಹರಿತ
**ಖಂಡೆಯ** ಖಡ್ಗ, ಕತ್ತಿ
**ಖೋಡಿ** ನೀಚ, ಹೀನ, ತಪ್ಪುಕ
**ಖೋ ಖುಲಿಲಿ** ವೀರಧ್ವನಿ

## ಗ

**ಗಡ** ಆಶ್ಚರ್ಯವಾಚಕ
**ಗಡು** ಅವಧಿ
**ಗಣಿಕ** ಜಾಜಿ, ಶಾವಂತಿ
**ಗದ್ಗದ** ತೊದಲುಧ್ವನಿ
**ಗಮಕಿ** ಲಿಪಿಯೋದುವವ
**ಗಮನ** ಹೋಗುವಿಕೆ, ಬರುವಿಕೆ
**ಗಮ್ಯ** ಎಣಿಸಬಹುದಾದುದು
**ಗರಿ** ಗರಿಕೆ, ಹುಲ್ಲು
**ಗಲ್ಲ** ತುಟಿಯ ಕೆಳಭಾಗ, ಗದ್ದ
**ಗಲಿರು** ಶೂರ, ಕಲಿ
**ಗಸಣೆ** ವಿಚಾರ, ತಳ್ಳಿ
**ಗಹ್ವರ** ಗುಹೆ, ಕಾಡು, ಕಠಿಣಸ್ಥಳ
**ಗಳ** ಗಂಟಲು, ಕತ್ತು, ಬೀಳು
**ಗಂಡಕ** ಮರಿಮೀನು
**ಗಂಡಕಿ** ಗಂಗಾನದಿಯ ಉಪನದಿ
**ಗಾಢ** ದೃಢ, ಅತಿಶಯ
**ಗಾರ್ದಭ** ಕತ್ತೆ
**ಗಾನ** ಸಂಗೀತ, ಹಾಡುಗಾರಿಕೆ
**ಗಾರು** ಸಿಟ್ಟು
**ಗಾವಳಿ** ಅಬ್ಬರ, ಗದರಿಕೆ
**ಗೀತೆ** ಹಾಡು, ತತ್ವಶಾಸ್ತ್ರ
**ಗೀರ್ವಾಣ** ದೇವತೆ, ಒಂದು ಭಾಷೆ
**ಗುಡ** ಬೆಲ್ಲ
**ಗುಲ್ಮ** ಪೊದರು

## ಘ

**ಘೂಕಂ** ಗೂಗೆ

## ಚ

**ಚಕ್ರವಾಕ** ಒಂದು ಜಾತಿಯ ಜಲಪಕ್ಷಿ, ಜಕ್ಕವಕ್ಕಿ, ಎಣ್ಣೆವಕ್ಕಿ
**ಚಕ್ಷು** ಕಣ್ಣು
**ಚಕೋರ** ಬೆಳದಿಂಗಳಲ್ಲಿ ಚಲಿಸುವ ಹಕ್ಕಿ, ಜೊನ್ನವಕ್ಕಿ
**ಚರ** ದೂತ, ಜಂಗಮ, ಚಲಿಸುವ
**ಚರಣ** ಪಾದ, ಪದ್ಯಗಳ ಒಂದು ಪಂಕ್ತಿ
**ಚರ್ಯ** ನಡತೆ, ವೃತ್ತಿ
**ಚಳಯ** ವೇಗ, ಆತುರ
**ಚಂಡಕೀರ್ತಿ** ಕ್ರೂರವಾದ ಕೀರ್ತಿಯುಳ್ಳವ, ಶಿವಗಣರಲ್ಲಿ ಒಬ್ಬ
**ಚಂಪಕ** ಸಂಪಿಗೆ
**ಚಿಣ್ಣ** ಸಣ್ಣಹುಡುಗ
**ಚಿತ್ತಜ** ಮನ್ಮಥ, ಕಾಮ
**ಚಿತ್ತಹೊತ್ತಿಲಿ** ಮನೋವೇಗದಿಂದ
**ಚಿಮ್ಮುರಿ** ಕೈಹಿಂದಕ್ಕೆ ಬಿಗಿದುದು
**ಚೀರ್** ಕಿರುಚು, ಕೂಗು

## ಜ

**ಜಟಾ** ಜಡೆ, ಸಿಕ್ಕುಬಿದ್ದ ಕೂದಲು
**ಜವನಿಕೆ** ತೆರೆ, ಪರದೆ
**ಜಂಗೆ** ದಾಟು, ನಿಡುಹೆಜ್ಜೆ
**ಜಂಬೀರ** ನಿಂಬೆ
**ಜಂಬುಕ** ನರಿ
**ಜಾಗು** ಭಾಪು, ಮೌನ
**ಜಾಳಿಗೆ** ಹಣದ ಚೀಲ, ಥೈಲಿ

## ಝ

**ಝಲ್ಲಿ** ಗೊಂಡೆಗಳ ಸಾಲು, ಸಮೂಹ

## ಟ

**ಟೆಕ್ಕೆ** ಬಾವುಟ, ಧ್ವಜ

## ಡ

**ಡಾಳಿಪ** ಹೊಳೆಯುವ, ಪ್ರಕಾಶಿಸುವ
**ಡೆಂಕಣಿ** ಧ್ವಜಸ್ತಂಭ,ಕೋಟೆಯಬುರುಜು

## ತ

**ತತಿ** ಸಾಲು, ಗುಂಪು, ಸಮೂಹ
**ತಥಾ** ಹಾಗೆ, ನಿಶ್ಚಯ
**ತನಿ** ಸಿಹಿ, ಸವಿ, ಸಮೃದ್ಧಿ
**ತಪಸಿ** ಇಂಗಳದ ಗಿಡ
**ತಮ** ಕತ್ತಲು, ರಾಹು, ತಮೋಗುಣ
**ತರಟು** ಬೋಳು
**ತರಣಿ** ಸೂರ್ಯ
**ತರಂಗ** ಅಲೆ, ತೆರೆ
**ತರಂಗಿಣಿ** ತರಂಗವುಳ್ಳುದು ನದಿ
**ತರು** ಮರ, ವೃಕ್ಷ
**ತವೆ** ಅಧಿಕ, ಪೂರ್ಣ, ಚೆನ್ನಾಗಿ
**ತಸ್ಕರ** ಕಳ್ಳ, ಚೋರ
**ತಳ್ಳಿ** ಗೊಡವೆ
**ತುಂಡುಲ** ಅಕ್ಕಿ
**ತಾಮರಸ** ನೀರಿನಲ್ಲಿ ಹುಟ್ಟಿದ್ದು, ತಾವರೆ
**ತಾಮ್ರಜೂಟ** ಕೋಳಿ, ಹುಂಜ
**ತಾರಾ** ತಾರೆ, ನಕ್ಷತ್ರ
**ತಾಸು** ಘಂಟೆ
**ತಿಮಿತಿಮಿಂಗಿಲ** ದೊಡ್ಡ ಮೀನು
**ತಿಮಿರ** ಕತ್ತಲೆ, ಅಜ್ಞಾನ
**ತಿಲ** ಎಳ್ಳು
**ತುರಗ** ಕುದುರೆ
**ತುರು** ವನ, ಪಶು, ಆಕಳು
**ತುಷಾರ** ಹಿಮ, ಮಂಜು
**ತೈತ್ತಿಗ** ಸ್ನೇಹಿತ, ಸಂಬಂಧಿಕ, ಸೇವಕ

## ದ

**ದಗಲ್** ಮೋಸ, ಠಕ್ಕು
**ದಧಿ** ಮೊಸರು
**ದಂತಿ** ಆನೆ
**ದಂಷ್ಟ್ರ** ಹಲ್ಲು
**ದಾಳಿ** ಮುತ್ತಿಗೆ, ಸಮೂಹ
**ದಿವಾ** ದಿನ, ಹಗಲು, ದಿವಸ
**ದುಕೂಲ** ನಯವಾದ ರೇಷ್ಮೆಬಟ್ಟೆ

**ದುಗ್ಧ** ಆಸೂಯೆ, ಹೊಟ್ಟೆಕಿಚ್ಚು
**ದುಮ್ಮನ** ಖೇದ
**ದ್ಯುಮಣಿ** ಆಕಾಶದ ರತ್ನ, ಸೂರ್ಯ
**ದುವ್ವಾಳಿಸುತ** ಮುಂದುವರಿಸುತ, ಚಪ್ಪರಿಸುತ್ತ
**ದೂರ್ವೆ** ಗರಿಕೆ
**ದ್ಯೋ** ಸ್ವರ್ಗ, ಆಕಾಶ

## ಧ

**ಧಿಕ್ಕೃತಿ** ತಿರಸ್ಕಾರ
**ಧೂರ್ಜಟಿ** ಭಾರವಾದ ಜಡೆಯುಳ್ಳವ, ಶಿವ

## ನ

**ನಕ್ರ** ಮೊಸಳೆ
**ನಖ** ಉಗುರು
**ನತ** ಬಾಗಿದ, ನಮಸ್ಕರಿಸಿದ
**ನಭ** ಆಕಾಶ, ಗಗನ
**ನಳಿನ** ತಾವರೆ
**ನಾಕ** ಸ್ವರ್ಗ, ಆಕಾಶ
**ನಾಗ** ಆನೆ, ಸರ್ಪ
**ನಾಗಕೇಸರ** ಮುತ್ತು
**ನಾಗವಲ್ಲಿ** ವೀಳೆಯದೆಲೆ
**ನಾಗವೇಣಿ** ಸರ್ಪದಂತೆ ಜಡೆಯುಳ್ಳವಳು
**ನಾರಿಕೇಳ** ತೆಂಗು
**ನಿಗಳ** ಚರಣಾಭರಣ, ಸ್ಫೈಜನಿ
**ನಿರ್ಜರ** ಮುಪ್ಪಿಲ್ಲದವ, ದೇವತೆ
**ನಿಟ್ಟಿಸುತ** ನೋಡುತ್ತ
**ನಿಭ** ಸರಿಯಾದ, ಹೋಲುವ
**ನಿರೆ** ನರಕ, ಕೊಳೆ
**ನಿವಹ** ಗುಂಪು, ಸಮೂಹ
**ನಿವಾಳಿ** ಇಳಿದಗೆ, ದೃಷ್ಟಿಪರಿಹಾರ
**ನಿಶಾ** ನಿಶಿ, ರಾತ್ರಿ, ಇರುಳು
**ನೀರೆ** ಪ್ರಿಯೆ, ಚೆಲುವೆ, ಲಾವಣ್ಯವತಿ ಯಾದವಳು
**ನೂನ (ನ್ಯೂನ)** ನಿಶ್ಚಯ, ನೆನೆಪು, ಊನ
**ನೆಗಳ್** ಮಾಡು, ರಚಿಸು, ಮೊಸಳೆ
**ನೆಗ್ರೋಧ** ಆಲದ ಮರ
**ನೆತ್ತ** ದಾಳ, ಪಗಡೆ, ಕಣ್ಣು
**ನೆರಹು** ಜತೆ
**ನೇವರಿಸು** ನೆಟ್ಟಗೆ ಮಾಡು, ಸವರು

## ಪ

**ಪಚ್ಚಡಿ** ತರಕಾರಿಯಿಂದ ಮಾಡಿದ ತಿಂಡಿ
**ಪಛಾಡಿಸಿ** ಹಿಂದುಮಾಡಿ
**ಪಟು** ಸಮರ್ಥ, ಕುಶಲ
**ಪಟ್ಟೆ** ರೇಷ್ಮೆ
**ಪಡಿ** ರೀತಿ, ಸಮ, ಅಳತೆ
**ಪತ್ರಭಾಜನ** ಊಟದ ಎಲೆ
**ಪತಾಕೆ** ಬಾವುಟ, ಗುಡಿ, ಧ್ವಜ
**ಪಥ** ದಾರಿ, ಹಾದಿ
**ಪದ್ಮ** ಕಮಲ, ನೀರು, ಚಂದ್ರ
**ಪದಾತಿ** ಕಾಲಾಳು
**ಪನ್ನಗ** ಕಾಲಿಲ್ಲದೆ ಚರಿಸುವುದು, ಹಾವು
**ಪರಡಿ** ಗೋಧಿಯ ಸೇವಿಗೆ
**ಪರಪೂನ್ನ** ಹಾಲು, ಪಾಯಸ, ಕೀರು
**ಪರುಠವಣೆ** ಸಿದ್ಧತೆ, ತಯಾರಿಕೆ
**ಪಲಾಶ** ಮುತ್ತುಗ
**ಪವರಿ** ತೂರಿ, ಸೋಯಿಸಿ
**ಪಶುಪ** ಒಡೆಯ, ಶಿವ
**ಪಂಕ** ಕೆಸರು
**ಪಂಥಿ** ಪ್ರತಿ
**ಪ್ರಕ್ಷಾಳನ** ತೊಳೆದ
**ಪ್ರಣತೆ** ಹಣತೆ, ದೀಪ
**ಪಾಟಿ** ಕ್ರಮ
**ಪ್ರಾಜ್ಞ** ಬಲ್ಲಿದ, ಬುದ್ಧಿವಂತ
**ಪಾತರ** ಪಾತ್ರ, ಜಾರತ್ವ
**ಪಾಸಾಲೆ** ಮಣ್ಣಿನಮರಿಗೆ, ಬಾನಿ, ಕರಡಿಗೆ
**ಪ್ರಾಸಾದ** ಅರಮನೆ
**ಪಾಳಯ** ದಂಡಿಳಿಯುವ ಸ್ಥಾನ, ಮನೆ
**ಪಾಂಗಿತ** ರೀತಿ, ಸಾಮ್ಯ
**ಪಿಕ** ಕೋಗಿಲೆ
**ಪಿನಾಕಿ** ತ್ರಿಶೂಲಧಾರಿ, ಶಿವ

**ಪುನ್ನಾಗ** ಬಿಳಿದಾವರೆ, ಸುರಹೊನ್ನೆ
**ಪುಷ್ಕರ** ಆನೆ ಸೊಂಡಿಲ ತುದಿ, ನೀರು, ಕತ್ತಿಯ ಬಾಯಿ, ತಾವರೆ, ಆಕಾಶ, ಸರ್ಪ, ಬಾಣ, ಸಾರಸಪಕ್ಷಿ
**ಪೂಗಳವಾರ್ಗಣ** ಕಾಮ, ಮನ್ಮಥ
**ಪೂರ್ವದೇವ** ರಾಕ್ಷಸ
**ಪೇಟೆ** ಅಂಗಡಿ ಬೀದಿ
**ಪೈಕ** ಭಾಗ
**ಪೊಳಲು** ನಗರ, ಪಟ್ಟಣ
**ಪೌಜು** ದಂಡು, ಪಡೆ, ಸೈನ್ಯ
**ಪ್ರೌಢಿ** ಜಾಣ್ಮೆ, ನಿಪುಣತ್ವ

## ಫ

**ಫಡ** ಶಹಬಾಷ್, ಎಲಾ, ಭಲಾ, ನೀಚ

## ಬ

**ಬಕ** ಕೊಕ್ಕರೆಯಲ್ಲಿ ದೊಡ್ಡ ಹಕ್ಕಿ
**ಬಕುಳ** ನಾಗಕೇಸರ, ಪಗಡೆಮರ
**ಬಟುವು** ಬಿಂಬ, ಉರುಟು
**ಬಟ್ಟೆ** ಮಾರ್ಗ, ದಾರಿ
**ಬಣಬೆ** ಮೆದೆ, ರಾಶಿ, ಗೂಡು
**ಬದಿ** ಪಕ್ಕ, ಸಮೀಪ, ಮಗ್ಗಲು
**ಬಧಿರ** ಕಿವುಡ
**ಬಸವಳಿದ** ಜ್ಞಾನತಪ್ಪಿದ, ಮೂರ್ಛೆಹೋದ
**ಬಂಡುಗಲೆ** ಹೊಲಸುಮಾತು
**ಬಂದುಗೆ** ಗುಲಾಬಿ
**ಬ್ರಹ್ಮದಾಯ** ಕಾಣಿಕೆ, ಕಪ್ಪ
**ಬ್ರಹ್ಮಚಾರಿ** ವಿರಕ್ತ, ಪರಬ್ರಹ್ಮವನ್ನು ತಿಳಿದವ
**ಬಾವನ್ನ** ಶ್ರೀಗಂಧ
**ಬಿಕ್ಕೆ** ಅಡಕೆ, ಪೂಗ
**ಬಿನುಗು** ಕೀಳು, ಪಾಮರ, ನೀಚ
**ಬಿತ್ತರ** ವಿಸ್ತಾರ ವಿವರ
**ಬಿಂಕ** ಗರ್ವ, ಹೆಮ್ಮೆ, ಜಂಬ
**ಬಿಂದು** ತೊಟ್ಟು, ಹನಿ, ಗುರುತು
**ಬೀಯ** ನಿಷ್ಪ್ರಯೋಜನವಾದ
**ಬುಧ** ತಿಳಿದವ, ಪಂಡಿತ
**ಬೆಕ್ಕಸ** ಆಶ್ಚರ್ಯ, ವಿಸ್ಮಯ, ಬೆರಗು
**ಬೆಲ್ಲವತ್ತ** ಬಿಲ್ವಪತ್ರೆ
**ಬೆಸಲಾದಂತೆ** ಹಡೆದಂತೆ, ಹೆತ್ತಹಾಗೆ
**ಬೇಹರ** ವ್ಯವಹಾರ, ವ್ಯಾಪಾರ
**ಬೈತ್ರ** ತೆಪ್ಪ, ಹಡಗು

## ಭ

**ಭರ್ಗ** ಶಿವ, ಪ್ರಕಾಶವುಳ್ಳ ವಸ್ತು
**ಭರ್ತಾರ** ಒಡೆಯ, ಸ್ವಾಮಿ, ಗಂಡ
**ಭ್ರಮರ** ಜೇನಿಗಾಗಿ ತಿರುಗುವುದು, ತುಂಬಿ
**ಭಲ್ಲೂಕ** ಕರಡಿ
**ಭವ್ಯ** ಸುಂದರ, ಶುಭ, ಸತ್ಯ
**ಭ್ರಾತೃ** ಒಡಹುಟ್ಟಿದ, ಸಹೋದರಿ
**ಭಾಮ** ಸಿಟ್ಟುಳ್ಳ ಸ್ತ್ರೀ
**ಭಾಮಿನಿ** ವೈರಾಗ್ಯಶೀಲೆ
**ಭಿತ್ತಿ** ಗೋಡೆ
**ಭಿಂಡಿವಾಲ** ಒಂದು ಆಯುಧ, ಮಾರುದ್ದದ ಬಡಿಗೆ
**ಭುಜಗ** ಸರ್ಪ, ಹಾವು
**ಭ್ರೂಣ** ಗರ್ಭದೊಳಗಣ ಶಿಶು
**ಭೂರಿ** ಉದಾರಗುಣವುಳ್ಳ, ಬಹಳ, ಅಧಿಕ

## ಮ

**ಮಕರ** ಮೊಸಳೆ
**ಮಡಿಕೆ** ಅವಡೆ ಧಾನ್ಯದಿಂದಾದ ಭಕ್ಷ್ಯ
**ಮಣಿಹ** ಕಸಬು, ಊಳಿಗ, ಸೇವೆ
**ಮತ್ಸ್ಯ** ಮೀನು
**ಮಧು** ಜೇನು, ನೀರು
**ಮಲ** ಪಾಪ, ದುಃಖ
**ಮಸಕ** ವೇಗ, ತಿಕ್ಕು, ಅಬ್ಬರ
**ಮಹಿ** ಭೂಮಿ, ಧರೆ
**ಮಂಜರ** ಬೆಕ್ಕು, ಬಾವುಗ
**ಮಂಟೆ** ಬಾಗಿ, ಡೊಂಕಾಗಿ
**ಮಂಡಪ** ಅಲಂಕರಿಸಿದ ವೇದಿಕೆ, ಗೃಹ
**ಮಂಡೂಕ** ಕಪ್ಪೆ
**ಮಂದ** ದಟ್ಟ, ಸಮೂಹ

**ಮೃತ್ತಿಕಾ** ಮಣ್ಣು
**ಮಾಡ** ಹರ್ಮ್ಯ, ಮಹಡಿ
**ಮಾರ್ತಾಂಡ** ಸೂರ್ಯ
**ಮಾರ** ಮನ್ಮಥ, ಕಾಮ
**ಮಿಗೆ** ಹೆಚ್ಚಾಗಿ, ಅಧಿಕವಾಗಿ
**ಮಿಡಿಯು** ಸಿಡಿಯು, ಹಾರಲು
**ಮಿಥ್ಯ** ಅಸತ್ಯ, ಸುಳ್ಳು
**ಮುಕುರ** ಕನ್ನಡಿ, ದರ್ಪಣ
**ಮುಡುಪು** ಪ್ರತ್ಯೇಕಿಸಿಟ್ಟ ವಸ್ತು
**ಮುದ** ಸಂತೋಷ, ಹರ್ಷ
**ಮುನಿವೃಕ್ಷ** ಮಾವಿನ ಮರ
**ಮುಸಲ** ಒನಕೆ
**ಮುಂಗುಲಿ** ಮುಂಗುಸಿ, ಕೀರ
**ಮೇರೆ** ಮರ್ಯಾದೆ
**ಮೇಳ** ಕೂಟ, ಸಂಗಡ

## ಯ

**ಯಕ್ಷ** ದೇವತೆಗಳ ಒಂದು ಬಳಗ
**ಯತಿ** ಚರಣ, ಸನ್ಯಾಸಿ
**ಯಷ್ಟಿ** ದಂಡ, ಕೋಲು

## ರ

**ರಣಕಣ** ಯುದ್ಧಭೂಮಿ
**ರವಿ** ಸೂರ್ಯ
**ರಾಟ್** ಒಡೆಯ, ಸ್ವಾಮಿ
**ರಾಪು** ಗರ್ವ, ದೌಲತ್ತು
**ರಿಪು** ಹಗೆ, ವೈರಿ ಇದಿರಾಳು
**ರುಕ್ಮ** ಕಾಂತಿಯುತವಾದ
**ರುಚಿ** ಕಿರಣ, ಕಾಂತಿ
**ರೂಪ್ಯ** ನಾಣ್ಯ, ರೂಪಾಯಿ

## ಲ

**ಲಾಕುಳ** ಯೋಗದಂಡ

## ವ

**ವಕ್ತ್ರ** ಬಾಯಿ, ಮುಖ
**ವರ್ತ್ಮ** ಹಾದಿ
**ವಸುಧಾ** ಭೂಮಿ, ಪೊಡವಿ
**ವಸುಮತಿ** ಭೂಮಿ
**ವಳಿತ** ಪ್ರದೇಶ
**ವೃತ್ತ** ವೃತ್ತಾಂತ, ನಡೆದ ವಿಷಯ
**ವಾಜಿ** ಕುದುರೆ
**ವಾಟಿಕಾ** ವಾಸಸ್ಥಾನ, ಮನೆ
**ವಾಯಸ** ಕಾಗೆ
**ವಾರಣ** ಒಂಟಿ, ಆನೆ
**ವಾರಿ** ನೀರು
**ವಾರುವ** ಕುದುರೆ
**ವಿಕಲ** ಊನವಾದ
**ವಿದ್ರುಮ** ಹವಳ
**ವಿರಂಚಿ** ಬ್ರಹ್ಮ
**ವಿಷಮ** ಸಮವಲ್ಲದ
**ವ್ಯುತ್ಪನ್ನೆ** ತಿಳಿದವಳು
**ವೇಣು** ಬಿದಿರು
**ವೈಚಾರಿತ್ವ** ರೀತಿ, ನಡತೆ
**ವ್ಯೋಮ** ಆಕಾಶ, ಬಾನು

## ಶ

**ಶಕಲಿ** ಹೆಣ್ಣುಮೀನು
**ಶಕ್ರ** ಇಂದ್ರ
**ಶಮ** ಶಾಂತಿ, ಸಹನೆ, ಬಹಿರ್
**ಶಯ** ಹಸ್ತ, ಕೈ
**ಶರ** ಬಾಣ, ಧ್ವನಿ, ನೀರು
**ಶ್ರವಣ** ಜೈನ
**ಶಶಕ** ಮೊಲ
**ಶಶಿ** ಚಂದ್ರ
**ಶ್ವಾನ** ನಾಯಿ, ಶುನಕ, ಸೊಣಗ
**ಶಾಲ್ಮಲಿ** ಬೂರುಗ, ಎಲವದ ಮರ
**ಶಾರ್ವರಿ** ಧಾತ್ರಿ
**ಶಿಖಿ** ತಲೆ, ಅಗ್ನಿ, ನವಿಲು
**ಶಿಂಶುಮಾರ** ಮೊಸಳೆ
**ಶ್ರೀಕಾಂತೆ** ಕೊಂಡೆಮಂಚಣ್ಣನ ಪತ್ನಿ
**ಶುಕ** ಗಿಳಿ, ಬಟ್ಟೆ, ಶಿವ
**ಶುಂಡ** ಸೊಂಡಿಲು
**ಶ್ವೇತ** ಬಿಳಿದು, ಬೆಳ್ಳಿ

## ಸ

**ಸಗಾಟ** ಸ್ನೇಹ, ಪ್ರೀತಿ
**ಸಜ್ಜರಸ** ರಾಳ
**ಸಪ್ತಾಂಗ** ದೊರೆ, ಮಂತ್ರಿ, ಸ್ನೇಹಿತ, ಭಂಡಾರ, ದೇಶ, ಕೋಟಿ ಕೊತ್ತಲ, ಸೈನ್ಯ
**ಸಬರಪಟ್ಟಣಿ** ಎತ್ತುಗಳಮೇಲಿ ಹಾಕುವ ಮಡಿಯಾದ ತಡಿ, ಹಾಸುಗೆ
**ಸಬಳ** ದೊಣ್ಣೆ, ಕೊಂತ, ಈಟಿ
**ಸಮೀರ** ವಾಯು, ಗಾಳಿ
**ಸ್ಮರ** ಮನ್ಮಥ, ಕಾಮ
**ಸರಟ** ಹಲ್ಲಿ, ಹೆಂಟೆಗೊದ್ದ
**ಸರಸತಿ** ಸರಸ್ವತಿ
**ಸಲುಗೆ** ಸೇರಲ್ಪಟ್ಟ
**ಸಲೆ** ಚೆನ್ನಾಗಿ
**ಸಹಿ** ಒಪ್ಪಿಗೆ, ಸರಿ
**ಸಾಧ್ವಿ** ಪತಿವ್ರತೆ
**ಸಾರ** ಶ್ರೇಷ್ಠ, ರಸ, ಅಮೃತ
**ಸಾರಂಗ** ಜಿಂಕೆ, ಆನೆ, ನವಿಲು, ಕೋಗಿಲೆ
**ಸಾರಂಗಿ** ತಂತಿವಾದ್ಯ, ವೀಣೆ
**ಸಾವಂತ** ಆಶ್ರಿತರಾಜ
**ಸಿಂಧುರ** ಆನೆ
**ಸುದತಿ** ಸುಂದರವಾದ ಹಲ್ಲುಳ್ಳವಳು
**ಸೆಜ್ಜೆ** ಲಿಂಗದ ಕರಡಿಗೆ, ಹಾಸಿಗೆ
**ಸೇಸೆ** ಅಕ್ಷತೆ
**ಸೈಧನ** ಪೂರ್ಣೈಶ್ವರ್ಯ
**ಸೋಮ** ಚಂದ್ರ, ನೀರು, ವಾಯು
**ಸೋಮಯಾಜಿ** ಸೋಮಯಾಗ ಮಾಡುವವ
**ಸೌಧ** ಅರಮನೆ, ಮಹಡಿಮನೆ
**ಸೌರಣೆ** ಸಿದ್ಧ, ತಯಾರಾದ
**ಸೌರಭ** ಸುವಾಸನೆ

## ಹ

**ಹಕ್ಕರಿಕೆ** ಕುದುರೆಯ ತಡಿ., ಹಲ್ಲಣ, ಆನೆಯ ಜೂಲು
**ಹಡಪ** ಅಡಪ, ತಾಂಬೂಲದ ಚೀಲ
**ಹತ್ತೆ** ಸಮೀಪ, ಹತ್ತಿರ
**ಹದುಳ** ಪದುಳ, ಶುಭ, ಕ್ಷೇಮ
**ಹಯ** ಕುದುರೆ
**ಹರಡೆ** ಕೊಕ್ಕರೆ, ಹದ್ದು
**ಹರಣ** ಪ್ರಾಣ, ಜೀವ
**ಹರವರಿ** ನೆಲೆ, ನಿವಾಸ
**ಹರಿ** ವಿಷ್ಣು, ಬ್ರಹ್ಮ, ಸಿಂಹ, ಓಡು, ಸರ್ಪ, ಕಪಿ, ಕಪ್ಪೆ, ಚಂದ್ರ, ಸೂರ್ಯ, ವಾಯು, ಕುದುರೆ, ಯಮ, ಕಿರಣ, ನವಿಲು, ಕೋಗಿಲೆ, ಹಂಸ, ಗಿಳಿ, ಇಂದ್ರ
**ಹರಿಗೆ** ಡಾಲು, ಗುರಾಣಿ
**ಹರಿಣ** ಎರಳೆ, ಜಿಂಕೆ
**ಹರಿಯಣ** ಊಟದತಟ್ಟೆ, ಬಟ್ಟಲು
**ಹರಿಸ** ಹರ್ಷ, ಸಂತೋಷ, ಆಹ್ಲಾದ
**ಹರ್ಮ್ಯ** ಸೌಧ, ಉಪ್ಪರಿಗೆ, ಮಹಡಿಮನೆ
**ಹಲಾಕು** ಒಮ್ಮೆಗೇಹಲ್ಲೆ, ತಿರಸ್ಕಾರ
**ಹಸುಬ** ಹಸುರು ಪಾರಿವಾಳ
**ಹಳಚು** ಹೊಡೆ, ತಾಗು, ಕಾದು. ಬಡಿ
**ಹಂಗ** ನೀಲಬಣ್ಣದ ಹಕ್ಕಿ
**ಹಂದೆ** ಹೇಡಿ
**ಹಿಸಿದ** ಒಡೆ, ಹೊಡೆ, ಕೊಂದ
**ಹಿಂಗು** ಇಂಗು, ಹಿಂದೆಸರಿ, ಬತ್ತು
**ಹೂಸಕ** ತೋರಿಕೆ, ಕೃತ್ರಿಮ
**ಹೆಂಡಿ (ಹೆಂಡೆ)** ಸಗಣಿ, ತೊಪ್ಪೆ
**ಹೇಗ** ಮರುಳ, ಮಂಕ
**ಹೇತು** ಕಾರಣ, ನೆವ, ಕ್ರಿಯೆಗೆ ಉದ್ದೇಶ
**ಹೇರೀಳೆ** ಕಂಚಿಕಾಯಿ, ದುಡ್ಲೆಕಾಯಿ
**ಹೊಕ್ಕರಣೆ** ಕೊಳ, ಕಲ್ಯಾಣಿ
**ಹೊಡಕರಿಸು** ವಿಸ್ತರಿಸು, ಪ್ರತ್ಯಕ್ಷವಾಗು
**ಹೊಣಕೆ** ಕಾಳಗ, ಸ್ಪರ್ಧೆ, ಮೇಲಾಟ, ಹೊಡೆತ
**ಹೊಯ್ಲು** ಪೆಟ್ಟು, ಗದ್ದಲ
**ಹೊಂಡ** ಕುಳಿ, ನೀರಿನ ಗುಂಡಿ

# ಬೆಡಗಿನ ನಾಂದಿಪದ್ಯಗಳ ಭಾವಾರ್ಥ

**ಪುಟ ೧೨೮. ಕಂ. ಪದ್ಯ ೧**

ಬಿಸಜೋದ್ಭವನ = ಬ್ರಹ್ಮನ, ಪ್ರಸೂನನ = ಮಗನಾದ ದಕ್ಷಬ್ರಹ್ಮನ, ಶಿಶುವಿನ = ಮಗಳಾದ ಸಂಜ್ಞೆ (ಸೂರ್ಯನ ಹೆಂಡತಿ) ಯ, ಶಿಶು = ಯಮನು, ತಾನಾಳಿದನಾ ಪಟ್ಟಣಮಂ = ತಾನಾಳುತಿದ್ದಂಥ ಯಮನಗರಿಯನ್ನು, ಪಶುಪತಿಪುರಕೊಯ್ದಾತನ= ಕೈಲಾಸಕ್ಕೆ ತೆಗೆದುಕೊಂಡುಹೋದ ಸಾನಂದಗಣಾಧೀಶನ, ಒಸೆದಪ್ಪಿದ = ಪ್ರೀತಿಯಿಂದ ಆಲಂಗಿಸಿದ, ವಿಷಮಲೋಚನಂಗೆ = ಶಿವಂಗೆ, ಎರಗುವೆನಾಂ = ನಮಸ್ಕರಿಸುವೆನು.

**ಪುಟ ೧೪೬ ಮಂ. ಪದ್ಯ ೩**

ಸಿರಿ = ಲಕ್ಷ್ಮೀದೇವಿಯ, ಮೊಮ್ಮಗನ = ಅನಿರುದ್ಧನ, ಮಾವನ = ಬಾಣಾಸುರನ, ಭಕ್ತಿಗೆ

**ಪುಟ ೨೧೭ ಕಂ. ಪದ್ಯ ೧**

ಗಗನಾಂಗಣದೊಳ್ ಚರಿಪನ = ಆಕಾಶದಲ್ಲಿ ಚರಿಸುವ ವಾಯುವಿನ, ಮಗನಿಗೆ = ಭೀಮನಿಗೆ, ರೌದ್ರದರೂಪಂ = ವಿಶ್ವರೂಪವನ್ನು

**ಪುಟ ೨೪೮ ಭಾ. ಷ. ಪದ್ಯ ೧**

ಶಿಬೆಯ ಸಂಭವೆ = ಗಿರಿಜಾದೇವಿಯ, ಮಗನೊಳು = ಷಣ್ಮುಖನೊಡನೆ, ಕಲಹದಲ್ಲಿ = ಕದನದಲ್ಲಿ ಕಾದಿದ ತಾರಕಾಸುರನ, ಪಟ್ಟೆದಣುಗರ = ಮಕ್ಕಳಾದ (ತಾರಕಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿ) ಇವರ, ಛಲವ = ಸಾಹಸವ

ನಳಿನಗಂಡನ = ಲಕ್ಷ್ಮೀಪತಿಯ .... .......... ಇಳೆಯಕಾಯ್ದನ = ತನ್ನ ಕಿರಣಗಳಿಂದ ಪ್ರಪಂಚವನ್ನು ಬೆಳಗಿಡ ಚಂದ್ರನ

**ಪುಟ ೨೬೧ ತ್ರಿ. ೧. ೩**

ಕೋಡಿನೊಳು ರಥವೆತ್ತಿನಿಲಿಸಿದ = ತ್ರಿಪುರದಹನಕ್ಕೆ ಹೊರುಡುವಾಗ ಶಿವಪಾದ ಸ್ಪರ್ಶದಿಂದ ಪಾತಾಳಾಂತರ್ಗತವಾದ ರಥವನ್ನು ವೃಷಭಾಕಾರನಾಗಿ ಕೋಡುಗಳಿಂದೆತ್ತಿ ನಿಲಿಸಿದಂಥ, ಗಾಡಿಕಾರನ = ವಿಷ್ಣುವಿನ, ನಾಭಿಕಮಲದಿ = ಹೊಕ್ಕಳಿನಲ್ಲಿ, ಮೂಡಿಬಂದನ = ಜನಿಸಿದ ಬ್ರಹ್ಮನ,

ಮರುತಪುತ್ರನ = ವಾಯುಸುತನಾದ ಭೀಮನ, ಅನುಜನೊಳು = ಅರ್ಜುನನೊಡನೆ................ಶರವನಿತ್ತನ = ಪಾಶುಪತಾಸ್ತ್ರವನ್ನು ಕರುಣಿಸಿದವನ, ಮೋಹನಾರ್ಧೆಯು = ಪ್ರೇಮಾರ್ಧಾಂಗಿಯಾದ ಪಾರ್ವತಿಯು

**ಪುಟ ೩೦೨ ಜಂ. ಪದ್ಯ ೧**

ಎಳೆವರೆಯನಾಪ್ರಿಯ = ಚಂದ್ರನ ಪ್ರೀತಿಪಾತ್ರನಾದ, ಅಳಿಯನಣುಗನ = ಮನ್ಮಥನ ಪುತ್ರನಾದ ಅನಿರುದ್ಧನ, ಮಾವನ್ = ಮಾವನಾದ ಬಾಣಾಸುರನ

**ಪುಟ ೪೧೮ ದ್ವಿ. ಪದ್ಯ ೧ . ೨**

ಸಿರಿಯಕಡ್ಡೊಯ್ದವನ = ವೇದಸಂಪತ್ತನ್ನು ಮೋಸದಿಂದೊಯ್ದು ತಮನ, (ಭೂದೇವಿಯನ್ನು ಅಪಹರಿಸುತಿರ್ದ ಹಿರಣ್ಯಾಕ್ಷನ) ಶಿರವನರಿದನನ = ತಲೆಯರಿದ ವಿಷ್ಣುವಿನ, ತರುಣನ ತಾಯ = ಮನ್ಮಥನ ಮಾತೆಯಾದ ಲಕ್ಷ್ಮಿಯು, ತಮ್ಮನ = ಚಂದ್ರನ, ಮಗಳಮಗನ = ರತೀದೇವಿಯ ಪುತ್ರನಾದ ಅನಿರುದ್ಧನ, ಸೆರೆಯನಾಳಿದನ = ಸೆರೆಹಾಕಿಕೊಂಡಿದ್ದ ಬಾಣಾಸುರನ,

**ಪುಟ ೪೬೨ ಜಂ. ಪದ್ಯ ೪ . ೬**

ಸಿರಿವರನ = ಲಕ್ಷ್ಮೀಪತಿಯನ್ನು ಕೂಡಿಕೊಂಡು ಯಜ್ಞವಂ ರಚಿಸಿ, ಹರಿ = ದಕ್ಷಬ್ರಹ್ಮನು, ಹೇಮಗಿರಿಯೆನಲು = ಕೈಲಾಸಪರ್ವತವನ್ನು ತಾನೇ ಆಳಬೇಕೆಂದು ಯೋಚಿಸಲು ಆತನಶಿರವರಿದ ವೀರೇಶನಿಗೆ, ಒಲಿದ = ಪ್ರೀತಿಸಿದ,

ಸಿಂಧುನಂದನೆಸುತನ = ಲಕ್ಷ್ಮೀಸುತನಾದ ಮನ್ಮಥನ, ಕುಂದನು = ಕೊರತೆಯನ್ನು, ಹೊಂದಿದ ಸತಿಯ = ತಾಳಿದ ರತೀದೇವಿಯ, ತಂದೆಗೆ = ಚಂದ್ರನಿಗೆ

## ಶುದ್ಧಾಶುದ್ಧ ಪತ್ರಿಕೆ

| ಪುಟ | ಪಂಕ್ತಿ | ಶುದ್ಧ | ಅಶುದ್ಧ |
|---|---|---|---|
| ૩ | ೧೨ | ಕಂಜಭವ | ಕುಂಜಭವ |
| ೩೮ | ೧೭ | ಮಕುಟಂ | ಮುಕುಟಂ |
| ೪೪ | ೧೨ | ಪ್ರಮಥರೊ | ಪ್ರಥಮರೊ |
| ೫೦ | ೪ | ಭವತಿಮಿರ | ಭಮತಿಮಿರ |
| ೫೭ | ೫ | ಮಹೇಶಂ ಪುರುಷಂ | ಮಹೇಷಂ ಪುರುಶಂ |
| ೭೩ | ೮ | ಬೌದ್ಧರವರಿಂದ | ಬೌದ್ಧರವರಿದಿಂದ |
| ೭೯ | ೨೬ | ಕರುಣಿ | ಕುರುಣಿ |
| ೧೧೧ | ೪ | ಬಸವರಸ | ಬಸವಸರ |
| ೧೩೮ | ೨೧ | ತಂದುಮಾಣಿಕ್ಯದ | ತಂದುದೂಣಿಕ್ಯದ |
| ೧೪೨ | ೨ | ರಚನೆಯಲಿ | ರಚಯಲಿ |
| ೧೪೪ | ೨೨ | ಬಂದೆ ನೀ ಬಸವನ | ಬಂಬೆ ನೀ ಬಸವನ |
| ೧೬೪ | ೪ | ಅಕಳಂಕ | ಅಕಂಳಕ |
| ೨೪೨ | ೨೯ | ನಿಸ್ತ್ರೈಯಾಕ್ಷಣ | ನಿಸ್ತ್ರೈಯಾಣ |
| ೨೪೩ | ೨೫ | ಇಂತೆಂದು ಆಕ್ಷಣವೇ | ಇಂದು ಅಂತೇಕ್ಷಣವೇ |
| ೨೬೨ | ೧೭ | ನಡೆದುವೊಳಪೊಕ್ಕ | ನಡೆದುವೊಪೊಳಕ್ಕ |
| ೩೫೦ | ೨೭ | ಗರವನಿಳುಹುವ | ಗರವನಿಳಹುವ |

# ಪ್ರಕಟವಾಗಿರುವ ಗ್ರಂಥಗಳು



ಚೆನ್ನಪ್ಪ ಕವಿ ಕೃತ:— **ಶರಣ ಲೀಲಾಮೃತ** ಬೆಲೆ ೯—೦—೦

ನಂಜುಂಡ ದೇವ ಕವಿ ಕೃತ:— **ಭೈರವೇಶ್ವರ ಕಾವ್ಯ** ಬೆಲೆ ೩—೦—೦

ನಾನಾ ಕವಿಗಳ ಕೃತ:— **ಕಾಲಜ್ಞಾನ ಸಂಗ್ರಹ ಭಾಗ**—೧ ಬೆಲೆ ೨—೦—೦

ಸೊನ್ನಲಾಪುರದ ಸಿದ್ಧರಾಮ ಕೃತ:— **ಬಸವ ಸ್ತೋತ್ರ ಗೀತೆ**

**ಮಿಶ್ರಸ್ತೋತ್ರ ಗೀತೆ, ಅಷ್ಟಾವರ್ಣ ಸ್ತೋತ್ರ ಗೀತೆ** ಬೆಲೆ ೧—೦—೦

ಚೆನ್ನಮಲ್ಲ ಕವಿ ಕೃತ:— **ಶೀಲವಂತಯ್ಯನ ತ್ರಿಪದಿ** ಬೆಲೆ ೧—೦—೦

ಈ ಎಲ್ಲಾ ಗ್ರಂಥಗಳಿಗೂ ಮೂಲಕಾವ್ಯ, ಮುನ್ನುಡಿ, ಪ್ರಸ್ತಾವನೆ, ಕಠಿಣ ಶಬ್ದಾರ್ಥಗಳೊಡನೆ ಪ್ರಕಟವಾಗಿರುತ್ತವೆ.

ವಿಳಾಸ:—

**ಶಿವಶರಣ ವಾಙ್ಮಯ ಪ್ರಕಾಶ ಕಾರ್ಯಾಲಯ, ಮೈಸೂರು.**



# ಮುದ್ರಣದಲ್ಲಿರುವ ಗ್ರಂಥಗಳು

ಗುರುಬಸವ ಕವಿ ಕೃತಿಗಳು :—

೧. **ಶಿವಯೋಗಾಂಗವಿ ಭೂಷಣ**
೨. **ಸದ್ಗುರು ರಹಸ್ಯ**
೩. **ಕಲ್ಯಾಣೇಶ್ವರ**
೪. **ಸ್ವರೂಪಾಮೃತ**
೫. **ವೃಷಭ ಗೀತೆ**
೬. **ಅವಧೂತ ಗೀತೆ**
೭. **ಮನೋವಿಜಯ**

ಪಾಲ್ಕುರಿಕೆ ಸೋಮನಾಥ ಕವಿ ಕೃತಿಗಳು:—

೧. **ಅಕ್ಷರಮಾಲಿಕಾ ಗದ್ಯಂ**
೨. **ಪಂಚಪ್ರಕಾರ ಗದ್ಯಂ**
೩. **ನಮಸ್ಕಾರಗದ್ಯಂ**
೪. **ಅಷ್ಟೋತ್ತರ ಶತನಾಮ ಗದ್ಯಂ**
೫. **ಷಟ್ಸ್ಥಲ ಗದ್ಯಂ**
೬. **ಉದಾಹರಣ ಗದ್ಯಂ**
೭. **ಅಕ್ಷರಾಂಕಗದ್ಯಂ**
೮. **ಪಂಚರತ್ನಂ**

ಚಂಪಕಮಾಲಾವೃತ್ತ, ಶಾರ್ದೂಲವೃತ್ತ, ಗದ್ಯಗಳಿಂದ ಕೂಡಿರುವ ಈ ಗ್ರಂಥಗಳೆಲ್ಲ ಶಬ್ದಾರ್ಥಟೀಕಾ, ಭಾವಾರ್ಥದೊಡನೆ ಪ್ರಕಟವಾಗುತ್ತವೆ.

ಪಾಲ್ಕುರಿಕೆ ಸೋಮನಾಥನ ಶಿಷ್ಯ :—

ಮಲ್ಲಿಕಾರ್ಜುನ ಕವಿ ಕೃತ

**ಗಣ ಸಹಸ್ರ ನಾಮ**

ಅತ್ಯಾವಶ್ಯಕವಾದ ಸ್ತೋತ್ರಗಳೊಡನೆ ಕೂಡಿದ ವಿವರವಾದ ಪ್ರಕಟಣೆ.

**ಶಿವಮಹಿಮಾ ಶತಕ** (ಚೆನ್ನಮಲ್ಲ ಕವಿ ಕೃತ)

**ನನ್ನಯ್ಯನ ಚರಿತ್ರೆ** (ಮಾದಣ್ಣ ಕವಿ ಕೃತ)



## ಸಂಸ್ಕರಣದಲ್ಲಿರುವ ಗ್ರಂಥಗಳು

೧. **ಕಾಲಜ್ಞಾನ ಸಂಗ್ರಹ ಭಾಗ— ೨** (ನಾನಾ ಕವಿಗಳ ಕೃತ)
೨. ಮರುಳದೇವರ ಕಂದ ಕವಿ—ಮರುಳದೇವರು
೩. ಶಂಕರದೇವರ ಕಂದ ಕವಿ—ಶಂಕರದೇವರು
೪. ಮಂತ್ರಮಹತ್ವದ ಕಂದ ಕವಿ—ಕೇಶಿರಾಜ

**ರಗಳೆಗಳು**

೫. ಗುರು ರಗಳೆ ಕವಿ—ವಿಶ್ವೇಶ
೬. ಬಸವ ಪವಾಡದ ರಗಳೆ ಕವಿ—ಪಾಲ್ಕುರಿಕೆ ಸೋಮನಾಥ
೭. ಶರಣು ಬಸವ ರಗಳೆ ,,
೮. ಚೆನ್ನಬಸವೇಶ್ವರ ರಗಳೆ ,,
೯. ಸದ್ಗುರು ರಗಳೆ ,,
೧೦. ಬಸವಲಿಂಗ ನಾಮಾಷ್ಟೋತ್ತರ ರಗಳೆ ,,
೧೧. ಬಸವಾಷ್ಟೋತ್ತರ ಶತನಾಮರಗಳೆ ,,
೧೨. ಷಡಕ್ಷರಿಯ ರಗಳೆ ಕವಿ—ಶಂಕರದೇವರು
೧೩. ಮನೋವಿಕಾರ ನಿರಸನ ರಗಳೆ ,,
೧೪. ಭಕ್ತಿ ಬಿನ್ನಹದ ರಗಳೆ ,,
೧೫. ವೀರಶೈವ ರಗಳೆ ,,
೧೬. ಪುನರ್ದೀಕ್ಷಾ ರಗಳೆ ,,
೧೭. ಮೈದುನ ರಾಮಯ್ಯನ ರಗಳೆ ,,
೧೮. ಜಂಗಮ ರಗಳೆ ,,
೧೯. ಅಸಂಖ್ಯಾತರ ರಗಳೆ ಕವಿ—ಗುರುಪುರದ ಮಲ್ಲಿನಾಥ
೨೦. ಷಟ್ಸ್ಥಲ ಲಿಂಗಾಂಗ ಸಂಬಂಧದ ನಿರ್ವಚನ
ಕವಿ—ಗುಮ್ಮಳಾಪುರದ ಸಿದ್ಧಲಿಂಗದೇವ
೨೧. ಶೂನ್ಯಸಿಂಹಾಸನದ ನಿರ್ಮಾಣ ಕವಿ—ಅಲ್ಲಮದೇವ

